# ಹಳಗನ್ನಡ
# ಪದಸಂಪದ

## ಅ

**ಅಂಕ** – ಗುರುತು; ಪ್ರಸಿದ್ಧ; ತೊಡೆ; ಸನ್ನೆಕೋಲು; ಯುದ್ಧ
**ಅಂಕಂಗುಡು** – ಓಡಲು ಕುದುರೆಗೆ ಸೂಚನೆ ಕೊಡು
**ಅಂಕಂಗೊಳ್** – ಅಂಕಂಗುಡು
**ಅಂಕಕಾರ್ತಿ** – ಅಂಕಕಾತಿ, ವೀರನಾರಿ
**ಅಂಕಕಾ(ಗಾ)ಱ** – ಅಂಕವೆಂಬ ದ್ವಂದ್ವಯುದ್ಧ ಮಾಡುವವನು; ವೃತ್ತಿ ವೀರ
**ಅಂಕಣಿ** – ಸಂಜ್ಞೆ
**ಅಂಕತಳ** – ತೊಡೆಯ ಮೇಲ್ಭಾಗ
**ಅಂಕತ್ರಿಣೇತ್ರ** – ರುದ್ರನಂತೆ ಯುದ್ಧ ಮಾಡುವವನು
**ಅಂಕದಂಬು** – ಹೆಸರುವಾಸಿಯಾದ ಬಾಣ
**ಅಂಕದೌಷಧ** – ಬಳಮದ್ದು, ಪ್ರಸಿದ್ಧವಾದ ಔಷಧ
**ಅಂಕಮಾಲೆ** – ಬಿರುದಾವಳಿ
**ಅಂಕವಣಿ(ಣೆ)** – ಕುದುರೆಯ ರಿಕಾಪು; ರಣಹಲಗೆ
**ಅಂಕವಾತು** – ಯುದ್ಧದ ಮಾತು
**ಅಂಕಿತ** – ಕುದುರೆಯ ಓಟದ ಒಂದು ಬಗೆ; ಗುರುತು
**ಅಂಕಿಸು** – ಅಧೀನ ಮಾಡಿಕೊ
**ಅಂಕು** – ಸೊಟ್ಟಗಿರುವುದು; ಸೊಟ್ಟಾಗು
**ಅಂಕುರ** – ಮೊಳಕೆ, ಚಿಗುರು; ರೋಮ; ರಕ್ತ
**ಅಂಕುರಿಸು** – ಮೊಳಕೆಯೊಡೆ; ಉಂಟಾಗು; ನವಿರೇಳಿಸು
**ಅಂಕುಶ** – ಆನೆಯನ್ನು ನಿಯಂತ್ರಿಸುವ ಆಯುಧ, ಸೃಣಿ
**ಅಂಕುಸ** – ಅಂಕುಶ; ನಿಯಾಮಕ
**ಅಂಕುಶಚಾರಣ** – ಅಂಕುಶದಿಂದ ಆನೆಯನ್ನು ನಡೆಸು
**ಅಂಕುಸವಿಡು** – ಅಡ್ಡಿಮಾಡು
**ಅಂಕುಸಸಾರಣೆ** – ಅಂಕುಶಚಾರಣ
**ಅಂಕೆಗೆಯ್** – ಗುರುತುಮಾಡು; ಲೇಪಿಸು
**ಅಂಕೆಗೊಳ್** – ಕೈವಶವಾಗು, ಹತೋಟಿಗೆ ಬರು
**ಅಂಗ** – ಅವಯವ; ಪ್ರಕಾರ; ಯೋಗ್ಯ; ಒಂದು ದೇಶದ ಹೆಸರು; (ಜೈನ) ಜೈನಾಗಮದ ಒಂದು ವಿಭಾಗ
**ಅಂಗಂಬಡೆ** – ಆಕಾರ ಧರಿಸು
**ಅಂಗಕಲ್ಪಕುಜ** – (ಜೈನ) ಕೇಳಿದ್ದನ್ನು ಕೊಡುವ ಹತ್ತು ಬಗೆಯ ಕಲ್ಪವೃಕ್ಷಗಳು; ಮದ್ಯ, ಭೂಷಣ, ವಸ್ತ್ರ, ತೂರ್ಯ, ಮಾಲ್ಯ, ಗೃಹ, ಭಾಜನ, ಭೋಜನ, ದೀಪ, ಜ್ಯೋತಿ
**ಅಂಗಘಟನ** – ಮೈಕಟ್ಟು
**ಅಂಗಚಿತ್ತ** – ಪಾರಿತೋಷಕ
**ಅಂಗಜ** – ಮನ್ಮಥ
**ಅಂಗಜನ್ಮ** – ಅಂಗಜ
**ಅಂಗಜ ಮಹೀಷ** – ಮನ್ಮಥ ರಾಜ
**ಅಂಗಜಾಗಮ** – ಕಾಮಶಾಸ್ತ್ರ
**ಅಂಗಜಾತ** – ಮನ್ಮಥ
**ಅಂಗಜಾವ** – ಪಹರೆ; ಸರದಿ ಕಾವಲು
**ಅಂಗಡಿ** – ವ್ಯಾಪಾರದ ಸ್ಥಳ
**ಅಂಗಡಿಯಲವಡ** – ಅಂಗಡಿಬೀದಿಯಲ್ಲಿ ಅಲೆಯುವವನು
**ಅಂಗಡಿಸೂಱೆ** – ಅಂಗಡಿಯನ್ನು ಸೂರೆಮಾಡುವುದು
**ಅಂಗಣ** – ಅಂಗಳ, ಮನೆಗೆ ಸೇರಿದ ಬಯಲು
**ಅಂಗಣವಲಯ** – ಅಂಗಳದ ಸುತ್ತು, ಆವರಣ
**ಅಂಗಣವಾವಿ** – ಅಂಗಣದಲ್ಲಿನ ಬಾವಿ
**ಅಂಗಣವೆಟ್ಟು** – ಅಂಗಳದಲ್ಲಿನ ಆಟದ ಬೆಟ್ಟ
**ಅಂಗದ** – ಭುಜಕೀರ್ತಿ; ತೋಳುಬಳೆ
**ಅಂಗಪತಿ** – ಅಂಗರಾಜ್ಯದ ಒಡೆಯ, ಕರ್ಣ
**ಅಂಗಯಷ್ಟಿ** – ಯಷ್ಟಿ(ಹಾರ)ಯಂತೆ ತೆಳ್ಳಗಿರುವ ದೇಹ
**ಅಂಗಯ್ಸು** – ಘೋಷಿಸು; ಒಪ್ಪುವಂತೆ ಮಾಡು
**ಅಂಗರ** – ಕೆಂಡ
**ಅಂಗರಕ್ಕೆ** – (ಅಂಗರಕ್ಷಾ) ಮೈಗಾವಲ ಭಟ; ಮೈಯ ರಕ್ಷಣೆಯ ವಸ್ತು; ಕವಚ
**ಅಂಗರವೋಳಿಗೆ** – (ಅಂಗಾರಸ್ಫೋಟಿಕೆ) ಕೆಂಡದ ಮೇಲೆ ಸುಟ್ಟ ರೊಟ್ಟಿ
**ಅಂಗರಾಗ** – ಮೈಗೆ ಹಚ್ಚಿಕೊಳ್ಳುವ ಪರಿಮಳದ್ರವ್ಯ
**ಅಂಗಹಾರ** – ನೃತ್ಯ, ನಟನೆ
**ಅಂಗಾರ** – ಕೆಂಡ
**ಅಂಗಾಲ್(ಲು)** – ಕಾಲ ಅಡಿ, ಪಾದದ ಕೆಳಭಾಗ
**ಅಂಗಿ** – ಅಂಗಗಳುಳ್ಳುದು, ದೇಹ; ಶರೀರ
**ಅಂಗಿ(ಕೆ)ಗೆ** – ಅಂಗಿ, ಕವಚ
**ಅಂಗೀಕರಿಸು** – ತನ್ನದಾಗಿ ಮಾಡಿಕೊ
**ಅಂಗುಟ** – ಕಾಲಿನ ಹೆಬ್ಬೆರಳು
**ಅಂಗುಲಿಕ್ರಿಯೆ** – ಬೆರಳಿನಿಂದ ಮಾಡುವ ಕೆಲಸ
**ಅಂಗುಲಿತ್ರಾಣ** – ಬಿಲ್ಲಾಳು ಬೆರಳಿಗೆ ಕಟ್ಟುವ ರಕ್ಷೆ
**ಅಂಗುಲಿಪ್ರಹರಣ** – ಬೆರಳಿಂದ ಹೊಡೆಯುವುದು
**ಅಂಗುಲಿ(ಯ)(ಕ)** – ಉಂಗುರ
**ಅಂಗುಳ್** – ಕಿರುನಾಲಗೆಯ ಪ್ರದೇಶ
**ಅಂಗೆಯ್** – ಅಂಗೈ, ಕರತಲ
**ಅಂಗೋದ್ಭೂತ** – ಮನ್ಮಥ
**ಅಂಘ್ರಿಪ** – ಮರ
**ಅಂಚಲ(ಳ)** – ಅಂಚು, ಸೆರಗು
**ಅಂಚಿತ** – ಅಲಂಕೃತ
**ಅಂಚಿರ** – ಅಸ್ಥಿರ, ಚಂಚಲ
**ಅಂಚೆ** – ವಸ್ತ್ರ; ಹಂಸ; ಕೊನೆಯ ಭಾಗ
**ಅಂಚೆದೇರ** – ಹಂಸವಾಹನ, ಬ್ರಹ್ಮ
**ಅಂಚೆವಱೆ** – ಹಂಸದ ಮರಿ

**ಅಂಚೆವಾಳತಿ** – ಬಾಣಂತಿ ಹಂಸ
**ಅಂಚೆವಿಂಡು** – ಹಂಸದ ಹಿಂಡು
**ಅಂಜನ** – ಕಾಡಿಗೆ; ಲೇಪನ
**ಅಂಜನಚೋರ** – ಅಂಜನ ಹಚ್ಚಿಕೊಂಡು ಕಳ್ಳತನ ಮಾಡುವವನು
**ಅಂಜನದಿಕ್** – ಪಶ್ಚಿಮ
**ಅಂಜನವಣ್ಣ** – ಕಾಡಿಗೆಯ ಬಣ್ಣ; ಕಪ್ಪು ಬಣ್ಣ
**ಅಂಜನಸಿದ್ಧ** – ಅಂಜನ ಹಚ್ಚಿಕೊಂಡು ಅದ್ಭುತ ಕೆಲಸ ಮಾಡುವವನು
**ಅಂಜನಿಸು** – ತಿರಸ್ಕರಿಸು
**ಅಂಜನೆ** – ಹನುಮಂತನ ತಾಯಿ; (ಜೈನ) ಒಂದು ನರಕದ ಹೆಸರು
**ಅಂಜಮೆ** – ಅಂಜಿಕೆ
**ಅಂಜಮೆಗುಡು** – ಹೆದರಿಕೆಯನ್ನು ಹೋಗಲಾಡಿಸು
**ಅಂಜಲಿ** – ಬೊಗಸೆ
**ಅಂಜಿಕೆ** – ಹೆದರಿಕೆ
**ಅಂಜಿಸು** – ಹೆದರಿಸು
**ಅಂಜು** – ಹೆದರು, ಭಯಪಡು
**ಅಂಜುಳ** – (ಅಂಜಲಿ) ಬೊಗಸೆ
**ಅಂಟಿಸುಂಟಿ** – ಒಂದು ಬೈಗುಳ
**ಅಂಟಿಸು** – ಸೇರಿಸು
**ಅಂಟು** – ಮುಟ್ಟು; ಜತೆಗೂಡು
**ಅಂಟುಗೊಳ್** – ಅಂಟಿಕೊ; ನಾಟು
**ಅಂಡಜ** – ಮೊಟ್ಟೆಯಿಂದ ಹುಟ್ಟಿದ್ದು, ಹಕ್ಕಿ
**ಅಂಡಲೆ** – ಪೀಡಿಸು; ಆಸನ್ನಪೀಡನ; ಕೋಟಲೆ
**ಅಂಡಲೆವಡೆ** – ತೊಂದರೆಗೆ ಗುರಿಯಾಗು
**ಅಂಡುಗೊಳ್** – ಹತ್ತಿರ ಹೋಗು; ಆಶ್ರಯಿಸು
**ಅಂತಂಬರಂ** – ಅಂತಂ+ವರಂ, ಕೊನೆಯವರೆಗೆ
**ಅಂತಃಕಳಂಕ** – ಒಳಗಿನ ಕಳಂಕ
**ಅಂತಃಕ್ರಿಯೆ** – ಒಳಗಿನ ಕೆಲಸ
**ಅಂತಃಪಾತಿ** – ಒಳಗೆ ಬೀಳುವ
**ಅಂತಃಸ್ಫಾರಿತ** – ಒಳಗೇ ವಿಕಾಸಗೊಂಡ
**ಅಂತಕ** – ಯಮ
**ಅಂತಕವೈರಿ** – ಯಮನ ಶತ್ರು, ಶಿವ
**ಅಂತಪ್ಪ** – ಅಂತಹ; ಹಾಗಿರುವ
**ಅಂತರ** – ವ್ಯತ್ಯಾಸ, ಭೇದ; ನಡುವಣ ರಂಧ್ರ; ಮೇರೆ, ಎಲ್ಲೆ; (ಜೈನ) ಮುಕ್ತಿಗೆ ಯಾರೂ ಸಲ್ಲದ ಕಾಲ
**ಅಂತರಂಗ** – ಮನಸ್ಸು
**ಅಂತರಂಗುಡು** – ಗುಟ್ಟು ತಿಳಿಸು
**ಅಂತರಸ್ಥ** – ಒಳಗಿರುವ
**ಅಂತರಾಂತರ** – ನಡುನಡುವೆ
**ಅಂತರಾಯ** – ಅಡ್ಡಿ
**ಅಂತರಾಯಪಂಚಕ** – (ಜೈನ) ದಾನಾಂತರಾಯ, ಲಾಭಾಂತಖಯ, ಭೋಗಾಂತರಾಯ. ಉಪಭೋಗಾಂತರಾಯ, ವೀರ್ಯಾಂತರಾಯ ಎಂಬ ಐದು ವಿಘ್ನಗಳು
**ಅಂತರಾಳ** – ಒಳಭಾಗ
**ಅಂತರಿಕ್ಷ** – ಆಕಾಶ
**ಅಂತರಿತ** – ಬೇರ್ಪಡಿಸಲ್ಪಟ್ಟ
**ಅಂತರಿತೆ** – ದೂರಗೊಂಡವಳು
**ಅಂತರಿಸು** – ತಡಮಾಡು
**ಅಂತರೀಪ** – ದ್ವೀಪ, ನಡುಗಡ್ಡೆ
**ಅಂತರೀಯ** – ಉಡುಪು, ಸೊಂಟದ ಕೆಳಗೆ ಉಡುವ ವಸ್ತ್ರ
**ಅಂತರ್ಗತ** – ಒಳಕ್ಕೆ ಹೋದ
**ಅಂತರ್ಗತಭೇದ** – ಒಳಗಣ ವ್ಯತ್ಯಾಸ
**ಅಂತರ್ಗತಸ್ವನ** – ಒಳಗೇ ಹುದುಗಿದ ಧ್ವನಿ
**ಅಂತರ್ಜ್ಯೋತಿ** – ಒಳಗಿನ ಬೆಳಕು
**ಅಂತರ್ದೃಷ್ಟಿ** – ತನ್ನ ಒಳಗನ್ನು ಪರಿಶೀಲಿಸಿಕೊಳ್ಳುವ ದೃಷ್ಟಿ
**ಅಂತರ್ದ್ವೀಪ** – ದ್ವೀಪದ ಒಳಭಾಗ
**ಅಂತರ್ಧಿ** – ಅಡಗಿಕೊಳ್ಳುವುದು, ಅಂತರ್ಧಾನ
**ಅಂತರ್ಬಹಿರೂಪ** – ಒಳಗಿನ ಮತ್ತು ಹೊರಗಿನ ಆಕಾರ
**ಅಂತರ್ಭೇದ** – ಒಳಗಿನ ಭೇದ; ಭಿನ್ನಾಭಿಪ್ರಾಯ; ಅಂತಃಕಲಹ
**ಅಂತರ್ಭ್ರಮ** – ತೊಳಲಾಟ
**ಅಂತರ್ಮಂಡಲಸಾಧನ** – ಒಳದೇಶವನ್ನು ಸ್ವಾಧೀನಪಡಿಸಿಕೊಳ್ಳುವ ಕಾರ್ಯ
**ಅಂತರ್ಮಲ** – ಒಳಗಿನ ಕೊಳೆ
**ಅಂತರ್ಮಲಿನ** – ಒಳಗೆ ಕಲ್ಮಶವುಳ್ಳ
**ಅಂತರ್ಮುಖ** – ಒಳಮುಖವಾದ ಮನಸ್ಸು
**ಅಂತರ್ಮುಖತೆ** – ಆತ್ಮಚಿಂತನೆ ಮಾಡುವುದು
**ಅಂತರ್ಮುಹೂರ್ತ** – (ಜೈನ) ಒಂದು ಮುಹೂರ್ತಕ್ಕಿಂತ ಕಡಿಮೆಯಾದ ಕಾಲ
**ಅಂತರ್ಲೀನ** – ಒಳಗೆ ಲೀನವಾದ
**ಅತರ್ಲೇಪ** – ಅಂತರಂಗಕ್ಕೆ ಅಂಟಿಕೊಂಡಿರುವುದು
**ಅಂತರ್ವಂಶಿಕ** – ಬಂಧುಜನ; ರಾಣಿವಾಸದ ಮೇಲ್ವಿಚಾರಕ
**ಅಂತರ್ವಣ** – ಕಾಡಿನ ಮಧ್ಯದಲ್ಲಿರುವ
**ಅಂತರ್ವತ್ನಿ** – ಬಸುರಿ ಹೆಂಗಸು
**ಅಂತರ್ವರ್ತಿ** – ಒಳಗೆ ನೆಲಸಿರುವ
**ಅಂತರ್ವಂಶಿಕ** – ಬಂಧುಜನ
**ಅಂತರ್ವಾಂಶಿಕ** – ವ್ಯಾಯಾಮಶಾಲೆಯ ಮುಖ್ಯಸ್ಥ
**ಅಂತರ್ವಾಸ** – ಊರಿನ ಹತ್ತಿರದ ಶಿಬಿರ
**ಅಂತರ್ಪುರ** – ಅಂತಃಪುರ
**ಅಂತಶ್ಶೂನ್ಯ** – ಮನಸ್ಸು ಶೂನ್ಯವಾಗಿರುವ
**ಅಂತಸ್ತಮಃಪಟ** – ಒಳಗಿನ ಕತ್ತಲೆಯ ತೆರೆ
**ಅಂತಹೆಂ(ದಂ)(ದೆ)** – ಆದ್ದರಿಂದ
**ಅಂತಿಕ** – ಸಮೀಪ, ನೆರೆಹೊರೆ
**ಅಂತಿರೆ** – ಆ ಪ್ರಕಾರವಾಗಿ
**ಅಂತು** – ಹಾಗೆ; ಅಲ್ಲದೆ; ಕೊನೆ
**ಅಂತುಟು** – ಅಷ್ಟು; ಹಾಗೆ

**ಅಂತೆ** – ಹಾಗೆ, ಆ ರೀತಿಯಲ್ಲಿ
**ಅಂತೆಗೆಯ್** – ಹಾಗೆ ಮಾಡು
**ಅಂತೆವೋಲ್** – ಹಾಗೆ
**ಅಂತೇವಾಸಿ** – ಶಿಷ್ಯ; ಚಂಡಾಲ
**ಅಂತ್ಯೇಷ್ಟಿ** – ಉತ್ತರಕ್ರಿಯೆ
**ಅಂತ್ರ** – ಕರುಳು
**ಅಂದ** – ಚೆಲುವು; ರೀತಿ
**ಅಂದಂಗೊಳಿಸು** – ಅಂದವಾಗಿ ಕಾಣುವಂತೆ ಮಾಡು
**ಅಂದಂಬಡೆ** – ಸುಂದರವಾಗು
**ಅಂದಂಬೆಱು** – ಅಂದಂಬಡೆ
**ಅಂದಣ** – ಕಣ್ಣಿನ ಪೊರೆ
**ಅಂದಳ(ಣ)** – ಪಲ್ಲಕ್ಕಿ, ಮೇಣೆ
**ಅಂದಳಸತ್ತಿಗೆ** – ಪಲ್ಲಕ್ಕಿ ಮತ್ತು ಛತ್ರಿ
**ಅಂದು** – ಆ ಸಂದರ್ಭದಲ್ಲಿ
**ಅಂದುಗೆ** – ಅಂದಿಗೆ, ನೂಪುರ; ಕಾಲ್ಗಡಗ
**ಅಂಧಕದ್ವಿಷ** – ಅಂಧಕನ ಶತ್ರು, ಈಶ್ವರ
**ಅಂಧತಮಸ** – ದಟ್ಟ ಕತ್ತಲೆ
**ಅಂಧಪಾಷಾಣ** – ಲೋಹಾಂಶರಹಿತ ಶಿಲೆ
**ಅಂಧಯಷ್ಟಿ** – ಕುರುಡನ ಊರೆಗೋಲು
**ಅಂಧರಾಣ್ಣಂದನ** – (ಅಂಧರಾಜ್+ನಂದನ) ಅಂಧನ ಮಗ, ದುರ್ಯೋಧನ
**ಅಂಧಲಾವುಕನ್ಯಾಯ** – ಕುರುಡನಿಗೆ ಲಾವಿಗೆ ಸಿಕ್ಕಿದಂತಹ ಆಕಸ್ಮಿಕ ಘಟನೆ
**ಅಂಬಕ** – ಕಣ್ಣು
**ಅಂಬರ** – ಆಕಾಶ
**ಅಂಬರಧುನಿ** – ಆಖಾಶಗಂಗೆ
**ಅಂಬರಮಣಿ** – ಸೂರ್ಯ
**ಅಂಬರಶಿರೋರುಹ** – ವ್ಯೋಮಕೇಶ, ಶಿವ
**ಅಂಬರಾಂಬರವಿಲಾಸ** – ದಿಗಂಬರ ಸನ್ಯಾಸ
**ಅಂಬಲಿ** – ಹಿಟ್ಟಿನಿಂದ ಮಾಡಿದ ಗಂಜಿ
**ಅಂಬರೀಷ** – ಬಾಂಡಲಿ
**ಅಂಬಳಕ್ಕು** – ಅಂಬೆಗಾಲಿಡು
**ಅಂಬಾಚರಿ** – (ಜೈನ) ಹಿಂದಿನ ಜನ್ಮದಲ್ಲಿ ಒಬ್ಬ ವ್ಯಕ್ತಿಯ ತಾಯಾಗಿದ್ದು, ಈಗ ಬೇರೊಂದು ಪ್ರಾಣಿಯಾಗಿ ಹುಟ್ಟಿರುವ ಹೆಣ್ಣುಜೀವಿ
**ಅಂಬಿಗ** – ಬೆಸ್ತ; ದೋಣಿ ನಡೆಸುವವನು
**ಅಂಬಿಯ** – ಅಂಬಿಗ
**ಅಂಬಿರಿವಿಟ್ಟು ಪಾಯ್** – ಪ್ರವಾಹವಾಗಿ ಹರಿ
**ಅಂಬಿರಿವಿಡು** – ಧಾರೆಯಾಗಿ ಸುರಿ
**ಅಂಬು** – ನೀರು; ಬಾಣ; ಒಣಗು
**ಅಂಬುಕುಕ್ಕುಟ** – ನೀರ್ಕೋಳಿ
**ಅಂಬುಖಾತಿಕೆ** – ನೀರು ತುಂಬಿದ ಕಂದಕ
**ಅಂಬುಗಂ(ಕಂ)ಡಿ** – ಶತ್ರುಗಳಿಗೆ ಕಾಣದಂತೆ ಕೋಟೆಯ ಮೇಲಿಂದ ಬಾಣ ಬಿಡುವ ಕಂಡಿ
**ಅಂಬುಗಾಣಿಸು** – ಬಾಣಕ್ಕೆ ಗುರಿಮಾಡು
**ಅಂಬುಚರ** – ಮೀನು
**ಅಂಬುಜಮಿತ್ರಜೆ** – ಯಮುನಾ ನದಿ
**ಅಂಬುಜವಿಷ್ಟರ** – ಬ್ರಹ್ಮ
**ಅಂಬುಣ್** – ನೀರ ಹುಣ್ಣು
**ಅಂಬುದ** – ಮೋಡ
**ಅಂಬುದಧ್ವನಿ** – ಮೋಡದ ಸದ್ದು, ಗುಡುಗು
**ಅಂಬುದನಿನದ** – ಅಂಬುದಧ್ವನಿ
**ಅಂಬುದನಿವಹ** – ಮೋಡಗಳ ಸಮೂಹ
**ಅಂಬುದಫಲ** – ಆಲಿಕಲ್ಲು
**ಅಂಬುದಮಾರ್ಗ** – ಮೋಡಗಳ ದಾರಿ, ಆಕಾಸ
**ಅಂಬುದರಥ** – ಮೋಡವನ್ನು ರಥವಾಗಿ ಉಳ್ಳವನು, ಇಂದ್ರ
**ಅಂಬುದರವ** – ಗುಡುಗು
**ಅಂಬುದರ್ತು** – (ಅಂಬುದ+ಋತು) ಮಳೆಗಾಲ
**ಅಂಬುದಸಮಯ** – ಅಂಬುದರ್ತು
**ಅಂಬುದಾಗಮ** – ಮೋಡಗಳು ಆಗಮಿಸುವ ಕಾಲ, ಮಳೆಗಾಲ
**ಅಂಬುದಾಭ** – ಮೋಡಕ್ಕೆ ಸಮನಾದ
**ಅಂಬುದುಡು** – ಬಾಣ ಹೂಡು
**ಅಂಬುಧರ** – ಮೋಡ
**ಅಂಬುಧರಕಾಲ** – ಮಳೆಗಾಲ
**ಅಂಬುಪಾಯಿ** – ನೀರನ್ನು ಕುಡಿಯುವ
**ಅಂಬುರುಟ್ಟೀಕ** – ಕಮಲದ ಪೀಠ
**ಅಂಬುರುಹ** – ನೀರಿನಲ್ಲಿ ಹುಟ್ಟಿದ್ದು, ಕಮಲ
**ಅಂಬುರುಹಗರ್ಭ** – ಬ್ರಹ್ಮ
**ಅಂಬುರುಹಸಖ** – ಸೂರ್ಯ
**ಅಂಬುರುಹೇಕ್ಷಣೆ** – ಕಮಲನಯನೆ
**ಅಂಬುವೀಡು** – ಬಾಣಪ್ರಯೋಗ; ಬಾಣ ಹೋಗುವಷ್ಟು ದೂರ
**ಅಂಬುವೀಡಿನೆಡೆ** – ಒಂದು ಬಾಣ ಹೋಗುವಷ್ಟು ದೂರ
**ಅಂಬೂದ್ಭೂತ** – ಅಂಬುಜ, ಕಮಲ
**ಅಂಬೆಗಲಿಸು** – ಅಂಬೆಗಾಲಿಡು
**ಅಂಬೇಱು** – ಬಾಣದ ಹೊಡೆತ
**ಅಂಬೋಧಕಾಲ** – ಮಳೆಗಾಲ
**ಅಂಭಃ** – ನೀರು
**ಅಂಭಃಕಣ** – ನೀರಿನ ಹನಿ
**ಅಂಭಃಕರಿ** – ನೀರಾನೆ
**ಅಂಭಃಕುಂಭಿ(ಇನ)** – ನೀರಾನೆ
**ಅಂಭಃಪೂರ** – ನೀರಿನ ಪ್ರವಾಹ
**ಅಂಭಃಪ್ಲವ** – ಅಂಭಃಪೂರ
**ಅಂಭಶ್ಚರ** – ಮೊಸಳೆ
**ಅಂಭೋಜಷಂಡ** – ಕಮಲದ ಗುಂಪು; ಕೊಳ
**ಅಂಭೋದಕಾಲ** – ಮಳೆಗಾಲ
**ಅಂಭೋದಪಥ** – ಆಕಾಶ
**ಅಂಭೋದಸ್ವನ** – ಗುಡುಗು
**ಅಂಭೋದಾಧ್ವ** – ಆಕಾಶ

**ಅಂಭೋಧಿಪಥ** – ಸಮುದ್ರಮಾರ್ಗ
**ಅಂಭೋನಿ(ಧಿ)** – ಸಮುದ್ರ
**ಅಂಭೋರಾಶಿ** – ಸಮುದ್ರ
**ಅಂಭೋರುಹ** – ಕಮಲ
**ಅಂಭೋಲವ** – ನೀರನ ಕಣ
**ಅಂಶ** – ಭಾಗ
**ಅಂಶಜ** – (ದೇವತೆಯ) ಅಂಶದಿಂದ ಹುಟ್ಟಿದವನು
**ಅಂಶಪುರುಷ** – ದೇವಾಂಶಸಂಭೂತ
**ಅಂಶು** – ಕಿರಣ; ಮೊನೆ; ತುದಿ; ಅಲಂಕಾರ; ಉಡುಪು;ವೇಗ
**ಅಂಶುಕ** – ಬಿಳಿಯ ಬಟ್ಟೆ; ಎಲೆ; ಕಿರಣ
**ಅಂಶುಧರ** – ಸೂರ್ಯ
**ಅಂಶುಪತಿ** – ಸೂರ್ಯ
**ಅಂಶುಮತ್ತನಯ** – ಸೂರ್ಯನ ಮಗ, ಕರ್ಣ
**ಅಂಶುಮಾಲಿ** – ಅಂಶುಧರ
**ಅಂಶುಶೂತ** – ತಂಪಾದ ಕಿರಣ
**ಅಂಸ** – ಹೆಗಲು, ಭುಜ, ಶಿರಸ್ಸು
**ಅಂಹಃ** – ಪಾಪ; ಕೊರತೆ; ಕಷ್ಟ
**ಅಕಂಪಿತಶರೀರ** – ನಡುಗದ ಮೈಯುಳ್ಳ
**ಅಕರ್ಣಹೃದಯ** – ಕಿವಿ ಮತ್ತು ಹೃದಯಗಳಿಲ್ಲದ; ಹಾವಿನ ಹೃದಯವುಳ್ಳ
**ಅಕರ್ತೃಕ** – ಕರ್ತೃವಿಲ್ಲದ, ಸೃಷ್ಟಿಸಿದವನಿಲ್ಲದ
**ಅಕರಣ** – ಗಣಕ, ಲೆಕ್ಕಪತ್ರದ ಅಧಿಕಾರಿ
**ಅಕಾಂಡ** – ಅಕಾಲ
**ಅಕಾಂಡಜಳದ** – ಅನಿರೀಕ್ಷಿತ ಮೋಡ
**ಅಕಾಂಡತಾಂಡವ** – ಪಾಂಡಿತ್ಯದ ಅನವಶ್ಯಕ ಪ್ರದರ್ಶನ
**ಅಕಾಮಿಕ** – ಇಚ್ಛೆಯಿಲ್ಲದ ವ್ಯಕ್ತಿ
**ಅಕಾರಣಂ** – ಕಾರಣವಿಲ್ಲದೆ
**ಅಕಿಂಚನ** – ಬಡವ
**ಅಕಿಂಚಿತ್ಕರ** – ಏನನ್ನೂ ಮಾಡದ
**ಅಕೀರ್ತಿ** – ಕೆಟ್ಟ ಹೆಸರು
**ಅಕುಂಠತರ** – ಅತ್ಯಧಿಕವಾದ
**ಅಕುಲ** – ಹೀನವಂಶ
**ಅಕುಲೀನೆ** – ಹೀನಕುಲದಲ್ಲಿ ಜನಿಸಿದವಳು
**ಅಕೂಪಾ(ಬಾ)ರ** – ಸಮುದ್ರ; ದೊಡ್ಡ ಆಮೆ; ಸೂರ್ಯ; ಬಂಡೆ
**ಅಕೃತಕ** – ಸಹಜ
**ಅಕೃತ್ಯ** – ಕೆಟ್ಟ ಕೆಲಸ
**ಅಕೃಷ್ಟಪಚ್ಯ** – ಬೇಸಾಯವಿಲ್ಲದೆ ಬೆಳೆ ಕೊಡುವ ಭೂಮಿ
**ಅಕೃಷ್ಟಕರ್ಮ** – ಕಳಂಕವಿಲ್ಲದ ಕೆಲಸ; ಕೆಟ್ಟ ಕೆಲಸವನ್ನು ಮಾಡದವನು
**ಅಕ್ಕ** – ಹಿರಿಯ ಸಹೋದರಿ; ಒಂದು ಮರ
**ಅಕ್ಕಜ** – ಬೆರಗು, ವಿಸ್ಮಯ; ಪ್ರೀತಿ
**ಅಕ್ಕಜಂಬೊರೆ** – ಆಶ್ಚರ್ಯದಿಂದ ಕೂಡು
**ಅಕ್ಕಟಿಕೆ** – ಉತ್ಕಟವಾದ ಆಸೆ
**ಅಕ್ಕರ** – ವಿದ್ಯೆ; ಬರವಣಿಗೆ
**ಅಕ್ಕರಗೊಟ್ಟಿ** – ವಿದ್ವಾಂಸರ ಮೇಳ
**ಅಕ್ಕರಜಾಣ** – ವಿದ್ವಾಂಸ
**ಅಕ್ಕರಿಗ** – ವಿದ್ವಾಂಸ; ಸಾಕ್ಷರ
**ಅಕ್ಕಸಾಲೆ** – ಚಿನ್ನ ಬೆಳ್ಳಿ ಕೆಲಸ ಮಾಡುವವನು
**ಅಕ್ಕಱುಗಂಪು** – ಹಿತಕರವಾದ ಸುಗಂಧ
**ಅಕ್ಕಿಸು** – ಜೀರ್ಣಿಸು
**ಅಕ್ಕು** – ಲಾಭ; ಸಂಪತ್ತು
**ಅಕ್ಕುಳಸು** – ಒಳಕ್ಕೆ ಎಳೆದುಕೊ
**ಅಕ್ಕೆ** – ಅಚ್ಚಿ, ದುಃಖ
**ಅಕ್ಕು(ಲ)ಳಸು** – ಹೊಟ್ಟೆಯನ್ನು ಕುಗ್ಗಿಸು; ಹೆದರು
**ಅಕ್ಷಡ** – ಕುಸ್ತಿ ಮಾಡುವ ಸ್ಥಳ, ಅಖಾಡ
**ಅಕ್ಷ** – ಪಗಡೆ ಆಟದ ದಾಳ; ರಥದ ಅಚ್ಚು; ಜೂಜು; ರಥ; ಜಪಮಣಿ; ಇಂದ್ರಿಯ
**ಅಕ್ಷಕ್ರೀಡೆ** – ಪಗಡೆ ಆಟ
**ಅಕ್ಷಜ** – ಸಿಡಿಲು; ವಜ್ರ; ವಿಷ್ಣು
**ಅಕ್ಷತ** – ಕೊರತೆಯಿಲ್ಲದ
**ಅಕ್ಷತರೂಸಂಪನ್ನೆ** – ಕುಂದಿಲ್ಲದ ರೂಪವಂತೆ
**ಅಕ್ಷದ್ಯೂತಕೇಳಿ** – ಪಗಡೆ ಜೂಜಿನಾಟ
**ಅಕ್ಷಧೂರ್ತ** – ಜೂಜಿನಲ್ಲಿ ಮೋಸಮಾಡುವವನು
**ಅಕ್ಷಫಲ** – ತಾರೆಯ ಕಾಯಿ
**ಅಕ್ಷಮ** – ಕ್ಷಮೆಯಿಲ್ಲದ; ಅಸಮರ್ಥ
**ಅಕ್ಷಮಣಿ** – ಜಪಸರದ ಮಣಿ
**ಅಕ್ಷಮಾಲಿಕೆ** – ಜಪಸರ
**ಅಕ್ಷಮಾಲೆ** – ಜಪಸರ
**ಅಕ್ಷಯತೃತೀಯೆ** – ಅಕ್ಕತದಿಗೆ; (ಜೈನ) ಶ್ರೇಯಾಂಸನು ಆದಿ ತೀರ್ಥಂಕರನಿಗೆ ಅಹಾರದಾನ ಮಾಡಿದ ಪುಣ್ಯದಿನ
**ಅಕ್ಷಯಬೋಧ** – ನಾಶವಿಲ್ಲದ ಜ್ಞಾನ; ತೀರ್ಥಂಕರ
**ಅಕ್ಷಯಸಮಯ** – ನಿರಂತರ ಕಾಲ
**ಅಕ್ಷಯಸೌಖ್ಯ** – ನಿರಂತರ ಸುಖ
**ಅಕ್ಷರ** – ನಾಶವಿಲ್ಲದ
**ಅಕ್ಷರಕೇವ(ಲ)ಳ** – ಒಂದು ವಿದ್ಯೆ
**ಅಕ್ಷರರೇಖೆ** – ಬರಹ
**ಅಕ್ಷರವೃತ್ತಿ** – ಪದದಲ್ಲಿರುವ ಅಕ್ಷರಗಳ ಸಂಖ್ಯೆ
**ಅಕ್ಷರಾತ್ಮಕ** – ಅಕ್ಷರಗಳಿಂದ ಕೂಡಿದ
**ಅಕ್ಷವಲ(ಳ)ಯ** – ಜಪಸರ
**ಅಕ್ಷಸೂತ್ರ** – ಜಪಸರ
**ಅಕ್ಷಾವಲಿ(ಳಿ)** – ಜಪಸರ
**ಅಕ್ಷಿಕರ್ಣ** – ಕಣ್ಣೇ ಕಿವಿಯಾಗಿರುವ ಪ್ರಾಣಿ, ಹಾವು
**ಅಕ್ಷಿತಾರಕ** – ಕಣ್ಣಿನ ಪಾಪೆ
**ಅಕ್ಷಿಪಕ್ಷ್ಮ** – ಕಣ್ಣ ರೆಪ್ಪೆ
**ಅಕ್ಷಿಶ್ರುತಿ** – ಹಾವು
**ಅಕ್ಷೀಣ** – ಶುಭ
**ಅಕ್ಷುಣ್ಣ** – ತುಳಿಯದ; ಮುರಿಯದ
**ಅಕ್ಷೂಣ** – ಕಡಿಮೆಯಿಲ್ಲದ; ಬಲಿಷ್ಠ

**ಅಕ್ಷೋಹಿಣಿ** – ಅಕ್ಷೌಹಿಣಿ; ೨೧೮೭೦ ಆನೆ, ೨೧೮೭೦ ರಥ, ೬೫೬೧೦ ಕುದುರೆ ಮತ್ತು ೧೦೯೩೫೦ ಪದಾತಿಯಿರುವ ಸೈನ್ಯ; ಪಂಪಭಾರತದಲ್ಲಿ ಹೇಳಿರುವ ಸಂಖ್ಯೆ ಹೀಗಿದೆ: ೯೦೦೦ ಆನೆ, ೯೦೦೦೧೦೦ ರಥ, ೯೦೦೦೧೦೦೧೦೦ ಕುದುರೆ ಮತ್ತು ೯೦೦೦೧೦೦೧೦೦೧೦೦ ಕಾಲಾಳುಗಳ ಸೈನ್ಯ

**ಅಖಂಡಸುಖ** – ನಿರಂತರ ಸುಖ

**ಅಖಂಡಿತಂ** – ಕತ್ತರಿಸದ, ಪೂರ್ಣವಾದ

**ಅಖರ್ವ** – ಕುಳ್ಳಲ್ಲದ; ಮಹತ್ತಾದ

**ಅಖಲ್ಯ** – ಹೇಡಿ; ಅಪ್ರಯೋಜಕ

**ಅಖ್ಖ(ಕ್ಖ)ಡ** – ಮುಕ್ಕಾಗದ, ಪೂರ್ಣ

**ಅಗ** – ಬೆಟ್ಟ

**ಅಗಚೂಡ** – ಬೆಟ್ಟದ ಶಿಖರ

**ಅಗಡು** – ತುಂಟತನ; ದುಷ್ಟತನ

**ಅಗಧರ** – ಬೆಟ್ಟವನ್ನು ಎತ್ತಿದವನು, ಕೃಷ್ಣ, ವಿಷ್ಣು

**ಅಗಪಡು** – ಒಳಗೆ ಸಿಗು; ಸಿಕ್ಕಿಹಾಕಿಕೊ

**ಅಗರು** – ಸುಗಂಧದ ಮರ

**ಅಗರ್ಹಿತ** – ನಿಂದ್ಯವಲ್ಲದ

**ಅಗಲ್** – ಬಿಟ್ಟು ಹೋಗು, ತೊರೆದುಹೋಗು; ಊಟದ ತಟ್ಟೆ; ತಳಿಗೆ

**ಅಗಲ** – ಒಂದು ವಸ್ತುವಿನ ಅಡ್ಡಳತೆ

**ಅಗಲು** – ಹರವಾಗಿ

**ಅಗಲಂಬೆಱು** – ಹರಹನ್ನು ಪಡೆ, ವಿಶಾಲವಾಗು

**ಅಗಲಿ(ತು)ತ್ತು** – ಅಗಲವಾದ

**ಅಗಲಿಸು** – ಬೇರೆ ಮಾಡು

**ಅಗಲುರ** – ಹರವಾದ ಎದೆ

**ಅಗಲೆ** – ಅಗಲವಾಗುವಂತೆ; ದೂರಾಗುವಂತೆ

**ಅಗಲೆತ್ತು** – ಊಟದ ತಟ್ಟೆಯನ್ನು ಎತ್ತಿಕೊ

**ಅಗಲೊಗೆ** – ಹರಡಿಕೊಳ್ಳುವಂತೆ ಎಸೆ

**ಅಗಲೊತ್ತು** – ಹರವಾಗಿ ಒತ್ತು

**ಅಗಲ್ಕೆ** – ಅಗಲಿಕೆ, ಬೇರ್ಪಡುವಿಕೆ, ವಿಯೋಗ

**ಅಗಲ್ಕೆಗಿಚ್ಚು** – ವಿಯೋಗದ ಬೆಂಕಿ; ವಿರಹಜ್ವಾಲೆ

**ಅಗಲ್ಕೆವೆಱು** – ವಿಯೋಗ ಹೊಂದು

**ಅಗಲ್ಚು** – ಅಗಲಿಸು, ನಿವಾರಿಸು; ಅಗಲಗೊಳಿಸು; ಅಗಲಿಕೆ

**ಅಗಲ್ತರ್** – ದೂರ ಹೋಗು, ಅಗಲು

**ಅಗವಡು** – (ಅಗಂ+ಪಡು) ಒಳಗೆ ಬೀಳು, ಸೆರೆಸಿಕ್ಕು; ನೋವನ್ನು ಪಡೆ

**ಅಗಸೆ** – ಒಂದು ಮರ; ಒಂದು ಬಗೆಯ ಗಿಡ

**ಅಗಸೆವೂಗೊಂಬು** – ಅಗಸೆಯ ಹೂವಿನಂತಹ ಕೊಂಬು

**ಅಗಱ್** – ಕಂದಕ

**ಅಗಱ್ತೆ** – ತೋಡುವುದು, ಅಗೆತ; ಕಂದಕ

**ಅಗಾಹಿತರತ್ನ** – (ಅಗ+ಅಹಿತ=ಇಂದ್ರ) ಇಂದ್ರನೀಲಮಣಿ

**ಅಗಿ** – ಹೆದರು; ಕುಗ್ಗು; ಹಲ್ಲಿನಿಂದ ಅರೆ; ಅಲುಗಾಡು; ನಡುಕ

**ಅಗಿನಿ** – (ಅಗ್ನಿ) ಕಿಚ್ಚು

**ಅಗಿಬಿಗಿ** – ಸಡಗರ, ಸಂಭ್ರಮ

**ಅಗಿಲ್** – ಸುಗಂಧದ ಮರ; ಸುಗಂಧದ್ರವ್ಯ

**ಅಗುಂತಿ** – ಆಧಿಕ್ಯ, ಅತಿಶಯತೆ

**ಅಗುಂದಲೆ** – ಅತಿಶಯ; ಶ್ರೇಷ್ಠ

**ಅಗುಂದಲೆಮಾಡು** – ಹೆಚ್ಚಿಸು

**ಅಗುಂದಲೆವಡೆ** – ಅಧಿಕವಾಗು

**ಅಗುಂದಲೆವೋಗು** – ಅಧಿಕವಾಗಿ ಹೋಗು

**ಅಗುಂಬಿಸು** – ರಾಶಿ ಮಾಡು

**ಅಗುರ್** – ಸಾಹಸ ತೋರು; ಆಕ್ರಮಣ ಮಾಡು

**ಅಗುರು** – ಅಗಿಲ್; ಹಗುರವಾದ

**ಅಗುರ್ಚು** – ಸೇರಿಸು, ಒತ್ತು

**ಅಗುರ್ವಿಸು** – ಭಯಪಡಿಸು; ಹೆದರು; ನಡುಗು; ಅತಿಶಯವಾಗು

**ಅಗುರ್ಬು(ರ್ವು)** – ಭಯ; ಉಗ್ರತೆ; ಅದ್ಭುತ; ಬೆರಗು

**ಅಗುರ್ವುಗಿಡು** – ಸತ್ವಗುಂದು

**ಅಗುರ್ವುಗೊಳ್** – ಹೆದರು

**ಅಗುರ್ವುವಡೆ** – ಅತಿಶಯಗೊಳ್ಳು

**ಅಗುರ್ವುವೆಱು** – ಅಗುರ್ವುವಡೆ

**ಅಗುರ್ವೆಱು** – ಬೆರಗಾಗು

**ಅಗುಸೆ** – ಹೆಬ್ಬಾಗಿಲು, ಅಗಸೆ ಬಾಗಿಲು

**ಅಗು(ಗ)ಱ್** – ಅಗೆ, ತೋಡು, ಖನನ

**ಅಗುೞ್** – ಮುಳುಗು; ಕಂದಕ; ಬೆಂದ ಅಕ್ಕಿ ಕಾಳು

**ಅಗುೞೆ** – ಚಿಲಕ; ತಮಟೆ ಬಡಿಯುವ ಕೋಲು

**ಅಗುೞೇಸು** – ಅಗೆಯಿಸು, ತೋಡಿಸು

**ಅಗುೞೂಟ** – ಅನ್ನಪ್ರಾಶನ

**ಅಗುೞೂಡು** – ಅನ್ನ ತಿನ್ನಿಸು

**ಅಗುೞ್ಚು** – ಮುಳುಗಿಸು, ಅದ್ದು

**ಅಗೆ** – ಮೊಳಕೆ, ಅಂಕುರ; ತೋಡು

**ಅಗೆಯೆತ್ತು** – ಮೊಳಕೆ ಕೀಳು; ಮೂಲೋತ್ಪಾಟನೆ ಮಾಡು

**ಅಗೆಯೇೞ್** – ಮೊಳಕೆಯಾಗು

**ಅಗೆವೊಯ್** – (ನಾಟಿಗಾಗಿ) ಬೀಜ ಬಿತ್ತು

**ಅಗೆವೋಗು** – ಮೊಳಕೆ ಒಡೆ

**ಅಗೇಂದ್ರ** – ಬೆಟ್ಟಗಳ ರಾಜ, ಹಿಮವತ್ಪರ್ವತ

**ಅಗೌಕಸ** – ಮರವೇ ಮನೆಯಾಗಿ ಉಳ್ಳದ್ದು, ಕೋತಿ

**ಅಗ್ಗ** – ಶ್ರೇಷ್ಠ; ಕಸುವು; ತುದಿ

**ಅಗ್ಗಂಬೆಱು** – ಶ್ರೇಷ್ಠವಾಗು

**ಅಗ್ಗಂಮಾಡು** – ದೊಡ್ಡದು ಮಾಡು

**ಅಗ್ಗ(ಗ್ಗಾ)ಯಿಲೆ** –ಹೆಚ್ಚು ಹಣ ತೆಗೆದುಕೊಳ್ಳುವ ಸೂಳೆ

**ಅಗ್ಗರಣೆ** – ಒಗ್ಗರಣೆ; ಹಗ್ಗ

**ಅಗ್ಗರಿಸು** – ಸಿದ್ಧವಾಗು

**ಅಗ್ಗಲಂ** – ಹೆಚ್ಚಾಗಿ
**ಅಗ್ಗಲಿ(ಳ)ಸು** – ಹೆಚ್ಚಿಸು; ಹೆಚ್ಚಾಗು; ಪ್ರಬಲವಾಗು; ಸಂತಸಪಡು; ವ್ಯಾಪಿಸು; ಒದಗು; ಅತಿಕ್ರಮಿಸು
**ಅಗ್ಗವಣಿ** – ಮೀಸಲು ನೀರು
**ಅಗ್ಗವಳ** – ಒಬ್ಬ ಅಧಿಕಾರಿ
**ಅಗ್ಗಳ** – ಶ್ರೇಷ್ಠ
**ಅಗ್ಗಳಗಣ್** – ಹೆಚ್ಚಾದ (ಮೂರನೆಯ) ಕಣ್ಣು; ವಿಶೇಷ ದೃಷ್ಟಿ
**ಅಗ್ಗಳಗಣ್ಣ** – ಅಗ್ಗಳಗಣ್ಣುಳ್ಳವನು, ಶಿವ
**ಅಗ್ಗಳವಸ್ತು** – ಶ್ರೇಷ್ಠ ವಸ್ತು
**ಅಗ್ಗಳ(ಕೆ)ಕ್ಕೆ** – ಅತಿಶಯತೆ; ಮಹಿಮೆ
**ಅಗ್ಗಳಕೆವಡೆ** – ಅತಿಶಯಗೊಳ್ಳು
**ಅಗ್ಗಳಸು** – ಹೆಚ್ಚಾಗು
**ಅಗ್ಗ(ಗು)ಟಿ** – ತಡೆಗೂಟ, ಲಾಳವಿಂಡಿಗೆ
**ಅಗ್ಗಟಿ** – ಅತಿಶಯ
**ಅಗ್ಗಟಿಕೆ** – ಅಗ್ಗಟಿ
**ಅಗ್ಗಾಯಿಲೆ(ತಿ)** – ಹೆಚ್ಚು ಹಣ ತೆಗೆದುಕೊಳ್ಳುವ ಸೂಳೆ
**ಅಗ್ಗಿ** – (ಅಗ್ನಿ) ಬೆಂಕಿ
**ಅಗ್ಗಿಕೊಂಡ** – ಕೆಂಡದ ಗುಂಡಿ
**ಅಗ್ಗಿಗಣ್ಣು** – ಉರಿಗಣ್ಣು
**ಅಗ್ಗಿಮೊಗ** – (ಅಗ್ನಿಮುಖ) ದೇವತೆ
**ಅಗ್ಗವಳೆದೆಣ್ಣೆ** – ಕಾದ ಎಣ್ಣೆ
**ಅಗ್ಗಿವೆಗಡು** – ಬೆಂಕಿಯ ಭಯ
**ಅಗ್ಗಿಸು** – ನಾಶಪಡಿಸು
**ಅಗ್ಗು** – ನಾಶವಾಗು
**ಅಗ್ನಿಜೆ** – ಬೆಂಕಿಯ ಮಗಳು, ದ್ರೌಪದಿ
**ಅಗ್ನಿನೇತ್ರ** – ಈಶ್ವರ
**ಅಗ್ನಿಪುತ್ರಿ** – ಬೆಂಕಿಯ ಮಗಳು, ದ್ರೌಪದಿ
**ಅಗ್ನಿಮಂಥ** – ಆರಣಿಯನ್ನುಜ್ಜಿ ಬೆಂಕಿ ಮಾಡುವುದು
**ಅಗ್ನಿಮಿತ್ರ** – ಗಾಳಿ
**ಅಗ್ನಿವೀರ್ಯ** – ಈಶ್ವರ
**ಅಗ್ನಿಶೌಚವಸ್ತ್ರ** – ಉಬ್ಬೆಗೆ ಹಾಕಿ ಶುಚಿಮಾಡಿದ ಬಟ್ಟೆ
**ಅಗ್ನಿಸಾಕ್ಷಿ** – ಅಗ್ನಿಯನ್ನು ಸಾಕ್ಷಿಯಾಗಿರಿಸಿಕೊಳ್ಳುವುದು
**ಅಗ್ನಿಸ್ಥಂಭ** – ಬೆಂಕಿಯು ಸುಡದಂತೆ ಮಾಡುವ ವಿದ್ಯೆ, ಮಂತ್ರ
**ಅಗ್ನಿಸ್ತಂಭಿನಿ** – ಅಗ್ನಿಸ್ತಂಭ
**ಅಗ್ನೀಧ್ರ** – ಯಜ್ಞಾಗ್ನಿಯನ್ನು ಪ್ರಜ್ವಲನ ಮಾಡುವವನು; ಬ್ರಹ್ಮ ಎಂಬ ಋತ್ವಿಕ್ಕು, ಯಜ್ಞಕಾರ್ಯ
**ಅಗ್ರ** – ಮುಖ್ಯವಾದ; ಅಧಿಕವಾದ; ಮುಂಭಾ; ತುದಿ; ಆರಂಭ
**ಅಗ್ರಕಾರ್ಯ** – ಮೊದಲ ಕೆಲಸ; ಮುಖ್ಯ ಕೆಲಸ
**ಅಗ್ರಜನ್ಮ** – ಬ್ರಾಹ್ಮಣ
**ಅಗ್ರಣಿ** – ಮುಂದಾಳು
**ಅಗ್ರಪದಾತಿ** – ಮುಂಗಡೆಯ ಕಾಲಾಳುಪಡೆ
**ಅಗ್ರಪುತ್ರ** – ಹಿರಿಯ ಮಗ
**ಅಗ್ರಪೂಜೆ** – ಮೊದಲ ಗೌರವ
**ಅಗ್ರಭವ** – ಅಗ್ರಜ, ಅಣ್ಣ
**ಅಗ್ರಮಹಿಷಿ** – ಪಟ್ಟದ ರಾಣಿ
**ಅಗ್ರಸುತ** – ಹಿರಿಯ ಮಗ
**ಅಗ್ರಹಸ್ತ** – ಕೈಯ ತುದಿ
**ಅಗ್ರಾಮ್ಯತೆ** – ಗ್ರಾಮ್ಯವಲ್ಲದ್ದು, ಸುಸಂಸ್ಕೃತತೆ
**ಅಗ್ರಾಸನ** – ಅಗ್ರಹಾರ, ಬ್ರಾಹ್ಮಣರಿಗೆ ದಾನ ಕೊಟ್ಟ ಭೂಮಿ; ಬ್ರಾಹ್ಮಣರ ಊಟದ ಶಾಲೆ
**ಅಜ್ಜಗೆ** – ಇರವಂತಿಗೆ
**ಅಘ** – ಪಾಪ; ನೋವು
**ಅಘಚ್ಛಿದ** – ಪಾಪವನ್ನು ನಾಶಗೈಯುವ
**ಅಘಜನ** – ಪಾಪಿಗಳು
**ಅಘಜಾಲ(ಳ)** – ಪಾಪರಾಶಿ
**ಅಘಟಮಾನ** – ನಡೆಯದ; ಹೊಂದಿಕೊಳ್ಳದ
**ಅಘಪ(ವ)ಡು** – ಸೆರೆಸಿಕ್ಕು
**ಅಘವಿಘಟನ** – ಪಾಪಕ್ಷಯ
**ಅಘವಿಘಾತ** – ಪಾಪನಾಶ
**ಅಘಮರ್ಷಣ** – ಪಾಪನಿವಾರಕ ಮಂತ್ರ
**ಅಘವಟ್ಟಂ** – ಪಾಪಮಾಡಿದವನು
**ಅಘಾತಿ** – ಕೊಲ್ಲದ
**ಅಘಾತಿಕರ್ಮ** – (ಜೈನ) ಜೀವದ ಅನಂತಜ್ಞಾನಾದಿ ಗುಣಗಳನ್ನು ನಾಶಮಾಡದ ವೇದನೀಯ, ಆಯು, ನಾಮ, ಗೋತ್ರ ಎಂಬ ನಾಲ್ಕು ಕರ್ಮಗಳು
**ಅಘಾರಿ** – ಪಾಪದ ಶತ್ರು
**ಅಚರ** – ಚಲನವಿಲ್ಲದ
**ಅಚಲ** – ಬೆಟ್ಟ
**ಅಚಲ(ಳ)ನಿತಂಬ** – ಬೆಟ್ಟದ ತಪ್ಪಲು
**ಅಚಲರಿಪು** – ಬೆಟ್ಟದ ಶತ್ರು, ಇಂದ್ರ
**ಅಚಿರಂ** – ಕೂಡಲೆ
**ಅಚಿರಪ್ರಭೆ** – ಕ್ಷಣಿಕವಾದ ಬೆಳಕು
**ಅಚಿರಾಂಶು** – ಅಚಿರಪ್ರಭೆ
**ಅಚೇಲಕ** – ವಸ್ತ್ರವಿಲ್ಲದ; ದಿಗಂಬರ
**ಅಚ್ಚ** – ಶುದ್ಧ; ಇಂದ್ರಿಯ; ಜಪಮಣಿ
**ಅಚ್ಚಂಬೊಯ್** – ಪುಟವಿಡು; ಶುದ್ಧಿಗೊಳಿಸು
**ಅಚ್ಚಗಡೆ** – ಸುಂದರವಾದ ರಂಗೋಲಿ
**ಅಚ್ಚಗನ್ನಡ** – ಶುದ್ಧಗನ್ನಡ
**ಅಚ್ಚಗಱುಂಕೆ** – ಕೋಮಲವಾದ ಗರಿಕೆ, ದೂರ್ವೆ
**ಅಚ್ಚಗೆಂಡ** – ನಿಗಿನಿಗಿ ಕೆಂಡ
**ಅಚ್ಚಗೊಂಡ** – ನಿಗಿನಿಗಿಸುವ ಕೆಂಡದ ಕೊಂಡ
**ಅಚ್ಚಜೌವನೆ** – ಹೊಸ ಹರಯದವಳು
**ಅಚ್ಚದಾವರೆ** – ಸುಂದರವಾದ ತಾವರೆ
**ಅಚ್ಚದಿಂಗಳ್** – ನಿರ್ಮಲವಾದ ಚಂದ್ರ
**ಅಚ್ಚದುಗುಲ** – ನಿರ್ಮಲವಾದ ರೇಷ್ಮೆ ಬಟ್ಟೆ
**ಅಚ್ಚದೊವರಿ** – ಶುದ್ಧವಾದ ತೊಗರಿ

**ಅಚ್ಚನನೆ** – ಶುದ್ಧವಾದ ಹೂ
**ಅಚ್ಚನೆ** – ಚೆನ್ನಾಗಿ, ಸುಂದರವಾಗಿ
**ಅಚ್ಚಬಿಳದು** – ಅಪ್ಪಟ ಬಿಳಿಯ ಬಣ್ಣವುಳ್ಳ
**ಅಚ್ಚಬೆಳಂತಿಗೆ** – ಪೂರ್ಣ ಬಿಳಿಪು
**ಅಚ್ಚಬೆಳ್ದಿಂಗಳ್** – ನಿರ್ಮಲವಾದ ಬೇಳುದಿಂಗಳು
**ಅಚ್ಚಮಲ್ಲಿಗೆ** – ಬಿಳಿಯ ಮಲ್ಲಿಗೆ ಹೂ
**ಅಚ್ಚಮಿಂಚು** – ಶುಭ್ರ ಹೊಳಪು
**ಅಚ್ಚಮುತ್ತು** – ಶುಭ್ರಕಾಂತಿಯುಳ್ಳ ಮುತ್ತು
**ಅಚ್ಚರ** – ದೇವತೆ
**ಅಚ್ಚರ(ಸಿ)ಸೆ** – (ಅಪ್ಸರಸಿ) ಅಪ್ಸರೆ
**ಅಚ್ಚರಿ** – ಆಶ್ಚರ್ಯ
**ಅಚ್ಚರಿವಡು** – ಆಶ್ಚರ್ಯಹೊಂದು
**ಅಚ್ಚರಿವಡೆ** – ಆಶ್ಚರ್ಯಪಡು; ಆಶ್ಚರ್ಯಪಡಿಸು
**ಅಚ್ಚರಿವೀಱು** – ಅಚ್ಚರಿಯುಂಟುಮಾಡು
**ಅಚ್ಚರಿವೆಱು** – ಬೆರಗುಗೊಳಿಸು
**ಅಚ್ಚಲರ್** – ಹೊಸ ಹೂ
**ಅಚ್ಚವಳಕು** – ಶುಭ್ರ ಸ್ಫಟಿಕ
**ಅಚ್ಚವೂ** – ಹೊಸ ಹೂ
**ಅಚ್ಚವೆಳ್ದಿಂಗಳ್** – ಶುಭ್ರ ಬೆಳುದಿಂಗಳು
**ಅಚ್ಚಸೊಗ** – ಶುದ್ಧ ಸುಖ
**ಅಚ್ಚಟೆ** – ಅಂದಗೆಡು
**ಅಚ್ಚಾಡಿಸು** – ಸುತ್ತಾಡಿಸು
**ಅಚ್ಚಾನೆ** – ಸೊಗಸಾದ ಆನೆ
**ಅಚ್ಚಿ** – (ಅಕ್ಷಿ) ಕಣ್ಣು
**ಅಚ್ಚಿಗ** – ದುಃಖ; ಕ್ಲೇಶ; ಕೇಡು; ಉತ್ಸಾಹ; ರೀತಿ
**ಅಚ್ಚಿಗಂಗೊಳ್** – ತುಂಬ ದುಃಖಪಡು
**ಅಚ್ಚಿಗಂಗೊಳಿಸು** – ಕಷ್ಟಕ್ಕೀಡುಮಾಡು
**ಅಚ್ಚಿಗಂಬಡಿಸು** – ತುಂಬ ವ್ಯಥೆಪಡು
**ಅಚ್ಚಿಗೊಳಿಸು** – ದೃಷ್ಟಿಯನ್ನು ಸೆಳೆ
**ಅಚ್ಚಿಮುಗುಳ್ಚು** – ಕಣ್ಣುಮುಚ್ಚು
**ಅಚ್ಚಿಟೆ** – ಮುದ್ರೆಯೊತ್ತು; ಎರಕಹೊಯ್; ಒಂದುಗೂಡು
**ಅಚ್ಚು** – (ಅಕ್ಷ) ಎರಕ ಹೊಯ್ದು ತಯಾರಿಸಿದ ವಸ್ತು; ಒತ್ತಿದ ಮುದ್ರೆ; ಬಂಡಿಯ ಇರಚೆ
**ಅಚ್ಚುಕತನ** – ಉತ್ಸಾಹ; ಸಂಭ್ರಮ
**ಅಚ್ಚುಡಿ** – ಎರಕದ ರೀತಿ ಒಂದಾಗು; ಬಂಡಿಯ ಅಚ್ಚು ಮುರಿದುಹೋಗು
**ಅಚ್ಚುಳ** – ಚರ್ಮದ ಕೆಲಸ
**ಅಚ್ಚುಳಕೋಲ್** – ಬಾರುಕೋಲು
**ಅಚ್ಚುಳಾಯ್ತ** – ಸೇವಕ
**ಅಚ್ಚುಲಾಯ್ಲ** – ಸೇವಕ
**ಅಚ್ಚೆ** – ಒಂದು ಬಗೆಯ ಮೀನು
**ಅಚ್ಚೊತ್ತು** – ಅಚ್ಚಿನಲ್ಲಿ ಒತ್ತು; ಮುದ್ರೆಯೊತ್ತು
**ಅಛಂದ** – ಛಂದಸ್ಸು ಕೆಟ್ಟಿರುವ
**ಅಚ್ಛಾಂಬು** – ಶುದ್ಧವಾದ ನೀರು
**ಅಚ್ಛಾಯ** – ನೆರಳಿಲ್ಲದ್ದು
**ಅಚ್ಛೋದ** – ನಿರ್ಮಲವಾದ ನೀರು; ತಿಳಿನೀರು; ಒಂದು ಸರೋವರದ ಹೆಸರು
**ಅಚ್ಛೋದಕ** – ನಿರ್ಮಲವಾದ ನೀರು
**ಅಚ್ಯುತ** – ನಾಶವಿಲ್ಲದ; ವಿಷ್ಣು
**ಅಚ್ಯುತಕಲ್ಪ** – (ಜೈನ) ಆ ಹೆಸರಿನ ಹದಿನಾರನೆಯ ಸ್ವರ್ಗ
**ಅಚ್ಯುತಸೌಖ್ಯ** – ಶಾಶ್ವತಸುಖ
**ಅಚ್ಯುತೇಂದ್ರ** – (ಜೈನ) ಅಚ್ಯುತಕಲ್ಪದ ಇಂದ್ರ
**ಅಛ್ಯ** – ಅಚ್ಚ
**ಅಜ** – ಹುಟ್ಟು ಇಲ್ಲದ; ದೇವರು; ಬ್ರಹ್ಮ; ಸೂರ್ಯ; ಜಿನ; ಸಮುದ್ರ
**ಅಜಂಡ** – ಹೊಲಿದು ಸೇರಿಸದ, ಬ್ರಹ್ಮಾಂಡ
**ಅಜಕುಕ್ಷಿ** – ಆಡಿನ ಹೊಟ್ಟೆಯಂತೆ ತೆಳ್ಳಗಿನ ಹೊಟ್ಟೆಯಿರುವ
**ಅಜಗರ** – ಹೋತವನ್ನು ನುಂಗುವಂಥದು; ಹೆಬ್ಬಾವು
**ಅಜಗರ್ಭಿಣಿ** – ಗಬ್ಬವಾದ ಆಡು
**ಅಜನ್ಮೆ** – ಜನ್ಮರಹಿತಳು
**ಅಜಪೋತ** – ಆಡಿನ ಮರಿ
**ಅಜರ** – ಮುಪ್ಪಿಲ್ಲದ; ದೇವತೆ ; ಜಿನ
**ಅಜಸ್ರಂ** – ಯಾವಾಗಲೂ
**ಅಜಾಂಡ** – ಬ್ರಹ್ಮಾಂಡ
**ಅಜಾಕೃಪಾಣೀಯ** – ಮೇಕೆ ಬರುವುದೂ, ಕತ್ತಿ ಬೀಳುವುದೂ ಒಂದಾಗಿ ಮೇಕೆ ಸಾಯುವುದು; ಆಕಸ್ಮಿಕ
**ಅಜಾತ** – ಜನ್ಮರಹಿತ; ವಿಷ್ಣು; ಶಿವ; ಜಿನ
**ಅಜಾತಪೂರ್ವ** – ಹಿಂದೆಂದೂ ಜನಿಸದ
**ಅಜಾತಶತ್ರು** – ಶತ್ರುವೇ ಹುಟ್ಟದವನು, ಧರ್ಮರಾಯ
**ಅಜಾನೇಯ** – ಒಳ್ಳೆಯ ತಳಿಯ ಕುದುರೆ
**ಅಜಿತ** – ಜಯಿಸಲಸಾಧ್ಯನಾದವನು; ವಿಷ್ಣು; (ಜೈನ) ಎರಡನೆಯ ತೀರ್ಥಂಕರನಾದ ಅಜಿತನಾಥ
**ಅಜಿನ** – ಚರ್ಮ
**ಅಜಿನಾಂಬರ** – ಅಜಿನವನ್ನೇ ಉಟ್ಟವನು; ಶಿವ
**ಅಜಿರ** – ಚುರುಕಾದ; ಅಂಗಳ; ಶರೀರ
**ಅಜಿಹ್ಮ** – ವಕ್ರವಲ್ಲದ; ನೇರಸ್ವಭಾವದ
**ಅಜೀವ** – ಜೀವರಹಿತ; ಜಡವಾದ; (ಜೈನ) ಏಳು ತತ್ವಗಳಲ್ಲಿ ಎರಡನೆಯದು
**ಅಜೀವತತ್ವ** – ಅಜೀವ
**ಅಜೀವರತ್ನ** – (ಜೈನ) ಚಕ್ರವರ್ತಿಗಳಿಗೆ ಸಹಜವಾಗಿ ಒದಗುವ ಹದಿನಾಲ್ಕು ರತ್ನಗಳಲ್ಲಿ ಒಂದು
**ಅಜೆ** – ಆಡು, ಹೆಣ್ಣು ಮೇಕೆ; ಭೂಮಿ
**ಅಜೇಯ** – ಗೆಲ್ಲಲಾಗದ
**ಅಜ್ಜ** – (ಆರ್ಯ) ತಾತ; ಹಿರಿಯ; ವೃದ್ಧ
**ಅಜ್ಜಗಾಪು** – ನಂಬಿಕೆಗೆ ಪಾತ್ರರಾದವರ ಕಾವಲು
**ಅಜ್ಜಪಜ್ಜರ್** – (ಆರ್ಯಪ್ರಾರ್ಯರ್) ಪೂರ್ವಿಕರು
**ಅಜ್ಜಣಿಗಟ್ಟಿ** – ಹೇಸರಗತ್ತೆ
**ಅಜ್ಜಿ** – ತಂದೆ ಅಥವಾ ತಾಯಿಯ ತಾಯಿ

**ಅಜ್ಜಿಕೆ** – ಜೈನ ಸನ್ಯಾಸಿನಿ, ಕಂತಿ
**ಅಜ್ಜಿ(ಜ್ಜು)ಗೆ** – ಇರವಂತಿ; ಮರುಗ
**ಅಜ್ಞ** – ತಿಳಿಯದವನು; ಮೂರ್ಖ
**ಅಜ್ಞತ್ವ** – ತಿಳಿಯದಿರುವಿಕೆ
**ಅಜ್ಞಾನ** – ಜ್ಞಾನರಾಹಿತ್ಯ
**ಅಜ್ಞಾನತ್ರಯ** – (ಜೈನ) ಕುಮತಿ, ಕುಶ್ರುತ, ವಿಭಂಗ ಎಂಬ ಮೂರು ಬಗೆಯ ಅಜ್ಞಾನಗಳು
**ಅಟನ** – ತಿರುಗಾಟ
**ಅಟನಿ** – ಬಿಲ್ಲಿನ ತುದಿ
**ಅಟಮಟಿಗ** – ಸುಳ್ಳುಗಾರ
**ಅಟರ್** – ಮೇಲೆ ಬೀಳು
**ಅಟಳ** – ಅತಳವೆಂಬ ಪಾತಾಳ
**ಅಟವಿ** – ಅಡವಿ, ಕಾಡು
**ಅಟವ್ಯ** – ಅರಣ್ಯ ಪ್ರದೇಶ
**ಅಟಳಪಟಳ** – ಅತಳದ ಮೇಲ್ಭಾಗ
**ಅಟ್ಟಕಟಿ** – ಸ್ನಾನದಲ್ಲಿ ಕೊಳೆ ಹೋಗಲು ಹಾಕಿಕೊಳ್ಳುವ ಗಂಜಿ
**ಅಟ್ಟಗವಲ್** – ಮರದ ಎತ್ತರವಾದ ಕವಲುಕೊಂಬೆ
**ಅಟ್ಟಟ್ಟಿ** – ನಿಯೋಗ; ದೂತ
**ಅಟ್ಟಟ್ಟಿಯಟ್ಟು** – ದೂತನನ್ನು ಕಳುಹಿಸು
**ಅಟ್ಟಳೆ** – ಕೋಟೆಯ ಬುರುಜು
**ಅಟ್ಟಾಲ(ಳ)** – ಅಟ್ಟಳೆ
**ಅಟ್ಟಿಮುಟ್ಟು** – ಅಟ್ಟಿಸಿಕೊಂಡು ಹೋಗಿ ಮುಟ್ಟು
**ಅಟ್ಟವಣೆ** – ಪುಸ್ತಕವಿಡುವ ಪೀಠ
**ಅಟ್ಟವಣೆಕೋಲ್** – ಪುಸ್ತಕವಿರಿಸುವ ಪೀಠ; ವ್ಯಾಸಪೀಠ
**ಅಟ್ಟಹಾಸ** – ಗಟ್ಟಿಯಾದ ನಗು
**ಅಟ್ಟೆಲೆ(ಳೆ)** –ಅಟ್ಟಣೆ, ಕೊತ್ತಳ, ಬುರುಜು, ಕೋಟೆಯ ಮೇಲಿನ ಕಾವಲುಗಾರನ ಕೊಠಡಿ
**ಅಟ್ಟಾಲ(ಳ)** – ಅಟ್ಟಲೆ
**ಅಟ್ಟಾಲ(ಳ)ಕ** – ಅಟ್ಟಾಲ
**ಅಟ್ಟಾಲಿಕೆ** – ಅಟ್ಟಾಲ
**ಅಟ್ಟಾಸುರ** – ತುಂಬ ಭಯಂಕರವಾದ
**ಅಟ್ಟಿಸು** – ಕಳಿಸಿಕೊಡು; ಒಣಗಿಹೋಗು
**ಅಟ್ಟು** – ಅಂಟು; ಬೆನ್ನುಹತ್ತಿ ಹೋಗು, ಅನುಧಾವನ; ಅಡಿಗೆ ಮಾಡು; ಮೇಲ್ಭಾಗದ ಬದು
**ಅಟ್ಟುಂಬರಿ** – ಬೆನ್ನಟ್ಟಿ ಹೋಗು; ಅಭೇದ್ಯ ಸಂಬಂಧ
**ಅಟ್ಟುಂಬರಿಗೊಳ್** – ಅಟ್ಟಿಸಿಕೊಂಡು ಹೋಗು
**ಅಟ್ಟುಂಬೆಸ** – ಹೇಳಿಕಳಿಸಿ ಮಾಡುವ ಕೆಲಸ
**ಅಟ್ಟುಪಡು** – ಬೆನ್ನಟ್ಟುವಿಕೆಗೆ ಒಳಗಾಗು
**ಅಟ್ಟುಪೆ(ವೆ)ಱು** – ಅಟ್ಟುಪೆಡು
**ಅಟ್ಟೆ** – ಮುಂಡ; ಚಪ್ಪಲಿಯ ತಳಭಾಗದ ಹಲ್ಲೆ
**ಅಟ್ಟೆಯಾಟ** – ತಲೆ ಕತ್ತರಿಸಿದ ಮೇಲೆ ಮುಂಡದ ಕುಣಿದಾಟ
**ಅಟ್ಟೆಯಿಡು** – ದೇಹವನ್ನು ಚಾಚು
**ಅಡಂಗಾಯ್ತ** – ಕೋಟೆ ರಕ್ಷಿಸುವವನು
**ಅಡಂಗಿಸು** – ಮರೆಮಾಚು; ಬಚ್ಚಿಡು
**ಅಡಂಗು** – ಬಚ್ಚಿಟ್ಟುಕೋ; ಹಿಂದಕ್ಕೆ ಸರಿ; ಶಮನವಾಗು; ಸೇರಿಹೋಗು; ಪರಿಮಿತಿಗೆ ಒಳಪಡು
**ಅಡಂಗುಱುಚಾಟ** – ಕಣ್ಣುಮುಚ್ಚಾಲೆಯಾಟ
**ಅಡಂಗುಱುಚಾಡು** – ಕಣ್ಣುಮುಚ್ಚಾಲೆ ಅಟವಾಡು
**ಅಡಂಗೊತ್ತು** – ತಿರಿಚು
**ಅಡಕ** – ಹಿಡಿತದಲ್ಲಿಟ್ಟುಕೊ; ಸಂಯಮ; ವಿಧೇಯತೆ
**ಅಡಕಿಲ್** – ಪೇರಿಸಿಡುವುದು
**ಅಡಕಿಲಿಡು** – ಪೇರಿಸು
**ಅಡಕಿಲ್ಗಿರಿ** – ಪೇರಿಸಿದ ಬೆಟ್ಟಗಳು
**ಅಡಕಿಲ್ಗೊಳ್** – ಪೇರಿಸಿರು; ದಟ್ಟವಾಗು
**ಅಡಕಿಲ್ಜವನ** – ಏರಿಸಿದ ಯೌವನ
**ಅಡಕಿಲ್ವಾಸು** – ಪೇರಿಸಿದ ಹಾಸಿಗೆ
**ಅಡಕಿಲ್ವುಣ್** – ಹುಣ್ಣ ಮೇಲೆ ಹುಣ್ಣು
**ಅಡಕಿಲ್ವೆಸರ್** – ಒಂದರ ಮೇಲೆ ಒಂದು ಪೇರಿಸಿಕೊಂಡ ಹೆಸರು
**ಅಡಕಿಲ್ವೊಂದು** – ಒಂದರ ಮೇಲೊಂದು ಇರಿಸು
**ಅಡಕು** – ತುಂಬು; ನಿಯಮ; ಸಂಯಮ
**ಅಡಗಿಂಡೆ** – ಮಾಂಸದ ಮುದ್ದೆ
**ಅಡಗಿಂಡೆಯಾಡು** – ಮಾಂಸದ ಮುದ್ದೆಗಳನ್ನು ಚೆಲ್ಲಾಡು
**ಅಡ(ಂ)ಗು** – ಮಾಂಸ; ಜೋಡಣೆ
**ಅಡಗುತಿನ್** – ಅಡಗನ್ನು ತಿನ್ನು
**ಅಡದಿನ್** – ಅಡಗನ್ನು ತಿನ್ನು
**ಅಡಪ** – ಎಲೆಯಡಕೆಯ ಚೀಲ
**ಅಡಪಂಬಿಡಿ** – ಎಲೆಯಡಿಕೆ ಚೀಲವನ್ನು ಹಿಡಿದುಕೊ
**ಅಡಪಗಿತ್ತಿ** – ಒಡೆಯನ ಎಲೆಯಡಿಕೆ ಚೀಲ ಹಿಡಿಯುವವಳು
**ಅಡಪ(ಹ)ಡಿಸು** – ತವಕಿಸು
**ಅಡಪವಳ** – ಒಡೆಯನ ಎಲೆಯಡಿಕೆ ಚೀಲ ಹಿಡಿಯುವವನು
**ಅಡಪವಳತಿ** – ಅಡಪಗಿತ್ತಿ
**ಅಡಪಿಗ** – ಅಡಪವಳ
**ಅಡಪು** – ನಾಟ್ಯದ ಒಂದು ಭಂಗಿ
**ಅಡರ್** – ಮೇಲಕ್ಕೆ ಹತ್ತು; ವ್ಯಾಪಿಸು; ಸೇರು
**ಅಡಬಳ** – ಅಡಿಗೆಯವನು, ಬಾಸಿಗ
**ಅಡರಿಸು** – ಹತ್ತಿಸು
**ಅಡರ್ಪು** – ಆಧಾರ; ಆಶ್ರಯ; ಔನ್ನತ್ಯ
**ಅಡರ್ಪುಗುಡು** – ಆಶ್ರಯ ನೀಡು
**ಅಡರ್ಪುಮಾಡು** – ಆಶ್ರಯವಾಗಿ ಮಾಡು
**ಅಡವಡಿಸು** – ಆತಂಕಪಡು
**ಅಡವಿ** – ಕಾಡು

**ಅಡವಿಗಿರ್ಚು** – ಕಾಡುಗಿಚ್ಚು
**ಅಡವಿಮೃಗ** – ಕಾಡುಮೃಗ
**ಅಡವು** – ರೀತಿ; ಹದ
**ಅಡಸು** – ಒತ್ತಾಗಿ ಸೇರಿಸು, ತುರುಕು; ಮೆತ್ತು; ಮೇಲೆ ಬೀಳು; ಸಂಭವಿಸು; ನುಗ್ಗು; ಸೇರು
**ಅಡಹಡಿಸು** – ತ್ವರೆಮಾಡು; ಮುನ್ನುಗ್ಗು
**ಅಡಾಯುಧ** – ಒಂದು ಬಗೆಯ ಕತ್ತಿ
**ಅಡಿ** – ಪಾದ; ವಿರೋಧ
**ಅಡಿಗಡಿಗೆ** – ಹೆಜ್ಜೆಹೆಜ್ಜೆಗೆ; ಮತ್ತೆ ಮತ್ತೆ
**ಅಡಿಗರ್ದು** – ತಳಕ್ಕೆ ಮುಳುಗಿಸು
**ಅಡಿಗಲ್** – ತಳಹದಿ; ಆಧಾರ
**ಅಡಿಗಲ್ಲಿಕ್ಕು** – ತಳಹದಿ ಹಾಕು
**ಅಡಿಗಾಣ್** – ತಳ ಕಾಣು
**ಅಡಿಗಿಕ್ಕು** – ಕೆಳಕ್ಕೆ ಹಾಕು
**ಅಡಿಗಿ(ಗೆ)ಡು** – ನಡಿಗೆ ಕೆಡು; ನೆಲೆ ತಪ್ಪು
**ಅಡಿಗುಟ್ಟು** – ಕಾಲನ್ನು ಒತ್ತು; ಕುಣಿ
**ಅಡಿಗೊಳ್** – ಓಡು
**ಅಡಿಗೊಳಂಗು** – ಗೊರಸಿನ ಕೆಳಭಾಗ
**ಅಡಿದಳಿರ್** – ಚಿಗುರಿನಂತೆ ಕೋಮಲವಾದ ಪಾದ
**ಅಡಿಮಂಚಿಕೆ** – ಕೆಳಮಂಚ
**ಅಡಿಮಾಡು** – ಕೀಳಾಗಿ ಮಾಡು
**ಅಡಿಮಿಡುಕು** – ಹೆಜ್ಜೆಯನ್ನು ಅಲುಗಿಸು
**ಅಡಿಮೊದಲ್** – ಅಡಿಯ ತಳಭಾಗ
**ಅಡಿಯಿಡು** – ಹೆಜ್ಜೆಯಿಡು; ಮುಂದುವರಿ
**ಅಡಿಯೂಡು** – ಪಾದಕ್ಕೆ ಲೇಪನ ಮಾಡು; ಅಂಗಾಲು ತಿಕ್ಕು
**ಅಡಿಯೆತ್ತು** – ಹೆಜ್ಜೆ ಎತ್ತು; ಹೊರಡು
**ಅಡಿರುಚಿ** – ಪಾದದ ಕಾಂತಿ
**ಅಡಿವಜ್ಜೆ** – ಹೆಜ್ಜೆಯ ಗುರುತು
**ಅಡಿವಣಿಗೆ** – ಕೆಸರಿನ ಹೆಜ್ಜೆಯ ಗುರುತು
**ಅಡಿವಿಡಿ** – ಅನುಸರಿಸು
**ಅಡಿವೊಣರ್** – ಪಾದಯುಗಳ
**ಅಡು** –ಬೇಯಿಸು; ಆ ಕಾಡು
**ಅಡುಕು** – ಸ್ಥಾನಾಂತರ ಮಾಡು
**ಅಡುಗರ್ಬು** – ಸೌದೆ
**ಅಡು(ಡಿ)ಗೆ** – ಬೇಯಿಸುವುದು; ಪಾಕಕ್ರಿಯೆ
**ಅಡುರ್ಕೆ** – ಹಬ್ಬುವಿಕೆ; ಆಕ್ರಮಣ
**ಅಡುವುಗ್ಗಿ** – ಹದವಾದ ಹುಗ್ಗಿ
**ಅಡುಱ್** – ಮೇಲೆ ಬೀಳು, ಆವರಿಸು
**ಅಡೆ** – ಬೆರಳಿನಿಂದ ಹೊಡೆ; ಅಂಗುಲಿಪ್ರಹರಣ; ಬಡಗಿಯ ಆಧಾರದ ಕೊರಡು; ತಿಪ್ಪೆ
**ಅಡೆಗೆಡೆ** – ಅಡ್ಡವಾಗಿ ಬೀಳು
**ಅಡೆಮಂಚಿಕೆ** – ವಸ್ತುಗಳನ್ನು ಕತ್ತರಿಸಲು ಆಧಾರವಾದ ಅಡಿಯ ಮಣೆ
**ಅಡೆಯೊಡ್ಡು** – ಅಡೆಯನ್ನು ಒಡ್ಡು
**ಅಡೆಯೊತ್ತು** – ಜೋರಾಗಿ ಅಮುಕು
**ಅಡೆವೊತ್ತು** – ಸುತ್ತಲೂ ಹೊತ್ತಿಕೊ
**ಅಡ್ಡ** – (ಅರ್ಧ) ಹಣದ ಅರ್ಧಬೆಲೆಯ ಒಂದು ನಾಣ್ಯ
**ಅಡ್ಡಂ**– ಅಡ್ಡಲಾಗಿ
**ಅಡ್ಡಂಬರ್** – ಅಡ್ಡಲಾಗಿ ಬರು
**ಅಡ್ಡಂಬರಿ** – ಅಡ್ಡಲಾಗಿ ಹರಿ; ನುಗ್ಗು
**ಅಡ್ಡಂಬರಿಯಿಸು** – ಅಡ್ಡಲಾಗಿ ಹೋಗುವಂತೆ ಮಾಡು
**ಅಡ್ಡಂಬಾಱು** – ಅಡ್ಡಲಾಗಿ ಹಾರು
**ಅಡ್ಡಂಬೀೞ್** – ಅಡ್ಡಬೀಳು
**ಅಡ್ಡಗೊಂಬು** – ಅಡ್ಡಲಾಗಿ ಚಾಚಿಕೊಂಡಿರವ ಕೊಂಬೆ
**ಅಡ್ಡಣ** – ಢಾಲು, ಗುರಾಣಿ
**ಅಡ್ಡಣಾಯತವಡೆ** – ಗುರಾಣಿ ಹಿಡಿದವರ ಸೈನ್ಯ
**ಅಡ್ಡಣಿಗೆ** – ತಳಿಗೆಯಿಡುವ ಪೀಠ
**ಅಡ್ಡತರ** – ಅಡ್ಡಲಾಗಿ ನಿಲ್ಲುವ ಅಥವಾ ಚಲಿಸುವ ರೀತಿ
**ಅಡ್ಡಪುರಿ** – ನೃತ್ಯದ ಒಂದು ಭಂಗಿ
**ಅಡ್ಡಬೊಟ್ಟು** – ಹಣೆಯ ಮೇಲಿನ ಅಡ್ಡ ಗೆರೆ
**ಅಡ್ಡಮಿರ್** – ಅಡ್ಡಲಾಗಿರು
**ಅಡ್ಡಮುಂ ತಿಗಟಮುಂ** – ಅಡ್ಡಡ್ಡಲಾಗಿ
**ಅಡ್ಡಯಿಸು** – ಅಡ್ಡಿಮಾಡು
**ಅಡಟ್ಟವಣೆ** – ಕಂಬಗಳ ಮೇಲೆ ಜೋಡಿಸಲಾದ ಮಣೆ
**ಅಡ್ಡವಿಸು** – ಅಡ್ಡಿಮಾಡು
**ಅಡ್ಡವೊಡ್ಡು** – ಅಡ್ಡಲಾಗಿ ಒಡ್ಡು
**ಅಡ್ಡಸಾರ್ಚು** – ಪಕ್ಕದಲ್ಲಿ ನಿಲ್ಲಿಸು
**ಅಡ್ಡಸುೞಿ** – ಎದುರಿಗೆ ಸುಳಿದಾಡು
**ಅಣ್** – ಅಂಟು; ಸೋಕು
**ಅಣಂ** – ಸ್ವಲ್ಪವೂ; ಹೆಚ್ಚಾಗಿ
**ಅಣಂಬೆ** – ನಾಯಿಕೊಡೆ
**ಅಣಕ** – ಆಶ್ಚರ್ಯ; ಪೀಡೆ, ಹಿಂಸೆ; ಕುಚೋದ್ಯ; ಹುಡುಗಾಟಿಕೆ; ನಟನೆ; ಸೋಗು; ಅನುಕರಣೆ; ಅನುಚಿತ; ಒತ್ತಾಗಿರುವುದು
**ಅಣಕಂ** – ಅತಿಶಯವಾಗಿ
**ಅಣಕಚಣಕಂಗೆಡೆ** – ಕುಚೋದ್ಯಮಾಡು
**ಅಣಕವಾತು** – ಕುಚೋದ್ಯದ ಮಾತು
**ಅಣಕಿಸು** – ಅಪಹಾಸ್ಯ ಮಾಡು; ಅನುಕರಿಸು
**ಅಣಚಿ** – ಮುತ್ತೈದೆ
**ಅಣಚಿತನ** – ಮುತ್ತೈದೆತನ
**ಅಣಲ್** – ಬಾಯಿಯ ಅಂಗುಳು; ದವಡೆ; ಗಂಟಲು
**ಅಣಸು** – ಆಯುಧದ ಹಿಡಿ; ಬಾಣದ ಹಿಳುಕು
**ಅಣಿ** – ಸೈನ್ಯದ ಒಂದು ಅಂಗ; ಪದಾತಿ; ಸೈನ್ಯದ ವ್ಯೂಹ; ಕಡಾಣಿ; ಸಿದ್ಧನಾಗು
**ಅಣಿಮಾ** – ಅಷ್ಟಸಿದ್ಧಿಗಳಲ್ಲಿ ಒಂದು, ಅತ್ಯಂತ ಸೂಕ್ಷ್ಮರೂಪವನ್ನು ಪಡೆಯಬಲ್ಲ ಶಕ್ತಿ, ನೋಡಿ, 'ಅಷ್ಟಸಿದ್ಧಿ'

**ಅಣೆಯರ** – ಅತಿಶಯ; ಹಿರಿಮೆ; ರಭಸ
**ಅಣೆಯರಂ** – ಅತಿಶಯವಾಗಿ
**ಅಣೆಲ್** – ಅಳಿಲಿನಂತಹ ಸಣ್ಣ ಪ್ರಾಣಿ
**ಅಣೆವಿಣೆ** – ಬಿಕ್ಕಟ್ಟು; ತಡೆ
**ಅಣುಂಗ** – ಪ್ರೀತಿಪಾತ್ರ ವ್ಯಕ್ತಿ; ಮಗ
**ಅಣು(ಂ)ಗು** – ಪ್ರೀತಿ
**ಅಣುಗಗಲಹ** – ಪ್ರಣಯಕಲಹ
**ಅಣುಗದಮ್ಮ** – ಪ್ರೀತಿಯ ತಮ್ಮ
**ಅಣುಗಮಗ** – ಪ್ರೀತಿಯ ಮಗ
**ಅಣುಗಮೆಯ್ದುನ** – ಪ್ರೀತಿಯ ಮೈದುನ
**ಅಣುಗಾಳ್** – ಪ್ರೀತಿಯ, ನಚ್ಚಿನ ಬಂಟ
**ಅಣುಗಿಱ** – ಹತ್ತಿರ ಬಾ
**ಅಣುಗಿಱವೊಯ್** – ಹತ್ತಿರ ಬಂದು ಹೊಡೆ
**ಅಣುವ** – ಹನುಮಂತ
**ಅಣುವ(ಬ್ರ)ತ** – (ಜೈನ) ಜೈನ ಗೃಹಸ್ಥರು ಪಾಲಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಐದು ವ್ರತಗಳಲ್ಲಿ ಒಂದು
**ಅಣೂತ್ತರೆ** – (ಜೈನ) ಲೋಕಾಕಾಶದ ತುದಿಯ ನೆಲೆಯಲ್ಲಿರು ಐದು ವಿಮಾನಗಳಲ್ಲಿ ಒಂದು, ನೋಡಿ, "ಪಂಚಾಣೂತ್ತರೆ"
**ಅಣೆ** – ತಿವಿ, ಇರಿ; ಹೊಡೆ, ಅಪ್ಪಳಿಸು; ಮುಟ್ಟು, ಸೇರು; ನದಿಗೆ ಹಾಕುವ ಅಡ್ಡಗಟ್ಟೆ; ಬೆಟ್ಟದ ತಪ್ಪಲು
**ಅಣೆಯಿಸು** – ಅಣಿಸು, ಹೊಡೆಯಿಸು
**ಅಣ್ಕು** – ಮುಳುಗು
**ಅಣ್ಕೆ** – ಲೇಪನ; ಬಣ್ಣಹಾಕುವುದು
**ಅಣ್ಕೆಗೆಯ್** – ಲೇಪಿಸು, ಬಣ್ಣಹಾಕು
**ಅಣ್ಣ** – ಅಗ್ರಜ; ಹಿರಿಯ ಮಗ
**ಅಣ್ಣನೆ** – ಹಿತವಾಗಿ
**ಅಣ್ಣವಳ** – ಅಂದಗೆಡು(?)
**ಅಣ್ಣೆಕಲ್** – ಮೇಲಕ್ಕೆಸೆದು ಹಿಡಿಯುವ ಆಟದ ಸಣ್ಣಕಲ್ಲು
**ಅಣ್ಣೆಕಲ್ಲಾಟ** – ಅಣ್ಣೆಕಲ್ಲಿನ ಆಟ
**ಅಣ್ಣೆವಾಲ್** – ಶುದ್ಧವಾದ ಹಾಲು
**ಅಣ್ಪು** – ಬಳಿಯುವುದು; ಸವರುವುದು; ಲೇಪನ; ಲೇಪನವಸ್ತು; ನಂಟತನ
**ಅಣ್ಪುಗೆಯ್** – ಲೇಪಿಸು
**ಅಣ್ಮು** – ಪರಾಕ್ರಮ; ಸಾಮರ್ಥ್ಯ; ಪೌರುಷ ತೋರು
**ಅಣ್ಮುಕಾಱ** – ಸಮರ್ಥ
**ಅಣ್ಮುಗಿಡು** – ಸಾಮರ್ಥ್ಯ ನಾಶವಾಗು
**ಅಣ್ಮುಗುಂದು** – ಪೌರುಷ ಕುಗ್ಗು
**ಅತಂದ್ರ** – ತೂಕಡಿಕೆಯಿಲ್ಲದ; ಎಚ್ಚರಿಕೆಯಿಂದ ಕೂಡಿದ
**ಅತನು** – ಕೃಶವಲ್ಲದ; ದೇಹವಿಲ್ಲದವನು, ಮನ್ಮಥ
**ಅತನುಹರ** – ಮನ್ಮಥನನ್ನು ಕೊಂದವನು, ಶಿವ
**ಅತನೂದರ** – ಕೃಶವಲ್ಲದ ಹೊಟ್ಟೆ
**ಅತರ್ಕ್ಯ** – ಊಹಿಸಲಾಗದ
**ಅತರ್ಕ್ಯಗೋಚರ** – ಊಹೆಗೆ ಮೀರಿದ
**ಅತಸೀ(ಪುಷ್ಪ)** – ಅಗಸೆ (ಹೂ)
**ಅತಾಂತಂ** – ಶ್ರಮವಿಲ್ಲದೆ
**ಅತಾತ್ವಿಕ** – ಕೃತ್ರಿಮ
**ಅತಿಕ್ರಮ** – ಕ್ರಮವನ್ನು ಮೀರುವುದು; ಮರ್ಯಾದೆ ಮೀರುವುದು
**ಅತಿಕ್ರಮಿಸು** – ಮೀರು; ಉಲ್ಲಂಘಿಸು; ಹೊರಹೊಮ್ಮು
**ಅತಿಕ್ರಾಂತ** – ಮೀರಿದ; ಮುಗಿದುಹೋದ
**ಅತಿದ್ರುತ ಪ್ರವಾಹಮಾನ** – ಅತ್ಯಂತ ವೇಗವಾಗಿ ಹರಿಯುವ
**ಅತಿಗಱೆ** – ಮೀರು; ತಿರಸ್ಕರಿಸು
**ಅತಿಚದುರ** – ಬಹಳ ಜಾಣ
**ಅತಿತೃಷ್ಣೆ** – ಬಹಳವಾದ ಬಾಯಾರಿಕೆ
**ಅತಿದುಷ್ಷಮ** – (ಜೈನ) ಜ್ಞಾನ, ಆಯುಷ್ಯ ಮುಂತಾದವು ಕಡಿಮೆಯಾಗುತ್ತ ಹೋಗುವ ಅವಸರ್ಪಿಣಿ ಎಂಬ ಕಾಲದ ಕಡೆಯ ಭಾಗ; "ದುಷ್ಷಮದುಷ್ಷಮ ಕಾಲ"
**ಅತಿಧವಳ** – ಬಹಳ ಬೆಳ್ಳಗಿರುವ
**ಅತಿಬಲ(ಳ)** – ಹೆಚ್ಚು ಶಕ್ತಿಯಿರುವ
**ಅತಿಭವ** – ಕಳೆದ ಜನ್ಮ
**ಅತಿಮುಕ್ತ** – ಪೂರ್ಣವಾಗಿ ಬಿಡುಗಡೆ ಹೊಂದಿದ; ಬೀಜರಹಿತವಾದ; ಇರುವಂತಿಗೆ
**ಅತಿಮೋಹ** – ಹೆಚ್ಚಾದ ಮೋಹ
**ಅತಿರಥ** – ನಾಲ್ಕು ಬಗೆಯ ರಥಿಕರಲ್ಲಿ ಅತ್ಯಂತ ಶ್ರೇಷ್ಠ
**ಅತಿರೇಕ** – ರೂಢಿಗೆ ವಿರುದ್ಧವಾದ ನಡೆ; ಅಳತೆಗೆ ಮೀರಿದ
**ಅತಿವರ್ತಿ** – ಬಹಳ ಹೆಚ್ಚಿನ; ಮೊಟ್ಟ ಮೊದಲನೆಯ; ಕ್ರಮಮೀರಿ ನಡೆಯುವ
**ಅತಿವರ್ತಿತ** – ಆನೆಯ ಸಪ್ತಮದಗಳಲ್ಲಿ ಒಂದು
**ಅತಿವೃತ್ತ** – ತುಂಬ ಗುಂಡಗಿನ; ಅನಾಚಾರಿ
**ಅತಿವ್ಯಕ್ತ** – ತುಂಬ ಸ್ಪಷ್ಟವಾದ
**ಅತಿಶಯ** – ಮೇಲ್ಮೆ, ಹೆಚ್ಚಳ
**ಅತಿಶಯಧವಳ** – ತುಂಬ ಬಿಳುಪಾದ; ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಒಂದು ಬಿರುದು
**ಅತಿಶಯಿತ** – ಶ್ರೇಷ್ಠ
**ಅತಿಸಂಧಿತೆ** – ವಂಚಿತೆ
**ಅತೀಂದ್ರಿಯಸೌಖ್ಯ** – ಇಂದ್ರಿಯಗಳಿಗೆ ಸಂಬಂಧಿಸದ, ಆತ್ಮಕ್ಕೆ ಸಂಬಂಧಿಸಿದ ಸುಖ
**ಅತೀತ** – ಮೀರಿದ; ದಾಟಿದ; ಗತಿಸಿಹೋದ; ಕಳೆದುಹೋದ
**ಅತೀತಜನ್ಮ** – ಕಳೆದುಹೋದ ಜನ್ಮ
**ಅತೀತಭವ** – ಅತೀತಜನ್ಮ
**ಅತುಚ್ಛ** – ತುಚ್ಛವಲ್ಲದ, ಶ್ರೇಷ್ಠ
**ಅತುಚ್ಛಬಾಣ** – ಹೆಚ್ಚು ಶಕ್ತಿಯ ಬಾಣ

**ಅತ್ತ** – ಆ ಕಡೆ; ಹೊರಗೆ; ಬೇರೊಂದೆಡೆ; ಆಮೇಲೆ
**ಅತ್ತಂ** – ಆ ಕಡೆಗೆ; ಅತ್ತಲಾಗಿ
**ಅತ್ತಣಿಂ** – ದೆಸೆಯಿಂದ, ಆ ಕಡೆಯಿಂದ
**ಅತ್ತಪರ** – ಗುರಾಣಿ
**ಅತ್ತರಣ** – ಕುಳಿತುಕೊಳ್ಳು ಅಥವಾ ಮಲಗುವ ಮೆತ್ತನೆಯ ಆಸನ
**ಅತ್ತರಿಸು** – ಪರಿಮಳಗೊಳಿಸು
**ಅತ್ತಲಗ್ಗ** – ಅತಿಶಯದ
**ಅತ್ತಳ** – ಅತಿಶಯ
**ಅತ್ತಳಗ** – ತಾಳಲು ಅಶಕ್ಯವಾದ; ವ್ಯಥೆ
**ಅತ್ತಳಗಂ** – ಹೆಚ್ಚಾಗಿ; ಅತ್ಯಧಿಕವಾಗಿ
**ಅತ್ತಿಗೆ** – ಅಣ್ಣನ ಹೆಂಡತಿ; ಪ್ರೀತಿಸಿದವಳು, ನಲ್ಲೆ
**ಅತ್ಯಂತ** – ಎಲ್ಲೆಮಿರಿದ; ಎಲ್ಲಕ್ಕೂ ಮಿಗಿಲಾದ
**ಅತ್ಯಂತಾಭಾವ** – ಸಂಪೂರ್ಣವಾಗಿ ಇಲ್ಲದಿರುವುದು
**ಅತ್ಯಯ** – ಅತಿಕ್ರಮ; ಹದ್ದು ಮೀರುವುದು; ಸಾವು
**ಅತ್ಯಾಯತ** – ಬಹಳ ವಿಸ್ತಾರವಾದ
**ಅತ್ಯಾಯಾಮ** – ಅತ್ಯಾಯತ
**ಅತ್ಯಾಸನ್ನ** – ಬಹು ಸಮೀಪವಿರುವ
**ಅತ್ಯಾಸುರ** – ಬಹು ಭಯಂಕರವಾದ
**ಅತ್ಯುಜ್ವಲ** – ತುಂಬ ಪ್ರಕಾಶಮಾನವಾದ
**ಅತ್ಯುದ್ಗಾರಿಸು** – ಬಲವಾಗಿ ಹೊರಚೆಲ್ಲು; ಕಾರಿಕೊಳ್ಳು
**ಅತ್ಯುತ್ಸುಕ** – ತುಂಬ ತವಕವುಳ್ಳ
**ಅತ್ಯೂರ್ಜಿತ** – ಬಹಳ ಏಳಿಗೆ ಹೊಂದಿದ
**ಅತ್ರಸ್ತ** – ಹೆದರದ
**ಅತ್ರಪಾತ್ರಿಕೆ** – ನಾಚಿಕೆಯಿಲ್ಲದವಳು
**ಅತ್ರಿಪುತ್ರ** – ಅತ್ರಿಯ ಮಗ, ಚಂದ್ರ
**ಅತ್ಯಯ** – ಅಂತ್ಯ, ಕೊನೆ
**ಅಥರ್ವಕುಶಲ** – ಅಥರ್ವವೇದ ಪಂಡಿತ
**ಅದಂಡ್ಯ** – ದಂಡಿಸಬಾರದ; ದಂಡನಾರ್ಹವಲ್ಲದ
**ಅದಗುಂತಿ** – ಆಶ್ವರ್ಯ
**ಅದಟ** – (ಅಧಟ) ಶೂರ
**ಅದಟತೆ** – ಪರಾಕ್ರಮ
**ಅದಟಲೆ** – ಧಿಕ್ಕರಿಸು
**ಅದಟು** – ಪರಾಕ್ರಮ; ಸತ್ವ; ದರ್ಪ
**ಅದಭ್ರ** – ಅಧಿಕ; ಸಮೃದ್ಧಿಯಾದ
**ಅದಯ** – ದಯೆಯಿಲ್ಲದ; ಕ್ರೂರ
**ಅದರಟ್ಟು** – ಬೆದರಿಸಿ ಅಟ್ಟು
**ಅದವಟಿಲ್** – ದುಃಖ, ಬೇಗುದಿ
**ಅದಟಿಂ** – ಅದರಿದ ; ಆದ್ದರಿಂದ
**ಅದಿತಿ** – ದೇವತೆಗಳ ಜನನಿ; ಹಸು; ಭೂಮಿ
**ಅದಿತಿಜಪುರ** – ಅಮರಾವತಿ
**ಅದಿತಿಪ್ರಿಯ ಪುತ್ರ** – ಸೂರ್ಯ
**ಅದಿರ್** – ನಡುಗು; ಕಂಪಿಸು; ಹೆದರು; ಕಂಪನ
**ಅದಿರ್ಗಂತಿ** – ಮಾಧವಿ ಹೂ
**ಅದಿರ್ಪು** – ನಡುಗಿಸು; ಅಡಗಿಸು; ಧಿಕ್ಕರಿಸು; ನಿವಾರಿಸು; ಕಂಪನ
**ಅದಿರ್ಪುಗೆಯ್** – ಅದುರಿಸು
**ಅದಿರ್ಮುತ್ತೆ** – ಮಾಧವೀಲತೆ, ಇರುವಂತಿಗೆ
**ಅದುಕಾರಣ** – ಆ ಕಾರಣದಿಂದ
**ಅದುಗಾಣ್** –ಅದನ್ನು ನೋಡಿ
**ಅದುಗಿಡು** – 'ಅದು ತಪ್ಪಿಹೋಗು'
**ಅದುವದು** – ವಿಚಾರಮಾಡುವುದು; ವಿಮರ್ಶಿಸುವುದು
**ಅದೂಷ್ಯ** – ದೂಷ್ಯವಲ್ಲದ
**ಅದೃಢ** – ದೃಢವಲ್ಲದ, ಸಡಿಲವಾದ
**ಅದೃಶ್ಯರೂಪ** – ಇತರರಿಗೆ ಕಾಣಿಸದ ರೂಪ
**ಅದೃಷ್ಟಪುರುಷಸಂಧಿ** – ರಾಜನೀತಿಯ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು
**ಅದೃಷ್ಟಪೂರ್ವ** – ಹಿಂದೆ ಕಂಡಿರದ
**ಅದೃಷ್ಟಸಂಧಿ** – ಅದೃಷ್ಟಪುರುಷಸಂಧಿ
**ಅದೆ** – ಅದೇ, ಅಗೋ ಎಂಬಂತೆ ಗಮನ ಸೆಳೆಯುವ ಮಾತು
**ಅದೇತರ್ಕೆ ಬಾಟಿತ್ತೆ** – ಅದರಿಂದೇನು ಪ್ರಯೋಜನ, ನಿಷ್ಪ್ರಯೋಜಕ
**ಅದೇಯ** – ಕೊಡಬಾರದ
**ಅದೈವೆ** – ದೈವಬಲವಿಲ್ಲದವಳು
**ಅದೊ** – ಅಗೋ
**ಅದ್ಗ** – ಎರಡರಲ್ಲಿ ಒಂದು ಪಾಲು; ಅರ್ಧ
**ಅದ್ದರ** – ಹೋಮಪೂಜೆ
**ಅದ್ದಿಕ** – ಅಧ್ಯಕ್ಷ; ಮುಖ್ಯಾಧಿಕಾರಿ
**ಅದ್ಭುತಾಕೃತಿ** – ಬಹು ದೊಡ್ಡದೂ ಆಶ್ಚರ್ಯದಾಯಕವೂ ಆದ ಆಕಾರ
**ಅದ್ಯತನ** – ಈಚಿನ; ಈಚಿನವನು
**ಅದ್ರಿ** – ಬೆಟ್ಟ; ಮರ
**ಅದ್ರಿಕನ್ಯೆ** – (ಹಿಮಾಲಯಂ) ಪರ್ವತದ ಮಗಳು, ಪಾರ್ವತಿ
**ಅದ್ವಂದ್ವ** – ದ್ವಂದ್ವಗಳಿಲ್ಲದ; ಅದ್ವಿತೀಯ
**ಅದ್ವಯ** – ಎರಡಿಲ್ಲದ, ಅದ್ವಿತೀಯ
**ಅದ್ವಿತೀಯ** – ಎರಡಾಗಿಲ್ಲದ; ಸಮಾನವಿಲ್ಲದ
**ಅಧಃಕರಿ(ಯಿ)ಸು** – ಕೀಳುಮಾಡು; ಧಿಕ್ಕರಿಸು
**ಅಧಃಕೃತ** – ಕೀಳುಮಾಡಲ್ಪಟ್ಟ
**ಅಧಃಪತನ** – ಕೆಳಕ್ಕೆ ಬೀಳುವುದು; ದುರ್ಗತಿಗಿಳಿಯುವುದು
**ಅಧಃಪಾತ** – ಅಧಃಪತನ
**ಅಧಃಪ್ರಭಾವ** – ಕಡಿಮೆಯಾದ ಪ್ರಭಾವ
**ಅಧಃಪ್ರವೃತ್ತಕರಣ** – ನಾನಾ ಜೀವಾಪೇಕ್ಷೆಯಿಂದ ಉತ್ತರ ಕರಣ (ಪರಿಣಾಮ)ಗಳು ಪೂರ್ವಪರಿಣಾಮಗಳೊಡನೆ ಸಾದೃಶ್ಯವನ್ನು ಹೊಂದುವುದು
**ಅಧಃಸ್ಥಳಂಬಿಡಿ** – ತಳಭಾಗವನ್ನು ಅವಲಂಬಿಸು
**ಅದಃಸ್ರಂಸನ** – ಕೆಳಕ್ಕೆ ಜಾರುವುದು

**ಅಧನದ** – ಹಣವಿಲ್ಲದವನು, ಬಡವ; ಧನವನ್ನು ಕೊಡದವನು; ಜಿಪುಣ
**ಅಧಮವರ್ಣ** – ಶೂದ್ರ
**ಅಧರ** – ತುಟಿ, ಕೆಳದುಟಿ
**ಅಧರಂಮಾಡು** – ಕೀಳುಮಾಡು
**ಅಧರತಾವಾಪ್ತಿ** – ಕೀಳುತನವನ್ನು ಹೊಂದುವುದು
**ಅಧರತೆ** – ಕೆಳಗಡೆ ಇರುವಿಕೆ
**ಅಧರರ್** – ಕೀಳಾದವರು
**ಅಧರಿತ** – ಕೀಳುಮಾಡಲ್ಪಟ್ಟ
**ಅಧರಿಸು** – ಕೀಳುಮಾಡು
**ಅಧಸ್ಸ್ಥಲ(ಳ)** – ಕೆಳಗಿನ ಪ್ರದೇಶ
**ಅಧಿಕರಣ** – ಅಧಿಕಾರ
**ಅಧಿಕಾಕ್ಷ** – ಹೆಚ್ಚು ಕಣ್ಣಿರುವವನು, ಶಿವ
**ಅಧಿಕಾರ** – (ಜೈನ) ಅತಿಬಾಲವಿದ್ಯಾ ಕುಲಾವಧಿ ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರ, ವ್ಯವಹಾರ, ಈಶಿತ್ವ, ಅವಧ್ಯತ್ವ, ಅದಂಡ್ಯತ್ವ, ಮಾನಾರ್ಹತ್ವ, ಪ್ರಜಾಸಂಬಂಧಾಂತರ ಎಂಬ ಹತ್ತು ಅಧಿಕಾರಗಳು
**ಅಧಿಕಾರಿ** – ಅಧಿಕಾರದಲ್ಲಿ ನಿಯೋಜಿಸಲ್ಪಟ್ಟವನು
**ಅಧಿಗತ** – ಪಡೆದ; ಪ್ರಾಪ್ತವಾದ; ಅಭ್ಯಾಸಮಾಡಿದ
**ಅಧಿಗಮನ** – ಕಲಿಯುವಿಕೆ
**ಅಧಿಜ್ಯಧನು** – ಹೆದಯೇರಿಸಿದ ಬಿಲ್ಲು; ಅಂಥ ಬಿಲ್ಲುಳ್ಳ
**ಅಧಿತ್ಯಕ** – ಬೆಟ್ಟದ ಮೇಲಿನ ಕಾಡು ಪ್ರದೇಶ
**ಅಧಿದೇವತೆ** – ಅಭಿಮಾನಿ ದೇವತೆ; ಒಂದು ಸ್ಥಳದ ದೇವತೆ; ಎಲ್ಲಕ್ಕಿಂತ ಮುಖ್ಯವಾದ ದೇವತೆ
**ಅಧಿನಾಥ** – ಪ್ರಧಾನ ಅಧಿಕಾರಿ; ಒಡೆಯ
**ಅಧಿಪ** – ಅಧಿನಾಥ
**ಅಧಿಪತಿ** – ಅಧಿನಾಥ
**ಅಧಿಪಾಲ** – ಅಧಿನಾಥ
**ಅಧಿರೂಢ** – ಮೇಲೇರಿದ
**ಅಧಿರೋಹಣ** – ಮೇಲೇ ಹತ್ತುವುದು
**ಅಧಿರೋಹಿಣಿ** – ಏಣಿ
**ಅಧಿವಾಸ** – ಹೊದಿಕೆ
**ಅಧಿವಾಸಿತ** – ಪ್ರತಿಷ್ಠಾನೆಗೊಂಡ; ಸುಗಂಧಯುಕ್ತವಾದ
**ಅಧಿವಾಸಿಸು** – ನೆಲಸು; ಪೂಜಿಸು; ಸುಗಂಧಭರಿತವಾಗಿಸು
**ಅಧಿಶ್ರಯಣಿ** – ಅಡಿಗೆಯ ಒಲೆ
**ಅಧಿಶ್ರಾವಕ** – ಪ್ರಮುಖ ಶ್ರಾವಕ
**ಅಧಿಷ್ಠಾನ** – ನೆಲೆಸಿರುವುದು; ಆಧಾರ, ನೆಲೆ; ತಳಹದಿ
**ಅಧಿಷಾನಂಗಟ್ಟು** – ತಳಹದಿ ಹಾಕು
**ಅಧಿಷ್ಠಿತ** – ಪ್ರಭುತ್ವ ನಡೆಸುವ, ಮೇಲಧಿಕಾರವನ್ನು ಪಡೆದವನು
**ಅಧಿಷ್ಠಿಸು** – ನೆಲೆಗೊಳಿಸು; ನೆಲಸು
**ಅಧೀಶ** – ಒಡೆಯ
**ಅಧೀಶ್ವರ** – ಅಧಿರಾಜ; ಇತರ ರಾಜರ ಮೇಲೆ ಅಧಿಕಾರವುಳ್ಳವನು
**ಅಧೋಕ್ಷಜ** – ವಿಷ್ಣು; ವಾಸುದೇವ
**ಅಧೋಘ** – ಕೆಳಮುಖವಾದ; ಇಳಿಯುವ
**ಅಧೋಗತಿ** – ಕೆಳಕ್ಕಿಳಿಯುವುದು; ಅವನತಿ
**ಅಧೋಗ್ರೈವೇಯಕ** – (ಜೈನ) ಒಂಬತ್ತು ಗ್ರೈವೇಯಕಗಳೆಂಬ ಕಲ್ಪಾತೀತ ಸ್ವರ್ಗಗಳಲ್ಲಿ ಕೆಳಗಿನದು; ನೋಡಿ 'ಗ್ರೈವೇಯಕ'
**ಅಧೋಭೂಮಿ** – ಕೆಳಗಿನ ಲೋಕ
**ಅಧೋಲೋಕ** – ಅಧೋಭೂಮಿ
**ಅಧ್ಯಯನ** – ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದಾದ ವೇದಾಧ್ಯಯನ
**ಅಧ್ಯಯನಾಂತರಾಯ** – ಶಾಸ್ತ್ರಾಭ್ಯಾಸಂಗಕ್ಕೆ ಆಗುವ ಅಡ್ಡಿ; ಪಾಠವಿಘ್ನ
**ಅಧ್ಯವಸಾಯ** – ನಿಶ್ಚಿತಜ್ಞಾನ
**ಅಧ್ಯಾತ್ಮ** – ಆತ್ಮಕ್ಕೆ ಸಂಬಂಧಪಟ್ಟ; ಬ್ರಹ್ಮಜ್ಞಾನ
**ಅಧ್ಯಾತ್ಮಧ್ಯಾನ** – ಅತ್ಮತತ್ವವನ್ನು ನೆನೆಯುತ್ತಿರುವುದು
**ಅಧ್ಯಾತ್ಮವಿಶಾರದ** – ತತ್ವಶಾಸ್ತ್ರದಲ್ಲಿ ನಿಪುಣ
**ಅಧ್ಯಾಪನ** – ವೇದವನ್ನು ಪಾಠ ಹೇಳುವುದು; ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದು
**ಅಧ್ಯಾರೋಪಣಂಗೆಯ್** – ಇಲ್ಲದ ಗುಣಗಳನ್ನು ಆರೋಪಿಸು
**ಅಧ್ಯಾರೋಪಿಸು** – ಬೇರೆ ಗುಣಗಳನ್ನು ಮೇಲೆ ತೋರಿಸು
**ಅಧ್ಯಾಸನ** – ಮೇಲೆ ಕುಳಿತುಕೊಳ್ಳುವುದು
**ಅಧ್ಯಾಸಿತ** – ಇಡಲ್ಪಟ್ಟ
**ಅಧ್ಯಾಷಿತ** – ಮೇಲೆ ನಿಂತ; ನೆಲೆಸಿದ
**ಅಧ್ರುವ** – ಅಸ್ಥಿರ
**ಅಧ್ವ** – ದಾರಿ; ರೀತಿ; ಕ್ರಮ
**ಅಧ್ವಗ** – ಪ್ರಯಾಣಿಕ
**ಅಧ್ವಗಜನ** – ಪ್ರಯಾಣಿಕರು
**ಅಧ್ವಗಮನ** – ಪ್ರಯಾಣ
**ಅಧ್ವಜಕ್ಲೇಶ** – ದಾರಿಯಲ್ಲಿ ಆಗುವ ತೊಂದರೆ; ಪ್ರಯಾಣವಿಘ್ನ
**ಅಧ್ವನೀನ** – ಪ್ರಯಾಣಿಸಲು ಸಮರ್ಥವಾದ
**ಅಧ್ವನ್ಯ** – ಪ್ರಯಾಣಿಸಲು ಸಮರ್ಥವಾದ; ಸಿದ್ಧವಾದ ರಥ
**ಅಧ್ವರ** – ಸೋಮಪಾನಪ್ರಧಾನವಾದ ಯಜ್ಞ
**ಅಧ್ವರಿ** – ಯಜ್ಞಮಾಡುವವನು, ಯಾಗದೀಕ್ಷಿತ
**ಅಧ್ವರ್ಯು** – ಯಜ್ಞಕ್ಕೆ ಬೇಕಾದ ಕೆಲಸವನ್ನು **ಮಾಡುವುದರ ಜೊತೆಗೆ ಯಜುರ್ವೇದವನ್ನು ಪಠಿಸುವ ವ್ಯಕ್ತಿ–**
**ಅಧ್ವಶ್ರಮ** – ಪ್ರಯಾಣದ ಆಯಾಸ
**ಅಧ್ವಾನ** – ಮಾರ್ಗ; ಕಷ್ಟ; ಕಾಡು; ಧ್ವನಿಯಿಲ್ಲದ

**ಅನಂಗ** – ದೇಹವಿಲ್ಲದ, ಮನ್ಮಥ
**ಅನಂಗಪರವಶೆ** – ಕಾಮುಕ್ಕೆ ಒಳಗಾದವಳು
**ಅನಂಗಪಾಶ** – ಮನ್ಮಥನ ಹಗ್ಗ
**ಅನಂಗಮುದ್ರೆ** – ಮನ್ಮಥನ ಮುದ್ರಿಕೆ; ಅನಂಗಪರವಶತೆಯ ಭಂಗಿ
**ಅನಂಗರಾಗ** – ಮೋಹ; ಕಾಮಾಸಕ್ತಿ
**ಅನಂಗರಾಜ** – ಕಾಮ, ಮನ್ಮಥ
**ಅನಂಗರಾಜ್ಯ** – ಕಾಮನ ರಾಜ್ಯ
**ಅನಂಗಲೋಕ** – ಮನ್ಮಥಲೋಕ
**ಅನಂಗಸುಭಗ** – ಮನ್ಮಥನಂತೆ ಚೆಲುವ; ದೇಹವಿಲ್ಲದೆ ಸುಂದರನಾದವನು
**ಅನಂಗಾಗ್ನಿ** – ಕಾಮವೆಂಬ ಬೆಂಕಿ
**ಅನಂಗೇಭ** – ಮನ್ಮಥನ ಆನೆ; ಮನ್ಮಥನೆಂಬ ಆನೆ
**ಅನಂಗೋತ್ಸವ** – ಕಾಮಕ್ರೀಡೆ
**ಅನಂತ** – ಮಿತಿಯಿಲ್ಲದ; ಗುಂಪು; ಕೃಷ್ಣ; ಆದಿಶೇಷ; (ಜೈನ) ಹದಿನಾಲ್ಕನೆಯ ತೀರ್ಥಂಕರ
**ಅನಂತಕಾಯ** – (ಜೈನ) ಅನಂತ ಜೀವಗಳಿರುವ ವನಸ್ಪತಿ
**ಅನಂತಗಣನೆ** – ಮೇರೆಮಿರಿದ ಲೆಕ್ಕ
**ಅನಂತಗುಣ** – ಅಸಂಖ್ಯಾತ ಗುಣ
**ಅನಂತಚತುಷ್ಟಯ** – (ಜೈನ) ತೀರ್ಥಂಕರರಾಗುವವರಿಗೆ ಕರ್ಮಪರಿಣಾಮಗಳು ನಷ್ಟವಾದ ಬಳಿಕ ಪ್ರಾಪ್ತವಾಗುವ ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತವೀರ್ಯಗಳೆಂಬ ನಾಲ್ಕು ಗುಣಗಳು
**ಅನಂತಜ್ಞಾನ** – ಮಿತಿಯಿಲ್ಲದ ಜ್ಞಾನ ; (ಜೈನ) ಅನಂತಚತುಷ್ಟಯದಲ್ಲಿ ಒಂದು
**ಅನಂತದರ್ಶನ** – ಮಿತಿಯಿಲ್ಲದ ನೋಟ; (ಜೈನ) ಅನಂತಚತುಷ್ಟಯದಲ್ಲಿ ಒಂದು
**ಅನಂತಪ್ರಬೋಧ** – ಅನಂತಜ್ಞಾನ
**ಅನಂತಭೋಗ** – ಅಪರಿಮಿತ ಸುಖ; ಅನಂತಸುಖ; ಆದಿಶೇಷನ ಶರೀರ
**ಅನಂತಭೋಗನಿಲಯ** – ಅಪರಿಮಿತ ಸುಖಕ್ಕೆ ನೆಲೆಯಾದವನು; ಆದಿಶೇಷನ ಶರೀರವೇ ನೆಲೆಯಾಗಿರುವವನು
**ಅನಂತಭೋಗೀಶ್ವರ** – ಆದಿಶೇಷ
**ಅನಂತರತ್ನ** – ಅಪರಿಮಿತ ರತ್ನ; (ಅನಂತ=ಆಕಾಶ) ಸೂರ್ಯ
**ಅನಂತವಸ್ತುಪ್ರಕಾಶಿ** – ಎಲ್ಲ ವಸ್ತುಗಳಿಗೂ ಕಾಣುವಂತೆ ಮಾಡುವ
**ಅನಂತವಿಧ** – ನಾನಾ ಬಗೆ; ವಿವಿಧ ರೀತಿ
**ಅನಂತವೀರ್ಯ** – ಅಪರಿಮಿತ ಶಕ್ತಿ; (ಜೈನ) ಅನಂತಚತುಷ್ಟಯಗಳಲ್ಲಿ ಒಂದು
**ಅನಂತಶಯನ** – ಆದಿಶೇಷನ ಮೇಲೆ ಮಲಗಿರುವವನು, ವಿಷ್ಣು
**ಅನಂತಸಂಜ್ಞ** – 'ಅನಂತ' ಎಂಬ ಹೆಸರಿನವನು
**ಅನಂತಸೌಖ್ಯ** – ಅನಂತಸುಖ
**ಅನಂತಾಂಶ** – ಅನಂತನ ಒಂದು ಅಂಶ
**ಅನಂತಾಖ್ಯ** – ಲೆಕ್ಕವಿಲ್ಲದಷ್ಟು ಹೆಸರುಳ್ಳ; ಅನಂತಸಂಜ್ಞ
**ಅನಂತಾತ್ಮಕ** – ಲೆಕ್ಕವಿಲ್ಲದಷ್ಟು ಬಗೆಯುಳ್ಳದ್ದು
**ಅನಂತಾಧಾರ** – ಕೊನೆಯಿರದ ಆಧಾರ; ವಿಷ್ಣುವಿನ ಆಶ್ರಯಸ್ಥಾನ; ಆದಿಶೇಷನ ಆಧಾರ
**ಅನಂತಾನುಬಂಧಿ** – (ಜೈನ) ಅನಂತಕಾಲದವರೆಗೆ ಜೀವನನ್ನು ಹುಟ್ಟುಸಾವುಗಳ ಸಂಸಾರದಲ್ಲಿ ತಿರುಗಿಸುವ ಕ್ರೋಧ, ಮಾಯ, ಮಾನ ಲೋಭಗಳೆಂಬ ನಾಲ್ಕು ಬಗೆಯ ಕಷಾಯಗಳು
**ಅನಕ** – ಕೀಳು, ನೀಚ
**ಅನಕ್ಷರಜಠರ** – ನಿರಕ್ಷರಕುಕ್ಷಿ; ವಿದ್ಯೆಯಿಲ್ಲದವನು
**ಅನಕ್ಷರಾಳಾಪ** – ಅಸ್ಪಷ್ಟ ನುಡಿ
**ಅನಗಾರ** – (ಜೈನ) ಮನೆಯಿಲ್ಲದವನು
**ಅನಗಾರಕೇವಲಿ(ಳಿ)** – (ಜೈನ) ಮನೆಯಲ್ಲಿ ವಾಸಿಸದ ಮುನಿ; ಕೇವಲಜ್ಞಾನಿ
**ಅನಗಾರವೇಳೆ** – (ಜೈನ) ಜೈನಮುನಿಗಳ ಚರಿಗೆಯ ಸಮಯ
**ಅನಗಾರಸಮಯ** – ಅನಗಾರವೇಳೆ
**ಅನಘ** – ಪಾಪವಿಲ್ಲದ
**ಅನಘಸ್ಥಾನ** – ಪಾಪವಿಲ್ಲದ ಜಾಗ
**ಅನಡ್ವ** –ಗೂಳಿ
**ಅನತಿಜರಠ** – ಹೆಚ್ಚು ಮುದಿಯಾಗದ
**ಅನತಿದೂರ** – ಹೆಚ್ಚು ದುರವಿರದ; ಸಮೀಪ
**ಅನಧ್ಯಾಯ** – ವ್ಯಾಂಗದ ನಡುವಣ ಬಿಡುವು; ರಜೆ
**ಅನನೃತವಚನ** – ಸುಳ್ಳಲ್ಲದ ನುಡಿ; ಸತ್ಯ
**ಅನನ್ಯಜ** – ಮನ್ಮಥ
**ಅನನ್ಯಮನಸ್ಕ** – ಬೇರೆಡೆ ಗಮನವಿರಿಸಿದವನು
**ಅನನ್ಯಸಾಮಾನ್ಯ** – ಬೇರೆಡೆ ಸಾಮಾನ್ಯವಲ್ಲದ; ವಿಶಿಷ್ಟವಾದ
**ಅನಪತ್ಯ** – ಮಕ್ಕಳಿಲ್ಲದವನು
**ಅನಪತ್ಯೆ** – ಮಕ್ಕಳಿಲ್ಲದವಳು; ಬಂಜೆ
**ಅನಪರಾಧೆ** – ತಪ್ಪು ಮಾಡದಿರುವವಳು
**ಅನಪವರ್ತಿ** – ಕುಗ್ಗದ; ಕಡಿಮೆಯಾಗದ
**ಅನಪವರ್ತಿತ** – ಅನಪವರ್ತಿ
**ಅನಪವರ್ತ್ಯ** – ಅನಪವರ್ತಿ
**ಅನಪಾಯಕ** – ಅಪಾಯದಿಂದ ದೂರಗೈಯುವವನು
**ಅನಪಾಯಿನಿ** – ನಾಶವಿಲ್ಲದವಳು, ಲಕ್ಷ್ಮಿ
**ಅನಪೇಕ್ಷಕ** – ಆಸೆಯಿಲ್ಲದವನು
**ಅನಭಿಜ್ಞಾತ** – ಗೊತ್ತಿರದ; ಪ್ರಸಿದ್ಧವಲ್ಲದ
**ಅನಭ್ಯುದಯ** – ಏಳಿಗೆಯಿಲ್ಲದ; ಅಭ್ಯುದಯವಿಲ್ಲದ
**ಅನಯ** – ತಪ್ಪು ನಡೆ; ದುರ್ವಿಧಿ
**ಅನರೇಂದ್ರಜ್ಯ** – ದೇವತೆಗಳ ಗುರು, ಬೃಹಸ್ಪತಿ

**ಅನರ್ಘರತ್ನ** – ಅಮೂಲ್ಯರತ್ನ ; ಬೆಲೆಯಿಲ್ಲದ ವಸ್ತು
**ಅನರ್ಘಾಕಾರ** – ಶ್ರೇಷ್ಠ ಆಕಾರ
**ಅನರ್ಘ್ಯರತ್ನ** – ಅನರ್ಘರತ್ನ
**ಅನರ್ಥಕ** – ಅರ್ಥವಿರದ; ಪ್ರಯೋಜನರಹಿತ
**ಅನರ್ಥಕ್ಯ** – ನಿರರ್ಥಕ ಕಾರ್ಯ
**ಅನರ್ಥದಂಡವಿರತಿ** – (ಜೈನ) ನಿರರ್ಥಕ ಹಿಂಸೆಯನ್ನು ಮಾಡದಿರುವುದು; 'ಗುಣವ್ರತ'ಗಳಲ್ಲಿ ಒಂದು
**ಅನರ್ಥವಚನ** – ಅರ್ಥವಿಲ್ಲದ ಮಾತು
**ಅನಲ** – ಬೆಂಕಿ; ಅಗ್ನಿ
**ಅನಲಜೆ** – ಬೆಂಕಿಯ ಮಗಳು, ದ್ರೌಪದಿ
**ಅನಲಮರೀಚಿ** – ಬೆಂಕಿಯ ಕಿರಣ; ಸೂರ್ಯ
**ಅನಲವನಿತೆ** – ಅಗ್ನಿಯ ಹೆಂಡತಿ, ಸ್ವಾಹಾದೇವಿ
**ಅನಲಾಕ್ಷ** – ಬೆಂಕಿಯ ಕಣ್ಣಿನವನು, ಶಿವ, ಈಶಾನ
**ಅನಲಾರ್ಚಿ** – ಬೆಂಕಿಯ ನಾಲಗೆ
**ಅನಲಾಸ್ತ್ರ** – ಅಗ್ನಿಶರ, ಬೆಂಕಿಯುಗುಳುವ ಬಾಣ
**ಅನಲೋಷ್ಮ** – ಬೆಂಕಿಯ ಝಳ
**ಅನಲ್ಪ** – ಅಲ್ಪವಲ್ಲದ; ದೊಡ್ಡದಾದ
**ಅನಲ್ಪವಿಕಲ್ಪ** – ನಾನಾ ಬಗೆಯ ರೂಪರೇಖೆಯಿರುವ
**ಅನವಕಾರ್ಯ** – ಅವಜ್ಞೆ ಮಾಡಲಾಗದ
**ಅನವದ್ಯ** – ದೋಷರಹಿತ, ನಿರ್ಮಲವಾದ
**ಅನವದ್ಯಚರಿತ** – ಶುದ್ಧಚಾರಿತ್ರ್ಯವುಳ್ಳವನು
**ಅನವದ್ಯತ್ವ** – (ಜೈನ) ಹತ್ತು ಅಧಿಕಾರಗಳಲ್ಲಿ ಒಂದು
**ಅನವದ್ಯಾಚರಣ** – ನಿರ್ದುಷ್ಟ ಆಚಾರ
**ಅನವದ್ಯಾಚಾರ** – ಅನವದ್ಯಾಚರಣ
**ಅನವದ್ಯೆ** – ದೋಷರಹಿತೆ
**ಅನವಧಾನ** – ಎಚ್ಚರಿಕೆಯಿಲ್ಲದಿರುವಿಕೆ
**ಅನವಧಿ** – ಕೊನೆಯಿಲ್ಲದ
**ಅನವಧಿತ್ಯಾಗ** – ಅಪಾರ ತ್ಯಾಗ
**ಅನವಧಿಬೋಧ** – ಕೊನೆಯಿಲ್ಲದ ಜ್ಞಾನ ಪಡೆದವನು
**ಅನವರತ** – ನಿರಂತರವಾದ
**ಅನವರತಂ** – ಒಂದೇ ಸಮನೆ, ಸದಾಕಾಲ
**ಅನವಸ್ಥಿತ** – ಅಸ್ಥಿರವಾದ
**ಅನವ್ಯ** – ಹೊಸದಲ್ಲದ, ಹಳೆಯ
**ಅನಶನ** – ಆಹಾರರಹಿತ; ಉಪವಾಸ
**ಅನಶನವ್ರತ** – ಉಪವಾಸವ್ರತ
**ಅನಶನದೀಕ್ಷೆ** – ಆಹಾರ ತೆಗೆದುಕೊಳ್ಳದ ವ್ರತ
**ಅನಶನವೃತ್ತಿ** – ಅನಶನವ್ರತ
**ಅನಶ್ವರ** – ಶಾಶ್ವತ
**ಅನಶ್ವರಶ್ರೀ** – ಮೋಕ್ಷಪದವಿ
**ಅನಶ್ವರಾಸ್ಪದ** – ಮೋಕ್ಷಸ್ಥಾನ
**ಅನಾಕಾರ** – ರೂಪವಿಲ್ಲದ
**ಅನಾಕುಲ** – ಪ್ರಶಾಂತವಾದ
**ಅನಾಕುಲ(ಳ)ಂ** – ಪ್ರಶಾಂತವಾಗಿ; ಅನಾಯಾಸವಾಗಿ
**ಅನಾಗತ** – ಮುಂದೆ ಸಂಭವಿಸುವ; ಭವಿಷ್ಯದ; ತಿಳಿಯದ
**ಅನಾಗತಂ** – ಭವಿಷ್ಯಜ್ಞಾನದ ಮೂಲಕ
**ಅನಾಗತಕರ್ತೃ** – ಭವಿಷ್ಯವನ್ನು ರೂಪಿಸುವವನು
**ಅನಾಗತಜ್ಞ** – ಭವಿಷ್ಯವನ್ನು ಬಲ್ಲವನು
**ಅನಾಗತಮತಿ** – ಭವಿಷ್ಯವನ್ನು ತಿಳಿದವನು
**ಅನಾಗತವೇದಿ** – ಅನಾಗತಮತಿ
**ಅನಾಗಾರತೆ** – ಸನ್ಯಾಸಧರ್ಮ
**ಅನಾಘ್ರಾತ** – ಮೂಸಿ ನೋಡದ, ಮೀಸಲಾದ
**ಅನಾತ್ಮಜ್ಞತ್ವ** – ಆತ್ಮದ ಸ್ವರೂಪವನ್ನು ತಿಳಿಯದಿರುವಿಕೆ
**ಅನಾದಿಪ್ರಭವ** – ಅನಾದಿಕಾಲದಲ್ಲಿ ಹುಟ್ಟಿದ್ದು
**ಅನಾದಿಮಿಥ್ಯಾತ್ವ** – (ಜೈನ) ಹಿಂದಿನಿಂದ ಬಂದ ತಪ್ಪು ತಿಳಿವಳಿಕೆ
**ಅನಾದೇಯ** – ಸ್ವೀಕರಿಸಬಾರದ; (ಜೈನ) ನಾಮಕರ್ಮಗಳಲ್ಲಿ ಒಂದು; ಇದರಿಂದ ಜೀವನಿಗೆ ಕಾಂತಿರಹಿತ ಶರೀರ ಪ್ರಾಪ್ತವಾಗುವುದು
**ಅನಾದ್ಯನಿಧನ** – ಹುಟ್ಟುಸಾವಿಲ್ಲದ್ದು; ಅನಾದಿ ಅನಂತವಾದುದು
**ಅನಾದ್ಯಪರ್ಯವಸಾನ** – ಆರಂಭ ಅಂತ್ಯ ಇಲ್ಲದ; (ಜೈನ) ಮಿಥ್ಯಾತ್ವಕಾಲದ ಒಂದು ವಿಭಾಗ
**ಅನಾಧಾರತೆ** – ಆಧಾರರಾಹಿತ್ಯ; ಆಶ್ರಯರಾಹಿತ್ಯ
**ಅನಾಧೇಯ** – ಆಧಾರವನ್ನು ತಿರಸ್ಕರಿಸುವ, ಯಾವುದೇ ಆಶ್ರಯವಿರದ
**ಅನಾಪ್ತ** – ಸಿಕ್ಕದ; ಪಡೆಯದ
**ಅನಾಪ್ತಾಗಮ** – ಆಪ್ತರಲ್ಲದವರು ರಚಿಸಿದ ಶಾಸ್ತ್ರ
**ಅನಾಭಿಲಾಷೆ** – ಆಸೆಯಿಲ್ಲದ್ದು
**ಅನಾಮಯ** – ರೋಗರಹಿತ
**ಅನಾಯತನಸೇವೆ** – (ಜೈನ) ಆರು ಬಗೆಯ ಮಿಥ್ಯೆಗಳ ಸೇವೆ
**ಅನಾಯುಧ** – ಆಯುಧರಹಿತ
**ಅನಾರಂಭ** – ಆರಂಭವಿಲ್ಲದ
**ಅನಾರತಂ** – ಬಿಡುವಿಲ್ಲದೆ; ನಿರಂತರವಾಗಿ
**ಅನಾರ್ಷ** – ಪ್ರಾಚೀನವಲ್ಲದ
**ಅನಾಲಸ್ಯ** – ಆಲಸ್ಯವಿರದ; ಆಲಸ್ಯರಹಿತ ವ್ಯಕ್ತಿ
**ಅನಾವಿ(ಳ) ಕದಡದಿರುವ, ನಿರ್ಮಲವಾದ–**
**ಅನಾಹತಂ** – ಏಟು ಬೀಳದೆ
**ಅನಾಹತಲೀಲೆ** – ಕುಗ್ಗದ ಲೀಲೆ
**ಅನಿ(ತು)** – ಅಷ್ಟು
**ಅನಿತರಸಾಧಾರಣ** – ಬೇರೆಡೆ ಕಾಣಲಾಗದ
**ಅನಿತು(ತ್ತು)** – ಅಷ್ಟು
**ಅನಿಧನ** – ಸಾವಿಲ್ಲದ; ನಾಶವಿಲ್ಲದ
**ಅನಿಮಿತ್ತಂ** – ಕಾರಣವಿಲ್ಲದೆ
**ಅನಿಮಿ(ಮೇ)ಷ; ಕಣ್ಣು ಮಿಟುಕಿಸದ; ದೇವತೆ; ಮೀನು; ಮತ್ಸ್ಯಾವತಾರ–**

**ಅನಿಮಿ(ಮೇ)ಷಚಾಪ** – ಕಾಮನ ಬಿಲ್ಲು, ಇಂದ್ರಚಾಪ
**ಅನಿಮಿ(ಮೇ)ಷಜಾತ** – ದೇವತಾ ಸಮೂಹ
**ಅನಿಮಿ(ಮೇ)ಷದ್ರೋಹ** – ದೇವತಾದ್ರೋಹಿ; ರಾಕ್ಷಸ
**ಅನಿಮಿ(ಮೇ)ಷಧ್ವಜ** – ಮೀನಿನ ಗುರುತಿನ ಧ್ವಜವುಳ್ಳವನು, ಮನ್ಮಥ
**ಅನಿಮಿ(ಮೇ)ಷಪತಿ** – ದೇವತೆಗಳ ಒಡೆಯ, ಇಂದ್ರ
**ಅನಿಮಿ(ಮೇ)ಷಪ್ರಕೀರ್ಣಕ** – ಮೀನುಗಳ ಹಿಂಡು; ದೇವತಾಸಮುಹ
**ಅನಿಮಿ(ಮೇ)ಷಮಂತ್ರಿ** – ಬೃಹಸ್ಪತಿ
**ಅನಿಮಿ(ಮೇ)ಷಮಾರ್ಗ** – ಆಕಾಶ
**ಅನಿಮಿ(ಮೇ)ಷಲೋಚನ** – ದೇವತೆ
**ಅನಿಮೇಷಾವಳ** – ದೇವತೆಗಳ ಗುಂಪು
**ಅನಿಮೇಷಾರಿ** – ದೇವತೆಗಳ ಶತ್ರು, ರಾಕ್ಷಸ
**ಅನಿಮ್ನನಾಭಿ** – ಆಳವಿಲ್ಲದ ಹೊಕ್ಕಳುಳ್ಳ
**ಅನಿಯತಿಕೆ** – ನಿಯಮರಾಹಿತ್ಯ
**ಅನಿರುದ್ಧ** – ತಡೆಯಿಲ್ಲದ; ಪ್ರದ್ಯುಮ್ನನ ಮಗ
**ಅನಿಲಕ** – ಚಿತ್ರಗಳಿಗೆ ಬಣ್ಣ ಹಾಕುವ ಒಂದು ಬಗೆ
**ಅನಲತನಯ** – ವಾಯುಪುತ್ರ; ಭೀಮ; ಆಂಜನೇಯ
**ಅನಿಲಪಥ** – ಆಕಾಶ
**ಅನಿಲಾ(ಳಾ)ಧ್ವ** – ಆಕಾಶ
**ಅನಿಲಾಪ್ತ** – ಗಾಳಿಗೆ ಪ್ರೀತಿಪಾತ್ರನಾದವನು, ಅಗ್ನಿ
**ಅನಿಲಾಮರ** – (ಜೈನ) ತೀರ್ಥಂಕರನ ವಿಹಾರ ಮಾರ್ಗವನ್ನು ಶುದ್ಧಿಕರಿಸುವ ದೇವತೆಗಳ ಗುಂಪು
**ಅನಿಲಾಹತ** – ಗಾಳಿಯಿಂದ ಹೊಡೆಯಲ್ಪಟ್ಟ
**ಅನಿವ** – ನಿರ್ಬಂಧ; ಆಗ್ರಹ
**ಅನಿ(ನು)ವಂಗೆಯ್** – ಬಲಾತ್ಕರಿಸು
**ಅನಿವಾರಣ** – ನಿವಾರಿಸಲಸಾಧ್ಯವಾದ
**ಅನಿವಾರಿತ** – ತಡೆಯಿಲ್ಲದ
**ಅನಿವಾರಿತದಾನ** – ತಡೆಯಿಲ್ಲದೆ, ನಿರಂತರವಾಗಿ ನೀಡುವ ದಾನ
**ಅನಿ(ನು)ವಿರಿದು** – ಅಷ್ಟು ದೊಡ್ಡದು
**ಅನಿ(ನು)ವಿಸು** – ಬಲಾತ್ಕರಿಸು
**ಅನಿವೃತ್ತಿಕರಣ** – (ಜೈನ) ಮೂರು ಬಗೆಯ ಕರಣಲಬ್ಧಿಗಳಲ್ಲಿ ಒಂದು; ಒಂಬತ್ತನೆಯ ಗುಣಸ್ಥಾನದಲ್ಲಿ ಜೀವನಿಗೆ ಧ್ಯಾನದಿಂದ ಉಂಟಾಗುವ ಪರಿಶುದ್ಧ ಭಾವಗಳು
**ಅನಿಶಂ** – ನಿರಂತರವವಾಗಿ
**ಅನಿಸಂ** – ಅನಿಶಂ
**ಅನಿಸು** – ಅಷ್ಟು
**ಅನೀಕ** – ಸೈನ್ಯ; ಗುಂಪು; ಸಾಲು
**ಅನೀಕಸ್ಥ** – ಸೈನಿಕ
**ಅನೀಕಿನಿ** – ಗುಂಪು; ಅಕ್ಷೌಹಿಣಿಯ ಹತ್ತನೆಯ ಒಂದು ಭಾಗ
**ಅನೀಪ್ಸಿತ** – ಬಯಕೆಯಿಲ್ಲದ
**ಅನುಕಂಪಮಾನ** – ನಡುಗುತ್ತಿರುವ
**ಅನುಕರ್ಷ** – ಆಕರ್ಷಣೆ; ರಥದ ಅಚ್ಚಿನ ಮರ; ದೇವತೆಗಳ ಆವಾಹನೆ
**ಅನುಕೂಲಪವನ** – ಹಿತಕರವಾದ ಗಾಳಿ
**ಅನಿಕ್ತಸಿದ್ಧ** – ಹೇಳದೆಯೇ ಸಿದ್ಧವಾದುದು
**ಅನುಕ್ರಮ** – ಕ್ರಮಕ್ಕೆ ಅನುಗುಣವಾದ
**ಅನುಕ್ರಮಂದಪ್ಪು** – ಕ್ರಮವನ್ನು ಬಿಡು
**ಅನುಕ್ರಮಾಗತ** – ಸಹಜ ಕ್ರಮದಲ್ಲಿ ಬಂದ
**ಅನುಕೃತ** – ಅನುಕರಿಸಿದ
**ಅನುಕೃತಿ** –ಅನುಕರಣ
**ಅನುಗತ** – ಅನುಸರಿಸಿ ಬಂದ
**ಅನುಗತಿವೇಱು** – ಕ್ರಮವನ್ನು ಪಡೆ
**ಅನುಗಮಿಸು** – ಅನುಸರಿಸಿ ನಡೆ
**ಅನುಗಾಮಿ** – ಅನುಸರಿಸುವ; (ಜೈನ) ಕ್ಷಯೋಪಶಮನನಿಮಿತ್ತಿಕವಾದ ಆರು ಅವಧಿಜ್ಞಾನಗಳಲ್ಲಿ ಒಂದು
**ಅನುಗೆಡಿಸು** – ಮೀರು; ಸ್ಥಿತಿಯನ್ನು ಕೆಡಿಸು
**ಅನುಗೆಯ್** – ಅಣಿಯಾಗು; ಸಿದ್ಧವಾಗು
**ಅನುಗ್ರಾಹಿಸು** – ಉಪದೇಶಮಾಡು
**ಅನುಗ್ರಾಹ್ಯ** – ಅನುಗ್ರಹಕ್ಕೆ ಯೋಗ್ಯವಾದ
**ಅನುಚರ** – ಜೊತೆಯಲ್ಲಿ ನಡೆಯುವವನು; ಸೇವಕ
**ಅನುಜ** – ತಮ್ಮ
**ಅನುಜಾತೆ** – ತಂಗಿ
**ಅನುಜೀವ** – ಬೇರೊಬ್ಬರ ಆಸ್ರಯದಲ್ಲಿರುವವನು; ಸೇವಕ
**ಅನುಜಾತೆ** – ಅನುಜೆ
**ಅನುತ್ತರ** – (ಜೈನ) ನೋಡಿ, ಅಣೂತ್ತರೆ
**ಅನುತ್ತರೀಯ** – ದಾಟಲಾಗದ
**ಅನುದಿನಂ** – ಪ್ರತಿದಿನವೂ
**ಅನುದಿಶೆ** – ಪ್ರತಿ ದಿಕ್ಕನ್ನೂ ಅನುಸರಿಸಿದುದು; (ಜೈನ) ನವಗ್ರೈವೇಯಕಗಳ ಮತ್ತು ಐದು ಅಣೂತ್ತರೆಗಳ ಮಧ್ಯೆ ಇರುವ ಒಂಬತ್ತು ಅಹಮಿಂದ್ರಸ್ವರ್ಗಗಳಲ್ಲಿ ಒಂದು
**ಅನುದ್ಗತಕ್ರಮ** – ತಾಳಲಯವಿನ್ಯಾಸದ ಒಂದು ಕ್ರಮ
**ಅನುದ್ಧತ** – ಉದ್ಧತನಲ್ಲದ; (ಜೈನ) ಒಂದು ವಿಮಾನದ ಹೆಸರು
**ಅನುದ್ಧತವೇಷ** – ನಮ್ರ ವೇಷ; ನಮ್ರ ವ್ಯಕ್ತಿ
**ಅನುದ್ವ್ಯಂಜ್ಯ** – ಉದ್ವೇಗವುಂಟುಮಾಡದ
**ಅನುನಯ** – ಪ್ರೀತಿ; ಮನವೊಲಿಸುವಿಕೆ
**ಅನುನೀತ** – ಸಮೀಪಕ್ಕೆ ಒಯ್ಯಲ್ಪಟ್ಟ
**ಅನುಪದೀನ** – ಹಾವುಗೆ, ಪಾದರಕ್ಷೆ
**ಅನುಪಮಮಂಗಳ** – ಉತ್ಕೃಷ್ಟ ಮಂಗಳ; (ಜೈನ) ಚಕ್ರವರ್ತಿಗೆ ಒದಗುವ ಚಾಮರದ ಹೆಸರು
**ಅನುಪಮಾನ** – ಹೋಲಿಕೆಯಿಲ್ಲದ
**ಅನುಪಲಕ್ಷಿತ** – ಗಮನಕ್ಕೆ ಬಾರದ
**ಅನುಪಲಬ್ಧ** – ದೊರೆಯದಿರುವ
**ಅನುಪಾತ** – ಹಿಂಬಾಲಿಸುವುದು

**ಅನುಪ್ರಭಾವಿತ –** ಅನುಸರಿಸಿ ಓಡಿದ
**ಅನುಪ್ರವೇಶ –** ಕೂಡಿ ಬಾಳುವುದು
**ಅನುಪ್ರೇಕ್ಷೆ –** (ಜೈನ) ಯತಿಗಳು ಧ್ಯಾನಮಾಡಬೇಕಾದ ಅನಿತ್ಯತ್ವ, ಅಶರಣತ್ವ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿ, ಆಸ್ರವ, ಸಂವರ, ನಿರ್ಜರೆ, ಲೋಕ, ಬೋಧಿದುರ್ಲಭತ್ವ, ಧರ್ಮ ಎಂಬ ಹನ್ನೆರಡು ತತ್ವಗಳ ಚಿಂತನೆ
**ಅನುಬಂಧ –** ಸಂಬಂಧ; ಜೋಡಣೆ
**ಅನುಬಂಧಂಗಿಡು –** ಸಂಬಂಧ ತಪ್ಪು
**ಅನುಬಂಧಿ –** ಕಟ್ಟಲ್ಪಟ್ಟ; ಸಂಬಂಧ ಪಡೆದ
**ಅನುಬದ್ಧಕೇವಲ(ಲಿ)(ಳಿ) –** (ಜೈನ) ವರ್ಧಮಾನ ಜಿನನ  ಅನಂತರ ಬಂದ ಗೌತಮ, ಸುಧರ್ಮಸ್ವಾಮಿ, ಜಂಬೂಸ್ವಾಮಿ ಎಂಬ ಮೂವರು ಕೇವಲಜ್ಞಾನಿಗಳು
**ಅನುಬಲ –** ಒತ್ತಾಸೆ; ಸಹಾಯಕ ಸೈನ್ಯ
**ಅನುಭಾಗ –** (ಜೈನ) ಕರ್ಮಪುದ್ಗಲಗಳಿಗಿರುವ ಸ್ವಗತ ಸಾಮರ್ಥ್ಯವಿಶೇಷ; ಆತ್ಮನಿಗೆ ಕರ್ಮಗಳ ಫಲಕೊಡುವ ಶಕ್ತಿ
**ಅನುಭಾಷಿಗ –** ವಿಷಯಕ್ಕೆ ಅನುಗುಣವಾಗಿ ಮಾತಾಡುವವನು
**ಅನುಭುಕ್ತ –** ಅನುಭವಿಸಿದ
**ಅನುಭೂತ –** ಈ ಹಿಂದಿನ
**ಅನುಮತ –** ಸಮ್ಮತಿ
**ಅನುಮತಿವಿರತ –** (ಜೈನ) ಮನೆ ಸಂಸಾರಗಳು ಇದ್ದರೂ ಎಲ್ಲ ವಿಷಯಗಳಲ್ಲಿಯೂ ಕೇವಲ ಅತಿಥಿಯಂತೆ ನಡೆದುಕೊಳ್ಳುವವನು
**ಅನುಮಾರ್ಗಕ್ರಮ –** ಸಂಪ್ರದಾಯಾನುಸಾರಿಯಾದ **ರೀತಿ–**
**ಅನುಮೋದ –** ಸಂತೋಷ; ಒಪ್ಪಿಗೆ
**ಅನುಮೋದ(ನ)ಪುಣ್ಯ –** ಒಳ್ಳೆಯ ಕೆಲಸಕ್ಕೆ ಒಪ್ಪಿಗೆ ಕೊಡುವುದರಿಂದ ಪಡೆಯುವ ಫಲ
**ಅನುಯೋಗ(ಚತುಷ್ಟಯ) –** ಪ್ರಶ್ನೆ; ದೋಷಾರೋಪಣೆ;
**ಅನುಯೋಗಚತುಷ್ಟಯ –** (ಜೈನ) ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮೂಹ; ನಾಲ್ಕು: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ಅನುಯೋಗಗಳು
**ಅನುರಕ್ತಂಮಾಡು –** ಒಲಿಯುವಂತೆ ಮಾಡು
**ಅನುರಾಗ –** ಗಾಢ ಪ್ರೀತಿ
**ಅನುರೂಪ –** ಅನುಗುಣವಾದ; ತಕ್ಕ
**ಅನುರೂಪಕ್ರಮ –** ಆಕಾರಾನುಗುಣವಾದ ಕ್ರಮ; ಯುಕ್ತ ಕ್ರಮ
**ಅನುರೋಧ –** ಹೊಂದಿಕೊಳ್ಳುವುದು; ಒತ್ತಾಯ
**ಅನುಲೇಪ –** ಬಳಿ, ಸವರು; ಸುಗಂಧದ್ರವ್ಯ
**ಅನುಲೇಪಂಗೆಯ್ –** ಬಳಿಯುವುದು
**ಅನುಲೋಪ –** ರೂಢಿಯ ಕ್ರಮ
**ಅನುವದಿಸು –** ಹೇಳಿಕೊಟ್ಟಂತೆ ಹೇಳು
**ಅನುವರ –** ಯುದ್ಧ; ಸಂಕಟ
**ಅನುವರಭೂಮಿ –** ಯುದ್ಧಭೂಮಿ
**ಅನುವರ್ಣನ –** ನಿರೂಪಣೆ
**ಅನುವರ್ಣಿಸು –** ವಿವರಿಸು, ನಿರೂಪಿಸು
**ಅನುವಶ –** ಅಧೀನನಾದ
**ಅನುವಶೆ –** ಅಧೀನಳಾದವಳು
**ಅನುವಸಥ –** ವಾಸಸ್ಥಳ, ಮನೆ
**ಅನುವಱಿ –** ಕ್ರಮವನ್ನು ಅರಿ; ಔಚಿತ್ಯ ತಿಳಿ
**ಅನುವಾದಿ –** ಅನುಸರಿಸುವಂತಹುದು; ಅನುಗುಣ
**ಅನುವಾಸರಂ –** ಪ್ರತಿನಿತ್ಯವೂ
**ಅನುವಿದ್ಧ –** ಚುಚ್ಚಲ್ಪಟ್ಟ; ಸೇರಿಕೊಂಡ; ಕುಂದಣಗೊಂಡ
**ಅನು(ನಿ)ವಿಸು –** ಅನುನಯ ಮಾಡು; ಅಪೇಕ್ಷಿಸು; ನಿರೋಧಿಸು; ಹರಡು; ಸಿದ್ಧಪಡಿಸು; ಹೋಲು; ಹೊಂದಿಕೊ
**ಅನುವೃತ್ತ –** ವಿಧೇಯ; ಅನುಗುಣವಾದ; ವಿಧೇಯತೆ
**ಅನುವ್ಯಾಯಮಿತ –** ಅನುಕೂಲವಾದ ಮತ್ತು ಕ್ರಮಬದ್ಧ ರೀತಿಯ
**ಅನುಶಯ –** ಸಮೀಪ ಸಂಬಂಧ; ಪಶ್ಚಾತ್ತಾಪ; ಕಳವಳ
**ಅನುಶಾಸಿಸು –** ಹೇಳಿದಂತೆ ಕೇಳುವ ಹಾಗೆ ಮಾಡು
**ಅನುಶಾಸ್ಯ –**ದಂಡನಾರ್ಹ
**ಅನುಶೋಣಿತ –** ಅನುಸರಣೆಯಿಂದ ಕೆಂಪಾದ
**ಅನುಷಂಗ –** ಸಂಬಂಧ; ದಯೆ
**ಅನುಷ್ಠಿತ –** ನೆರವೇರಿಸಿದ
**ಅನುಷ್ಠಿಸು –** ಮಾಡು; ಆಚರಿಸು
**ಅನುಸಂಜಾತೆ –** ತಂಗಿ
**ಅನುಸಂಧಾನಂಗಿಡು –** ಕ್ರಮ ವಿಪರ್ಯಯವಾಗು
**ಅನುಸಂಧಿಸು –** ಜೋಡಿಸು; ಕೂಡು
**ಅನುಸಮ –** ಅನುಗುಣ, ಸಮಾನ
**ಅನುಸಾರಿ –** ಅನುಸರಿಸುವ; ಅನುರೂಪವಾದ
**ಅನುಸ್ಮರಣ –** ಒಂದೇ ಸಮನೆ ನೆಪಿಸಿಕೊಳ್ಳುವುದು; ನೆನಪು
**ಅನೂನ –** ಊನವಿಲ್ಲದ
**ಅನೂನಗುಣ –** ಅಧಿಕ ಗುಣವುಳ್ಳವನು
**ಅನೂನಪುಣ್ಯ –** ಅಧಿಕ ಪುಣ್ಯಶಾಲಿ
**ಅನೂಪ –** ಜೌಗುನೆಲ
**ಅನೂಪವಿಷಯ –** ಐವತ್ತಾರು ದೇಶಗಳಲ್ಲಿ ಒಂದು
**ಅನೂರು –** ತೊಡೆಯಿಲ್ಲದವನು; ಸೂರ್ಯನ ಸಾರಥಿ
**ಅನೃತ –** ಸುಳ್ಳು
**ಅನೃತಧನ –** ಸುಳ್ಳುಗಾರ
**ಅನೇಕಪ –** ಆನೆ
**ಅನೇಕಭವ –** ನಾನ ಹುಟ್ಟುಗಳು

**ಅನೇಕಮುಖ** – ಹಲವು ಮುಖ; ನಾನಾ ರೀತಿ
**ಅನೇಕವಾರಂ** – ನಾನಾ ಬಾರಿ
**ಅನೇಕಾಂತ** – ಏಕಾಂತವಲ್ಲದ್ದು; (ಜೈನ) ಸರ್ವದೃಷ್ಟಿಗಳನ್ನುಳ್ಳ ತರ್ಕ
**ಅನೇಕಾಂತವಾದ** – (ಜೈನ) ವಸ್ತುವಿನ ಅನೇಕ ಧರ್ಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರತಿಪಾದಿಸುವ ತರ್ಕ
**ಅನೇಕಾತ್ಮಕ** – ಅನೇಕ ವಿಷಯಫಲನ್ನೊಳಗೊಂಡ
**ಅನೇಡಮೂಕ** – ಕಿವುಡ ಮತ್ತು ಮೂಗ
**ಅನೈಕಾಂತಿಕ** – ಒಂದೇ ಗುರಿಯಿಲ್ಲದ
**ಅನೈಪುಣ್ಯೋಕ್ತಿ** – ನಿಪುಣತೆಯಿಲ್ಲದ ಮಾತು
**ಅನೋಕಹ** – ಮರಗಿಡ
**ಅನೋಜಿ** – ಓಜಸ್ಸಿಲ್ಲದಿರುವುದು
**ಅನೋಸಂಸಾರ** – (ಜೈನ) ಸಂಸಾರ, ಅಸಂಸಾರ, ನೋಸಂಸಾರ, ಅನೋಸಂಸಾರ ಎಂಬ ನಾಲ್ಕು ಬಗೆಯ ಸಂಸಾರಗಳಲ್ಲಿ ಒಂದು
**ಅನ್ನ** – ಅಂಥವನು
**ಅನ್ನಂ** – ಅಷ್ಟರಲ್ಲಿ; ಆ ತನಕ; ಹಾಗೆ
**ಅನ್ನಂಬಡೆ** – ಆಹಾರವನ್ನು ಪಡೆ
**ಅನ್ನದಾನ** – ಧರ್ಮಕ್ಕಾಗಿ ಆಹಾರ ನೀಡುವುದು
**ಅನ್ನಪ್ರಾಶನ** – ಮಗುವಿಗೆ ಮೊದಲ ಬಾರಿಗೆ ಅನ್ನ ತಿನ್ನಿಸುವುದು; ಷೋಡಶ ಸಂಸ್ಕಾರಗಳಲ್ಲಿ ಒಂದು
**ಅನ್ನವಾಸ** – ಊಟದ ಮನೆ
**ಅನ್ನಾಂಗ** – (ಜೈನ) ಆಹಾರವನ್ನು ನೀಡುವ ಕಲ್ಪವಕ್ಷ; ಹತ್ತು ಕಲ್ಪವೃಕ್ಷಗಳಲ್ಲಿ ಒಂದು
**ಅನ್ನಿಗೆ** – ಹೊದೆಯುವ ವಸ್ತ್ರ
**ಅನ್ನೆಗಂ** – ಅಷ್ಟರವರೆಗೆ, ಆ ತನಕ
**ಅನ್ನೆಯ** – ಅನ್ಯಾಯ
**ಅನ್ನೆವರಂ** – ಅಲ್ಲಿಯವರೆಗೆ; ಅಷ್ಟು ಮಟ್ಟಿಗೆ
**ಅನ್ನೆವರೆಗಂ** – ಅನ್ನೆಗಂ
**ಅನ್ಯತರವೇದನೀಯ** – (ಜೈನ) ಸಾತಾವೇದನೀಯ ಅಸಾತಾವೇದನೀಯ ಎಂಬ ಎರಡು ಕರ್ಮಪ್ರಕೃತಿಗಳಲ್ಲಿ ಒಂದು
**ಅನ್ಯಥಾನುಪತ್ತಿ** – ಬೇರೆ ರೀತಿಯಲ್ಲಿ ಸಾಧಿಸಲಾಗದ ಸ್ಥಿತಿ
**ಅನ್ಯಥಾವಾಸ** – ಬೇರೆ ಬಗೆಯಾದ ವಾಸ (ಅಜ್ಞಾತವಾಸ)
**ಅನ್ಯದಾರವಿದೂರ** – ಪರಸ್ತ್ರೀಯರಿಂದ ದೂರವಾಗಿರುವವನು
**ಅನ್ಯದೃಷ್ಟಿ** – ಬೇರೆಯ ದೃಷ್ಟಿ; ಇತರರ ದೃಷ್ಟಿ
**ಅನ್ಯಪರಿಭಂಗ** – ಇತರರನ್ನು ಅವಮಾನಿಸುವುದು, ಸೋಲಿಸುವುದು
**ಅನ್ಯಪುಷ್ಟ** – ಪರಪುಷ್ಟ, ಕೋಗಿಲೆ
**ಅನ್ಯಭವ** – ಬೇರೆಯ ಹುಟ್ಟು
**ಅನ್ಯಭೃತ** – ಅನ್ಯಪುಷ್ಟ
**ಅನ್ಯಲಿಂಗಿ** – ಬೇರೆಯ ಲಾಂಛನದವನು; ಪರಮತದವನು
**ಅನ್ಯಸಮಯ** – ಬೇರೆಯ ಮತ
**ಅನ್ಯಸ್ವ** – ಇತರರ ಆಸ್ತಿ
**ಅನ್ಯಾಂಗನಾಸ್ಪೃಹೆ** – ಇತರರ ಹೆಣ್ಣುಗಳಲ್ಲಿ ಮೋಹ
**ಅನ್ಯಾಂಗಪ್ರವೇಶ** – ಇತರರ ದೇಹವನ್ನು ಹೊಗುವುದು; ಪರಕಾಯಪ್ರವೇಶ
**ಅನ್ಯಾಯವೃತ್ತಿ** – ನ್ಯಾಯವನ್ನು ಬಿಟ್ಟ ನಡತೆ
**ಅನ್ಯಾಯೋಪಾರ್ಜಿತ** – ಅನ್ಯಾಯದ ರೀತಿಯಲ್ಲಿ ಗಳಿಸಿದ
**ಅನ್ಯೇಶ್ವರ** – ಬೇರೆಯ ಪ್ರಭು
**ಅನ್ಯೋನ್ಯಪ್ರೀತಿ** – ಪರಸ್ಪರ ಪ್ರೀತಿ
**ಅನ್ಯೋನ್ಯವಿಸಾರಿ** – ಪರಸ್ಪರ ಹರಡುವ
**ಅನ್ಯೋಪಗಮ** – ಇತರರ ಬಳಿ ಸೇರುವುದು
**ಅನ್ಯೋರ್ವೀಶ್ವರ** – ಬೇರೆಯ (ದೇಶದ) ರಾಜ
**ಅನ್ವಯ** – ವಂಶ; ಹೊಂದಾಣಿಕೆ
**ಅನ್ವಯಕ್ಷಯ** – ಕುಲಹಾನಿ, ವಂಶನಾಶ
**ಅನ್ವಯದತ್ತಿ** – (ಜೈನ) ತನ್ನ ವಂಶವನ್ನು ಸ್ಥಿರವಾಗಿ ನೆಲೆಗೊಳಿಸಲು ವಂಶದ ಬೇರೆಯವನಿಗೆ ಧರ್ಮವನ್ನೂ ಸರ್ವಸ್ವವನ್ನೂ ಒಪ್ಪಿಸುವುದು
**ಅನ್ವಯವೃದ್ಧಿ** – ವಂಶಾಭಿವೃದ್ಧಿ
**ಅನ್ವರ್ಥ** – ಅರ್ಥಕ್ಕೆ ಅನುಗುಣವಾದ; ಸಾರ್ಥಕವಾದ
**ಅನ್ವರ್ಥತೆ** – ಅಥ್ಕೆಕೆ ಅನುಗುಣವಾಗಿರುವುದು
**ಅನ್ವವಾಯ** – ವಂಶ, ಕುಲ
**ಅನ್ವಿತ** – ಅನುಸರಿಸಲ್ಪಟ್ಟ
**ಅನ್ವಿತಾರ್ಥ ಸ್ಪಷ್ಟವಾದ ಅರ್ಥವಿರುವುದು–**
**ಅನ್ವಿತೆ** – ಹೊಂದಿದವಳು; ಯುಕ್ತಳು
**ಅಪಕಪಟ** – ಕಪಟವಿಲ್ಲದುದು
**ಅಪಕರ್ಷ** – ಗಮನವನ್ನು ಬೇರೆಡೆ ಸೆಳೆಯುವುದು; ಕುಗ್ಗಿಸುವುದು
**ಅಪಕೃತಿ** – ಅಪಕಾರ
**ಅಪಕ್ರಮ** – ದೂರ ಸರಿಯುವುದು
**ಅಪಕ್ಷಸ್ಥಿತಿ** – ಪಕ್ಷಪಾತರಹಿತ
**ಅಪಕ್ಷ್ಮತೆ** – ರೆಪ್ಪೆ ಬಡಿಯದವನು, ದೇವತೆ
**ಅಪಕ್ಷ್ಮಸ್ಪಂದತ್ವ** – ಎವೆ ಮಿಟುಕಿಸದ ಸ್ಥಿತಿ
**ಅಪಗಂಟು** – ಬಿಡಿಸಲಾಗದ ಗಂಟು
**ಅಪಗತಕಪಟ** – ವಂಚನೆಯಿರದ ಸ್ಥಿತಿ
**ಅಪಗತತಂದ್ರ** – ಆಲಸ್ಯವಿಲ್ಲದವನು
**ಅಪಗತಮತಿ** – ಬುದ್ಧಿಯಿಲ್ಲದ ಸ್ಥಿತಿ
**ಅಪಗತಮೋಹ** – ಮೋಹರಹಿತ
**ಅಪಗತರಜ** – ಧೂಳಿರದ; ರಜೋಗುಣರಹಿತ
**ಅಪಗತವಿಗ್ರಹ** – ದೇಹವಿಲ್ಲದವನು; ಯುದ್ಧದ ಚಿಂತೆಯಿಲ್ಲದವನು
**ಅಪಗತಸುಖೆ** – ಸುಖವಿಲ್ಲದವಳು
**ಅಪಘನ** – ಶರೀರ; ಅವಯವ; ಮೋಡ

**ಅಪಚಯ** – ಸಂಗ್ರಹಣೆ; ಕುಂದುವುದು
**ಅಪಚಾರಣ** – ಕೆಟ್ಟ ದಾರಿ
**ಅಪಜಿಹ್ಮ** – ಬಾಗಿಲ್ಲದ; ಮೋಸವಿಲ್ಲದ
**ಅಪನೋದ** – ನಿವಾರಣೆ
**ಅಪಟಿ** – ಪರದೆ
**ಅಪಟುತೆ** – ಸತ್ವಹೀನತೆ
**ಅಪತೃಷ್ಣೆ** – ದುರಾಶೆ
**ಅಪತ್ಯ** – ಮಗ
**ಅಪತ್ಯೋದಯ** – ಮಗನ ಜನನ
**ಅಪಥ್ಯ** – ಅಹಿತಕರ
**ಅಪದಸ್ಥ** – ಅಧಿಕಾರರಹಿತ
**ಅಪದಾಂತರ** – ನೆರೆಹೊರೆ
**ಅಪದಾನ** – ದೊಡ್ಡ ಕೆಲಸ; ಉದಾತ್ತ ಕಾರ್ಯ
**ಅಪದೃಕ್ಸಾರ** – ದೃಷ್ಟಿಪಟುತ್ವವನ್ನು ಹಾಳು ಮಾಡುವುದು
**ಅಪದೋಷ** – ದೋಷವಿಲ್ಲದವನು
**ಅಪಧ್ಯಾನ** – ದುಷ್ಟ ಆಲೋಚನೆ; (ಜೈನ) ಅನ್ಯಧರ್ಮದ ಕಾವ್ಯಗಳ ಬಗ್ಗೆ ಚಿಂತಿಸುವುದು
**ಅಪನಯ** – ಅನೀತಿ
**ಅಪನಯನ** – ದೂರಕ್ಕೊಯ್ಯುವುದು; ದೂರ ಮಾಡುವುದು
**ಅಪನಿಂದೆ** – ಅನ್ಯಾಯವಾದ ಬೈಗುಳು
**ಅಪನೀತ** – ತೆಗೆದುಕಾಕಲಾದ
**ಅಪನೋದ(ನ)** – ನಿವಾರಿಸುವುದು
**ಅಪನೋದಿತ** – ನಿವಾರಿಸಲ್ಪಟ್ಟ
**ಅಪಭ್ರಂಶ** – ಜಾರುವುದು; ವ್ಯತ್ಯಾಸಗೊಂಡ ಶಬ್ದರೂಪ; ತದ್ಭವ ಶಬ್ದ
**ಅಪಮತಿ** – ಬುದ್ಧಿಗೆಟ್ಟ
**ಅಪಮಾನಂಬಡು** – ಅವಮಾನ ಹೊಂದು
**ಅಪಮಿತ** – ಅವಮಾನಕ್ಕೆ ಗುರಿಯಾದ
**ಅಪಮೃತ್ಯು** – ಅಕಾಲ ಮರಣ
**ಅಪರ** – ಅನ್ಯ; ಆನಂತರದ; ಕೀಳಾದ; ಅತ್ಯುತ್ತಮವಾದ; ಪಶ್ಚಿಮ ದಿಕ್ಕು; ಶತ್ರು
**ಅಪರಂಜಿ** – ಚೊಕ್ಕ ಚಿನ್ನ
**ಅಪರಗಿರಿ** – ಪಶ್ಚಿಮ ಬೆಟ್ಟ
**ಅಪರಜ** – ದೂಳಿಲ್ಲದ; ರಜೋಗುಣರಹಿತ
**ಅಪರದಿಕ್** – ಪಶ್ಚಿಮ ದಿಕ್ಕು
**ಅಪರದಿಗ್ಭಾಗ** – ಅಪರದಿಕ್
**ಅಪರನಾಮಧೇಯ** – ಇನ್ನೊಂದು ಹೆಸರು
**ಅಪರವಾರಿಧಿ** – ಪಶ್ಚಿಮ ಸಮುದ್ರ
**ಅಪರಸಂಧ್ಯೆ** – ಸಾಯಂಕಾಲ
**ಅಪರಾಂಬುಧಿ** – ಅಪರವಾರಿಧಿ
**ಅಪರಾಂಬುರಾಶಿ** – ಅಪರವಾರಿಧಿ
**ಅಪರಾಂಭೋಧಿ** – ಅಪರವಾರಿಧಿ
**ಅಪರಾಂಭೋರಾಶಿ** – ಅಪರವಾರಿಧಿ
**ಅಪರಾಗ** – ಬಣ್ಣರಹಿತ; ಅನುರಾಗವಿಲ್ಲದ; (ಅಪರ+ಅಗ) ಪಶ್ಚಿಮ ಬೆಟ್ಟ
**ಅಪರಾಜಿತೆ** – ಸೋಲದವಳು; ದುರ್ಗೆ; (ಜೈನ) ದಿಗ್ವನಿತೆಯರಲ್ಲಿ ಒಬ್ಬಳು
**ಅಪರಾದಿತ್ಯ** – ಪಶ್ಚಿಮದ ಸುರ್ಯ – ಮುಳುಗುವ ಸೂರ್ಯ–
**ಅಪರಾದ್ರಿ** – ಪಶ್ಚಿಮ ಬೆಟ್ಟ
**ಅಪರಾರ್ಧ** – ಉತ್ತರಾರ್ಧ
**ಅಪರಾಶಾಕುಂಭಿ** – ಪಶ್ಚಿಮದ ಆನೆ; ಅಂಜನವೆಂಬ ದಿಗ್ಗಜ
**ಅಪರಾಶಾಚಲ** – ಪಶ್ಚಿಮದಿಕ್ಕಿನ ಬೆಟ್ಟ
**ಅಪರಾಶೆ** – ಪಶ್ಚಿಮ ದಿಕ್ಕು
**ಅಪರಿಣಾಮವಿಹಾರ** – ಕೆಟ್ಟ ಪರಿಣಾಮುವುಳ್ಳ ವಿಹಾರ
**ಅಪರಿಭಿನ್ನ** – ಒಡೆಯದ
**ಅಪರಿಮೇಯ** – ಅಳೆಯಲಾಗದ
**ಅಪರುದ್ಧ** – ನಿವಾರಿಸಿದ
**ಅಪರ್ಣೆ** – ಆಹಾರವಾಗಿ ಎಲೆಗಳನ್ನೂ ಬಿಟ್ಟವಳು, ಪಾರ್ವತಿ
**ಅಪರ್ಯಂತ** – ಮೇರೆಯಿಲ್ಲದ, ಸೀಮಾತೀತ
**ಅಪರ್ಯಾಪ್ತಿ** – (ಜೈನ) ಆಹಾರ ತೆಗೆದುಕೊಳ್ಳಲೂ ಅಶಕ್ತಿ
**ಅಪವರಕ** – ಕೊಠಡಿ
**ಅಪವರ್ಗ** – ಬಿಡುವುದು; ಮೋಕ್ಷ
**ಅಪವರ್ಗಪದ** – ಮೋಕ್ಷಪದವಿ
**ಅಪವರ್ಗಮಾರ್ಗ** – ಮೋಕ್ಷಮಾರ್ಗ
**ಅಪವರ್ಗಲಕ್ಷ್ಮಿ** – ಮೋಕ್ಷಲಕ್ಷ್ಮಿ
**ಅಪವರ್ಗಸಂಪತ್ತು** – ಅಪವರ್ಗಲಕ್ಷ್ಮಿ
**ಅಪವರ್ತಿಸು** – ದೂರಮಾಡು, ನಿವಾರಿಸು
**ಅಪವರ್ತ್ಯ** – (ಜೈನ) ಬಾಹ್ಯ ಕಾರಣಗಳಿಂದ ಕುಗ್ಗಿರುವುದು
**ಅಪವಾದ** – ನಿಂದೆ; ಅಪಕೀರ್ತಿ
**ಅಪವೃಜಿನ** – ಪಾಪರಹಿತ
**ಅಪಸತ್** – ಇಲ್ಲದ
**ಅಪಸನ್ಮುಗ್ಧ** – ಅಪಸತ್+ಮುಗ್ಧ, ಮುಗ್ಧತೆಯಿಲ್ಲದ
**ಅಪಸರಣ(ಣೆ)** – ಪಲಾಯನ
**ಅಪಸರಣಂಗೆಯ್** – ಪಲಾಯನ ಮಾಡು
**ಅಪಸವ್ಯ** – ಎಡವಲ್ಲದ್ದು, ಬಲ
**ಅಪಸಾರಿತ** – ಹಿಂದೆ ಹೋದ
**ಅಪಸಿದ್ಧಾಂತ** – ತಪ್ಪು ನಿರ್ಣಯ
**ಅಪಸೌಖ್ಯ** – ಸುಖವನ್ನು ಕಳೆದುಕೊಂಡವನು
**ಅಪಸ್ಮಾರ** – ಮರೆವು; ಮರೆವಿನ ರೋಗ
**ಅಪಸ್ಮಾರಗ್ರಹ** – ಅಪಸ್ಮಾರರೋಗ ತರುವ ಗ್ರಹ
**ಅಪಹತ** – ಬಿಟ್ಟುಬಿಟ್ಟ; ನಾಶವಾದ
**ಅಪಹತಕದನ** – ಯುದ್ಧ ನಿಲ್ಲಿಸಿದವನು
**ಅಪಹರ** – ಕದಿಯುವುದು
**ಅಪಹರಿಸು** – ಕದಿ; ಹೋಗಲಾಡಿಸು; ನಿವಾರಿಸು

**ಅಪಹಸಿತ** – ಹಾಸ್ಯಕ್ಕೊಳಗಾದ
**ಅಪಹಸ್ತಮಿಚೆ** – ತಳ್ಳು, ನೂಕು
**ಅಪಹಾರ** – ಕದಿಯುವುದು; ಹಾನಿ; ಯುದ್ಧ ನಿಲುಗಡೆ
**ಅಪಹಾರ ತೂರ್ಯ** – ಯುದ್ಧವನ್ನು ನಿಲ್ಲಿಸಲು ಮಾಡುವ ತುತ್ತೂರಿಯ ಸದ್ದು
**ಅಪಹಾಸಿ** – ಹಾಸ್ಯಮಾಡುವ
**ಅಪಹಿಂಸ** – ಹಿಂಸೆಯಿಂದ ದೂರಾದ
**ಅಪಹಿಂಸೆ** – ಹಿಂಸೆಯಿಂದ ದೂರಾಗುವುದು
**ಅಪಹ್ನವ** – ಮರೆಮಾಚುವುದು
**ಅಪಾಂಗ** – ಅಂಗಹೀನ; ಕಡೆಗಣ್ಣು
**ಅಪಾಂಗದರ್ಶನ** – ಕಡೆಗಣ್ಣ ನೋಟ
**ಅಪಾಂಗದ್ಯು(ದ್ಯೋ)ತಿ** – ಕಡೆಗಣ್ಣ ಹೊಳಪು
**ಅಪಾಂಗಪ್ರಸನ್ನತೆ** – ಕಡೆಗಣ್ಣ ಪ್ರಸನ್ನತೆ
**ಅಪಾಂಗಪ್ರೇರಣೆ** – ಕಡೆಗಣ್ಣಿನ ಸೂಚನೆ
**ಅಪಾಂಗಮರೀಚಿ** – ಕಡೆಗಣ್ಣ ಹೊಳಪು
**ಅಪಾಂಗರೋಚಿ** – ಕಡೆಗಣ್ಣ ಹೊಳಪು
**ಅಪಾಂಗವಿಕ್ಷೇಪ** – ಕಡೆಗಣ್ಣ ನೋಟ ಬೀರುವುದು
**ಅಪಾಂಗವೀಕ್ಷಣ** – ಕಡೆಗಣ್ಣ ನೋಟ
**ಅಪಾಂಗಾಂಶು** – ಕಡೆಗಣ್ಣ ಹೊಳಪು
**ಅಪಾಂಗಾ(ವ)ಲೋ(ಕೋ)ಕನ** – ಕಡೆಗಣ್ಣ ನೋಟ
**ಅಪಾಕೃತ** – ಹೊರದೂಡಿದ
**ಅಪಾಚಿ** – ಪಶ್ಚಿಮ ದಿಕ್ಕು; ದಕ್ಷಿಣ ದಿಕ್ಕು
**ಅಪಾತ್ರ** – ಅನರ್ಹ
**ಅಪಾದಾನ** – ದೂರಕ್ಕೊಯ್ಯುವುದು
**ಅಪಾಮಾರ್ಗ** – ತಪ್ಪು ದಾರಿ; ಉತ್ತರಣೆ ಗಿಡ
**ಅಪಾಯವಿಚಯ** – (ಜೈನ) ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಎರಡನೆಯದು; ಲೋಕದ ಅಜ್ಞಾನ–ದುಃಖಗಳನ್ನು ಹೋಗಲಾಡಿಸುವ ಚಿಂತನೆ–
**ಅಪಾರಭುಜಾಯಮಾನ** – ಅತೀವ ಪರಾಕ್ರಮಿ
**ಅಪಾರವಿಸ್ತಾರಿ** – ಕೊನೆಯಿಲ್ಲದ ವಿಸ್ತಾರ ಪಡೆದ
**ಅಪಾರವೀರ್ಯ** – ಅತಿಶಯ ಪರಾಕ್ರಮಿ
**ಅಪಾರ್ಥ** – ಅರ್ಥರಹಿತ; ತಪ್ಪು ಅರ್ಥ; ವ್ಯರ್ಥ
**ಅಪಾಸ್ತ** – ದೂರಮಾಡಲ್ಪಟ್ಟ
**ಅಪಿಂಡ** – (ಜೈನ) ಕರ್ಮದ ನಾನಾ ಬಗೆಗಳಲ್ಲಿ ಎರಡನೆಯ ವಿಭಾಗ
**ಅಪೂರ್ವ** – ಪೂರ್ವವಲ್ಲದ; ಹಿಂದೆ ಇರದಿದ್ದ; (ಜೈನ) ಸಂಸಾರಿ ಜೀವನು ಮೋಕ್ಷ ಪಡೆಯಲು ಏರಬೇಕಾದ ಹದಿನಾಲ್ಕು ಗುಣಸ್ಥಾನಗಳಲ್ಲಿ ಎಂಟನೆಯದು
**ಅಪೂರ್ವಕರಣ** – (ಜೈನ) ಮೂರು ಬಗೆಯ ಕರಣಲಬ್ಧಿಗಳಲ್ಲಿ ಒಂದು
**ಅಪೂರ್ವಭಿತ್ತಿ** – ಅಪೂರ್ವವಾದ ಹಿನ್ನೆಲೆ
**ಅಪೂರ್ವರೂಪ** – ಅಪರಿಚಿತ ರೂಪವುಳ್ಳವನು
**ಅಪೂರ್ವರೂಪೆ** – ಅಸಾಮಾನ್ಯ ಸುಂದರಿ
**ಅಪೂರ್ವಾರ್ಥಲಬ್ಧಿ** – ಅಪರೂಪವಾದ ಆರ್ಥಿಕ ಲಾಭ
**ಅಪೇಕ್ಷೆಗೆಯ್** – ಆಸೆಪಡು
**ಅಪೇತ** – ಬಿಟ್ಟು ಹೋದ
**ಅಪೇತದೋಷ** – ದೋಷದೂರವಾದ
**ಅಪೇಯ** – ಕುಡಿಯಬಾರದ
**ಅಪೋಹ(ನ)** – ನೂಕುವುದು; ಸಂಶಯನಿವಾರಣೆ
**ಅಪ್ಪ** – ಆದ
**ಅಪ್ಪಯಿಸು** – ಒಪ್ಪಿಸು; ಒಪ್ಪುವಂತೆ ಮಾಡು
**ಅಪ್ಪಳಿಸು** – ತಾಗು
**ಅಪ್ಪಿಸು** – ತಬ್ಬುವಂತೆ ಮಾಡು
**ಅಪ್ಪು** – ತಬ್ಬಿಕೊ; ಆಲಿಂಗನ; ನೀರು
**ಅಪ್ಪು** – ಆಲಂಗಿಸು
**ಅಪ್ಪುಕಣಿಸು** – ನೀರನ್ನು ಸುರಿ
**ಅಪ್ಪುಗಾಣಿಸು** – ಅಭಿಷೇಕ ಮಾಡು
**ಅಪ್ಪುಕೆಯ್** – ಅಂಗೀಕರಿಸು; ತಬ್ಬು
**ಅಪ್ಪುರಿತ** – ಚಲಿಸದ, ನಿಶ್ಚಲ
**ಅಪ್ಪೈಸು** – ಒಪ್ಪಿಸು
**ಅಪ್ರಕಟ(ಂ)** – ಗುಟ್ಟಾಗಿ
**ಅಪ್ರಗಲ್ಭತೆ** – ಜಾಣತನವಿರದ
**ಅಪ್ರಗಲ್ಭವಚನ** – ಪ್ರೌಢಿಮೆಯಿಲ್ಲದ ನುಡಿ
**ಅಪ್ರಣಾಶ** – ನಾಶರಹಿತವಾದ
**ಅಪ್ರತಿಘಾತಗಾಮಿನಿ** – ಎಲ್ಲಿಗಾದರೂ ಅಡ್ಡಿಯಿಲ್ಲದೆ ಹೋಗಬಹುದಾದ ವಿದ್ಯೆ; ಎಲ್ಲಾದರೂ ಹೋಗಬಲ್ಲವಳು
**ಅಪ್ರತಿಬದ್ಧ** – ತಡೆಯಿಲ್ಲದ
**ಅಪ್ರತಿಮ** – ಅಸಮಾನ; ಎಣೆಯಿಲ್ಲದ
**ಅಪ್ರತಿಮಲ್ಲ** – ಸಮಾನರಿಲ್ಲದ ಮಲ್ಲ
**ಅಪ್ರತಿರಥ** – ಸಮಾನರಿಲ್ಲದ ರಥಿಕ
**ಅಪ್ರತಿಷಿದ್ಧ** – ನಿಷೇಧಿತವಲ್ಲದ
**ಅಪ್ರತಿಷ್ಠ** – ಸ್ಥಿರವಾಗಿ ನೆಲೆಯಿಲ್ಲದ
**ಅಪ್ರತಿಹತ** – ತಡೆಯಿಲ್ಲದ
**ಅಪ್ರತೀತ** – ಅರ್ಥ ಗೊತ್ತಿಲ್ಲದ; ತಡೆಯಿಲ್ಲದ
**ಅಪ್ರತ್ಯಾಖ್ಯಾನ** – (ಜೈನ) ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು
**ಅಪ್ರತ್ಯೂಹಮೈತ್ರಿ** – ಅಡ್ಡಿಯಿಲ್ಲದ ಮೈತ್ರಿ
**ಅಪ್ರಮತ್ತ** – ಸುಖಗಳಲ್ಲಿ ಮೈಮರೆಯದ; (ಜೈನ) ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳನೆಯದರಿಂದ ಮೇಲಿರುವ ಆತ್ಮ
**ಅಪ್ರಮತ್ತಗುಣಸ್ಥಾನ** – (ಜೈನ) ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳನೆಯದು; ಕಷಾಯಗಳ ತಿವ್ರತೆ ಕಡಿಮೆಯಾಗುವುದು
**ಅಪ್ರಮತ್ತತೆ** – ಮೈಮರೆಯುವುದು
**ಅಪ್ರಮತ್ತತೆ** – ಮೈಮರೆಯದ ನಡವಳಿಕೆ
**ಅಪ್ರಮಿತ** – ಅಳತೆಗೆ ಮೀರಿದ

**ಅಪ್ರಮೇಯಕ** – ಅಳತೆಗೆ ಸಿಕ್ಕದ
**ಅಪ್ರಮೇಯಬಲ** – ಅಳತೆಗೆ ಮೀರಿದ ಬಲ
**ಅಪ್ರವಿಲಕ್ಷ್ಯ** – ಕಾಣಿಸದಿರುವ
**ಅಪ್ರಶಸ್ತ** – ಒಳ್ಳೆಯದಲ್ಲದ
**ಅಪ್ರಸನ್ನ** – ಪ್ರಸನ್ನವಲ್ಲದ; ಅಶುಭ್ರ
**ಅಪ್ರಸವ** – ಹೂವಿಲ್ಲದ; ಹೆರಿಗೆಯಿಲ್ಲದ
**ಅಪ್ರಹತ** – ಏಟಿಗೆ ಸಿಕ್ಕದ
**ಅಪ್ರಾಕೃತ** – ಒರಟಲ್ಲದ; ವಿಶೇಷವಾದ
**ಅಪ್ರಾಪ್ತಪೂರ್ವ** – ಈ ಮೊದಲು ದೊರೆಯದ
**ಅಪ್ರಾಪ್ತಿ** – ದೊರೆಯದಿರುವುದು
**ಅಪ್ರಾಸುಕ** – (ಜೈನ) ಜೀವಂತ ವಸ್ತುಗಳಿಂದ ಕೂಡಿರುವ
**ಅಪ್ರಿಯ** – ಪ್ರಿಯವಲ್ಲದ; ಶತ್ರು
**ಅಪ್ಸರಃಪ್ರತಾನ** – ಅಪ್ಸರರ ಗುಂಪು; ಸುರವೇಶ್ಯೆಯರ ಗುಂಪು; ಕೊಳಗಳ ಸಮೂಹ
**ಅಪ್ಸರೋಗಣ** – ಅಪ್ಸರಃಪ್ರತಾನ
**ಅಫಲ** – ಫಲವಿಲ್ಲದ ಬಂಜೆ ಗಿಡ
**ಅಫಳಾಧ್ಯವಸಾಯ** – ವ್ಯರ್ಥಪ್ರಯತ್ನದವನು
**ಅಫಳಯ** – ಉನ್ನತವಾದ
**ಅಬಂಧುರ** – ಮನೋಹರವಲ್ಲದ
**ಅಬದ್ಧ** – ಅಸಂಬದ್ಧ; ನಿಯಮರಹಿತ
**ಅಬಲ(ಳ)** – ಬಲವಿಲ್ಲದ
**ಅಬಾಧಿತ್ವ** – ತಡೆಯಿಲ್ಲದ; ಹಿಂಸೆಗೊಳಗಾಗದ
**ಅಬಾಲ** – ಬಾಲಕನಲ್ಲದ; ಬಲಿತ
**ಅಬುಜ** – ತಾವರೆ
**ಅಬ್ಜ** – ತಾವರೆ; ಶಂಖ; ರತ್ನ; ಐರಾವತ; ಚಂದ್ರ; ಲಕ್ಷ್ಮಿ
**ಅಬ್ಜಗರ್ಭ** – ಬ್ರಹ್ಮ
**ಅಬ್ಜಚ್ಛದ** – ತಾವರೆಯ ಎಲೆ
**ಅಬ್ಜಜಠರ** – ವಿಷ್ಣು
**ಅಬ್ಜಪತ್ರಮಣಿ** – ತಾವರೆ ಬೀಜ
**ಅಬ್ಜಪ್ರಸರ** – ತಾವರೆಗಳ ಗುಂಪು
**ಅಬಜ್ಜವಾಂಡ** – ಬ್ರಹ್ಮಾಂಡ
**ಅಬ್ಜಮಿತ್ರ** – ಸೂರ್ಯ
**ಅಬ್ಜರಜ** – ಕಮಲದ ದೂಳು; ಪರಾಗ
**ಅಬ್ಜವದನೆ** – ಕಮಲಮುಖಿ
**ಅಬ್ಜವಾಸಿನಿ** – ಲಕ್ಷ್ಮಿ
**ಅಬ್ಜವಾಹನ** – ಚಂದ್ರನನ್ನು ಧರಿಸಿದವನು, ಚಂದ್ರ
**ಅಬ್ಜವಿರೋಧಿ** – ಅಬ್ಜಾರಿ, ಚಂದ್ರ
**ಅಬ್ಜವಿಷ್ಟರ** – ಕಮಲಾಸನ, ಬ್ರಹ್ಮ
**ಅಬ್ಜಾಕರ** – ಕೊಳ, ಸರೋವರ
**ಅಬ್ಜಾಕ್ಷ** – ವಿಷ್ಣು
**ಅಬ್ಜಾಯತನೇತ್ರೆ** – ಕಮಲದಂತೆ ವಿಶಾಲವಾದ ಕಣ್ಣುಳ್ಳವಳು
**ಅಬ್ಜಾಸನ** – ಅಬ್ಜವಿಷ್ಟರ
**ಅಬ್ಜಾಸನೆ** – ಲಕ್ಷ್ಮಿ
**ಅಬ್ಜಾಹಿತ** – ತಾವರೆಯ ಶತ್ರು, ಚಂದ್ರ
**ಅಬ್ಜೋದರ** – ವಿಷ್ಣು
**ಅಬ್ಜೋದ್ಭವ** – ಬ್ರಹ್ಮ
**ಅಬ್ದ** – ನೀರನ್ನು ಕೊಡುವುದು, ಮೋಡ; ವರ್ಷ
**ಅಬ್ದಕಾಲ** – ಮಳೆಗಾಲ
**ಅಬ್ದೌಘ** – ಮೋಡಗಳ ಗುಂಪು
**ಅಬ್ಧಿ** – ಸಮುದ್ರ
**ಅಬ್ಧಿಪ** – ಜಲರಾಶಿಯ ಒಡೆಯ, ವರುಣ
**ಅಬ್ಧಿಪರೀತ** – ಸಮುದ್ರದಿದ ಸುತ್ತುವರಿಯಲ್ಪಟ್ಟ
**ಅಬ್ಧಿಶಯನ** – ವಿಷ್ಣು
**ಅಬ್ಬ** – ಜನಕ, ತಂದೆ
**ಅಬ್ಬರ** – ಆರ್ಭಟ
**ಅಬ್ಬರಂಗೆಯ್** – ಆರ್ಭಟಿಸು
**ಅಬ್ಬರಣೆ** – ಆರ್ಭಟ, ಗದ್ದಲ
**ಅಬ್ಬರಿಸು** – ಆರ್ಭಟಿಸು
**ಅ(ಬ್ಬಾ)ಬ್ಬೆ** – (ಅಂಬಾ) ತಾಯಿ
**ಅಬ್ರಹ್ಮಣ್ಯ** – ಬ್ರಾಹ್ಮಣನಿಗೆ ಆಗುವ ಅನ್ಯಾಯ; "ಹಿಂಸೆ ಮಾಡಬಾರದು" ಎಂಬ ಘೋಷಣೆ; "ಬ್ರಾಹ್ಮಣನನ್ನು ಅನ್ಯಾಯದಿಂದ ಪಾರುಮಾಡಿ" ಎಂಬ ಉದ್ಗಾರ
**ಅಭಂಗ** – ನಿರಂತರ
**ಅಭಂಘಾನುಷಂಗ** – ಸೋಲಿಲ್ಲದವನು; ತೆರೆಗಳ ಸಂಬಂಧವಿಲ್ಲದವನು
**ಅಭಂಗುರ** – ಭಂಗವಾಗದ, ಶಾಶ್ವತವಾದ
**ಅಭಯಂಗುಡು** – ಭಯವನ್ನು ಹೋಗಲಾಡಿಸು
**ಅಭಯಘೋಷಣೆ** – ಅಭಯವನ್ನು ಸಾರುವುದು
**ಅಭಯದಾನ** – ಅಭಯವನ್ನು ಕೊಡುವುದು
**ಅಭಯಮನ** – ಭಯವಿಲ್ಲದ ಮನಸ್ಸು; ನಿರ್ಭಯಿ
**ಅಭವ** – ಜನ್ಮರಹಿತ; ಶಿವ; ವಿಷ್ಣು; ಜಿನ
**ಅಭವಭವನ** – ಶಿವದೇವಾಲಯ
**ಅಭವ್ಯ** – (ಜೈನ) ಭವ್ಯನಲ್ಲದ, ಮುಕ್ತಿ ಹೊಂದಲಾರದ ಜೀವ
**ಅಭಾಷಣ** – ಮೌನ
**ಅಭಿಕ** – ಪ್ರಿಯತಮ
**ಅಭಿಗಮನ** – ಎದುರಾಗಿ ಹೋಗುವುದು
**ಅಭಿಘಾತ** – ಹೊಡೆತ; ಗಾಯ; ನಷ್ಟ
**ಅಭಿಘಾತಜ್ವರ** – ಹೊಡೆತದಿಂದಾದ ಜ್ವರ
**ಅಭಿಚಾರ** – ಶೂನ್ಯ ಮಾಟ; ವಿರುದ್ಧ ನಡವಳಿಕೆ
**ಅಭಿಚಾರಕ್ರಿಯೆ** – ಮಾಟಮಾಡುವುದು
**ಅಭಿಜನ** – ಸತ್ಕುಲಜ
**ಅಭಿಜನವತ್ಸಲ(ಳ)** – ಸದ್ವ್ಯಕ್ತಿಗಳಲ್ಲಿ ಪ್ರೀತಿಯುಳ್ಳವನು
**ಅಭಿಜಾತ** – ಉತ್ತಮ ವಂಶದಲ್ಲಿ ಹುಟ್ಟಿದವನು
**ಅಭಿಜಾತತೆ** – ಕುಲೀನತೆ
**ಅಭಿಜಾತರೂಪ** – ಉತ್ತಮ ರೂಪ
**ಅಭಿಜಿನ್ಮುಹೂರ್ತ** – ದಿನದ ಎಂಟನೆಯ ಮುಹೂರ್ತ; ಕುತುಪಕಾಲ

**ಅಭಿಜ್ಞತೆ** – ಉತ್ತಮ ತಿಳಿವಳಿಕೆ
**ಅಭಿಜ್ಞಾನ** – ತಿಳಿವು; ನೆನಪು; ಸಾಕ್ಷಿ
**ಅಭಿಜ್ಞಾರೇಖೆ** – ಗುರುತಿನ ಗೆರೆ
**ಅಭಿತಾಪ** – ಬೇಗೆ; ಸಂಕಟ
**ಅಭಿಧಾನ** – ಹೆಸರು; ಹೆಸರಿಡುವುದು; ನಿಘಂಟು
**ಅಭಿಧಾನಪರಂಪರೆ** – ನಿಘಂಟು
**ಅಭಿದೇಯ** – ಹೆಸರುಳ್ಳ; ಗುರುತುಳ್ಳ
**ಅಭಿನಯಚತುಷ್ಟಕ** – ಅಂಗಿಕ, ವಾಚಿಕ, ಸಾತ್ವಿಕ, ಆಹಾರ್ಯ ಎಂಬ ನಾಲ್ಕು ಬಗೆಯ ಅಭಿನಯ
**ಅಭಿನವ** – ಹೊಸದಾದ
**ಅಭಿನಿವೇಶ** – ಆಸಕ್ತಿ; ಆದರ; ನಂಬಿಕೆ
**ಅಭಿನಿಷಾಧಿ** – ಎದುರಿಗಿರುವ ಮಾವತಿಗ
**ಅಭಿನುತ** – ಹೊಗಳಲ್ಪಟ್ಟ; ಸ್ತುತವಾದ
**ಅಭಿನುತಿಸು** – ಹೊಗಳು; ಸ್ತೋತ್ರಮಾಡು
**ಅಭಿನೂತೆ** – ಹೊಗಳಲ್ಪಟ್ಟವಳು
**ಅಭಿನ್ನಾಂಗಿ** – ಏಕರೂಪವುಳ್ಳವಳು
**ಅಭಿಪ್ರೇತ** – ಅಭಿಪ್ರಾಯಪಟ್ಟ; ಅಭಿಪ್ರಾಯ
**ಅಭಿಭವ** – ಸೋಲು; ಕಷ್ಟ; ತಿರಸ್ಕಾರ ಹೊಂದು
**ಅಭಿಭವಿಸು** – ಆಕ್ರಮಿಸು; ತಿರಸ್ಕರಿಸು
**ಅಭಿಭವಮೆಯ್ದು** – ಸೋಲನ್ನು ಪಡೆ
**ಅಭಿಭವಿಸು** – ಸೋಲಿಸು
**ಅಭಿಭೂತ** – ಸೋತುಹೋದ; ಅವಮಾನಿತನಾದ
**ಅಭಿಮಂತ್ರಿಸು** – ಮಂತ್ರ ಜಪಿಸಿ ಶಕ್ತಿಯುತವಾಗಿಸು
**ಅಭಿಮತ** – ಅಭಿಪ್ರಾಯ; ಪ್ರಿಯವಾದ
**ಅಭಿಮತಾರ್ಥ** – ಬಯಸಿದ; ಇಷ್ಟಾರ್ಥ
**ಅಭಿಮಾನ** – ಆತ್ಮಗೌರವ; ಅಹಂಕಾರ
**ಅಭಿಮಾನಂಗಿಡು** – ಅಭಿಮಾನಕ್ಕೆ ಧಕ್ಕೆಯೊದಗು
**ಅಭಿಮಾನಕ್ಷತಿ** – ಅಭಿಮಾನಭಂಗ
**ಅಭಿಮಾನಧನ** – ಸ್ವಾಭಿಮಾನವನ್ನೇ ಧನವನ್ನಾಗಿ ಉಳ್ಳವನು; ದುರ್ಯೋಧನ
**ಅಭಿಮಾನಮೂರ್ತಿ** – ಅಭಿಮಾನದ ಸಾಕಾರ
**ಅಭಿಮಾನಹಾನಿ** – ಅಭಿಮಾನಕ್ಷತಿ
**ಅಭಿಮುಖೀಕೃತ** – ಎದುರಾಗುವಂತೆ ಮಾಡಿಕೊಂಡ
**ಅಭಿಯಾತಿ** – ಶತ್ರು
**ಅಭಿಯೋಗ** – ಆಸಕ್ತಿ; ಒತ್ತಾಯ; ಯುದ್ಧ; ದೂರು
**ಅಭಿಯೋಗ್ಯ** – (ಜೈನ) ಇಂದ್ರ ಮುಂತಾದವರಿಗೆ ವಾಹನಸೇವೆ ಮಾಡುವವರು
**ಅಭಿರತ** – ಆಸಕ್ತಿಯಿರುವವನು
**ಅಭಿರಾಮ** – ಸುಂದರವಾದ
**ಅಭಿರೂಪ** – ತಕ್ಕವನು; ವಿದ್ವಾಂಸ
**ಅಭಿಲಷಿತ** – ಬಯಸಿದ
**ಅಭಿವಂದನ** – ಗೌರವಪೂರ್ವಕ ವಂದನೆ
**ಅಭಿವಂದಿತಾರ್ಥ** – ಮಾನ್ಯನಾದವನು
**ಅಭಿವಂದಿಸು** – ಗೌರವದಿಂದ ವಂದಿಸು
**ಅಭಿವಂದ್ಯ** – ಅಭಿವಂದನಾರ್ಹ
**ಅಭಿವರ್ಣನ** – ಸುಂದರ ವರ್ಣನೆ
**ಅಭಿವರ್ಣಿಸು** – ಚೆನ್ನಾಗಿ ವರ್ಣನೆ ಮಾಡು
**ಅಭಿವರ್ಧನ** – ಏಳಿಗೆ
**ಅಭಿವಾಂಛಿತ** – ಅಪೇಕ್ಷಿಪಟ್ಟ
**ಅಭಿವಾದಯೇ** – ನಮಸ್ಕರಿಸುತ್ತೇನೆ
**ಅಭಿವಿನುತ** – ಸ್ತೋತ್ರಪಾತ್ರ
**ಅಭಿವೀಕ್ಷಣ** – ಆಸಕ್ತಿಯಿಂದ ನೋಡುವುದು
**ಅಭಿವೇಷ್ಟಿತ** – ಸುತ್ತುವರಿಯಲ್ಪಟ್ಟ
**ಅಭಿವ್ಯಂಜಿಸು** – ಸ್ಪಷ್ಟಗೊಳಿಸು
**ಅಭಿವ್ಯಕ್ತಿ** – ಪ್ರಕಟಗೊಳ್ಳುವುದು
**ಅಭಿಶಂಕೆ** – ಆಳವಾದ ಸಂದೇಹ
**ಅಭಿಷಂಗ** – ಬೈಗುಳು
**ಅಭಿಷವ(ಣ)** – ಅಭಿಷೇಕ; ಸ್ನಾನ
**ಅಭಿಷವ(ಣ)ವಿಧಿ** – ಅಭಿಷೇಕಕ್ರಿಯೆ, ಕ್ರಮ
**ಅಭಿಷವಾಂಬು** – ಅಭಿಷೇಕದ ನೀರು
**ಅಭಿಷವೋತ್ಸವ** – ಅಭಿಷೇಕ ಮಹೋತ್ಸವ
**ಅಭಿಷೇಣ(ನ)** – ದಂಡೆತ್ತಿ ಹೋಗುವುದು
**ಅಭಿಷ್ಟುತ** – ಸ್ತುತವಾದ; ಶ್ರೇಷ್ಠ
**ಅಭಿಷ್ಟುತಿ(ಗೈ)** – ಸ್ತೋತ್ರ(ಮಾಡು)
**ಅಭಿಸಾರಣ** – ಪ್ರಿಯರ ಭೇಟಿಗಾಗಿ ಸಂಕೇತಸ್ಥಳಕ್ಕೆ **ಹೋಗುವುದು–**
**ಅಭಿಸಾರಿಕೆ** – ಸಂಕೇತಸ್ಥಾನದಲ್ಲಿ ಪ್ರಿಯನನ್ನು ನಿರೀಕ್ಷಿಸುವವಳು
**ಅಭಿಹತಮರ್ಮ** – ಮರ್ಮಕ್ಕೆ ಪೆಟ್ಟು ತಾಗಿದವನು
**ಅಭೀಕ್ಷಣ** – ಎದುರಾಗಿ (ಚೆನ್ನಾಗಿ) ನೋಡುವುದು
**ಅಭೀಕ್ಷಿಸು** – ಚೆನ್ನಾಗಿ ನೋಡಿ
**ಅಭೀತಚೇತ** – ಭಯಗೊಳ್ಳದವನು
**ಅಭೀತಮನ** – ಹೆದರದ ಮನಸ್ಸಿನವನು
**ಅಭೀತಾತ್ಮಕ** – ಹೆದರದ ಮನಸ್ಸಿನವನು
**ಅಭೀತೆ** – ಹೆದರದ ಮನಸ್ಸಿನವಳು
**ಅಭೀಪ್ಸೆ** – ಬಯಕೆ
**ಅಭೀಷ್ಟಫಲ** – ಬಯಸಿದ ಫಲ
**ಅಭೇದ್ಯ** – ಭೇದಿಸಲಾಗದ; ಭೇದಿಸಲಾಗದ್ದು
**ಅಭೋಗಿ** – (ಜೈನ) ಒಂದು ವಿದ್ಯೆ
**ಅಭೋಜ್ಯ** – ತಿನ್ನಬಾರದ್ದು
**ಅಭ್ಯಂತರ** – ಒಳಗೆ; ನಡುವೆ; ಅಂತರಂಗ; ಮಧ್ಯದ ಸ್ಥಳಾವಕಾಶ
**ಅಭ್ಯಂತರತಪಸ್ಸು** – (ಜೈನ) ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಆರು ಬಗೆಯ ಅಂತರಂಗ ತಪಸ್ಸು
**ಅಭ್ಯಂತರಮಂಟಪ** – ಒಳಗಿನ ಮಂಟಪ
**ಅಭ್ಯುಕ್ಷಣ** – ಸಂಪ್ರೋಕ್ಷಣೆ; ಚಿಮುಕಿಸುವುದು
**ಅಭ್ಯಮಿತ್ರೀಣ** – ಶತ್ರುಗಳನ್ನು ಧೈರ್ಯವಾಗಿ ಎದುರಿಸುವ
**ಅಭ್ಯರ್ಚನ(ನೆ)** – ಪೂಜೆ, ಸತ್ಕಾರ
**ಅಭ್ಯರ್ಚಿಸು** – ಪೂಜಿಸು, ಸತ್ಕರಿಸು
**ಅಭ್ಯರ್ಚ್ಯ** – ಪೂಜಾರ್ಹವಾದ

**ಅಭ್ಯರ್ಣ** – ಪಕ್ಕ, ಸಮೀಪ
**ಅಭ್ಯರ್ಥನ(ನೆ)** – ಪ್ರಾರ್ಥನೆ
**ಅಭ್ಯರ್ಹಿತ** – ಯೋಗ್ಯವಾದ; ಪೂಜ್ಯ
**ಅಭ್ಯರ್ಹಿತವೃತ್ತಿ** – ಪೂಜನೀಯ ನಡವಳಿಕೆ
**ಅಭ್ಯವಹಾರ** – ತಿನ್ನುವುದು; ಊಟ
**ಅಭ್ಯವಹೃತಿ** – ಊಟ
**ಅಭ್ಯಸನ** – ಅಭ್ಯಾಸ
**ಅಭ್ಯಸ್ತ** – ಕಲಿಯಲಾದ
**ಅಭ್ಯಾರೂಢ** – ಮೇಲೇರಿದವನು
**ಅಭ್ಯಾಗತ** – ಮನೆಗೆ ಬಂದು ಆತಿಥ್ಯ ಸ್ವೀಕರಿಸುವವನು
**ಅಭ್ಯಾಸ** – ಬಳಕೆ; ಕಲಿಕೆ
**ಅಭ್ಯುದಯ** – ಉದಯ; ಏಳಿಗೆ
**ಅಭ್ಯುಪಗಮ** – ಒಪ್ಪಿಗೆ
**ಅಭ್ಯಗಮೋಕ್ತಿ** – ಬಲ್ಲವರು ಒಪ್ಪು ಮಾತು
**ಅಭ್ರ(ಕ)** – ಮೋಡ; ಆಕಾಶ
**ಅಭ್ರಕ** – ಕಾಗೆಬಂಗಾರ
**ಅಭ್ರಂಕಷ** – ಆಕಾಶವನ್ನು ಮುಟ್ಟುವ
**ಅಭ್ರಕಾಯ** – ಮೋಡದಂತೆ ಕಪ್ಪಾದ ದೇಹವುಳ್ಳವನು
**ಅಭ್ರಕುಲ(ಳ)** – ಮೋಡಗಳ ಸಮೂಹ
**ಅಭ್ರಗಂಗೆ** – ದೇವಗಂಗೆ
**ಅಭ್ರಗಜ** – ಆಕಾಶದಲ್ಲಿ ಸಂಚರಿಸುವ ಆನೆ, ಐರಾವತ
**ಅಭ್ರಗಮನೆ** – ಆಕಾಶದಲ್ಲಿ ಸಂಚರಿಸುವವಳು, ಖೇಚರಿ
**ಅಭ್ರಗರ್ಜನೆ** – ಗುಡುಗು
**ಅಭ್ರಗರ್ಜಿತ** – ಅಭ್ರಗರ್ಜನೆ
**ಅಭ್ರಗಾಮಿ** – ಆಕಾಶದಲ್ಲಿ ಸಂಚರಿಸುವವನು
**ಅಭ್ರಘಟೆ** – ಮೋಡಗಳ ಸಮೂಹ
**ಅಭ್ರಚರ** – ಆಕಾಶದಲ್ಲಿ ಸಂಚರಿಸುವವನು
**ಅಭ್ರಚ್ಛವಿ** – ಮೋಡದ ಬಣ್ಣದ ಮೈಯವನು
**ಅಭ್ರಜ** – ಮೋಡದಲ್ಲಿ ಹುಟ್ಟಿದ; ಗುಡುಗು
**ಅಭ್ರನಿಭಾಂಗ** – ಮೋಡದ ಬಣ್ಣದ ಮೈಯವನು
**ಅಭ್ರಪಥ** – ಆಕಾಶಮಾರ್ಗ
**ಅಭ್ರಮಾರ್ಗ** – ಅಭ್ರಪಥ
**ಅಭ್ರಮು** – ಐರಾವತದ ಹೆಂಡತಿಯ ಹೆಸರು
**ಅಭ್ರಮೂರಮಣ** – ಅಭ್ರಮು(ಮೂ)ವಲ್ಲಭ
**ಅಭ್ರಮು(ಮೂ)ವಲ್ಲಭ** – ಐರಾವತ
**ಅಭ್ರವಜ್ರ** – ಸಿಡಿಲು
**ಅಭ್ರಶ್ರವ** – ನಿಮಿರಿದ ಕಿವಿ
**ಅಭ್ರಾಯನ** – ಆಕಾಶ
**ಅಮಂದ** – ಗಟ್ಟಿಯಾದ, ಬಲವಾದ
**ಅಮಂದಧ್ವನಿ** – ಗಟ್ಟಿಯಾದ ಕೂಗು; ಗರ್ಜನೆ
**ಅಮಂದರಾಗ** – ಅತಿಶಯ ಸಂತೋಷ, ಕಾಂತಿ
**ಅಮಂದರುಚಿ** – ಅತಿಶಯ ಕಾಂತಿ, ಸಂತೋಷ
**ಅಮಂದಸೌಂದರ್ಯ** – ಅತಿಶಯ ರೂಪು
**ಅಮಂದಸ್ನೇಹ** – ಅತಿಸಯ ಸ್ನೆಹ
**ಅಮಂದಾನಂದ** – ಅತಿಶಯ ಸಂತೋಷ
**ಅಮತ್ರ** – ಪಾತ್ರೆ
**ಅಮತ್ಸರ** – ಅಸೂಯೆಯಿಲ್ಲದ
**ಅಮತ್ಸರತ್ವ** – ಮತ್ಸರವಿಲ್ಲದ ಗುಣ
**ಅಮತ್ಸರಮತಿ** – ಮತ್ಸರರಹಿತ ಬುದ್ಧಿ
**ಅಮದವೃತ್ತಿ** – ಮದರಹಿತ ಸ್ವಭಾವ
**ಅಮದಾಲಸ** – ಮದದಿಂದ ಜಡವಾಗದ
**ಅಮರ್** – ಸೇರು, ಸರಿಹೊಂದು; ವ್ಯಾಪಿಸು; ಸಂಭವಿಸು; ಕೂಡಿಸು
**ಅಮರ** – ದೇವತೆ
**ಅಮರಕರಿ** – ಐರಾವತ
**ಅಮರಕಾಮಿನಿ** – ದೇವತಾಸ್ತ್ರೀ
**ಅಮರಗಣ** – ದೇವತೆಗಳ ಸಮೂಹ
**ಅಮರಗಿರಿ** – ಮೇರುಗಿರಿ
**ಅಮರಗುರು** – ಬೃಹಸ್ಪತಿ
**ಅಮರಧನು** – ಕಾಮನ ಬಿಲ್ಲು
**ಅಮರನಗ** – ಮೇರುಗಿರಿ
**ಅಮರನಗರಿ** – ಅಮರಾವತಿ
**ಅಮರನದಿ** – ದೇವಗಂಗೆ
**ಅಮರಪಟಹ** – ದೇವದುಂದುಭಿ
**ಅಮರಪತಿ** – ದೇವೇಂದ್ರ
**ಅಮರಪ್ರಸ್ಪರ್ಧಿ** – ದೇವತೆಗಳ ಜೊತೆ ಸ್ಪರ್ಧಿಸುವ
**ಅಮರಭೂಜ** – ಕಲ್ಪವೃಕ್ಷ
**ಅಮರಭೂರುಹ** – ಅಮರಭೂಜ
**ಅಮರಮಣಿ** – ಚಿಂತಾಮಣಿ
**ಅಮರಮಹತ್ತರಿಕೆ** – ದೇವಸೇವಕಿ
**ಅಮರವಧು** – ದೇವಕನ್ನಿಕೆ
**ಅಮರವಧೂಟಿ** – ಅಮರವಧು
**ಅಮರವಾಹಿನಿ** – ದೇವನದಿ
**ಅಮರಸಂಹತಿ** – ದೇವತೆಗಳ ಸಮೂಹ
**ಅಮರಸಮಾಜ** – ಅಮರಸಂಹತಿ
**ಅಮರಸಮಿತಿ** – ಅಮರಸಂಹತಿ
**ಅಮರಸಿಂಧು** – ದೇವನದಿ
**ಅಮರಸಿಂಧೂದ್ಭವ** – ಭೀಷ್ಮ
**ಅಮರಸುತ** – ದೇವಪುತ್ರ; ಅರ್ಜುನ
**ಅಮರಸ್ತ್ರೀ** – ದೇವತಾಸ್ತ್ರೀ
**ಅಮರಾಧ್ವ** – ದೇವತೆಗಳ ಮಾರ್ಗ, ಆಕಾಶ
**ಅಮರಾಪಗಾನಂದನ** – ದೇವಗಂಗೆಯ ಮಗ, ಭೀಷ್ಮ
**ಅಮರಿ** – ದೇವತಾಸ್ತ್ರೀ; ತಂಗಡಿ ಗಿಡ
**ಅಮರೇಂದ್ರ** – ದೇವೇಂದ್ರ
**ಅಮರೇಶ** – ದೇವೇಂದ್ರ
**ಅಮರ್ಕೆ** – ಬೆಸುಗೆ; ಬಲವಾಗಿ ಸೇರಿಸುವುದು; ಜೋಡಣೆ
**ಅಮರ್ಕೆಗಿಡು** – ಹೊಂದಿಕೆ ಬಿಟ್ಟುಹೋಗು
**ಅಮರ್ಕೆವಡೆ** – ಹೊಂದಿಕೆಯಾಗು

**ಅಮರ್ಕೆವೇೞು** – ಜೊತೆಯಾಗು; ಹೊಂದಿಕೆಯಾಗು
**ಅಮರ್ಚಿಸು** – ಸೇರುವಂತೆ ಮಾಡು
**ಅಮರ್ಚು** – ಸೇರಿಸು; ಒದಗಿಸು; ತೊಡಿಸು; ಲೇಪಿಸು; ಆಲಂಗಿಸು; ಏರ್ಪಡಿಸು; ಜೋಡಿಸು
**ಅಮರ್ತ್ಯ** – ದೇವತೆ
**ಅಮರ್ತ್ಯಚಿತ್ರಕ** – ದೇವತೆಗಳ ಚಿತ್ರಕಾರ
**ಅಮರ್ತ್ಯನಾಯಕ** – ದೇವೇಂದ್ರ
**ಅಮರ್ತ್ಯಮಾರ್ಗ** – ಆಕಾಶ
**ಅಮರ್ದು** – (ಅಮೃತ) ಪೀಯೂಷ
**ಅಮರ್ದುಗೂಳ್** – ಅಮರತಾನ್ನ
**ಅಮರ್ದುಗೆಯ್ಯ** – (ಅಮೃತಕರ) ಚಂದ್ರ
**ಅಮರ್ದುಣಿ** – ದೇವತೆ
**ಅಮರ್ದುವಳ್ಳಿ** – ಅಮೃತಬಳ್ಳಿ
**ಅಮರ್ದುವೆಣ್** – ದೇವತಾಸ್ತ್ರೀ; ಮೋಕ್ಷಲಕ್ಷ್ಮೀ
**ಅಮರ್ದುವೆಣ್ಣೋಪ** – ಈಶ್ವರ
**ಅಮರ್ಷಣ** – ಕೋಪಿಷ್ಠ; ಕೋಪ
**ಅಮಲ** – ನಿರ್ಮಲವಾದ
**ಅಮಲಾ(ಳಾ)ಂಶುಗಱ** – ಬಿಳಿ ಕಿರಣ ಸೂಸು
**ಅಮಳ್** – ಜೋಡಿ
**ಅಮಳಸ್ವಾಂತ** – ಪರಿಶುದ್ಧ ಮನಸ್ಸಿನವನು
**ಅಮಳರ್** – ಅವಳಿಗಳು
**ಅಮಳ್ಗಳ್** – ಅವಳಿಜವಳಿ; ಒಡನಾಡಿ
**ಅಮಳಾವರ್ತವಿಮಾನ** – (ಜೈನ) ಸ್ವರ್ಗದ ಒಂದು ವಿಮಾನದ ಹೆಸರು
**ಅಮಳನಚರಿತ** – ಪರಿಶುದ್ಧ ನಡತೆಯವನು
**ಅಮಳ್ಗಂಬ** – ಜೋಡಿ ಕಂಬ
**ಅಮಳ್ಗಳ್** – (ಯಮಲ) ಅವಳಿಜವಳಿ
**ಅಮಳ್ಗೊಡೆ** – ಜೋಡಿ ಕೊಡೆ
**ಅಮಳ್ಜಂತ್ರ** – ಜೋಡಿಯಂತ್ರ
**ಅಮಳ್ದಲೆವಕ್ಕಿ** – ಗಂಡಭೇರುಂಡ
**ಅಮಳ್ದೊಂಗಲ್** – ಎರಡು ಗೊಂಚಲುಗಳು
**ಅಮಳ್ವಕ್ಕಿ** – ಚಕ್ರವಾಕ
**ಅಮಳ್ವಡಿಗೀೞು** – ಜೋಡಿಕದಗಳನ್ನು ಮುಚ್ಚು
**ಅಮಳ್ವಾಸು** – ಜೊಡಿ ಹಾಸಿಗೆ
**ಅಮಳ್ವೆಸ್** – ಜೋಡಿ ಹೆಸರು
**ಅಮಳ್ವೇೞು** – ಅವಳಿಗಳನ್ನು ಹೆರು
**ಅಮಾತ್ಯ** – ಮಂತ್ರಿ
**ಅಮಾನ** – ಮಾನಗೇಡಿ
**ಅಮಾನಿತ** – ಗೌರವವಿಲ್ಲದ; ಹೊರಟುಹೋದ
**ಅಮಾನುಷ** – ಮನುಷ್ಯರಿಗೆ ಸಹಜವಲ್ಲದ
**ಅಮಾನುಷಕೇಳ** – ಮನುಷ್ಯ ಸಹಜತೆಗೆ ಮೀರಿದ ಲೀಲೆಯವನು
**ಅಮಾನುಷಚರಿತ್ರ** – ಮನುಷ್ಯಸಹಜತೆಗೆ ಮೀರಿದ ನಡತೆ
**ಅಮಿತಾಳಾಪ** – ಮಿತವಲ್ಲದ ಮಾತು
**ಅಮುಂ(ವುಂ)ಕು** – ಅದುಮು; ಹಿಸುಕು
**ಅಮೂಢದೃಷ್ಟಿ** – (ಜೈನ) ಸಮ್ಯಗ್ದರ್ಶನದ ಎಂಟು ಅಂಗಗಲ್ಲಿ ಒಂದು
**ಅಮೂಢದೃಷ್ಟಿತ್ವ** – ಅಮೂಢದೃಷ್ಟಿಯನ್ನು ಹೊಂದಿರುವುದು
**ಅಮೂರ್ತ** – ರೂಪರಹಿತ
**ಅಮೂಲ್ಯತ್ವ** – ಬೆಲೆಯಿಲ್ಲದಿರುವಿಕೆ; ಬೆಲೆಗಟ್ಟಲಾಗದ ಸ್ಥಿತಿ
**ಅಮೃತಂಬಡೆ** – ಅಮೃತವನ್ನು ಹೊಂದು
**ಅಮೃತಕರ** – ಚಂದ್ರ
**ಅಮೃತಕಲ್ಪ** – ಅಮೃತಸಮಾನ
**ಅಮೃತಕಿರಣ** – ಚಂದ್ರ
**ಅಮೃತಗರ್ಭ** – ಅಮೃತವನ್ನೊಳಗೊಂಡ
**ಅಮೃತಜಲ(ಳ)ಧಿ** – ಹಾಲ್ಗಡಲು
**ಅಮೃತದ್ಯುತಿ** – ಚಂದ್ರ
**ಅಮೃತಪದ** – ಮೋಕ್ಷಪದವಿ
**ಅಮೃತಪಯೋಧಿ** – ಹಾಲ್ಗಡಲು
**ಅಮೃತಪಿಂಡ** – ಅಮೃತದ ಉಂಡೆ
**ಅಮೃತಭಕ್ಷ್ಯ** – ಅಮೃತದಂತಹ ತಿನಿಸು
**ಅಮೃತಭವ** – ಹಾಲ್ಗಡಲಲ್ಲಿ ಹುಟ್ಟಿದ; ಚಂದ್ರ
**ಅಮೃತಮರೀಚಿ** – ಚಂದ್ರ
**ಅಮೃತರಸಾಯನ** – ಒಂದು ಬಗೆಯ ಪಾನಕ
**ಅಮೃತವರ್ಷ** – ಅಮೃತದ ಮಳೆ
**ಅಮೃತವಾರ್ಧಿ** – ಹಾಲ್ಗಡಲು
**ಅಮೃತಸಾನ್ನಾಯ್ಯ** – ರುಚಿಕರವೂ ಶ್ರೇಷ್ಠವೂ ಆದ ಹವಿಸ್ಸು
**ಅಮೃತಸ್ಯಂದಿ** – ಅಮೃತವನ್ನು ಸೂಸುವುದು
**ಅಮೃತಾಂಶು** – ಚಂದ್ರ
**ಅಮೃತಾಂಶುರಶ್ಮಿ** – ಬೆಳುದಿಂಗಳು
**ಅಮೃತಾಕರ** – ಹಾಲ್ಗಡಲು
**ಅಮೃತಾಕ್ಷರ** – ಅಮೃತದಂತೆ ಮಧುರವಾದ ಅಕ್ಷರ
**ಅಮೃತಾಧರೆ** – ಅಮೃತದಂತೆ ಮಧುರವಾದ ತುಟಿಯುಳ್ಳವಳು
**ಅಮೃತಾಬ್ಜ** – ಕೆಂದಾವರೆ
**ಅಮೃತಾಬ್ಧಿ** – ಹಾಲ್ಗಡಲು
**ಅಮೃತಾಯತ** – ಅಮೃತದಂತಹ
**ಅಮೃತಾವಾಸ** – ಶಾಶ್ವತ ನೆಲೆ; ಮೋಕ್ಷ
**ಅಮೃತಾಶನ** – ಅಮೃತವನ್ನೇ ಆಹಾರವಾಗಿ ಪಡೆದವನು, ದೇವತೆ
**ಅಮೃತಾಸಾರ** – ಅಮೃತದ ಮಳೆ
**ಅಮೃತಾಹಾರ** – ಅಮೃತಾಶನ
**ಅಮೇಧ್ಯ** – ಯಜ್ಞಕ್ಕೆ ಯೋಗ್ಯವಲ್ಲದ; ಕೊಳಕಾದ
**ಅಮೇಯ** – ಅಳತೆಗೆ ಸಿಕ್ಕದ
**ಅಮೋಘ** – ವ್ಯರ್ಥವಾಗದ; ಸಾರ್ಥಕವಾದ
**ಅಮೋಘಂ** – ವ್ಯರ್ಥವಾಗದ ಹಾಗೆ
**ಅಮೋಘವರ್ಷ** – ನೃಪತುಂಗನ ಬಿರುದು
**ಅಮ್ಮ** – ತಂದೆ
**ಅಮ್ಮಂಗೊಡಲಿ** – ಶಂಖಪುಷ್ಪಿ ಎಂಬ ಗಿಡ

**ಅಮ್ಮಾವು** – ಕಾಡ ಹಸು
**ಅಯ** – ಚಲಿಸುವುದು; ಶುಭವಿಧಿ; ಶ್ರೇಯಸ್ಸು
**ಅಯಃಪುತ್ರಿಕೆ** – ಕಬ್ಬಿಣದಿಂದ ಮಾಡಿದ ಹೆಣ್ಣಿನ ಪ್ರತಿಮೆ
**ಅಯಕರಣ** – ಶುಭವಿಧಿ
**ಅಯತ್ನಕೃತ** – ತನಗೆ ತಾನೇ ಆದ
**ಅಯತ್ನಸುಖ** – ತನಗೆ ತಾನೇ ದೊರೆತ ಸುಖ
**ಅಯನ** – ಚಲಿಸುವುದು; ಮೂರು ಋತುಗಳ ಅಥವಾ ಆರು ತಿಂಗಳ ಕಾಲ
**ಅಯನಯ** – ಶುಭಕಾರ್ಯ; ನೀತಿಮಾರ್ಗ
**ಅಯನಶೀಲ** – ಗತಿಶೀಲ
**ಅಯಮಾರ್ಗ** – ಒಳ್ಳೆಯ ದರಿ
**ಅಯಲತಾ** – ಸೌಭಾಗ್ಯವೆಂಬ ಬಳ್ಳಿ
**ಅಯಶ** – ಕೆಟ್ಟ ಹೆಸರು
**ಅಯಶಸ್ಕೀರ್ತಿ** – (ಜೈನ) ಎಪ್ಪತ್ತೆರಡು ಪ್ರಕೃತಿಗಳಲ್ಲಿ ಅಪಕೀರ್ತಿ ಎಂಬ ಪ್ರಕೃತಿ ಅಥವಾ ಕರ್ಮ
**ಅಯಶ್ಶಲಾಕೆ** – ಕಬ್ಬಿಣದ ಸರಳು
**ಅಯಸ** – ಆಯಾಸ; (ಅಯಶ) ಅಪಯಶಸ್ಸು
**ಅಯಸ್ಕಾಂತ** – ಸೂಜಿಗಲ್ಲು
**ಅಯುಕ್ತ** – ನೊಗಕ್ಕೆ ಹೂಡದ; ಹೊಂದಿಕೆಯಿಲ್ಲದ; ಅಗಲಿದ
**ಅಯುತ** – ಹತ್ತು ಸಾವಿರ
**ಅಯೋಗ** – ಒನಕೆ; ಯೋಗರಾಹಿತ್ಯ
**ಅಯೋಗಕೇವಲಿ** – (ಜೈನ) ಮನೋವಾಕ್ಕಾಯಗಳ ಚಾಂಚಲ್ಯವಿಲ್ಲದವನು; ಹದಿನಾಲ್ಕನೆಯ ಗುಣಸ್ಥಾನವನ್ನು ಸೇರಿದವನು
**ಅಯೋಗಗುಣಸ್ಥಾನ** – (ಜೈನ) ಹದಿನಾಲ್ಕನೆಯ ಗುಣಸ್ಥಾನ
**ಅಯೋಗಿ** – ಅಯೋಗಕೇವಲಿ
**ಅಯೋಗ್ರಾಹ್ಯತೆ** – ಕಬ್ಬಿಣವನ್ನು ಆಕರ್ಷಿಸುವ ಗುಣ
**ಅಯೋಘನ** – ಸುತ್ತಿಗೆ
**ಅಯೋಧ್ಯ** – ಯುದ್ಧ ಮಾಡಬಾರದ; (ಜೈನ) ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಬ್ಬನಾದ ಸೇನಾಪತಿಯ ಹೆಸರು
**ಅಯೋನಿಸಂಭವ** – ಅಯೋನಿಜ, ದ್ರೋಣ
**ಅಯೋಲಲನೆ** – ಅಯಃಪುತ್ರಿಕೆ
**ಅಯ್ಕಿಲ್** – ಐಕಿಲ್, ಚಳಿ; ಹಿಮ
**ಅಯ್ಕಿಲೆಲರ್** – ತಂಪು ಗಾಳಿ
**ಅಯ್ಕಿಲ್ಗದಿರ** – ತಂಪು ಕಿರಣದವನು, ಚಂದ್ರ
**ಅಯ್ಕಿಲ್ವೆಟ್ಟು** – ಹಿಮದ ಬೆಟ್ಟ
**ಅಯ್ಕಿಲ್ವೆಳಗ** – ಅಯ್ಕಿಲ್ಗದಿರ
**ಅಯ್ಗಣೆಯ** – ಐದು ಬಾಣಗಳುಳ್ಳವನು; ಮನ್ಮಥ
**ಅಯ್ಗೋಲ** – ಅಯ್ಗಣೆಯ
**ಅಯ್ದುಗುಂದು** – ಐದು ಸಾಲದೆ ಹೋಗು
**ಅಯ್ದೆ** – ಅಯಿದೆ, ಐದೆ, ಮುತ್ತೈದೆ
**ಅಯ್ದೆತನ** – ಸುಮಂಗಲಿತನ
**ಅಯ್ದೆದಾಳ** – ತಾಳಿ, ಮಾಂಗಲ್ಯ
**ಅಯ್ದೆಮಿನುಗು** – ತಾಳಿಬೊಟ್ಟು, ಮಾಂಗಲ್ಯ
**ಅಯ್ದೆವಸ** – ಐದು ದಿವಸ
**ಅಯ್ಮೊಗ** – ಐದು ಮುಖದವನು, ಶಿವ
**ಅಯ್ಯ** – ತಂದೆ, ತಾತ
**ಅಯ್ಯಗೊಡೆ** – ಎರಡು ಕೊಡೆಗಳು
**ಅಯ್ರದಾಳ** – ಅಯ್ದೆದಾಳಿ
**ಅಯ್ವಡಿ** – ಐದು ಪಟ್ಟು
**ಅಯ್ಸರಳ** – ಐದು ಬಾಣಗಳವನು, ಕಾಮ
**ಅಯ್ಸಾಸಿರ** – ಐಸಾಸಿರ, ಐದು ಸಾವಿರ
**ಅಯ್ಸಾಸಿರ್ವರ್** – ಐದು ಸಾವಿರ ಜನ
**ಅಯ್ನೂರ್ವರ್** – ಐನೂರು ಮಂದಿ
**ಅರ** – ವೇಗವುಳ್ಳ; (ಜೈನ) ಹದಿನೆಂಟನೆಯ ತೀರ್ಥಂಕರ
**ಅರಗಿಳಿ** – ಅರಗಿಣಿ, ಶ್ರೇಷ್ಠವಾದ ಗಿಳಿ
**ಅರಗಿಲ್** – ಚಕ್ರದ ಅರೆಕಾಲು
**ಅರಗು** – ಮರದ ಮೇಲಿನ ಮೇಣ
**ಅರಘಟ್ಟ** – ನೀರೆತ್ತುವ ರಾಟೆ
**ಅರಣ** – ಸಗಣಿ
**ಅರಣಿ** – ಯಾಗದ ಬೆಂಕಿಯನ್ನು ಕಡೆಯುವ ಒಣಬನ್ನಿ ಮರದ ತುಂಡು
**ಅರಣ್ಯಕಮಲಿನಿ** – ಕಾಡಿನ ತಾವರೆ ಬಳ್ಳಿ
**ಅರಣ್ಯಪ್ರಕರ** – ಕಾಡುಗಳ ಗುಂಪು
**ಅರಣ್ಯರುದಿತ** – ಅರಣ್ಯರೋದನ
**ಅರಣ್ಯಾಂತರ** – ಕಾಡಿನ ನಡುವೆ
**ಅರಣ್ಯಾನೀಚರ** – ಅರಣ್ಯಸಂಚಾರಿ, ಬೇಡ
**ಅರತಿ** – ಅನಾಸಕ್ತಿ; ಪ್ರೀತಿರಾಹಿತ್ಯ
**ಅರದ** – ತೇರು, ರಥ
**ಅರದೇಗು** – ತೇಗದ ಮರದ ಒಂದು ಭೇದ
**ಅರಬೊಜಂಗ** – ರಾಜವಿಟ
**ಅರಮಗ** – ರಾಜನ ಮಗ
**ಅರಮೆ** – ಸ್ವಲ್ಪಮಟ್ಟಿಗೆ; ಕ್ವಚಿತ್; ಬಹಳವಾಗಿ
**ಅರರೀಪುಟ** – ಬಾಗಿಲ ರೆಕ್ಕೆ, ಕದ
**ಅರಲ್** – ಹೂ
**ಅರಲಸರಲ** – ಹೂಬಾಣ, ಮನ್ಮಥ
**ಅರಲಿಚ** – ಬ್ರಹ್ಮ
**ಅರವರಿಸು** – ವಿಚಾರ ಮಾಡು; ಉಪೇಕ್ಷೆ ಮಾಡು
**ಅರವಾವು** – (ಅರಸು+ಪಾವು) ಹೆಬ್ಬಾವು
**ಅರವಿಂದ** – ತಾವರೆ
**ಅರವಿಂದವನ** – ತಾವರೆಯ ಸಮೂಹ; ಕೊಳ
**ಅರವಿಂದಸಖ** – ಸೂರ್ಯ
**ಅರವಿಂದಾಕರ** – ಕೊಳ
**ಅರವಿಂದಾಸ್ಯ** – ತಾವರೆಮೊಗ, ವಿಷ್ಣು
**ಅರವಿಂದಿನಿ** – ತಾವರೆಯ ಕೊಳ
**ಅರವುರನೆ** – ತ್ವರಿತವಾಗಿ
**ಅರವೊಱಸು** – ಒಂದು ಬಗೆಯ ಪಾರಿವಾಳ
**ಅರಸ** – ಅರಸುತನ

**ಅರಸಂಚೆ** – ರಾಜಹಂಸ
**ಅರಸಾಳ್** – ದೊರೆಯ ಆಳು
**ಅರಸಾಳ್ತನ** – ಅರಸಾಳಿನ ಕರ್ತವ್ಯ, ಅಧಿಕಾರ
**ಅರಸಿ** – ರಾಣಿ
**ಅರಸಿಕೆ** – ರಾಜತನ
**ಅರಸಿತಿ** – ಅರಸಿ
**ಅರಸು** – ಅರಸುತನ
**ಅರಸುಕುಮಾರ** – ದೊರೆಗುವರ
**ಅರಸುಗಾಣ್** – ರಾಜಪದವಿಯನ್ನು ಪಡೆ
**ಅರಸುಗಿಡು** – ರಾಜತ್ವ ಕೈತಪ್ಪು
**ಅರಸುತನಂಗೆಯ್** – ಆಳುವುದು
**ಅರಸುಪೋಱಸು** – ರಾಜಕಪೋತ, ಇದು ಮನೆಹೊಕ್ಕರೆ ಕೇಡು ಎಂಬ ನಂಬಿಕೆ
**ಅರಸುಮಗ** – ದೊರೆಗುವರ
**ಅರಸುವಡೆ** – ದೊರೆಯನ್ನು ಹೊಂದು
**ಅರಸೊಡವೆ** – ರಾಜನ ಒಡವೆ
**ಅರಳ್** – ಹುರಿದ ಏಕದಳ ಧಾನ್ಯ; ಲಾಜೆ
**ಅರಳ** – ಅಶ್ವತ್ಥದ ಮರ
**ಅರಳೆ** – ಬೀಜ ತೆಗೆದ ಹತ್ತಿ
**ಅರಳೆಲೆ** – ಅರಳಿ ಎಲೆಯಾಕಾರದ ಮಕ್ಕಳ ಒಂದು ಆಭರಣ
**ಅರಳೆಲೆಮಾಲೆ** – ಅರಳಿ ಎಲೆಯಾಕಾರದ ಬಟ್ಟುಗಳ ಸರ
**ಅರಳೇಳ್** – ಧಾನ್ಯದಂತೆ ಅರಳಾಗು, ಚಿಮ್ಮು
**ಅರಾತಿ** – ಶತ್ರು
**ಅರಾತಿಕಾಂತೆ** – ಶತ್ರುವಿನ ಹೆಮಡತಿ
**ಅರಾತಿನಿಕರ** – ಶತ್ರುಸಮೂಹ
**ಅರಿ** – ಕತ್ತರಿಸು
**ಅರಿಂಜಯ** – ಶತ್ರುವನ್ನು ಗೆಲ್ಲುವವನು
**ಅರಿಂದಮ** – ಶತ್ರುಗಳನ್ನು ಅಡಗಿಸುವವನು
**ಅರಿಕಾಮಧ್ವಂಸಿ** – ಹಗೆಯಾದ ಕಾಮನನ್ನು ಕೊಂದವನು, ಶಿವ
**ಅರಿಕುಠಾರ** – ಶತ್ರುವಿಗೆ ಕೊಡಲಿಯಂತಿರುವವನು
**ಅರಿಕೇಸರಿ** – ಶತ್ರುಗಳಿಗೆ ಸಿಂಹದಂತಿರುವವನು; ಪಂಪನ ಆಶ್ರಯದಾತ
**ಅರಿಗ** – ಅರಿಕೇಸರಿ ಎಂಬ ರಾಜ
**ಅರಿದಾಳ** – ಶಂಖಪಾಷಾಣ ಮತ್ತು ಗಂಧಕಗಳ ಮಿಶ್ರಣ; ಹರಿತಾಲ
**ಅರಿದು** – ಅಸಾಧ್ಯ
**ಅರಿಧ್ವಜಿನಿ** – ಶತ್ರುಸೈನ್ಯ
**ಅರಿನಿರ್ದಾರಣ** – ಶತ್ರುಗಳನ್ನು ಸೀಳಿ ಹಾಕುವವನು
**ಅರಿಪರದೂಷಣಸಂಧಿ** – ರಾಜನು ಶತ್ರುವಿನೊಡನೆ ಮಾಡಿಕೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಉತ್ತಮ ಭೂಪ್ರದೇಶವನ್ನು ಶತ್ರುವಿಗೆ ಕೊಟ್ಟು ಮಾಡಿಕೊಳ್ಳುವ ಸಂಧಿ
**ಅರಿಪ್ರಧ್ವಂಸನ** – ಶತ್ರುವನ್ನು ಧ್ವಂಸಮಾಡುವವನು
**ಅರಿಬಳಜೈತ್ರ** – ಶತ್ರುಸೈನ್ಯವನ್ನು ಗೆಲ್ಲುವವನು
**ಅರಿಯನ್** – ಅಸಾಧ್ಯನಾದವನು
**ಅರಿಯಮೆ** – ಅಜ್ಞಾನ
**ಅರಿಯಿಸು** – ಕತ್ತರಿಸು
**ಅರಿಯುವತಿ** – ಶತ್ರುಸ್ತ್ರೀ
**ಅರಿವಾಹಿನಿ** – ಶತ್ರುಸೈನ್ಯ
**ಅರಿಷ್ಟ** – ದುರದೃಷ್ಟ; ರಾಕ್ಷಸ; (ಜೈನ) ಲೋಕಾಂತಿಕ ದೇವರಲ್ಲಿನ ಒಂದು ಪ್ರಭೇದ
**ಅರಿಷ್ಟಘರಟ್ಟ** – ದುಷ್ಟರಿಗೆ ಬೀಸು ಕಲ್ಲಿನಂತಿರುವವನು
**ಅರಿಷ್ಟನೇಮಿ** – ಗರುಡನ ಸೋದರ; (ಜೈನ) ಇಪ್ಪತ್ತೆರಡನೆಯ ತೀರ್ಥಂಕರ
**ಅರಿಷ್ಟಸದ್ಮ** – ಹೆರಿಗೆಯ ಮನೆ
**ಅರಿಷ್ಟೆ** – (ಜೈನ) ಒಂದು ನರಕದ ಹೆಸರು
**ಅರಿಸ್ಮಯ** – ಶತ್ರುಗಳಿಗೆ ಅಚ್ಚರಿಯುಂಟುಮಾಡುವ
**ಅರುಚಿ** – ರುಚಿಯಿಲ್ಲದಿರುವುದು; ಅಪೇಕ್ಷೆಯಿಲ್ಲದಿರುವುದು
**ಅರುಣ** – ಕೆಂಪು ಬಣ್ಣ; (ಜೈನ) ಲೋಕಾಂತಿಕ ದೇವರಲ್ಲಿ ಒಂದು ಬಗೆ
**ಅರುಣಜಲ** – ಕೆಂಪು ನೀರು; ರಕ್ತ
**ಅರುಣಶಾಲಿ** – ಕೆಂಪು ಬತ್ತ
**ಅರುಣಾಂಬು** – ರಕ್ತ
**ಅರುಣಾಬ್ಜ** – ಕೆಂಪು ತಾವರೆ
**ಅರುಣಾಶ್ಮ** – ಕೆಂಪು ಕಲ್ಲು, ಮಾಣಿಕ್ಯ
**ಅರುನಿತ** – ಕೆಂಪು ಮಾಡಲ್ಪಟ್ಟ
**ಅರುಣೀಭೂತ** – ಕೆಂಪಾದ
**ಅರುಣೋಪಲ(ಳ)** – ಕೆಂಪು ಕಲ್ಲು, ಮಾಣಿಕ
**ಅರುಷ್ಕರ** – ಗೇರುಮರ
**ಅರುಹಂತ** – ತೀರ್ಥಂಕರ
**ಅರೆ** – ನುಣ್ಣಿಸು; ತೇಯು; ಅರ್ಧಭಾಗ; ಕೊರತೆ; ಕೆಲಮಟ್ಟಿಗೆ; ಒಂದು ಭಾವಸೂಚಕಾವ್ಯಯ
**ಅರೆಗಟ್ಟು** – ಅರ್ಧ ಕಟ್ಟು, ಸಡಿಲವಾಗಿ ಕಟ್ಟು
**ಅರೆಗಣ್ದೆಱೆ** – ಅರ್ಧಕಣ್ಣನ್ನು ತೆರೆದಿರುವುದು
**ಅರೆಗಣ್ಮುಗಿ** – ಅರ್ಧಕಣ್ಣು ಮುಚ್ಚು
**ಅರೆಗರಿ** – ಅರ್ಧ ಸುಡು
**ಅರೆಗರಿಂಕುವೋಗು** – ಅರ್ಧ ಸೀದು ಕರಿಕಾಗು
**ಅರೆಗಲ್** – ಅರೆಯುವ ಕಲ್ಲು, ಮಸೆಗಲ್ಲು
**ಅರೆಗವಡಿಕೆ** – ಕವಡೆಯ ಆರ್ಧಭಾಗ
**ಅರೆಗತ್ತಲೆ** – ಅರ್ಧ ಕತ್ತಲೆ
**ಅರೆಗಟಿಗೆ** – ಅರ್ಧ ಗಳಿಗೆ ; ಸ್ವಲ್ಪ ಹೊತ್ತು
**ಅರೆಗಾವುದ** – ಅರ್ಧ ಗಾವುದ; ಆರು ಮೈಲಿ
**ಅರೆಗೆಱೆ** – ಶ್ರೇಷ್ಠವಾದ ಕೆರೆ
**ಅರೆಗೇಣ್** – ಅರ್ಧ ಗೇಣು
**ಅರೆಗೊಯ್** – ಅರ್ಧ ಕೊಯ್ಯಿ
**ಅರೆಜಾವ** – ಅರ್ಧ ಜಾವದಷ್ಟು ಕಾಲ; ಒಂದೂವರೆ ಗಂಟೆ
**ಅರೆದೆಱೆ** – ಅರ್ಧ ತೆರೆ

**ಅರೆಪಲ್ದೆಱೆ** – ಹಲ್ಲುಗಳು ಅರ್ಧ ಹೊರಗೆ ಕಾಣುವಂತೆ ಬಾಯಿಬಿಡು
**ಅರೆಪುರುಷ** – ಅರ್ಧ ಆಳಿತ ಎತ್ತರ ಅಥವಾ ಆಳ
**ಅರೆಪೊರೆಕ** – ಅರ್ಧವ್ಯಾಪಿಸಿದ
**ಅರೆಮುಗಿ** – ಅರ್ಧ ಮುಚ್ಚಿಕೊ
**ಅರೆಮುಗುಳ್** – ಅರ್ಧ ಮುಚ್ಚಿಕೊ; ಆರ್ಧ ಬಿರಿದ ಮೊಗ್ಗು
**ಅರೆವಣ್** – ಅರ್ಧ ಹಣ್ಣಾದ; ದೋರೆ ಹಣ್ಣು
**ಅರೆವರಿ** – ಉಪೇಕ್ಷೆ, ಕಡೆಗಣಿಸುವಿಕೆ
**ಅರೆವಳ** – ಅರೆಯುವ ಕೆಲಸದಲ್ಲಿ ತೊಡಗಿರುವವನು
**ಅರೆವಾತು** – ಅಸ್ಪಷ್ಟ ನುಡಿ
**ಅರೆವಾನಿಸಿಕೆ** – ಅರ್ಧ ಮನುಷ್ಯತ್ವ
**ಅರೆವಿರಿ** – ಅರ್ಧ ಬಿರಿ
**ಅರೆವೀಱು** – ಹೂಮಳೆ
**ಅರೆವೆಣ್ಣ** – ಅರ್ಧ ಹೆಣ್ಣಾದವನು, ಶಿವ
**ಅರೆವೆಣ್ತನ** – ಅರ್ಧ ಹೆಣ್ಣಾಗಿರುವ ಸ್ಥಿತಿ
**ಅರೆವೆಸ** – ಅರ್ಧ ಕೆಲಸ
**ಅರೆವೆಱೆ** – ಅರ್ಧಚಂದ್ರ
**ಅರೆವೆಱೆಯ** – ಅರ್ಧಚಂದ್ರಧರ, ಶಿವ
**ಅರೆವೊತ್ತು** – ಸ್ವಲ್ಪ ಹೊತ್ತಿಕೊ, ಉರಿ
**ಅರೆವೊರಕ** – ಅರೆಬರೆಯಾದ
**ಅರೋಚಿ** – ಅವಿವೇಕಿ
**ಅರ್ಕ** – ಸೂರ್ಯ; ಎಕ್ಕೆ
**ಅರ್ಕಕರ** – ಸೂರ್ಯನ ಕಿರಣ, ಕಾಂತಿ
**ಅರ್ಕಗ್ರಾವ** – ಸೂರ್ಯಕಾಂತಶಿಲೆ
**ಅರ್ಕಜಾಂಬು** – ಸೂರ್ಯನ ಮಗಳಾದ ಯುಮುನಾ ನದಿಯ ನೀರು
**ಅರ್ಕಮಂಡಲ** – ಸೂರ್ಯಮಂಡಲ
**ಅರ್ಕರೋಚಿ** – ಸೂರ್ಯನ ಕಾಂತಿ
**ಅರ್ಕಸುತಾ** – ಯಮುನಾ ನದಿ
**ಅರ್ಕಾಡು** – ಅಟ್ಟಾಡು, ನಿಶ್ಶೇಷವಾಗು
**ಅರ್ಗಳ** – ಅಗುಳಿ
**ಅರ್ಘ** – ಬೆಲೆ
**ಅರ್ಘಕ್ಷಯ** – ಬೆಲೆಯಿಳಿಯುವಿಕೆ
**ಅರ್ಘಿಸು** – ಅರ್ಘ್ಯವನ್ನು ಕೊಡು
**ಅರ್ಘ್ಯ** – ಕೈ ತೊಳೆಯುವ ನೀರು; ಶ್ರೇಷ್ಠ; ಪೂಜ್ಯ
**ಅರ್ಘ್ಯೋದ್ಧರಣ** – ಅರ್ಘ್ಯವೆತ್ತುವ ಕ್ರಿಯೆ
**ಅರ್ಘ್ಯಕರ** – ಪೂಜಾಸಾಮಗ್ರಿಗಳನ್ನು ಕೈಯಲ್ಲಿಟ್ಟುಕೊಂಡವನು
**ಅರ್ಘ್ಯಕ್ರಿಯಾತಂಡುಲ** – ಅಕ್ಷತೆ
**ಅರ್ಘ್ಯಲಾಜ** – ಪೂಜೆಗಾಗಿ ಅರ್ಪಿಸುವ ಬತ್ತದ ಅರಳು
**ಅರ್ಘ್ಯಹಸ್ತ** – ಅರ್ಘ್ಯಕರ
**ಅರ್ಚನಾವಿಧಿ** – ಪೂಜಾಕ್ರಮ
**ಅರ್ಚನೋಪಕರಣ** – ಪೂಜಾಸಾಮಗ್ರಿಗಳು (ಹೂ, ಗಂಧ, ಹಣ್ಣು, ಶಾಲಿ, ಅಕ್ಷತೆ, ಧೂಪ, ದೀಪ, ಚರು)
**ಅರ್ಚಾಕ್ರೀಡನ** – ಪೂಜೆಯ ಆಟ
**ಅರ್ಚಿ** – ಜ್ವಾಲೆ; ಕಾಂತಿ
**ಅರ್ಚಿಃಕಣ** – ಕಿಡಿ
**ಅರ್ಚಿತ** – ಪೂಜೆಗೊಂಡ
**ಅರ್ಚಿಸು** – ಪೂಜೆ ಮಾಡು
**ಅರ್ಜುನ** – ಮತ್ತಿಯ ಗಿಡ ; ಬಿಳಿಪು; ಪಾಂಡವರಲ್ಲಿ ಒಬ್ಬ
**ಅರ್ಜುನಕುಜ** – ಬಿಳಿಯ ಮರ, ಮತ್ತಿ ಮರ
**ಅರ್ಜುನೋರ್ಜಿತ** – ಮತ್ತಿಯ ಮರದಿಂದ ಮೇಲ್ಮೆಯನ್ನು ಪಡೆದ; ಅರ್ಜುನನಿಂದ ಉನ್ನತಿಯನ್ನು ಹೊಂದಿದ
**ಅರ್ಣವ** – ಸಮುದ್ರ
**ಅರ್ಣವಜಾತ** – ಸಮುದ್ರದಲ್ಲಿ ಹುಟ್ಟಿದ, ಚಂದ್ರ
**ಅರ್ಣವತೀರ್ಣ** – ಸಮುದ್ರವನ್ನು ದಾಟಿದವನು
**ಅರ್ತಿ** – ಪ್ರೀತಿ
**ಅರ್ತಿಗೆಡು** – ಪ್ರೀತಿ ಕೆಟ್ಟುಹೋಗು
**ಅರ್ಥಕೃತಿ** – ಹಣಕ್ಕಾಗಿ ಬರೆದ ಕಾವ್ಯ; ಅರ್ಥವಂತಿಕೆಯಿಂದ ಕೂಡಿದ ಕಾವ್ಯ
**ಅರ್ಥ** – ಶಬ್ದದ ಅಭಿಪ್ರಾಯ
**ಅರ್ಥಖಂಡನ** – ಇತರ ಅರ್ಥವನ್ನು ನಿರಾಕರಿಸುವುದು
**ಅರ್ಥಗ್ರಾಹಿ** – ಹಣ ಅಥವಾ ಪ್ರಯೋಜನವನ್ನು ಪಡೆಯುವವನು
**ಅರ್ಥಘಟನೆ** – ಅರ್ಥ, ಅಭಿಪ್ರಾಯದ ಹೊಂದಿಕೆ
**ಅರ್ಥದ(ಪ)** – ಕುಬೇರ
**ಅರ್ಥದೂಷಕ** – ಹಣದುರುಪಯೊಗ ಮಾಡುವವನು
**ಅರ್ಥದೃಷ್ಟಿ** – ಹಣದ ಕಡೆಗಿನ ಗಮನ; ಅರ್ಥದ ಕಡೆಗಿನ ಗಮನ
**ಅರ್ಥದೃಷ್ಟತ್ವ** – ಅರ್ಥದ ಸ್ವಾರಸ್ಯವನ್ನು ಕಾಣುವುದು
**ಅರ್ಥನೀಯ** – ಬೇಡಲು ಯೋಗ್ಯವಾದ
**ಅರ್ಥಪೋಷ** – ಅರ್ಥ ಸಾರ್ಥಕವಾಗುವಿಕೆ; ಅನ್ವರ್ಥವಾಗುವಿಕೆ
**ಅರ್ಥಪ್ರತೀತಿ** – ಅರ್ಥಸ್ಪಷ್ಟತೆ
**ಅರ್ಥಪ್ರವರ್ತನ** – ಆರ್ಥಿಕ ವ್ಯವಹಾರ
**ಅರ್ಥರಹಿತ** – ಅರ್ಥವಿಲ್ಲದ್ದು; ಹಣವಿಲ್ಲದ್ದು
**ಅರ್ಥಲ(ಳ)ಂಬಿ** – ಅಥ್ವನ್ನು ಅವಲಂಬಿಸಿರುವ
**ಅರ್ಥವಿಜಯಿ** – ದೊರೆಗಳ ಮೂರು ಬಗೆಗಳಲ್ಲಿ ಒಂದು; ಉಳಿದೆರಡು: ಅಸುರವಿಜಯಿ ಮತ್ತು ಧರ್ಮವಿಜಯಿ
**ಅರ್ಥವೃತ್ತಿ** – ಅರ್ಥವಿವರಣೆ
**ಅರ್ಥವ್ಯಕ್ತಿ** – ಅರ್ಥ ಸ್ಪಷ್ಟವಾಗಿರುವುದು
**ಅರ್ಥಶಾಸ್ತ್ರ** – ರಾಜನೀತಿ; ಕೌಟಿಲ್ಯದ ರಾಜನೀತಿಯ ಗ್ರಂಥ

**ಅರ್ಥಸಂಚಯ** – ಹಣಶೇಖರಣೆ
**ಅರ್ಥಸಂವರಣೆ** – ಹಣವನ್ನು ಬಚ್ಚಿಡುವುದು
**ಅರ್ಥಾನುರೂಪ** – ಅರ್ಥಕ್ಕೆ ಅನುಗುಣವಾದ
**ಆರ್ಥಾಭಾಸ** – ಅರ್ಥವಿರುವಂತಿದ್ದರೂ ಅರ್ಥರಹಿತವಾದುದು
**ಅರ್ಥಾರ್ಥಿ** – ಹಣವನ್ನು ಬೇಡುವವನು
**ಅರ್ಥಿ** – ಯಾಚಕ; ಸೇವಕ; ಸಂತೋಷ
**ಅರ್ಥಿಗಣ** – ಯಾಚಕರ ಗುಂಪು
**ಅರ್ಥಿತ** – ಬೇಡಿದ
**ಅರ್ಥಿನಿಚಯ** – ಅರ್ಥಿಗಣ
**ಅರ್ಥೇಶ** – ಅರ್ಥಪತಿ, ಕುಬೇರ
**ಅರ್ಥೋಕ್ತಿ** – ಅರ್ಥಸ್ಪಷ್ಟವಾದ ಮಾತು
**ಅರ್ಥೋತ್ಕರ** – ಅರ್ಥಸಮೂಹ
**ಅರ್ಥೋಪಾರ್ಜನ** – ಹಣಸಂಪಾದನೆ
**ಅರ್ಥ್ಯೋಕ್ತಿ** – ಅರ್ಥ್ಯ+ಉಕ್ತಿ, ತಿಳಿವಳಿಕೆಯ ಮಾತು; ಅರ್ಥಚಮತ್ಕಾರ
**ಅರ್ದಿಡು** – ಬಲವಾಗಿ ಚುಚ್ಚು
**ಅರ್ದಿ(ದ್ದಿ)ಸು** – ಮುಳುಗಿಸು; ಅಡಗಿಸು
**ಅರ್ದುಗಂಚಿ** – ಅದಿರ್ಗಂಚಿ, ಮಾಧವೀ ಹೂ
**ಅರ್ಧಕಪ್ಪಟೆ** – ಸ್ವಲ್ಪ ಬಟ್ಟೆ, ಅರೆವಸ್ತ್ರ(ಧಾರಣೆ)
**ಅರ್ಧಗಪ್ಪಡ** – ಅರ್ಧಕಪ್ಪಟೆ
**ಅರ್ಧಗಪ್ಪಡ ತೀರ್ಥ** – ಅರ್ಧಗಪ್ಪಡದ ಸಂಪ್ರದಾಯ
**ಅರ್ಧಗಪ್ಪಡ ಯತಿ** – ಅರ್ಧಗಪ್ಪಡ ಸಂಪ್ರದಾಯದ ಮುನಿ
**ಅರ್ಧಗಪ್ಪಡ ಸಂಘ** – ಅರ್ಧಗಪ್ಪಡ ಸಂಪ್ರದಾಯದ ಮುನಿಗಳ ಸಮುದಾಯ
**ಅರ್ಧಗುಚ್ಛ** – ಇಪ್ಪತ್ತನಾಲ್ಕು ಎಳೆಗಳ ಹಾರ
**ಅರ್ಧಚಕ್ರವರ್ತಿ** – (ಜೈನ) ಭರತಖಂಡದ ಮೂರು ಖಂಡಗಳಿಗೆ ಅಧಿಪತಿಯಾದ ಸಾಮ್ರಾಟ
**ಅರ್ಧನಾರಿ** – ಅರ್ಧ ಕಪ್ಪು, ಅರ್ಧ ಕೆಂಪು ಬಣ್ಣವುಳ್ಳ; ಪಾರ್ಶ್ವವಾಯು; ದೇಹದ ಅರ್ಧ ಗಂಡು ಅರ್ಧ ಹೆಣ್ಣಾಗಿರುವುದು
**ಅರ್ಧಮಂಡಳಿಕ** – ಅರ್ಧ್ ಮಂಡಲದ ಒಡೆಯ
**ಅರ್ಧಮಾಣವಕ** – ಹನ್ನೆರಡು ಎಳೆಗಳ ಮುತ್ತಿನ ಹಾರ
**ಅರ್ಧರಥ** – ಕೆಲವೊಮ್ಮೆ ಧೈರ್ಯದಿಂದ, ಮತ್ತೆ ಕೆಲವು ವೇಳೆ ಅಧೈರ್ಯದಿಂದ ಯುದ್ಧಮಾಡುವ ರಥಿಕ; ಮತ್ತೊಬ್ಬನ ಸಹಾಯ ಪಡೆಯುವ ರಥಿಕ
**ಅರ್ಧಹಾರ** – ಅರವತ್ತುನಾಲ್ಕು ಎಳೆಗಳ ಮುತ್ತಿನ ಹಾರ
**ಅರ್ಧಾಂಗಿ** – ಹೆಂಡತಿ
**ಅರ್ಧಾವಲಿಕ (ಅರ್ಧಾವಳೀಕ)** – ಒಂದು ಬಗೆಯ ಅಸ್ತ್ರ; ಅರ್ಧಚಂದ್ರಾಕೃತಿಯ ಬಾಣ
**ಅರ್ಧಾಸನ** – ಪೀಠದಲ್ಲಿ ಪಾಲು
**ಅರ್ಧಾಹಾರ** – ಆಹಾರದಲ್ಲಿ ಅರ್ಧಭಾಗ
**ಅರ್ಧಿಸು** – ಅರ್ಧಕ್ಕೆ ಕತ್ತರಿಸು
**ಅರ್ಧೇಂದು** – ಅರ್ಧಚಂದ್ರ
**ಅಬಿ(ವಿ)ಕ** – ಝರಿ, ಗಿರಿನದಿ
**ಅಬಿ(ವಿ)ಕಸು** – ಸುಡು; ಅತಿಕ್ರಮಿಸು; ಹೆದರಿಸು
**ಅರ್ಭಕ** – ಮಗು
**ಅರ್ಭಕೋದರೆ** – ಬಸರಿಮರ
**ಅರ್ವುವಡೆ** – ಹೆಚ್ಚಿಗೆಯಾಗು
**ಅರ್ಹ** – (ಜೈನ) ತೀರ್ಥಂಕರ; ಜೈನಮುನಿ
**ಅರ್ಹಚ್ಛಾಸನ** – (ಜೈನ) ಜಿನನ ಆಜ್ಞೆ; ಜೈನಧರ್ಮ
**ಅರ್ಹತ್ಪದ** – ತೀರ್ಥಂಕರ ಪದವಿ; ತೀರ್ಥಂಕರನ ಪಾದ
**ಅರ್ಹತ್ಪರಮೇಶ್ವರ** – ತೀರ್ಥಂಕರಸ್ವಾಮಿ
**ಅರ್ಹತ್ಪ್ರತಿಬಿಂಬ** – ತೀರ್ಥಂಕರನ ಮೂರ್ತಿ
**ಅರ್ಹತ್ಪ್ರತಿಮೆ** – ಅರ್ಹತ್ಪ್ರತಿಬಿಂಬ
**ಅರ್ಹತ್ಪ್ರವಚನ** – ತೀರ್ಥಂಕರನ ಉಪದೇಶ
**ಅರ್ಹದಾಲಯ** – ಬಸದಿ
**ಅರ್ಹದ್ದೀಕ್ಷೆ** – ಜೈನದೀಕ್ಷೆ
**ಅರ್ಹದ್ದೇವ** – ಪೂಜ್ಯನಾದ ಜಿನ
**ಅರ್ಹದ್ರೂಪ** – ಜಿನರೂಪ
**ಅರ್ಹನ್ಮತ** – ಜೈನಮತ
**ಅರ್ಹನ್ಮಾರ್ಗ** – ಜೈನಮಾರ್ಗ, ಜೈನಮತ
**ಅರ್ಹಲ್ಲಕ್ಷ್ಮಿ** – (ಜೈನ) ಮೋಕ್ಷಲಕ್ಷ್ಮಿ
**ಅಲ್** – ಬೇಡ ಎಂಬರ್ಥ (ಉದಾ: ಮುನಿಯಲ್ ಎಂದರೆ ಮುನಿಯಬೇಡ)
**ಅಲ(ಳ)ಕ** – ಮುಂಗುರುಳು
**ಅಲಂ(ಳಂ)ಕರಣ** – ಅಲಂಕಾರ ಮಾಡುವುದು
**ಅಲಂಕರಿಷ್ಣು** – ಅಲಂಕರಿಸುವವನು
**ಅಲಂ(ಳಂ)ಕೃತಿ** – ಅಲಂಕಾರ
**ಅಲಂಕೃತಿವೆಱು** – ಅಲಂಕಾರವನ್ನು ಪಡೆ
**ಅಲಂಕೃತೆ** – ಅಲಂಕಾರಗೊಂಡವಳು
**ಅಲಂಕ್ರಿಯಾರಚನೆ** – ಅಲಂಕಾರ ಸೃಷ್ಟಿ
**ಅಲಂ(ಳಂ)ಕ್ರಿಯೆ** – ಅಲಂಕಾರ ಮಾಡುವುದು
**ಅಲಂಘನೀಯ** – ದಾಟಬಾರದ
**ಅಲಂಘ್ಯ** – ಅಲಂಘನೀಯ
**ಅಲಂಘ್ಯತೇಜ** – ಮೀರಲಾಗದ ತೇಜಸ್ಸುಳ್ಳವನು
**ಅಲಂಘ್ಯತ್ವ** – ದಾಟಲಾಗದ್ದು
**ಅಲಂಘ್ಯಬಲ** – ಮೀರಲಾಗದ ಶಕ್ತಿಯವನು
**ಅಲಂಪಚಿಯಾಗು** – ಸಂತೋಷ ಹೆಚ್ಚು
**ಅಲಂಪಿಕ್ಕು** – ಲೇಪನ ಮಾಡು, ಬಳಿ
**ಅಲಂಪು** – ಪ್ರೀತಿ; ಸೊಗಸು; ಆಳವಾದ ಬಯಕೆ; ಅತಿಶಯ; ಮೇಲ್ಮೆ
**ಅಲಂಪುಗೊಳ್** – ಅಲಂಕಾರ ಮಾಡಿಕೊ
**ಅಲಂಪುವಡೆ** – ಸಂತೋಷ ಹೊಂದು
**ಅಲಂಪುವೆರಸು** – ಪ್ರೀತಿಯಿಂದ ಕೂಡು
**ಅಲಂಪುವೋಗು** – ತೃಪ್ತಿ ಹೊಂದು; ಸಂತೋಷಗೊಳ್ಳು
**ಅಲಂಪೋಡು** – ಸಂತೋಷವಾಗು

**ಅಲ(ಳ)ಕ** – ಮುಂಗುರುಳು
**ಅಲ(ಳ)ಕೆ** – ಕುಬೇರನ ರಾಜಧಾನಿ
**ಅಲಕ್ತ(ಕ)** – ಅರಗು
**ಅಲಕ್ತ(ಕ)ಚ್ಛವಿ** – ಅರಗಿನ ಕೆಂಪು ಬಣ್ಣದ ಹೊಳಪು
**ಅಲಕ್ತ(ಕ)ದ್ರವ** – ಅರಗಿನ ರಸ
**ಅಲಕ್ತ(ಕ)ರಸ** – ಅಲಕ್ತ(ಕ)ದ್ರವ
**ಅಲಕ್ಷ್ಮಿ** – ಬಡತನ
**ಅಲಗಣಸು** – ಪ್ರತಿಸ್ಪರ್ಧಿ; ಅಸಮಾಧಾನ
**ಅಲಗಂಬು** – ಹರಿತವಾದ ಅಲಗಿನ ಬಾಣ
**ಅಲಗು** – ಆಯುಧಗಳ ಹರಿತವಾದ ಮಗ್ಗುಲು; ಕತ್ತಿ; ಬಾಣ
**ಅಲಗೆ** – ಒಂದು ಬಗೆಯ ಹುಲ್ಲು; ಅದರ ಹಗ್ಗ
**ಅಲಗೆಗಟ್ಟು** – ಹುಲ್ಲನ್ನು ತಲೆಗೆ ಕಟ್ಟು; ಪಣ ತೊಡು
**ಅಲಘುತರ** – ತುಂಬ ತೂಕವುಳ್ಳ; ಮಹತ್ತರವಾದ
**ಅಲಘುಭುಜ** – ಉದ್ದ ತೋಳು
**ಅಲತ(ತಿ)ಗೆ** – ಅರಗು
**ಅಲಪು** – ತೊಂದರೆ
**ಅಲರ್** – ಬಿರಿ; ಅರಳು; ಹೂವು
**ಅಲರಂಬ** – ಕಾಮ
**ಅಲರಂಬು** – ಹೂಬಾಣ
**ಅಲರಾಯ್** – ಹೂ ತಿರಿ
**ಅಲರೆಸಱ್** – ಹೂವಿನ ಪಕಳೆ
**ಅಲರೊದ್ದೆ** – ಹೂ ರಾಶಿ
**ಅಲರೋಱ** – ಹೂಸಾಲು, ರಾಶಿ
**ಅಲವರು** – ಆಸೆಪಡು
**ಅಲರ್ಕೆ** – ಅಲರಿಕೆ, ಬಿರಿಯುವುದು
**ಅಲರ್ಗಂಪು** – ಹೂವಿನ ಪರಿಮಳ
**ಅಲರ್ಗಟ್ಟು** – ಹೂವನ್ನು ಪೋಣಿಸು
**ಅಲರ್ಗಣ್** – ಹೂವಿನಂತಹ ಕಣ್ಣು
**ಅಲರ್ಗಣೆ** – ಹೂಬಾಣ
**ಅಲರ್ಗಣೆಯ** – ಹೂಬಾಣವುಳ್ಳವನು, ಮನ್ಮಥ
**ಅಲರ್ಗಣ್ಣ** – ಹೂವಿನಂತಹ ಕಣ್ಣುಳ್ಳವನು, ವಿಷ್ಣು
**ಅಲರ್ಗಳಂ**– ಅಡೆತಡೆಯಿಲ್ಲದೆ
**ಅಲರ್ಗುಡಿ** – ಹೂವಿನ ತುದಿ; ಹೂಗೊಂಚಲು
**ಅಲರ್ಗೊಂಚಲ್** – ಹೂಗೊಂಚಲು
**ಅಲರ್ಚು** – ಅರಳಿಸು
**ಅಲರ್ಜೊಂಪ** – ಹೂಗೊಂಚಲು
**ಅಲರ್ದುಱುಗಲ್** – ಹೂವಿನ ರಾಶಿ
**ಅಲರ್ದೊಂಗಲ್** – ಹೂಗೊಂಚಲು
**ಅಲರ್ಮಱಿ** – ಹೂಮಳೆ
**ಅಲರ್ವಂಡು** – ಹೂವಿನ ಬಂಡು, ರಸ
**ಅಲರ್ವಕ್ಕಿ** – ದುಂಬಿ
**ಅಲರ್ವಚ್ಚ** – ಹೂವಿನ ತೊಡಿಗೆ
**ಅಲರ್ವಡಿಗ** – ಹೂವಾಡಿಗ
**ಅಲರ್ವಡೆ** – ಹೂವನ್ನು ಪಡೆ
**ಅಲರ್ವಸೆ** – ಹೂವಿನ ಹಸೆ(ಮಣೆ), ಹೂ ಹಾಸಿಗೆ
**ಅಲರ್ವಾಸು** – ಹೂ ಹಾಸಿಗೆ
**ಅಲರ್ವಿಲ್** – ಹೂವಿನ ಬಿಲ್ಲು
**ಅಲರ್ವಿಲ್ಲ** – ಮನ್ಮಥ
**ಅಲರ್ವಿಲ್ಲರಸ** – ಅಲರ್ವಿಲ್ಲ
**ಅಲರ್ವುಡಿ** – ಹೂವಿನ ಪರಾಗ
**ಅಲರ್ವೋಗು** – ಹೂ ಬಿಡು
**ಅಲವರಲ್** – ಚಿಂತಿಸು
**ಅಲವರಿಕೆ** – ಹಟ, ಪಟ್ಟು
**ಅಲವರಿಸು** – ಆಸೆಪಡು; ಹಂಬಲಿಸು
**ಅಲಸ** – ಸೋಮಾರಿ
**ಅಲಸಂಬೆಱು** – ಆಲಸ್ಯ ಹೊಂದು; ಬಳಲು
**ಅಲಸಗಮನೆ** – ಮಂದಗಮನೆ
**ಅಲಸಗಾಮಿನಿ** – ಮಂದಗಮನೆ
**ಅಲಸಯಾನ** – ಮಂದಗಮನ
**ಅಲಸಿಕೆ** – ದಣಿವು; ನಿಧಾನ; ಅಲಕ್ಷ್ಯ
**ಅಲಸಿಸು** – ದಣಿವುಗೊಳಿಸು
**ಅಲಸು** – ಬಳಲು, ದಣಿ; ಬಳಲಿಕೆ
**ಅಲಱು** – ನಾಶವಾಗು; ಚದುರು
**ಅಲಾತಚಕ್ರ** – ಪಂಜನ್ನು ವೇಗವಾಗಿ ತಿರುಗಿಸಿದಾಗ ಉಂಟಾಗುವ ವೃತ್ತ
**ಅಲಾಬು** – ಸೋರೆ ಗಿಡ, ಕಾಯಿ, ಬುರುಡೆ
**ಅಲಾಭ** – ಲಾಭ ಸಿಕ್ಕದಿರುವುದು; (ಜೈನ) ಮುನಿಗೆ ಚರಿಗೆಯಲ್ಲಿ ಭಿಕ್ಷೆ ದೊರೆಯದಿರುವುದು
**ಅಳಿ(ಳ)ನಿ** – ಹೆಣ್ಣು ದುಂಬಿ
**ಅಲು(ಂ)ಬು** – ನೀರಿನಿಂದ ಶುದ್ಧಿ ಮಾಡು; ಕಾಲು ತೊಳೆದ ನೀರು
**ಅಲುಗು** – ಅಲ್ಲಾಡು; ಅಲ್ಲಾಡಿಸು
**ಅಲುಪ** – (ಅಲ್ಪ) ಸಣ್ಣದಾದ; ಕ್ಷುದ್ರ
**ಅಲೆ** – ಸಂಚರಿಸು; ಸೋಲಿಸು; ನಿವಾರಿಸು; ತಾಗು; ತೊಳೆ; ತರಂಗ; ತೊಂದರೆಪಡಿಸು
**ಅಲೆಪ** – ಬೀಸುವಿಕೆ; ಸಂಚಾರ
**ಅಲೆ(ಲ)ಪು** – ಬೀಸುವಿಕೆ; ಕಾಟ; ಸಂಚಾರ
**ಅಲೋಕನವಿದ್ಯೆ** – ಅದೃಶ್ಯವಾಗುವ ವಿದ್ಯೆ
**ಅಲೋಕಾಕಾಶ** – (ಜೈನ) ಲೋಕದ ಹೊರಗಿನ ಆಕಾಶ; ಸಿದ್ಧರು ಇರುವ ಸ್ಥಳ
**ಅಲ್ಗು** – ಅಳ್ಳಾಡು
**ಅಲ್ಪ** – ಚಿಕ್ಕದಾದ; ನೀಚ
**ಅಲ್ಪದಶನದಂಶ** – ಹಲ್ಲಿನಿಂದ ಸ್ವಲ್ಪ ಕಚ್ಚುವುದು
**ಅಲ್ಪವೃಷ್ಟಿ** – ಸ್ವಲ್ಪ ಮಳೆ
**ಅಲ್ಪವ್ಯಾಹಾರಿ** – ಮಿತಭಾಷಿ
**ಅಲ್ಪಶ್ರುತ** – ಕಡಿಮೆ ತಿಳಿದವನು
**ಅಲ್ಪಸುಖ** – ಸ್ವಲ್ಪ ಸುಖ
**ಅಲ್ಪಸುಖಾಶಿ** – ಸ್ವಲ್ಪ ಸುಖಕ್ಕೆ ಆಸೆ ಪಡುವವನು
**ಅಲ್ಪಾಯು(ಷ)** – ಕಡಿಮೆ ಆಯುಸ್ಸುಳ್ಳವನು
**ಅಲ್ಪೋಪಜಲ್ಪ** – ಮಿತ ನುಡಿ; ಮಿತಭಾಷಿ
**ಅಲ್ಲ** – ಹಸಿ ಶುಂಠಿ

**ಅಲ್ಲಕಲ್ಲೋಲ** – ಅಲ್ಲೋಲಕಲ್ಲೋಲ; ಕ್ಷೋಭೆ
**ಅಲ್ಲಣಿಗೆ** – ಮೇಳ, ವಿನೋದ
**ಅಲ್ಲಣಿಗೆಗಾಳಗ** – ವಿನೋದ ಯುದ್ಧ
**ಅಲ್ಲಣಿಗೆಮುಳಿಸು** – ಹುಸಿಮುನಿಸು
**ಅಲ್ಲದ(ವ)ಲ್ಲಣಿಗೆ** – ಹಸಿ ಶುಂಠಿಯ ಮಿಶ್ರಣ
**ಅಲ್ಲಳ** – ಅಲ್ಲಣಿಗೆ
**ಅಲ್ಲಳಗಾಳಗ** – ಅಲ್ಲಣಿಗೆಗಾಳಗ
**ಅಲ್ಲಾಟ** – ಅಲುಗಾಡು; ಚಾಂಚಲ್ಯ
**ಅಲ್ಲಾ(ಳ್ಳಾ)ಡಿಸು** – ಅಲುಗಾಡಿಸು; ಹೆದರಿಸು
**ಅಲ್ಲಾ(ಳ್ಳಾ)ಡು** – ಅಲುಗಾಡು; ನಡುಗು
**ಅಲ್ಲಿ** – ಆ ಸ್ಥಳ, ಆ ಜಾಗ
**ಅಲ್ಲಿಂ** – ಅಲ್ಲಿಂದ, ಅದಕ್ಕಿಂತ
**ಅಲ್ಲಿದ** – ಅಲ್ಲಿ ಹುಟ್ಟಿದವನು
**ಅಲ್ಲೋಲಕಲ್ಲೋಲ** – ಕ್ಷೋಭೆ
**ಅವಕರ್ಣಿಸು** – ಕೇಳು; ಕಡೆಗಣಿಸು
**ಅವಕಾಶಂಗುಡು** – ಎಡೆಮಾಡಿಕೊಡು
**ಅವಕೀರ್ಣ** – ಕೆದರಿದ; ಆವರಿಸಿದ
**ಅವಕುಂಠಿತ** – ಮರೆಮಾಚಲ್ಪಟ್ಟ
**ಅವಕುಟ್ಟು** – ಕಿರಿಕಿರಿಯಾಗು
**ಅವಕೇಶಿ** – ಬಂಜೆ
**ಅವಕ್ಕನೆ** – ತಟಕ್ಕನೆ
**ಅವಕ್ರಿಯೆ** – ನಿರರ್ಥಕ ಕೆಲಸ
**ಅವಗಂಧ** – ಕೆಟ್ಟ ವಾಸನೆ
**ಅವಗಡ** – ಸಾಹಸ; ತೊಂದರೆ; ಅಶಕ್ಯವಾದ
**ಅವಗಡಿಸು** – ಕಡೆಗಣಿಸು; ಸೋಲಿಸು; ವಿರೋಧಿಸು; ಹರಡಿಕೊ
**ಅವಗತ** – ಕಳೆದುಹೋದ
**ಅವಗಮ(ನ)** – ಅರಿವು, ತಿಳಿವಳಿಕೆ
**ಅವಗಮ್ಯ** – ತಿಳಿಯಬಹುದಾದ
**ಅವಗಯಿಸು** – ತಿಳಿದುಕೊ; ತೋರಿಸು; ತಿರಸ್ಕರಿಸು
**ಅವಗಹನ** – ಮುಳುಗಿ ಸ್ನಾನಮಡು; (ಜೈನ) ಮುಕ್ತಾತ್ಮದ ಎಂಟು ಗುಣಗಳಲ್ಲಿ ಒಂದು; ಮುಕ್ತಜೀವನದಲ್ಲಿ ಅನೇಕ ಸಿದ್ಧಜೀವಿಗಳು ಸೇರುವ ಅವಕಾಶ
**ಅವಗಟಿ** – ಆಧಿಕ್ಯ
**ಅವಗಟಿಯ** – ಅತಿಶಯ; ರಭಸದಿಂದ ನುಗ್ಗುವುದು
**ಅವಗಟಿಯಿಸು** – ಅಧಿಕವಾಗು; ಮೇಲೆ ಮೇಲೆ ಬರು; ಉರವಣಿಸು, ಅತಿಶಯವಾಗು
**ಅವಗಾಢ** – ಮುಳುಗಿದ; ತನ್ಮಯಗೊಂಡ
**ಅವಗಾಹ** – ಉದ್ದಳತೆ
**ಅವಗಾಹ(ನ)** – ಮುಳುಗುವಿಕೆ; ಸ್ನಾನ; ಧಾರಣಶಕ್ತಿ
**ಅವಗಾಹನಮಿರ್** – ಮುಳುಗಿರು; ಮಗ್ನವಾಗಿರು
**ಅವಗಾಹಪ್ರದ** – ಮುಳುಗಿಸತಕ್ಕ
**ಅವಗಾಹಿತ** – ಒಳಗೊಂಡ; ಮನನ ಮಾಡಿದ
**ಅವಗಾಹಿಸು** – ಮುಳುಗಿ ಸ್ನಾನಮಾಡು
**ಅವಗುಣ** – ಕೆಟ್ಟ ಗುಣ
**ಅವಗುಣಿ** – ದುರ್ಗುಣಿ
**ಅವಗೂಹನ** – ಮರೆಮಾಡುವುದು
**ಅವಗೂಹಿತ** – ಮರೆಮಾಚಲ್ಪಟ್ಟ
**ಅವಗೈಸು** – ಹೊಂದಿರು
**ಅವಗೃಹ್ಯಮಾಣ** – ಹಿಡಿಯಲ್ಪಟ್ಟ
**ಅವಗ್ರಹ** – (ಜೈನ) ಅವಗ್ರಹ, ಈಹಾ, ಅವಾಯ ಮತ್ತು ಧಾರಣ ಎಂಬ ನಾಲ್ಕು ಪ್ರತ್ಯಕ್ಷ ಪ್ರಮಾಣಗಳಲ್ಲಿ ಮೊದಲನೆಯದು
**ಅವಘಾಟಕ** – ಮಧ್ಯೆ ಮಧ್ಯೆ ಮುತ್ತುಗಳಿರುವ ಹಾರ
**ಅವಚಂಬಡು** – ಅವರ್ಣನೀಯವಾಗು
**ಅವಚವಿಸು** – ಕಾಂತಿ ಕಳೆದುಕೊ
**ಅವಚಱಾಗಿಸು** – ಬೇಸರಪಡಿಸು
**ಅವಚಱು(ಱ)** – ಬೇಸರ; ಜಿಗುಪ್ಸೆ
**ಅವಚು** – ಅವಚಱು(ಱ)
**ಅವಚೂಲ** – ಬಾವುಟದ ತುದಿಗೆ ಕಟ್ಟಿರುವ ಅಲಂಕಾರದ ಕುಚ್ಚು
**ಅವಚ್ಛನ್ನ** – ಮುಚ್ಚಲಾದ
**ಅವಚ್ಛಿನ್ನ** – ಕತ್ತರಿಸುವುದು
**ಅವಜ್ಞೆ(ಗೆಯ್)** – ಅಲಕ್ಷ್ಯ(ಮಾಡು)
**ಅವಟಯ್ಸು** – ಒಪ್ಪಿಸು, ಉಂಟುಮಾಡು; ಒಟ್ಟಾಗು; ಹರಡುವಂತೆ ಮಾಡು; ಯತ್ನಿಸು
**ಅವಡೀನ** – ಹಾರುತ್ತ ಕೇಳಗಿಳಿಯುವುದು
**ಅವತಂಸ** – ಆಭರಣ; ಅಲಂಕಾರಪ್ರಾಯ
**ಅವತರಣ** – ಇಳಿಯುವುದು
**ಅವತರಿಸು** – ಇಳಿದು ಬಾ; ಉಂಟಾಗು; ನೆಲೆಗೊಳಿಸು
**ಅವತಾರ** – ಇಳಿಸುವಿಕೆ; ದೇವರು ಭೂಮಿಯಲ್ಲಿ ಜನ್ಮ ತಾಳುವುದು; ನಿರೂಪಣೆ; (ಜೈನ) ಎಂಟು ಬಗೆಯ ಗರ್ಭಾನ್ವಿತಕ್ರಿಯೆಗಳಲ್ಲಿ ಒಂದು
**ಅವತಾರಕ್ರಿಯೆ** – (ಜೈನ) ತೀರ್ಥಂಕರನಾಗುವವನ ಜೀವ ತಾಯ ಗರ್ಭವನ್ನು ಹೊಗುವುದು
**ಅವತಾರಲೇಖಪತ್ರ** – ಜನ್ಮವೃತ್ತಾಂತವಿರುವ ಬರವಣಿಗೆ
**ಅವತಾರಾಕೃತಿ** – ದೇವರು ಅವತಾರ ಮಾಡಿದಾಗ ಹೊಂದುವ ಆಕೃತಿ
**ಅವತೀರ್ಣ** – ಇಳಿಸಲ್ಪಟ್ಟ; ಇಳಿದ; ದಾಟಿದ; ಬಂದು ಸೇರಿದ
**ಅವತೆ** – ಅವಸ್ಥೆ, ಹೀನಸ್ಥಿತಿ
**ಅವದಂಶ** – ಚಾಕಣ; ಮದ್ಯದ ಜೊತೆ ನಂಜಿಕೊಳ್ಳುವ ತಿಂಡಿ
**ಅವದಾತ** – ಬೆಳ್ಳಗಿರುವ; ಸುಂದರವಾದ
**ಅವದಾತಕೀರ್ತಿ** – ಪರಿಶುದ್ಧ ಕೀರ್ತಿವಂತ
**ಅವದಾತಯಶ** – ಅವದಾತಕೀರ್ತಿ
**ಅವದ್ಯ** – ನಿಕೃಷ್ಟ, ಅಧಮ
**ಅವಧರಿಸು** – ಕೇಳು; ಮನಸ್ಸಿಗೆ ತಂದುಕೊ
**ಅವಧಾತೃ** – ಏಕಚಿತ್ತತೆಯಿರುವವನು

**ಅವಧಾನ** – ಏಕಚಿತ್ತತೆ; ಎಚ್ಚರಿಕೆ
**ಅವಧಾರಣ(ಣೆ)** – ಒತ್ತು; ನಿರ್ಣಯ
**ಅವಧಾರಿಸು** – ಸೈರಿಸು; ಲಕ್ಷ್ಯದಲ್ಲಿರಿಸಿಕೊ
**ಅವಧಾರು** – ಹಿರಿಯರ ಗಮನ ಸೆಳೆಯುವ ಮಾತು
**ಅವಧಿಜ್ಞಾನ** – (ಜೈನ) ಎಂಟು ಬಗೆಯ ಜ್ಞಾನಗಳಲ್ಲಿ ಒಂದು; ಇದರಲ್ಲಿ ಮೂರು ಬಗೆ: ದೇಶಾವಧಿ, ಪರಮಾವಧಿ, ಸರ್ವಾವಧಿ
**ಅವಧಿಜ್ಞಾನಾವರಣೀಯ** – (ಜೈನ) ಅವಧಿಜ್ಞಾನವನ್ನು ಮುಚ್ಚುವ ಕರ್ಮ
**ಅವಧಿಜ್ಞಾನಿ** – ಅವಧಿಜ್ಞಾನವಿರುವವನು
**ಅವಧಿದಿವಸ** – ಗಡುವಿನ ದಿವಸ
**ಅವಧಿಬೋಧ** – ಅವಧಿಜ್ಞಾನ
**ಅವಧಿವಿಬೋಧ** – ಅವಧಿಜ್ಞಾನ
**ಅವಧೀರಿತ** – ತಿರಸ್ಕೃತಗೊಂಡ
**ಅವಧೀರಿಸು** – ಕಡೆಗಣಿಸು; ತಿರಸ್ಕರಿಸು
**ಅವಧೂತ** – ತಳ್ಳಲ್ಪಟ್ಟ
**ಅವನ** – ರಕ್ಷಣೆ
**ಅವನತ** – ಬಗ್ಗಿದ, ನಮ್ರವಾದ; ಕೆಳಸ್ಥಿತಿಯಲ್ಲಿರುವ
**ಅವನದ್ಧ** – ಕಟ್ಟಲ್ಪಟ್ಟ; ಆವೃತಗೊಂಡ
**ಅವನಿಚಕ್ರ** – ಭೂಮಂಡಲ
**ಅವನಿಜ** – ಮರಗಿಡ
**ಅವನಿಪ** – ಭೂಮಿಯ ರಕ್ಷಕ, ರಾಜ
**ಅವನಿಭೃತ್** – ರಾಜ
**ಅವನಿಸು** – ಕಾಪಾಡು
**ಅವನೀಜಾತ** – ಮರಗಿಡ
**ಅವನೀತಳಪತಿ** – ಅವನಿಪತಿ
**ಅವಬೋಧ** – ಜಾಗ್ರತಗೊಳ್ಳುವುದು; ಜ್ಞಾನ
**ಅವಭಾಸ** – ಕಾಂತಿ, ಹೊಳಪು
**ಅವಭಾಸಮಾನ** – ಕಾಂತಿಯುಕ್ತ
**ಅವಭೃತಸವನ** – ಯಾಗದಂತಹ ಮಹತ್ಕಾರ್ಯ ಮುಗಿದ ಬಳಿಕ ಮಾಡುವ ಮಂಗಳಸ್ನಾನ
**ಅವಭೃತಸ್ನಾನ** – ಅವಭೃತಸವನ
**ಅವಮೆ** – ಅಮಾವಾಸ್ಯೆ
**ಅವಮೋದರ್ಯ** – (ಜೈನ) ಒಂದು ಬಗೆಯ ತಪಸ್ಸು; ಆಹಾರದಲ್ಲಿ ಒಂದೊಂದು ತುತ್ತು ಕಡಿಮೆ ಮಾಡುತ್ತ, ಕೊನೆಗೆ ಒಂದು ತುತ್ತಿಗೆ ಸೀಮಿತಗೊಳಿಸುವ ಕ್ರಮ
**ಅವಯವ** – (ದೇಹದ) ಅಂಗ; ಶ್ರಮರಹಿತ, ಸುಲಭ; ಅಲಕ್ಷ್ಯ
**ಅವರಜ** – ತಮ್ಮ
**ಅವರಜೆ** – ತಂಗಿ
**ಅವರಿ(ರೆ)** – ಅಪ್ಸರೆ
**ಅವರುದ್ಧ** – ತಡೆಗಟ್ಟಲ್ಪಟ್ಟ
**ಅವರೋಧ** – ಪ್ರತಿಬಂಧ; ಅಂತಃಪುರ
**ಅವರೋಧಜನ** – ಅಂತಃಪುರಸ್ತ್ರೀಯರಂ
**ಅವಲ್** – ಕುಟ್ಟುವಿಕೆ; ಅವಲಕ್ಕಿ
**ಅವಲಂಬಿ** – ಆಶ್ರಯ ಪಡೆದ
**ಅವಲಂಬಿಸು** – ಆಶ್ರಯ ಪಡೆ
**ಅವಲಿಪ್ತ** – ಲೇಪಿಸಿದ; ಅಹಂಕಾರಿ
**ಅವಲೀಢ** – ನೆಕ್ಕಲ್ಪಟ್ಟ; ವ್ಯಾಪಿಸಿದ
**ಅವವಲೇಪ** – ಸೊಕ್ಕು, ಮದ
**ಅವಲುಪ್ತ** – ಲೋಪಗೊಳಿಸಿದ
**ಅವಲುಪ್ತಫಲ** – ಫಲವನ್ನು ಕಳೆದುಕೊಂಡ
**ಅವಲೋ(ಕೋ)ಕಿನಿ(ೀ)ವಿದ್ಯೆ** – (ಜೈನ) ದೂರದಲ್ಲಾಗುವುದನ್ನು ತಿಳಿಯಲು ಸಹಾಯಕವಾದ ವಿದ್ಯೆ
**ಅವಲೋ(ಕೋ)ಕಿಸು** – ನೋಡಿ
**ಅವಲ್ಮಾಡು** – (ಅವಲಕ್ಕಿಯಂತೆ) ಕುಟ್ಟು
**ಅವಶಿಷ್ಟ** – ಉಳಿದ
**ಅವಶೀರ್ಣ** – ನಾಶವಾದ
**ಅವಶೀರ್ಯಮಾಣ** – ಅರಳುತ್ತಿರುವ
**ಅವಶೇಷ** – ಉಳಿದ; ಶೇಷ
**ಅವಶ್ಯಾಯ** – ಹಿಮ
**ಅವಷ್ಟಂಭ** – ಆಶ್ರಯ; ಸ್ಥೈರ್ಯ; ಗರ್ವ
**ಅವಷ್ಟಂಭಿಸು** – ಆಸ್ರಯಿಸು; ಹೆಮ್ಮೆಪಡು
**ಅವಸಕ್ತ** – ತನ್ಮಯವಾದ
**ಅವಸರ** – ಅವಕಾಶ; ಸಂದರ್ಭ
**ಅವಸರಂಗುಡಿಸು** – ಅವಕಾಶಕೊಡಿಸು
**ಅವಸರಂಬಡೆ** – ಅವಕಾಶ ಪಡೆ
**ಅವಸರಂಬಾರ್** – ಸಮಯ ನಿರೀಕ್ಷಿಸು
**ಅವಸರೋಚಿತ** – ಸಮಯೋಚಿತ
**ಅವಸರ್ಪಣ** – ಇಳಿಕೆ; (ಜೈನ) ಮನುಷ್ಯರ ಆಯುಸ್ಸು, ಸುಖ ಮುಂತಾದುವು ಕ್ರಮವಾಗಿ ಇಳಿಕೆಗೊಳ್ಳುವ ಕಾಲ
**ಅವಸರ್ಪಿಣಿ** – ಅವಸರ್ಪಣ; ಇದರಲ್ಲಿನ ಆರು ಕಾಲಭೇದಗಳು: ಸುಷಮಸುಷಮ, ಸುಷಮ, ಸುಷಮದುಷ್ಷಮ, ದುಷ್ಷಮಸುಷಮ, ದುಷ್ಷಮ, ಅತಿದುಷ್ಷಮ
**ಅವಸಾನ** – ಕೊನೆ; ಸಾವು
**ಅವಸಾನಕಾಲ** – ಕೊನೆಗಾಲ
**ಅವಸ್ಕಂದ(ನ)** – ಮುತ್ತಿಗೆ
**ಅವಸ್ತು** – ಕಃಪದಾರ್ಥ
**ಅವಸ್ತುಭೂತ** – ನಿಷ್ಪ್ರಯೋಜಕ; ಏನೂ ಆಸ್ತಿಯಿಲ್ಲದವನು; ಅಲ್ಪ
**ಅವಸ್ಥಾಂತರ** – ಮತ್ತೊಂದು ಅವಸ್ಥೆ; ಕಷ್ಟಕಾಲ
**ಅವಸ್ಥಾನ** – ನೆಲೆ; ಸನ್ನಿವೇಶ; ಮಲ್ಲಯುದ್ಧದ ಒಂದು ವರಸೆ
**ಅವಸ್ಪಂದ** – ಪ್ರತಿಕ್ರಿಯಾರಹಿತ
**ಅವಹಿತ** – ಗಮನವಿತ್ತ
**ಅವಹಿತಧ್ಯಾನ** – ಧ್ಯಾನಮಮಗ್ನನಾದ
**ಅವಹಿತಭಾವ** – ಭಾವವನ್ನು ಅಡಗಿಸಿಕೊಳ್ಳುವುದು
**ಅವಾಗ್ಗೋಚರ** – ವರ್ಣನೆಗೆ ಸಿಕ್ಕದ
**ಅವಾಗ್ವಿಷಯ** – ಮಾತಲ್ಲಿ ಹೇಳಲಾಗದ

**ಅವಾಙ್ಮ(ಙ್ಮಾ)ನಸಗೋಚರ** – ಮಾತು–ಮನಸ್ಸುಗಳಿಗೆ ನಿಲುಕದ–

**ಅವಾಚೀದಿಗ್ವಿಜಯ** – ದಕ್ಷಿಣ ದಿಕ್ಕನ್ನು ಗೆಲ್ಲುವುದು

**ಅವಾಚ್ಯ** – ಹೇಳಲಾಗದ

**ಅವಾಪ್ತ** – ಪಡೆಯಬಹುದಾದ

**ಅವಾಮ** – ಬಲಗಡೆಯ

**ಅವಾಮವೃತ್ತಿವರ್ತನ** – ಋಜುಮಾರ್ಗಾನುಸಾರಿ; ಎಡದಿಂದ ಬಲಕ್ಕೆ ಸುತ್ತುವ

**ಅವಾರಪಾರ** – ಕೊನೆಯಿಲ್ಲದ

**ಅವಾರ್ಯವೀರ್ಯ** – ತಡೆಯಲಾದ ಸಾಮರ್ಥ್ಯವಿರುವ

**ಅವಿ** – ಅವಿತುಕೊ; ಕುರಿ

**ಅವಿಕಲ(ಳ)** – ಕೊರತೆಯಿಲ್ಲದ, ನ್ಯೂನತೆಯಿಲ್ಲದ

**ಅವಿನ್ನಾ(ನಾ)ಣ** – (ಅಭಿಜ್ಞಾನ) ಗುರುತು, ಕುರುಹು

**ಅವಿಕಲ್ಪ** – ವಿಕಾರವಿಲ್ಲದ

**ಅವಿಕಾರಿ** – ವಿಕಾರವಿಲ್ಲದವನು

**ಅವಿಚಲಿ(ಳಿ)ತ** – ನಿಶ್ಚಲವಾದ

**ಅವಿಚಾರ** – ಯೋಚನೆ ಮಾಡದಿರುವುದು

**ಅವಿಚಾರಿತರಮಣೀಯ** – ವಿಚಾರ ಮಾಡದಿದ್ದಾಗ ಸುಂದರವಾಗಿ ಕಾಣುವ; ತೋರಿಕೆಯ ಸೌಂದರ್ಯವುಳ್ಳ

**ಅವಿಚ್ಛಿನ್ನ** – ನಿರಂತರವಾದ

**ಅವಿಜ್ಞೇಯ** – ತಿಳಿಯಲಾಗದ

**ಅವಿತಥ** – ಸುಳ್ಳಲ್ಲದ, ನಿಶ್ಚಯ

**ಅವಿದಿಡು** – ಮೊರೆಯಿಡು; ಹಬ್ಬು

**ಅವಿದಿತ** – ತಿಳಿಯದ

**ಅವಿಧಾ** – "ಕಾಪಾಡಿ" ಎಂಬ ಮೊರೆಯ ಕೂಗು

**ಅವಿಧೃತೋದ್ರೇಕ** – ಉದ್ವೇಗರಹಿತವಾದ; ವೇಗವನ್ನು ಕಳೆದುಕೊಳ್ಳುವ

**ಅವಿಧೋ** – ಅವಿಧಾ

**ಅವಿನಯ** – ಕೆಟ್ಟ ನಡವಳಿಕೆ

**ಅವಿನಾ(್ಣ)ಣ** – (ಅಭಿಜ್ಞಾನ) ಗುರುತು

**ಅವಿನಾಭಾವಿ** – ಸದಾ ಕೂಡಿರುವ, ಜೊತೆಗಿರುವ

**ಅವಿನಾಭಾವಿ** – ಸದಾ ಕೂಡಿರುವ, ಜೊತೆಗಿರುವ

**ಅವಿಪಾಕನಿರ್ಜರೆ** – (ಜೈನ) ಕರ್ಮವು ಉದಯವಾಗಿ ಫಲ ಕೊಡುತ್ತಿದ್ದರೂ ರಾಗದ್ವೇಷರಹಿತವಾದ ಆತ್ಮನಿಗೆ ಹೊಸ ಕರ್ಮಗಳ ಬಂಧವಾಗದು ಹಾಗೂ ಹಿಂದಿನ ಕರ್ಮಗಳು ಉದುರಿ ಹೋಗುತ್ತವೆ ಎಂಬ ತತ್ವ

**ಅವಿಭಕ್ತಸ್ನೇಹೆ** – ಅಖಂಡಪ್ರೀತಿಯುಳ್ಳವಳು

**ಅವಿಭಾವ್ಯ** – ಯೋಚಿಸಿ ತಿಳಿಯಲಾರದ; ಗುರುತು ಹಚ್ಚಲಾಗದ

**ಅವಿಮಧೂತ** – (ಜೈನ) ದರ್ಶನ ಮೋಹನೀಯಗಳಲ್ಲಿ ಒಂದು

**ಅವಿರತಂ** – ನಿರಂತರವಾಗಿ

**ಅವಿರಲ(ಳ)** – ದಟ್ಟವಾದ, ಬಿಡುವಿಲ್ಲದ

**ಅವಿರಳಗೊಳ್** – ಒತ್ತಾಗಿ ಸೇರು

**ಅವಿರಳವಿಸಾರಿ** – ನಿರಂತರವಾಗಿ ಹರಡುವ

**ಅವಿಲ(ಳ)ಂಬಂ** – ವಿಳಂಬವಿಲ್ಲದೆ

**ಅವಿವೇಕಾತ್ಮತೆ** – ವಿವೇಕರಹಿತವಾದ ಮನಸ್ಸುಳ್ಳುದು

**ಅವಿವೇಕಿ** – ವಿವೇಕರಹಿತ

**ಅವಿಶಾಲಪರಿಧಿ** – ವಿಶಾಲವಲ್ಲದ ಆವರಣ

**ಅವಿಶ್ರಾಂತ** – ಸಂತತವಾದ

**ಅವಿಷಯ** – ತಿಳಿಯಲು ಸಾಧ್ಯವಿಲ್ಲದ

**ಅವಿಷಾದ** – ಸಂತೋಷ

**ಅವಿಸಂವಾದ** – ವಿರೋಧವಲ್ಲದ

**ಅವು** – ಒನಕೆಯಿಂದ ಕುಟ್ಟು

**ಅವುಂಕು** – ಒತ್ತರಿಸು

**ಅವುಂಕಿಸು** – ಅಮುಕಿಸು

**ಅವು(ಂ)ಡು** – ಔಡು, ದವಡೆ

**ಅವುಟ್** – ಅಗುಳು

**ಅವ್ಯಗ್ರ** – ಏಕಾಗ್ರ ಮನಸ್ಸಿನ

**ಅವ್ಯಗ್ರತೆ** – ಅವ್ಯಗ್ರ ಮನಸ್ಸನ್ನು ಪಡೆದಿರುವುದು

**ಅವ್ಯಗ್ರಮನ** – ಏಕಾಗ್ರ ಮನಸ್ಸು(ಳ್ಳವನು)

**ಅವ್ಯತಿರಿಕ್ತೆ** – ಬೇರೆಯಲ್ಲದವಳು

**ಅವ್ಯಭಿಚಾರ** – ತಪ್ಪು ನಡವಳಿಕೆಯಿರದ; ಪಾತಿವ್ರತ್ಯ

**ಅವ್ಯಭಿಚಾರಿಮಿತ್ರ** – ಸ್ಥಿರನಾದ ಗೆಲೆಯ

**ಅವ್ಯಯ** – ನಷ್ಟವಿಲ್ಲದ; ಒಂದೆ ಪ್ರಕಾರದ

**ಅವ್ಯವಚ್ಛಿನ್ನ** – ಎಡೆಬಿಡದ; ನಿರಂತರವಾದ

**ಅವ್ಯವಧಾನ** – ಮಸುಕಿರದ; ಸಂತತವಾದ

**ಅವ್ಯಾಕುಲಂ** – ತಡೆಯಿಲ್ಲದೆ

**ಅವ್ಯಾಕುಲಾತ್ಮಕ** – ವ್ಯಾಕುಲಗೊಳ್ಳದ ಮನಸ್ಸುಳ್ಳ

**ಅವ್ಯಾಜ** – ಸಹಜವಾದ

**ಅವ್ಯಾಹತ** – ತಡೆಯಿಲ್ಲದ

**ಅವ್ಯುತ್ಪನ್ನ** – ಪಾಂಡಿತ್ಯವಿಲ್ಲದವನು

**ಅವ್ರತಯೋಗ** – ವ್ರತಾಚರಣೆಯಿಲ್ಲದ; ಆಮೆಯಂತೆ ನೀರಿನಲ್ಲಿ ವಾಸಮಾಡುವ

**ಅವ್ವಳಸು** – ವ್ಯಾಪಿಸು; ಮೇಲೆ ಬೀಳು

**ಅಶಂಕಿತ** – ಶಂಕೆಯಿರದ; ಹೆದರದ

**ಅಶನ** – ಆಹಾರ; ತಿನ್ನುವುದು

**ಅಶನಿ** – ಸಿಡಿಲು; ವಜ್ರಾಯುಧ

**ಅಶರೀರಧ್ವನಿ** – ಶರೀರ ಕಾಣಿಸದೆ ಕೇಳುವ ಧ್ವನಿ

**ಅಶರೀರವಾಕ್ಯ** – ಅಶರೀರಧ್ವನಿ

**ಅಶಲ್ಯ** – ಆಯುಧವಿಲ್ಲದ; ನಿರಾಯುಧ

**ಅಶಲ್ಯಭಾವೆ** – (ಜೈನ) ರಾಗದ್ವೇಷರಹಿತಳಾದವಳು

**ಅಶಾಂತಮತಿ** – ಕದಡಿದ ಮನಸ್ಸಿನವಳು

**ಅಶಿವ** – ಅಮಂಗಳ

**ಅಶಿಶಿರಕರ** – ಸೂರ್ಯ

**ಅಶಿಷ್ಟ** – ಒರಟಾದ

**ಅಶೀತಿಯೋಜನ** – ಎಂಬತ್ತು ಯೋಜನ

**ಅಶೇಷಭರಣಕರ** – ಎಲ್ಲರನ್ನೂ ಪೋಷಿಸುವ; ಶೇಷನೆಂಬ ಸರ್ಪರಾಜನೆಂಬ ಕೈಗೆ ಭೂಷಣವಾಗಿ ಹೊಂದದ

**ಅಶೋಕ** – ಶೋಕರಹಿತ; ದೇವತೆ; ಒಂದು ಮರ

**ಅಶೋಕಪಾದಪ** – ಅಶೋಕವೃಕ್ಷ

**ಅಶೋಕಲತಿಕೆ** – ಅಶೋಕದ ಬಳ್ಳಿ

**ಅಶೋಕವಲ್ಲರಿ** – ಅಶೋಕಲತಿಕೆ

**ಅಶೋಕವೃತ್ತ** – ಶೋಕ್ಕೆ ಒಳಗಾಗದ ನಡತೆಯವನು

**ಅಶೋಕಸಂಗತ** – ಅಶೋಕವೃಕ್ಷದಿಂದ ಕೂಡಿದ; ಶೋಕದ ಸೋಕಿಲ್ಲದ

**ಅಶೋಕೆ** – ಅಶೋಕಲತಿಕೆ

**ಅಶ್ಮ** – ಕಲ್ಲು

**ಅಶ್ಮಕಾರ** – ಕಲ್ಲುಕುಟಿಗ

**ಅಶ್ಮಸಾರ** – ಕಬ್ಬಿಣ

**ಆಶ್ರಮ** – ಆಯಾಸವಿಲ್ಲದ; ನಿರಾಯಾಸ

**ಅಶ್ರಾಂತ** – ಶ್ರಮರಹಿತವಾದ

**ಅಶ್ರಾಂತಂ** – ದಣಿವಿಲ್ಲದೆ

**ಅಶ್ರೀಕ** – ಸಂಪತ್ತು ಸೌಭಾಗ್ಯಗಳಿಲ್ಲದ

**ಅಶ್ರು** – ಕಂಬನಿ

**ಅಶ್ರುಕಣ** – ಕಣ್ಣೀರ ಹನಿ

**ಅಶ್ರುತ** – ಕೇಳಿಸದ; ವೇದವಿರುದ್ಧವಾದ

**ಅಶ್ರುತಪೂರ್ವ** – ಹಿಂದೆಂದೂ ಕೇಳದ

**ಅಶ್ರುತಪ್ರಕೃತಿಜನ** – ಶಾಸ್ತ್ರಜ್ಞಾನವಿಲ್ಲದ ಸಾಮಾನ್ಯರು

**ಅಶ್ರುವಾರಿ** – ಕಣ್ಣೀರು

**ಅಶ್ರುಸ್ನಾತ** – ಕಣ್ಣೀರಿನಿಂದ ತೋಯಲ್ಪಟ್ಟ

**ಅಶ್ರುಸ್ನವೆ** – ಕಣ್ಣೀರು ಸುರಿಸುವವಳು

**ಅಶ್ಲಕ್ಷ್ಣ** – ಮೃದುವಲ್ಲದ

**ಅಶ್ಲೌಘ** – ತೆಗಳಿಕೆ

**ಅಶ್ಲೌಘ್ಯ** – ಪ್ರಶಂಸಾಯೋಗ್ಯವಲ್ಲದ

**ಅಶ್ಲಿಷ್ಟ** – ಜೊತೆಗೂಡದ

**ಅಶ್ವಗ್ರೀವ** – ಕುದುರೆಯ ಕೊರಳು; ವಿಷ್ಣುವಿನ ಹಯಗ್ರೀವರೂಪ; ಒಬ್ಬ ರಾಕ್ಷಸ; (ಜೈನ) ಒಬ್ಬ ವಿದ್ಯಾಧರ

**ಅಶ್ವತ್ಥಾಮ** – ಕುದುರೆಯ ಶಕ್ತಿ, ವೇಗ; ದ್ರೋಣನ ಮಗ; ಮಹಾಭಾರತದಲ್ಲಿನ ಒಂದು
ಆನೆಯ ಹೆಸರು

**ಅಶ್ವಮಹಿಷನ್ಯಾಯ** – ಕುದುರೆ–ಕೋಣಗಳ ನಡುವೆಯಿರುವಂತಹ ಸಹಜವೈರ–

**ಅಶ್ವೀಯ** – ಕುದುರೆಗಳ ಸಮೂಹ

**ಅಷಾಢ** – ಆಷಾಢಮಾಸ; ಬ್ರಹ್ಮಚಾರಿ ಅಥವಾ ಯತಿ ಕೈಯಲ್ಲಿ ಹಿಡಿಯುವ ಮುತ್ತುಗದ ದಂಡ; ಮಲಯಪರ್ವತ

**ಅಷ್ಟಋದ್ಧಿ** – ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧ, ರಸ, ಅಕ್ಷೀಣ ಎಂಬ ಎಂಟು ಬಗೆಯ ಋದ್ಧಿಗಳು

**ಅಷ್ಟಕರ್ಮ** – (ಜೈನ) ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ, ಆಯುಃ, ನಾಮ, ಗೋತ್ರ, ವೇದನೀಯ ಎಂಬ ಎಂಟು ಕರ್ಮಗಳು

**ಅಷ್ಟಗುಣ** – ಎಂಟರಷ್ಟು ಹೆಚ್ಚು; ಅಷ್ಟಸಿದ್ಧಿ; (ಜೈನ) ಸಮ್ಯಕ್ತ್ವ, ಜ್ಞಾನ, ದರ್ಶನ, ವೀರ್ಯ, ಸೂಕ್ಷ್ಮ, ಅವಗಾಹನ, ಅಗುರುಲಘು, ಅವ್ಯಾಬಾಧ ಎಂಬ ಮುಕ್ತಿ ಪಡೆದ ಜೀವನ ಎಂಟು ಗುಣಗಳು

**ಅಷ್ಟಚಾಪೋತ್ಸೇಧ** – ಎಂಟು ಬಿಲ್ಲಗಳಷ್ಟು ಎತ್ತರವಾದ

**ಅಷ್ಟತೂರ್ಯರವ** – ಭೇರಿ, ಮದ್ದಳೆ, ಝಲ್ಲರಿ, ಕಹಳೆ, ಶಂಖ, ಕೊಳಲು, ವೀಣೆ, ತುಣವ ಎಂಬ ಎಂಟು ವಾದ್ಯಗಳ ಧ್ವನಿ

**ಅಷ್ಟದಿಕ್ಪಾಲ(ಳ)** – ಇಂದ್ರ, ಯಮ, ಅಗ್ನಿ, ವಾಯು, ನಿರುತಿ, ವರುಣ, ಕುಬೇರ, ಈಶಾನ – ಎಂಟುದಿಕ್ಕುಗಳ
ಅಧಿಪತಿಗಳು–

**ಅಷ್ಟದಿಗ್ಗಜ** – ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂಬ ಎಂಟು ಆನೆಗಳು

**ಅಷ್ಟದಿಗ್ಜಯ** – ಎಂಟು ದಿಕ್ಕುಗಳನ್ನು ಗೆಲ್ಲುವುದು

**ಅಷ್ಟದ್ವೀಪ** – (ಜೈನ) ಮುಖ್ಯವಾದ ಎಂಟು ದ್ವೀಪಗಳು: ಜಂಬೂ, ಧಾತಕೀ, ಪುಷ್ಕರ, ವಾರುಣೀವರ, ಕ್ಷೀರವರ, ಘೃತವರ, ಇಕ್ಷುವರ, ನಂದೀಶ್ವರ

**ಅಷ್ಟಪ್ರಕಾರಾರ್ಚನೆ** – ನೀರು, ಗಂಧ, ಸದಕ, ಪುಷ್ಪ, ಅನ್ನ, ದೀಪ, ಧೂಪ, ಫಲ ಎಂಬ ಎಂಟರಿಂದ ಮಾಡುವ ಪೂಜೆ

**ಅಷ್ಟಮಚಂದ್ರ** – ಜನ್ಮಲಗ್ನದಿಂದ ಚಂದ್ರನು ಅಷ್ಟಮಸ್ಥಾನದಲ್ಲಿರುವುದು

**ಅಷ್ಟಮತೀರ್ಥನಾಥ** – ಎಂಟನೆಯ ತೀರ್ಥಂಕರ, ಚಂದ್ರಪ್ರಭ

**ಅಷ್ಟಮಭೂಮಿ** – (ಜೈನ) ಸಿದ್ದರು ವಾಸಮಾಡುವ ಲೋಕಭಾಗ

**ಅಷ್ಟಮಲ** – ಶಂಕೆ, ಘೃಣೆ, ಭಯ, ಲಜ್ಜೆ, ಜುಗುಪ್ಸೆ, ಕುಲ, ಶೀಲ, ಜಾತಿ ಇವುಗಳ ಭಾವನೆಯಿಂದ ಬರುವ ದೋಷಗಳು

**ಅಷ್ಟಮಹಾಪ್ರಾತಿಹಾರ್ಯ** – (ಜೈನ) ಜಿನನ ಎಂಟು ಮಂಗಳ ಲಾಂಛನಗಳು: ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚತುಷ್ಷಷ್ಟಿಚಾಮರ, ರತ್ನಖಚಿತ ಸುವರ್ಣ ಸಿಂಹಾಸನ, ಪ್ರಭಾವಲಯ, ದೇವದುಂದುಭಿ, ಛತ್ರತ್ರಯ

**ಅಷ್ಟಮೀಂದು** – ಅಷ್ಟಮಿಯ ಚಂದ್ರ

**ಅಷ್ಟಲೋಕಪಾಲ** – ಎಂಟು ಲೋಕಗಳ ಒಡೆಯರು

**ಅಷ್ಟವರ್ಗಿ** – ಎಂಟು ವರ್ಗಗಳಿಗೆ ಸೇರಿದವರು
**ಅಷ್ಟವಿಂಶತಿ** – ಇಪ್ಪತ್ತೆಂಟು
**ಅಷ್ಟವಿಧರ್ಧಿ** – ಅಷ್ಟಋದ್ಧಿ
**ಅಷ್ಟವಿಧಶುದ್ಧಿ** – (ಜೈನ) ಕಾರ್ಯ, ಭಾವ. ಈರ್ಯಾಪಥ, ಭಿಕ್ಷಾ, ಪ್ರತಿಷ್ಠಾಪನಾ, ಶಯನ, ಆಸನ, ವಾಕ್ಯ – ಇವುಗಳಿಗೆ ಸಂಬಂಧಿಸಿದ ಶುದ್ಧಿ–
**ಅಷ್ಟವಿಧಾರ್ಚನೆ** – ಅಷ್ಟಪ್ರಕಾರಾರ್ಚನೆ
**ಅಷ್ಟವೆ** – ಅಷ್ಟಮೀ ತಿಥಿ
**ಅಷ್ಟಶೋಭೆ** – ಕಳಶ, ಕನ್ನಡಿ, ಬಾವುಟ, ತೋರಣ, ಧೂಪ, ದೀಪ, ಭೇರಿ, ಬೀಸಣಿಗೆ ಎಂಬ ಎಂಟು ಬಗೆಯ ಅಲಂಕಾರಗಳು
**ಅಷ್ಟಸಿದ್ಧಿ** – ಯೋಗದಿಂದ ದೊರಕುವ ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಎಂಬ ಎಂಟು ಸಾಮರ್ಥ್ಯಗಳು
**ಅಷ್ಟಾಂಗನಿಮಿತ್ತ** – ಭೂಮಿ, ಸ್ವಪ್ನ, ಶರೀರ, ಸ್ವರ, ಉತ್ಪಾತ, ಆಕಾಶ, ಲಕ್ಷಣ, ವ್ಯಂಜನ – ಇವುಗಳಿಗೆ ಸಂಬಂಧಿಸಿದ ಒಂದು ಶಾಸ್ತ್ರ–
**ಅಷ್ಟಾಂಗಪ್ರಣಾಮ** – ಸಾಷ್ಟಾಂಗ ನಮಸ್ಕಾರ; ಎದೆ, ತಲೆ, ಎರಡು ಕಾಲುಗಳು, ಮೊಣಕಾಲು, ದೃಷ್ಟಿ, ಎರಡು ಕೈಗಳು, ತನ್ಮಯತೆ ಇವನ್ನು ಒಳಗೊಂಡಂತೆ ಮಾಡುವ ನಮಸ್ಕಾರ
**ಅಷ್ಟಾದಶತೀರ್ಥ** – ರಾಜನಿಗೆ ಸಕಾಯಕವಾದ ಹದಿನೆಂಟು ಅಧಿಕಾರಿಗಳು: ಮಂತ್ರಿ, ಪುರೋಹಿತ, ಯುವರಾಜ, ಕೋಶಾಧಿಕಾರಿ, ಅಂತರ್ವಂಶಿಕ, ನಗರಾಧ್ಯಕ್ಷ, ದ್ವಾರಪಾಲ, ಸೇನಾಧ್ಯಕ್ಷ, ಧರ್ಮಾಧ್ಯಕ್ಷ, ಧರ್ಮೋಪದೇಶಕ, ಕಾರ್ಯನಿರ್ಮಾಣಕ, ಸಭಾಧ್ಯಕ್ಷ, ದುರ್ಗಪಾಲಕ, ಅರಣ್ಯಪಾಲಕ, ಸೀಮಾಪಾಲಕ, ಸೆರೆಮನೆಯ ಅಧಿಕಾರಿ, ದಂಡಪಾಲ, ಯೋಜನಾಧಿಕಾರಿ
**ಅಷ್ಟಾದಶದೋಷ** – (ಜೈನ) ಜೀವಿಗೆ ಅಂಟುವ ಹದಿನೆಂಟು ದೋಷಗಳು: ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ, ವಿಷಾದ
**ಅಷ್ಟಾಪದ** – ಎಂಟು ಕಾಲುಗಳುಳ್ಳ ಪ್ರಾಣಿ; ಗಂಡಭೇರುಂಡ ಜೇಡರಹುಳು; ಚಿನ್ನ
**ಅಷ್ಟಾಪದರಿಪುಪೀಠ** – ಸಿಂಹಾಸನ; ಅದರ ಮೇಲೆ ಕುಳಿತವನು
**ಅಷ್ಟಾಪದವಿಷ್ಟರ** – ಸುವರ್ಣಪೀಠ
**ಅಷ್ಟಾರ್ಘ್ಯ** – (ಜೈನ) ಜಲ, ಅಕ್ಷತೆ, ಗಂಧ, ಪುಷ್ಪ, ಧೂಪ, ಧೂಪ, ಚರು, ಫಲ ಇವುಗಳ ಅರ್ಪಣೆ
**ಅಷ್ಟಾವಂಕ**– ಅಷ್ಟಾವಕ್ರ; ಮಹಾ ಕುರೂಪಿ
**ಅಷ್ಟಾಹ್ನಿಕ(ಪೂಜೆ)** – (ಜೈನ) ಶ್ರಾವಕರು ಎಂಟು ದಿನಗಳು ಆಚರಿಸುವ ಜಿನಪೂಜೆ
**ಅಷ್ಟೋತ್ತರಶತಕ** – ನೂರೆಂಟು
**ಅಷ್ಟೋತ್ತರಸಹಸ್ರ** – ಸಾವಿರದೆಂಟು
**ಅಸಂಖ್ಯಾತ** – ಲೆಕ್ಕವಿಲ್ಲದ
**ಅಸಂಖ್ಯೇಯ** – ಎಣಿಸಲಾಗದ
**ಅಸಂಚಿತ** – ಕೂಡಿಡದ
**ಅಸಂಜ್ಞಿ** – (ಜೈನ) ಆಹಾರ, ಮೈಥುನ, ಭಯ, ಪರಿಗ್ರಹ ಎಂಬ ನಾಲ್ಕು ಸಂಜ್ಞೆಗಳಿಲ್ಲದ ಜೀವಿ
**ಅಸಂತುಷ್ಟಚಿತ್ತ** – ತೃಪ್ತಿ ಹೊಂದದ ಮನಸ್ಸಿನವನು
**ಅಸಂದಿಗ್ಧ** – ಸಂದೇಹವಿಲ್ಲದ
**ಅಸಂಧೇಯ** – ಸಂಧಾನ ಮಾಡಲು ಸಾಧ್ಯವಿಲ್ಲದ
**ಅಸಂಭವ** – ಸಂಭವಿಸಲಾಗದ
**ಅಸಂಭಾವಿತ** – ಯೋಚಿಸಲು ಸಾಧ್ಯವಿಲ್ಲದ
**ಅಸಂಯತ** – (ಜೈನ) ಸಂಯಮರಹಿತ
**ಅಸಂಯತಸಮ್ಯಗ್ದೃಷ್ಟಿ** – (ಜೈನ) ಸಮ್ಯಗ್ದೃಷ್ಟಿಯುಳ್ಳವನಾದರೂ ಸಂಯಮರಹಿತನಾದವನು
**ಅಸಕಟಿ** – ಆಕ್ರಮಣ; ಮಿತಿಮೀರು; ತಪ್ಪಿಸು
**ಅಸಕಟಿಹ** – ಕೈಮೀರುವುದು
**ಅಸಕೃತ್** – ಅನೇಕ ಬಾರಿ
**ಅಸಗ** – ಅಗಸ
**ಅಸಗವೊಯ್ಲು** – ಅಗಸನ ಒಗೆತ
**ಅಸಗವೊಯಲ್ವೊಯ್** – ಅಗಸನ ಹೊಡೆತ ಹೊಡೆ
**ಅಸಗವೊಟಿ**[3] – ಅಗಸ ಒಗೆಯಲು ಬಳಸುವ ನದಿ
**ಅಸತಿ** – ಜಾರೆ
**ಅಸತೀಕೇಳ** – ಜಾರೆಯರೊಡನೆ ಸೇರುವುದು
**ಅಸತ್ಕರ್ಮ** – ಕೆಟ್ಟ ಕೆಲಸ
**ಅಸತ್ಕಾರ** – ಸತ್ಕರಿಸದಿರುವುದು
**ಅಸದನುಶಾಸನ** – ಸರಿಯಲ್ಲದ ವಿವರಣೆ; ಅನ್ಯಾಯದ ಸಂಪಾದನೆ
**ಅಸದಳ** – ಅಸಾಧ್ಯ
**ಅಸದಳಂ** – ಅತಿಶಯವಾಗಿ
**ಅಸದಾಗ್ರಹ** – ಸಲ್ಲದ ಹಟ; ಕೆಟ್ಟುದರಲ್ಲಿ ಆಸಕ್ತಿ
**ಅಸದ್ವ್ಯಯ** – ದುಂದು ವೆಚ್ಚ
**ಅಸದ್ವಿಷಯ** – ಅಯೋಗ್ಯ ವಿಷಯ
**ಅಸನಿ** – (ಅಶನಿ) ಸಿಡಿಲು, ವಜ್ರಾಯುಧ
**ಅಸಮಬಲ** – ಬೇರಾರೂ ಸಮಕ್ಕೆ ಬಾರದ ಶಕ್ತಿಯುಳ್ಳವನು
**ಅಸಮಯಕೃತ** – ಸರಿಯಲ್ಲದ ಸಮಯದಲ್ಲಿ ಮಾಡಿದ
**ಅಸಮವಿಭೂತಿ** – ಅಸಮವಾದ ಸಿರಿ
**ಅಸಮಶರ** – ಬೆಸಸಂಖ್ಯೆಯ ಬಾಣಗಳುಳ್ಳವನು, ಮನ್ಮಥ
**ಅಸಮಾಯುಧ** – ಅಸಮಶರ

**ಅಸಮಾಸ್ತ್ರ** – ಅಸಮಶರ
**ಅಸಮಾಸ್ತ್ರತೆ** – ಬೆಸ ಸಂಖ್ಯೆಯ ಬಾಣಗಳಿರುವುದು
**ಅಸರಪಸರ** – ಸಲಿಗೆ, ಸದರ
**ಅಸವಸ** – ಆತುರ; ಸಂಭ್ರಮ; ದುಡುಕು
**ಅಸಹ್ಯ** – ಸಹಿಸಲಸಾಧ್ಯವಾದ
**ಅಸಹ್ಯಮಾನ** – ಅಸಹ್ಯ
**ಅಸಹ್ಯವೃತ್ತಿ** – ಸಹಿಸಲಾಗದ ನಡತೆ
**ಅಸಹ್ಯೋಕ್ತಿ** – ಜುಗುಪ್ಸೆ ತರುವ ಮಾತು
**ಅಸಾಧಾರಣ** – ಸಾಮಾನ್ಯವಲ್ಲದ
**ಅಸಾಧುಜನ** – ಕೆಟ್ಟ ಜನ
**ಅಸಾರಚೇತನ** – ಸತ್ವಹೀನ ಮನಸ್ಸಿನವನು
**ಅಸಾರತಿಕೆ** – ನಿಸ್ಸಾರತೆ
**ಅಸಾರ್ದ್ರತೆ** – ಒಣಗಿದ, ನೀರಸ
**ಅಸಿ** – ಚೆಲ್ಲು, ಈಡಾಡು; ನವಿರಾದ; ಸಣ್ಣಗಾಗು; ಕತ್ತಿ; ಸ್ತ್ರೀ
**ಅಸಿತ** – ಕಪ್ಪು
**ಅಸಿತಪದ** – ಅಗ್ನಿ
**ಅಸಿತಮಣಿ** – ಇಂದ್ರನೀಲರತ್ನ
**ಅಸಿಕ** – ಸಣ್ಣ ಕತ್ತಿ, ಕಠಾರಿ; ತೆಳ್ಳಗಿರುವವನು
**ಅಸಿಖೇಟಕಹಸ್ತೆ** – ಕತ್ತಿಗುರಾಣಿಗಳನ್ನು ಹಿಡಿದವಳು
**ಅಸಿತ** – ಕಪ್ಪಾದ; ಆಹಾರ
**ಅಸಿತಪಯೋಜ** – ಕನ್ನೈದಿಲೆ
**ಅಸಿತಾಹಿ** – ಕಾಳಸರ್ಪ
**ಅಸಿತಾಹಿದಂಶ** – ಕಾಳನಾಗರದ ಕಡಿತ
**ಅಸಿತೇಂದೀವರ** – ಕನ್ನೈದಿಲೆ
**ಅಸಿತೋತ್ಪಲಿನಿ** – ಕನ್ನೈದಿಲೆಗಳ ಗುಂಪು
**ಅಸಿತೋರಗ** – ಅಸಿತಾಹಿ
**ಅಸಿದು** – ಕೃಶವಾದ; ಸೂಕ್ಷ್ಮವಾದ
**ಅಸಿದುಗೊಳ್** – ಸಣ್ಣಗಾಗು
**ಅಸಿಧಾರಾವ್ರತ** – ಕತ್ತಿಯ ಅಲಗಿನ ಮೇಲೆ ನಡೆಯುವಂತಹ ಕಷ್ಟಕರ ವ್ರತ
**ಅಸಿಧೇನು(ಕೆ)** – ಸಣ್ಣ ಕತ್ತಿ
**ಅಸಿಪತ್ರ** – ಕತ್ತಿಯ ಅಲಗು; ಕತ್ತಿಯ ಒರೆ
**ಅಸಿಪತ್ರನಂದನ** – ಚೂಪಾದ ಎಲೆಗಳ ಮರಗಳುಳ್ಳ ತೋಟ
**ಅಸಿಪತ್ರವನ** – ಅಸಿಪತ್ರನಂದನ
**ಅಸಿಯ ಬಾಸೆ** – ಸೂಕ್ಷ್ಮ ರೋಮರಾಜಿ
**ಅಸಿಯನ್(ಳ್)** – ಕೃಶವಾದವನು(ಳು)
**ಅಸಿಯರ್** – ಕೃಶರು
**ಅಸಿಯುಗುರ್** – ಹರಿತವಾದ ಉಗುರು
**ಅಸಿಯೇಱು** – ಕತ್ತಿಯ ಗಾಯ
**ಅಸಿರತ್ನ** – ಶ್ರೇಷ್ಠವಾದ ಖಡ್ಗ
**ಅಸಿಲತಾಧಾರೆ** – ಬಳ್ಳಿಯಂತೆ ಬಳುಕುವ ಕತ್ತಿಯ ಅಲಗು
**ಅಸು** – ಆಕ್ರಮಿಸಿಕೊಂಡದ್ದು; ಬೇಗ; ಪ್ರಾಣ
**ಅಸುಂಗೊಳ್** – ಕೊಲ್ಲು; ಹೆದರು; ಬೆರಗಾಗು
**ಅಸುಂಗೊಳಿಸು** – ಕೊಲ್ಲಿಸು; ನಡುಗಿಸು; ಅಚ್ಚರಿಪಡಿಸು
**ಅಸುಂಬು** – ಅಲ್ಲಾಡಿಸು
**ಅಸುಗೆ** – ಅಶೋಕೆ
**ಅಸುಗೆದಳಿರ್** – ಅಶೋಕದ ಚಿಗುರು
**ಅಸುನೆಱ** – ಕೋಮಲ
**ಅಸುಮೋಕ್ಷ** – ಅಸು+ಮೋಕ್ಷ, ಪ್ರಾಣವಿಯೋಗ; ಅ+ಸುಮೋಕ್ಷ, ಒಳ್ಳೆಯದಲ್ಲದ ರೀತಿಯ ಮೋಕ್ಷ
**ಅಸುಭೃತ್** – ಜೀವಿ
**ಅಸುರ್** – ಅಸಹ್ಯಪಡು
**ಅಸುರ** – ರಾಕ್ಷಸ
**ಅಸುರವಿಜಯಿ** – ವಿಷ್ಣು; (ಜೈನ) ಮೂರು ಬಗೆಯ ರಾಜರಲ್ಲಿ ಒಬ್ಬ, ನೀಚ
**ಅಸುರವೈರಿ** – ಅಸುರರಿಪು, ವಿಷ್ಣು
**ಅಸುರೇಂದ್ರ** – ರಾಕ್ಷಸರಾಜ
**ಅಸುವೊಸರ್** – ಜೀವಹೋಗು
**ಅಸುಹೃತ್** – ಶತ್ರು
**ಅಸುಹೃತ್ಸೇನೆ** – ಶತ್ರುಸೈನ್ಯ
**ಅಸುಹೃದ್ದಮ** – ಅರಿಂದಮ, ಶತ್ರುಗಳನ್ನು ಗೆಲ್ಲುವವನು
**ಅಸುಹೃದ್ಧ್ವಜಿನಿ** – ಶತ್ರುಸೇನೆ
**ಅಸೃಕ್** – ರಕ್ತ
**ಅಸೃಕ್ಕಣ** – ರಕ್ತದ ತೊಟ್ಟು
**ಅಸೃಙ್ನದಿ** –ರಕ್ತದ ನದಿ
**ಅಸೃಕ್ತೋಯಧಿ** – ರಕ್ತಸಮುದ್ರ
**ಅಸೃಕ್ಪಂಕ** – ರಕ್ತದ ಕೆಸರು
**ಅಸೃಗ್ಜಲ(ಳ)** – ರಕ್ತದ ನೀರು; ರಕ್ತ
**ಅಸೆಯಿಱ** – ಮುಖವನ್ನು ಚುಚ್ಚು
**ಅಸೆವಿರಿ** – ಮುಖ ಬಿರಿ
**ಅಸೇವ್ಯ** – ಸೇವಿಸಬಾರದ
**ಅಸೇವ್ಯವರ್ಣನ** – ಸಹಿಸಲಸಾಧ್ಯ ವರ್ಣನೆ
**ಅಸೌಮ್ಯ** – ಭಯಂಕರವಾದ
**ಅಸ್ಖಲಿ(ಳ)ತಂ** – ತಪ್ಪದಂತೆ
**ಅಸ್ಖಲಿತಗತಿ** – ದೃಢವಾದ, ತಡೆಯಿಲ್ಲದ ನಡಿಗೆ
**ಅಸ್ತಂಗತ** – ಮುಳುಗಿದವನು
**ಅಸ್ತಗತಿ** – ಮುಳುಗುವ ಪರಿಸ್ಥಿತಿ
**ಅಸ್ತದವ** – ನಂದಿಹೋದ ಕಾಡುಗಿಚ್ಚು
**ಅಸ್ತಪ್ರಾಪ್ತಿ** – ಮುಳುಗುವುದು
**ಅಸ್ತಮಿತ** – ಮುಳುಗಿದ
**ಅಸ್ತಮಿಸು** – ಮುಳುಗು, ಮರೆಯಾಗು
**ಅಸ್ತವಿಳಾಸ** – ಸಂತೋಷ ಮರೆಯಾದವನು
**ಅಸ್ತವ್ಯಸ್ತ** – ಕ್ರಮವಾಗಿಲ್ಲದಿರುವುದು
**ಅಸ್ತಶೈಲ** – ಪಶ್ಚಿಮ
**ಅಸ್ತಸಮಯ** – ಮುಳುಗುವ ಹೊತ್ತು
**ಅಸ್ತಾದ್ರಿ** – ಸೂರ್ಯ ಮುಳುಗುವ ಬೆಟ್ಟ
**ಅಸ್ತಾಬ್ಧಿ** – ಸೂರ್ಯ ಮುಳುಗುವ ಸಮುದ್ರ

**ಅಸ್ತಿಕಾಯ** – (ಜೈನ) ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶಗಳೆಂಬ ಐದು ಬಗೆ
**ಅಸ್ತೇಯ** – ಕದಿಯದಿರುವುದು; (ಜೈನ) ಪಂಚಾಣುವ್ರತಗಳಲ್ಲಿ ಒಂದು
**ಅಸ್ತ್ರ** – ಆಯುಧ; ಬಾಣ
**ಅಸ್ತ್ರಕದಂಬಕ** – ಆಯುಧಸಮೂಹ
**ಅಸ್ತ್ರಜಾಳ** – ಅಸ್ತ್ರಕದಂಬಕ
**ಅಸ್ತ್ರತತಿ** – ಅಸ್ತ್ರಕದಂಬಕ
**ಅಸ್ತ್ರರುಚಿ** – ಆಯುಧದ ಕಾಂತಿ
**ಅಸ್ತ್ರಶಾಲೆ** – ಆಯುಧಾಗಾರ
**ಅಸ್ತ್ರಾಲಿ** – ಬಾಣಸಮೂಹ
**ಅಸ್ತ್ರಿ** – ಅಸ್ತ್ರಧಾರಿ
**ಅಸ್ಥಾನ** – ಸ್ಥಾನವಲ್ಲದ್ದು; ಸೂಕ್ತವಲ್ಲದ ಸ್ಥಾನ
**ಅಸ್ಪಂದತೆ** – ಅಲುಗದಿರುವಿಕೆ
**ಅಸ್ಪೃಷ್ಟಪಾಂಶು** – ಧೂಳು ಸೋಕದವನು
**ಅಸ್ಫುಟವಚನ** – ಅಸ್ಪಷ್ಟವಾಗಿ ಮತಾಡುವವನು
**ಅಸ್ಫುರಿತ** – ಹೊಳೆಯದಿರುವ
**ಅಸ್ಮತ್ಪಿತೃ** – (ನನ್ನ) ನಮ್ಮ ತಂದೆ
**ಅಸ್ಮತ್ಪುತ್ರ** – (ನನ್ನ) ನಮ್ಮ ಮಗ
**ಅಸ್ಮತ್ಪ್ರಭು** – (ನನ್ನ) ನಮ್ಮ ಒಡೆಯ
**ಅಸ್ಮತ್ಪ್ರಿಯೆ** – (ನನ್ನ) ನಮ್ಮ ಪ್ರಿಯೆ
**ಅಸ್ಮದರಾಧನ** – (ನನ್ನ) ನಮ್ಮ ಪೂಜೆ
**ಅಸ್ಮದೀಯ** – (ನನಗೆ) ನಮಗೆ ಸೇರಿದ
**ಅಸ್ಮದ್ಗುಣ** – (ನನ್ನ) ನಮ್ಮ ಗುಣ
**ಅಸ್ಮದ್ಗುರು** – (ನನ್ನ) ನಮ್ಮ ಗುರು
**ಅಸ್ಮದ್ಧರಣೀಶ** – (ನನ್ನ) ನಮ್ಮ ರಾಜ
**ಅಸ್ಮರಣ** – ನೆನೆಪಿಲ್ಲದಿರುವುದು
**ಅಸ್ಮೃತಾಹಾರ** – ಆಹಾರವನ್ನು ನೆನಪಿಸಿಕೊಳ್ಳದವನು
**ಅಸ್ಮೇರ** – ಮುಗುಳುನಗೆಯಿಲ್ಲದ
**ಅಸ್ರ(ವಾರಿ)** – ರಕ್ತ; ಕಣ್ಣೀರು
**ಅಸ್ವಪ್ನ** – ನಿದ್ದೆಯಿಲ್ಲದ; ದೇವತೆ
**ಅಸ್ವಪ್ನಾನಕ** – ದೇವದುಂದುಭಿ
**ಅಸ್ವಸ್ಥೆ** – ಆರೋಗ್ಯವಿಲ್ಲದವಳು
**ಅಹ** – ದಿನ
**ಅಹಂ** – ನಾನು ಎಂಬ ಭಾವ
**ಅಹಂಕಾರಭಾವ** – ಹೆಮ್ಮೆಯಿಂದ ಕೂಡಿರುವುದು
**ಅಹಃಪತಿ** – ಹಗಲಿನ ಒಡೆಯ, ಸೂರ್ಯ
**ಅಹಃಪತಿಸುತ** – ಸೂರ್ಯನ ಮಗ; ಶನಿ, ಯಮ, ಯಮ, ಸುಗ್ರೀವ, ಕರ್ಣ
**ಅಹ(ಂ)ಗೆ** – ಹಾ(ಂ)ಗೆ
**ಅಹಮಹಮಿಕೆ** – ಅಹಂಭಾವ
**ಅಹಮಿಂದ್ರ** – (ಜೈನ) ಹದಿನಾರು ಸ್ವರ್ಗಗಳೂ ಅಣೂತ್ತರಗಳೂ ಆದ ಮೇಲೆ ಬರುವ ಗ್ರೈವೇಯಕದಲ್ಲಿ ಹುಟ್ಟಿದ ಜೀವ
**ಅಹಮಿಂದ್ರತ್ವ** – ಅಹಮಿಂದ್ರತನ
**ಅಹಮಿಕೆ** – ತಾನು ಮುಂದು ಎಂದು ಎಲ್ಲದಕ್ಕೂ ಮುನ್ನುಗ್ಗುವುದು
**ಅಹರಹ** – ಅನುದಿನ
**ಅಹರ್ನಿಶ(ಂ)** – ಹಗಲೂ ರಾತ್ರಿ
**ಅಹರ್ಪತಿ** – ಸೂರ್ಯ
**ಅಹರ್ಮುಖ** – ಬೆಳಗಿನ ಜಾವ
**ಅಹಸ್ಸು** – ಹಗಲು
**ಅಹಹ** – ಒಂದು ಭಾವಸೂಚಕಾವ್ಯಯ
**ಅಹಿ** – ಹಾವು
**ಅಹಿಂಸಾವ್ರತ** – (ಜೈನ) ಶ್ರೋತೃವಿನಲ್ಲಿರಬೇಕಾದ ಎಂಟು ಗುಣಗಳಲ್ಲಿ ಒಂದು
**ಅಹಿಂಸಾಶುದ್ಧಿ** – (ಜೈನ) ದೀಕ್ಷಾನ್ವಯಕ್ರಿಯೆಗಳಲ್ಲಿ ಹತ್ತನೆಯದು
**ಅಹಿಕಟಕ** – ಸರ್ಪವನ್ನೇ ಬಳೆ(ಕಟಕ)ಯಾಗುಳ್ಳವನು (ಶಿವ)
**ಅಹಿಕೇತನ** – ಸರ್ಪಧ್ವಜ; ದುರ್ಯೋಧನ
**ಅಹಿಗರಳಹರ** – ಹಾವಿನ ವಿಷವನ್ನು ಹೋಗಲಾಡಿಸುವವನು, ಗರುಡ
**ಅಹಿಗೃಹ** – ಹುತ್ತ
**ಅಹಿತನಿಷೂದನ** – ಶತ್ರುಗಳನ್ನು ನಾಶಮಾಡುವವನು
**ಅಹಿತಶಕ್ತಿ** – ಹಗೆಯ ಬಲ
**ಅಹಿಧ್ವಜ** – ದುರ್ಯೋಧನ
**ಅಹಿನಾಯಕ** – ಆದಿಶೇಷ
**ಅಹಿಪತಲ್ಪ** – ಹಾವಿನ ಹಾಸಿಗೆಯವನು, ವಿಷ್ಣು
**ಅಹಿಪತಿ** – ಆದಿಶೇಷ
**ಅಹಿಮಕಿರಣ** – ಶೀತಲವಲ್ಲದ ಕಿರಣದವನು, ಸೂರ್ಯ
**ಅಹಿಮಕೃತ್** – ಅಹಿಮಕಿರಣ
**ಅಹಿಮರುಚಿ** – ಸೂರ್ಯ
**ಅಹಿರಾಜ** – ಅಹಿಪತಿ
**ಅಹಿಶೀರ್ಷ** – ಹಾವಿನ ತಲೆ, ಹೆಡೆ
**ಅಹೀಂದ್ರ** – ಆದಿಶೇಷ; (ಜೈನ) ನಾಗರಾಜ
**ಅಹೀಂದ್ರಕೇತನ** – ಸರ್ಪಧ್ವಜ
**ಅಹೀಂದ್ರಲೋಕ** – ನಾಗಲೋಕ
**ಅಹೀನತಾನ್ವಿತ** – ಸರ್ಪರಾಜನೆಂಬ ಬಿರುದಿನವನು; ಹೀನತೆಯಿಲ್ಲದವನು
**ಅಹೀಶ್ವರ** – ಅಹೀಂದ್ರ
**ಅಹುದು** – ಹೌದು
**ಅಹೋ** – ಒಂದು ಭಾವಸೂಚಕಾವ್ಯಯ
**ಅಹೋಧ್ವಾನ** – ಅಹೋ ಎಂಬ ಕೂಗು
**ಅಹೋರಾತ್ರಂ** – ಹಗಲೂ ರಾತ್ರಿ
**ಅಳ(ಲ)ಂಕರಣಗೃಹ** – ಅಲಂಕಾರ ಮಾಡಿಕೊಳ್ಳುವ ಮನೆ
**ಅಳಂಕು** – ಬಣ್ಣ ಲೇಪನ ಮಾಡು
**ಅಳಂಕೆ** – ತಲೆಯ ಕೂದಲು
**ಅಳಂಕೆಗೆಯ್** – ಜೋಡಿಸು, ಸೇರಿಸು
**ಅಳಂಕೆಗೊಳ್** – ಸೇರಿಕೊ; ಉದ್ಭವಿಸು
**ಅಳಂಕೆಗೊಳಿಸು** – ಸೇರಿಸು; ದೊರೆಯುವಂತೆ ಮಾಡು

**ಅಳಂಕೆವೆಱು** – ಜೋಡಣೆ ಹೊಂದು
**ಅಳಂಬೆ** – ಅಣಬೆ, ನಾಯಿಕೊಡೆ
**ಅಳಕ** – ಬರೆಯುವ ಓಲೆ; ಮುಂಗುರುಳು
**ಅಳಕಾನೀಕ** – ಮುಂಗುರುಳ ರಾಶಿ
**ಅಳಕಾಳ** – ಅಳಕಾನೀಕ
**ಅಳಕೋದ್ಭಾಸಿ** – ಮುಂಗುರುಳಿನಿಂದ ಶೋಭಿಸುವ
**ಅಳಗ** – ಹವಳ; ಹವಳದ ಬಣ್ಣದ ಹಸು, ಕುದುರೆ ಮುಂತಾದ ಪ್ರಾಣಿ
**ಅಳರು** – ವ್ಯಾಪಿಸು
**ಅಳಲ್ಕೆ** – ಅಳಲಿಕೆ, ವ್ಯಸನ
**ಅಳವಡಿಕೆ** – ಹೊಂದಿಕೆ
**ಅಳವಡಿಸು** – ಹೊಂದಿಸು
**ಅಳವಡು** – ಹೊಂದಿಕೊ; ಸಾಧ್ಯವಾಗು; ಸೇರಿಸು, ಕೂಡಿಸು
**ಅಳವಳ** – ವ್ಯಥೆ
**ಅಳವಳಸು** – ಶಬ್ದಮಾಡು
**ಅಳವಱಿ** – ಅಳವು+ಅಱಿ, (ತನ್ನ) ಅಳತೆಯನ್ನು ತಿಳಿ
**ಅಳವಟಿ** – ಅಳವು+ಅಟಿ, ಯೋಗ್ಯತೆ ಹಾಳಾಗು
**ಅಳವಟಿಸು** – ಸಾಮರ್ಥ್ಯಗುಂದು
**ಅಳವಿ** – ಪ್ರಮಾಣ; ಶಕ್ತಿ; ಯೋಗ್ಯತೆ; ಸಾಧ್ಯ
**ಅಳವಿಗಟಿ** – ಅಳತೆ ಮೀರು
**ಅಳವಿಗಾಣ್** – ಅಳತೆಯನ್ನು ಕಾಣು
**ಅಳವಿದಪ್ಪು** – ಅಳತೆ ಮೀರು
**ಅಳವು** – ಶಕ್ತಿ; ಅಳತೆ; ಶಕ್ಯತೆ
**ಅಳವುಗೆಡಿಸು** – ವಿವೇಕ ನಾಶಮಾಡು
**ಅಳವೆ** – ನೀರು ಹೋಗುವ ತೂಬು
**ಅಳಸಗಾಮಿನಿ** – ಮಂದಗಾಮಿನಿ
**ಅಳಸು** – ಸುರತಧ್ವನಿಮಾಡು; ಪ್ರಣಯದ ನುಡಿಯಾಡು; ಸುರತಧ್ವನಿ
**ಅಳಱ್(ಱು)** – ಭಯಪಡು; ನಡುಗು; ಭಯ
**ಅಳಱಿಸು** – ಹೆದರಿಸು; ಚದುರಿಸು
**ಅಳಱು** – ಚದುರು; ಹಾಳಾಗು; ಭಯ
**ಅಳಿ** – ದುಂಬಿ
**ಅಳಿಕ** – ಅಲಿಕ, ಹಣೆ; ಹೇಡಿ
**ಅಳಿಕಮನ** – ಕಪಟ ಮನಸ್ಸು
**ಅಳಿಕಲಭ** – ಮರಿದುಂಬಿ
**ಅಳಿಕಾಬಂಧ** – ಬಾಸಿಂಗ
**ಅಳಿಕುಲ** – ದುಂಬಿಗಳ ಸಮೂಹ
**ಅಳಿನೀ** – ಹೆಣ್ಣು ದುಂಬಿ
**ಅಳಿನೀನಿನದ** – ಹೆಣ್ಣುದುಂಬಿಗಳ ಝೇಂಕಾರ
**ಅಳಿನೀಮಾಲೆ** – ಹೆಣ್ಣು ದುಂಬಿಗಳ ಸಾಲು
**ಅಳಿನೀರುತಿ** – ಅಳಿನೀನಿನದ
**ಅಳಿನೀ(ಸಂಕುಳ)** – ಹೆಣ್ಣು ದುಂಬಿಗಳ (ಸಮೂಹ)
**ಅಳಿ(ಳು)ಪು** – ಆಸೆ; ಆಸೆಪಡು; ಬಯಕೆ; ಕಾಮಿಸು; ಸ್ಮರಕೇಳಿಶಬ್ದನಿಚಯ
**ಅಳಿಮಾಲೆ** – ದುಂಬಿಯ ಸಾಲು
**ಅಳಿಯಕ್ಕರ** – ಹೀನ ಬರಹ
**ಅಳಿಲುಳಿ** – ಕುದುರೆಯ ಒಂಬತ್ತು ಗತಿಗಳಲ್ಲಿ ಒಂದು
**ಅಳಿವಿಂಡು** – ದುಂಬಿಗಳ ಸಮೂಹ
**ಅಳಿವೆದೆ** – ದುಂಬಿಗಳ ಸಾಲಿನ ಬಿಲ್ಲಿನ ಹಗ್ಗ
**ಅಳಿಱ್** – ಕೆಸರು
**ಅಳೀಕ** – ಕಪಟ
**ಅಳೀಕಭಕ್ತ** – ಕಪಟಭಕ್ತಿಯುಳ್ಳವನು
**ಅಳೀಕಭ್ರುಕುಟಿ** – ಹುಸಿ ಹುಬ್ಬುಗಂಟು; ತೋರಿಕೆ ಕೋಪ
**ಅಳೀಕಮಿತ್ರ** – ಕಪಟ ಸ್ನೇಹಿತ
**ಅಳೀಕಸೊಬಗು** – ಹುಸಿ ಸೊಬಗು
**ಅಳುಂಕು** – ಅಲುಗಡು; ಹಿಂಜರಿ
**ಅಳುಂಬ(ಬು)** – ಅತಿಶಯ, ವೆಗ್ಗಳ; ಮನೋಹರವಾದ; ಆಶ್ರಯ
**ಅಳುಂಬಂ** – ಅತಿಶಯವಾಗಿ
**ಅಳುಪು** – ಪ್ರೀತಿ
**ಅಳುರ್** – ಆವರಿಸು; ಸುಡು; ಚದುರಿಹೋಗು
**ಅಳುರ್ಕೆ** – ವ್ಯಾಪಿಸುವುದು; ಆಧಿಕ್ಯ; ಸಾಮರ್ಥ್ಯ
**ಅಳುರ್ಕೆಗತ್ತಲೆ** – ಹೆಚ್ಚಾದ ಕತ್ತಲೆ
**ಅಳುರ್ಕೆಗಿಡಿಸು** – ಸಾಮರ್ಥ್ಯಗುಂದುವಂತೆ ಮಾಡು
**ಅಳುರ್ಕೆಗುಂದು** – ಸಾಮರ್ಥ್ಯಗುಂದು
**ಅಳುರ್ಕೆಗೊಳ್** – ಆವರಿಸು; ಅಧಿಕವಾಗು
**ಅಳುರ್ಕೆವೆಱು** – ಹೆಚ್ಚಾಗು
**ಅಳುರ್ಚು** – ಹರಡು
**ಅಳೆ** – ಮಜ್ಜಿಗೆ; ಅಳತೆ ಮಾಡು
**ಅಳೆಮಾಱು** – ಮಜ್ಜಿಗೆಯನ್ನು ವಿಕ್ರಯಿಸು
**ಅಳ್ಕಜಕಾಱ** – ಹೊಟ್ಟೆಕಿಚ್ಚು ಪಡುವವನು
**ಅಳ್ಕಾಟ** – ನಡುಕ
**ಅಳ್ಕಾಡು** – ಹೆದರಿಕೆಯಿಂದ ನಡುಗು; ಶಿಥಿಲವಾಗು
**ಅಳ್ಕಿಮೆಳ್ಕು** – ನಾಶವಾಗಿ ಸಾರಿಸಿದಂತಾಗು
**ಅಳ್ಕು** – ಅಳುಕು, ಹೆದರು; ಹಿಂಜರಿ; ದುರ್ಬಲಗೊಳ್ಳು; ಚಂಚಲಗೊಳ್ಳು; ಹೆದರಿಕೆ
**ಅಳ್ಕುಱು** – ಭಯಪಡು
**ಅಳ್ಕೆ** – ದಟ್ಟವಾಗುವುದು; ಅಳುವಿಕೆ
**ಅಳ್ಗಿಡಿ** – ಸಣ್ಣ ಕಿಡಿ
**ಅಳ್ಗುಡಿ** – ಕೋಮಲವಾದ ಕುಡಿ
**ಅಳ್ಗುರುಳ್** – ಬಾಚಿದ ಕೂದಲು
**ಅಳ್ಚು** – ಸುಡು
**ಅಳ್ದೆಸಱ್** – ಮಂದವಾದ ಕೆಸರು
**ಅಳ್ತಕಾಱ** – ಬೇಡುವವನು
**ಅಳ್ದರಿ** – ಕಣಿವೆ
**ಅಳ್ಮದುಳ್** – ಮೃದುವಾದ ಮಿದುಳು
**ಅಳ್ಳಱಿ** – ಅದುರು; ನಡುಗಿಸು; ತಿವಿ; ಧ್ವನಿ
**ಅಳ್ಳೆ** – ಪಕ್ಕೆ
**ಅಳ್ಳೆಗೊಂಬು** – ಸಣ್ಣ ರೆಂಬೆ
**ಅಳ್ಳೆಜೊಳ್ಳೆತನ** – ನಿಸ್ಸಾರವಾಗಿರುವುದು
**ಅಳ್ಳೆಜೊಳ್ಳೆಯ** – ಶಕ್ತಿಹೀನ

**ಅಳ್ಳೆರ್ದೆ** – ನಡುಗುವ ಎದೆ; ಅಸ್ಥಿರ ಮನಸ್ಸು
**ಅಳ್ಳೆವಿಳ್ಳೆ** – ಚದುರಿ ಹೋಗು; ತುಂಬ ದಣಿ
**ಅಳ್ಳೆವೊಯ್** – ಪಕ್ಕೆ ಬಡಿದುಕೊ
**ಅಳ್ಳೇಱು** – ಜೋರಾದ ಏಟು
**ಅಳ್ಳೊಱತೆ** –ನೀರಿನ ಬುಗ್ಗೆ
**ಅಱ** – ಧರ್ಮ; ಯಮಧರ್ಮ
**ಅಱ(ಂ)ಬುಗಱೆ** – ಅಪಶಕುನ ನಿವಾರಣೆಗೆ ಹಸುವಿನ ಹಾಲು ಕರೆ
**ಅಱಂಬೆ** – ಅಜೀರ್ಣ
**ಅಱಕೆ** – ಬಾಯಾರಿಕೆ; ಕೊರತೆ
**ಅಱಗಂಜಿ** – ಧರ್ಮದ ಗಂಜಿ
**ಅಱಗುಲಿ** – ಧರ್ಮದ್ರೋಹಿ; ಹಿಂಸಕ
**ಅಱಮಗ** – ಧರ್ಮರಾಜ
**ಅಱಮೆ** – ಅಜೀರ್ಣ
**ಅಱಲ್** – ನಂದಿಹೋಗು; ಒಣಗು
**ಅಱಲ್ಗೊಳ್** – ಬಾಯಾರಿಕೆಯಾಗು
**ಅಱವಟ್ಟಿಗೆದಾಣ** – ಧರ್ಮಕ್ಕೆ ಪಾನೀಯ ನೀಡುವ ಅಱವಟ್ಟಿಗೆ ಇರುವ ಜಾಗ
**ಅಱವಟ್ಟಿಗೆವಾರ್ವ** – ಅಱವಟ್ಟಿಗೆಯಲ್ಲಿ ಕೆಲಸಮಾಡುವ ಬ್ರಾಹ್ಮಣ
**ಅಱವಟ್ಟೆ** – ನ್ಯಾಯದ ಹಾದಿ
**ಅಱವಟ್ಟೆಗ** – ನ್ಯಾಯದ ಹಾದಿಯಲ್ಲಿ ನಡೆಯುವವನು
**ಅಱವಱಗು** – ಬತ್ತಿ ಹೋಗು, ಮಳೆಯಿಲ್ಲದೆ ಒಣಗು
**ಅಱಸು** – ಹುಡುಕು
**ಅಱಿ** – ತಿಳಿ
**ಅಱಿಕೆ** – ತಿಳಿವಳಿಕೆ; ಪ್ರಸಿದ್ಧಿ; ಬಯಕೆ
**ಅಱಿಕೆಗಾಳೆಗ** – ಪ್ರಸಿದ್ಧ ಕಾಳಗ
**ಅಱಿಕೆದಾಣ** – ಶ್ರೇಷ್ಠ ಸ್ಥಳ
**ಅಱಿಕೆನಾಯಕ** – ಪ್ರಸಿದ್ಧನಾದ ಮುಂದಾಳು
**ಅಱಿತ** – ಜ್ಞಾನ; ವಿವೇಕ
**ಅಱಿಪು** – ತಿಳಿಸು; ಬಿನ್ನವಿಸಿಕೊ
**ಅಱಿಮರುಳ್** – ಬುದ್ಧಿ ಮರುಳಾಗುವುದು
**ಅಱಿಮರುಳ** – ಬುದ್ಧಿಭ್ರಮೆಗೊಂಡವನು
**ಅಱಿಯುಮಿಕೆ** – ಅಜ್ಞಾನ, ತಿಳಿಗೇಡಿತನ
**ಅಱಿಯಮೆ** – ಅಜ್ಞಾನ, ಮರೆವು
**ಅಱಿಯಿಸು** – ತಿಳಿಯಪಡಿಸು
**ಅಱಿಲ್** – ನಕ್ಷತ್ರ
**ಅಱಿಲ್ವಟ್ಟೆ** – ನಕ್ಷತ್ರಮಾರ್ಗ, ಆಕಾಶ
**ಅಱಿವಿಡಿ** – ಅರಿತುಕೊ
**ಅಱಿವು** – ತಿಳಿವಳಿಕೆ; ಜ್ಞಾನ
**ಅಱಿವುಗೆಡಿಸು** – ಬುದ್ಧಿಗೆಡಿಸು
**ಅಱಿವುಗೆಡು** – ಬುದ್ಧಿಹೀನನಾಗು
**ಅಱು** – ಪ್ರೀತಿ
**ಅಱುಂಬು** – ಬರ
**ಅಱುಂಬುನೀರ್** – ಹಳ್ಳ ತೋಡಿದಾಗ ಸಿಕ್ಕುವ ನೀರು, ಚಿಲುಮೆ ನೀರು
**ಅಱುಕುಳ** – ಒಣಗುವ ಸ್ವಭಾವದ್ದು
**ಅಱುಗೆಯ್** – ಒಣಗಿದ ಗದ್ದೆ
**ಅಱುಗೆಱೆ** – ಬತ್ತಿಹೋದ ಕೆರೆ
**ಅಱುಚು** – ಅರಚು; ಕೂಗು
**ಅಱುದಿಂಗಳ್** – ಆರು ತಿಂಗಳು
**ಅಱುನೀರ್** – ಇಂಗಿಹೋದ ನೀರು
**ಅಱುನೀರ್ವಳ್ಳ** – ಬತ್ತಿದ ಹಳ್ಳ
**ಅಱುನೂಱು** – ಆರು ನೂರು
**ಅಱುಮೆ** – ಆರು ಸಲ
**ಅಱುಮೊಗ** – ಷಣ್ಮುಖ
**ಅಱುವಡಿ** – ಆರು ಪಟ್ಟು
**ಅಱುವತ್ತು** – ಅರವತ್ತು
**ಅಱುಸಾಸಿರ** – ಆರು ಸಾವಿರ
**ಅಱೆ** – ಬತ್ತು; ಅಪ್ಪಳಿಸು; ಪೆಟ್ಟು; ಬಂಡೆ
**ಅಱೆಗಲ್** – ಬಂಡೆಗಲ್ಲು
**ಅಱೆಮರುಳ್** – ಭ್ರಮೆಗೊಂಡವನು
**ಅಱೆಯಟ್ಟು** – ಬೆನ್ನಟ್ಟು
**ಅಱೆವೊಯ್** – ಅಪ್ಪಳಿಸಿ ಹೊಡೆ
**ಅೞ್** – ಕಣ್ಣೀರು ಹಾಕು; ಅಳುವಿಕೆ
**ಅೞಲ್** – ದುಃಖಿಸು; ದುಃಖ
**ಅೞಲಿಗ** – ದುಃಖಗೊಂಡವನು; ಪ್ರಿಯ
**ಅೞಲಿಸು** – ದುಃಖಕ್ಕೀಡುಮಾಡು
**ಅೞಲ್ಚು** – ಅೞಲಿಸು
**ಅೞಲ್ವೆ** – ಶೋಕ
**ಅೞವೆ** – ತೂಬು, ಬಿಡುಗಂಡಿ
**ಅೞಿ** – ನಾಶಗೊಳ್ಳು, ನಾಶಮಾಡು; ಮರೆಯಾಗು; ನಾಶ; ಅಲ್ಪತನ; ಅಳೆಯುವ ಪಾತ್ರೆಯಲ್ಲಿ ನಿಂತ ದ್ರವ
**ಅೞಿಕ** – ನೀಚ
**ಅೞಿಕೆ** – ಪ್ರಸಿದ್ಧಿ
**ಅೞಿಗಂಡ** – ಪೌರುಷಹೀನ; ಕಾಪುರುಷ
**ಅೞಿಗಂಡು** – ಕಡಿಮೆ ಪರಾಕ್ರಮ
**ಅೞಿಗಜ್ಜ** – ಮಾಡಬಾರದ ಕೆಲಸ
**ಅೞಿಗಣ್** – ವಿಕಾರವಾದ ಕಣ್ಣು
**ಅೞುಗಣ್ಣ** – ವಿಕಾರ ಕಣ್ಣುಳ್ಳವನು
**ಅೞಿಗಬ್ಬ** – ಕೀಳು ಕಾವ್ಯ
**ಅೞಿಗವಿ** – ಕ್ಷುಲ್ಲಕ ಕವಿ
**ಅೞೊಗಾಳೆಗ** – ಸಣ್ಣ ಕಾಳಗ
**ಅೞಿಗೆಯ್ತ** – ನೀಚ ಕಾರ್ಯ
**ಅೞಿಗೆವದ್ದ** – (ಅಳಿಕಾಬಂಧ) ಬಾಸಿಂಗ
**ಅೞಿಚಟ್ಟು** – ಹೀನವಾದ ಶಿಷ್ಯತನ
**ಅೞಿಚಾಗಿ** – ಕ್ಷುಲ್ಲಕ ತ್ಯಾಗಿ
**ಅೞಿಜಗಳ** – ಕ್ಷುಲ್ಲಕ ಜಗಳ
**ಅೞಿಜಪ** – ಸುಳ್ಳು ಜಪ
**ಅೞಿದೆರೆ** – ಪುಟ್ಟ ತೆರೆ

**ಅೞಿನುಡಿ** – ಕೆಟ್ಟ ಮಾತು
**ಅೞಿನೆಗೞ್ತಿ** – ತುಚ್ಛ ಕಾರ್ಯ
**ಅೞಿಪ** – ಹಾಳುಮಾಡುವವನು; ಅಲ್ಪ ವ್ಯಕ್ತಿ
**ಅೞಿಪು** – ಹಾಳುಮಾಡು; ಕೇಡು; ಆಸೆ
**ಅೞಿಪೂಜೆ** – ವಿಧಿವಿರುದ್ಧವಾದ ಪೂಜೆ
**ಅೞಿಬಂಟು** – ಅಲ್ಪ ಕಾರ್ಯ
**ಅೞಿಬಳಿ** – ಮೇರೆಮೀರು
**ಅೞುಭವ** – ಹೀನ ಜನ್ಮ
**ಅೞಿಮಂತ್ರ** – ಕುಮಂತ್ರ; ಹೀನ ಸಮಾಲೋಚನೆ
**ಅೞಿಮನ** – ಹೀನ ಮನಸ್ಸು
**ಅೞಿಮಾನಸ** – ಅಳಿವಾನಿಸ, ಕೆಟ್ಟ ವ್ಯಕ್ತಿ
**ಅೞಿಮೋಹ** – ಹೀನಕರವಾದ ಮೋಹ
**ಅೞಿಯಮೆ** – ಅಜ್ಞಾನ
**ಅೞಿಯಾಸೆ** – ಕೀಳು ಆಸೆ, ದುರಾಸೆ
**ಅೞಿಯಾಳ್** – ಹೀನ ಮನುಷ್ಯ
**ಅೞಿಯಿಸು** – ನಾಶಮಾಡು
**ಅೞಿಯೂರ್** – ಕುಗ್ರಾಮ
**ಅೞಿಯೊಡಲ್** – ನಶ್ವರವಾದ ಶರೀರ
**ಅೞಿಯೋಲೆ** – ಹೀನವಾದ ಓಲೆ, ಪತ್ರ
**ಅೞಿವಗೆ** – ಅೞಿ+ಪಗೆ, ಅಲ್ಪನಾದ ಹಗೆ; ಅೞಿ+ಬಗೆ, ಕೆಟ್ಟ ಬುದ್ಧಿ
**ಅೞಿವಡೆಮಾತು** – ಅಪಕೀರ್ತಿ
**ಅೞಿವಾಡ** – ಕುಗ್ರಾಮ
**ಅೞಿವು** – ವಿನಾಶ; ಸಾವು; ಶೈಥಿಲ್ಯ
**ಅೞಿವೆಂಡಿರ್** – ಅಲ್ಪರಾದ ಸ್ತ್ರೀಯರು
**ಅೞಿವೆಜ್ಜ** – ಕ್ಷುದ್ರ ವೈದ್ಯ
**ಅೞಿವೆಣ್** – ಹೀನ ಗೆಂಗಸು
**ಅೞಿವೆಸನ** – ಹೀನ ಆಸೆ; ಕ್ಷುದ್ರ ಕಾರ್ಯ
**ಅೞಿವೋಗು** – ಹೊರಕ್ಕೆ ಸೂಸು
**ಅೞಿಸು** – ಅಳುವಂತೆ ಮಾಡು
**ಅೞಿಸುಖ** – ತುಚ್ಛ ಸುಖ
**ಅೞಿಸೊಗ** – ಅೞಿಸುಖ
**ಅೞುಹ** – ರೋದನ
**ಅೞ್ಕಜ** – ಅಕ್ಕಜ, ಆಶ್ಚರ್ಯ; ಹೊಟ್ಟೆಕಿಚ್ಚು
**ಅೞ್ಕಜಂಬಡು** – ಅಸೂಯೆಪಡು
**ಅೞ್ಕಮೆ** – ಅಜೀರ್ಣ
**ಅೞ್ಕಮೆವಡು** – ಅಜೀರ್ಣವಾಗು
**ಅೞ್ಕಮೆವೇಱು** – ಅೞ್ಕಮೆವಡು
**ಅೞ್ಕರ್ತಂ** – ಪ್ರಿಯ, ನಲ್ಲ
**ಅೞ್ಕಱ್(ಱು)** – ಪ್ರೀತಿಸು; ಅಕ್ಕರೆ
**ಅೞ್ಕಾಡು** – ನಾಶವಾಗು; ಜೀರ್ಣವಾಗು
**ಅೞ್ಕು** – ಜೀರ್ಣವಾಗು; ನಾಶವಾಗು
**ಅೞ್ಕಿ** – ರೋದನ
**ಅೞ್ಗಿತೞ್ಗು** – ನಾಶವಾಗಿ ತಗ್ಗು
**ಅೞ್ಗಿಮೞ್ಗು** – ನಾಶವಾಗಿ ಮಟ್ಟವಾಗು
**ಅೞ್ಗು** – ಕುಗ್ಗು; ನಾಶವಾಗು
**ಅೞ್ತಿ** – ಪ್ರೀತಿ; ಸಂತೋಷ; ಇಷ್ಟ
**ಅೞ್ತಿಕಾಱ(ರ್ತಿ)** – ಪ್ರೀತಿಸುವವನು(ಳು)
**ಅೞ್ತಿಗ(ಗೆ)** – ಪ್ರೀತಿಯುಳ್ಳವನು(ಳು)
**ಅೞ್ತಿವಡು** – ಪ್ರೀತಿಸು
**ಅೞ್ತಿವರ್** – ಪ್ರಿಯವಾದ ಸಂದೇಶ ಬರು
**ಅೞ್ದಿದಂ** – ಕೆಟ್ಟುಹೋದವನು; ಸತ್ತುಹೋದವನು
**ಅೞ್ಕು(ೞ್ಗು)** – ನಾಶವಾಗು
**ಅೞ್ಗು** – ನಾಶ ಹೊಂದು
**ಅೞ್ದು** – ಮುಳುಗು; ಮುಳುಗಿಸು
**ಅೞ್ವು** – ಸುಡು; ಕೇಡನ್ನುಂಟುಮಾಡು
**ಅೞ್ಕಿ** – ರೋದನ
**ಅೞ್ಗಿ** – ಅಡುಗೆ

## ಆ

**ಆಂಕೆ** – ಹಿಡಿತ; ಪ್ರತಿಭಟನೆ
**ಆಂಕೆಗೊಡು** – ಆಸರೆ ನೀಡು
**ಆಂಕೆಗೊಳ್** – ಪ್ರತಿಭಟಿಸು, ಎದುರಿಸು
**ಆಂಕೆಯಾಳ್** – ಪ್ರತಿಭಟಿಸುವ ಭಟ
**ಆಂಗಿಕ** – ದೇಹಕ್ಕೆ ಸಂಬಂಧಿಸಿದ; ಒಂದು ಅಭಿನಯ ಪ್ರಭೇದ
**ಆಂಗೊಳಗು** – ಹಸುವಿನ ಗೊರಸು
**ಆಂದೆ(ಗ)** – ಒಂದು ಹಕ್ಕಿ, ಗೂಬೆ
**ಆಂದೆಗೀರ** – ಆಂದೆ(ಗ)
**ಆಂದೋಲ(ನ)** – ಉಯ್ಯಾಲೆ; ತೂಗಾಟ; ಮೇನೆ
**ಆಂದೋಲಾಯಮಾನ** – ಉಯ್ಯಾಲೆಯಂತಹ ತೂಗಾಟ
**ಆಂದೋಲ(ಳ)ನಂಗೆಯ್** – ತೂಗಾಡಿಸು
**ಆಂದೋಲಾ(ಳಾ)ಯಿತ** – ತೂಗಾಡುವ
**ಆಂಧ್ರಿ** – ಆಂಧ್ರದೇಶದ ಹೆಂಗಸು
**ಆಂಬರಂ** – ಆನ್+ವರಂ, ನನ್ನವರೆಗೂ
**ಆಕಂಠಪ್ರಮಾಣ** – ಕಂಠದವರೆಗೂ
**ಆಕಂಠೋಷ್ಠಂಬರಂ** – ಗಂಟಲು ಮತ್ತು ತುಟಿಯವರೆಗೆ
**ಆಕಂಪನಗೊಳ್** – ನಡುಗು
**ಆಕಂಪಿಸು** – ನಡುಗು
**ಆಕಪ್ಪು** – ಗುಳಿ, ಖೆಡ್ಡ
**ಆಕರಿಸು** – ಸ್ವೀಕರಿಸು; ಹೊಂದು; ಭಯಗೊಳ್ಳು
**ಆಕರ್ಣಕೃಷ್ಟ** – ಕಿವಿಯವರೆಗೆ ಸೆಳೆಯಲ್ಪಟ್ಟ
**ಆಕರ್ಣನ** – ಆಲಿಸುವುದು
**ಆಕರ್ಣನೀಯ** – ಆಲಿಸಲು ಯೋಗ್ಯವಾದ
**ಆಕರ್ಣಾಂತ** – ಬಿಲ್ಲಿನ ಹೆದೆಯನ್ನು ಕಿವಿಯವರೆಗೂ ಎಳೆಯುವುದು
**ಆಕರ್ಣಾಂತಂಬರಂ** – ಆಕರ್ಣಾಂತಂ
**ಆಕರ್ಣಿಸು** – ಆಲಿಸು
**ಆಕಲಿ(ಳ)ತ** – ಕೂಡಿದ, ಸೇರಿದ
**ಆಕಲಿ(ಳ)ಸು** – ಗ್ರಹಿಸು; ಹಿಡಿ
**ಆಕಲ್ಪ** – ಕಲ್ಪದವರೆಗೆ; ಒಡವೆ; ಅಲಂಕಾರ

**ಆಕಸ್ಮಿಕ** – ಅನಿರೀಕ್ಷಿತ
**ಆಕಳ್** – ಹಸು
**ಆಕಳಸು** – ಆವರಿಸು; ಹಿಡಿದುಕೊ
**ಆಕಾರವಂತ** – ರೂಪವಂತ, ಸುಂದರ
**ಆಕಾರಂಗಿಡು** – ರೂಪಗೆಡು
**ಆಕಾರಸಂವರಣೆ** – ಆಕಾರಗುಪ್ತಿ, ರೂಪವನ್ನು ಮರೆಮಾಚಿಕೊಳ್ಳುವುದು
**ಆಕಾಲಿ(ಳ)ಕಿ** – ಕ್ಷಣಿಕವಾದದ್ದು; ಮಿಂಚು
**ಆಕಾಶಗಾಮಿ** – ಅಂತರಿಕ್ಷದಲ್ಲಿ ಸಂಚರಿಸುವವನು
**ಆಕಾಶಗಾಮಿನಿ(ವಿದ್ಯೆ)** – ಅಂತರಿಕ್ಷದಲ್ಲಿ ಸಂಚರಿಸುವ ವಿದ್ಯೆ
**ಆಕಾಶದ್ರವ್ಯ** – (ಜೈನ) ಷಡ್ದ್ರವ್ಯಗಳಲ್ಲಿ ಒಂದು
**ಆಕಾಶಾಸ್ತಿಕಾಯ** – (ಜೈನ) ಐದು ಬಗೆಯ ಅಸ್ತಿಕಾಯಗಳಲ್ಲಿ ಒಂದು; ನೋಡಿ, 'ಅಸ್ತಿಕಾಯ'
**ಆಕಾಸವನಿ** – ಮಳೆಯ ಹನಿ
**ಆಕಿಂಚನ್ಯ** – ತನ್ನದೆಮದು ಏನೂ ಹೊಂದದಿರುವುದು
**ಆಕೀರ್ಣ** – ತುಂಬಿದ, ವ್ಯಾಪಿಸಿದ
**ಆಕುಂಚಿತ** – ಕುಗ್ಗಿದ; ಗದಾಯುದ್ಧದಲ್ಲಿನ ಒಂದು ಹೊಡೆತದ ಬಗೆ
**ಆಕುಲ** – ಕದಡಿದ; ಕ್ಷೋಭೆಗೊಂಡ; ಕಳವಳ
**ಆಕುಲಿತ** – ತುಂಬಿದ; ಕಲಕಿದ; ಕಳವಳದಿಂದ ಕೂಡಿದ
**ಆಕುಲೆ** – ಚಿಂತೆಗೊಳಗಾದವಳು
**ಆಕುಳೀ(ಲೀ)ಕೃತ** – ಕದಡುವಂತೆ ಆದ
**ಆಕೂತ** – ಇಂಗಿತ
**ಆಕೂರ್ಪರ** – ಮೊಳಕೈವರೆಗೆ
**ಆಕೃತಿಗಿಡು** – ಆಕಾರಗೆಡು
**ಆಕೃತಿದಾಳ್** – ಆಕಾರವನ್ನು ಹೊಂದು
**ಆಕೃತಿವಂತ** – ರೂಪವಂತ
**ಆಕೃತಿಸಂವೃತಿ** – ರೂಪು ಅಡಗಿಸುವಿಕೆ
**ಆಕೃಷ್ಟ** – ಜಗ್ಗಿದ, ಸೆಳೆದ
**ಆಕೃಷ್ಟಿ** – ಆಹರ್ಷಣೆ, ಸೆಳೆಯುವಿಕೆ
**ಆಕೃಷ್ಟಿಮಂತ್ರ** – ವಶೀಕರಣ ಮಂತ್ರ
**ಆಕೆವಾಳ** – ಶೂರ
**ಆಕೆವಾಳತನ** – ಶೌರ್ಯ
**ಆಕೇಕರ** – ಅರೆತೆರೆದ ಕಣ್ಣು
**ಆಕೇಕರಾಲೋಕ** – ಓರೆನೋಟ
**ಆಕೇಶಗ್ರಹಣಾಂತಂ** – ಜುಟ್ಟು ಹಿಡಿದು, ಬಲಾತ್ಕಾರವಾಗಿ
**ಆಕ್ರಂದತ್ಸ್ವರ** – ಅಳುವಿನ ಧ್ವನಿ
**ಆಕ್ರಂದಿಸು** – ಅಳು
**ಆಕ್ರಮಣಧ್ವನಿ** – ಗದರಿಕೆ
**ಆಕ್ರಾಂತ** – ಆವರಿಸಲ್ಪಟ್ಟ
**ಆಕ್ರಾಂತಿ** – ಆಕ್ರಮಣ
**ಆಕ್ರೋಶ** – ದುಃಖದಿಂದ ಕೂಗಿಕೊಳ್ಳುವುದು; ಶಾಪದ ಬೈಗುಳು
**ಆಕ್ರೋಶ(ಧ್ವನಿ)** – ದುಃಖದ ಕೂಗಾಟ; ರೇಗಾಟದ ಧ್ವನಿ
**ಆಕ್ಷಿಪ್ತ** – ಎಸೆಯಲ್ಪಟ್ಟ; ಗದಾಯುದ್ಧದಲ್ಲಿನ ಒಂದು ಬಗೆಯ ಹೊಡೆತ
**ಆಕ್ಷೇಪ** – ಎಸೆತ; ನಡುಕ; ಬೈಯುವುದು
**ಆಕ್ಷೇಪಣೀಯ** – ಬೈಗುಳಕ್ಕೆ ತಕ್ಕುದಾದ; (ಜೈನ) ನಾಲ್ಕು ಬಗೆಯ ಧರ್ಮಕಥೆಗಳಲ್ಲಿ ಒಂದು
**ಆಕ್ಷೇಪವಾಚಕ** – ಪರಿಹಾಸಕ್ಕೆ ಎಡಗೊಡುವ ಮಾತು
**ಆಕ್ಷೋಟ** – ಬೆಟ್ಟದ ಗೋಣಿಮರ
**ಆಖಂಡ(ಲ)ಳ** – ಇಂದ್ರ
**ಅಖಂಡಳತನಯ** – ಇಂದ್ರನ ಮಗ; ಅರ್ಜುನ, ವಾಲಿ
**ಆಖು(ಶಾಬ)** – ಇಲಿ(ಮರಿ)
**ಆಖೇಟ(ಕ)** – ಬೇಟೆ
**ಆಖ್ಯಾತ** – ತಿಳಿಸಲ್ಪಟ್ಟ
**ಆಖ್ಯಾನ** – ನಿರೂಪಣೆ; ಕಥಾನಕ
**ಆಖ್ಯಾನಕ** – ಕಥೆ
**ಆಖ್ಯೆ** – ಹೆಸರು
**ಆಗ** – ಆಗದು; ಪಾಪ; ಅಪರಾಧ
**ಆಗಂತು(ಕ)** – ಅನಿರೀಕ್ಷಿತವಾಗಿ ಬಂದವನು
**ಆಗಡು** – ಯಾವಾಗಲೂ; ಆ ಸಮಯದಲ್ಲಿ
**ಆಗಮ** – ಬರುವುದು; ಶಾಸ್ತ್ರಗಳು
**ಆಗಮಜ್ಞ** – ಶಾಸ್ತ್ರಗಳನ್ನು ಬಲ್ಲವನು
**ಆಗಮಭಾಷೆ** – ಶಾಸ್ತ್ರಗಳಲ್ಲಿನ ನುಡಿ
**ಆಗಮವಿತ್ತ್ವ** – ಆಗಮಜ್ಞಾನ
**ಆಗಮವೇದಿ** – ಶಾಸ್ತ್ರಜ್ಞ
**ಆಗಮಸಮಯ** – ಆಗಮಗಳ ಸಂಪ್ರದಾಯ
**ಆಗಮಿಕ** – ಶಾಸ್ತ್ರಜ್ಞ
**ಆಗರ** – ಮೂಲನೆಲೆ; ಆಶ್ರಯ; ಗಣಿ; ಮನೆ
**ಆಗಸ್** – ಅಪರಾಧ
**ಆಗಸ** – (ಆಕಾಶ), ಬಾನು
**ಆಗಸವಕ್ಕಿ** – ಒಂದು ಹಕ್ಕಿ, ಖಂಜರೀಟ
**ಆಗಸವಳಯ** – ಆಕಾಶಮಂಡಲ
**ಆಗಳಾಗಡೆ(ಳೆ)** – ಆ ಕ್ಷಣವೆ
**ಆಗಳಂತೆ** – ತತ್ಕ್ಷಣ
**ಆಗಾಮಿ** – ಬರಲಿರುವ
**ಆಗಾಮಿಕ** – ಭವಿಷ್ಯತ್ತಿಗೆ ಸಂಬಂಧಿಸಿದ
**ಆಗಾಮಿಕಾರ್ಯ** – ಮುಂದಿನ ಕೆಲಸ
**ಆಗಾರ** – ನೆಲೆ, ಮನೆ
**ಆಗಿಸು** – ಆಗುವಂತೆ ಮಾಡು
**ಆಗುಹ** – ಆಗುವಿಕೆ
**ಆಗುಳ್** – ಆಕಳಿಕೆ
**ಆಗು(ಕ)ಳಿಕೆ** – ಆಗುಳ್
**ಆಗುಳಸು** – ಆಕಳಿಸು

**ಆಗ್ನೀಧ್ರ** – ಯಜ್ಞಾಗ್ನಿಯನ್ನು ಪುಟಗೊಳಿಸುವವನು
**ಆಗ್ರ** – ಮನೆ, ಸುತ್ತಲ ಪ್ರದೇಶ
**ಆಗ್ರಹ** – ಹಿಡಿಯುವುದು; ಆಕ್ರಮಣ; ಒತ್ತಾಯ
**ಆಗ್ರಹಂಗೆಯ್** – ಒತ್ತಾಯ ಮಾಡು
**ಆಗ್ರಹಿಸು** – ಒತ್ತಾಯಿಸು
**ಆಘಾಟ** – ಮೇರೆ, ತುದಿ
**ಆಘಾಟಶುದ್ಧಿ** – ಮೇರೆಯನ್ನು ನಿಶ್ಚಯಿಸುವುದು
**ಆಘಾತ** – ಹೊಡೆತ, ಏಟು
**ಆಘ್ರಾಣ** – ವಾಸನೆ ನೋಡಿವುದು
**ಆಘ್ರಾಣಿಸು** – ಮೂಸಿನೋಡಿ
**ಆಘ್ರಾಯಿಸು** – ಆಘ್ರಾಣಿಸು
**ಆಘಾಳ** – ಪಾಪ, ದುರಿತ
**ಆಚ** – ಸಾಲವೃಕ್ಷ
**ಆಚಂದ್ರತಾರಂ** – ಚಂದ್ರತಾರೆಯರಿರುವವರೆಗೆ
**ಆಚಕ್ಷತೇ** – ಹೇಳುತ್ತೇವೆ
**ಆಚಮಿಸು** – ಆಚಮನ ಮಾಡು
**ಆಚರಣೆ** – ಅನುಸರಣೆ
**ಆಚರಿಸು** – ನೆರವೇರಿಸು
**ಆಚಾಮ್ಲವರ್ಧನ(ತಪ)** – (ಜೈನ) ಒಂದು ಬಗೆಯ ಉಪಪವಾಸವ್ರತ
**ಆಚಾರ್ಯ** – ಗುರು
**ಆಚಾರ್ಯಷಟ್ಕರ್ಮ** – (ಜೈನ) ಆಚಾರ್ಯರೂ ಶ್ರಾವಕರೂ ಮಾಡಬೇಕಾದ ಇಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪ ಎಂಬ ಆರು ಕರ್ಮಗಳು
**ಆಚ್ಛಾದಿಸು** – ಮುಚ್ಚು
**ಆಚ್ಛಾದ್ಯ** – ಮುಚ್ಚಲ್ಪಟ್ಟ
**ಆಚ್ಛಾದ್ಯಮಾನ** – ಮುಚ್ಚಲಾಗುತ್ತಿರುವ
**ಆಜವಂಜವ** – ಸಂಸಾರ
**ಆಜಸ್ರಂ** – ಸದಾಕಾಲ
**ಆಜಾನೇಯ** – ಉತ್ತಮ ಜಾತಿಯ ಕುದುರೆ
**ಆಜಿ** – ಯುದ್ಧ
**ಆಜಿರಂಗ** – ಯುದ್ಧರಂಗ
**ಆಜಿಲಂಪಟ** – ಯುದ್ಧದಲ್ಲಿ ಅತ್ಯಾಸಕ್ತ
**ಆಜಿಶ್ರಾಂತ** – ಯುದ್ಧಮಾಡಿ ಆಯಾಸಗೊಂಡ
**ಅಜೀವ** – ವೃತ್ತಿ; (ಜೈನ) ಸಾಧು, ಶ್ರಮಣ
**ಆಜೀವಕ** – ಭಿಕ್ಷುಕ; ಪರಿವ್ರಾಜಕ
**ಆಜ್ಞಾಕ್ಷರ** – ಆಜ್ಞೆಯ ಮಾತು
**ಆಜ್ಞಾನಿಧಿ** – ಆಜ್ಞೆಗಳಿಗೆ ಮೂಲವಾಗಿರುವವನು
**ಅಜ್ಞಾಪರಿಸ್ಫುರಣೆ** – ಅಪ್ಪಣೆಯ ಪ್ರಕಟಣೆ
**ಆಜ್ಞಾಲಂಘನ** – ಆಜ್ಞೆಯನ್ನು ಮೀರುವುದು
**ಅಜ್ಞಾವಿಚಯ** – (ಜೈನ) ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಒಂದು; ಆಗಮಗುಣಗಳ ಕುರಿತಾದ ಚಿಂತನೆ
**ಆಜ್ಞಾವಿಧೇಯ** – ಆಜ್ಞಾನುಸಾರ ನಡೆಯುವವನು
**ಆಜ್ಞಾಸಮುತ್ಪನ್ನೆ** – ಆಜ್ಞೆಗನುಸಾರವಾಗಿ ಹುಟ್ಟಿದವಳು
**ಆಜ್ಯ** – ತುಪ್ಪ
**ಆಜ್ಯಾಹುತಿ** – ಹೋಮದಲ್ಲಿ ಅಗ್ನಿಗೆ ತುಪ್ಪ ಆಹುತಿಯಾಗಿ ನೀಡುವುದು
**ಆಟ** – ಕ್ರೀಡೆ; ಕುಣಿತ,ನಾಟಕ ಮುಂತಾದವುಗಳ ಪ್ರದರ್ಶನ
**ಆಟಂಗುಳ** – ಆಟದಲ್ಲಿ ನಿರತನಾದವನು
**ಆಟಂದು** – ಬಯಸು
**ಆಟಕಾಱ(ರ್ತಿ)** – ನಟ(ಟಿ); ಆಟ ಆಡುವವನು(ಳು)
**ಆಟಪಾಟ** – ವಿನೋದ; ಆಡು ಹಡು
**ಆಟರ್** – ಮೇಲೆ ಬೀಳು
**ಆಟಲೆ** – ಅಟ್ಟಿಸಿಕೊಂಡು ಹೋಗಿ ಹಿಂಸೆಗೈ; ಕಾಟ
**ಆಟವಿಕ** – ಕಾಡಿನಲ್ಲಿ ವಾಸಿಸುವವನು; ಕಿರಾತ
**ಆಟವಿಟಂಬರಿಸು** – ಮೋಸಗೊಳಿಸು; ಗಾಯಗೊಳಿಸು
**ಆಟಿಸು** – ಬಯಸು; ಅತ್ತಿತ್ತ ಚಲಿಸು
**ಆಟೋಪ** – ಆಟಂಬರ ; ಅಬ್ಬರ; ದರ್ಪಪ್ರದರ್ಶನ
**ಆಟೋಪಂಬೆಱು** – ಆಟೋಪವನ್ನು ಹೊಂದು
**ಆಡಿಸು** – ಅಲುಗಾಡಿಸು; ಆಟವಾಡಿಸು; ನರ್ತಿಸುವಂತೆ ಮಾಡು
**ಆಡು** – ನುಡಿ; ಚಲಿಸು; ವಾಗ್ದಾನ ಮಾಡು; ಪಗಡೆ ಮುಂತಾದ ಆಟಗಳಲ್ಲಿ ಕಾಯಿ ನಡೆಸು; ಮೇಕೆ
**ಆಡುಂಗುಳ** – ಆಟದಲ್ಲಿ ಅತ್ಯಾಸಕ್ತ
**ಆಡುಂದೊಲೆ** – ತೂಗಾಡುವ ತೊಲೆ
**ಆಡುಂಬೊಲ** – ಆಟದ ಸ್ಥಳ; ಕ್ರೀಡಾಂಗಣ
**ಆಢಕೀ** – ಅವರೆ
**ಆಣತಿ** – ಆಜ್ಞಪ್ತಿ
**ಆಣತಿಮಾಡು** – ಹಾಡು ಹೇಳು
**ಆಣತಿಯಿಡು** – ಆಜ್ಞೆಮಾಡು
**ಆಣೆ** – (ಆಜ್ಞಾ) ಅಪ್ಪಣೆ; ಪ್ರತಿಜ್ಞೆ
**ಆಣೆಗೋಸಣೆ** – ಅಪ್ಪಣೆಯನ್ನು ಘೋಷಿಸುವುದು
**ಆಣೆಯಿಡು** – ಆಜ್ಞೆಮಾಡು; ಪ್ರತಿಜ್ಞೆಮಾಡು
**ಆಣ್ಮ** – ಒಡೆಯ; ಗಂಡ
**ಆತಂಕ** – ಹೆದರಿಕೆ; ತಲ್ಲಣ
**ಆತಂಕಕಳಂಕ** – ಅತಂಕ ಮುಂತಾದವುಗಳ ತೊಡಕು
**ಆತಂಕಿತಹೃದಯ** – ಭಯಗೊಂಡ ಹೃದಯದವನು
**ಆತತಜ್ಯಂಮಾಡು** – ಬಿಲ್ಲಿಗೆ ಹೆದೆಯೇರಿಸು
**ಆತಪ** – ಬಿಸಿಲು
**ಆತಪತ್ರ** – ಕೊಡೆ, ಛತ್ರಿ
**ಆತಪಯೋಗ** – ಬಿಸಿಲಿನಲ್ಲಿ ನಿಂತು ತಪಸ್ಸು ಮಾಡುವುದು
**ಆತಪವಾರಣ** – ಕೊಡೆ, ಛತ್ರಿ
**ಆತರ** – ನದಿಯನ್ನು ದಾಟುವುದು; ದೋಣಿ
**ಆತಾಮ್ರ** – ಚೆನ್ನಾಗಿ ಕೆಂಪಾಗಿರುವ
**ಆತಿಥ್ಯ** – ಅತಿಥಿಸೇವೆ
**ಆತುರ** – ಉತ್ಕಟ ಬಯಕೆ; ಯಾತನಾಪೀಡಿತ

**ಆತುರಿಸು** – ಆತುರಪಡು
**ಆತೋದ್ಯ** – ಬಾಜಿಸುವ, ವಾದ್ಯ
**ಆತೋದ್ಯಘೋಷ** – ವಾದ್ಯಧ್ವನಿ
**ಆತೋದ್ಯನಾದ** – ಆತೋದ್ಯಘೋಷ
**ಆತೋದ್ಯರವ** – ಆತೋದ್ಯಘೋಷ
**ಆತೋದ್ಯಸ್ವನ** – ಆತೋದ್ಯಘೋಷ
**ಆತೋದ್ಯಾಂಗ** – (ಜೈನ) ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು; ಬೇಡಿದ ವಾದ್ಯವನ್ನು ನೀಡುವ ವೃಕ್ಷ
**ಆತ್ತ** – ಪಡೆದ; ಹಿಡಿದ; ಆವರಿಸಿದ
**ಆತ್ತಚಿತ್ತ** – ಮನಸ್ಸುಳ್ಳವನು
**ಆತ್ತರಕ್ತರುಚಿ** – ಉಂಟಾದ ಕೆಂಪು ಕಾಂತಿ
**ಆತ್ತಸಂಗರ** – ಆರಂಭಗೊಂಡ ಯುದ್ಧ
**ಆತ್ತೋದಯ** – ಜನನ
**ಆತ್ಮಂಭರಿ** – ತನ್ನ ತಾನು ಸಾಕಿಕೊಳ್ಳುವವನು
**ಆತ್ಮಕೃತ** – ತಾನೇ ಮಾಡಿದ
**ಆತ್ಮಕೃತ್ಯ** – ತನ್ನದೇ ಕೆಲಸ
**ಆತ್ಮಗತ** – ಆತ್ಮಕ್ಕೆ ಸಂಬಂಧಿಸಿದ; ಸ್ವಗತ
**ಆತ್ಮಗುಣ** – ಆತ್ಮದ ಸ್ವಭಾವ
**ಆತ್ಮಗುಪ್ತಿ** – ನಸುಗುನ್ನಿ
**ಆತ್ಮಘಾತ** – ಆತ್ಮಹತ್ಯೆ
**ಆತ್ಮಜ(ನ್ಮ)** – ಮಗ
**ಆತ್ಮಜಾತ** – ಮಗ
**ಆತ್ಮಜ್ಞತೆ** – ಆತ್ಮದ ಸ್ವರೂಪ ತಿಳಿದಿರುವುದು
**ಆತ್ಮತತ್ತ್ವ** – ಆತ್ಮದ ಸ್ವರೂಪ
**ಆತ್ಮನಾಥ** – ತನ್ನ ಒಡೆಯ
**ಆತ್ಮನಿವಾಸ** – ತನ್ನದೇ ಮನೆ
**ಆತ್ಮಪರಾಭವ** – ತನ್ನದೇ ಸೋಲು
**ಆತ್ಮಪಾಲನ** – ತನ್ನನ್ನೇ ಕಾಪಾಡಿಕೊಳ್ಳುವುದು
**ಆತ್ಮಬಲ** – ಆತ್ಮ ಶಕ್ತಿ; ತನ್ನ ಶಕ್ತಿ
**ಆತ್ಮಭವ(ವೆ)** – ಮಗ(ಳು)
**ಆತ್ಮಭಾವಿ** – ಆತ್ಮಜ್ಞಾನದ ಫಲ
**ಆತ್ಮರಕ್ಷಕ** – (ಜೈನ) ಸ್ವರ್ಗದಲ್ಲಿ ಹುಟ್ಟಿದ ಜೀವಕ್ಕೆ ಅಂಗರಕ್ಷಕರಾಗಿರುವ ದೇವತೆಗಳು
**ಆತ್ಮರಕ್ಷೆಗೆಯ್** – ಸ್ವಂತ ರಕ್ಷಣೆಮಾಡಿಕೊ
**ಆತ್ಮರಾಗ** – ಮನಸ್ಸಿನ ಅನುರಾಗ
**ಆತ್ಮವಲ್ಲಭ** – ತನ್ನ ಒಡೆಯ, ಗಂಡ
**ಆತ್ಮವಿದ್ಧ** – ತನ್ನ ರೂಪವನ್ನು ತಾನೇ ಚಿತ್ರಿಸುವುದು
**ಆತ್ಮವಿಲಾಸ** – ತನ್ನ ವೈಭವ
**ಆತ್ಮಸುಖ** – ತನ್ನ ಸುಖ
**ಆತ್ಮಸ್ವಾಮಿ** – ತನ್ನ ಸ್ವಾಮಿ
**ಆತ್ಮಸ್ವೀಕೃತ** – ತಾನು ಸ್ವೀಕರಿಸಿದ
**ಆತ್ಮಹಿತ** – ಆತ್ಮನ ಹಿತ; ತನ್ನ ಹಿತ
**ಆತ್ಮಾನುಗತಾರ್ಥ** – ಮನಸ್ಸಿನಲ್ಲಿರುವ ಆಸೆ
**ಆತ್ಮಾನುಭೂತ** – ತನಗೇ ಅನುಭವಕ್ಕೆ ಬಂದ
**ಆತ್ಮಾಮಿಷ** – ತನ್ನ ಮಾಂಸ; ರಾಜ ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಶತ್ರು ಸಮಸ್ತಬಲದೊಡನೆ ವಿಜಿಗೀಷುವನ್ನು ಕಾಣುವುದು
**ಆತ್ಮಾಯತ್ತ** – ತನ್ನ ಅಧೀನ
**ಆತ್ಮಾಸ್ತಿತ್ವ** – ಆತ್ಮನ ಇರುವಿಕೆ
**ಆತ್ಮೀಕರಿಸು** – ಪರಿಗ್ರಹಿಸು
**ಆತ್ಮೀಕೃತ** – ಸ್ವೀಕರಿಸಿದ
**ಆತ್ಮೀಯ** – ತನಗೆ ಸೇರಿದ; ತನಗೆ ಪ್ರಿಯವಾದ
**ಆತ್ಮೀಯಬಲ** – ತನ್ನ ಸೈನ್ಯ
**ಆತ್ಮೇಶ** – ತನ್ನ ಒಡೆಯ
**ಆತ್ಮೈಶ್ವರ್ಯ** – ತನ್ನ ಐಶ್ವರ್ಯ
**ಆತ್ಮೋದ್ಯೋಗ** – ತನ್ನ ಕಾರ್ಯ
**ಆತ್ಯಂತಿಕ** – ಕೊಟ್ಟ ಕೊನೆಯ
**ಆತ್ಯಂತಿಕಸುಖ** – ಪರಮಸುಖ; ಮೋಕ್ಷ
**ಆತ್ಯಯ** – ನಾಶಮಾಡುವ
**ಆತ್ರೇಯ** – ಚಂದ್ರ
**ಆತ್ರೇಯದ್ಯುತಿ** – ಚಂದ್ರನ ಕಾಂತಿ
**ಆತ್ರೇಯಬಿಂಬ** – ಚಂದ್ರಮಂಡಲ
**ಆದಂ** – ವಿಶೇಷವಾಗಿ; ಸಂಪೂರ್ಣವಾಗಿ
**ಆದಮಾನುಂ** – ವಿಶೇಷವಾಗಿ
**ಆದಮೆ** – ವಿಶೇಷವಾಗಿಯೇ
**ಆದರ** – ಗೌರವ; ಉಪಚಾರ; ಆಸೆ
**ಆದರಂಗೆಯ್** – ಆದರಿಸು
**ಆದರಂಗೊಳ್** – ಆಸಕ್ತಿ ಹೊಂದು
**ಆದರಿಸು** – ಗೌರವ ತೋರಿಸು; ಉಪಚಾರಮಾಡು
**ಆದರ್ಪಿಸು** – ಕಡೆಗಣಿಸು; ಪ್ರತಿಭಟಿಸು
**ಆದರ್ಶ(ನ)** – ಕನ್ನಡಿ
**ಆದಲೆ** – ಅಗ್ರಭಾಗ; ಅತ್ತ ಕಡೆ; ಉಂಟಾಗುವಿಕೆ
**ಆದಾನ** – ಪಡೆಯುವುದು; (ಜೈನ) ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು
**ಆದಿ** – ಮೊದಲು; ಕಾರಣ
**ಆದಿಕಮಠ** – ಮೊದಲನೆಯ ಆಮೆ; ಭೂಮಿ ಹೊತ್ತ ವಿಷ್ಣುವಿನ ಕೂರ್ಮಾವತಾರ
**ಆದಿಕಲ್ಯಾಣ** – (ಜೈನ) ತೀರ್ಥಂಕರನಿಗೆ ಮಾಡುವ ಮೊದಲ ಕಲ್ಯಾಣ, ಗರ್ಭಾವತರಣ
**ಆದಿಗರ್ಭೇಶ್ವರ** – ಹುಟ್ಟಿನಿಂದ ರಾಜವಂಶಕ್ಕೆ ಸೇರಿದ; ಆಗರ್ಭ ಶ್ರೀಮಂತ
**ಆದಿಜಿನ** – (ಜೈನ) ಮೊದಲ ತೀರ್ಥಂಕರ; ವೃಷಭನಾಥ
**ಅದಿಜಿನೇಂದ್ರ** – ಆದಿಜಿನ
**ಆದಿಜಿನೇಶ್ವರ** – ಆದಿಜಿನ
**ಆದಿತೀರ್ಥಪ್ರವರ್ತಕ** – ಆದಿಜಿನ
**ಆದಿತೀರ್ಥೇಶ್ವರ** – ಆದಿಜಿನ
**ಆದಿತ್ಯ** – ಸೂರ್ಯ; (ಜೈನ) ಎಂಟು ಮಂದಿ ಲೋಕಾಂತಿಕ ದೇವರಲ್ಲಿ ಒಬ್ಬ
**ಆದಿತ್ಯನದೀಜ** – ದೇವಗಂಗೆಯ ಮಗ, ಭೀಷ್ಮ
**ಆದಿತ್ಯಪ್ರಭ** – ಸೂರ್ಯನಂತೆ ಪ್ರಭೆಯುಳ್ಳವನು
**ಆದಿತ್ಯಸುತ** – ಯಮ

**ಆದಿದೇವ** – ಮೊಟ್ಟ ಮೊದಲ ದೇವ; ಜಿನ
**ಆದಿನಾಥ** – ಆದಿದೇವ
**ಆದಿಪುರಾಣ** – (ಜೈನ) ಮೊದಲ ತೀರ್ಥಂಕರನನ್ನು ಕುರಿತ ಪುರಾಣ
**ಆದಿಪುರುಷ** – ಮೊದಲ ವ್ಯಕ್ತಿ; ಆದಿಜಿನ; ಆದಿನಾರಾಯಣ; ಶಿವ
**ಆದಿಬ್ರಹ್ಮ** – ಆದಿಜಿನ
**ಆದಿಭಟ್ಟಾರಕ** – ಆದಿಜಿನ
**ಆದಿಮಾರ್ಗ** – ಹಿಂದಿನಿಂದ ಬಂದ ರೀತಿ
**ಆದಿಮುನಿಪತಿ** – ಆದಿಜಿನ
**ಆದಿರಾಜ** – ಮೊದಲ ರಾಜ; ಮನು; **(ಜೈನ) ಭರತಚಕ್ರವರ್ತಿಯ ಒಬ್ಬ ಮಗನ ಹೆಸರು–**
**ಆದಿವಾಸರ** – ಭಾನುವಾರ
**ಆದೃಪ್ತ** – ಸೊಕ್ಕಿದ
**ಆದೇಯ** – ತೆಗೆದುಕೊಳ್ಳಬಹುದಾದ; ದಾನ; (ಜೈನ) ಒಂದು ಬಗೆಯ ನಾಮಕರ್ಮ
**ಆದೇಯನಾಮಕರ್ಮ** – (ಜೈನ) ತೊಂಬತ್ತುಮೂರು ಬಗೆಯ ಕರ್ಮಗಳಲ್ಲಿ ಒಂದು
**ಆದೇಯರೂಪ** – ಮೆಚ್ಚಿಕೊಳ್ಳಬಹುದಾದ ರೂಪ
**ಆದೇಶ** – ಆಜ್ಞೆ; ಉಪದೇಶ; ವಿಧಿ, ನಿಯಮ; ಭವಿಷ್ಯವಾಣಿ
**ಆದೇಶಂಗೆಯ್** – ಆಜ್ಞೆಮಾಡು; ಭವಿಷ್ಯ ನುಡಿ
**ಆದೇಶಪುರುಷ** – ಭವಿಷ್ಯವಾಣಿಯಲ್ಲಿ ಹೇಳಲಾದ ವ್ಯಕ್ತಿ
**ಆದೇಶವಚನ** – ಭವಿಷ್ಯವನ್ನು ಹೇಳುವ ನುಡಿ
**ಆದೊ(ದ)ಡೆ** – ಆದರೆ
**ಆದೊರೆತು** – ಅದಕ್ಕೆ ಸಮನಾದ; ಅಂತಹ
**ಆದೊರೆಯ** – ಅಂತಹ
**ಆದ್ಯ** – ಮೊದಲ; ಹಿರಿಯ
**ಆದ್ಯಕಾವ್ಯ** – ಮೊದಲ ಕಾವ್ಯ; ಶ್ರೇಷ್ಠ ಕಾವ್ಯ
**ಆಧಾನ** – ಇಡುವುದು; ತೆಗೆದುಕೊಳ್ಳುವುದು
**ಆಧಾರ** – ನೆಲೆ; ತಳಹದಿ; ಸೃಷ್ಟಿಮೂಲ
**ಆಧಾರರಹಿತ** – ಆಧಾರವಿಲ್ಲದ; ಪ್ರಮಾಣರಹಿತ
**ಆಧಿ** – ದುಃಖ; ವಿಪತ್ತು
**ಆಧಿಕ್ಯ** – ಅಧಿಕತೆ; ಹಿರಿಮೆ
**ಆಧಿರಾಜ್ಯ** – ಅಧಿರಾಜ ಪದವಿ
**ಆಧಿವ್ಯಾಧಿಪ್ರದ** – ವ್ಯಥೆ ಹಾಗೂ ರೋಗಗಳನ್ನುಂಟುಮಾಡುವ
**ಆಧೇಯ** – ಆಧಾರವಾಗಿರುವ; ಆಶ್ರಯ; ನ್ಯಾಸ
**ಆಧೇಯವಚನ** – ಮಾತಿನಲ್ಲಿ ಚತುರ
**ಆಧೋರಣ** – ಆನೆಯ ಸವಾರ; ಮಾವುತ
**ಆನ್** – ಎದುರಾಗು; ಎದುರಿಸು; ಧರಿಸು; ಒಡ್ಡು
**ಆನಂದಂಗಿಡು** – ಸಂತೋಷ ಇಲ್ಲವಾಗು
**ಆನಂದನ** – ಆನಂದ ತರುವ
**ಆನಂದನಾಟಕ** – ಹರ್ಷ ತರುವ ನಾಟಕ
**ಆನಂದನೃತ್ಯ** – ಆನಂದದಿಂದ ಮಾಡುವ ನೃತ್ಯ
**ಆನಂದಭೇರಿ** – ಸಂತೋಷಸೂಚಕವಾಗಿ ಹೊಡೆಸುವ ಭೇರಿ
**ಆನಂದಮೂರ್ತಿ** – ಆನಂದಸ್ವರೂಪಿ
**ಆನಂದವಸನ** – ಮುಟ್ಟಿನಿಂದ ಕೆಂಪಾದ ಬಟ್ಟೆ
**ಆನಂದವಸ್ತ್ರ** – ಆನಂದವಸನ
**ಅನಂದಾಶ್ರು(ಜಲ)** – ಆನಂದದ ಕಣ್ಣೀರು
**ಆನಕ** – ಭೇರಿ; ಗುಡುಗು
**ಆನಕದುಂದುಭಿ** – ಶ್ರೀಕೃಷ್ಣನ ತಂದೆ ವಸುದೇವ
**ಆನಕಧ್ವನಿ** – ಭೇರಿ, ತಮಟೆ ಮುಂತಾದವುಗಳ ನಿನಾದ
**ಆನಕಧ್ವಾನ** – ಆನಕಧ್ವನಿ
**ಆನಕರವ** – ಆನಕಧ್ವನಿ
**ಆನತಜನ** – ನಮಸ್ಕರಿಸಿದ, ಶರಣಾದ ಜನ
**ಆನತಭುವನ** – ಎಲ್ಲರಿಂದಲೂ, ಇಡೀ ಲೋಕದಿಂದ ಗೌರವಕ್ಕೊಳಗಾದವನು
**ಆನತಮಸ್ತಕ** – ತಲೆಬಾಗಿದ
**ಆನತಮುಖ** – ಮುಖ ತಗ್ಗಿಸಿದ
**ಆನತಮೂರ್ಧ** – ಆನತಮಸ್ತಕ
**ಆನತವದನೆ** – ಮುಖ ತಗ್ಗಿಸಿದವಳು
**ಆನನ** – ಬಾಯಿ; ಮುಖ
**ಅನಮ್ರಾಮರ** – ದೇವತೆಗಳಿಂದ ನಮಸ್ಕೃತನಾದವನು
**ಆನಿಸು** – ಜೋಡಿಸು; ಒರಗಿಸು
**ಆನೀಕ** – ಸಂಕುಲ
**ಆನೀಕಿನಿ** – ಅಕ್ಷೋಹಿಣಿಯ ಹತ್ತನೇ ಒಂದು ಭಾಗ
**ಆನುಕೂಲಿಕ** – ಅನುಕೂಲಕರ
**ಆನುವಂಶ** – ವಂಶಪರಂಪರೆಯಿಂದ ಬಂದ
**ಆನುಷಂಗಿಕ(ಫಲ)** – ಮುಖ್ಯ ವಿಷಯಕ್ಕೆ ಅಂಟಿಕೊಂಡು ಬರುವ; ಪ್ರಾಸಂಗಿಕವಾದ (ಫಲ)
**ಆನೂಪಕ್ಷೇತ್ರ** – ಸುತ್ತ ಸಮೃದ್ಧವಾಗಿ ನೀರಿರುವ ಸ್ಥಳ
**ಆನೆಗಂಬ** – ಆನೆಯನ್ನು ಕಟ್ಟುವ ಕಂಬ
**ಆನೆಗದುಪು** – ಆನೆಗಳ ಸಮೂಹ
**ಆನೆಗೊಲೆ** – ಆನೆಗಳನ್ನು ಕೊಲ್ಲುವುದು; ದೊಡ್ಡ ಕೊಲೆ
**ಆನೆಯಾಳ್** – ಆನೆಬಲದ ವ್ಯಕ್ತಿ
**ಆನೆವಸದನಂಗೊಳ್** – ಆನೆಯಂತೆ ಸಿಂಗರಿಸಿಕೊ
**ಆನೆವಾಂಗು** – ಆನೆಯನ್ನು ಪಳಗಿಸುವ ವಿದ್ಯೆ
**ಆನೆವಿನ್ನಾಣಿ** – ಗಜಶಾಸ್ತ್ರ ಬಲ್ಲವನು
**ಆನೆವೆಣ** – ಆನೆಯ ಹೆಣ
**ಆನೆಸಾಲೆ** – ಗಜಶಾಲೆ
**ಆಪಗಾ** – ನದಿ
**ಆಪಣ** – ಅಂಗಡಿ
**ಆಪತ್ತುವಡು** – ಕಷ್ಟಪಡು
**ಆಪತ್ಪ್ರತೀಕಾರ** – ಆಪತ್ತಿಗೆ ಪರಿಹಾರ
**ಆಪದ್ವಿನೀತ** – ಕಷ್ಟಕಾಲದಲ್ಲಿ ವಿನೀತನಾಗುವ

**ಆಪನ್ನ** – ಆಪತ್ತಿಗೆ ಗುರಿಯಾದ
**ಆಪರಾಹ್ಣಿಕಕ್ರಿಯೆ** – ಅಪರಾಹ್ನಕರ್ಮ
**ಆಪಾಂಡು** – ನಸುಬಿಳುಪಿನ
**ಆಪೀಡ** – ಒತ್ತುವುದು; ತಲೆಯ ಆಭರಣ
**ಆಪೂರ** – ಚೆನ್ನಾಗಿ ತುಂಬಿದ
**ಆಪೊೞ್ತುಂ** – ಯಾವ ಕಾಲದಲ್ಲಿಯೂ
**ಆಪೋಶನ** – ಊಟದ ಮೊದಲು ಮತ್ತು ಕೊನೆಗೆ ಮಂತ್ರಪೂರ್ವಕವಾಗಿ ಕುಡಿಯುವ ನೀರು
**ಆಪೋಶಿಸು** – ಹೀರಿಬಿಡು
**ಆಪ್ತ** – ಅಷ್ಟಾದಶದೋಷರಹಿತನಾದವನು
**ಆಪ್ತಚರ** – ನಂಬಿಕಸ್ಥ ಸೇವಕ
**ಆಪ್ತವರ್ತಿ** – ಆತ್ಮೀಯ
**ಆಪ್ತಾಗಮ** – ವೇದ, ಶಾಸ್ತ್ರ
**ಆಪ್ಯಾಯನ** – ಸುಖ; ತೃಪ್ತಿ
**ಆಪ್ಯಾಯನಕಾರಿ** – ಸುಖ ತರುವ; ಹಿತಕಾರಿ
**ಆಪ್ಯಾಯಮಾನ** – ಹಿತಕರವಾದ
**ಆಬಾಲಗೋಪಾಲ** – ಮಕ್ಕಳಿಂದ ಹಿಡಿದು ಗೋಪಾಲಕರವರೆಗೆ; ಸಮಸ್ತ
**ಆಭ** – ಸಮಾನ; ಹೋಲುವ; ಕಾಂತಿ
**ಆಭಾಸ** – ಕಾಂತಿ; ಭ್ರಾಂತಿ
**ಆಭಿಚಾರ** – ಶೂನ್ಯ ಮಾಟ
**ಆಭಿಜಾತ್ಯ** – ಸತ್ಕುಲದ; ಕುಲೀನತೆ
**ಆಭಿಯೋಗ್ಯ** – (ಜೈನ) ದೇವತೆಗಳಲ್ಲಿ ಒಂದು ಪಂಗಡ
**ಆಭೀಲ(ಳ)** – ಭಯಂಕರವಾದ
**ಆಭೀಲ(ಳ)ತೆ** – ಭಯಂಕರತೆ
**ಆಭೋಗ** – ಸುಖ; ಪರಿಪೂರ್ಣತೆ; ಹರಹು; ಹಾವಿನ ಹೆಡೆ
**ಆಮಂತ್ರಣಂಗೆಯ್** – ಆಹ್ವಾನಿಸು
**ಆಮಂತ್ರಿಸು** – ಆಹ್ವಾನಿಸು
**ಆಮಯ** – ರೋಗ
**ಆಮಯಮಂದಿರ** – ರೋಗಗೃಹ; ರೋಗದ ನೆಲೆ
**ಆಮಲ(ಳ)ಕ** – ನೆಲ್ಲಿಗಿಡ, ಕಾಯಿ
**ಆಮಲ(ಳ)ಕಪ್ರಮಾಣ** – ನೆಲ್ಲಿಕಾಯಿ ಗಾತ್ರ
**ಆಮಿಷ** – ಮಾಂಸ; ಲಂಚ; ಭೋಗಸಾಮಗ್ರಿ
**ಆಮೀಲನ** – ಮುಚ್ಚುವುದು
**ಆಮುತ್ರಿಕ** – ಆಮುಷ್ಮಿಕ; ಬೇರೆ ಲೋಕದ
**ಆಮೂಲಚೂಲ** – ಬೇರಿನಿಂದ ಹಿಡಿದು ತುದಿಯವರೆಗೆ
**ಆಮೋದ** – ಸಂತೋಷಕರ; ಪರಿಮಳ
**ಆಮೋದಚಿತ್ತ** – ಸಂತಸಗೊಂಡ ಮನಸ್ಸು
**ಆಮೋದಿತ** – ಸಂತಸಗೊಂಡ; ಸುವಾಸಿತ
**ಆಮ್ನಾಯ** – ಸಂಪ್ರದಾಯ; ಪರಂಪರಾನುಗತ; ವಂಶ
**ಆಮ್ರ** – ಮಾವು, ಮರ ಮತ್ತು ಹಣ್ಣು
**ಆಮ್ರರಸ** – ಮಾವಿನ ಹಣ್ಣಿನ ರಸ
**ಆಮ್ರವನ** – ಮಾವಿನ ತೋಪು
**ಆಮ್ರಾಯ** – ಒಂದು ಬಗೆಯ ಹೂ
**ಆಮ್ರೇಡಿತ** – ಪುನರುಕ್ತಿ
**ಆಯ್** – ಆರಿಸು; ಮನಸ್ಸಿಗೆ ಬಂದದ್ದನ್ನು ಮಾತ್ರ ತೆಗೆದುಕೊ
**ಆಯ** – ಪರಾಕ್ರಮ; ಐಶ್ವರ್ಯ; ಪರಿಮಿತಿ; ಕ್ರಮ; ಸೌಕರ್ಯ; ಸಾಮರ್ಥ್ಯ; ಆಳ; ಏಳಿಗೆ; ವಿಶಾಲ
**ಆಯಕಾರ** – ಕೆಲಸದ ಮರ್ಮ ತಿಳಿದವನು
**ಆಯತ** – ಅಗಲವಾದ; ಉದ್ದವಾದ; ಆಧಿಕ್ಯ
**ಆಯತಕರ** – ನೀಳ ತೋಳಿನವನು
**ಆಯತಕೀರ್ತಿ** – ಹರಡಿದ ಕೀರ್ತಿ
**ಆಯತನ** – ಮನೆ; ದೇವಾಲಯ
**ಆಯತಬಾಹು** – ಆಯತಕರ
**ಆಯತವೃತ್ತ** – ದೀರ್ಘವೃತ್ತ
**ಆಯತಿ** – ಸಂಯಮ; ಸಾಮರ್ಥ್ಯ; ಮಹಿಮೆ
**ಆಯತಿಕೆಗೆಡು** – ಗೌರವ, ಯೋಗ್ಯತೆ ಕೆಡಿಸಿಕೊ
**ಆಯತಿಕ್ಕೆ** – ಆಯತಿಕೆ, ಪ್ರಭಾವ, ಗೌರವ
**ಆಯತಿವೆೞು** – ವಿಸ್ತಾರಗೊಳ್ಳು; ಉತ್ಸಾಹಗೊಳ್ಳು; ಒಟ್ಟಾಗು
**ಆಯತ್ತ** – ಅಧೀನ; ಸನ್ನದ್ಧ
**ಆಯಸ** – ಬಳಲಿಕೆ; ಕಬ್ಬಿಣಕ್ಕೆ ಸಂಬಂಧಿಸಿದ; ಕಬ್ಬಿಣದ ಆಯುಧ
**ಆಯಸಪಿಂಡ** – ಕಬ್ಬಿಣದ ಗುಂಡು
**ಆಯಾತಪ್ರಯಾತ** – ಬರುವ ಮತ್ತು ಹೋಗುವ
**ಆಯಾಮ** – ಉದ್ದ; ನೀಳತೆ
**ಆಯಾಸಂಬಡು** – ಕಷ್ಟಪಡು
**ಆಯಾಸಿ** – ದಣಿದವನು
**ಆಯಿಲ** – ಕೊಳ್ಳೆ; ರೋಗ
**ಆಯಿಲಂಗೊಳ್** – ಕೊಳ್ಳೆಹೊಡೆ
**ಆಯಿಸ** – ಜೀವಿತಾವಧಿ
**ಆಯು** – ಜೀವಿತಾವಧಿ
**ಆಯುಧಶಾಲೆ** – ಶಸ್ತ್ರಾಸ್ತ್ರಗಳನ್ನಿಡುವ ಕಟ್ಟಡ
**ಆಯುರವಧಿ** – ಜೀವಿತಾವಧಿ
**ಆಯುರ್ದಶೆ** – ಆಯುಸ್ಸಿನ ಸ್ಥಿತಿ
**ಆಯುರ್ಮಿತಿ** – ಆಯುಸ್ಸಿನ ಮಿತಿ
**ಆಯುವೊಯ್** – ಜೀವತುಂಬು
**ಆಯುಶ್ಚ್ಯುತಿ** – ಆಯುಸ್ಸಿನ ನಾಶ
**ಆಯುಃಕರ್ಮ** – (ಜೈನ) ಆಯುಸ್ಸಿಗೆ ಕಾರಣವಾದ ಒಂದು ಕರ್ಮ
**ಆಯುಷ್ಯ** – ದೀರ್ಘಾಯುಸ್ಸು ಕೊಡತಕ್ಕ
**ಆಯುಷ್ಯಂಗಟ್ಟು** – ಆಯುಸ್ಸನ್ನು ಕಟ್ಟಿಕೊ
**ಆಯುಷ್ಯಾಂತ** – ಆಯುಸ್ಸಿನ ಕೊನೆ
**ಅಯೋಗ** – ಸೇರುವೆ, ಜೋಡಣೆ; ನೊಗಕ್ಕೆ ಹೂಡಿದ ಎತ್ತು
**ಆಯೋಗಂಗೊಳ್** – ಸೇರ್ಪಡೆಯಾಗು
**ಆಯೋಧನ** – ಯುದ್ಧ

**ಆಯ್ಕನೆ** – ಗಾಢವಾಗಿ ಎಂಬರ್ಥದ ಒಂದು ಅವ್ಯಯ
**ಆಯ್ಕುಳ** – ಆರಿಸಿಕೊಳ್ಳುವ ಸ್ವಭಾವದವನು
**ಆಯ್ಕುಳಗೊಳ್** – ಆರಿಸಿಕೊ
**ಆರ್** – ಗಟ್ಟಿಯಾಗಿ ಕೂಗು; ಅರಚು; ತೃಪ್ತಿಪಡು; ತುಂಬು; ನೊಗ ಎತ್ತುಗಳನ್ನು ಹೂಡಿದ ನೇಗಿಲು
**ಆರಂಬ** – ಬೇಸಾಯ
**ಆರಂಬಂಗೆಯ್** – ಆರಂಬಗೈ; ಬೇಸಾಯ ಮಾಡು
**ಆರಂಭ** – ಮೊದಲು; ಬೇಸಾಯ; ಹಿಂಸೆ
**ಆರಂಭಕ** – ಮೊದಲು ಮಾಡುವವನು; (ಜೈನ) ಹನ್ನೊಂದು ಬಗೆಯ ಶ್ರಾವಕರಲ್ಲಿ ಒಬ್ಬ
**ಆರಕ್ತ** – ಕೆಂಪಗಿರುವ
**ಆರಡಿ** – ವೈರ; ಹಿಂಸೆ
**ಆರಡಿಗೊಳ್** – ಸೂರೆಗೊಳಗಾಗು
**ಆರಣವಿಮಾನ** – (ಜೈನ) ಆರಣವೆಂಬ ಕಲ್ಪದ ಇಂದ್ರನ ವಿಮಾನ
**ಆರಣೇಂದ್ರ** – (ಜೈನ) ಆರಣವೆಂಬ ಸ್ವರ್ಗದ ಇಚಿದ್ರ
**ಆರತ** – ಮೃದುಸ್ವಭಾವದ
**ಆರಭಟೀ** – ಪರಿಶೀಲಿಸು; ಮಾಯೆ; ಇಂದ್ರಜಾಲ; ವಿವಿಧ ಭಾವಗಳನ್ನು ಅಭಿನಯಿಸುವ ಕ್ರಮ
**ಆರನಾಲ(ಕ)** – ಅಂಬಲಿ
**ಆರಮೆ(ವೆ)** – ಉದ್ಯಾನ
**ಆರಯ್** – ಹುಡುಕು; ವಿಚಾರಿಸು; ವಿಮರ್ಶಿಸು
**ಆರಯ್ಕೆ** – ವಿಚಾರಮಾಡುವುದು; ವಿಮರ್ಶೆ
**ಆರಾಜಿತೆ** – ಅಲಂಕೃತಗೊಂಡವಳು
**ಆರಾತಿ** – ಹತ್ತಿರದ
**ಆರಾತೀಯ** – ಹಿಂದಿನ; ದೂರದ
**ಆರಾಧನೆ** – ಪ್ರಜೆ; (ಜೈನ) ಅವ್ಯಜ್ಞಾನ ದರ್ಶನ, ಚಾರಿತ್ರ, ತಪಸ್ಸುಗಳ ಸಾಧನೆ
**ಆರಾಧಿಸು** – ಪ್ರಜೆಸು; ಓಲಯಸು
**ಆರಾಧ್ಯ** – ಪೂಜನೀಚು
**ಆರಾಮ** – ಸುಖಕರವಾದ; ಆರವೆ
**ಆರಾವ** – ಶಬ್ದ, ಧ್ವನಿ
**ಆರುಷ್ಕರ** – ಗೇರುಬೀಜ
**ಆರುರುಕ್ಷು** – ಮೇಲೇರುವ ಆಸೆಯುಳ್ಳವನು
**ಆರುಹತ** – ಜೈನಮತೀಯ
**ಆರೂಢ** – ಕೈಕೊಂಡ; ಹತ್ತಿದ
**ಆರೂಢತಪ** – ತಪಸ್ಸನ್ನು ಕೈಗೊಂಡವನು; ಮಾಘಮಾಸವನ್ನು ಹಿಡಿದವನು
**ಆರೂಢಪ್ರತಿಜ್ಞ** – ಪ್ರತಿಜ್ಞೆಯನ್ನು ಕೈಗೊಂಡವನು
**ಆರೂಢವಿದ್ಯೆ** – ಪ್ರಾಣಿಗನ್ನು ಪಳಗಿಸಿ ಸವಾರಿ ಮಾಡುವ ವಿದ್ಯೆ
**ಆರೂಢಸರ್ವಜ್ಞ** – ಆರೂಢವಿದ್ಯೆಯಲ್ಲಿ ಪರಿಣತ
**ಆರೂಢೆ** – ಮೇಲೇರಿದವಳು
**ಆರೆ** – ಗೊರಸಿನ ಹಿಂಭಾಗ; ಅಂಕುಶ
**ಆರೆಕಾ(ಗಾ)ಱ** – ಆರೆಯನ್ನು ಹಿಡಿದ ಮಾವತಿಗ
**ಆರೆಗೊಂಬು** – ಭಲ್ಲೆ; ಈಟಿ
**ಆರೋಗಣೆಗೆಯ್** – ಊಟಮಾಡು
**ಆರೋಗಿಸು** – ಆರೈಸು; ಊಟಮಾಡು
**ಆರೋಪ** – ಏರಿಸು
**ಆರೋಪಿತ** – ಹೆದೆಯೇರಿಸಿದ
**ಆರೋಹಕ** – ಸವಾರ
**ಆರೋಹಕತನ** – ಸವಾರಿ
**ಆರೋಹಕೌಶಲ** – ಆರೋಹಕನ ಕುಶಲತೆ
**ಆರೋಹಣ** – ಹತ್ತುವುದು; ಮೆಟ್ಟಿಲು; ಏಣಿ
**ಆರೋಹಿಸು** – ಹತ್ತು, ಏರು
**ಆರ್ಕಿ** – ಸೂರ್ಯನ ಮಗ; ಶನಿ
**ಆರ್ಗೆ** – ಯಾರಿಗೆ (ಹುಟ್ಟಿದವನು/ಳು), ಯಾರ ಮಗ(ಳು)
**ಆರ್ಜವ** – ಪ್ರಾಮಾಣಿಕತೆ; ಸಮಚಿತ್ತತೆ; ವಿನಮ್ರಸ್ವಭಾವದ
**ಆರ್ಜಿಕೆ** – ಕಂತಿ
**ಆರ್ಜಿಸು** – ಸಂಪಾದನೆ ಮಾಡು
**ಆರ್ತ** – ಸಮರ್ಥ; ದುಃಖಿತ; ವಿಪತ್ತು
**ಆರ್ತಧ್ಯಾನ** – (ಜೈನ) ಇಷ್ಟವಾದದ್ದು ದೂರವಾದೀತೆಂಬ ಮತ್ತು ಅದರ **ಬಗೆಗಿನ ಆಕಾಂಕ್ಷೆಯಿಂದ ಕೂಡಿದ ಚಿಂತೆ–**
**ಆರ್ತರೌದ್ರ** – (ಜೈನ) ಕಷ್ಟಕ್ಕೆ ಕಾರಣರಾದವರ ಮೇಲೆ ಸೇಡು ತೀರಿಸಿಕೊಳ್ಳುವ ಚಿಂತೆ
**ಆರ್ದ್ರ** – ಒದ್ದೆಯಾದ
**ಆರ್ದ್ರಕ** – ಹಸಿ ಶುಂಠಿ
**ಆರ್ದ್ರಭಾವ** – ತೇವವಾಗಿರುವಿಕೆ
**ಆರ್ದ್ರಮತಿ** – ಮೃದುಹೃದಯ
**ಆರ್ದ್ರಹೃದಯ** – ಆರ್ದ್ರಮತಿ
**ಆರ್ದ್ರಾಂತರಂಗ** – ಆರ್ದ್ರಹೃದಯ
**ಆರ್ದ್ರಾಶಯ** – ಆರ್ದ್ರಹೃದಯ
**ಆರ್ದ್ರೀಕರಣ** – ನೆನೆಸುವುದು
**ಆರ್ಪಳ** – ಆರ್ಪು ಅಳಿ, ಶಕ್ತಿಗುಂದು
**ಆರ್ಪು** – ಸಾಮರ್ಥ್ಯ; ಪರಾಕ್ರಮ; ಗಟ್ಟಿಯಾದ ಕೂಗು; ಗರ್ಜನೆ
**ಆರ್ಪುಗುಂದು** – ಆರ್ಪಳಿ
**ಆರ್ಪುಗೆಯ್ತ** – ಸಾಹಸಕೃತ್ಯ
**ಆರ್ಭಟೆ** – ಗರ್ಜನೆ; ಗಟ್ಟಿಯಾದ ಕೂಗು
**ಆರ್ಮ** – ನೆಲೆ; ರಕ್ಷಣೆ
**ಆರ್ಯ(ಷಟ್)ಕರ್ಮ** – ಉತ್ತಮನಾದವನ ಕಾರ್ಯ; (ಜೈನ) ಶ್ರಾವಕರು ಅನುಸರಿಸಬೇಕಾದ ಆರು ಕರ್ಮಗಳು: ಸ್ವಾಧ್ಯಾಯ, ಸಂಯಮ, ತಪ, ಇಜ್ಯಾ, ವಾರ್ತಾ, ದತ್ತಿ; ಜೀವನೋಪಾಯದ ಕರ್ಮಗಳು: ಅಸಿ, ಮಸಿ, ವಿದ್ಯೆ, ವಾಣಿಜ್ಯ, ಶಿಲ್ಪ, ಕೃಷಿ
**ಆರ್ಯಕೆ** – ಕಂತಿ
**ಆರ್ಯಚರಿತ** – ಉತ್ತಮ ನಡವಳಿಕೆಯವನು

**ಆರ್ಯಪ್ರಣುತ** – ಆರ್ಯರಿಂದ ಅಥವಾ ಹಿರಿಯರಿಂದ ಹೊಗಳಲ್ಪಟ್ಟ
**ಆರ್ಯವಿಮುಖ** – ಹಿರಿಯರನ್ನು ಕಡೆಗಣಿಸುವವನು
**ಆರ್ಯೇವೇಷ** – ಒಳ್ಳೆಯ ಉಡುಪು ಧರಿಸಿದವನು
**ಆರ್ಯಷಟ್ಕರ್ಮ** – ನೋಡಿ, ಆರ್ಯಕರ್ಮ
**ಆರ್ಯಾವೃತ್ತ**– ಆರ್ಯೇ ಎಂಬ ಛಂದಸ್ಸು
**ಆರ್ಯಿಕೆ** – ಗೌರವಾರ್ಹಳು, ಕಂತಿ
**ಆರ್ಯೆ** – ಒಂದು ಪದ್ಯಜಾತಿ
**ಆರ್ಯೋತ್ತಮ** – ಆರ್ಯರಲ್ಲಿ ಶ್ರೇಷ್ಠನಾದವನು
**ಆರ್ಷ** – ಋಷಿಸಂಬಂಧಿ; ಪ್ರಾಚೀನವಾದ
**ಆರ್ಹಂತ್ಯ** – ಅರ್ಹಂತನಿಗೆ ಸಂಬಂಧಪಟ್ಟ; (ಜೈನ) ಮೋಕ್ಷ; ಅರ್ಹನಾದ ಪದವಿ
**ಆರ್ಹಂತ್ಯಕ್ರಿಯೆ** – (ಜೈನ) ತೀರ್ಥಂಕರತ್ವ
**ಆರ್ಹಂತ್ಯಧರ್ಮ** – ಜೈನಧರ್ಮ
**ಆರ್ಹಂತ್ಯಲಕ್ಷ್ಮಿ** – ಮೋಕ್ಷಲಕ್ಷ್ಮಿ
**ಆಲ್** – ಆಲು, ಗಟ್ಟಿಯಾಗಿ ಕೂಗು
**ಆಲ** –ಸುಳ್ಳು
**ಆಲ(ಳ)ಂಬ(ನ)** – ಆಶ್ರಯ; ಆಧಾರ
**ಆಲಜಾಲ** – ಸುಳ್ಳಿನ ಕಂತೆ
**ಆಲ(ಲಾ)ಪಿಸು** – ಮತಾಡು; ಸಂಭಾಷಣೆಗೈ
**ಆಲಯ್ಸು** – ಕಿವಿಗೊಟ್ಟು ಕೇಳು
**ಆಲವಟ್ಟ** – ಬೀಸಣಿಗೆ
**ಆಲವಾಲ** – ಮರದ ಸುತ್ತಣ ಪಾತಿ
**ಆಲವಾಲಜಲ** – ಪಾತಿಯ ನೀರು
**ಆಲಾ(ಳಾ)ನ (ಸ್ತಂಭ)** – ಆನೆಯನ್ನು ಕಟ್ಟುವ ಕಂಬ
**ಆಲಾ(ಳಾ)ಪ** – ಮಾತು
**ಆಲಿ** – ಕಣ್ಣುಗುಡ್ಡೆ; ಕಣ್ಣು; ಆಲಿಕಲ್ಲು; ಗೆಳತಿ; ಗುಂಪು
**ಆಲಿಂಗನಗೆಯ್** – ತಬ್ಬಿಕೊ
**ಆಲಿಂಗಿಸು** – ಆಲಂಗಿಸು, ಅಪ್ಪಕೊ
**ಆಲಿಕಲ್** – ಗಟ್ಟಿಯಾದ ಮಳೆಯ ಹನಿ
**ಆಲಿಕೋ(ಗೋ)ಡು** – ಆಲಿಕಲ್ಲಿನಂತೆ ತಣ್ಣಗಾಗು
**ಆಲಿನೀರ್** – ತಣ್ಣನೆಯ ನೀರು; ಮಂಜಿನ ನೀರು; ಕಣ್ಣೀರು
**ಆಲಿನೀರ್ವನಿ** – ತನ್ಣನೆಯ ನೀರ ಹನಿ; ಕಂಬನಿ
**ಆಲಿವರಲ್** – ಆಲಿಕಲ್ಲು
**ಆಲಿವಱ** – ಆಲಿಕಲ್ಲಿನ ಮಳೆ
**ಆಲಿವೆಳಗ** – ತಂಪು ಕಾಂತಿಯುಳ್ಳವನು, ಚಂದ್ರ
**ಆಲಿಸು** – ಗಮನವಿರಿಸಿ ಕೇಳು; ನಿರೀಕ್ಷಿಸು; ಯುದ್ಧಮಾಡಲು ನಿಲ್ಲುವ ಕ್ರಮ
**ಆಲೀಢ** – ರುಚಿ ನೋಡಿದ, ತಿಂದ; ಬಲ ಮೊಳಕಾಲನ್ನು ಮುಂದೆ ಚಾಚಿ ಎಡಗಾಲನ್ನು ಹಿಂದಿಟ್ಟು ನಿಲ್ಲುವುದು
**ಆಲೇಖ್ಯಗತೆ** – ಚಿತ್ರಿತಳಾದವಳು
**ಆಲೇಪನ** – ಬಳಿಯುವಿಕೆ
**ಅಲೋಕ** – ನೋಡುವುದು; ಕಾಂತಿ; ಜ್ಞಾನ
**ಆಲೋಕಿಸು** – ನೋಡಿ
**ಆಲೋಚನೆ** – ನೋಡುವುದು; ವಿಚಾರ ಮಾಡುವುದು
**ಆಲೋಡನೆ** – ಕಲಕುವುದು
**ಆಲೋಡಿಸು** – ಕಲಕು
**ಆಲೋಲ** – ಅಲುಗಾಡುವ
**ಆವಗಂ** – ಯಾವಾಗಲೂ; ಬಹಳವಾಗಿ
**ಆವ(ವಿ)(ವು)ಗೆ** – ಮಡಕೆ ಸುಡುವ ಕುಂಬಾರನ ಒಲೆ
**ಆವಗೆಗಿಚ್ಚು** – ಆವಿಗೆಯ ಬೆಂಕಿ
**ಆವಗೆಯುರಿ** – ಆವಗೆಗಿಚ್ಚು
**ಆವಡಿ** – ತೊಂದರೆ, ಕಷ್ಟ
**ಆವಣ** – ಅಂಗಡಿ
**ಆವರಿಸು** – ಸುತ್ತುವರಿ; ವ್ಯಾಪಿಸು; ಮುಚ್ಚು; ದೇರು; ವಿಮರ್ಶಿಸು
**ಆವರ್ಜ** – ಬಾಗುವುದು
**ಆವರ್ಜಿಸು** – ಸೆಳೆದುಕೋ; ಬಗು
**ಆವರ್ತಗರ್ತ** – ಸುಳಿಯ ಮಡು
**ಆವರ್ತನ** – ಸುಳಿ; ಸುತ್ತುವುದು
**ಆವರ್ತನಸಿದ್ಧಿ** – ಸುಳಿಯಂತಿರುವುದು; ಸುಳುಗಳನ್ನು ಹೊಂದಿರುವುದು
**ಆವರ್ತನಾಭಿ** – ಸುರುಳಿಯಾದ ಹೊಕ್ಕುಳು
**ಆವರ್ತಮಾನ** – ಸುತ್ತುತ್ತಿರುವ
**ಆವರ್ತಯುಕ್ತ** – ಸುಳಿಯಿಂದ ಕೂಡಿದ
**ಆವರ್ತಿನಿ** – (ಜೈನ) ಒಂದು ವಿದ್ಯೆ
**ಆವರ್ತಿಸು** – ವ್ಯಾಪಿಸು; ಮರಳಿ ಬರುವಂತೆ ಮಾಡು
**ಆವಲ್(ಲು)** – ಕೆಂದಾವರೆ
**ಆವಲಲರ್** – ಆವಲು ಹೂವು
**ಆವಲಿ(ಳ)** – ಗುಂಪು; ಸಾಲು; ಕುಲ; (ಜೈನ) ಕಾಲದ ಸೂಕ್ಷ್ಮವಾದ ಒಂದು ಪ್ರಮಾಣ
**ಆವಲಿ(ಳ)ಕ** – ಆವಲಿ
**ಆವಲಿತ** – ಹೊರಳಿದ; ತಿರುಗಿದ
**ಆವಲ್ಗೊಳ** – ಕೆಂದಾವರೆಯ ಕೊಳ
**ಆವಸಥ** – ವಾಸಸ್ಥಾನ; ಮನೆ
**ಆವಹ** – ಒದಗಿಸುವ; ಉಂಟುಮಾಡುವ; ಕೂಡಿದ
**ಆವಹನವಿಧಾನ** – ಬರಮಾಡಿಕೊಳ್ಳು ಕ್ರಮ; ಆವಾಹನೆಯ ಕ್ರಮ
**ಆವಾಪ** – ಬಿತ್ತುವುದು; ಪಾತಿ; ಕಂಕಣ
**ಆವಾಪ್ತಿ** – ಸಿದ್ಧಿ
**ಆವಾಲ(ಳ)** – ಮರದ ಸುತ್ತಲಿನ ಪಾತಿ
**ಆವಾಸ** – ಮನೆ
**ಆವಾಹನೆಗೆಯ್** – ಆವಾಹನೆಗೈ; ಆವಾಹಿಸು
**ಆವಿದ್ಧ** – ತೂತುಮಾಡಿದ; ವಕ್ರವಾದ
**ಆವಿರ್ಭಾವ** – ಉಂಟಾಗುವುದು
**ಆವಿರ್ಭಾವಿತ** – ಉಂಟಾದ
**ಆವಿಲ(ಳ)** – ಕದಡಿದ; ಒಂಡು; ಮಲಿನ
**ಆವಿಲೆ** – ಕೂಡಿದವಳು

**ಆವಿಷ್ಕರಣ** – ಪ್ರತ್ಯಕ್ಷವಾಗುವುದು; ಸ್ಪಷ್ಟಪಡಿಸುವುದು
**ಆವಿಷ್ಕೃತ** – ಪರಿಷ್ಕರಣೆಗೊಂಡ; ಸ್ಪಷ್ಟಗೊಂಡ
**ಆವಿಷ್ಟೆ** – ಭೂತಪೀಡಿತೆ
**ಆವಿಳ** – ಕಲುಷಿತವಾದ
**ಆವೀಕ್ಷಿತ** – ನೋಡಿದ
**ಆವು** – ಹಸು
**ಅವುಕ** – ತಂದೆ
**ಆವುಜ(ಜೆ)** – ಒಂದು ಚರ್ಮವಾದ್ಯ
**ಆವುಜಿಗ** – ಆವುಜೆ ಬಾಜಿಸುವವನು
**ಆವುತಿ** – ಒಂದು ಬಗೆಯ ಅಯುಧ
**ಆವುದು** – ಯಾವುದು, ಏನು, ಎಲ್ಲಿಯದು
**ಆವೃತ** – ಸುತ್ತುವರಿಯಲ್ಪಟ್ಟ; ಹೊದಿಸಲ್ಪಟ್ಟ
**ಆವೆ** – ಆಮೆ, ಕೂರ್ಮ
**ಆವೇಗ** – ತ್ವರೆ; ಸಂಭ್ರಮ; ಉದ್ವೇಗ
**ಆವೇಶ** – ರೋಷ; ಉಂಟಾಗುವಿಕೆ
**ಆವೇಷ್ಟಿಸು** – ಸುತ್ತುವರಿ; ಆವರಿಸು
**ಆವ್ಯಾನ** – ಮುಚ್ಚಿದ; ಆವೃತ
**ಆಶಂಕಿತಹೃದಯ** – ಶಂಕೆಗೊಳಗಾದವನು
**ಆಶಂಕೆ** – ಸಂದೇಹ
**ಆಶಂಕೆಗೊಳ್** – ಸಂದೇಹಗೊಳ್ಳು; ಗಾಬರಿಯಾಗು
**ಆಶಯ** – ಅಭಿಪ್ರಾಯ; ಭಾವನೆ
**ಆಶಾ** – ದಿಕ್ಕು
**ಆಶಾಂತರಾಲ(ಳ)** – ದಿಕ್ಕುಗಳ ಮಧ್ಯಭಾಗ
**ಆಶಾಂಬರ** – ದಿಕ್ಕುಗಳು ಮತ್ತು ಆಕಾಶ; ದಿಗಂಬರ
**ಆಶಾಕರಟಿ** – ದಿಗ್ಗಜ
**ಆಶಾಕರಿಕಲಭ** – ದಿಕ್ಕರಿಮರಿ
**ಆಶಾಗಜ** – ಆಶಾಕರಟಿ
**ಆಶಾಚಕ್ರ** – ದಿಙ್ಮಂಡಲ
**ಆಶಾದಂತಿ** – ದಿಕ್ಕರಿ
**ಆಶಾದೇಶ** – ದಿಕ್ಪ್ರದೇಶ
**ಆಶಾಧೀನ** – ಆಸೆಗೆ ಅಧೀನವಾದ; ದಿಕ್ಕುಗಳಿಗೆ ಒಳಪಟ್ಟ
**ಆಶಾರುಚಿ** – ದಿಕ್ಕುಗಳ ಕಾಂತಿ; ಆಸೆಗಳನ್ನು ಹೊಂದಿದವನು
**ಆಶಾವಸನ** – ದಿಕ್ಕನ್ನೇ ಬಟ್ಟೆಯಾಗುಳ್ಳವನು; ದಿಗಂಬರ; ಜಿನ
**ಆಶಾವಳಯಿತ** – ದಿಕ್ಕುಗಳಿಂದ ಸುತ್ತುವರಿದ
**ಆಶಿ** – ಹಾವಿನ ಹಲ್ಲು
**ಆಶೀರ್ನಿನಾದ** – ಆಶೀರ್ವಾದದ ಧ್ವನಿ
**ಆಶೀರ್ವಾದಂಗೊಡು** – ಹರಸು
**ಆಶೀರ್ವಾದಪರ** – ಆಶೀರ್ವಾದದಲ್ಲಿ ಆಸಕ್ತ
**ಆಶೀರ್ವಾದಪ್ರಿಯ** – ಆಶೀರ್ವಾದಪರ
**ಆಶೀವಿಷ** – ಹಾವು
**ಆಶೀಸ್ತವ** – ಮಂಗಳಸ್ತೋತ್ರ
**ಆಶು** – ಬೇಗನೆ; ಜಾಗ್ರತೆ; ವೇಗ
**ಆಶುಗ** – ವಾಯು, ಬಾಣ
**ಆಶುಗತ್ವ** – ಶೀಘ್ರತೆ
**ಆಶುಗಮನ** – ಬೇಗ ಸಾಗುವುದು, ಬಾಣ
**ಆಶುಗಮಿತ್ರ** – ಬೆಂಕಿ
**ಆಶುಗಾಶನ** – ಗಾಳಿಯನ್ನೇ ಆಹಾರವಾಗಿ ಉಳ್ಳದ್ದು, ಹಾವು
**ಆಶುಗಾಸನ** – ಬಾಣಾಸನ, ಬಿಲ್ಲು
**ಆಶುಶುಕ್ಷಣಿ** – ಬೆಂಕಿ, ಅಗ್ನಿ
**ಆಶೆವಡು** – ಬಯಸು, ಇಚ್ಛಿಸು
**ಆಶೇಭ** – ಆಶಾ+ಇಭ, ದಿಕ್ಕರಿ
**ಆಶ್ಚರ್ಯ** – ಸೋಜಿಗ
**ಆಶ್ಚರ್ಯಭೂತ** – ವಿಸ್ಮಯವುಂಟುಮಾಡುವ
**ಆಶ್ರಯಣ** – ಆಶ್ರಯ, ಆಸರೆ
**ಆಶ್ರಯಾಶ** – ಆಶ್ರಯದಾತನನ್ನೇ ನುಂಗುವುದು, ಅಗ್ನಿ
**ಆಶ್ರ(ಸ್ರ)ವ** – ವಿಧೇಯ; ಪ್ರವಾಹ; (ಜೈನ) ಸಪ್ತತತ್ವಗಳಲ್ಲಿ ಒಂದು; ಪುಣ್ಯಪಾಪರೂಪವಾದ ಕರ್ಮವು ಜೀವನಲ್ಲಿ ಹರಿಯುವುದು; ನೋಡಿ 'ಪಂಚಾಸ್ರವ'
**ಆಶ್ರಿತ** – ಆಶ್ರಯದಲ್ಲಿರುವ
**ಆಶ್ಲಿಷ್ಟ** – ಆಲಿಂಗನಕ್ಕೊಳಗಾದ; ಒಡಗೂಡಿದ
**ಆಶ್ಲೇಷ** – ಆಲಿಂಗನ
**ಆಶ್ವಾಸ** – ಉಸಿರನ್ನು ತೆಗೆದುಕೊಳ್ಳುವುದು; ಭರವಸೆ
**ಆಶ್ವಾಸನಪರ** – ಸಮಾಧಾನಗೊಳಿಸುವುದರಲ್ಲಿ ನಿರತನಾದ
**ಆಶ್ವಾಸಿಸು** – ಆಶ್ವಾಸನೆ ನೀಡು
**ಆಶ್ವಿಕಬಲ** – ಕುದುರೆ ಸೈನ್ಯ
**ಆಶ್ವಿನೇಯ** – ಅಶ್ವಿನೀದೇವತೆಗಳು; ನಕುಲಸಹದೇವರು
**ಆಷಾಢ** – ಒಂದು ಚಾಂದ್ರಮಾನ ತಿಂಗಳು; ನಕ್ಷತ್ರ; ಋಷಿಗಳು ಹಿಡಿಯುವ ಮುತ್ತುಗದ ದಂಡ
**ಆಷಾಢಕಿ** – ತೊಗರಿ
**ಆಸಂದಿ** – ಪೀಠ
**ಆಸನ** – ಪೀಠ; ಷೋಡಶೋಪಚಾರಗಳಲ್ಲಿ ಒಂದು; **ರಾಜನ ಷಾಡ್ಗುಣ್ಯಗಳಲ್ಲಿ ಒಂದು –**
**ಆಸನಂದೋಱು** – ಯುದ್ಧದಲ್ಲಿ ಉಪೇಕ್ಷೆಯನ್ನು ಅಥವಾ ತಾಟಸ್ಥ್ಯವನ್ನು ತೋರಿಸು
**ಆಸನಕಂಪ** – (ಜೈನ) ತೀರ್ಥಂಕರನ ಜೀವಿತದ ವಿಶೇಷ ಪ್ರಸಂಗಗಳಲ್ಲಾಗುವ ದೇವೇಂದ್ರನ ಪೀಠದ ಅಲುಗಾಟ
**ಆಸನೋಚಿತ** – ತಕ್ಕುದಾದ ಪೀಠ ಹಾಕುವುದು
**ಆಸನ್ನ** – ಹತ್ತಿರ, ಸಮೀಪ
**ಆಸನ್ನಕಾಲ** – ಸಾವು ಸಮೀಪಿಸಿರುವುದು
**ಆಸನ್ನಗತ** – ಹತ್ತಿರ ಬಂದವನು
**ಆಸನ್ನಗಮನ** – ಹತ್ತಿರ ಹೋಗುವುದು
**ಆಸನ್ನತೆ** – ಹತ್ತಿರವಾಗುವುದು

**ಆಸನ್ನಪೀಡನ** – ಹತ್ತಿರ ಬಂದು ಹಿಂಸೆ ಕೊಡುವುದು
**ಆಸನ್ನಪ್ರದೇಶ** – ಹತ್ತಿರದ ಪ್ರದೇಶ
**ಆಸನ್ನಭವ್ಯ(ವ್ಯೆ)** – (ಜೈನ) ಶೀಘ್ರದಲ್ಲಿಯೇ ಮನಃಪರಿಪಾಕವನ್ನು ಹೊಂದುವವನು(ಳು)
**ಆಸನ್ನಮೃತ್ಯು** – ಮೃತ್ಯು ಸಮೀಪವಾಗಿರುವುದು
**ಆಸನ್ನವರ್ತಿ** – ಹತ್ತಿರದಲ್ಲಿರುವ
**ಆಸನ್ನ ವಿನಿಪಾತ** – ಸದ್ಯದಲ್ಲಿಯೇ ನಾಶವಾಗಲಿರುವ
**ಆಸರ್** – ದಣಿ
**ಆಸವ** – ಮದ್ಯ; ಔಷಧಿ
**ಆಸವಾರಿ** – ಕುದುರೆಸವಾರಿ
**ಆಸವಾಸಕ್ತಿ** – ಮಕರಂದದಲ್ಲಿ ಆಸಕ್ತಿ; ಮದ್ಯಾಸಕ್ತಿ
**ಆಸಱು** – ಬಳಲಿಕೆ; ಆಯಾಸಗೊಳ್ಳು
**ಆಸಾಧಿತ** – ಸಾಧಿಸಲ್ಪಟ್ಟ
**ಆಸಾರ** – ಸುರಿಮಳೆ, ಜಡಿಮಳೆ
**ಆಸಾರಚಾರಿ** – ಜಡಿಮಳೆಯ ನಡುವೆ ನಡೆಯುವವನು
**ಆಸೀನ** – ಕುಳಿತುಕೊಂಡ
**ಆಸು** – ಸಾಲವೃಕ್ಷ; ಮೇಲಿನಿಂದ ಎಸೆ; ಶೀಘ್ರ
**ಆಸುಕರ** – ತೀವ್ರತೆ; ಆಧಿಕ್ಯ
**ಆಸುಕರಂ** – ಅತಿಶಯವಾಗಿ
**ಆಸುಕಾರ** – ಹಿಂಸೆ; ಹೊಡೆಯುವುದು
**ಆಸುರ** – ಭಯಂಕರವಾದ
**ಆಸುರಂ** – ಘೋರ
**ಆಸುರಕರ್ಮಂಗಾಯ್** – ಕ್ರೂರಕೆಲಸವನ್ನು ಮಾಡು
**ಆಸುರತರ** – ಅತಿ ಭಯಂಕರವಾದ
**ಆಸೆ** – ದಿಕ್ಕು
**ಆಸೆಕಾಱ** – ಆಸೆಗಾರ; ಭರವಸೆಯುಳ್ಳವನು
**ಆಸೆಗಾಣ್** – ಭರವಸೆ ಹೊಂದು
**ಆಸೆಗೆಯ್** – ಬಯಸು, ಅಪೇಕ್ಷಿಸು
**ಆಸೆದೋಱು** – ಆಸೆಯನ್ನು ಹುಟ್ಟಿಸು; ದಾರಿ ತೋರಿಸು
**ಆಸೆವಡು** – ಆಸೆ ಪಡು
**ಆಸೆವಾತು** – ಆಸೆಯನ್ನುಂಟುಮಾಡುವ ನುಡಿ
**ಆಸ್ತರಣ** – ಕುಳಿತುಕೊಳ್ಳಲು ಹರಡುವ ಚಾಪೆ ಮುಂತಾದ ಸಾಧನ; ಹರಡುವುದು
**ಆಸ್ತರಣಕ್ರಿಯೆ** – ಹರಡುವ ಕ್ರಿಯೆ
**ಆಸ್ಥಾನ** – ರಾಜಸಭೆ
**ಆಸ್ಥಾನಗೇಹ** – ಆಸ್ಥಾನ ಮಂಟಪ
**ಆಸ್ಥಾನಮಂಟಪ** – ಆಸ್ಥಾನಗೇಹ
**ಆಸ್ಥಾಯಿ** – ಸ್ಥಿರವಾದ
**ಆಸ್ಥಾಯಿಕಾಜನ** – ರಾಜಸಭೆಯ ಜನರು
**ಅಸ್ಥಾಯಿಕೆ** – ರಾಜಸಭೆ
**ಆಸ್ಥೆ** – ಅಕ್ಕರೆ, ಅಸಕ್ತಿ
**ಆಸ್ಥೌಲ್ಯ** – ಸೆಡೆತುಕೊಳ್ಳುವುದು
**ಆಸ್ಪೃಷ್ಟಕಪಿಳ** – ಕಪಿಲವರ್ಣದ ಹಸುವನ್ನು ಮುಟ್ಟಿದವನು
**ಆಸ್ಫಾಲ(ಳ)ನ** – ತಟ್ಟುವುದು
**ಆಸ್ಫಾಲ(ಳ)ನಂಗೆಯ್** – ಅಪ್ಪಳಿಸು
**ಆಸ್ಫೋಟಕ** – ಬಾವು, ಕುರು
**ಆಸ್ಫೋಟನ** – ಸಿಡಿತ
**ಆಸ್ಫೋಟಿತ** – ಸಿಡಿದ
**ಆಸ್ಫೋಟಿಸು** – (ತೋಳನ್ನು) ತಟ್ಟಿ ಶಬ್ದಮಾಡು
**ಆಸ್ಯ** – ಮುಖ
**ಆಸ್ಯವಿಲಸಿತ** – ಮುಖದಲ್ಲಿ ಭಾವಪ್ರದರ್ಶನ
**ಆಸ್ಯಾನಿಲ(ಳ)** – ಉಸಿರು
**ಆಸ್ರವ** – ಕಷ್ಟ; ಹರಿಯುವಿಕೆ; (ಜೈನ) ಸಪ್ತತತ್ವಗಳಲ್ಲಿ ಒಂದು; ಪುಣ್ಯಪಾಪರೂಪವಾದ ಕರ್ಮವು ಜೀವದೊಳಕ್ಕೆ ಹರಿಯುವದು
**ಆಸ್ರವತತ್ವ** – ಆಸ್ರವ
**ಆಸ್ರವಪದಾರ್ಥ** – ಆಸ್ರವ
**ಆಸ್ವಾದನಂಗೆಯ್** – ಆಸಾದನೆ ಮಾಡು, ತಿನ್ನು
**ಆಹತ** – ಹೊಡೆಯಲ್ಪಟ್ಟ
**ಆಹತಿ** – ಹೊಡೆತ
**ಆಹವ** – ಯುದ್ಧ
**ಅಹವಕ್ಷಮ** – ಯುದ್ಧಸಮರ್ಥ
**ಆಹವದುರ್ಜಯ** – ಯುದ್ಧದಲ್ಲಿ ಗೆಲ್ಲಲು ಅಸಾಧ್ಯನಾದವನು
**ಆಹವನೀಯ** – ಯಜ್ಞದಲ್ಲಿ ಅರ್ಪಿಸಲು ಯೋಗ್ಯವಾದ; ತ್ರೇತಾಗ್ನಿಗಳಲ್ಲಿ ಒಂದು; ಕ್ರಿಯಾಸಮಾಪ್ತಿಪರ್ಯಂತವೂ ಹೋಮ ಮಾಡತಕ್ಕ ಅಗ್ನಿ
**ಆಹವಭೀಮ** – ಯುದ್ಧದಲ್ಲಿ ಭಯಂಕರನಾದ
**ಆಹವಭೀಷ್ಮ** – ಆಹವಭೀಮ
**ಆಹವಮಲ್ಲ** – ಯುದ್ಧವೀರ; ಚಾಲುಕ್ಯ ಅರಸರ ಒಂದು ಬಿರುದು
**ಆಹವಲಂಪಟ** – ಯುದ್ಧದಲ್ಲಿ ಅತ್ಯಾಸಕ್ತ
**ಆಹವಶೌಂಡ** – ರಣಧೀರ
**ಆಹವಸಿಂಹ** – ಯುದ್ಧದಲ್ಲಿ ಸಿಂಹದಂತೆ ಪರಾಕ್ರಮ ತೋರಿಸುವವನು
**ಆಹಾರದಾನ** – ಆಹಾರವನ್ನು ನೀಡುವುದು
**ಆಹಾರ್ಯ** – (ವೇಷಭೂಷಣಗಳಿಂದ ಕೂಡಿದ) ಅಭಿನಯದ ಒಂದು ಬಗೆ
**ಆಹಾರ್ಯಕ** – ಆಹಾರ್ಯ
**ಆಹಿತಾಗ್ನಿ** – ಅಗ್ನಿಹೋತ್ರ ಮಾಡುವ ಬ್ರಾಹ್ಮಣ
**ಆಹುತ** – ಹೋಮಮಾಡಲ್ಪಟ್ಟ; ಹೋಮಕ್ಕೆ ಅರ್ಪಿತವಾದ
**ಆಹುತಿ** – ಹವಿಸ್ಸು
**ಆಹುತಿಗೆಯ್** – ಆಹುತಿಯನ್ನು ಅರ್ಪಿಸು
**ಆಹೂತ** – ಆಹ್ವಾನಿತನಾದ
**ಆಹೂತಿ** – ಆಹ್ವಾನಿಸುವುದು

**ಆಹೂತಿಗೆಯ್** – ಬರಮಾಡಿಕೊ
**ಆಹೃತಿ** – ತರುವುದು
**ಆಹ್ಲಾದ** – ಸಂತೋಷ
**ಆಹ್ಲಾದನ** – ಸಂತೋಷಗೊಳಿಸುವ
**ಆಹ್ವಯ** – ಹೆಸರು
**ಆಹ್ವಾನ** – ಕರೆಯುವಿಕೆ
**ಆಹ್ವಾನಂಗೆಯ್** – ಆಹ್ವಾನಿಸು
**ಆಹ್ವಾನಪುರುಷ** – ಆಹ್ವಾನಿಸಲು ಹೋಗುವವನು; ದೂತ
**ಆಳ್** – ಪಡೆ; ಅಧಿಕಾರ ನಡೆಸು; ಅನುಭವಿಸು
**ಆಳಂ** – ವ್ಯರ್ಥ
**ಆಳಂಬೆ** – ಅಣಬೆ, ನಾಯಿಕೊಡೆ
**ಆಳಜಾಳ** – ಆಲಜಾಲ
**ಆಳಣಿ** – ಪದಾತಿಸೈನ್ಯ
**ಆಳಣೆ** – ಆನೆಯನ್ನು ಕಟ್ಟುವ ಕಂಬ
**ಆಳ(ಣ)ತಿ** – ಹಾಡುವಿಕೆ
**ಆಳಮಾಳ** – ಮೋಸ, ವಂಚನೆ
**ಆಳರ್ಪಿಸು** – ಆಳಾಗಿ ಅರ್ಪಿಸು; ಕಡೆಗಣಿಸು
**ಆಳವಾಡು** – ಮರುಳುಗೊಳಿಸು; ವಂಚಿಸು
**ಆಳವಾಳ** – ಪಾತಿ
**ಆಳವಿಣೆ** – ಒಂದು ಬಗೆಯ ವೀಣೆ
**ಆಳವಿಸು** – ಆಲಾಪಿಸು
**ಆಳಾಪ** –ಸಂಭಾಷಣೆ
**ಆಳಾಪಂಗೆಯ್** – ಹರಟು, ಗಳಹು
**ಆಳಿಗೊಳ್** – ಜೊತೆಗೂಡು; ಸ್ನೇಹಮಾಡಿಕೊ
**ಆಳೀಜನ** – ಸಖಿಯರು
**ಆಳಿಸು** – ಜೋಡಿಸು; ಉಂಟುಮಾಡು; ಆಳಿಕೆಯನ್ನು ನಡೆಸು
**ಆಳುಮಿರು** – ಆಳಾಗಿರು, ಸೇವಕನಾಗಿರು
**ಆಳೇಱ್** – ಪೌರುಷ ಉಕ್ಕು
**ಆಳೋಕನರುಚಿ** – ದೃಷ್ಟಿಚಿಟು ಕಾಂತಿ
**ಆಳೋಚಂಬೆರಸು** – ಆಲೋಚಿಸು
**ಆಳೋಚನಂಗೆಯ್** – ಆಲೋಚಿಸು
**ಆಳೋಳ** – ಆಳುಗಳ ಸಾಲು
**ಆಳ್ಗೆಯ್ತ** – ಆಳಿನ ಕೆಲಸ; ಶೂರನ ಕೆಲಸ
**ಆಳ್ತನ** – ಆಳಿನ ಸೇವೆ; ಪೌರುಷ
**ಆಳ್ದಟ್ಟು** – ಶೂರಸಮೂಹ
**ಆಳ್ದ** – ಒಡೆಯ; ಪ್ರಭು
**ಆಳ್ದತಿ** – ಆಳುವವಳು; ಒಡತಿ
**ಆಳ್ಮಾಡು** – ಆಳಾಗಿ ಮಾಡು
**ಆಳ್ವಲ** – ಸೈನಿಕರ ಸಮೂಹ
**ಆಳ್ವೆಸಂಗೆಯ್** – ಸೇವೆಮಾಡು
**ಆಳ್ವೆಸ** – ಸೇವಾವೃತ್ತಿ
**ಆಳ್ವೆಸಗೆಯ್ಸು** – ಆಳಾಗಿ ಮಾಡಿಕೊ; ಸೇವೆ ಮಾಡಿಸಿಕೊ
**ಆಳ್ವೇಲಿ** – ಮನುಷ್ಯರ ಬೇಲಿ
**ಆಱ್** – ಸಮರ್ಥವಾಗು; ತಾಳಿಕೊ
**ಆಱಡಿ** – ದುಂಬಿ; ಲೂಟಿ
**ಆಱಡಿಕಾಱ** – ಶತ್ರು; ದಾರಿಗಳ್ಳ
**ಆಱಡಿಗಳ್ಳ** – ಸುಲಿಗೆಗಾರ, ಲೂಟಿಕೋರ
**ಆಱಡಿಗೊಳ್** – ಹಿಂಸೆಮಾಡು; ಮೋಸಮಾಡು; ನಿಂದಿಸು; ದ್ವೇಷಿಸು
**ಆಱಡಿದಾಣ** – ದುಂಬಿಯ ಸ್ಥಾನ ; ಹಿಂಸೆಯ ನೆಲೆ
**ಆಱಡಿವಣ್ಣ** – ದುಂಬಿಯ ಬಣ್ಣ, ಕಪ್ಪು
**ಆಱಡಿವಿಂಡು** – ದುಂಬಿಗಳ ಹಿಂಡು
**ಆಱಿಸು** – ನಂದಿಸು; ಇಂಗಿಸು; ಶಾಂತಗೊಳಿಸು; ಇಂಗಿಸು; ತಣ್ಣಗೆ ಮಾಡು
**ಆಱು** – ನಂದಿಹೋಗು; ಸಮಾಧಾನಗೊಳ್ಳು; ಒಣಗಿಹೋಗು; ತಣ್ಣಗಾಗು
**ಆೞ್** – ಮುಳುಗು; ಹೂಳು; ಕುಸಿದುಬೀಳು
**ಆೞ** – ಗಾಂಭೀರ್ಯ, ಗ್ಢಢತೆ
**ಆೞವಡು** – ಆಳವನ್ನು ಹೊಂದು
**ಆೞಾಟಿಗೆ** – ಮಾಲೆ, ಹಾರ
**ಆೞಿ** – ಮೋಸ; ದುಂಡಾಗಿರುವುದು; ಚಕ್ರ
**ಆೞಿಕಾ(ಗಾ)ಱ** – ಮೋಸಗಾರ
**ಆೞಿಗೊಳ್** – ವಂಚಿಸು
**ಆೞೀಜನ** – ವಂಚಕ
**ಆೞಿಸು** – ಮುಳುಗಿಸು

## ಇ

**ಇಂ** – ಇನ್ನು; ಇನ್ನು ಮುಂದೆ
**ಇಂಕೆವರ್** – ಬತ್ತು, ಇಂಗಿಹೋಗು
**ಇಂಗಡಲ್** – ಹಾಲ್ಗಡಲು
**ಇಂಗಡಲಕುವರ** – ಹಾಲ್ಗಡಲಲ್ಲಿ ಹುಟ್ಟಿದವನು, ಚಂದ್ರ
**ಇಂಗಡಲಣುಗಿ** – ಲಕ್ಷ್ಮೀ
**ಇಂಗದಿರ್** – ಬೆಳುದಿಂಗಳು
**ಇಂಗದಿರ** – ಚಂದ್ರ
**ಇಂಗದಿರ್ವಕ್ಕಿ** – ಬೆಳದಿಂಗಳು ಕುಡಿಯುವ ಹಕ್ಕಿ, ಚಕೋರ
**ಇಂಗದಿರ್ವಟ್ಟು** – ಚಂದ್ರ ಮಂಡಲ
**ಇಂಗಳ** – ಕೆಂಡ
**ಇಂಗಳಗಣ್** – ಬೆಂಕಿಯ ಕಣ್ಣು; ಉರಿಯುವ ಕಣ್ಣು
**ಇಂಗಿಣೀಮರಣ** – (ಜೈನ) ಹತ್ತೊಂಬತ್ತು ಬಗೆಯ ಮರಣಗಳಲ್ಲಿ ಒಂದು; ಯತಿಯು ಸಂಗವನ್ನು ತೊರೆದು ಒಂಟಿಯಾಗಿದ್ದು, ಆಹಾರವನ್ನು ಬಿಟ್ಟು, ಉಪಸರ್ಗದಲ್ಲಿ ಉಪಚಾರ ಬಿಟ್ಟು ಸಮತೆಯಿಂದ ಹೊಂದುವ ಮರಣ
**ಇಂಗು** – ಬತ್ತು
**ಇಂಗುಲಿಕ** – ಇಂಗಲೀಕ, ಹಿಂಗುಳ; ಪಾದರಸದಿಂದಾದ ಅದಿರು
**ಇಂಗೂಟ** – ಇನಿದಾದ ಕೂಟ; ಸಂಭೋಗ

**ಇಂಗೋಲ್** – ರುಚಿಯಾದ ಕೋಲು, ಕಬ್ಬು
**ಇಂಗೋಲ** – ಕಬ್ಬುವಿಲ್ಲ, ಮನ್ಮಥ
**ಇಂಗೋಲ್ವಿಲ್ಲ** – ಇಂಗೋಲ, ಮನ್ಮಥ
**ಇಂ(ಈಂ)ಚರ** – ಇಂಪಾದ ಧ್ವನಿ; ಇನಿದಾದ ಸರ(ಬಾಣ) ಉಳ್ಳವನು, ಮನ್ಮಥ
**ಇಂಚರಂಗಱೆ** – ಮಧುರಧ್ವನಿ ಮಾಡು
**ಇಂಚರಮೀ** – ಮಧುರಧ್ವನಿ ನೀಡು
**ಇಂಚೆ** – ಹಿಂಸೆ
**ಇಂಡೆ** – ಚೂರು; ಹಿಂಡು; ಚೆಂಡು
**ಇಂಡೆಗಟ್ಟು** – ಹೂವಿನ ಹಾರ ಕಟ್ಟು
**ಇಂಡೆಯನಾಡು** – ಚೆಂಡಾಡು
**ಇಂಡೆಯಾಡು** – ಹೂವಿನ ದಂಡೆಯನ್ನು ಎಸೆದಾಡು
**ಇಂತಪ್ಪ** – ಇಂತಹ, ಇಂಥ
**ಇಂತುಟು** – ಇಷ್ಟು; ಹೀಗೆ; ಈ ಪ್ರಕಾರವಾಗಿ
**ಇಂತುಟೆ ವಲಂ** – ಇಷ್ಟೇ ಅಲ್ಲವೇ? ಹೀಗಾಯಿತೇ?
**ಇಂದಗಿ** – ಇಂದ್ರಜಿತು
**ಇಂದಿರ** – ಇಂದ್ರ
**ಇಂದಿಂದಿರ** – ದುಂಬಿ; ಗುಂಗೀಹುಳು
**ಇಂದಿರದಿಕ್ಕು** – ಪೂರ್ವದಿಕ್ಕು
**ಇಂದಿರವಿಲ್** – ಇಂದ್ರಬಿಲ್ಲು; ಕಾಮನಬಿಲ್ಲು
**ಇಂದಿರೆ** – ಲಕ್ಷ್ಮಿ; ಬಿಲ್ವವೃಕ್ಷ
**ಇಂದೀವರ** – ಕನ್ನೈದಿಲೆ
**ಇಂದೀವರನಾಭ** – ವಿಷ್ಣು
**ಇಂದೀವರವಕ್ತ್ರೆ** – ಕಮಲಮುಖಿ
**ಇಂದು** – ಚಂದ್ರ; ಈ ಹೊತ್ತು
**ಇಂದುತನಹ** – ಈವರೆಗೆ, ಈತನಕ
**ಇಂದುವರಂ** – ಈತನಕ
**ಇಂದುಕರಾವಳಿ** – ಬೆಳುದಿಂಗಳ ರಾಶಿ
**ಇಂದುಕಾಂತಿ** – ಚಂದ್ರನ ಕಾಂತಿ
**ಇಂದುಕಾಂತೋಪಲ(ಳ)** – ಚಂದ್ರಕಾಂತಶಿಲೆ
**ಇಂದುಜ** – ಚಂದ್ರನ ಮಗ, ಬುಧ
**ಇಂದುಜನಕ** – ಸಮುದ್ರ; ಅತ್ರಿ ಮಹರ್ಷಿ
**ಇಂದುಜ್ಯೋತ್ಸ್ನೆ** – ಚಂದ್ರನ ಬೆಳಕು
**ಇಂದುದೀಧಿತಿ** – ಚಂದ್ರನ ಕಾಂತಿ
**ಇಂದುದ್ಯುತಿ** – ಇಂದುದೀಧಿತಿ
**ಇಂದುಧರ** – ಶಿವ
**ಇಂದುನಿಭಾಸ್ಯೆ** – ಚಂದ್ರನನ್ನು ಹೋಲುವ ಮುಖದವಳು
**ಇಂದುಮಂಡಲ(ಳ)** – ಚಂದ್ರಮಂಡಲ
**ಇಂದುಮಣಿ** – ಚಂದ್ರಕಾಂತಶಿಲೆ
**ಇಂದುರೋಚಿ** – ಚಂದ್ರಕಾಂತಿ
**ಇಂದುಲಕ್ಷ್ಮಿ** – ಚಂದ್ರನ ವೈಭವ
**ಇಂದುಸಖ** – ಮನ್ಮಥ
**ಇಂದುಲಾಂಛನ** – ಚಂದ್ರನ ಗುರುತು, ಕಳಂಕ
**ಇಂದೂದಯ** – ಚಂದ್ರೋದಯ
**ಇಂದೂಪಲ** – ಚಂದ್ರಕಾಂತಶಿಲೆ
**ಇಂದೊವರ್** – ಮಧುರವಾದ ಒಗರು ರುಚಿ
**ಇಂದೊ(ೞ)ಳ** – ಮಧುರ ಗಾನ; ಹಿಂದೋಳ ರಾಗ
**ಇಂದ್ರ** – ದೇವತೆಗಳ ಒಡೆಯ; ದ್ವಾದಶಾದಿತ್ಯರಲ್ಲಿ ಒಬ್ಬ; ಒಡೆಯ; ಶ್ರೇಷ್ಠ
**ಇಂದ್ರಕ** – ಸಭಾಮಂಟಪ; (ಜೈನ) ನರಕಬಿಲಗಳಲ್ಲಿ ಒಂದು ಬಗೆ; ಸೌಧರ್ಮೇಂದ್ರ ಮುಂತಾದವರ ವಿಮಾನಗಳಲ್ಲಿ ಒಂದು ಬಗೆ
**ಇಂದ್ರಕೀಲ** – ಒಂದು ಪರ್ವತದ ಹೆಸರು
**ಇಂದ್ರಕೇತು** – ಇಂದ್ರನ ಧ್ವಜ; (ಜೈನ) ಮಹಾಮಂಡಲೇಶ್ವರರ ಜಿನಪೂಜೆ
**ಇಂದ್ರಕೋದಂಡ** – ಇಂದ್ರಧನುಸ್ಸು
**ಇಂದ್ರಕೋಶ** – ತವಗ, ಸುಖಾಸನ
**ಇಂದ್ರಗಾಯಕ** – ಇಂದ್ರನ ಹಾಡುಗಾರ
**ಇಂದ್ರಗೋಪ** – ಮಿಂಚುಹುಳು, ಹೊನ್ನೆ ಹುಳು; ಹಡಗಿನ ಮಂಚ
**ಇಂದ್ರಚಾಪ** – ಕಾಮನ ಬಿಲ್ಲು
**ಇಂದ್ರಚ್ಛಂದ** – ಸಾವಿರದೆಂಟು ಎಳೆಗಳಿಂದ ಕೂಡಿದ ಮುತ್ತಿನ ಹಾರ
**ಇಂದ್ರಜಾಲ** – ಯಕ್ಷಿಣೀ; ಗಾರುಡಿ; ಕಣ್ಕಟ್ಟು
**ಇಂದ್ರಜಾಲಿಕ(ಗ)** – ಯಕ್ಷಿಣಿಗಾರ
**ಇಂದ್ರಜಾಲಿಗತನ** – ಮಾಯಾವಿತನ; ಮಾಯೆ
**ಇಂದ್ರಜಿತು(್)** – ಇಂದ್ರನನ್ನು ಗೆದ್ದವನು; ರಾವಣನ ಮಗ; ಮೇಘನಾದ
**ಇಂದ್ರತ್ಯಾಗ** – (ಜೈನ) ಅಧಿಕಾರತ್ಯಾಗ; ಪದವಿತ್ಯಾಗ; ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು
**ಇಂದ್ರತ್ಯಾಗಕ್ರಿಯೆ** – ಇಂದ್ರತ್ಯಾಗ
**ಇಂದ್ರದಂತಿ** – ಐರಾವತ
**ಇಂದ್ರದಿಕ್ಕು** – ಪೂರ್ವದಿಕ್ಕು
**ಇಂದ್ರದ್ವಿಪ** – ಇಂದ್ರನ ಆನೆ, ಐರಾವತ
**ಇಂದ್ರಧ್ವಜ** – ಇಂದ್ರನ ಧ್ವಜ; ವಜ್ರಾಯುಧ (ಜೈನ) ಇಂದ್ರಾದಿಗಳು ಮಾಡುವ ಜಿನಪೂಜೆ
**ಇಂದ್ರನಂದನ** – ಇಂದ್ರನ ಮಗ, ಅರ್ಜುನ; ಜಯಂತ
**ಇಂದ್ರನಗ** – ಮೇರುಪರ್ವತ
**ಇಂದ್ರನೀಲ** – ನೀಲವರ್ಣದ ರತ್ನ
**ಇಂದ್ರಪುರ** – ಅಮರಾವತಿ
**ಇಂದ್ರಮಣಿ** – ಇಂದ್ರನೀಲ
**ಇಂದ್ರವಧು** – ಇಂದ್ರ ನೇಮಿಸಿದ ಅಪ್ಸರೆ; ಶಚೀದೇವಿ
**ಇಂದ್ರವಿದ್ವಿಷ** – ಇಂದ್ರನ ಶತ್ರು; ರಾವಣ
**ಇಂದ್ರಸಿಂಧು** – ದೇವಗಂಗೆ
**ಇಂದ್ರಸಿಂಧುರ** – ಇಂದ್ರನ ಆನೆ, ಐರಾವತ
**ಇಂದ್ರಾಂಗನೆ** – ಶಚೀದೇವಿ
**ಇಂದ್ರಾಣಿ** – ಇಂದ್ರನ ಹೆಂಡತಿ, ಶಚೀದೇವಿ
**ಇಂದ್ರಾದ್ರಿ** – ಮಂದರಪರ್ವತ
**ಇಂದ್ರಾನೇಕಪ** – ಇಂದ್ರನ ಆನೆ, ಐರಾವತ

**ಇಂದ್ರಾನೋಕಹ** – ಇಂದ್ರನ ಮರ, ಕಲ್ಪವೃಕ್ಷ
**ಇಂದ್ರಾಭಿಷೇಕ** – ಇಂದ್ರನಿಗೆ ಮಾಡುವ ಅಭಿಷೇಕ; (ಜೈನ) ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು
**ಇಂದ್ರಾಭಿಷೇಕಕ್ರಿಯೆ** – (ಜೈನ) ಇಂದ್ರಾಭಿಷೇಕ
**ಇಂದ್ರಾಯುಧ** – ವಜ್ರಾಯುಧ; ಸಿಡಿಲು
**ಇಂದ್ರಾರಿ** – ಇಂದ್ರನ ಶತ್ರು, ಗರುಡ; ಇಂದ್ರಜಿತ್ತು, ಅಸುರ
**ಇಂದ್ರಾವತಾರ** – (ಜೈನ) ಗರ್ಭಾನ್ವಯಕ್ರಿಯೆಗಳಲ್ಲಿ ಒಂದು
**ಇಂದ್ರಾವರಜ** – ಇಂದ್ರನ ತಮ್ಮ, ಉಪೇಂದ್ರ; ವಿಷ್ಣು
**ಇಂದ್ರಾಶೆ** – ಇಂದ್ರನ ದಿಕ್ಕು, ಪೂರ್ವದಿಕ್ಕು
**ಇಂದ್ರಿಯಸೌಕ್ಯ** – ಇಂದ್ರಿಯಗಳ ಸುಖ
**ಇಂದ್ರಿಯಕ್ಷರಣೆ** – ರೇತಸ್ಸಿನ ಸ್ಖಲನೆ
**ಇಂದ್ರೇಭ** – ಐರಾವತ
**ಇಂದ್ರಪಪಾತಕ್ರಿಯೆ** – (ಜೈನ) ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು
**ಇಂದ್ವಂಕ** – ಚಂದ್ರನಲ್ಲಿರುವ ಕಲೆ
**ಇಂದ್ವರ್ಧ** – ಅರ್ಧಚಂದ್ರ
**ಇಂಧನ** – ಹತ್ತಿಸುವುದು; ಉರುವಲು
**ಇಂಪಡರ್** – ರುಚಿಯಾಗು
**ಇಂಪಾಣ** – ಇಂಪಾಗಿ ಹಾಡುವವನು
**ಇಂಪು** – ಮಧುರತೆ, ಸವಿ
**ಇಂಪುಗಾಣ್** – ರುಚಿ ಕಾಣು
**ಇಂಪುವೆಱು** – ಇಂಪನ್ನು ಹೊಂದು; ಹಿತವಾಗು
**ಇಂಪೇಱು** – ಆನಂದ ಹೊಮ್ಮು
**ಇಂಪೇಱ್** – ಹಿತಕರವಾಗು
**ಇಂಬಣ್** – ಇಇದಾದ ಹಣ್ಣು
**ಇಂಬವಳ** – ಇನಿದಾದ ಹವಳ
**ಇಂಬಟೆ** – ಅವಕಾಶ; ಸಂದರ್ಭ; ಹದಗೆಡು; ನೆಲೆಗೆಡು
**ಇಂಬಾಗು** – ಆಶ್ರಯವಾಗು; ಸೊಗಸಾಗು
**ಇಂಬಿಡು** – ಹರಡು, ವ್ಯಾಪಿಸು
**ಇಂಬೀ** – ಇಂಬು ಈ, ಆಶ್ರಯ ನೀಡು
**ಇಂಬ** – ಸಂತೋಷ
**ಇಂಬು** – ಆಶ್ರಯ, ಎಡೆ
**ಇಂಬುಕೆಯ್** – ಅಂಗೀಕರಿಸು; ಅವಕಾಶ ಮಾಡಿಕೊ; ಅನುಕೂಲಕರವಾಗಿ ನಡೆದುಕೊ; ಸಂತೋಷಪಡಿಸು; ರುಚಿಯಾಗು
**ಇಂಬುಕೆಯ್ಸು** – ಹಿತವುಂಟುಮಾಡು; ಅವಕಾಶಮಾಡಿಕೊಡು
**ಇಂಬುಗಿಡು** – ಅಂದಕೆಡು
**ಇಂಬುಗೊಡು** – ಆಶ್ರಯಕೊಡು
**ಇಂಬುಗೊಳ್** – ಚೆನ್ನಾಗು
**ಇಂಬುಗೊಳಸು** – ಹೊಂದಿಸು
**ಇಂಬುವಡೆ** – ಅತಿಶಯತೆಯನ್ನು ಪಡೆ
**ಇಂಬುವರ್** – ಅನುಕೂಲವಾಗು; ಹಿತವಾಗು
**ಇಂಬುವೆಱು** – ಇಂಪಿನಿಂದ ಕೂಡು; ಸೊಗಸಾಗು
**ಇಂಬೆಳಸು** – ಚೆನ್ನಾದ ಬೆಳಸು; ಇನಿದಾದ ಬೆಳೆ
**ಇಕ್ಕಿಸು** – ಇರಿಸು; ಸ್ಥಾಪಿಸು; ಊಟಕಾಕಿಸು
**ಇಕ್ಕಿಕೊಳ್** – ಇರಿಸಿಕೊ; ಧರಿಸು; ಆಚೆಗೆ ತಳ್ಳು; ಹೊಡೆದು ತುಳಿ
**ಇಕ್ಕು** – ಇಡು; ಧರಿಸು; ಲೇಪಿಸು; ಮುಡಿಸು, ತೊಡಿಸು; ಚೆಲ್ಲು; ಬಿಟ್ಟುಹೋಗು; ಬಿಸಾಕು; ಪ್ರಯೋಗಿಸು; ನಿಕ್ಷೇಪಮಾಡು; ನೀಡು; ಹೊಡೆ, ಹನನಗೈ
**ಇಕ್ಕುಂಗೂಳ್(ೞ್)**– ಇತರರು ನೀಡುವ ಅನ್ನ; ಭಿಕ್ಷೆ
**ಇಕ್ಕುವಡು** – ಸೋಲು ಅನುಭವಿಸು; ಹೊಡೆಯಲ್ಪಡು
**ಇಕ್ಕುೞ್** – ಒಂದು ರೋಗ; ಪಟಿಕಾರ
**ಇಕ್ಕೆ** – ಇರುವ ಜಾಗ
**ಇಕ್ಕೆದಾಣ** – ಬಿಡದಿ, ಬಿಡಾರ
**ಇಕ್ಷುಕಾಂಡ** – ಕಬ್ಬಿನ ಜಲ್ಲೆ
**ಇಕ್ಷುಚಾಪ** – ಕಬ್ಬಿನ ಬಿಲ್ಲು, ಕಬ್ಬುಬಿಲ್ಲ, ಮನ್ಮಥ
**ಇಕ್ಷುಪುಷ್ಪ** – ಕಬ್ಬಿನ ಹೂ, ಸೂಲಂಗಿ
**ಇಕ್ಷುಯಂತ್ರ** – ಕಬ್ಬಿನ ರಸ ತೆಗೆಯುವ ಯಂತ್ರ
**ಇಕ್ಷುರಸ** – ಕಬ್ಬಿನ ರಸ
**ಇಕ್ಷುವಾಟ(ಟಿ)** – ಕಬ್ಬಿನ ಗದ್ದೆ
**ಇಕ್ಷ್ವಾಕು** – ಸೂರ್ಯವಂಶದ ಮೂಲಪುರುಷ
**ಇಚ್ಚಡಿ** – ಎರಡು ಮಡಿಕೆ
**ಇಚ್ಚೆ** – ಆಸೆ, ಬಯಕೆ; ಬಯಸಿದ ವಸ್ತು, ವಿಷಯ; ಸ್ವಾತಂತ್ರ್ಯ; ಅಭಿಪ್ರಾಯ; ಸಮ್ಮತಿ
**ಇಚ್ಚೆಕಾರ್ತನ** – ಕಾಮ
**ಇಚ್ಚೆಕಾ(ಗಾ)ರ್ತಿ** – ಇಚ್ಛಾನುಸಾರ **ನಡೆಯುವವನು; ಸ್ವೈರ ವ್ಯಕ್ತಿ; ವಿಧೇಯ ವ್ಯಕ್ತಿ; ರತಿ–**
**ಇಚ್ಚೆಕಾ(ಗಾ)ಱ** – ಇಚ್ಛಾನುಸಾರ **ನಡೆಯುವವನು; ಸ್ವೈರ ವ್ಯಕ್ತಿ; ವಿಧೇಯ ವ್ಯಕ್ತಿ; ಮನ್ಮಥ–**
**ಇಚ್ಚೆಕಾಱತನ** – ಸ್ವಚ್ಛಂದವೃತ್ತಿ; ಪ್ರಣಯ
**ಇಚ್ಚೆಗೆಡು** – ಆಸೆಭಂಗವಾಗು; ಸ್ವಾಧೀನ ತಪ್ಪು
**ಇಚ್ಚೆಗೆಯ್** – ಇಷ್ಟಪೂರ್ತಿಮಾಡು; ಇಷ್ಟಪಡು
**ಇಚ್ಚೆಯಾಣ್ಮ** – ಪ್ರೀತಿಸಿದವನು; ಮನದನ್ನ
**ಇಚ್ಛಾಕಾರಂ(ಗೆಯ್)** – ಆತಿಥ್ಯ(ಮಾಡು)
**ಇಚ್ಛಾಮರಣಿ** – ಬೇಕೆಂದಾಗ ಸಾವು ಪಡೆಯುವವನು
**ಇಚ್ಛಾವಿಘಾತಿ** – ಇಷ್ಟಕ್ಕೆ ಭಂಗ
**ಇಜ್ಯಾಪುರಸ್ಸರಂ** – ದಾನಪೂರ್ವಕವಾಗಿ
**ಇಜ್ಯೆ** – ಯಾಗ; ದಾನ; (ಜೈನ) ಅರ್ಹಂತಪೂಜೆ
**ಇಟ್ಟಗೆ** – (ಇಷ್ಟಕಾ) ಇಟ್ಟಂಗಿ, ಇಟ್ಟಿಗೆ
**ಇಟ್ಟಡೆ** – ಇಕ್ಕಟ್ಟು; ಅನಿವಾರ್ಯತೆ; ಸಾಂದ್ರತೆ
**ಇಟ್ಟಣ(ಳ)** – ಗುಂಪು, ಮನೋಹರ
**ಇಟ್ಟಣಂಬಡೆ** – ಅತಿಶಯವಾಗು
**ಇಟ್ಟಣ(ಳ)ಸು** – ಗುಂಪಾಗು; ಸುಂದರವಾಗು

**ಇಟ್ಟಳಂ** – ಅತಿಶಯವಾಗಿ
**ಇಟ್ಟಳಂಗಟ್ಟು** – ಒತ್ತಾಗಿ ಕಟ್ಟು
**ಇಟ್ಟಳಮಿಡು** – ಆಕ್ಷೇಪ ಮಾಡು
**ಇಟ್ಟಾಡು** – ಎಸೆದಾಡು, ಚೆಲ್ಲು
**ಇಟ್ಟಿ** – ಈಟಿ; ಇಷ್ಟಿ, ಯಾಗ
**ಇಟ್ಟಿಗೆಗೊಳ್** – ಇಟ್ಟಿಗೆಗಳನ್ನು ಕೂಡಿಸು
**ಇಟ್ಟೆಡೆ** – ಇಟ್ಟಡೆ
**ಇಡಿ** – ಕುಟ್ಟು; ತಿವಿ; ತುಂಬಿರು
**ಇಡಿಕಿಱಿ** – ಒತ್ತಾಗಿರು
**ಇಡಿಕೆಗೊಳ್** – ನಿಬಿಡವಾಗು
**ಇಡಿ(ಡು)ವು** – ಇಕ್ಕಟ್ಟು
**ಇಡು** – ಹೊಡೆ; ಧರಿಸು
**ಇಡು(ಂ)ಕು** – ದೂರ ಎಸೆ, ಬಿಸಾಕು
**ಇದುರಿತು** – ಎದುರಿಗಿರುವುದು
**ಇಭದ್ವಿಣ್ಮೂರ್ತಿ** – ಸಿಂಹದ ಆಕಾರ
**ಇಡಿರ್ಗಿಱುಗಟ್ಟಿಗೆ** – ಕೊಕ್ಕೆಕೋಲು; ಮೀನು ಹಿಡಿಯುವ ಗಾಳದ ಕೊಕ್ಕೆ
**ಇಡು** – ಇರಿಸು; ಹೂಡು; ಧರಿಸು; ಹೊಡೆ; ಎಸೆ
**ಇಡು(ಂ)ಕು** – ಬಲವಾಗಿ ಎಸೆ; ತುರುಕು
**ಇಡುಕುಂಗಬ್ಬ** – ಸ್ವಯಂಪೂರ್ಣ ಕಾವ್ಯ; ಮುಕ್ತಕ
**ಇಡುಕುಂಬನಿ** – ದಟ್ಟವಾಗಿ ಹಾಕುವ ಹನಿ
**ಇಡುಗಿಚ್ಚು** – ಹಾಕುವ ಕಿಚ್ಚು
**ಇಡುಮುಡುಕು** – ಛಿಟಿಛಿಟಿರೆನ್ನುವ ಶಬ್ದ
**ಇಡುಕುಮುಡುಕೆನೆ** – ಇಕ್ಕಟ್ಟಾದ ಜಾಗ
**ಇಡುವಗೆ** – ಬದ್ಧದ್ವೇಷ
**ಇಡುವರ್ಣ** – ಗಾಢವಾಗಿ ಬಳಿದ ಬಣ್ಣ
**ಇಡುವಲೆ** – ಬೀಸುವ ಬಲೆ
**ಇಡುವಟಿ** – ಇರಿಸಿದ ಸ್ಥಿತಿ
**ಇಡು(ಡಿ)ವು** – ಸಂದಿಗೊಂದಿ, ಇಕ್ಕಟ್ಟು; ರಾಶಿ
**ಇಣಿ** – ಎತ್ತಿನ ಹಿಣಿಲು
**ಇತರ** – ಬೇರೆಯ
**ಇತರೆ** – ಸಾಮಾನ್ಯಳು
**ಇತರೇತರ** – ಪರಸ್ಪರ
**ಇತರೇತರಕ್ರಿಯೆ** – ಪರಸ್ಪರ ಮಾಡುವ ಕೆಲಸ
**ಇತರೇತರೋಕ್ತಿ** – ಪರಸ್ಪರ ಮಾತು
**ಇತಸ್ತತ** – ಅತ್ತ ಇತ್ತ
**ಇತಿಹಾಸೋಪಾಶ್ರಯ** – ಇತಿಹಾಸವನ್ನು ಅವಲಂಬಿಸಿರುವುದು
**ಇತ್ತ** – ಈ ಕಡೆ
**ಇದಂದೇವ** – ಈತನೇ ದೇವ
**ಇದಾನೀಂತನ** – ಈಗಿನ, ಈ ಕಾಲದ
**ಇದಿರ್** – ಎದಿರು, ಸಮ್ಮುಖ; ವಿರೋಧ
**ಇದಿರಾನ್** – ಎದುರಿಸು
**ಇದಿರೀಸು** – ಪ್ರವಾಹಕ್ಕೆ ವಿರುದ್ಧವಾಗಿ ಈಜು
**ಇದಿರುಗಟ್ಟು** – ಮನೆಯ ಮುಂಭಾಗದ ಕಟ್ಟಡ
**ಇದಿರೆತ್ತು** – ಎದುರಾಗಿ ದಂಡೆತ್ತಿ ಹೋಗು
**ಇದಿರೆಯ್ತ(ಱ)ರ್** – ಎದುರಾಗಿ ಬಾ
**ಇದಿರೇಱಿಸು** – ಎದುರಾಗಿ ನುಗ್ಗಿಸು
**ಇದಿಱೇರಿಸು** – ಎದುರಾಗಿ ನುಗ್ಗು
**ಇದಿರೇಱ್** – ಗೌರವದಿಂದ ಎದುರುಗೊಳ್ಳು
**ಇದಿರೊಡ್ಡ** – ಎದುರಿನ ಸೈನ್ಯ
**ಇದಿರೊಡ್ಡು** – ಎದುರಾಗಿ ನಿಲ್ಲಿಸು; ಪ್ರತಿಸೈನ್ಯ
**ಇದಿರ್ಚು** – ಎದುರಿಸು, ಪ್ರತಿಭಟಿಸು
**ಇದಿರ್ವರ್** – ಎದುರಾಗು
**ಇದಿರ್ವೋಗು** – ಎದುರಾಗಿ ಹೋಗು; ಇದಿರುಗೊಳ್ಳು
**ಇಧ್ಮ** – ಸಮಿತ್ತು, ಸೌದೆ
**ಇನ** – ಸೂರ್ಯ; ಒಡೆಯ; ತಂದೆ; ದೇವರು; ಪ್ರಿಯಕರ
**ಇನಕಿರಣ** – ಸೂರ್ಯಕಿರಣ
**ಇನಜ** – ಯಮ; ಶನಿ; ಕರ್ಣ
**ಇನಜಾತ** – ಇನಜ
**ಇನಮಂಡಲ** – ಸೂರ್ಯಮಂಡಲ
**ಇನರಶ್ಮಿ** – ಸೂರ್ಯರಶ್ಮಿ
**ಇನರಿಪು** – ರಾಹು
**ಇನಿಗೊಳ** – ಅಮೃತಸರೋವರ
**ಇನಿತ್ತು** – ಇಷ್ಟು, ಇನಿತು; ಸ್ವಲ್ಪ
**ಇನಿದು** – ಮಧುರ; ಸಿಹಿಯಾದ; ಇಂಪಾದ
**ಇನಿದುಗಱಿ** – ಅಮೃತವನ್ನು ಸುರಿಸು; ಹಿತಗೈ
**ಇನಿವಿರಿದು** – ಇನಿತು+ಪಿರಿದು, ಇಷ್ಟು ದೊಡ್ಡದು
**ಇನಿವಿಲ್** – ಇನಿದು ಬಿಲ್ಲು, ಕಬ್ಬು
**ಇನಿಸು** – ಇನಿತ್ತು
**ಇನ್ನ** – ಇಂಥದು; ಇಲ್ಲಿಯವರೆಗೆ
**ಇನ್ನುಣಿಸು** – ಇನಿದಾದ ಉಣಿಸು
**ಇನ್ನೆಗಂ** – ಇಷ್ಟರವರೆಗೆ; ಇಲ್ಲಿಯವರೆಗೆ
**ಇನ್ನೆವರಂ** – ಇದುವರೆಗೆ
**ಇನ್ನೆವರೆಗಂ** – ಇನ್ನೆವರಂ
**ಇಬ್ಬ** – ಹಣವಂತ; ಒಂದು ಕುಲದ ಹೆಸರು
**ಇಭ** – ಆನೆ
**ಇಭಘಟೆ** – ಆನೆಯ ಗುಂಪು
**ಇಭಪತಿ** – ಆನೆಗಳ ಒಡೆಯ
**ಇಭರಿಪು** – ಆನೆಯ ಶತ್ರು, ಸಿಂಹ
**ಇಭವಿದ್ವೇಷಿ** – ಇಭರಿಪು
**ಇಭವೈರಿ** – ಇಭರಿಪು
**ಇಭಶಿಕ್ಷಕ** – ಆನೆಗಳನ್ನು ನಿಯಂತ್ರಿಸುವವನು, ಮಾವತಿಗ
**ಇಭಶಿಶು** – ಆನೆಯ ಮರಿ
**ಇಭಾಂತಕ** – ಆನೆಯನ್ನು ಕೊಲ್ಲುವಂಥದು, ಸಿಂಹ
**ಇಭಾರಿವಿಷ್ಟರ** – ಸಿಂಹಾಸನ
**ಇಭಾರೋಹಕ** – ಆನೆಯ ಸವಾರ
**ಇಭೇಂದ್ರ** – ಸಲಗ; ಮುಖ್ಯ ಆನೆ
**ಇಭೇಂದ್ರಶಿಕ್ಷೆ** – ಆನೆಗಳನ್ನು ಪಳಗಿಸುವಿಕೆ
**ಇಭ್ಯ** – ಆನೆಗೆ ಸಂಬಂಧಿಸಿದ; ಆನೆಗಳ ಗುಂಪು; ಶ್ರೀಮಂತ, ವರ್ತಕ

**ಇಭ್ಯಕುಲ** – ವೈಶ್ಯಕುಲ
**ಇಭ್ಯಾನ್ವಯ** – ವೈಶ್ಯಕುಲದವನು
**ಇಮ್ಮಗೆ(ನೆ)** – ಇಂಪಾಗಿ; ಸಂತೋಷವಾಗಿ
**ಇಮ್ಮಾವು** – ಸಿಹಿ ಮಾವು
**ಇಮ್ಮಿದ** – ಚೆಲುವ
**ಇರ್** – ಇರು; ಜೀವಿಸು; ವಾಸಮಾಡು; ವರ್ತಿಸು; ಎರಡು
**ಇರಂ** – ಇರವು, ಇರುವಿಕೆ; ನೆಲೆ; ಸ್ಥಿತಿ
**ಇರಮ್ಮದ** – ಸಿಡಿಲು
**ಇರವಂತಿ(ಗೆ)** – ಇರುವಂತಿ, ಹೆಜ್ಜಾಜಿ
**ಇರಿ** – (ಕರೆಯುವ ಹಾಲಿನ) ಧಾರೆ; ಹಾಲು ಕರೆ
**ಇರಿಸಿಡು** – ಇಡು
**ಇರಿಸು** – ಇರುವಂತೆ ಮಾಡು; ಇಡು
**ಇರು** – ವಾಸಮಾಡು; ದೊಡ್ಡ ಗುಂಪು
**ಇರುಪೆ** – ಇರುವೆ
**ಇರುಳ್(ಳು)** – ರಾತ್ರಿ; ಅಜ್ಞಾನ
**ಇರುಳುಮೆಯ್** – ನಡುರಾತ್ರಿ
**ಇರುಳೆಱೆಯ** – ಇರುಳರಸ, ಚಂದ್ರ
**ಇರುಳ್ಗಾಳೆಗ** – ರಾತ್ರಿ ಕಾಳಗ
**ಇರ್ಕಂಡ** – ಎರಡು ಭಾಗ
**ಇರ್ಕಚ್ಚೆ** – ಜೋಡುಗಚ್ಚೆ
**ಇರ್ಕಡಿ(ಗೆಯ್)** – ಎರಡು ಭಾಗ (ಮಾಡು)
**ಇರ್ಕಣ್ಗುರುಡ** – ಎರಡು ಕಣ್ಣೂ ಕಾಣದವನು
**ಇರ್ಕು** – ಹಿಂಸೆ
**ಇರ್ಕುಟೆಗೊಳ್** – ಎಳೆದುಕೊ
**ಇರ್ಕುಟೆಸು** – ಇಕ್ಕುಳದಿಂದ ಹಿಡಿ; ಇಕ್ಕಟ್ಟಿಗೆ ಸಿಲುಕಿಸು
**ಇರ್ಕೆ** – ಇಕ್ಕೆ, ಇರುವಿಕೆ; ಇರುವ ಸ್ಥಳ
**ಇರ್ಕೆದಾಣ** – ಇರುವ ಜಾಗ
**ಇರ್ಕೆಲ** – ಎರಡೂ ಬದಿ
**ಇರ್ಕೆವನೆ** – ಇರುವ ಮನೆ
**ಇರ್ಕೆವೆಟ್ಟು** – ಇರುವ ಬೆಟ್ಟ
**ಇರ್ಛಾಸಿರ** – ಎರಡು ಸಾವಿರ
**ಇರ್ತಟ್ಟು** – ಎರಡು ಕಡೆ
**ಇರ್ತಡಿ** – ಎರಡು ದಡ
**ಇರ್ತಡಿವಿಡಿ** – ಎರಡು ದಡಗಳನ್ನು ಅನುಸರಿಸು
**ಇರ್ತರ** – ಎರಡು ಸಾಲು
**ಇರ್ತಲೆವೊತ್ತು** – ಎರಡು ಕಡೆಗಳಿಗೂ ಉರಿ ಹೊತ್ತು
**ಇರ್ತಳ** – ಎರಡು ಅಂಗೈಗಳೂ
**ಇರ್ತಿಗ** – ಇತ್ತಿಗ, ಇತ್ತಿಗೆ ಪಗಡೆಯಲ್ಲಿ ಎರಡು ಕಡೆ ಮೂರು ಬೀಳುವುದು
**ಇರ್ತೆಱ** – ಎರಡು ತೆರ
**ಇರ್ದಲ್** – ಇದ್ದಿಲು
**ಇರ್ದೆಸೆ** – ಎರಡು ದಿಕ್ಕು, ಕಡೆ
**ಇರ್ಪತ್ತಿರ್ಛಾಸಿರ** – ಇಪ್ಪತ್ತೆರಡು ಸಾವಿರ
**ಇರ್ಪತ್ತಿರ್ವರ್** – ಇಪ್ಪತ್ತೆರಡು ಮಂದಿ
**ಇರ್ಪಟೆ** – ಒಣಗು
**ಇರ್ಪು** – ದ್ರವ, ತೇವ
**ಇರ್ಪುಗುಂದು** – ಒಣಗು; ಕಾಂತಿಹೀನವಾಗು
**ಇರ್ಪುವಡೆಯಿಸು** – ಹಸಿಯಾಗಿಸು
**ಇರ್ಪುವೇಱು** – ತಣ್ಣಗಾಗು
**ಇರ್ಪೊತ್ತು** – ಎರಡು ಹೊತ್ತು; ಹಗಲು–ರಾತ್ರಿ–
**ಇರ್ಪೋಡು** – ಒಣಗಿಹೋಗು
**ಇರ್ಪೋಟಿಲ್** – ಎರಡು ಹೋಳು
**ಇರ್ಬಗಿ** – ಇರ್ವಗಿ, ಇಬ್ಬಗಿ, ಎರಡು ಹೋಳು
**ಇರ್ಬಗಿಮಾಡು** – ಎರಡು ಹೋಳಾಗಿ ಸೀಳು
**ಇರ್ಬದಿ** – ಎರಡು ಪಕ್ಕ
**ಇರ್ಬರಿ** – ಇರ್ಬದಿ
**ಇರ್ಬಾಯ** – ಎರಡು ಬಾಯಿ ಉಳ್ಳದು, ಗಂಡಭೇರುಂಡ
**ಇರ್ಮಡಿ** – ಎರಡು ಪಟ್ಟು
**ಇರ್ಮಡಿಕೆ** – ಎರಡು ಮಡಿಕೆ
**ಇರ್ಮಡಿಸು** – ಎರಡರಷ್ಟಾಗು
**ಇರ್ಮೆ** – ಎರಡು ಸಲ, ಬಾರಿ
**ಇರ್ಮೆಯ್ಗಾಣಿಸು** – ಎದೆ ಬೆನ್ನುಗಳನ್ನು ಕಾಣಿಸು; ಬೆನ್ನಲ್ಲಿ ಹೊರಟು ಎದೆಯಲ್ಲಿ ಹೊರಬರು
**ಇರ್ಮೊನೆಗಾಣ್** – ಎರಡು ತುದಿಯಲ್ಲೂ ಕಾಣಿಸು
**ಇರ್ಮೊಱ** – ಎರಡು ಮೊಳ
**ಇರ್ವಕ್ಕ** – ಎರಡು ಪಕ್ಕ, ಎರಡು ಮಗ್ಗುಲು
**ಇರ್ವರ್** – ಇಬ್ಬರು
**ಇರ್ವಲ** – ಎರಡು ಕಡೆಯ ಸೈನ್ಯ
**ಇರ್ವಳ(ಟೆ)** – ಇರ್+ಬಳಿ(ಬಟೆ), ಎರಡು ವಂಶ
**ಇಲ್ಲಣ** – ಜೇಡನ ಬಲೆ; ಹೊಗೆನೂಲು
**ಇಲ್ಲಮೆ** – ಇಲ್ಲವೆ, ಇಲ್ಲದಿರುವಿಕೆ
**ಇಲ್ಲಿ** – ಈ ಎಡೆ
**ಇಷು** – ಬಾಣ
**ಇಷುವಿದ್ಯೆ** – ಧನುರ್ವಿದ್ಯೆ
**ಇಷ್ಟದಾನಿ** – ಬಯಸಿದ್ದನ್ನು ಕೊಡುವವನು
**ಇಷ್ಟಯೋಗ** – ಪ್ರಿಯರ ಸೇರುವಿಕೆ
**ಇಷ್ಟವಿಯೋಗ** – ಪ್ರಿಯರ ಅಗಲಿಕೆ
**ಇಷ್ಟಸಿದ್ಧಿ** – ಬಯಸಿದ್ದು ಕೈಗೂಡುವುದು
**ಇಷ್ಟಾರ್ಥಕರ** – ಬಯಸಿದ್ದನ್ನು ಉಂಟುಮಾಡುವ
**ಇಷ್ಟಾವಾಪ್ತಿ** – ಬಯಸಿದ್ದನ್ನು ಪಡೆಯುವುದು
**ಇಷ್ಟಿ** – ಯಾಗ; ಪೂಜೆ; ಬಯಕೆ
**ಇಷ್ಟು** – ಈ ಪ್ರಮಾಣದ
**ಇಸಿಸು** – ಬಾಣಪ್ರಯೋಗ ಮಾಡಿಸು
**ಇಸು** – ಬಾಣಪ್ರಯೋಗ ಮಾಡು; ಬಾಣ
**ಇಸುವೆಸ** – ಊಳಿಗ; ಸೇವಕವೃತ್ತಿ
**ಇಸುವೆಸಕೆಯ್(ಕೈ)** – ಸೇವೆಯಲ್ಲಿ ತೊಡಗಿಸಿಕೊ
**ಇಹ** – ಇರುವಿಕೆ; ಈ ಲೋಕ
**ಇಹಗೆ** – ಹೀಗೆ: ಈ ರೀತಿಯಾಗಿ
**ಇಹತ್ರೆ** – ಇಹಲೋಕ; ಈ ಲೋಕದಲ್ಲಿ, ಜನ್ಮದಲ್ಲಿ
**ಇಹಭವ** – ಇಲ್ಲಿ ಹುಟ್ಟಿದ

**ಇಳಾಗ್ರ** – ಭೂಮಿಯ ಮೇಲ್ಭಾಗ
**ಇಳಾಚಕ್ರ** – ಭೂಮಂಡಲ
**ಇಳಾತಳ** – ಇಳಾಗ್ರ
**ಇಳಾಧಿಪ** – ಭೂಮಿಯ ಒಡೆಯ, ರಾಜ
**ಇಳಾಭೃತ್** – ರಾಜ
**ಇಳಾಭೃತ್ಸುತ** – ರಾಜನ ಮಗ
**ಇಳಾವಲ್ಲಭ** – ಇಳಾಧಿಪ
**ಇಳಾವಳಯ** – ಭೂಮಂಡಲ
**ಇಳ(ಂ)ಕೆ** – ತಿರಸ್ಕಾರ, ಅವಜ್ಞೆ
**ಇಳಂಕೆಗೆಯ್** – ತಾತ್ಸಾರದಿಂದ ನೋಡಿ; ಪ್ರತಿಭಟಿಸು
**ಇಳಂಕೆಗೊಳ್** – ಕಡೆಗಣಿಸು; ಅಪಹಾಸಗೈ
**ಇಳಕೆಯ್**– ತಾತ್ಸಾರದಿಂದ ನೋಡಿ
**ಇಳಕೆವಡೆ** – ಉಪೇಕ್ಷೆಗೊಳಗಾಗು
**ಇಳಗಾಱ** – ತಿರಸ್ಕರಿಸುವವನು
**ಇಳಗಿಣ್ಬು** – ಹಿಮ್ಮಡಿ
**ಇಳದು** – ಕೀಳಾದ; ಕ್ಷೀಣವಾದ
**ಇಳದಾಗು** – ಕ್ಷೀಣವಾಗು
**ಇಳಪು** – ಕೆಳಕ್ಕೆ ತರು, ಇಳಿಸು
**ಇಳ(ಳ)ಲೆ** – ಸುಂದರಿ
**ಇಳಸು** – ಕೀಳುಗೈ; ಧಿಕ್ಕರಿಸು
**ಇಳೆ** – ಭೂಮಿ; ಶಬ್ದ; ಅನ್ನ; ನೀರು; ಧಮನಿ; ಮನುವಿನ ಮಗಳು
**ಇೞಿ** – ಮೊನಚಾದುದರಿಂದ ಚುಚ್ಚು; ಯುದ್ಧ ಮಾಡು; ಕತ್ತರಿಸು; ಸಡಿಲವಾಗು
**ಇೞಿಕುಳ** – ಕೊಂಬುಳ್ಳ ಪ್ರಾಣಿ
**ಇೞಿಯಿಸು** – ತಿವಿಸು; ಯುದ್ಧಮಾಡಿಸು
**ಇೞಿವಿಟ್ಟಿ** – ಸೋತ ರಾಜನು ಗೆದ್ದವನಿಗೆ ಮಾಡಬೇಕಾದ ಬಿಟ್ಟಿಯ ಕೆಲಸ; ಅವನ ಸಹಾಯಕ್ಕೆ ಬಂದು ಹೋರಾಡುವುದು
**ಇೞಿಸ(ಸಿ)ಲ್** – ಮೃಗಗಳನ್ನು ಕೆಡಹುವ ಗುಳಿ; ಖೆಡ್ಡ
**ಇೞಿಹ** – ಹೊಡೆತ; ಇರಿತ
**ಇೞಿಮುೞಿದೊಱೆ** – ಸುಳಿಗಳುಳ್ಳ ತೊರೆ
**ಇೞುಂಕು** – ಅದುಮಿ ಹಿಡಿ; ಹಿಸುಕು
**ಇೞುಂಬ(ಬು)** – ಇರುಕಲು; ಗುಂಪು; ತಗ್ಗು
**ಇೞುಂಬುಗೊಳ್** – ಸಂದಿಗೊಂದಿಗಳಲ್ಲಿ ಸೇರು
**ಇೞಿ** – ಕೆಳಕ್ಕೆ ಬರು; ಸೋರು; ಜೋಲುಬೀಳು; ಕೃಶವಾಗು
**ಇೞಿಕೆ** – ಕೀಳು
**ಇೞಿಕೆಯ್** – ಕೀಳುಮಾಡು
**ಇೞಿತರ್** – ಇಳಿದುಬರು
**ಇೞಿದು** – ಸಾಮಾನ್ಯ
**ಇೞಿಪು** – ಕೆಳಕ್ಕೆ ತಂದಿರಿಸು; ಕಳೆದುಕೊಳ್ಳು; ನೀಗಿಕೊ
**ಇೞಿಯುಂಬೊೞ್ತು** – ಇಳಿಹೊತ್ತು, ಸಾಯಂಕಾಲ
**ಇೞಿವಿೞಿ** – ನಾಶ, ಹಾನಿ
**ಇೞಿವು** – ಇಳಿಯುವಿಕೆ; ಬೀಳುವಿಕೆ
**ಇೞಿವೊಲ** – ಇಳಿಜಾರು ಭೂಮಿ
**ಇೞಿವೋಗು** – ಇಳಿದುಹೋಗು; ಹರಿದು ಹೋಗು
**ಇೞಿಸು** – ಕೆಳಕ್ಕೆ ಬರುವಂತೆ ಮಾಡು; ಕುಗ್ಗಿಸು
**ಇೞ್ಕುೞ್** – ಇಕ್ಕುಳ; ಬಿಕ್ಕಳಿಕೆ
**ಇ(ಈ)ೞ್ಕುೞಿಗೊಳ್** – ಸೆಳೆದುಕೊ; ಆಕರ್ಷಿಸು
**ಇೞ್ದೆ(ೞ್ದಿ)** – ಸುಲಿಗೆ; ಲೂಟಿ
**ಇೞ್ದುವರಿ** – ಎಳೆದುಕೊಂಡು ಹೋಗು

## ಈ

**ಈ** – ಕೊಡು; ದಾನಮಾಡು; ಎಡೆಗೊಡು
**ಈಂಚಿಲ್** – ಈಚಲುಮರ
**ಈಂಚುವೋಗು** – ಇಂಚೆವೋಗು; ಬತ್ತಿಹೋಗು; ತೊಲಗು
**ಈಂಟಿಸು** – ಕುಡಿಸು
**ಈಂಟು** – ಕುಡಿ, ಪಾನಗೈ
**ಈಂತ** – ಹೆರುವುದು; ಮರಿ ಹಾಕುವುದು
**ಈಂದನಿ** – ಇನಿದನಿ
**ಈಂದೋಳ್** – ಸುಂದರವಾದ ತೋಳು
**ಈಕ್ಷಣ** – ಕಣ್ಣು; ನೋಟ
**ಈಕ್ಷಣಭದ್ರ** – ನೋಡಲು ಶುಭಪ್ರದವಾದ
**ಈಕ್ಷಣಾಕರ್ಷಣ** – ನೋಟವನ್ನು ಸೆಳೆಯುವ; ಆಕರ್ಷಕವಾದ
**ಈಕ್ಷಿಸು** – ನೋಡಿ
**ಈಗಡು** –ಈಗ, ಈ ಸಮಯದಲ್ಲಿ
**ಈಗಡೆ** – ಈಗಲೇ
**ಈಗಳ್** – ಈಗ
**ಈಜ್ಯೆ** – ಪೂಜೆ
**ಈಡಾಡು** – ಚೆಲ್ಲಾಡು, ಬಿಸಾಡು
**ಈಡಿತ** – ಹೊಗಳಲ್ಪಟ್ಟ
**ಈಡಿೞಿ** – ಕೊಂಬಿನಿಂದ ತಿವಿ; ಕಿಕ್ಕಿರಿ
**ಈಡು** – ಬಾಣದ ಗುರಿ; ಎಸೆತ
**ಈಡೊರಸು** – ಕೊಂಬಿನಿಂದ ತಿಕ್ಕು, ಉಜ್ಜು
**ಈದಲೆ** – ಇತ್ತ, ಈ ಕಡೆ
**ಈದೊರೆತು** – ಇಂತಹ; ಈ ರೀತಿಯ
**ಈನ್** – ಮರಿ ಹಾಕು, ಹೆರು
**ಈಪೊೞ್ತು** – ಈ ಹೊತ್ತು; ಇಂದು
**ಈಪ್ಸಿತಾರ್ಥ** – ಬಯಸಿದ; ಬಯಕೆ
**ಈರಣ** – ಚಲನೆ, ಅಲುಗಾಟ
**ಈರಯ್ದು** – ಎರಡು ಬಾರಿ ಐದು, ಹತ್ತು
**ಈರಳ್ಕೆ** – ಎರಡು ಕಡೆಯ ಪಕ್ಕೆ
**ಈರಾಱು** – ಎರಡುಸಲ ಆರು, ಹನ್ನೆರಡು
**ಈರಿತ** – ಹೇರಲಾದ; ಎಸೆಯಲಾದ; ಹೇಳಿದ ಮಾತು
**ಈರೆಂಟು** – ಎರಡು ಸಲ ಎಂಟು, ಹದಿನಾರು

**ಈರೆರಡು** – ಎರಡು ಸಲ ಎರಡು, ನಾಲ್ಕು
**ಈರೆಲೆವೋಗು** – ಬೀಜ ಮೊಳೆತು ಎರಡು ಎಲೆ ಬಿಡು; ಚಿಗುರು; ಏಳಿಗೆಯಾಗು
**ಈರೇೞ್** – ಎರಡು ಸಲ ಏಳು, ಹದಿನಾಲ್ಕು
**ಈರೊಂಬದಿಂಬರ್** – ಹದಿನೆಂಟು ಮಂದಿ
**ಈರೊಡಲ್** – ಎರಡು ದೇಹ
**ಈರೊಡ್ಡು** – ಎರಡು (ಕಡೆಯ) ಸೈನ್ಯ
**ಈರ್ಮೆ** – ಗಾಯ
**ಈರ್ಯಾಪಥ(ರಿ)ಶುದ್ಧಿ** – (ಜೈನ) ನೆಲವನ್ನು ನಾಲ್ಕು ಮೊಳಗಳಷ್ಟು ಮುಂದೆ ನೋಡಿತ್ತ ನಡೆಯುತ್ತ ಆಗಬಹುದಾದ ಜೀವಹಿಂಸೆಯನ್ನು ತಡೆಯುವುದು
**ಈರ್ಯಾಮಾರ್ಗ** – ಪರ್ಯಟಣದ ದಾರಿ
**ಈರ್ಯಾಶುದ್ಧಿ** – ಈರ್ಯಾಪಥಶುದ್ಧಿ
**ಈರ್ಯೆ** – (ಜೈನ) ಸನ್ಯಾಸಿಗಳ ಸಂಚಾರ
**ಈರ್ಷೆ** – ಮತ್ಸರ
**ಈರ್ಷ್ಯೆ** – ಈರ್ಷೆ
**ಈವೞು** – ಇತ್ತೀಚೆ
**ಈಶಶಾಸನ** – ಒಡೆಯನ ಆಜ್ಞೆ
**ಈಶಾದಂಡ** – ಬಂಡಿಯ ಈಸು
**ಈಶಾನ** – ಈಶ್ವರ; ಶಿವನ ಪಂಚಮುಖಗಳಲ್ಲಿ ಒಂದು
**ಈಶಾನಕಲ್ಪ** – (ಜೈನ) ಹದಿಆನಾು ಸ್ವರ್ಗಗಳಲ್ಲಿ ಎರಡನೆಯದು
**ಈಶಾನೇಂದ್ರ** – (ಜೈನ) ಈಶಾನಕಲ್ಪದ ಒಡೆಯ
**ಈಶ್ವವಿರಹ** – ಒಡೆಯನ ಅಗಲಿಕೆ
**ಈಶ್ವರಶೈಲ** – ಕೈಲಾಸಪರ್ವತ
**ಈಷತ್** – ಸ್ವಲ್ಪ
**ಈಷತ್ಪ್ರಾಗ್ಭಾರ** – (ಜೈನ) ಅಷ್ಟಮಭೂಮಿ
**ಈಷದಾವಲಿತ** – ಸ್ವಲ್ಪ ತಿರುಗಿದ
**ಈಷದುನ್ಮಿಷಿತ** – ಸ್ವಲ್ಪ ಅರಳಿದ
**ಈಸ** – (ಈಶ) ಶಿವ
**ಈಸರ (ಈಶ್ವರ) ಶಿವ**–
**ಈಸಾಡು** – ಚಲನೆಯಿಲ್ಲದೆ ನೀರಲ್ಲಿ ತೇಲು; ಈಜು
**ಈಸು** – ಈಜು; ಇರ್ಚಿಮರ
**ಈಸೂೞ್** – ಈ ಬಾರಿ; ಈ ವರ್ಷ
**ಈಳೆ** – ಕಿತ್ತಿಳೆ, ಹೇರಿಳೆ ಮುಂತಾದ ಜಾತಿಯ ಮರ, ಹಣ್ಣು
**ಈಳೆಸಾಂದು** – ಈಳೆಯ ಗಂಧ, ಅನುಲೇಪನ
**ಈೞಿಲ್** – ಹೆರಿಗೆಮನೆ; ಮಂಗಳಸ್ನಾನ
**ಈೞ್** – ಸೆಳೆದುಕೊ; ಆಕರ್ಷಿಸು
**ಈೞ್ಕುಳಿಗೊಳ್** – ಇರ್ಕುಳಿಗೊಳ್, ಕಿತ್ತುಕೊ
**ಈೞ್ಕೊಳ್** – ಸೆಳೆದುಕೊ; ಆಕರ್ಷಿಸು

## ಉ

**ಉಂಗುಟ** – ಕಾಲಿನ ಹೆಬ್ಬೆರಳು
**ಉಂಗುರವಿಡು** – ಮದುವೆ ನಿಶ್ಚಿತಾರ್ಥದಲ್ಲಿ ಉಂಗುರ ತೊಡಿಸು
**ಉಂಚ** – ಎತ್ತರ; ಉದ್ದವಾದ
**ಉಂಟು** – ಇದೆ
**ಉಂಟೊಡೆತು** – ಹೌದು, ಇದೆ ಎಂಬುದನ್ನಾಗಿ ಮಾಡಿ
**ಉಂಡಗೆ** – ಉಂಡೆ
**ಉಂಡಲಿಗೆ** – ಕಡುಬು
**ಉಂಡಿಗೆ** – ಮುದ್ರೆ; ಅಪ್ಪಣೆ ಚೀಟಿ; ಗಂಟಲು
**ಉಂಡಿಗೆ ಸಾಧ್ಯಂ ಮಾಡು** – ತನ್ನ ಹೆಸರಿನ ಮುದ್ರೆ ಬೇರೆಡೆ ಚಲಾವಣೆಯಾಗುವಂತೆ ಮಾಡು, ಆ ಪ್ರದೇಶವನ್ನು ಗೆಲ್ಲು
**ಉಂಡಿಗೆಯೊತ್ತು** – ಮುದ್ರೆ ಒತ್ತು
**ಉಂಡೆ** – ಮುದ್ದೆ
**ಉಂತಪ್ಪ** – ನಡುವಣ ರೀತಿಯ
**ಉಂತು** – ನಡುವಣ ರೀತಿಯಲ್ಲಿ
**ಉಂತೆ** – ವ್ಯರ್ಥವಾಗಿ
**ಉಂದುರ** – ಇಲಿ, ಹೆಗ್ಗಣ
**ಉಂಬಳಿ** – ಉಡುಗೊರೆ, ಕೊಡುಗೆ
**ಉಕ್ಕಂದ** – ತುಂಬಿ ತುಳುಕುವ; ಉತ್ಸಾಹ
**ಉಕ್ಕಡ** – ನಗರದ ಗಡಿ; ಪಹರೆಯ ನೆಲೆ
**ಉಕ್ಕೆವ** – ಠಕ್ಕು, ಮೋಸ; ಉತ್ಸಾಹ; ಉತ್ಸವ
**ಉಕ್ಕೆವಗುದುರೆ** – ಮೋಸದ ಕುದುರೆ
**ಉಕ್ಕೆವಚಾಮರ** – ಉತ್ಸವಕಾಲದ ಚಾಮರ
**ಉಕ್ಕೆವತನ** – ವಂಚಕತನ
**ಉಕ್ಕೆವತಪ** – ಕಪಟ ತಪಸ್ಸು
**ಉಕ್ತಿಪ್ರೌಢ** – ಮಾತಿನ ನಿಪುಣ
**ಉಕ್ತಿವಕ್ರಿಮ** – ಮಾತಿನ ಕೊಂಕು
**ಉಕ್ಷ** – ಎತ್ತು
**ಉಗಿ** – ಹೊರಗೆಳೆ; ಸಡಿಲವಾಗು; ಉಗುಳು; ಕುಗ್ಗಿಸು; ಹೆದರು; ಸೀಳಿಹೋಗಿರುವುದು; ಕೀಳು
**ಉಗಿಗೊಳ್** – ತಿವಿಯಲ್ಪಡು; ಉಗುರಿನಿಂದ ಗಾಯಹೊಂದು
**ಉಗಿಪಟಂಗೊಳ್** – ಸೆಳೆದುಕೊ; ಹೋಗಲಾಡಿಸು
**ಉಗಿಪದ** – ಸುಲಿಗೆ
**ಉಗಿಬಗಿ** – ಸೀಳು; ಚೂರಾಗಿರುವುದು
**ಉಗಿಬಗಿಮಾಡು** – ಚೂರುಮಾಡು; ಕಲಕು; ಪರವಶಗೊಳಿಸು; ಉಗುರಿನಿಂದ ಪರಚಿ ಗಾಯಮಾಡು
**ಉಗಿಬಗಿಯಾಗು** – ಹೊಯ್ದಾಡು; ಆತುರಪಡು
**ಉಗಿವಡೆ** – ಗಾಯಹೊಂದು
**ಉಗಿಸು** – ಚೆಲ್ಲಿಸು; ಚಿಮುಕಿಸು; ಹೊರಬೀಳಿಸು
**ಉಗು** – ಚೆಲ್ಲು; ಹೊರಬೀಳಿಸು; ಸುರಿ
**ಉಗುತರ್** – ಉಕ್ಕಿಬರು; ಸುರಿ; ಪ್ರವಿಸು
**ಉಗುರಿಸು** – ಉಗುರಿನಿಂದ ಕೆರೆ, ಗೀಚು
**ಉಗುರ್ವಿಸಿ** – ಉಗುರು ಬಿಸಿ

**ಉಗುರ್ವೆಚ್ಚನೆ** – ಉಗುರುಬೆಚ್ಚಗೆ
**ಉಗುರ್ವೊಯ್ಲು** – ಉಗುರಿನ ಹೊಡೆತ
**ಉಗುಳ್** – ಮುಕ್ಕುಳಿಸು; ಉಗುಳು; ಜೊಲ್ಲು; ಎಂಜಲು ನೀರು
**ಉಗುಳಿಸು** – ಕಕ್ಕಿಸು
**ಉಗುಱ್ದಿರ್** – ಹೊಮ್ಮಿಸು
**ಉಗ್ಗಡ** – (ಉತ್ಕಟ) ಆಧಿಕ್ಯ
**ಉಗ್ಗಡರಾವಿತ** – ಶೂರನಾದ ಸವಾರ
**ಉಗ್ಗಡಿ(ಳ)ಸು** – (ಉದ್ಘೋಷಿಸು) ಕೂಗಿ ಹೇಳು; ಕೊಂಡಾಡು
**ಉಗ್ಗು** – ತೊದಲುವಿಕೆ
**ಉಗ್ರ** – ಭಯಂಕರವಾದ
**ಉಗ್ರಕರ** – ತೀಕ್ಷ್ಣ ಕಿರಣಗಳನ್ನುಳ್ಳವನು, ಸೂರ್ಯ
**ಉಗ್ರಘೋಷ** – ಭಯಂಕರ ಧ್ವನಿ
**ಉಗ್ರತಿಮಿ** – ಭಯಂಕರ ಮೀನು
**ಉಗ್ರತೇಜ** – ಕೋರೈಸುವ ಕಾಂತಿ
**ಉಗ್ರನಖ** – ಹರಿತವಾದ ಉಗುರು
**ಉಗ್ರಪಾಣಿ** – ಭಯಂಕರ ಕೈಯುಳ್ಳವನು
**ಉಗ್ರಬಲ** – ಭಯಂಕರ ಬಲಿಷ್ಠ
**ಉಗ್ರಸತ್ವ** – ಬಹಳ ಬಲಶಾಲಿ
**ಉಘೇ** – ಜಯಘೋಷ
**ಉಚಿತ** – ತಕ್ಕ, ಸರಿಯಾದ
**ಉಚಿತಜ್ಞ** – ಯೋಗ್ಯವಾದುದನ್ನು ತಿಳಿದವನು
**ಉಚಿತವಿಧಿ** – ಯೋಗ್ಯ ಕ್ರಮ
**ಉಚಿತೋಕ್ತಿ** – ಯೋಗ್ಯವಾದ ಮಾತು
**ಉಚ್ಚ** – ಉನ್ನತವಾದ; ಮುಖವೆತ್ತಿ ನಡೆವವನು; ಉನ್ನತಿ
**ಉಚ್ಚಂಡ** – ಹರಿತವಾದ; ಉಗ್ರವಾದ
**ಉಚ್ಚಂಡಕರ** – ಕೊರೈಸುವ ಕಾಂತಿ; ಬಲಿಷ್ಠ ಕೈ
**ಉಚ್ಚಂಬರಿ** – ಮೇಲೆ ಹಾರು
**ಉಚ್ಚರಿಸು** – ಉಚ್ಚಾರಮಾಡು; ಹೇಳು
**ಉಚ್ಚಲಿ(ಳ)ತ** – ಮೇಲಕ್ಕೆ ಎದ್ದ
**ಉಚ್ಚಲಿ(ಳ)ಸು** – ಮೇಲಕ್ಕೆ ಚಿಮ್ಮು; ಎಲ್ಲೆ ಮೀರು
**ಉಚ್ಚವ** – ಸಡಗರ; ಉತ್ಸವ
**ಉಚ್ಚವಿಗ್ರಹ** – ಬಲಿಷ್ಠರೊಡನೆ ಮಾಡುವ ಯುದ್ಧ
**ಉಚ್ಚಸ್ತನಿ** – ಉನ್ನತವಾದ ಮೊಲೆಯುಳ್ಳವಳು
**ಉಚ್ಚಾಟನಂಗೆಯ್** – ಓಡಿಸು
**ಉಚ್ಚಾಟಿತ** – ಓಡಿಸಿದ
**ಉಚ್ಚಾಟಿಸು** – ಓಡಿಸು
**ಉಚ್ಚಾರಿತ** – ಹೇಳಿದ
**ಉಚ್ಚಾರಿಸು** – ನುಡಿ, ಹೇಳು
**ಉಚ್ಚಾವಚ** – ಮೇಲು ಮತ್ತು ಕೀಳು; ವಿವಿಧ
**ಉಚ್ಚಾಸನ** – ಉನ್ನತ ಪೀಠ
**ಉಚ್ಚೈರ್ಗೋತ್ರ** – (ಜೈನ) ಉತ್ಕೃಷ್ಟ ವಂಶ
**ಉಚ್ಚೈರ್ಧ್ವಾನ** – ಗಟ್ಟಿ ಕೂಗು
**ಉಚ್ಚೈಶ್ರವತ್ವ** – ನೆಟ್ಟಗಿರುವ ಕಿವಿಗಳನ್ನು ಪಡೆದಿರುವಿಕೆ
**ಉಚ್ಚೈಶ್ರವಸ್ಸು** – ಇಂದ್ರನ ಕುದುರೆ
**ಉಚ್ಚಿತ್ತಿ** – ಕತ್ತರಿಸುವುದು
**ಉಚ್ಚಿಷ್ಟಪಕ್ವ** – ತಿಂದು ಬಿಟ್ಟ ಹಣ್ಣು
**ಉಚ್ಛೃಂಖಲ(ಳ)** – ಸಂಕೋಲೆಗೊಳಪಡದ; ಕಟ್ಟುಪಾಡುಗಳಿಲ್ಲದ
**ಉಚ್ಛೃಂಖಲೆ** – ಹಿಡಿತಕ್ಕೆ ಸಿಕ್ಕದವಳು
**ಉಚ್ಛೇದನ** – ತುಂಡರಿಸುವುದು; ನಾಶಮಾಡುವುದು
**ಉಚ್ಛೇದ್ಯಶತ್ರು** – ನಾಶಮಾಡಬಹುದಾದ ಶತ್ರು
**ಉಚ್ಛ್ರಿತ** – ಮೇಲೆತ್ತಿದ
**ಉಚ್ಛ್ವಾಸ** – ಉಸಿರನ್ನು ಹೊರಕ್ಕೆ ಬಿಡು; ಮರಣ; (ಜೈನ) ಕಾಳವನ್ನು ಅಳೆಯುವ ಒಂದು **ಪ್ರಮಾಣ**–
**ಉಜ್ಜನ** – ತ್ಯಾಗ; ರಾಹಿತ್ಯ
**ಉಜ್ಜವಣೆ** – (ಉದ್ಯಾಪನಾ) ವ್ರತಸಮಾಪ್ತಿ; ನೆರವೇರುವಿಕೆ
**ಉಜ್ಜವಣೆವಡೆ** – ಮುಗಿಸು, ಪೂರ್ಣಗೊಳಿಸು
**ಉಜ್ಜಳ** – (ಉಜ್ಜ್ವಲ) ಪ್ರಕಾಶಿಸುವ
**ಉಜ್ಜಳಿಕೆ** – ಪ್ರಕಾಶ
**ಉಜ್ಜಳಿಸು** – ಪ್ರಕಾಶಿಸು
**ಉಜ್ಜುಗ** – (ಉದ್ಯೋಗ) ಪ್ರಯತ್ನ; ಉದ್ದೇಶ
**ಉಜ್ಜುಗಂಗೆಯ್** – ಪ್ರಯತ್ನಿಸು; ಆಲೋಚನೆಗೈ
**ಉಜ್ಜುಗಂದಳೆ** – ಪ್ರಯತ್ನಿಸು
**ಉಜ್ಜುಗಿಸು** – ಪ್ರಯತ್ನಸು
**ಉಜ್ಜೃಂಭಿತ** – ಆಕಳಿಸಿದ; ತೀವ್ರವಾದ
**ಉಜ್ಜೃಂಭಿಸು** – ಏಳಿಗೆಹೊಂದು
**ಉಜ್ಜ್ವಲ(ಳ)** – ಹೊಳೆಯುವ; ಉರಿಯುವ; ತೇಜಸ್ಸು
**ಉಜ್ಜ್ವಲಿ(ಳ)ಸು** – ಹೊಳೆ; ಪ್ರಕಾಶಿಸು
**ಉಜ್ಜ್ವಳಂಮಾಡು** – ಪ್ರಕಾಶಿಸುವಂತೆ ಮಾಡು
**ಉಜ್ಜ್ವಳಕೇಶ** – ಕಾಂತಿಯುಕ್ತವಾದ ಕೂದಲುಳ್ಳವನು
**ಉಜ್ಜ್ವಳೀಕೃತ** – ಪ್ರಕಾಶಗೊಳಿಸಲಾದ
**ಉಜ್ಝಿತಲಕ್ಷ್ಮ** – ದೋಷರಹಿತವಾದ
**ಉಜ್ವಳಾಂಗಿ** – ಕಾಂತಿಯುಕ್ತವಾದ ಶರೀರವುಳ್ಳವಳು
**ಉಜ್ವಳಿಕೆ** – ಕಾಂತಿ
**ಉಟಜ** – ಪರ್ಣಶಾಲೆ
**ಉಟಜಾಂಗಣ** – ಪರ್ಣಕುಟಿ(ಮನೆ)ಯ ಮುಂದಿನ ಅಂಗಳ
**ಉಡ(ಮೊಗ)** – ಬಾಗೆಹೂ(ವಿನಂತಹ) ಮುಖ
**ಉಡಲಿಕ್ಕು** – ಉಡುಗೊರೆಯನ್ನು ಕೊಡು
**ಉಡಿ** – ಒಡೆದುಹೋಗು; ತುಂಡುಮಾಡು; ವಾಸಿಮಾಡು; ಚಿಗುರಿಡು; ಚೂರು; ಸೊಂಟ; ಮಡಿಲು; ಸೋಗಿಲು
**ಉಡಿಯಿಸು** – ಹುಣ್ಣಿಗೆ ಮದ್ದುಮಾಡು
**ಉಡಿಸು** – ಉಟ್ಟುಕೊಳ್ಳುವಂತೆ ಮಾಡು
**ಉಡು** – ಧರಿಸು; ಹಲ್ಲಿ ಜಾತಿಯ ಒಂದು ಪ್ರಾಣಿ; ಶಿರೀಷಪುಷ್ಪ; ನಕ್ಷತ್ರ

**ಉಡುಕ** – ಕುಂದುವಿಕೆ; ನಡುಕ
**ಉಡುಗಿಸು** – ತಗ್ಗಿಸು; ಅಡಗಿಸು
**ಉಡುಕು** – ಕಚ್ಚು
**ಉಡುಗು** – ಸಂಕುಚಿತಗೊಳ್ಳು; ಒಳಸೇರು; ನಿಂತುಹೋಗು; ಹಿಂತೆಗೆದುಕೊ; ಕುಗ್ಗಿಸು; ಗುಡಿಸು; ಗುಡಿಸುವಿಕೆ
**ಉಡುಗೆ** – ಹಾಕಿಕೊಳ್ಳುವ ಬಟ್ಟೆ
**ಉಡುಗೊಱೆ** – ಕಾಣಿಕೆ
**ಉಡುತತಿ** – ನಕ್ಷತ್ರಗಳ ಸಮೂಹ
**ಉಡುಪ** – ಚಂದ್ರ; ಅಂಗಹೀನ
**ಉಡುಪಥ** – ನಕ್ಷತ್ರಮಾರ್ಗ
**ಉಡು(ಡ)ಮೊಗ** – ಶಿರೀಷದ ಹೂವಿನಂತೆ ಕೋಮಲಮುಖವುಳ್ಳವನು
**ಉಡುರಾಜಾನನೆ** – ಚಂದ್ರಮುಖಿ
**ಉಡೆ** – ಸೊಂಟ; ಉಡುವ ಬಟ್ಟೆ
**ಉಡೆ(ಡಿ)ಗಂಟೆ** – ಮಕ್ಕಳಿಗೆ ಸೊಂಟಕ್ಕೆ ಕಟ್ಟುವ ಗಂಟೆಯಾಕಾರದ ಆಭರಣ
**ಉಡೆದೊವಲ್** – ಉಟ್ಟಿರುವ ಧರ್ಮ
**ಉಡೆ(ಡಿ)ನೂಲ್** – ಉಡಿದಾರ
**ಉಡೆವಣಿ** – ಗೆಜ್ಜೆಯುಳ್ಳ ಉಡಿದಾರ
**ಉಣ್** – ತಿನ್ನು; ಕುಡಿ; ಅನುಭವಿಸು
**ಉಣಿಸು** – ಊಟಮಾಡಿಸು; ಊಟ
**ಉಣ್ಣದರ ಬೀಯ** – ದೇವತೆಗಳ ಆಹಾರ, ಅಮೃತ
**ಉಣ್ಣವಳ** – ದೋಷವಿಲ್ಲದ್ದು; ಹಿರಿದು
**ಉಣ್ಮೆಪೊಣ್ಮು** – ಚಿಮ್ಮಿ ಸೂಸು
**ಉಣ್ಮು** – ಉಬ್ಬು; ಉಕ್ಕಿ ಬರು; ಹಿಗ್ಗು
**ಉಣ್ಮೆ** – ಇರುವಿಕೆ
**ಉತ್ಕ** – ಕುತೂಹಲವುಳ್ಳ; ಮದಿಸಿದ; ಮೈಮರೆತ
**ಉತ್ಕಂಠ** – ಕೊರಳು ಮೇಲೆತ್ತಿದ; ಎತ್ತರವಾದ ಧ್ವನಿ; ತೀವ್ರ ಬಯಕೆಯಿರುವ
**ಉತ್ಕಂಠರೆ** – ಕತ್ತೆತ್ತುವುದು; ಗಟ್ಟಿಯಗು ಕೂಗು; ತವಕ
**ಉತ್ಕಂಠಿತ** – ತವಕದಿಂದ ಕೂಡಿದ
**ಉತ್ಕಂಠೆ** – ತವಕವುಳ್ಳವಳು; ಉತ್ಸುಕಳಾದವಳು
**ಉತ್ಕಂಪ** – ನಡುಕ
**ಉತ್ಕಂಪಿತ** – ನಡುಗುವ
**ಉತ್ಕಚ** – ಮೇಲಕ್ಕೆದ್ದ ಕೂದಲು
**ಉತ್ಕಟ** – ಪ್ರಬಲವಾದ; ಆಧಿಕ್ಯ; ಉಗ್ರತೆ
**ಉತ್ಕಟತೆ** – ಆಧಿಕ್ಯ; ಹೆಚ್ಚಳ
**ಉತ್ಕಟತ್ವ** – ಅತಿಪ್ರಯಾಸ
**ಉತ್ಕಟವೃತ್ತಿ** – ತೀವ್ರತೆ ಹೊಂದಿರುವ ಸ್ಥಿತಿ
**ಉತ್ಕಟಿಸು** – ತೀವ್ರತೆಯನ್ನು ಹೊಂದು
**ಉತ್ಕರ** – ಸಮೂಹ, ಗುಂಪು; ಸೀಳುವುದು
**ಉತ್ಕರಣ** – ಕೆತ್ತನೆ ಕೆಲಸ
**ಉತ್ಕರ್ಣ** – ಮೇಲಕ್ಕೆದ್ದಿರುವ ಕಿವಿ
**ಉತ್ಕರ್ಷ(ಣ)** – ಉತ್ಸಾಹ; ಹೆಚ್ಚಳ; ಏಳಿಗೆ
**ಉತ್ಕರ್ಷತೆ** – ಏಳಿಗೆ; ಉತ್ಸಾಹ
**ಉತ್ಕಲಿ(ಳ)ಕೆ** – ಉತ್ಕಟ ಬಯಕೆ; ಕುತೂಹಲ; ವಿರಹಕಾತರ; ಅಲ್ಲೋಲಕಲ್ಲೋಲ
**ಉತ್ಕಲ್ಲೋಲ(ಳ)** – ಮೇಲೆದ್ದ ಅಲೆ
**ಉತ್ಕಳಿಕಾವಿಲಾಸ** – ಮೊಗ್ಗುಗಳ ವೈಭವ
**ಉತ್ಕೀರ್ಣ** – ರಾಶಿಮಾಡಿದ; ಚೆದುರಿದ; ಕೆತ್ತಲ್ಪಟ್ಟ
**ಉತ್ಕೂಟ** – ಎತ್ತರವಾದ ಶಿಖರ
**ಉತ್ಕೆ** – ಉತ್ಕಂಠತೆ; ವಿರಹಕಾತರೆ
**ಉತ್ಕೇತು** – ಮೇಲೆತ್ತಿದ (ಹಾರಾಡುವ) ಬಾವುಟ
**ಉತ್ಕ್ರಾಂತಿ** – ಹೊರಟುಹೋಗುವಿಕೆ
**ಉತ್ಖಾತ** – ಅಗೆದ; ಹೊರಕ್ಕೆಳೆದ
**ಉತ್ತ** – ಮಧ್ಯದ ಪ್ರದೇಶ
**ಉತ್ತಂಭಿತ** – ಮೇಲೆತ್ತಿ ಹಿಡಿದ
**ಉತ್ತಂಸ** – ತಲೆಯ ಒಡವೆ; ಶಿರೋಭೂಷಣ
**ಉತ್ತಂಸಕ** – ಶ್ರೇಷ್ಠನಾದವನು
**ಉತ್ತಂಸಿತ** – ಶೋಭಿಸುವ
**ಉತ್ತಪ್ತ** – ಚೆನ್ನಾಗಿ ಕಾದ
**ಉತ್ತಮತಪ** – ಶ್ರೇಷ್ಠವಾದ ತಪಸ್ಸು
**ಉತ್ತಮಪಾತ್ರ** – ದಾನಕ್ಕೆ ಯೋಗ್ಯ ವ್ಯಕ್ತಿ
**ಉತ್ತಮಭಗಣ** – ಶುಭನಕ್ಷತ್ರಗಳ ಸಮೂಹ
**ಉತ್ತಮಾಂಗ** – ತಲೆ; ಶ್ರೇಷ್ಠವಾದ ಅವಯವ
**ಉತ್ತಮಿಕೆ** – ಮೇಲ್ಮೆ
**ಉತ್ತರ** – ಮೇಲಿನ; ಅಭಿವೃದ್ಧಿ; ಮರು ನುಡಿ; ಮೇಲ್ತರಗತಿಯ; ಎಡ ಭಾಗ
**ಉತ್ತರಕಾಲ** – ಆನಂತರ ಉತ್ತರಕುರು – ಕುರುದೇಶದ ಉತ್ತರಭಾಗ–
**ಉತ್ತರಕ್ರಿಯೆ** – ಅಪರಕರ್ಮ; ಮುಂದಿನ ಕೆಲಸ; (ಜೈನ) ಗರ್ಭಿಣಿಗೆ ಏಳನೆಯ ತಿಂಗಳಲ್ಲಿ ಮಾಡುವ ಮಂಗಳಕಾರ್ಯ
**ಉತ್ತರಕ್ಷಣ** – ಮುಂದಿನ ಗಳಿಗೆ, ಕ್ಷಣ
**ಉತ್ತರಣ** – ದಾಟುವುದು
**ಉತ್ತರತಪ** – (ಜೈನ) ಹನ್ನೆರಡು ವಿಧವಾದ ತಪ್ಪುಗಳಲ್ಲಿ ಒಂದು
**ಉತ್ತರಮಾಗು** – (ಉತ್ತರಂ+ಆಗು) ಅತಿಶಯವಾಗು
**ಉತ್ತರಶ್ರೇಣಿ** – ಉತ್ತರಭಾಗದ ಪಂಕ್ತಿ
**ಉತ್ತರಸಾಧಕ** – ಮುಂದಿನ ಕೆಲಸವನ್ನು ಸಾಧಿಸುವವನು; ಸಹಾಯಕ
**ಉತ್ತರಳ** – ಹೆಚ್ಚು ಚಂಚಲವಾದ; ತುಂಬ ಹೊಳೆಯುವ
**ಉತ್ತರಾಪಥ** – ವಿಂಧ್ಯಪರ್ವತದಿಂದ ಉತ್ತರಕ್ಕಿರುವ ದೇಶ; ಉತ್ತರಮಾರ್ಗ
**ಉತ್ತರಾಭಿಮುಖ** – ಉತ್ತರಕ್ಕೆ ಮುಖಮಾಡಿಕೊಂಡಿರುವ
**ಉತ್ತರಾಯಣ** – ಸೂರ್ಯ ಉತ್ತರದ ಕಡೆಗೆ ಓಲಿ ಸಾಗುವ ಕಾಲ
**ಉತ್ತರಾರ್ಧ** – ಕೊನೆಯ ಅರ್ಧ; (ಜೈನ) ಒಂದು ಪರ್ವತದ ಹೆಸರು

**ಉತ್ತರಾಶಾಧಿಪತಿ** – ಉತ್ತರ ದಿಕ್ಕಿನ ಒಡೆಯ, ಕುಬೇರ
**ಉತ್ತರಿಗೆ** – ಉತ್ತರೀಯ
**ಉತ್ತರಿಗೆಜನ್ನಿವರ** – ಉತ್ತರೀಯವಾಗಿ ದರಿಸಿದ ಜನಿವಾರ
**ಉತ್ತರಿಸು** – ದಾಟು; ಅತಿಕ್ರಮಿಸು; ನೆರವೇರು; (ಸವಾರ) ಕೆಳಗಿಳಿ
**ಉತ್ತರೀಯ** – ಉತ್ತರಿಗೆ, ಹೊದೆದುಕೊಳ್ಳುವ ಬಟ್ಟೆ
**ಉತ್ತರೀಯಾಂಶುಕ** – ಉತ್ತರೀಯದ ಬಟ್ಟೆ
**ಉತ್ತರೋತ್ತರ** – ಹೆಚ್ಚು ಹೆಚ್ಚು ಅಭಿವೃದ್ಧಿ; ಮುಂದಿನದು; ಉತ್ತರಕ್ಕೆ ಉತ್ತರವಾದದ್ದು
**ಉತ್ತರ್ಯದುಕೂಲ** – ಹೊಳೆಯುವ ಬಟ್ಟೆ
**ಉತ್ತಲ್** – ನಡುವೆ, ಎಡಬಿಡಂಗಿ
**ಉತ್ತವಳ** – ಕಾತರತೆ
**ಉತ್ತವಳತನ** – ಕಾತರತೆ
**ಉತ್ತವಳಿಕೆ** – ಉತ್ತವಳತನ
**ಉತ್ತವಳಸು** – ಕಾತರಿಸು
**ಉತ್ತಳಸು** – ಚೆಲ್ಲು; ಎರಚು
**ಉತ್ತಾನ** – ಮೇಲಕ್ಕೆದ್ದ; ವಿಸ್ತಾರವಾದ
**ಉತ್ತಾನಕ** – ಮಲ್ಲಯುದ್ಧದ ಒಂದು ವರಸೆ
**ಉತ್ತಾನಗಾನ** – ಉಚ್ಚಕಂಠದ ಹಾಡುಗಾರಿಕೆ
**ಉತ್ತಾನಶಯನ** – ಅಂಗತ್ತಲಾಗಿ ಮಲಗುವುದು
**ಉತ್ತಾನಿತ** – ಮೇಲಕ್ಕೆದ್ದ
**ಉತ್ತಾಯಕ** – ಪ್ರತಾಪವನ್ನು ಮೆರೆದವನು; ಪ್ರತಿಭಟಿಸುವವನು
**ಉತ್ತಾರ** – ಉಚ್ಚಸ್ವರ
**ಉತ್ತಾರಣ** – ದಾಟಿಸುವ; ಪಾರುಮಾಡುವ; ದಾಟುವುದು
**ಉತ್ತಾರರಾಗ** – ಉಚ್ಚ ಸ್ವರಸಮ್ಮೇಳನದ ರಾಗ
**ಉತ್ತಾರಿತ** – ದಾಟಿದ
**ಉತ್ತಾಚಿಲ್** – ಆನೆಯ ಕುಂಭದ ಮೇಲಿನ ಚುಕ್ಕೆ
**ಉತ್ತುಂಗ** – ಎತ್ತರವಾದ; ಉನ್ನತವಾದ; ಶ್ರೇಷ್ಠವಾದ
**ಉತ್ತುಂಗಕುಚೆ** – ಉಬ್ಬಿದ ಮೊಲೆಗಳನ್ನುಳ್ಳವಳು
**ಉತ್ತುಂಗಚೂಡ** – ಎತ್ತರವಾದ ಶಿಖರವಿರುವುದು
**ಉತ್ತುಂಗಭಂಗ** – ದೊಡ್ಡ ಅಲೆ
**ಉತ್ತುಂಗಭುಜ** – ಎತ್ತರವಾದ ಭುಜಗಳುಳ್ಳವನು
**ಉತ್ತೋಯ** – ಚಿಮ್ಮುವ ನೀರು
**ಉತ್ತೋರಣ** – ಉನ್ನತವಾದ ತೋರಣ
**ಉತ್ಥ** – ಮೇಲಕ್ಕೆದ್ದ
**ಉತ್ಥಾಪಿತ** – ಮೇಲಕ್ಕೆತ್ತಿ ನಿಲ್ಲಿಸಿದ
**ಉತ್ಥಿತ** – ಮೇಲಕ್ಕೆದ್ದ; ಉಂಟಾದ
**ಉತ್ಪತನ** – ಜಯ
**ಉತ್ಪತಾಕ** – ಮೇಲೇರಿಸಿದ ಬಾವುಟ
**ಉತ್ಪತ್ತಿಸ್ಥಾನ** – ಹುಟ್ಟಿನ ಸ್ಥಳ
**ಉತ್ಪಥ** – ತಪ್ಪು ದಾರಿ; ಆಕಾಶ ಮಾರ್ಗ
**ಉತ್ಪನ್ನ** – ಹುಟ್ಟಿದ
**ಉತ್ಪನ್ನಮತಿ** – ಬುದ್ಧಿವಂತ
**ಉತ್ಪಲ(ಳ)** – ನೈದಿಲೆ
**ಉತ್ಪಲಿನಿ** – ಉತ್ಪಗಳಿಂದ ಕೂಡಿದುದು, ಕೊಳ
**ಉತ್ಪಾಟನ** – ಕೀಳುವುದು
**ಉತ್ಪಾಟಿತ** – ಕಿತ್ತುಹಾಕಿದ
**ಉತ್ಪಾಟಿನಿ** – ಒಂದು ವಿದ್ಯೆ
**ಉತ್ಪಾತ** – ಮೇಲೆ ಹಾರುವುದು; ದುರಂತಕಾರಕ ಪ್ರಾಕೃತಿಕ ಘಟನೆ; ಅಪಶಕುನ; ವೈಹಾಯಸ, ಭೌಮ, ದಿಗ್ಭವ, ಸೈನ್ಯಜ, ಗೃಹೋದ್ಭೂತ ಎಂದು ಐದು ಬಗೆ
**ಉತ್ಪಾತಕೇತು** – ಕೇಡನ್ನು ಸೂಚಿಸುವ ಗ್ರಹ; ಧೂಮಕೇತು
**ಉತ್ಪಾತಮರುತ್** – ಪ್ರಳಯಮಾರುತ
**ಉತ್ಪಾದ** – ಉತ್ಪತ್ತಿ
**ಉತ್ಪಾದಯತಿ** – ಹುಟ್ಟಿಸುತ್ತದೆ
**ಉತ್ಪಾದಿಸು** – ಉಂಟುಮಾಡು
**ಉತ್ಪುಂಜ್ಯಮಾನ** – ಒಟ್ಟಿಗೇ ಏಳುತ್ತಿರುವ
**ಉತ್ಪ್ರಭ** – ಹೆಚ್ಚು ಕಾಂತಿಯುಳ್ಳ
**ಉತ್ಪ್ರಸವ** – ಮೇಲಕ್ಕೆ ಚಿಮ್ಮಿದ
**ಉತ್ಪ್ರೇಂಕಿತ** – ಮೇಲೆ ತೇಲಾಡುವ
**ಉತ್ಪ್ರೇಕ್ಷಿಸು** – ಗಮನ ಕೊಟ್ಟು ಪರಿಶೀಲಿಸು
**ಉತ್ಪ್ಲುತ** – ಜೋರಾಗಿ ಹಾರುವಿಕೆ
**ಉತ್ಫಣಿತ** – ಮೇಲೆತ್ತಿದ ಹೆಡೆಯುಲ್ಲ
**ಉತ್ಫುಲ್ಲ** – ಚೆನ್ನಾಗಿ ಅರಳಿದ
**ಉತ್ಸ** – ನೀರಿನ ಬುಗ್ಗೆ
**ಉತ್ಸಂಗ** – ಸೇರುವುದು; ಸಮಾಗಮ; ತೊಡೆ; ಮಗ್ಗುಲು; ನಡು
**ಉತ್ಸಂಗಸ್ಥೆ** – ತೊಡೆಯಮೇಲೆ ಕುಳಿತವಳು
**ಉತ್ಸಂಚಂ** – ಗಟ್ಟಿಯಾಗಿ
**ಉತ್ಸನ್ನಶರೀರೆ** – ನಷ್ಟಗೊಂಡ ದೇಹದವಳು
**ಉತ್ಸರ್ಗ** – ವಿಸರ್ಜನೆ
**ಉತ್ಸರ್ಜನಂಗೆಯ್** – ವಿಸರ್ಜನೆಮಾಡು
**ಉತ್ಸರ್ಜಿಸು** – ಉತ್ಸರ್ಜನಂಗೆಯ್
**ಉತ್ಸರ್ಪಣ** – ಮೇಲೇರುವಿಕೆ; ಹತ್ತಿರ ಬರುವುದು; ನಿಟ್ಟುಸಿರು ಬಿಡುವುದು; (ಜೈನ) ಉತ್ಸರ್ಪಿಣಿ
**ಉತ್ಸರ್ಪಿಣಿ** – (ಜೈನ) ಮನುಷ್ಯರ ಭೋಗ ಆಯುಸ್ಸು ಮುಂತಾದವು ಹೆಚ್ಚುವ ಕಾಲ
**ಉತ್ಸವಕರ** – ಉತ್ಸವ ಉಂಟುಮಾಡುವ
**ಉತ್ಸವಾನಕ** – ಸಂತೋಷಸೂಚಕ ವಾದ್ಯಗಳಿಂದ ಕೂಡಿದ
**ಉತ್ಸಾಯಕ** – ಬಾಣಗಳನ್ನು ಸಜ್ಜುಮಾಡಿಕೊಂಡಿರುವವನು
**ಉತ್ಸಾರಿತ** – ತ್ಯಜಿಸಿದ; ದೂರೀಕರಿಸಿದ
**ಉತ್ಸಾಹ** – ಹುರುಪು; ಪರಾಕ್ರಮ; ರಾಜರ ಮೂರು ಶಕ್ತಿಗಳಾದ ಮಂತ್ರ, ಪ್ರಭು, ಉತ್ಸಾಹಗಳಲ್ಲಿ ಒಂದು

**ಉತ್ಸಾಹಂಗುಂದು** – ಉತ್ಸಾಹಗೆಡು
**ಉತ್ಸಾಹಸದ್ಮ** – ಉತ್ಸಾಹದ ಮನೆ
**ಉತ್ಸಾಹಿಸು** – ಹುರಿದುಂಬಿಸು; ಹುರಿದುಂಬು
**ಉತ್ಸಿಕ್ತ** – ನೆನೆದ, ತೊಯ್ದ
**ಉತ್ಸುಕ** – ಕುತೂಹಲಗೊಂಡ
**ಉತ್ಸುಕಚಿತ್ತ** – ಕುತೂಹಲಗೊಂಡ ಮನಸ್ಸಿನವನು
**ಉತ್ಸುಕತೆ** – ಔತ್ಸುಕ್ಯ; ಕುತೂಹಲ; ಬಯಕೆ
**ಉತ್ಸುಕತ್ವ** – ಉತ್ಸುಕತೆ
**ಉತ್ಸೃಷ್ಟ** – ಬಿಡಲ್ಪಟ್ಟ
**ಉತ್ಸೇಕ** – ಅಭಿಮಾನ; ದರ್ಪ
**ಉತ್ಸೇಧ** – ಎತ್ತರ; ಉದ್ದ; ಔನ್ನತ್ಯ
**ಉದ** – ನೀರು
**ಉದಂಚ** – ನೇರವಾಗಿ ಗುರಿ ತಲುಪುವ; ಗದಾಯುದ್ಧದ ಒಂದು ವರಸೆ
**ಉದಂತೋಚ್ಚರಣ** – ಎತ್ತಿ ಕಟ್ಟಿರುವ ತೋರಣ
**ಉದಂಚಿತ** – ಮೇಲೆಕ್ಕೆತ್ತಿರುವ; ಹೊಮ್ಮುವ; ಒಡಗೂಡಿದ; ಹೆಚ್ಚಾದ
**ಉದಂಚಿತತರ್ಜನಿ** – ಮೇಲೆತ್ತಿದ ತೋರುಬೆರಳು
**ಉದಂಚಿತಭ್ರುಕುಟಿ** – ಮೇಲೆತ್ತಿದ ಹುಬ್ಬುಗಂಟಿನವನು
**ಉದಂತ** – ಸುದ್ದಿ
**ಉದಂಶು** – ಮೇಲೆದ್ದ ಕಿರಣ
**ಉದಕ** – ನೀರು
**ಉದಕಮಂತ್ರ** – ಜಲಸ್ತಂಭನ ವಿದ್ಯೆ
**ಉದಕವಾಸಿ** – ನೀರಿನಲ್ಲಿ ವಾಸಮಾಡುವುದು, ಜಲಚರ
**ಉದಕಸ್ತಂಭಿನಿ** – ಜಲಸ್ತಂಭನ
**ಉದಗ್ರ** – ಎತ್ತರ; ಶ್ರೇಷ್ಠ
**ಉದಗ್ರತೇಜ** – ಅಧಿಕ ಕಾಂತಿ, ಅಧಿಕ ತಾಪ
**ಉದಗ್ರಪೀಡೆ** – ಅಧಿಕವಾದ ಹಿಂಸೆ
**ಉದಗ್ರಮೂರ್ತಿ** – ಎತ್ತರವಾಗಿರುವವನು
**ಉದಗ್ರಾವನಿಪ** – ಶ್ರೇಷ್ಠನಾದ ರಾಜ
**ಉದಙ್ಮುಖ** – ಉತ್ತರಕ್ಕೆ ಅಭಿಮುಖವಾಗಿರುವ
**ಉದ(ನಿ)ಧಿ** – ಸಮುದ್ರ
**ಉದಧಿಪ** – ಸಮುದ್ರರಾಜ
**ಉದಧಿವೇಲೆ** – ಸಮುದ್ರದ ಅಲೆ
**ಉದನ್ವದಂತಸ್ಥ** – ಸಮುದ್ರದೊಳಗಿರುವ
**ಉದನ್ವದ್ವೀಚಿ** – ಸಮುದ್ರದ ಅಲೆ
**ಉದಬಿಂದು** – ನೀರ ಹನಿ
**ಉದಯ** – ಹುಟ್ಟು; ಅಭಿವೃದ್ಧಿ
**ಉದಯಂಗೆಯ್** – ಹುಟ್ಟು; ಮೂಡು
**ಉದಯಗಿರಿ** – ಸೂರ್ಯ ಹುಟ್ಟುವ ಮೂಡಣ ಬೆಟ್ಟ
**ಉದಯಸ್ಥ** – ಮೂಡುತ್ತಿರುವ; ಹುಟ್ಟುತ್ತಿರುವ
**ಉದಯಾಚಲ** – ಉದಯಗಿರಿ
**ಉದಯಾದಿತ್ಯ** – ಹುಟ್ಟುತ್ತಿರುವ ಸೂರ್ಯ
**ಉದಯಾದ್ರಿ** – ಉದಯಗಿರಿ
**ಉದಯಾರೂಢ** – ಏಳಿಗೆ ಹೊಂದುತ್ತಿರುವವನು
**ಉದಯಿಸು** – ಹುಟ್ಟು; ಮೂಡು
**ಉದರ** – ಹೊಟ್ಟೆ
**ಉದರಬಂಧ** – ನಡುಪಟ್ಟಿ; ಡಾಬು
**ಉದರ್ಕ** – ಮುಂದಾಗುವ ಫಲ
**ಉದವಾಸ** – ನೀರಲ್ಲಿ ವಾಸಿಸುವುದು, ಜಲಚರ
**ಉದವಾಸವ್ರತ** – ನೀರಲ್ಲಿ ವಾಸಿಸುವ ವ್ರತ
**ಉದಶ್ರು** – ಉಕ್ಕಿಬರುವ ಕಣ್ಣೀರು
**ಉದಸ್ತ** – ಮೇಲೆ ಹರಡಿದ
**ಉದಾತ್ತ** – ಶ್ರೇಷ್ಠವಾದ; ಉದಾರತೆ
**ಉದಾತ್ತಮತಿ** – ಶ್ರೇಷ್ಠ ಜ್ಞಾನಿ
**ಉದಾತ್ತವಿಷ್ಟರ** – ಉನ್ನತ ಪೀಠ
**ಉದಾತ್ತವೃತ್ತ** – ಉದಾತ್ತ ನಡತೆಯವನು
**ಉದಾತ್ತವೃತ್ತಿ** – ಉತ್ತಮ ವ್ಯವಹಾರ
**ಉದಾತ್ತಸತ್ವ** – ಉದಾತ್ತ ಸತ್ವವುಳ್ಳವನು
**ಉದಾರ** – ಕೊಡುಗೈ ಸ್ವಭಾವದ
**ಉದಾರಚರಿತ** – ಉದಾತ್ತವೃತ್ತ
**ಉದಾರತೆ** – ಔದಾರ್ಯ
**ಉದಾರತೇಜ** – ಅತಿಶಯ ತೇಜಸ್ಸುಳ್ಳವನು
**ಉದಾರಮತಿ** – ವಿಶಾಲ ಮನೋಭಾವದವನು
**ಉದಾಸೀನಮಾನಸ** – ಅನಾಸಕ್ತಿಯವನು
**ಉದಾಹರಣ** – ಹೇಳಿಕೆ; ದೃಷ್ಟಾಂತ; ಆದರ್ಶ
**ಉದಿತ** – ಹುಟ್ಟಿದ; ಉಂಟಾದ
**ಉದಿತಕೀರ್ತಿ** – ಕೀರ್ತಿವಂತ
**ಉದಿತಸ್ಮೇರ** – ಮುಗುಳುನಗೆಯಿಂದ ಕೂಡಿದವನು
**ಉದಿತೋದಿತ** – ನಿರಂತರ ಏಳಿಗೆಯುಳ್ಳವನು
**ಉದಿ(ದು)ರ್** – ಮೇಲಿನಿಂದ ಬೀಳು
**ಉದಿರ್ಚು(ರ್ಪು)** – ಉದುರಿಸು
**ಉದೀಚಿ** – ಉತ್ತರ ದಿಕ್ಕು
**ಉದೀಚೀಭವ** – ಉತ್ತರದಲ್ಲಿ ಹುಟ್ಟಿದ
**ಉದೀಚ್ಯ** – ಉತ್ತರದಿಕ್ಕಿನ; ಔತ್ತರೇಯ
**ಉದೀರಿತ** – ನುಡಿದ
**ಉದೀರ್ಣ** – ದೊಡ್ಡದಾದ; ಹಿರಿಯ
**ಉದೀರ್ಣತೆ** – ಅತಿಶಯ; ಏಳಿಗೆ
**ಉದುಂಬರ** – ಅತ್ತಿ ಹಣ್ಣು
**ಉದುಂಬರಕುಷ್ಠ** – ಅತ್ತಿ ಹಣ್ಣಿನಂತೆ ಒಳಗೆ ಹುಳು ಬೀಳುವ ಕುಷ್ಠರೋಗ
**ಉದ್ಗಂಧ** – ಒಳ್ಳೆಯ ಪರಿಮಳವುಳ್ಳ
**ಉದ್ಗಂಧಿ** – ಉದ್ಗಂಧವನ್ನು ಹೊಂದಿದ
**ಉದ್ಗತ** – ಮೇಲಕ್ಕೆ ಬಂದ; ಸಂಭವಿಸಿದ
**ಉದ್ಗತೋಷ್ಮ** – ಹೊಮ್ಮಿದ ಉಮ್ಮಳ
**ಉದ್ಗಮ** – ಮೇಲೇರುವುದು; ಹುಟ್ಟಿಬರುವುದು; ಹೊಮ್ಮುವುದು; ಹೂವು
**ಉದ್ಗಮಚಾಪ** – ಹೂಬಾಣ, ಮನ್ಮಥ
**ಉದ್ಗಮಬಾಣ** – ಉದ್ಗಮಚಾಪ
**ಉದ್ಗಮಮಂಜರಿ** – ಹೂಗೊಂಚಲು
**ಉದ್ಗಮಾಸ್ತ್ರ** – ಹೂಬಾಣ
**ಉದ್ಗಮೇಷು** – ಹೂಬಾಣ

**ಉದ್ಗಾತೃ** – ಯಜ್ಞಯಾಗಗಳಲ್ಲಿ ಸಾಮವೇದ ಹೇಳುವ ಋತ್ವಿಕ್ಕು
**ಉದ್ಗಾಯನ** – ಉತ್ತಮ ಗಾಯನ
**ಉದ್ಗಾರವೇಱು** – ಅಸಹ್ಯಪಡು
**ಉದ್ಗಾರಿ** – ಹೊರಸೂಸುವ
**ಉದ್ಗಾರಿಸು** – ವಾಂತಿಮಾಡಿಕೊ
**ಉದ್ಗ್ರೀವ** – ಕೊರಳೆತ್ತಿದವನು
**ಉದ್ಘ** – ಪ್ರಶಸ್ತವಾದ; ಸುಖ; ಬಲ
**ಉದ್ಘಕೃತಿ** – ಶ್ರೇಷ್ಠ ಕೃತಿ, ಶ್ರೇಷ್ಠ ಗ್ರಂಥ
**ಉದ್ಘಚಾರಿ** – ಶ್ರೇಷ್ಠ ನಡತೆಯವನು
**ಉದ್ಘಟ್ಟ(ನ)** – ಬಲವಾದ ಹೊಡೆತ; ಸದೆಬಡಿಯುವಿಕೆ
**ಉದ್ಘಾಚಾರ** – ಶ್ರೇಷ್ಠ ಆಚಾರ
**ಉದ್ಘಾಟನ** – ತೆರೆಯುವಿಕೆ; ಮೇಲೆತ್ತುವುದು
**ಉದ್ಘಾಟಿಸು** – ಆರಂಭಮಾಡು; ಆಕ್ಷೇಪಿಸು
**ಉದ್ಘಾತ** – ಬಲವಾದ ಹೊಡೆತ
**ಉದ್ಘಾಸಿ** – (ಉದ್ಘ+ಅಸಿ) ಶ್ರೇಷ್ಠವಾದ ಕತ್ತಿ
**ಉದ್ಘುಷ್ಟಿ** – ಉದ್ಘೋಷ, ಘೋಷಣೆ
**ಉದ್ಘೂಣ** – ನಡುಕ
**ಉದ್ದಂ** – ಯದ್ದವಾಗಿ
**ಉದ್ದಂಡ** – ಮೇಲೆತ್ತಿದ ಕೋಲನ್ನು ಪಡೆದ; ನೀಳವಾದ; ಪ್ರಬಲವಾದ
**ಉದ್ದಂಡತೆ** – ದರ್ಪ; ಪ್ರತಿಷ್ಠೆ
**ಉದ್ದಂತ** – ಉಬ್ಬು ಹಲ್ಲಿನವನು
**ಉದ್ದಂನುಡಿ** – ಹೆಚ್ಚು ಮಾತಾಡು
**ಉದ್ದಂನೆಗೆ** – ಎತ್ತರಕ್ಕೆ ನೆಗೆ
**ಉದ್ದಂಬರ್** – ಸಾಲಾಗಿ ಬಾ
**ಉದ್ದಬಿದ್ದ** – ನೀರಿನಿಂದ ತುಂಬು
**ಉದ್ದಮುರಿ** – ಹೆಚ್ಚು ಉರಿ; ಸಿಟ್ಟಾಗು
**ಉದ್ದಮುರಿಸು** – ಹೆಚ್ಚು ಉರಿಸು
**ಉದ್ದವಣ** – ಜೋರಾಗಿ ಕೂಗು; ಘೋಷಣೆ; ಒಂದು ವಾದ್ಯ
**ಉದ್ದವರಿ** – ಉದ್ದವಾಗಿ ಹರಿ; ನೀಳವಾಗು
**ಉದ್ದವೇಱು** – ಎತ್ತರ ಸ್ಥಾನಕ್ಕೇರು; ಗರ್ವಿಷ್ಠನಾಗು
**ಉದ್ದಳನ** – ಸೀಳುವುದು
**ಉದ್ದಳಿತ** – ಸೀಳಿದ
**ಉದ್ದಾನಿ** – ಹಿರಿಮೆ; ವೈಭವ; ಅತಿಶಯ
**ಉದ್ದಾಮ** – ಉತ್ತಮವಾದ; ಉನ್ನತವಾದ
**ಉದ್ದಾಮಧಾಮ** – ಶ್ರೇಷ್ಠವಾದ ತೇಜಸ್ಸು(ಳ್ಳವನು)
**ಉದ್ದಿತ್ತು** – ಉದ್ದವಾದ
**ಉದ್ದಿಷ್ಟವಿರತ** – (ಜೈನ) ತನಗಾಗಿ ಮಾಡಿದ ಆಹಾರವನ್ನು ಉಣ್ಣದಿರುವವನು
**ಉದ್ದೀಪನ** – ಉರಿಸುವ; ಉತ್ತೇಜನ
**ಉದ್ದೀಪಿತ** – ಪ್ರಕಾಶಗೊಂಡ
**ಉದ್ದೇಸ** – (ಉದ್ದೇಶ) ಗುರಿ; ಅಭಿಪ್ರಾಯ
**ಉದ್ದೇಶ** – ಗುರಿ; ಅಭಿಪ್ರಾಯ; ಎತ್ತರವಾದ ಪ್ರದೇಶ
**ಉದ್ದೇಶಿಸು** – ದೃಷ್ಟಿಯಲ್ಲಿಟ್ಟುಕೊ
**ಉದ್ದೃಪ್ತ** – ಗರ್ವದಿಂದ ಕೂಡಿದ
**ಉದ್ಗ್ರೀವ** – ಎತ್ತಿದ ಕೊರಳು
**ಉದ್ಧತ** – ಮೇಲೆತ್ತಿದ; ಹೊಡೆದ; ಸೊಕ್ಕಿದ; ಕೆರಳಿದ; ಒರಟ; ಶ್ರೇಷ್ಠ
**ಉದ್ಧತಂ** – ವೈಭವದಿಂದ
**ಉದ್ಧತವೃತ್ತ** – ಸೊಕ್ಕಿನ ನಡವಳಿಕೆಯುಳ್ಳವನು
**ಉದ್ಧತಾರಿ** – ಸೊಕ್ಕಿದ ಶತ್ರು
**ಉದ್ಧತಿಕೆ(ಕ್ಕೆ)** – ಅಹಂಕಾರ
**ಉದ್ಧರಣ** – ಮೇಲಕ್ಕೆತ್ತುವಿಕೆ
**ಉದ್ಧರಿಸು** – ಮೇಲಕ್ಕೆತ್ತು
**ಉದ್ಧುರ** – ಸ್ವತಂತ್ರವಾದ; ಸಮರ್ಥವಾದ; ಹುರುಪಿನ; (ರಥದಿಂದ) ಕಳಚಿದ
**ಉದ್ಧೂತ** – ಮೇಲಕ್ಕೆ ಎಸೆಯಲಾದ
**ಉದ್ಧೂತದೋಷ** – ದೋಷಮುಕ್ತವಾದ
**ಉದ್ಧೂಪ** – ಮೇಲಕ್ಕೆದ್ದ ಧೂಪ
**ಉದ್ಧೂಲ(ಳ)ನ** – ಪುಡಿಗುಟ್ಟುವುದು; ಬಳಿಯುವುದು
**ಉದ್ಧೂಲಿ(ಳಿ)ಸು** – ಲೇಪಿಸು
**ಉದ್ಧೃತ** – ಮೇಲಕ್ಕೆಸೆದ
**ಉದ್ಬದ್ಧ** – ಎತ್ತಿ ಕಟ್ಟಲ್ಪಟ್ಟ
**ಉದ್ಬದ್ಧಕುಕ್ಷಿ** – ದೃಢವಾದ ಹೊಟ್ಟೆಯುಳ್ಳ
**ಉದ್ಬದ್ಧಜೂಟ** – ಎತ್ತಿ ಕಟ್ಟಿದ ಜಡೆಯುಳ್ಳ
**ಉದ್ಬೋಧಕೋಶ** – ಜ್ಞಾನಕೋಶ
**ಉದ್ಭಟಭಟ** – ಉತ್ತಮವಾದ ಭಟ
**ಉದ್ಭಟವೃತ್ತ** – ಉತ್ತಮ ನಡವಳಿಕೆಯುಳ್ಳ
**ಉದ್ಭವ** – ಹುಟ್ಟುವುದು; ಉತ್ಪತ್ತಿ
**ಉದ್ಭವಿಸು** – ಹುಟ್ಟು; ತಲೆದೋರು
**ಉದ್ಭಾವಕ** – ಎಣಿಕೆಮಾಡುವ; ಭಾವಿಸುವ
**ಉದ್ಭಾವಿಸು** – ಎಣಿಕೆಮಾಡು; ತೋರ್ಪಡಿಸು; ಹುಟ್ಟು; ಕಾಣಿಸಿಕೊ
**ಉದ್ಭಾಷಿಸು** – ವರ್ಣನೆ ಮಾಡು; ಪ್ರಕಾಶಗೊಳಿಸು
**ಉದ್ಭಾಸಿ(ನಿ)** – ಪ್ರಕಾಶಮಾನ(ಳಾದವಳು)
**ಉದ್ಭಾಸೆ** – ಪ್ರಕಾಶಗೊಳಿಸುವವಳು
**ಉದ್ಭೇದ** – ಹೊರಹೊಮ್ಮುವುದು; ಮೊಳೆಯುವುದು
**ಉದ್ಭ್ರಾಂತ** – ಭ್ರಾಂತಿಗೊಂಡ; ಕಕ್ಕಾಬಿಕ್ಕಿಯಾದ
**ಉದ್ಭ್ರಾಮಿತ** – ಗದೆಯಿಂದ ಹೊಡೆಯುವ ರೀತಿಗಳಲ್ಲಿ ಒಂದು
**ಉದ್ಯಚ್ಚಕ್ರ** – ಶ್ರೇಷ್ಠ ಚಕ್ರ
**ಉದ್ಯಚ್ಚಕ್ರಿ** – ಉದ್ಯಚ್ಚಕ್ರವನ್ನು ಹಿಡಿದವನು
**ಉದ್ಯತ್** – ಮೇಲಕ್ಕೆ ಚಾಚಿಕೊಂಡಿರುವ
**ಉದ್ಯತ** – ಪ್ರಯತ್ನವುಳ್ಳ
**ಉದ್ಯಮ** – ಪ್ರಯತ್ನ; ಮೇಲೆತ್ತುವಿಕೆ
**ಉದ್ಯಾನಪಾಲಕ** – ಉದ್ಯಾನವನ್ನು ಕಾಯುವವನು
**ಉದ್ಯಾಪನ** – ಪೂರ್ಣಗೊಳಿಸುವುದು; ವ್ರತವನ್ನು ಮುಗಿಸಲು ಮಾಡುವ ಕರ್ಮ
**ಉದ್ಯುಕ್ತ** – ಪ್ರಯತ್ನಪಡುವವನು
**ಉದ್ಯೋಗ** – ಪ್ರಯತ್ನಪಡುವುದು; ಕೆಲಸ

**ಉದ್ಯೋಗಂಗೆಯ್** – ಪ್ರಯತ್ನಪಡು
**ಉದ್ಯೋಗಾರಂಭ** – ಕೆಲಸದ ಪ್ರಾರಂಭ
**ಉದ್ಯೋಗಿ** – ಪ್ರಯತ್ನಶೀಲ
**ಉದ್ಯೋಗಿಸು** – ಪ್ರಯತ್ನಿಸು
**ಉದ್ಯೋತ** – ಹೊಳಪು; ಕಾಂತಿ
**ಉದ್ಯೋತಿಸು** – ಬೆಳಗು; ಪ್ರಕಾಶಿಸು
**ಉದ್ರಿಕ್ತ** – ಹೆಚ್ಚಿದ
GzÀÄævÀ – ಬಹಳ ದುಡುಕು ಸ್ವಭಾವದ
**ಉದ್ರೇಕ** – ಭಾವಾವೇಶ
**ಉದ್ವೃತ್ತ** – ಉದ್ಧಟ
**ಉದ್ವಂಶ** – ಎತ್ತರವಾದ ಬಿದಿರ ಮೆಳೆ; ಶ್ರೇಷ್ಠ ಕುಲ
**ಉದ್ವರ್ತ** – ಅಂಗರಾಗ
**ಉದ್ವರ್ತನ** – ಹೆಚ್ಚುವುದು; ನಿವಾರಿಸುವುದು; ಲೇಪಿಸುವುದು
**ಉದ್ವರ್ತನಂಗೆಯ್** – ಲೇಪನಮಾಡು
**ಉದ್ವರ್ತನವಿಧಿ** – ಸುಗಂಧವನ್ನು ಲೇಪಿಸುವ ಕ್ರಿಯೆ
**ಉದ್ವರ್ತಿಸು** – ಲೇಪಿಸು
**ಉದ್ವಹ** – ಸುಖ; ಸಂತೋಷ; ಶ್ರೇಷ್ಠ, ಅಗ್ರಗಣ್ಯ
**ಉದ್ವಾಹ** – ಮದುವೆ
**ಉದ್ವಾಹಗೇಹ** – ಮದುವೆಯ ಮನೆ
**ಉದ್ವಿಗ್ನೆ** – ತಳಮಳಗೊಂಡವಳು
**ಉದ್ವೀಕ್ಷಣ** – ಮೇಲೆ ನೋಡಿವುದು
**ಉದ್ವೃತ್ತ** – ಮೇಲಕ್ಕೇರಿದ; ದುರುಳ, ತುಂಟ
**ಉದ್ವೃತ್ತತೆ** – ಸೊಕ್ಕು
**ಉದ್ವೇಗ** – ಕಳವಳ
**ಉದ್ವೇಗಪರ** – ಕ್ಷೋಭೆಗೊಂಡ
**ಉದ್ವೇಜನ** – ಉದ್ವೇಗ
**ಉದ್ವೇಲ(ಳ)** – ಮೇರೆಮೀರಿದ
**ಉನ್ನಂ** – ನಡುವಣ ರೀತಿಯವನು
**ಉನ್ನತಪೀಠ** – ಎತ್ತರವಾದ ಪೀಠ
**ಉನ್ನತಿ** – ಮೇಲ್ಮೆ; ಏಳಿಗೆ; ಉಚ್ಚತೆ
**ಉನ್ನತಿಕೆ** – ಉನ್ನತಿ
**ಉನ್ನತಿಗಿಡು** – ಹಿರಿತನ ಕುಗ್ಗು
**ಉನ್ನಮಿತ** – ಮೇಲಕ್ಕೆತ್ತಿದ
**ಉನ್ನಿದ್ರ** – ನಿದ್ದೆಯಿಲ್ಲದ; ಅರಳಿದ
**ಉನ್ನಿದ್ರತೆ** – ಎಚ್ಚರ
**ಉನ್ನಿದ್ರೆ** – ನಿದ್ದೆಯಿಲ್ಲದವಳು
**ಉನ್ನುನ್ನಂ** – ವಿಶೇಷವಾಗಿ
**ಉನ್ನೆ** – ನಡುವಣ ಕಾಲ
**ಉನ್ಮಗ್ನ** – ಮುಳುಗಿ ಮೇಲೆದ್ದ
**ಉನ್ಮತ್ತ** – ಮದಿಸಿದ; ಬುದ್ಧಿಭ್ರಮಣೆಗೊಂಡ
**ಉನ್ಮತ್ತಕವಿಳಸನ** – ಹುಚ್ಚಾಟ
**ಉನ್ಮದ** – ಸೊಕ್ಕಿದ; ಮದಿಸಿದ
**ಉನ್ಮದನ** – ಕಾಮನ ಬಾಣಗಳಲ್ಲಿ ಒಂದು
**ಉನ್ಮದನಬಾಣ** – ಉನ್ಮದನ
**ಉನ್ಮದಾಳಿನಿ** – ಸೊಕ್ಕಿದ ಹೆಣ್ಣುದುಂಬಿ
**ಉನ್ಮನ** – ಉತ್ಕಂಠಿತ ಮನಸ್ಸು(ಳ್ಳವನು)
**ಉನ್ಮಾರ್ಗ** – ಎತ್ತರವಾದ ದಾರಿ; ಕೆಟ್ಟ ದಾರಿ
**ಉನ್ಮಾರ್ಗತೆ** – ತಪ್ಪು ದಾರಿಯಲ್ಲಿ ನಡೆಯುವುದು
**ಉನ್ಮಾರ್ಗಿ** – ತಪ್ಪು ದಾರಿಯಲ್ಲಿ ನಡೆಯುವವನು
**ಉನ್ಮಾರ್ಜನ** – ಉಜ್ಜುವುದು, ತೊಳೆಯುವುದು
**ಉನ್ಮಿಶ್ರ** – ಕಲಬೆರಕೆಯಾದ
**ಉನ್ಮಿಷಿತ** – ಕಣ್ಣು ತೆರೆದ; ವಿಕಾಸಗೊಂಡ
**ಉನ್ಮೀಲ(ಳ)(ನ)** – ಅರಳು; ತೆರೆ
**ಉನ್ಮೀಲಿತನಯನ** – ಅರಳಿದ ಕಣ್ಣು
**ಉನ್ಮೀಲಿಸು** – ಅರಳಿಸು
**ಉನ್ಮುಖ** – ಎತ್ತಿದ ಮುಖ; ಅಭಿಮುಖ; ಕಾತರನಾದ
**ಉನ್ಮೂಲನ** – ಬೇರುಸಹಿತ ಕಿತ್ತುಹಾಕುವುದು
**ಉನ್ಮೂಲಿತ** – ಬುಡಸಹಿತ ಕಿತ್ತ
**ಉನ್ಮೂಲಿ(ಳಿ)ಸು** – ಬೇರುಸಹಿತ ಕೀಳು
**ಉನ್ಮೇಷ** – ಕಣ್ಣು ತೆರೆಯುವುದು
**ಉಪಕಂಠ** – ಹತ್ತಿರ; ತಪ್ಪಲು; ಕೊರಳಿನ ಬಳಿ
**ಉಪಕರಿಸು** – ಸಹಾಯಮಾಡು
**ಉಪಕಾರ** – ಸಹಾಯ
**ಉಪಕಾರಂಗೆಯ್** – ಸಹಯಮಾಡು
**ಉಪಕಾರಿ** – ಸಹಾಯ ಮಾಡುವವನು(ಳು)
**ಉಪಕಾರಿಕೆ** – ಅರಸನ ಬಿಡಾರ
**ಉಪಕಾರ್ಯ** – ಅರಸನ ಬಿಡಾರ; ಅರಮನೆ
**ಉಪಕೃತ** – ಸಹಾಯಪಡೆದ
**ಉಪಕೃತಿ** – ಸಹಾಯ
**ಉಪಗತ** – ಹತ್ತಿರ ಬಂದ
**ಉಪಗಮನ** – ಪ್ರಾಯೋಪಗಮನ
**ಉಪಗೂಹನ** – ಮರೆಮಾಡುವುದು; ಆಲಿಂಗನ; ಆಶ್ಚರ್ಯ; ರಕ್ಷಣೆ
**ಉಪಗೂಹಿತ** – ಬಚ್ಚಿಟ್ಟ
**ಉಪಗೃಹೀತ** – ವಶಪಡಿಸಿಕೊಂಡ
**ಉಪಗ್ರಹಸಂಧಿ** – ರಾಜನು ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಸರ್ವಸ್ವವನ್ನು ತೆತ್ತು ಪ್ರಾಣರಕ್ಷಣೆ ಮಾಡಿಕೊಳ್ಳುವುದು
**ಉಪಘಾತ** – ಪೆಟ್ಟು, ಏಟು
**ಉಪಚಯ** – ಶೇಖರಣೆ; ರಾಶಿ; ಅಭಿವೃದ್ಧಿ
**ಉಪಚರಿತ** – ಹತ್ತಿರ ಬಂದ; ನೆರವೇರಿಸಿದ
**ಉಪಚರಿಸು** – ಆಚರಿಸು
**ಉಪಚಿತ** – ಹೆಚ್ಚಾದ
**ಉಪಚಿತಗುಣ** – ಹೆಚ್ಚಿದ ಗುಣವುಳ್ಳವನು
**ಉಪಚಿತವಾರ್ತೆ** – ಕೂಡಿಕೊಂಡು ಬಂದ ಸುದ್ದಿ
**ಉಪಜ** – ಕುದುರೆಯ ಒಂದು ಬಗೆಯ ಓಟ
**ಉಪಜಲಧಿ** – ಜಲಾಶಯ
**ಉಪಜಾತ** – ಉತ್ಪತ್ತಿಗೊಂಡ
**ಉಪಜಾಪ** – ಪಿಸುಗುಟ್ಟುವುದು; ಒಳಜಗಳ; ಭೇದೋಪಾಯ
**ಉಪಜಾಪ್ಯ** – ಪಿಸುಮಾತಲ್ಲಿ ಹೇಳಿದ

**ಉಪಜೀವಿಸು** – ಅನ್ಯರನ್ನು ಆಶ್ರಯಿಸಿ ಬದುಕು
**ಉಪಢೌಕಿತ** – ಸಜ್ಜಿತವಾದ
**ಉಪತ್ಯಕ** – ಬೆಟ್ಟದ ಬುಡ, ತಪ್ಪಲು
**ಉಪದಂಶ** – ವ್ಯಂಜನಪದಾರ್ಥ
**ಉಪದಿಗ್ಧ** – ಲೇಪಿಸಿದ
**ಉಪದಿಶ್ಯಮಾನ** – ಉಪದೇಶಕ್ಕೊಳಗಾದ
**ಉಪದಿಷ್ಟ** – ಉಪದೇಶಿಸಲ್ಪಟ್ಟ
**ಉಪದೂಷಣ** – ಸಂಬಂಧಪಟ್ಟ ತಪ್ಪು
**ಉಪದೇಶ** – ಮಂತ್ರ ಮುಂತಾದವನ್ನು ಬೋಧಿಸುವುದು
**ಉಪದೇಶಂಗುಡು** – ಉಪದೇಶ ಮಾಡು
**ಉಪದೇಶಂಗೆಯ್** – ಉಪದೇಶಂಗುಡು
**ಉಪದೇಶಕ** – ಉಪದೇಶಿಸುವ ಗುರು
**ಉಪದ್ರವ** – ಹತ್ತಿರ ಓಡು; ಕಾಟ; ರೋಗ
**ಉಪದ್ರುತಶೀಲ** – ತೊಂದರೆಗೊಳಗಾದ ಶೀಲವುಳ್ಳವನು
**ಉಪಧಾನ** – ಒರಗುವಿಕೆ; ತಲೆದಿಂಬು
**ಉಪಧಾನಾವಲಂಬ** – ದಿಂಬನ್ನು ಒರಗಿ ಮಲಗುವುದು
**ಉಪಧಾವಿಶುದ್ಧ** – ಪರೀಕ್ಷೆಗಳಿಂದ ಶುದ್ಧನೆಂದು ನಿರ್ಣಯಿಸಲ್ಪಟ್ಟವನು
**ಉಪಧಾಶುದ್ಧ** – ಉಪಧಾವಿಶುದ್ಧ
**ಉಪಧಿ** – ಮೋಸ; ತೊಂದರೆ, ಹಿಂಸೆ
**ಉಪಧೆ** – ವಂಚನೆ
**ಉಪನತ** – ಸಮೀಪಕ್ಕೆ ಬಂದ
**ಉಪನಯನ** – ಮುಂಜಿ, ಬ್ರಹ್ಮೋಪದೇಶ; (ಜೈನ) ಜೈನಾಗಮಗಳ ಅಭ್ಯಾಸಕ್ಕೆ ಹುಡುಗನನ್ನು ಗುರುವಿನ ಬಳಿ ಕಳಿಸುವ ಸಂಸ್ಕಾರ
**ಉಪನಿಯುದ್ಧ** – ಮಲ್ಲಯುದ್ಧ
**ಉಪನೀತ** – ಹತ್ತಿರ ತರಲಾದ
**ಉಪನೀಯಮಾನ** – ಸಮೀಪಕ್ಕೆ ತರಲಾಗುತ್ತಿರುವ
**ಉಪನ್ಯಾಸ** – ಹತ್ತಿರದಲ್ಲಿಡುವುದು; ಭಾಷಣ
**ಉಪನ್ಯಾಸಂಧಿ** – ಶತ್ರುಗಳೊಡನೆ ರಾಜ ಮಾಡಿಕೊಳ್ಳಬಹುದಾದ ಹದಿನಾರು ಬಗೆಯ ಸಂದಿಗಳಲ್ಲಿ ಒಂದು: ತನ್ನ ಉದ್ದೇಶಸಾಧನೆಗಾಗಿ ಮಾಡಿಕೊಳ್ಳುವ ಸಂಧಿ
**ಉಪಪತಿ** – ಹಾದರಿಗ
**ಉಪಪತ್ತಿ** – ಸಿದ್ಧಾಂತಸಮರ್ಥನೆಗೆ ಅನುಸರಿಸುವ ತರ್ಕ; ಯುಕ್ತಿ
**ಉಪಪದಪಂಚಕ** – ಸಮ ಅಥವಾ ಸದೃಶ ಆಕಾರದ ಐದು ವಸ್ತುಗಳ ಗುಂಪು
**ಉಪಪಾತತಲ್ಪ(ಳ್ಪ)** – (ಜೈನ) ಕಲ್ಪದಲ್ಲಿ ದೇವತೆಗಳು ಹುಟ್ಟುವ ಹಾಸಿಗೆ
**ಉಪಪಾತಶಯನ** – ಉಪಪಾತತಲ್ಪ
**ಉಪಪಾದ(ನಿಕೇತನ)** – (ಜೈನ) ಗರ್ಭವಾಸವಿಲ್ಲದೆ ಹುಟ್ಟಿದವನು, ದೇವತೆ
**ಉಪಪಾದಜ** – (ಜೈನ) ಉಪಪಾದಕಲ್ಪದಲ್ಲಿ ಹುಟ್ಟಿದವನು, ದೇವತೆ, ನರಕಿ
**ಉಪಪ್ರಚ್ಛದ** – ಹೊದಿಕೆ, ಮಗ್ಗುಲು ಹಾಸಿಗೆ
**ಉಪಪ್ಲವ** – ಮುತ್ತಿಗೆ; ತೊಂದರೆ; ಗ್ರಹಣ
**ಉಪಬೃಂಹಣ** – ಹೆಚ್ಚಾಗುವುದು
**ಉಪಭೋಗ** – ವಿಷಯಸುಖ
**ಉಪಭೋಗ್ಯ** – ಅನುಭವಿಸಲು ಯೋಗ್ಯವಾದ
**ಉಪಮಾತೀತ** – ಹೋಲಿಕೆಗೆ ಮೀರಿದ
**ಉಪಮಿತ** – ಹೋಲಿಸಲಾದ
**ಉಪಯಾಮ** – ಮದುವೆ
**ಉಪಯೋಗಾಸ್ತ್ರ** – ಉಪಯೋಗಕ್ಕೆ ಬರುವ ಅಸ್ತ್ರ
**ಉಪರಚಿತ** – ರಚಿತವಾದ
**ಉಪರತ** – ಸತ್ತ
**ಉಪರತವಶನಾಗು** – ಮೃತ್ಯುವಶನಾಗು
**ಉಪರಾಗ** – ಕಪ್ಪಾಗಿರುವುದು; ಗ್ರಹಣ
**ಉಪರಿ** – ಮೇಲ್ಭಾಗದ; ಆನಂತರ
**ಉಪರಿದೇಶ** – ಮೇಲುಭಾಗದ ದೇಶ
**ಉಪರಿಮ** – ಮೇಲಿನ; ಮೇಲ್ಭಾಗ
**ಉಪರಿಮತಲ(ಳ)** – ಮೇಲುಗಡೆಯ ಪ್ರದೇಶ
**ಉಪರಿಮಭೂಮಿ** – ಉಪರಿಮತಲ
**ಉಪರೋಧ** – ಅಡ್ಡಿ; ಬಲಾತ್ಕಾರ
**ಉಪರೋಧಿಸು** – ಅಡ್ಡಿಮಾಡು; ಒತ್ತಾಯಿಸು
**ಉಪರ್ಬು(ರ್ವು)ದ** – ಬೆಂಕಿ
**ಉಪಲ(ಳ)** – ಕಲ್ಲು
**ಉಪಲಕ್ಷ** – ಗುರುತು
**ಉಪಲಕ್ಷಿತ** – ಕಾಣುವ; ಗುರುತುಮಾಡಿದ; ವಿಶಿಷ್ಟವಾದ
**ಉಪಲಕ್ಷಿಸು** – ನೋಡಿ, ಗುರುತಿಸು
**ಉಪಲತಲ** – ಕಲ್ಲಿನ ಮೇಲ್ಭಾಗ
**ಉಪಲಬ್ಧ** – ಸಿಕ್ಕಿದ; ಮತ್ತೆ ಕಾಣಿಸಿದ
**ಉಪಲಸಿತ** – ಪ್ರಕಾಶಮಾನವಾದ
**ಉಪಲಾಲನೆ** – ಮುದ್ದಾಡು
**ಉಪಲಾಲನೋಕ್ತಿ** – ಮುದ್ದುಗರೆಯುವ ಮಾತು
**ಉಪಲಾಸಿತ** – ಅಲಂಕೃತವಾದ; ಮುದ್ದುಮಾಡಿದ
**ಉಪಲಿಪ್ತ** – ಲೇಪಿಸಿದ
**ಉಪಲಿಪ್ಸೆ** – ಬಯಕೆ
**ಉಪವನ** – ಊರ ಬಳಿಯ ಉದ್ಯಾನ
**ಉಪವರ್ಣಿತ** – ಸೂಕ್ಷ್ಮವಾಗಿ ವರ್ಣಿಸಿದ
**ಉಪವಾದಕ** – ಅನುಸರಿಸಿ ವಾದಿಸುವ; ಅನುಸರಿಸಿ ಬಾಜಿಸುವ; ಸ್ವರ್ಗದ ಒಂದು ವಾದ್ಯ
**ಉಪವಶ** – ಸಮೀಪದಲ್ಲಿ ವಾಸಿಸುವುದು; ಆಹಾರವಿಲ್ಲದಿರುವುದು
**ಉಪವಾಸಂಗೆಯ್** – ಆಹಾರತ್ಯಾಗ
**ಉಪವಿದ್ಧ** – ಜೊತೆಗಿರುವ
**ಉಪವಿಷ್ಟ** – ಕುಳಿತುಕೊಂಡಿರುವ
**ಉಪವೀಣಿತ** – ವೀಣೆಯ ವಾದನದಿಂದ ಕೂಡಿದ
**ಉಪವೀತ** – ಜನಿವಾರ

**ಉಪವೇದ** – ಆಯುರ್ವೇದ, ಧನುರ್ವೇದ, ಗಾಂಧರ್ವವೇದ , ಅರ್ಥಶಾಸ್ತ್ರಗಳೆಂಬ ನಾಲ್ಕು ವಿದ್ಯೆಗಳು
**ಉಪಶಮ(ನ)** – ಇಂದ್ರಿಯ ನಿಗ್ರಹ; ಸಹನೆ
**ಉಪಶಮಾಂಭೋರಾಶಿ** – ಸಮಾಧಾನವೆಂಬ ಸಾಗರ
**ಉಪಶಲ್ಯ** – ಊರಿನ ಹತ್ತಿರ; ಈಟಿ
**ಉಪಶಲ್ಯಕ** – ಊರಿನ ಹತ್ತಿರ
**ಉಪಶಾಂತ** – ಅಡಗಿಹೋದ
**ಉಪಶಾಂತಿ** – ಸಹನೆ
**ಉಪಶಿಷ್ಟ** – ಒಡಗೂಡಿದ
**ಉಪಶೀರ್ಷಕ** – ಮಧ್ಯದಲ್ಲಿ ಕ್ರಮವಾಗಿ ದೊಡ್ಡದಾಗಿರುವ ಮೂರು ಮುತ್ತುಗಳುಳ್ಳ ಹಾರ
**ಉಪಶೋಭಿತ** – ಅಲಂಕೃತಗೊಂಡ
**ಉಪಶ್ಲೋಕಿಸು** – ಸ್ತುತಿಮಾಡು, ಹೊಗಳು
**ಉಪಶ್ರುತಿ** – ಜೋಯಿಸರನ್ನು ಕೇಳುವ ಭವಿಷ್ಯ
**ಉಪಶ್ಲೋಕಿಸು** – ಹೊಗಳು
**ಉಪಸಂಹ(ಹಾ)ರಿಸು** – ಮುಕ್ತಾಯಗೊಳಿಸು
**ಉಪಸಂಹೃತಿ** – ವಿನಾಶ
**ಉಪಸಮುದ್ರ** – ಚಿಕ್ಕ ಸಮುದ್ರ
**ಉಪಸರ್ಗ** – ಹತ್ತಿರ; ಬಾಧೆ
**ಉಪಸೃಷ್ಟಿ** – ಜೊತೆಗಿನ ಸೃಷ್ಟಿ
**ಉಪಸೇವಿಸು** – ಮನಸ್ಸನ್ನರಿತು ಸೇವೆಮಾಡು
**ಉಪಸೇವೆಗೆಯ್** – ಉಪಸೇವಿಸು
**ಉಪಸ್ಥಾಪನ** – ಹತ್ತಿರ ಇರಿಸುವುದು
**ಉಪಹತಿ** – ಪೆಟ್ಟು
**ಉಪಹತಿಗೆಯ್** – ಹೊಡೆ, ಹಿಂಸಿಸು
**ಉಪಹಸಿತ** – ಪರಿಹಾಸಕ್ಕೊಳಗಾದ
**ಉಪಾಹಾರ** – ಸಮೀಪಕ್ಕೆ ತರುವುದು; ನೈವೇದ್ಯ
**ಉಪಹಾಸನ** – ಹದಿನಾರು ಬಗೆಯ ಸಂಧಿಗಳಲ್ಲಿ ಒಂದು
**ಉಪಹಾಸಿ** – ತಿರಸ್ಕಾರ ಅಥವಾ ಹಾಸ್ಯ ಮಾಡುವ
**ಉಪಹಿತ** – ಕೂಡಿರುವ
**ಉಪಾಂತ್ಯ** – ಹತ್ತಿರ
**ಉಪಾಂಶು** – ರಹಸ್ಯ
**ಉಪಾಂಶು(ಸು)ವಧೆ** – ರಹಸ್ಯವಾದ ಕೊಲೆ
**ಉಪಾಂಶುವಧೆಗೆಯ್** – ರಹಸ್ಯವಾಗಿ ಕೊಲ್ಲು
**ಉಪಾಂಸು** – ಗುಟ್ಟು; ಮೋಸ
**ಉಪಾಖ್ಯಾನ** – ಹಿಂದಿನ ಘಟನೆ; ಅದರ ನಿರೂಪಣೆ
**ಉಪಾತ್ತ** – ಗಳಿಸಿದ; ಉಂಟುಮಾಡುವ
**ಉಪಾದೇಯ** – ಸ್ವೀಕಾರಾರ್ಹ
**ಉಪಾದ್ರಿ** – ಬೆಟ್ಟದ ಬಳಿ
**ಉಪಾಧ್ಯಾಯ** – ಓದಿಸುವಾತ; (ಜೈನ) ಪಂಚಪರಮೇಷ್ಠಿಗಳಲ್ಲಿ ಒಬ್ಬ
**ಉಪಾಧ್ಯಾಯತೆ** – ಉಪಾಧ್ಯಾಯವೃತ್ತಿ
**ಉಪಾಧ್ಯಾಯರಹಸ್ಯ** – ಉಪಾಧ್ಯಾಯನು ಶಿಷ್ಯನಿಗೆ ಉಪದೇಶಿಸುವ ರಹಸ್ಯ
**ಉಪಾನಹ** – ಪಾದರಕ್ಷೆ
**ಉಪಾಯ** – ಹತ್ತಿರ ಬರುವುದು; ಯುಕ್ತಿ; ಸಾಮ, ದಾನ, ಭೇದ ದಂಡಗಳೆಂಬ ಚತುರೋಪಾಯಗಳು
**ಉಪಾಯನ** – ಉಡುಗೊರೆ, ಕಾಣಿಕೆ
**ಉಪಾಯನಂಗೆಯ್** –ಉಪಾಯನ ನೀಡು
**ಉಪಾಯನಂಬೆರಸು** – ಉಪಾಯನದೊಡನೆ
**ಉಪಾಯಾಂತರ** – ಬೇರೆಯ ಉಪಾಯ
**ಉಪಾರೂಢ** – ಮೇಲೇರಿದ
**ಉಪಾರ್ಜಿತ** – ಸಂಪಾದನೆಮಾಡಿದ
**ಉಪಾರ್ಜಿತಯಶ** – ಕೀರ್ತಿಯನ್ನು ಸಂಪಾದಿಸಿದವನು
**ಉಪಾರ್ಜಿಸು** – ಸಂಪಾದಿಸು
**ಉಪಾಲಂಭ(ನ)** – ಪಡೆಯುವಿಕೆ; ನಿಂದೆ ವ್ಯಂಗ್ಯೋಕ್ತಿ
**ಉಪಾಲಂಭಂಗೆಯ್** – ನಿಂದಿಸು
**ಉಪಾಶ್ರಯ** – ಆಸರೆ, ಆಶ್ರಯ; ಒರಗು ದಿಂಬು
**ಉಪಾಶ್ರಯಂಬಡೆ** – ಆಸರೆಯನ್ನು ಹೊಂದು
**ಉಪಾಶ್ರಿತ** – ಆಶ್ರಯಪಡೆದ
**ಉಪಾಸಕ** – (ಜೈನ) ಶ್ರಾವಕ
**ಉಪಾಸಕಾಂಗನೆ** – (ಜೈನ) ಶ್ರಾವಕಿ
**ಉಪಾಸಕಾಧ್ಯಯನ** – (ಜೈನ) ಶ್ರಾವಕರ ಕರ್ತವ್ಯ ತಿಳಿಸುವ ಶಾಸ್ತ್ರ
**ಉಪಾಸಾಸ್ತವ** – ಸ್ತುತಿ, ಸ್ತೋತ್ರ
**ಉಪಾಸಿತ** – ಪೂಜಿತವಾದ
**ಉಪಾಸಿಸು** – ಉಪಾಸನೆಗೈ
**ಉಪಾಸ್ತಿ(ಸ್ತೆ)ಗೆಯ್** – ಉಪಾಸಿಸು
**ಉಪಾಸ್ಯ** – ಪೂಜಿಸತಕ್ಕ
**ಉಪಾಹಿತ** – ಹತ್ತಿರವಿರಿಸಿದ
**ಉಪೇಂದ್ರ** – ಇಂದ್ರನ ತಮ್ಮ; ವಿಷ್ಣು
**ಉಪೇಕ್ಷಾದೋಷ** – ಅನ್ಯರ ದೋಷವನ್ನು ತಿದ್ದದ ದೋಷ; ಉದಾಸೀನ ದೋಷ
**ಉಪೇಕ್ಷಾಸಂಯುತ** – ಜಿತೇಂದ್ರಿಯ
**ಉಪೇಕ್ಷಿಸು** – ಅಲಕ್ಷಿಸು
**ಉಪೇಕ್ಷೆ** – ಅವಜ್ಞೆ
**ಉಪೇತ** – ಕೂಡಿದ
**ಉಪೇಶ್ವರ** – ಉಪಪತಿ, ಮಿಂಡ
**ಉಪೋಷಿತ(ತೆ)** – ಉಪವಾಸವ್ರತವನ್ನು ಆಚರಿಸುವವನು(ಳು)
**ಉಪ್ಪಟ(ಟ್ಟ)(ಡ)** – ವಸ್ತ್ರ, ಬಟ್ಟೆ
**ಉಪ್ಪಯಣ** – ಪಯಣದ ನಡುವೆ ತಂಗುವುದು
**ಉಪ್ಪಯಣಂಗೆಯ್** – ಪಯಣದ ನಡುವೆ ತಂಗು
**ಉಪ್ಪರಂನೆಗೆ** – ಎತ್ತರಕ್ಕೆ ನೆಗೆ
**ಉಪ್ಪರವಟ್ಟ** – ಮೇಲುಮುಟ್ಟ; ಮೇಲ್ಕಟ್ಟಿನ ಬಟ್ಟೆ
**ಉಪ್ಪರವೊಯ್ಲು** – ಮೇಲಿನ ಹೊಡೆತ
**ಉಪ್ಪವಡಂಬಡೆ** – ಹಾಸಿಗೆಯಿಂದ ಮೇಲೇಳು

**ಉಪ್ಪವಡಿಸು** – ನಿದ್ದೆಯಿಂದ ಎಚ್ಚರಗೊಳ್ಳು; ಮೇಲೆ ನೆಗೆ; ಎತ್ತರಗೊಳಿಸು
**ಉಪ್ಪಲ(ಳ)** – (ಉತ್ಪಲ) ನೈದಿಲೆ
**ಉಪ್ಪಿಕ್ಕು** – ಉಪ್ಪು ಹಾಕು
**ಉಬುಬು** – ಸಡಗರವನ್ನು ಸೂಚಿಸುವ ಅವ್ಯಯ
**ಉಬ್ಬಡಿಗ** – ಅತಿಶಯ, ಆಧಿಕ್ಯ
**ಉಬ್ಬ(ಬ್ಬು)ದಿಗ** – ಅತಿಶಯ
**ಉಬ್ಬರ** – ಅತಿಶಯ; ಉಬ್ಬಟೆ; ಆವೇಗ
**ಉಬ್ಬರಂಬರಿ** – ಉಕ್ಕಿ ಹರಿ
**ಉಬ್ಬರಮುರಿ** – ಜೋರಾಗಿ ಉರಿ; ವಿಶೇಷವಾಗಿ ಕಾಣು
**ಉಬ್ಬರಿಕೆ** – ಅತಿಶಯ, ಉಬ್ಬರ
**ಉಬ್ಬರಿಸು** – ಮೇಲೇಳು; ತುಂಬಿಕೊ; ಗರ್ವಿಸು
**ಉಬ್ಬಸ** – ತೊಂದರೆ; ಉಸಿರಾಟದ ಕಷ್ಟಕರ ಸ್ಥಿತಿ
**ಉಬ್ಬಸಂಬಡು** – ಕಷ್ಟಪಡು; ಉಸಿರಾಡಲು ಕಷ್ಟಪಡು
**ಉಬ್ಬಾಳ** – ಉಬ್ಬು ಸ್ವಭಾವದವನು
**ಉಬ್ಬೆ** – ಸೆಕೆ, ಬಿಸಿಮ
**ಉಬ್ಬೆಗ** – (ಉದ್ವೇಗ) ದುಃಖ; ಚಿಂತೆ
**ಉಬ್ಬೆಗಂಬಡು** – ದುಃಖಪಡು
**ಉಭಯಕವಿ** – ಕನ್ನಡ ಮತ್ತು ಸಂಸ್ಕೃತಗಳಲ್ಲಿ ಕಾವ್ಯ ರಚಿಸುವವನು
**ಉಭಯಕುಲ** – ತಂದೆ ನತ್ತು ತಾಯಿಯರ ಕುಲ
**ಉಭಯಬಲ** – ಎರಡೂ ಕಡೆಗಳ ಸೈನ್ಯ
**ಉಭಯಲೋಕ** – ಇಹ ಮತ್ತು ಪರ
**ಉಭಯವ್ಯಾಕರಣ** – ಕನ್ನಡ ಮತ್ತು ಸಂಸ್ಕೃತಗಳ ವ್ಯಾಕರಣ
**ಉಭಯಶ್ರೇಣಿ** – (ಜೈನ) ಉತ್ತರ–ದಕ್ಷಿಣಗಳ ಪಂಕ್ತಿ–
**ಉಭಯಾಬ್ಧಿ** – (ಪೂರ್ವ–ಪಶ್ಚಿಮಗಳಲ್ಲಿರುವ)– **ಎರಡು ಸಮುದ್ರಗಳು –**
**ಉಮಾವರ** – ಉಮೆಯ ಗಂಡ, ಶಿವ; ಕೀರ್ತಿವಂತ
**ಉಮುೞ್** – ಉಗುಳು; ಮುಕ್ಕಳಿಸು
**ಉಮ್ಮಚ್ಚ** – (ಉನ್ಮತ್ತ) ಕೋಪ; ಅಸಮಾಧಾನ; ದಿಗ್ಭ್ರಮೆ; ಬುದ್ಧಿಭ್ರಮೆ
**ಉಮ್ಮಚ್ಚರ** – ತೀವ್ರ ಕೋಪ
**ಉಮ್ಮನೆ** – ಬಿಸಿಬಿಸಿಯಾಗಿ
**ಉಮ್ಮಳ** – ದುಃಖ
**ಉಮ್ಮಳಿಕೆ** – ಉಮ್ಮಳ
**ಉಮ್ಮಳಿಸು** – ದುಃಖಿಸು; ಚಿಂತಿಸು
**ಉಮ್ಮಾರ್ಗ** – ವಿರುದ್ಧಮಾರ್ಗ
**ಉಮ್ಮಿ**– ಧಾನ್ಯದ ಹೊಟ್ಟು
**ಉಮ್ಮೆ** – ತಾಪ; ಉಮ್ಮಳ
**ಉಯ್** – ಕರೆದುಕೊಂಡು ಹೋಗು; ನಿರ್ಬಂಧಿಸು; ಧಾನ್ಯದ ಹೊಟ್ಟು
**ಉಯ್ಯಲ್** – ಉಯ್ಯಾಲೆ
**ಉಯ್ಯಲಾಡು** – ತೂಗಾಡು; ಉಯ್ಯಾಲೆಯಾಡು; ಡೋಲಾಯಮಾನವಾಗು
**ಉರ** – ಎದೆ
**ಉರಃಕವಾಟ** –ಎದೆಯ ಬಾಗಿಲು
**ಉರಗ** – ಎದೆಯಿಂದ ಚಲಿಸುವಂಥದು, ಹಾವು
**ಉರಗಗೇಹ** – ಹುತ್ತ
**ಉರಗಪತಾಕ** – ಸರ್ಪಧ್ವಜ; ದುರ್ಯೋಧನ
**ಉರಗಪರಿವೃಢ** – ಉರಗಪತಿ; ಆದಿಶೇಷ
**ಉರಗಮಥನ** – ಹಾವನ್ನು ಕೊಲ್ಲುವವನು, ಗರುಡ
**ಉರಗಮಥನಾರೂಢ** – ಗರುಡವಾಹನ, ವಿಷ್ಣು
**ಉರಗರಾಜ** – ಆದಿಶೇಷ
**ಉರಗವನಿತೆ** – ನಾಗಕನ್ನಿಕೆ
**ಉರಗವರ** – ಆದಿಶೇಷ
**ಉರಗಶಯ್ಯೆ** – ಹಾವಿನ ಹಾಸಿಹೆ
**ಉರಗೆಜ್ಜೆ** – ಎತ್ತುಗಳ ಕೊರಳಿಗೆ ಕಟ್ಟುವ ಗೆಜ್ಜೆ
**ಉರಗೌಘ** – ನಾಗರುಗಳ ಸಮೂಹ
**ಉರಚಲ್ಲಿ** – ಮೊಲೆಕಟ್ಟು; ಎದೆಗೆ ಕಟ್ಟಿಕೊಳ್ಳುವ ಕನ್ನಡಿ
**ಉರಭ್ರ** – ಮೇಕೆ
**ಉರರೀಕರಿಸು** – ಸ್ವೀಕರಿಸು
**ಉರರೀಕೃತ** – ಒಪ್ಪಿದ; ವಿಸ್ತಾರಗೊಳಿಸಿದ
**ಉರವಣಿಸು** – ವೇಗವಾಗಿ ಮುನ್ನುಗ್ಗು
**ಉರವಣೆ** – ಶೀಘ್ರತೆ; ಆತುರ; ದಿಟ್ಟತನ
**ಉರವರಿಸು** – ವೇಗವಾಗಿ ಮುನ್ನುಗ್ಗು
**ಉರಸಿಜ** – ಮೊಲೆ
**ಉರಸ್ಥಲ(ಳ)** – ಎದೆಯ ಪ್ರದೇಶ
**ಉರಾವುರೇ** – ಬಾಪುರೇ ಎಂಬಂತಹ ಉದ್ಗಾರ
**ಉರಸ್ಕಂ** – ಎದೆಯುಳ್ಳವನು
**ಉರಿ** – ದಹನ, ಸುಡು; ಸಂಕಟಪಡು; ಜ್ವಾಲೆ
**ಉರಿಗಣ್** – ಉರಿಕಾರುವ ಕಣ್ಣು; ಕೋಪದ ಸ್ಥಿತಿ
**ಉರಿಗಣೆ** – ಉರಿಯುವ ಬಾಣ; ಆಗ್ನೇಯಾಸ್ತ್ರ
**ಉರಿಗೆದೞ್** – ಬೆಂಕಿಯನ್ನು ಹರಡು
**ಉರಿಗೇಸಂ** – ಉರಿಯಂತಹ ಕೇಶವುಳ್ಳವನು
**ಉರಿದೇೞ್** – ಕೆರಳು; ಪ್ರತಿಭಟಿಸು
**ಉರಿ(ರು)ಪು** – ಸುಡು
**ಉರಿಸು** – ಉರಿಯುವ ಹಾಗೆ ಮಾಡು
**ಉರಿವುರಿ** – ಉರಿಯ ಹುರಿ
**ಉರುಗಜ್ಜ** – ದೊಡ್ಡ ಕೆಲಸ
**ಉರುಗುರ** – ಅಮೇಧ್ಯ
**ಉರುಗೂಥ** – ಉರುಗುರ
**ಉರುಟಾಟ** – ಪ್ರತಿಭಟನೆ
**ಉರುಟು** – ಅತಿಕ್ರಮಣ
**ಉರುಡಾಡು** – ಪ್ರತಿಭಟಿಸು
**ಉರುಪಾರ** – ದೂರತೀರ
**ಉರುಪು** – ಸುಡು, ದಹಿಸು
**ಉರುಸರ** – ಪ್ರಬಲ ಧ್ವನಿ
**ಉರುಳ್** – ಉರುಳು; ಸಾಯಿ; ಹೊರಳಾಡು

**ಉರುಳ** – ಉಂಡೆ
**ಉರುಳಗೊಳ್** – ಗುಂಡಗೆ ಆಗು; ಸುರುಳಿಯಾಗು
**ಉರುಳೆವರಿ** – ಉರುಳಿಕೊಂಡು ಹೋಗು
**ಉರುಳೆವಾಯ್** – ಉರುಳೆವರಿ
**ಉರುಳ್ಚು** – ಉರುಳಿಸು
**ಉರೋಜ** – ಮೊಲೆ
**ಉರೋದಘ್ನ** – ಎದೆ ಮುಳುಗುವುದು
**ಉರೋರುಹ** – ಉರೋಜ
**ಉರ್ಕಳ** – ಉಕ್ಕು (ಧೈರ್ಯ) ಕುಂದು
**ಉರ್ಕಾಳು** – ಶೂರ
**ಉರ್ಕು** – ಹಿಗ್ಗು; ಉತ್ಸಾಹ; ದರ್ಪ; ಕೆಚ್ಚು; ಹದ ಮಾಡಿದ ಕಬ್ಬಿಣ
**ಉರ್ಕುಂದೊಱೆ** – ಉಕ್ಕಿ ಹರಿಯುವ ನದಿ
**ಉರ್ಕುಗಿಡು** – ಎದೆಗುಂದು
**ಉರ್ಕುಡಿ** – ಗರ್ವವನ್ನು ಮುರಿ; ಪರಾಕ್ರಮಶಾಲಿ
**ಉರ್ಕುಡಿಸು** – ಗರ್ವವನ್ನು ಮುರಿ
**ಉರ್ಕುಡುಗು** – ಉರ್ಕುಗಿಡು
**ಉರ್ಕೆ(ರ್ಕೆ)ವ** – ಮೋಸ
**ಉರ್ಗಿವಳದೆಣ್ಣೆ** – ಉರಿಯುತ್ತಿರುವ ಎಣ್ಣೆ
**ಉರ್ಚಿಸು** – ಸೀಳು; ಭೇದಿಸು
**ಉರ್ಚು** – ಹೊರಕ್ಕೆ ತೆಗೆ; ಚುಚ್ಚು; ಹೊರಕ್ಕೆ ಚಾಚು; ಮಲವಿಸರ್ಜನೆಯಾಗು
**ಉರ್ದು** – ಉಜ್ಜು, ತಿಕ್ಕು; ಉದ್ದಿನ ಕಾಳು, ಬೇಳೆ
**ಉರ್ಬಿ** – ಉರ್ವಿ, ಭೂಮಿ
**ಉರ್ಬಿನಂ** – ಅತಿಶಯವಾಗಿ
**ಉರ್ಬುಗುಂದು** – ಉಬ್ಬುವಿಕೆ ಕುಂದು
**ಉರ್ಮೆ** – ಹೆಚ್ಚಿಕೆ
**ಉರ್ಬೇಚಿಸು** – ಹಿಗ್ಗಿಸು
**ಉರ್ವರ** – ಉಬ್ಬರ
**ಉರ್ವರಾಪಾಳ** – ಭೂಮಿಯನ್ನು ಪಾಲಿಸುವವನು, ರಾಜ
**ಉರ್ವರೆ** – (ಫಲವತ್ತಾದ) ಭೂಮಿ
**ಉರ್ವರೇಶ್ವರ** – ಭೂಮಿಯ ಒಡೆಯ, ರಾಜ
**ಉರ್ವಸಿ** – ಊರ್ವಶಿ
**ಉರ್ವಿ** – ಭೂಮಿ
**ಉರ್ವಿ(ರ್ವೀ)ಜ** – ಭೂಮಿಯಲ್ಲಿ ಹುಟ್ಟಿದುದು, ಗಿಡಮರ
**ಉರ್ವಿನಂ** – ಅತಿಶಯ, ಹೆಚ್ಚಿಗೆ
**ಉರ್ವಿಸು** – ಉಬ್ಬಿಸು, ಹೆಚ್ಚಿಸು
**ಉರ್ವೀಧರ** – ಬೆಟ್ಟ
**ಉರ್ವೀಧರವೈರಿ** – ಇಂದ್ರ
**ಉರ್ವೀಧವ** – ಭೂಮಿಯ ಯಜಮಾನ, ರಾಜ
**ಉರ್ವೀಭರ** – ರಾಜ್ಯಭಾರ; ಭೂಮಿಯ ಭಾರ
**ಉರ್ವೀರುಹ** – ಉರ್ವಿ(ರ್ವೀ)ಜ
**ಉರ್ವರ್ವೀಲೇಖಂ** – ಬ್ರಾಹ್ಮಣ
**ಉರ್ವೀಹರ್ಷ** – ಭೂಮಿಗೆ ಹರ್ಷ ತರುವ
**ಉರ್ವು(ರ್ಬು)** – ಉಬ್ಬು, ಮೇಲೇಳು; ಮಿತಿಮೀರು; ಸಂತೋಷಪಡು; ಗರ್ವದಿಂದ ಕೂಡು; ಏಳಿಗೆ; ಹಿಗ್ಗು; ಅಹಂಕಾರ
**ಉರ್ವೇಱ್** – ಮೇಲಕ್ಕೆ ನೆಗೆ; ತಲೆದೋರು
**ಉಲಿ** – ಧ್ವನಿ ಮಾಡು; ಮಾತನಾಡು; ಘೋಷಿಸು; ಧ್ವನಿ; ಕೂಗು
**ಉಲಿಗುಡು** – ಧ್ವನಿಮಾಡು
**ಉಲಿಪು** – ಧ್ವನಿ, ಕೂಗು
**ಉಲಿಪುಗೇಳ್** – ಧ್ವನಿಯನ್ನು ಕೇಳು
**ಉಲುಕು** – ಅಲುಗು; ನಡುಗು; ಅದುರುವಿಕೆ
**ಉಲೂ(ಲೂ)ಕ** – ಗೂಬೆ
**ಉಲೂಖ(ಲ)** – ಒರಳು
**ಉಲ್ಕ(ಲ್ಕೆ)** – ಕೊಳ್ಳಿ; ಆಕಾಶದಿಂದ ಬೀಳುವ ಹೊಳೆಯುವ ವಸ್ತು
**ಉಲ್ಕಾಪಾತ** – ಆಕಾಶದಿಂದ ಹೊಳೆಯುವ ವಸ್ತು **ಕೆಳಕ್ಕೆ ಬೀಳುವುದು**–
**ಉಲ್ಮುಕ** – ಕೊಳ್ಳಿ
**ಉಲ್ಲಟಿಸು** – ತಲೆಕೆಳಗುಮಾಡು
**ಉಲ್ಲುಳಿತ** – ಚಲಿಸುವ
**ಉಲ್ಬಣ** – ತೀವ್ರವಾದ; ರಾಶಿ, ಮೆದೆ
**ಉಲ್ಲಂಘನ** – ದಾಟುವುದು
**ಉಲ್ಲಂಘಿಸು** – ದಾಟು; ಅತಿಕ್ರಮಿಸು
**ಉಲ್ಲಟಿಸು** – ಚಂಚಲಗೊಳ್ಳು
**ಉಲ್ಲವ** – ಮೇಲ್ಕಟ್ಟು
**ಉಲ್ಲಸಿತ** – ಕಾಂತಿಯುಕ್ತವಾದ; ಸಂತಸಕರವಾದ
**ಉಲ್ಲಾರ** – ದಿಂಬು ಹಾಕಿದ ಹಾಸಿಗೆ
**ಉಲ್ಲಾಸ** – ಉತ್ಸಾಹ; ಸ<ತೋಷ; ಕಾಂತಿ
**ಉಲ್ಲಾಳ** – ಒಂದು ನಾಟ್ಯ ಭಂಗಿ
**ಉಲ್ಲಿ** – ನಡುವಣ ಸ್ಥಳದಲ್ಲಿ
**ಉಲ್ಲುಳಿತ** – ಸುಳಿದಾಡಿದ
**ಉಲ್ಲೇಖನಂಗೆಯ್** – ಬರೆ, ಲಿಖಿಸು
**ಉಲ್ಲೋಲ(ಳ)** – ದೊಡ್ಡ ಅಲೆ
**ಉಷ** – ಬೆಳಗಿನ ಜಾವ
**ಉಷರ್ಬುಧ** – ಬೆಂಕಿ, ಅಗ್ನಿ
**ಉಷೆ** – ಬೆಳಿಗ್ಗೆ ಹೊತ್ತು
**ಉಷ್ಣಜಲ** – ಬಿಸಿನೀರು
**ಉಷ್ಣರಶ್ಮಿ** – ಬಿಸಿಯಾದ ಕಿರಣ
**ಉಷ್ಣರೋಚಿ** – ಉಷ್ಣರಶ್ಮಿ
**ಉಷ್ಣವೈತಾಳ** – ಒಂದು ವಿದ್ಯೆ
**ಉಷ್ಣಾಂಶು** – ಸೂರ್ಯ
**ಉಷ್ಣೀಷ** – ಪಾಗು, ಶಿರಸ್ತ್ರಾಣ
**ಉಷ್ಣೀಷಪಟ್ಟ** – ಉಷ್ಣೀಷದ ಬಟ್ಟೆ
**ಉಷ್ಣೇತರಕಿರಣ** – ಬಿಸಿಯಲ್ಲದ ಕಿರಣವುಳ್ಳವನು, ಚಂದ್ರ
**ಉಸಿಕನೆ** – ಸುಮ್ಮನೆ, ಮೌನದಿಂದ
**ಉಸಿರ್** – ಉಸಿರು, ಶ್ವಾಸೋಚ್ಛ್ವಾಸ; ಧ್ವನಿಮಾಡು; ಹೇಳು

**ಉಸಿರ್ ತವು** – ಪ್ರಾಣ ಹೋಗು, ಸಾಯಿ
**ಉಸಿರ್ದಾಣ** – ಉಸಿರು ನಿಲ್ಲಿಸುವ ಜಾಗ, ಯತಿ
**ಉಸುರ್ವೆಣ್** – ಸರಸ್ವತಿ
**ಉಳ್** – ಹೊಂದು
**ಉಳೂಕ** – ಗೂಬೆ
**ಉಳಿ** – ಅವಿತುಕೊ; ಅವಿತುಕೊಳ್ಳುವಿಕೆ; ಕಲ್ಲು ಕತ್ತರಿಸುವ ಸಾಧನ; ಕಳ್ಳ
**ಉಳಿಸೆಂಡು** – ಚೆಂಡನ್ನು ಬಚ್ಚಿಟ್ಟು ಆಡುವ ಆಟ
**ಉಳ್ಕು** – ಪ್ರಕಾಶಿಸು; ತಿವಿ; ಬಾಗು; ಕುಗ್ಗು; ಪ್ರವಾಹವಾಗಿ ಹರಿ; ಉಲ್ಕೆ
**ಉಳ್ವಂಜರಿಸು** – ಒಳಗೆ ಹೆಣೆದುಕೊ
**ಉಳ್ಳಂಜಿಸು** – ಒಳಗೆ (ಮನಸ್ಸಿನಲ್ಲಿ) ಅಂಜಿಸು, ಭಯವುಂಟುಮಾಡು
**ಉಳ್ಳಲರ್** – ಚೆನ್ನಾಗಿ ಅರಳು; ಅರಳಿದ ಹೂವು
**ಉಲ್ಲಲರ್ಚು** – ಚೆನ್ನಾಗಿ ಅರಳಿಸು
**ಉಳ್ಳಳ್ಕು** – ಒಳಗೊಳಗೆ ಹೆದರು
**ಉಳ್ಳಾತ** – ಉಳ್ಳವನು; ಹಣವಂತ
**ಉಳ್ಳಾಯ** – ಸಾಮರ್ಥ್ಯ
**ಉಳ್ಳಾಳು** – ದಂಡಿನಲ್ಲಿರುವ ಶೂರ
**ಉಳ್ಳಿ** – ಈರುಳ್ಳಿ ಅಥವಾ ಬೆಳ್ಳುಳ್ಳಿ
**ಉಳ್ಳುಗುರ್** – ಉಗುರಿನ ಒಳಭಾಗ
**ಉಳ್ಳುಡೆ** – ಒಳ ಉಡುಪು
**ಉಳ್ಳೊಳ** – ಕೋಲಾಹಲ
**ಉಱದರ್** – ಕಡಿಮೆಯಾದವರು
**ಉಱದೆ** – ಲಕ್ಷ್ಯಮಾಡದೆ; ವಿಚಾರಮಾಡದೆ; ಹೆಚ್ಚಾಗಿ
**ಉಱಿತ** – ಹೀರುವುದು
**ಉಱೇಸು** – ಸೈರಿಸು; ಹತ್ತಿರ ಬರು
**ಉಱು** – ನೆಲಸು; ಹೊಂದು; ಇಷ್ಟವಾಗು; ಪರಿಗಣಿಸು
**ಉಱುಂಬು** – ದಂಡೆತ್ತಿಹೋಗು; ಗಾಳಿ ಊದು; ರಭಸ
**ಉಱುಗಿಸು** – ಬಾಗಿಸು
**ಉಱುಗು** – ಬಾಗು, ವಕ್ರವಾಗು
**ಉಱುಗುದುಱುಂಬು** – ಬಾಗಿದ ತುರುಬು
**ಉಱುಬು** – ಹೆಚ್ಚಾಗು; ಹೊಂದಿಕೆಯಾಗು
**ಉಱುಮಿಕೆ** – ರಭಸ; ಸಾಮಥ್ಯ
**ಉಱುಮಾಱು** – ವಿನಿಮಯ
**ಉಱುವಾಱು** – ವಕ್ರವಾಗಿ ಹಾರು; ವಿನಿಮಯ
**ಉಱುವಾೞ್** – ಇಂದೇ ಬಾಳು; ಇರುವ ಬದುಕು
**ಉಱುವು** – ಡೊಂಕು
**ಉಱುವೆಸ** – ಹಿತವಾದ ಉಪಚಾರ
**ಉಱುಸೆಱಿಗೆಯ್** – ಬಲವಾದ ಸೆರೆಯಲ್ಲಿಡು
**ಉಱೆ** – ಅತಿಶಯವಾಗಿ
**ಉೞ್** – ನೇಗಿಲಿನಿಂದ ಅಗೆ, ಉಳು
**ಉೞಿ** – ಬಿಡು; ಹೊರತಾಗು; ಬದುಕಿರು; ಹಕ್ಕಿ ತಂಗುದಾಣ; ಅತಿಕ್ರಮಿಸು; ಜಾಗ; ಶಕುನದ
ಉೞಿಕು(ಕೆ) – ಉಳಿದದ್ದು–
**ಉೞಿಗ** – ಶಕುನದ ಹಕ್ಕಿ
**ಉೞಿಪು** – ಇರುವಂತೆ ಮಾಡು; ಬದುಕಿಸು
**ಉೞಿವು** – ಉಳಿಯುವಿಕೆ
**ಉೞಿಸು** – ಸಹಿಸು
**ಉೞುಗಿಸು** – ಒಲಿಸು
**ಉೞುಗು** – ಪ್ರೀತಿಸು; ಪ್ರೀತಿ
**ಉೞುಮೆ** – ಉಳುವ ಕೆಲಸ; ಬೇಸಾಯ
**ಉೞ್ಕಿ** – ಉೞುಮೆ
**ಉೞ್ಗಿ** – ಒಂದು ನೋಂಪಿ
**ಉೞ್ಗು** – ಅನುರಾಗಿಸು; ಅನುರಾಗ
**ಉೞ್ದು** – ಉದ್ದು, ಮಾಷ

## ಊ

**ಊಟ** – ಆಹಾರ ತಿನ್ನುವುದು
**ಊಡು** – ಊಟ ಮಾಡು; ತಿನ್ನಿಸು; ಲೇಪಿಸು; ಆಹಾರ; ಆಧಾರ; ಅವಲಂಬನೆ
**ಊಡುಗೊಳ್** – ದಾಟಿ ಹೊರಹೋಗು
**ಊಣ** – ಊನ, ಕೊರತೆ
**ಊದು** – ಬಾಯಿಂದ ಗಾಳಿ ಹೊರಬೀಳಿಸು
**ಊನ** – ಕೊರತೆ
**ಊನತ್ವ** – ನ್ಯೂನತೆ, ಕೊರತೆ
**ಊರ್** – ವಾಸಿಸುವ ಸ್ಥಳ
**ಊರಟಿವು** – ಊರಿನ ನಾಶ, ಊರಿಗೆ ಊರೇ ಸೂರೆಗೊಳ್ಳುವುದು
**ಊರಾವು** – ಊರಿನ ಹಸು
**ಊರಿಚ** – ದಡ್ಡ; ಅಸಂಸ್ಕೃತ
**ಊರು** – ತೊಡೆ
**ಊರುದಘ್ನ** – ತೊಡೆ ಮುಳುಗುವಷ್ಟು ಮಟ್ಟ
**ಊರುದ್ವಯನ** – ಊರುದಘ್ನ
**ಊರುಬ್ಬೆ** – ಊರಿಗೆ ಬಂದ ತೊಂದರೆ
**ಊರುಭಂಗ** – ತೊಡೆ ಮುರಿಯುವಿಕೆ
**ಊರುಯುಗ್ಮ** – ಊರುದ್ವಯ, ಎರಡು ತೊಡೆಗಳು
**ಊರುವಿಶ್ಲೇಷ** – ತೊಡೆಗಳನ್ನು ಬೇರ್ಪಡಿಸುವಿಕೆ
**ಊರೆಳ್ಳು** – ಬೇಸಾಯದಿಂದ ಬೆಳೆದ ಎಳ್ಳು
**ಊರೇಱು** – ಬೇರೆ ಊರಿಗೆ ವಲಸೆ ಹೋಗು
**ಊರ್ಜ** –ಸಾಮರ್ಥ್ಯ; ಕಾರ್ತಿಕ ಮಾಸ
**ಊರ್ಜಸ್ವಿ** – ಶಕ್ತಿವಂತ
**ಊರ್ಜಿತ** – ಹೆಚ್ಚಿದ; ಶಕ್ತಿಯಿಂದ ಕೂಡಿದ
**ಊರ್ಜಿತತೇಜ** – ಹೆಚ್ಚಿ ತೇಜಸ್ಸುಳ್ಳವನು
**ಊರ್ಜಿತಪುಣ್ಯ** – ಹೆಚ್ಚಿನ ಪುಣ್ಯವುಳ್ಳವನು
**ಊರ್ಜಿತಮತಿ** – ಹೆಚ್ಚು ಬುದ್ಧಿವಂತ
**ಊರ್ಜಿತೋಕ್ತಿ** – ಪ್ರಸಿದ್ಧ ನುಡಿ
**ಊರ್ಡಂಗುರ** – ಊರಿಗೆ ಹಾಕುವ ಡಂಗುರ

**ಊರ್ಣೆ** – ಹುಬ್ಬಿನ ಕೂದಲು
**ಊರ್ಧ್ವಗ** – ಮೇಲೆ ವ್ಯಾಪಿಸಿದ
**ಊರ್ಧ್ವಗತಿ** – ಮೇಲಾದ ಗತಿ; ಏರುವಿಕೆ
**ಊರ್ಧ್ವದಾಂಶು** – ಮೇಲೆ ಹರಡುವ ಕಿರಣ
**ಊರ್ಧ್ವಜ್ವಲನ** – ಮೇಲ್ಮುಖವಾಗಿ ಉರಿಯುವುದು
**ಊರ್ಧ್ವಬಾಹುವ್ರತಿ** – ಕೈಗಳನ್ನು ಮೇಲೆ ಎತ್ತಿ ಹಿಡಿದುಕೊಂಡು ತಪಸ್ಸು ಮಾಡುವವನು
**ಊರ್ಧ್ವಯಾನ** – ಗಗನಯಾನ
**ಊರ್ಧ್ವರೇತ** – ವೀರ್ಯವನ್ನು ತಡೆಗಟ್ಟಿರುವವನು
**ಊರ್ಧ್ವಲೋಕ** – ಮೇಲಿನ ಲೋಕ; (ಜೈನ) ಮೇಲುಗಡೆಯ ಸ್ವರ್ಗಗಳಲ್ಲಿ ಕೊನೆಯದು
**ಊರ್ಮಿ** – ದೊಡ್ಡ ತೆರೆ, ಅಲೆ; ಉತ್ಸಾಹ
**ಊರ್ಮಿ(ಕ)ಕೆ** – ಉಂಗುರು; ವಿಷಾದ
**ಊರ್ಮಿಮಾಳನಿ** – ಅಲೆಗಳ ಮಾಲೆಯುಳ್ಳದ್ದು
**ಊರ್ಮಿಶ್ರೇಣಿ** – ತೆರೆಗಳ ಪಂಕ್ತಿ
**ಊರ್ಮೆ** – ಆಧಿಕ್ಯ, ಶ್ರೇಷ್ಠತೆ
**ಊರ್ವೇಲಿ** – ಊರ ಸುತ್ತಣ ಬೇಲಿ
**ಊಷರ** – ಬಂಜರುಭೂಮಿ
**ಊಷ್ಮೆ** – ತಾಪ
**ಊಳ್** – ಗಟ್ಟಿಯಾಗಿ ಶಬ್ದಮಾಡು; ನಾಯಿನರಿಗಳ ಧ್ವನಿ; ನಿಂದಿಸು; ಅರ್ಥವಿಲ್ಲದೆ ಮಾತಾಡು
**ಊಳಕ್ಕು** – ಕೂಗಿಕೊ
**ಊಳಡು** – ಊಳಿಕ್ಕು
**ಊಱೆಸು** – ಚುಚ್ಚಿಸು; ಇರಿಯುವಂತೆ ಮಾಡು
**ಊಱು** – ನೆಲೆಯಾಗಿ ನಿಲ್ಲು; ಸ್ಥಾಪಿಸು; ಆವರಿಸು; ಪ್ರವಿಸು
**ಊೞಿಗ** – ಊಳಿಗ, ಕಾರ್ಯ; ಸೇವೆ; ಜೀತ

## ಋ

**ಋಕ್ಕು** – ಋಗ್ವೇದಮಂತ್ರ, ವೇದಮಂತ್ರ
**ಋಕ್ಷ** – ಕರಡಿ; ನಕ್ಷತ್ರ
**ಋಕ್ಷಾಕೀರ್ಣ** – ನಕ್ಷತ್ರಗಳಿಂ ಕೂಡಿದ; ಕರಡಿಗಳಿಂದ ಕೂಡಿದ
**ಋಕ್ಷೇಶ** – ನಕ್ಷತ್ರಗಳ ಒಡೆಯ, ಚಂದ್ರ
**ಋಜು** – ಸರಳವಾದ; ಒಂದು ವಸ್ತುವನ್ನು ನೋಡಿವ ವಿವಿಧ ಕೋನಗಳು
**ಋಜುತ್ವ** – ನೇರ ನಡವಳಿಕೆ
**ಋಜುಮತಿ** – (ಜೈನ) ಋಜು ಬುದ್ಧಿ
**ಋಜುಮಾರ್ಗ** – ನೇರ ಮಾರ್ಗ, ನಡವಳೀಕೆ
**ಋಜುರೋಹಿತ** – ಕಾಮನಬಿಲ್ಲು
**ಋಜುವೃತ್ತಿ** – ನೇರ ನಡವಳಿಕೆ
**ಋಜ್ವಾಗತ** – ನೇರವಾಗಿ ಬಂದ; ನೇರ ಮಾರ್ಗ
**ಋಣಂಗುಡು** – ಸಾಲ ಕೊಡು
**ಋಣಿ** – ಹಂಗಿಗೊಳಗಾದವನು
**ಋತ** – ಸತ್ಯ; ತೇಜಸ್ವಿ; ಸೂರ್ಯ; ನೀರು; ಚಂದ್ರ; ಹಂಸ; ಮುನಿ
**ಋತವಚನ** – ಸತ್ಯದ ಮಾತು
**ಋತವಾಕ್ಯ** – ಋತವಚನ
**ಋತು** – ಎರಡ ತಿಂಗಳ ಕಾಲ; ಸ್ತ್ರೀರಜಸ್ಸು
**ಋತುಪ್ರತಾನ** – ಋತುಸಮೂಹ
**ಋತುವಿಮಾನ** – (ಜೈನ) ಅರವತ್ತಮೂರು ಇಂದ್ರಕಗಳಲ್ಲಿ ಮೊದಲನೆಯದು
**ಋತುಸಾರ್ವಭೌಮ** – ಋತುಗಳ ಸಮ್ರಾಟ; ವಸಂತಋತು
**ಋತ್ವಿ(ಕ್ಕು)ಜ** – ಯಾಗದಲ್ಲಿ ಯಜಮಾನನಿಗೆ ಸಹಾಯ ಮಾಡುವವರು; ಯಜ್ಞಪುರೋಹಿತ
**ಋದ್ಧ** – ವೃದ್ಧಿ ಹೊಂದಿದ; ತುಂಬಿದ
**ಋದ್ಧಿ** – ಸಮೃದ್ಧಿ; ಅಭಿವೃದ್ಧಿ; ಕೈಗೂಡುವಿಕೆ; ಸಂಪತ್ತು, ಐಶ್ವರ್ಯ; (ಜೈನ) ತಪಸ್ಸಿನಿಂದ ಪ್ರಾಪ್ತವಾಗುವ ಮಹಿಮೆ, ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧಿ, ರಸ, ಅಕ್ಷೀಣ ಎಂಬ ಋದ್ಧಿಗಳು
**ಋದ್ಧಿಪ್ರಾಪ್ತ** – ಋದ್ಧಿಯನ್ನು ಹೊಂದಿದವನು
**ಋದ್ಧಿಸಂಪನ್ನ** – ಏಳಿಗೆಯನ್ನು ಪಡೆದವನು
**ಋಷಭ** – ಎತ್ತು; (ಜೈನ) ಮೊದಲನೆಯ ತೀರ್ಥಂಕರ
**ಋಷಿ** – ತಪಸ್ವಿ
**ಋಷಿನಿವೇದಕ** – ಮಹರ್ಷಿಗಳ ಆಗಮನವನ್ನು ಸಾರುವ ದೂತ
**ಋಷಿರೂಪಕ** – ಋಷಿಯ ರೂಪ, ಋಷಿದೇಹ

## ಎ

**ಎಂ(ಚ)ಲ್** – ತಿಂದ ಮೇಲು ಉಳಿಯುವುದು; ಇತರರು ತಿಂದು ಮಿಕ್ಕದ್ದು
**ಎಂಜಲಗುೞಿ್** – ತಿಂದು ಉಳಿದ ಅಗುಳು
**ಎಂಜಲಿಸು** – ಎಂಜಲುಮಾಡು
**ಎಂಜಲವುೞು** – ಎಂಜಲ ಅಗುಳು
**ಎಂಜಲ್ಗೂೞಿ** – ಎಂಜಲು ಆಹಾರ
**ಎಂಟಡಿ** – ಶರಭ
**ಎಂಟುಗೆಯ್** – ಎಂಟು ಭಾಗ ಮಾಡು
**ಎಂಟೆರ್ದೆ** – ತುಂಬ ಧೈರ್ಯ
**ಎಂತಕ್ಕೆ** – ಹೇಗಾದರೂ
**ಎಂತಪ್ಪ** – ಎಂತಹ, ಎಂಥ
**ಎಂತಾನುಂ** – ಹೇಗಾದರೂ, ಯಾವುದೇ ರೀತಿಯಲ್ಲಿಯಾದರೂ
**ಎಂತು** – ಹೇಗೆ, ಯಾವ ರೀತಿ
**ಎಂತುಗೆ** – ಹೇಗೆ
**ಎಂತುಟು** – ಹೇಗೆ
**ಎಂದುಂ** – ಯಾವಾಗಲೂ
**ಎಂದುದನೆನ್** – ಆಜ್ಞಾವರ್ತಿಯಾಗಿರು, ಹೇಳಿದಂತೆ ಕೇಳು

**ಎಂಬುಕೆಯ್** – (ಎಂಬುದಂ+ಕೆಯ್) ಅಂಗೀಕರಿಸು
**ಎಕ್ಕಛಾಯ** – ಒಂದೇ ಬಣ್ಣ; ಇಂದ್ರನೀಲ
**ಎಕ್ಕಟಿ** – ಗುಪ್ತವಾಗಿ, ಗುಟ್ಟಾಗಿ; ಏಕಾಂತ
**ಎಕ್ಕಟಗಲಿ** – ಏಕಾಂಗವೀರ
**ಎಕ್ಕಟಿಗಾಳೆಗ** – ದ್ವಂದ್ವಯುದ್ಧ
**ಎಕ್ಕಡಿ** – ಪಗಡೆಯಾಟ
**ಎಕ್ಕತಕ್ಕು** – ಸಮಾನಯೋಗ್ಯತೆ, ಅರ್ಹತೆ
**ಎಕ್ಕತಳ** – ನಿಯಮಿತ ಜಾಗ
**ಎಕ್ಕತುಳ** – (ಏಕತುಲ) ಒಂದೇ ತೂಕ; ಸಮಾನ; ದ್ವಂದ್ವಯುದ್ಧ
**ಎಕ್ಕತುಳಂ** – ಅತಿಶಯವಾಗಿ
**ಎಕ್ಕಬಾಗೆ** – ಒಂದೇ ಪಾಲು, ಭಾಗ
**ಎಕ್ಕಮ(ವ)ದ್ದಳೆ** – ಒಂದು ಬಗೆಯ ಚರ್ಮವಾದ್ಯ
**ಎಕ್ಕರ** – ಸೂಕರ, ಕಾಡುಹಂದಿ; ಒಂಟಿ ಸಲಗ
**ಎಕ್ಕಲಗಾಣ** – ಒಂಟಿ ಹಾಡುಗಾರ
**ಎಕ್ಕಲದುಂಬಿ** – ಒಂಟಿದುಂಬಿ
**ಎಕ್ಕಲವಂದಿ** – ಒಂಟಿ ಹಂದಿ
**ಎಕ್ಕಲವಿರಿ** – ಎಲ್ಲಮ್ಮ, ರೇಣುಕಾದೇವಿ
**ಎಕ್ಕಲಾವಣ** – ಏಕ ನೆಲೆ. ಒಂಟಿ ಅಂಗಡಿ
**ಎಕ್ಕವಡ** – ಎಕ್ಕಡ, ಪಾದರಕ್ಷೆ
**ಎಕ್ಕವತ್ತ** – ಒಂಟಿ ಎಲೆಯಿರುವ
**ಎಕ್ಕಸ** – ರಭಸ, ವೇಗ
**ಎಕ್ಕಸಕ್ಕ** – ಹರಟುವಿಕೆ, ಅಸಂಬದ್ಧ ನುಡಿ; ಅಸಂಬದ್ಧಪ್ರಲಾಪಿ
**ಎಕ್ಕಸಕ್ಕತನ** – ಅಸಂಬದ್ಧತೆ; ಕರುಬುತನ; ನಿಂದೆ
ಎಕ್ಕಸರ – ಒಂಟಿ ಎಳೆಯ ಸರ; ಒಂದೇ ಬಾಣ; ಒಂದೇ ಧ್ವನಿ; ನಿರಂತರತೆ–
**ಎಕ್ಕಸಿಕ್ಕ** – ಎಕ್ಕಸಕ್ಕ
**ಎಕ್ಕಳವಟ್ಟ** – ಏಕವಸ್ತ್ರ; ಉಡುವ ಒಂದೇ ಬಟ್ಟೆ
**ಎಕ್ಕಾವಳ** – ಏಕಾವಳಿ, ಒಂದೆಳೆಯ ಸರ
**ಎಕ್ಕು** – ಹಿಂಜು, ಬಿಡಿಸು, ಬೇರ್ಪಡಿಸು; ಭೇದಿಯಾಗು
**ಎಕ್ಕೆ** – ಒಟ್ಟಿಗೆ; ಸಂಗಡ; ಒಂದು ಜಾತಿಯ ಗಿಡ; ಮಂಚದ ಚೌಕಟ್ಟು; ಮನೆ
**ಎಕ್ಕೆಕ್ಕೆ** – ಮೇಲೆ ಮೇಲೆ; ಒಟ್ಟಾಗಿ
**ಎಕ್ಕೆಗುಟ್ಟು** – ಗೊಳಗುಟ್ಟಿಕೊ
**ಎಕ್ಕೆವಾಱು** – ಒಂದೇ ಹಾರು; ಒಂದೇ ಸಮನೆ ಮಿಡಿಯುತ್ತಿರು
**ಎಗ್ಗ** – ಮೂಢ, ಗಾಂಪ
**ಎಗ್ಗತನ** – ಹೆಡ್ಡತನ
**ಎಗ್ಗಿಕೆ** – ಹೆಡ್ಡತನ
**ಎಗ್ಗು** – ದಡ್ಡತನ; ಬಿಕ್ಕಳಿಸು; ನಾಚಿಕೆ
**ಎಚ್ಚಿಕೊಳ್** – ಬಳಿದುಕೊ, ಲೇಪಿಸಿಕೊ
**ಎಚ್ಚು** – ಬಳಿ, ಲೇಪಿಸು
**ಎಚ್ಚುಪಾಯ್** – ಚಿಮ್ಮಿ ಹರಿ
**ಎಟ್ಟು** – ನಿಲುಕು, ಕೈಗೆ ಸಿಕ್ಕು
**ಎಟ್ಟುಗೆ** – ಬಟ್ಟಲು

**ಎಡಂಬಡು** – ಅಸಮಾಧಾನ; ಎಡವಟ್ಟು
**ಎಡಗ** – ನಿಷ್ಪ್ರಯೋಜಕ
**ಎಡಗಲಿಸು** – ಎಡಕ್ಕೆ ಸರಿಸು, ಬದಿಗೊತ್ತು
**ಎಡಚತನ** – ಎಡಗೈಯನ್ನೇ ಬಳಸುವುದು
**ಎಡ(ಂ)ಪು** – ಎಡವು, ತೊಡರಿ ಬೀಳು
**ಎಡರ್(ರು)** – ಅಡಚಣೆ; ಕಷ್ಟ
**ಎಡವ** – ದನಕಾಯುವವನು
**ಎಡವಕ್ಕ** – ಎಡದ ಭಾಗ, ಮಗ್ಗುಲು
**ಎಡವೆಗಲ್** – ಎಡಭಾಗದ ಹೆಗಲು
**ಎಡಱು** – ಅಡ್ಡಲಾಗಿರು; ತೊಂದರೆ ಮಾಡು ಬಡತನ, ದಾರಿದ್ರ್ಯ
**ಎಡೆ** – ಸ್ಥಳ; ಸಂದರ್ಭ; ಮಧ್ಯೆ; ಸಮಾನ ; ಅವಕಾಶ; ನೈವೇದ್ಯ; ಕೀಳಾಗಿರುವಿಕೆ; ಹೆಚ್ಚಾಗಿ; ಊಟ
**ಎಡಗಂಡಿಕೆ** – ಮಂತ್ರವಾದಿ
**ಎಡಗಟ್ಟು** – ಕಟ್ಟುಪಾಡು, ನಿಯಮ
**ಎಡೆಗಲ(ಲಿ)ಸು** – ಜೊತೆಗೂಡಿಸು
**ಎಡೆಗಾಣ್** – ಜಾಗವನ್ನು ನೋಡಿ, ಆಶ್ರಯ ಹೊಂದು
**ಎಡೆಗಾಳ** – ಸುಮಾರು ಗಾತ್ರದ ಗಾಳ
**ಎಡೆಗಿ(ಗೆ)ಡಿಸು** – ನೆಲೆ ತಪ್ಪಿಸು
**ಎಡೆಗಿ(ಗೆ)ಡು** – ಸ್ಥಳಾಂತರ ಹೊಂದು; ನೆಲೆಗೆಡು
**ಎಡೆಗಿಱಿ** – ತುಂಬಿಕೊ; ಆಕ್ರಮಿಸು
**ಎಡೆಗು(ಗೊ)ಡು** – ಆಸ್ಪದ ನೀಡು
**ಎಡೆಗೆಯ್** – ಜಾಗ ಕೊಡು; ಅವಕಾಶ ಕೊಡು
**ಎಡೆಗೊಳ್** – ಅವಕಾಶ ಹೊಂದು; ಆಶ್ರಯಿಸು
**ಎಡೆಗೊಳಸು** – ಅಳವಡಿಸು, ಹೊಂದಿಸು
**ಎಡೆಗೋ** – ನಡುವೆ ಸೇರಿಕೊ; ತೂರಿಕೊ
**ಎಡೆದೆಱಪು** – ನಡುವಣ ಅವಕಾಶ; ಬಿಡುವು
**ಎಡೆನುಡಿ** – ನಡುವಣ ನುಡಿ
**ಎಡೆನೆಱೆ** – ಜಾಗ ಸಾಕಾಗು
**ಎಡೆಮಡಗು** – ತಡಮಾಡು; ಅವಕಾಶ ಕೊಡು; ದಾಕ್ಷಿಣ್ಯ ಮಾಡು; ಮುಚ್ಚಿಕೊ
**ಎಡೆಮಾಡಿಸು** – ಊಟ ಬಡಿಸು
**ಎಡೆಮಾಡು** – ಅವಕಾಶವೊದಗಿಸು; ನೈವೇದ್ಯಮಾಡು
**ಎಡೆಯ** – ದನಗಾಹಿ
**ಎಡೆಯಱಿ** – ಸ್ಥಳವನ್ನು ಅರಿತುಕೊ
**ಎಡೆಯಾಡು** – ಓಡಾಡು, ತಿರುಗಾಡು
**ಎಡೆಯಿಡು** – ಮಧ್ಯೆ ಇಡು
**ಎಡೆಯುಡುಗು** – ವಿಚ್ಛೇದಗೊಳ್ಳು; ಕೊಂಡಿ ತುಂಡರಿಸು
**ಎಡೆಯೊತ್ತು** – ಅದುಮು
**ಎಡೆವಗಲ್** – ನಡುಹಗಲು
**ಎಡೆವಟ್ಟಲ್** – ಊಟದ ತಟ್ಟೆಯ ಜೊತೆಗಿನ ಬಟ್ಟಲು
**ಎಡೆವಟ್ಟೆ** – ಎಡೆ+ಬಟ್ಟೆ, ನಡುವಣ ದಾರಿ

**ಎಡೆವಡು** – ಎಡೆ+ಪಡು, ಮಧ್ಯೆ ಮಲಗು
**ಎಡೆವಡೆ** – ಅವಕಾಶ ಪಡೆ
**ಎಡೆವಲಿ** – ನಡುನಡುವೆ ಕೊಡುವ ಬಲಿ(?)
**ಎಡೆವಱ** – ನಡುವಣ ಬರ(ಗಾಲ)
**ಎಡೆವಱೆ** – ಮಧ್ಯೆ ತುಂಡರಿಸಿಹೋಗು;
**ಎಡೆಮಾ(ವಾ)ತು** – ನಡುವಣ ಮಾತು
**ಎಡೆವಾಯ್** – ಮಧ್ಯೆ ಬರು
**ಎಡೆವಿಡಿಸು** – ಜಾಗ ಬಿಡಿಸು
**ಎಡೆವು(ವೊ)ಗು** – ಮಧ್ಯೆ ಪ್ರವೇಶಿಸು
**ಎಡೆವೆರಲ್** – ನಡುವಣ ಬೆರಳು
**ಎಡೆವೇಱು** – ಸ್ಥಳವನ್ನು ಪಡೆ; ಅವಕಾಶ ಪಡೆ
**ಎಡೆವೇಡು** – ಜಾಗಕ್ಕಾಗಿ ಬೇಡು
**ಎಡೆವೇಱ್** – ಕಾರಣವನ್ನು ತಿಳಿಸು
**ಎಡೆವೋಗು** – ಸಂಕೇತಸ್ಥಾನಕ್ಕೆ ಹೋಗು
**ಎಡ್ಡ** – ಸುಂದರ
**ಎಡ್ಡತಾಣ** – ರಮ್ಯವಾದ ಜಾಗ
**ಎಡ್ಡಮಾಗು** – ಸುಂದರವಾಗು
**ಎಡ್ಡಮಿಂಡಿ** – ಚೆಲುವೆ ಹೆಣ್ಣು
**ಎಣ್** – ಎಂಟು; ಎಣಿಕೆಮಾಡು
**ಎ(ಏ)ಣಗೋಣ** – ಗರ್ವವಕ್ರತೆ; ಕೊಂಕು; ಬಿಂಕ
**ಎಣಿಕೆ** – ಲೆಕ್ಕ, ಅಂದಾಜು
**ಎಣಿಕೆಗಳೆ** – ಲೆಕ್ಕಿಸದಿರು
**ಎಣಿಕೆಗಟೆ** – ಲೆಕ್ಕಕ್ಕೆ ಮೀರಿದ
**ಎಣಿಕೆದಪ್ಪು** – ಲೆಕ್ಕ ತಪ್ಪು
**ಎಣಿಕೊಳ್** – ಲೆಕ್ಕಹಾಕುಎಣಿಲ್ – ಸುಂದರಿ–
**ಎಣಿಸು** – ಲೆಕ್ಕಹಾಕು; ಪರಿಗಣಿಸು
**ಎಣೆ** – ಸಮ; ಹೊಂದಿಕೆ; ಜೋಡಿ
**ಎಣೆಗೊಳ್** – ಸಮನಾಗು
**ಎಣೆವಕ್ಕಿ** – ಜೋಡಿಹಕ್ಕಿ, ಚಕ್ರವಾಕ
**ಎಣೆವರ್** – ಸರಿಸಮನಾಗು
**ಎಣ್ಗಾವುದ** – ಎಂಟು ಗಾವುದ
**ಎಣ್ಛಾಸಿರ್ವರ್** – ಎಂಟು ಸಾವಿರ ಮಂದಿ
**ಎಣ್ದೆಸೆ** – ಎಂಟು ದಿಕ್ಕು
**ಎಣ್ಪತ್ತು** – ಎಂಬತ್ತು
**ಎತ್ತಕ** – ಸತ್ತಿಗೆಯ ಮರ
**ಎನತು(ತ್ತು)** – ನನ್ನದು
**ಎಣ್ಬರಿಜು** – ಎಂಟು ರೂಪಗಳು
**ಎಣ್ಬಟ್ಟೆ** – ಎಮಟು ದಾರಿಗಳು
**ಎಣ್ಬರ್** – ಎಂಟು ಮಂದಿ
**ಎಣ್ಬೆರಲ್** – ಎಂಟು ಬೆರಳು
**ಎತ್ತ** – ಎಲ್ಲಿ, ಯಾವ ಕಡೆ
**ಎತ್ತಣ** – ಎಲ್ಲಿಯ
**ಎತ್ತಲ್(ಲು)** – ಎಲ್ಲಿ, ಎಲ್ಲ ಕಡೆಯೂ
**ಎತ್ತಂ** – ಎಲ್ಲೆಡೆಯೂ
**ಎತ್ತಱತತ್ತಱ** – ಅಸ್ತವ್ಯಸ್ತತೆ
**ಎತ್ತಿಸು** – ಮೇಲೆ ಹಿಡಿಸು
**ಎತ್ತು** – ಮೇಲೆ ಹಿಡಿ; ನೀರು ಹಾಯಿಸು
**ಎತ್ತುಂಗೋಲ್** – ಕೂರಂಬು
**ಎತ್ತುಂಗೋಲಿಕ್ಕು** – ಕೂರಂಬು ಪ್ರಯೋಗಿಸು
**ಎತ್ತುಂಗೋಲ್ವೋಗು** – ಕೂರಂಬಿನ
**ತಿವಿತಕ್ಕೊಳಗಾದ–**
**ಎತ್ತಗುಂಡು** – ಎತ್ತಿದ ಗುಂಡು
**ಎದೆಗುದಿಪ** – ಎದೆಗುದಿತ, ಹೃದಯ ವೇದನೆ
**ಎನ್** – ಮಾತಾಡು; ಆಗಿದ್ದೇನೆ
**ಎನತು(ತ್ತು)** – ನನ್ನದು
**ಎನಸುಂ** – ಎಷ್ಟೋ, ತುಂಬ
**ಎನಿತು(ತ್ತು)** – ಎಷ್ಟು
**ಎನಿವಿರಿದು** – ಎಷ್ಟು ದೊಡ್ಡದು
**ಎನಿಸು** – ಎನ್ನುವಂತೆ ಮಾಡು, ಅನ್ನಿಸು; ಎಷ್ಟು
**ಎನ್ನ** – ಎಂತಹ
**ಎನ್ನದು** – ಎಂಥದು
**ಎನ್ನೆಗಂ** – ಎಲ್ಲಿಯವರೆಗೆ
**ಎನ್ನೆವರಂ** – ಎನ್ನೆಗಂ
**ಎಬ್ಬಟ್ಟು** – ಬೆನ್ನಟ್ಟು
**ಎಬ್ಬು** – ಎಬ್ಬು, ಮೇಲೆಬ್ಬಿಸು
**ಎಮ** – ಒಪ್ಪಿಗೆ ಸೂಚಕ ಪ್ರತ್ಯಯ (ಉದಾ: ಬಿಸುಟಿಕ್ಕೆಮ=ಬಿಸುಡಲಿ); ಹಾರೈಕೆ ಸೂಚಕ **(ಉದಾ: ನಿಮಗಕ್ಕೆಮ...ಆಯುಂ ಶ್ರೀಯುಂ)–**
**ಎಮೆ(ವೆ)** – ಎವೆ, ಕಣ್ಣುರೆಪ್ಪೆ
**ಎಮೆದುಱುಗಲ್** – ರೆಪ್ಪೆಗೂದಲ ಸಾಲು
**ಎಮೆಯಿಕ್ಕು** – ರೆಪ್ಪೆ ಮಿಟುಕಿಸು
**ಎಮೆಯಿಕ್ಕದವರ್** – ಕಣ್ಣು ಮಿಟುಕಿಸದವರು, ದೇವತೆಗಳು
**ಎಮೆವೊಱೆ** – ರೆಪ್ಪೆಯ ಭಾರ
**ಎಯ್** – ಮುಳ್ಳುಹಂದಿ, ಎಕ್ಕಲ
**ಎಯ್ತರ್** – ಐತರು, ಬರು, ಹತ್ತಿರ ಬರು
**ಎಯ್ದಿಸು** – ಐದಿಸು, ಬಂದು ಸೇರುವಂತೆ ಮಾಡು
**ಎಯ್ದು** – ಬಂದು ಸೇರು; ಸಮರ್ಥವಾಗು
**ಎಯ್ದೆ** – ಐದೆ, ಚೆನ್ನಾಗಿ; ಅಯ್ದೆ (ಸುಮಂಗಲಿ)
**ಎಮ್ಮಂದಿಗರ್** – ನಮ್ಮಂಥವರು
**ಎಯ್ಯಪಂದಿ** – ಮುಳ್ಳುಹಂದಿ
**ಎಯ್ಯಮಿ(ಮೃ)ಗ** – ಮುಳ್ಳುಹಂದಿ
**ಎರ** – ಎಲಚಿ ಮರ
**ಎರಂಗುಡು** – ಕಡಕೊಡು
**ಎರಕ** – ಅಚ್ಚು ಹಾಕು; ಅಚ್ಚು
**ಎರಡಱೆ** – ಭಿನ್ನವಾಗಿ ಆಲೋಚಿಸು; ಕಪಟ ತಿಳಿ
**ಎರಡಿಡು** – ಎರಡಾಗಿ ಮಾಡು
**ಎರಡುಗೇಳು** – ಬೇರೇನನ್ನು ಕೇಳು; ಎರಡನೆಯ ಬಾರಿ ಕೇಳಿಸಕೊ
**ಎರಡುಗೊಳ್** – ಎರಡನೆಯದನ್ನು ತೆಗೆದುಕೊ; ಎರಡು ತೆಗೆದುಕೊ
**ಎರಡೆಣಿಸು** – ಅನ್ಯವನ್ನು ಭಾವಿಸು; ಎರಡು ಬಗೆ
**ಎರಲ್** – ಎಲರ್, ಗಾಳಿ
**ಎರಲೆ(ಳೆ)** – ಜಿಂಕೆ

**ಎರಲೆಗುಱುಪ** – ಜಿಂಕೆಯ ಗುರುತನ್ನು ಹೊಂದಿದವನು, ಚಂದ್ರ
**ಎರಲೆಧೀಂಕು** – ಜಿಂಕೆಯ ನೆಗೆತ; ಹಾಗೆ ನೆಗೆಯುವ ಒಂದು ಆಟ
**ಎರಲೆವಱಿ** – ಜಿಂಕೆಯ ಮರಿ
**ಎರವಣ್ಣು** – ಎಲಚಿಹಣ್ಣು
**ಎರವಿಗೊಳ್** – ಬೇಡಿಕೊ
**ಎರವು** – ಸಾಲ
**ಎರಳ್ಮಾಡು** – ಎರಡಾಗಿ ಮಾಡು
**ಎರಳ್ನುಡಿ** – ಎರಡು ನುಡಿ; ಮಾತಿಗೆ ತಪ್ಪು
**ಎರೆ** – ಬೇಡು; ಕೀಲೆಣ್ಣೆ; ಕಪ್ಪು ಭೂಮಿ; ಪ್ರಾಣಿಗಳಿಗೆ ಹಾಕುವ ಆಹಾರ; ಹಾವಿನ ಪೊರೆ; ಜೊತೆಗಾರ; ಅಂಚು; ದಡ
**ಎರೆಗೆಯ್** – ಪೊರೆಯನ್ನು ಬಿಡು; ಎರೆ (ಕಪ್ಪು) ಹೊಲ
**ಎರೆಗೊಳ್** – ತಿನ್ನುತ್ತಿರು
**ಎರೆಯ ಪೆಟ್ಟೆ** – ಮಣ್ಣು ಹೆಂಟೆ
**ಎರೆಯಿಕ್ಕು** – ಪೊರೆ ಬಿಡು
**ಎರೆವಚ್ಚಾಡು** – ಎರಡಾಗಿ ಹಂಚಿ (ಎರಡು ಗುಂಪಾಗಿ ಮಾಡಿ) ಆಡು
**ಎರೆವಚ್ಚು** – ಎರಡಾಗಿ ವಿಭಾಗಿಸು
**ಎರ್ದೆ** – ಎದೆ, ಹೃದಯ
**ಎರ್ದೆಕೊ(ಗೊ)ಳ್** – ಹೃದಯಂಗಮವಾಗು; ಮನಸ್ಸಿಗೆ ತಂದುಕೊ; ಧೈರ್ಯವಹಿಸು
**ಎರ್ದೆಗರಗು** – ಎದೆ ಕರಗು, ಮರುಕ ಹೊಂದು
**ಎರ್ದೆಗಱೆ** – ಎದೆಯ ಕಲೆ; ಕಳಂಕ
**ಎರ್ದೆಗಾಯ್** – ಆತ್ಮರಕ್ಷಣೆ ಮಾಡಿಕೊ
**ಎರ್ದೆಗಿಚ್ಚು** – ಎದೆಯ ಉರಿ; ದುಃಖ
**ಎರ್ದೆಗುಂದು** – ಧೈರ್ಯಗುಂದು
**ಎರ್ದೆಗಿ(ಗೆ)ಡು** – ಎರ್ದೆಗುಂದು
**ಎರ್ದೆಗು(ಗೊ)ಡು** – ಧೈರ್ಯ ತುಂಬು; ಮನಸ್ಸು ಕೊಡು
**ಎರ್ದೆಗೆಚ್ಚು** – ಎದೆಯ ಕೆಚ್ಚು, ಧೈರ್ಯ
**ಎರ್ದೆಗೊಳ್** – ಮನಸ್ಸಿಗೆ ತಂದುಕೊ, ಒಪ್ಪಿಕೊ
**ಎರ್ದೆಗೊಳಸು** – ಮನಸ್ಸು ಗೆಲ್ಲು
**ಎರ್ದೆದಲ್ಲಣ** – ಎದೆಯ ತಲ್ಲಣ
**ಎರ್ದೆದೆಱೆ** – ಎದೆ ತರೆದು ತೋರಿಸು; ಎದೆಬಿಚ್ಚಿ ಹೇಳು
**ಎರ್ದೆನೋ** – ಮನಸ್ಸಿನ ನೋವು
**ಎರ್ದೆಯಂಟು** – ಎದೆಗೆ ಅಂಟಿಕೊ, ನಾಟು
**ಎರ್ದೆಯಾಣ್ಮ** – ಪ್ರಿಯಕರ
**ಎರ್ದೆಯಾರು** – ಮನವಾರು, ಹೃದಯಕ್ಕೆ ತೃಪ್ತಿ ತರು
**ಎರ್ದೆಯಿಕ್ಕು** – ಧೈರ್ಯ ಕುಗ್ಗು, ಮನಸ್ಸು ಕುಸಿ
**ಎರ್ದೆಯುಗಿ** – ಎದೆಯನ್ನು ಸೀಳು
**ಎರ್ದೆಯುರ್ಚು** – ಎದೆಗೆ ತಿವಿ, ಚುಚ್ಚು
**ಎರ್ದೆಯುರ್ಬು** – ಎದೆ ಉಬ್ಬು
**ಎರ್ದೆಯೊಡೆ** – ಧೈರ್ಯಗುಂದು
**ಎರ್ದೆವತ್ತುಗೆ** – ಎದೆ ಹತ್ತುವಿಕೆ, ಸೇರುವಿಕೆ
**ಎರ್ದೆವಱಲ್** – ಎದೆಯ ಅಳಲು
**ಎರ್ದೆವುಗು** – ಎದೆಯನ್ನು ಹೊಗು; ಮನಸ್ಸನ್ನು ಸೇರು
**ಎರ್ದೆವೇೞಗ** – ಎದೆಬಿಚ್ಚಿ ಹೇಳು
**ಎರ್ಮೆ(ಮ್ಮೆ)ವೋರಿ** – ಎಮ್ಮೆಯ ಹೋರಿ, ಕೋಣ
**ಎಲರ್** – ಗಾಳಿ
**ಎಲರುಣಿ** – ಗಾಳಿಯನ್ನು ಉಣ್ಣುವಂಥದು, ಹಾವು
**ಎಲರ್ಗೆಳೆಯ** – ವಾಯುವಿನ ಮಿತ್ರ, ಅಗ್ನಿ
**ಎಲರ್ಚು** – ಚೇತನಗೊಳ್ಳು
**ಎಲರ್ವಟ್ಟೆ** – ಗಾಳಿವಟ್ಟೆ, ವಾಯುಮಾರ್ಗ
**ಎಲರ್ವೊಯ್ಲು** – ಗಾಳಿಯ ಹೊಡೆತ
**ಎಲವ** – ಬೂರುಗ, ಶಾಲ್ಮಲೀ
**ಎಲವೊ** – ತಿರಸ್ಕಾರ–ಕೋಪದಿಂದ ಕೂಡಿದ ಸಂಬೋಧನೆ–
**ಎಲುವಡೆ** – ಹೊಳಪು ಹೊಂದು
**ಎಲೆ** – ಆಶ್ಚರ್ಯಸೂಚಕವಾದ ಅವ್ಯಯ
**ಎಲೆಗೆ** – ಹೆಂಗಸನ್ನು ಸಂಬೋಧಿಸುವ ರೀತಿ
**ಎಲೆಮಿಡುಕು** – ಎಲೆಯಂತೆ ಅಲುಗಾಡು(ವುದು)
**ಎಲೆಯಿಕ್ಕು** – ಚಿಗುರು
**ಎಲೆವನಿ** – ಎಲೆ+ಪನಿ, ಎಲೆಯಿಂದ ಬೀಳುವ ಹನಿ
**ಎಲೆವರದು** – ಎಲೆ+ಪರದು, ಎಲೆಯ ವ್ಯಾಪಾರ
**ಎಲೆವಸರ** – ಎಲೆ+ಪಸರ, ಎಲೆಯ ಅಂಗಡಿ
**ಎಲೆವಿಜ್ಜಣಿಗೆ** – ಎಲೆ+ಬಿಜ್ಜಣಿಗೆ, ಎಲೆಯ ಬೀಸಣಿಗೆ
**ಎಲೆಲೊ** – ತಿರಸ್ಕಾರದಿಂದ ಗಂಡಸನ್ನು ಸಂಬೋಧಿಸುವ ಬಗೆ
**ಎಲ್ಲದು** – ಎಲ್ಲ, ಸಮಸ್ತ
**ಎಲ್ಲಿತು(ತ್ತು)** – ಎಲ್ಲಿಯದು, ಎಲ್ಲಿರುವುದು
**ಎಲ್ಲಿದ** – ಎಲ್ಲಿಯವನು
**ಎಲ್ವಡಗು** – (ಎಲ್ವು+ಅಡಗು) ಮೂಳೆ ಮಾಂಸ
**ಎಲ್ವು** – ಎಲುಬು, ಮೂಳೆ
**ಎವುೞ್** – ಎಂಜಲು
**ಎವೆದೆಱೆಯಿಸು** – ಕಣ್ಣು ತೆರೆಸು
**ಎವೆಯಿಕ್ಕದರ್** – ಕಣ್ಣು ರೆಪ್ಪೆ ಮಿಟುಕಿಸದವರು, ದೇವತೆಗಳು
**ಎಸಕ** – ಕಾಂತಿ; ವೈಭವ; ಅತಿಶಯ; ಕೆಲಸ; ವ್ಯವಹಾರ; ಉದ್ಯೋಗ; ವ್ರತ
**ಎಸಕಂಗಾಯ್** – ಕರ್ತವ್ಯಪಾಲಿಸು
**ಎಸಕಂಗಿಡು** – ಕಾಂತಿಗುಂದು; ಕೆಲಸಗೆಡು
**ಎಸಕಂಬೆಱು** – ಕಾಂತಿಯುಕ್ತವಾಗು
**ಎಸಗಿಸು** – ಉಂಟುಮಾಡಿಸು
**ಎಸಗು** – ಮಾಡು; ಒದಗಿಸು; ರಥ ನಡೆಸು; ಗಾಳಿ ಬೀಸು; ಯತ್ನಿಸು
**ಎಸಡಿ(ಡು)** – ಏಡಿ; ಆಮೆ
**ಎಸಪಂ** – ನಡೆಸುವವನು, ಸಾರಥಿ

**ಎಸರ್ಗೊಳ್** – ಕುದಿಯಲು ತೊಡಗು
**ಎಸರ್** – ಎಸರು, ಅಡಿಗೆಗೆಂದು ಕುದಿಯುವ ನೀರು
**ಎಸೞ್** – ಎಸಳು, ಹೂವಿನ ಪಕಳೆ
**ಎಸೞ್ಗಣ್** – ಹೂಗಣ್ಣು
**ಎಸೞ್ಮಸಗು** – ದಳಗಳು ಅರಳು
**ಎಸೞ್ಮಸುಗು** – ದಳ ಅಲ್ಲಾಡು
**ಎಸೞ್ವಳಸು** – ಎಸಳಂತೆ ಬಳಿ, ಹರಡು
**ಎಸೞ್ವಳಿ** – ಎಸಳ ಬಳಿ, ಹತ್ತಿರ
**ಎಸಳೞ್ವಾಸು** – ಹೂವಿನ ಹಾಸು
**ಎಸೞ್ವೊರೆ** – ಹೂವಿನ ಹೊರೆ
**ಎಸು** – ಭಾಣಪ್ರಯೋಗಿಸು
**ಎಸುಗೆ** – ಎಸೆತ
**ಎಸೆ** – ಬಾಣ ಪ್ರಯೋಗಿಸು; ಬಿಸುಡು; ಶೋಭಿಸು
**ಎಹಗೆ** – ಹೇಗೆ
**ಎಳ್** – ಎಳ್ಳು, ತಿಲ
**ಎಳಕ** – ಅಲುಗಾಟ
**ಎಳಗಂದಿ** – ಈದು ಕೆಲವೇ ಕಾಲವಾಗಿರುವ ಹಸು, ಎಮ್ಮೆ; ನವಪ್ರಸೂತ ಪ್ರಾಣಿ
**ಎಳಗಂಪು** – ನಸುಗಂಪು
**ಎಳಗಳಕೆ** – ಎಳೆಯ ಮೊಗ್ಗು
**ಎಳಗಱುಂಕೆ** – ಚಿಗುರು ಗರಿಕೆ
**ಎಳಗಾಯ್** – ಹೀಚುಗಾಯಿ
**ಎಳಗಾರ್** – ಮುಂಗಾರು, ಮಳೆಗಾಲದ ಆರಂಭ
**ಎಳಗಾವು** – ಕೋಮಲವಾದ ಹೂದಂಟು
**ಎಳಗಿಳವಿಂಡು** – ಮರಿಗಿಳಿಗಳ ಹಿಂಡು
**ಎಳಗೂಸು** – ಎಳೆಯ ಮಗು
**ಎಳಗೆಂಪು** – ನಸುಗೆಂಪು
**ಎಳಗೊಂಬು** – ಎಳೆಯ ಕೊಂಬೆ
**ಎಳಗೊನರ್** – ಎಳೆಯ ಕುಡಿ
**ಎಳಗೌಂಗು** – ಎಳೆಯ ಅಡಕೆಮರ
**ಎಳಜವ್ವನೆ** – ಎಳೆಯ ಹರೆಯದವಳು
**ಎಳಜೊನ್ನ** – ನಸು ಬೆಳದಿಂಗಳು
**ಎಳದಳರ್** – ಎಳೆಯ ಚಿಗುರು
**ಎಳ(ಳೆ)ದಳಸು** – ಎಳವೆಯಿಂದ ಹೊಳೆ
**ಎಳದಾವರೆ** – ಏಳೆಯ ತಾವರೆ
**ಎಳದಿಂಗಳ್** – ಎಳೆಯ ಚಂದ್ರ, ಬಾಲಚಂದ್ರ
**ಎಳದು** – ಎಳೆಯ; ಕೋಮಲವಾದ; ಅಲುಗಾಡು
**ಎಳದೆಂಗು** – ಎಳೆಯ ತೆಂಗು, ಎಳನೀರು ಕಾಯಿ
**ಎಳನನೆ** – ಎಳೆಯ ಮೊಗ್ಗು
**ಎಳನವಿಲ್** – ನವಿಲಿ ಮರಿ
**ಎಳನೀರ್** – ಸೀಯಾಳ
**ಎಳನೀರ್ವೂ** – ಎಳೆಯ ತಾವರೆ
**ಎಳನೀರ್ವೊನಲ್** – ತಿಳಿನೀರಿನ ಪ್ರವಾಹ
**ಎಳನೀಲ** – ರಾಜಾವರ್ತ ಎಂಬ ರತ್ನ
**ಎಳ(ಳೆ)ನೇಸೞ್** – ಬಾಲಸೂರ್ಯ
**ಎಳಮನ** – ಕೋಮಲ ಮನಸ್ಸು
**ಎಳಮಾಮರ** – ಎಳೆಯ ಮಾವಿನ ಮರ
**ಎಳಮಾವು** – ಎಳಮಾಮರ
**ಎಳಮಿಂಚು** – ಚಿಕ್ಕ ಮಿಂಚು
**ಎಳಮುತ್ತು** – ಸಣ್ಣ ಮುತ್ತು
**ಎಳವರ** – ಎಳೆಯ ಮರ
**ಎಳವಸಲೆ** – ಎಳೆಯ ಹಸಲೆ, ಹುಲ್ಲು
**ಎಳವಸಿಱ್** – ಎಳೆಯ ಬಸಿರು, ಬಸಿರಿನ ಪ್ರಾರಂಭದ ಹಂತ
**ಎಳವಳಕು** – ಎಳೆಯ ಸ್ಫಟಿಕ
**ಎಳವಳ್ಳಿ** – ಎಳೆಯ ಬಳ್ಳಿ
**ಎಳವಾಸು** – ಮೃದುವಾದ ಹಾಸಿಗೆ
**ಎಳವಾಸೆ** – ಎಳೆಯ ಹಾವಸೆ, ಪಾಚಿ
**ಎಳವಾಳೆ** – ಬಾಳೆಯ ಮೀನು
**ಎಳವಾೞೆ** – ಎಳೆಯ ಬಾಳೆಗಿಡ
**ಎಳವಿದಿರ್** – ಎಳೆಯ ಬಿದಿರು
**ಎಳವಿಸಿಲ್** – ಎಳೆ ಬಿಸಿಲು
**ಎಳವು** – ಆಜ್ಞೆಮಾಡು
**ಎಳವುಲ್** – ಎಳೆಯ ಹುಲ್ಲು
**ಎಳವುೞಿಲ್ದಾಣ** – ಎಳೆಯ ಮರಗಳ ತೋಪಿನ ಜಾಗ
**ಎಳವೆಣ್** – ಎಳೆಯ ಹೆಣ್ಣು
**ಎಳವೆಳಗು** – ನಸು ಬೆಳಕು
**ಎಳವೇಟ** – ಪ್ರೇಮಾಂಕುರ
**ಎಳವೆೞೆ** – ಎಳೆಯ ಚಂದ್ರ
**ಎಳಸು** – ಆಸೆಪಡು; ವ್ಯಾಪಿಸು
**ಎಳಱು** – ಹೆದರು
**ಎಳೆ** – ಇಳಾ, ಭೂಮಿ
**ಎಳೆಗನ್ನಡವಕ್ಕಿ** – ಎಳೆಯ ಕನ್ನಡವಕ್ಕಿ; ಮರಿಗಿಳಿ
**ಎಳೆತಳಲ್** – ಚಿಗುರು
**ಎಳೆತೆಗೆ** – ಜಗ್ಗುವಿಕೆ
**ಎಳೆದೇರ** – ಭೂಮಿಯನ್ನೇ ರಥವಾಗುಳ್ಳವನು, ಈಶ್ವರ
**ಎಳ್ಕಳ** – ಯುದ್ಧಕಣ
**ಎಳ್ತರ** – ಎತ್ತರ; ಅಟಾಟೋಪ
**ಎಳ್ಳನಿತು** – ಏಳ್ಳಿನಷ್ಟು, ಸ್ವಲ್ಪ
**ಎಳ್ಳುಂಡೆ** – ಎಳ್ಳಿನ ಉಂಡೆ
**ಎಳ್ಳುನೀರೆಱೆ** – ಎಳ್ಳುನೀರು ಬಿಡು; ತ್ಯಜಿಸು
**ಎಱಂಕೆ** –ರೆಕ್ಕೆ
**ಎಱಂಕೆವಿಡಿ** – ರೆಕ್ಕೆಯನ್ನುಸರಿಸು
**ಎಱಕ** – ಪ್ರೀತಿ; ನಮಸ್ಕಾರ
**ಎಱಕಂಬೆರು** – ಪ್ರೀತಿ ಹೊಂದು; ಎರಕ ಹೊಯ್ಯು
**ಎಱಕೆವೆಟ್ಟು** – ರೆಕ್ಕೆಯುಳ್ಳ ಬೆಟ್ಟ
**ಎಱಗಿಸು** – ಬಾಗಿಸು, ನಮಸ್ಕರಿಸುವಂತೆ ಮಾಡು
**ಎಱಗು** – ನಮಸ್ಕರಿಸು; ಮೇಲೆ ಬೀಳು; ಮೂರ್ಖತನ
**ಎಱಗುಹ** – ಮೇಲೆ ಬೀಳುವಿಕೆ
**ಎಱಚು** – ಚೆಲ್ಲು
**ಎಱಪು** – ಬಾಗು

**ಎೞಲ್** – ಜೋಲು ಬೀಳು; ಕುಗ್ಗು

**ಎೞಲಿಕ್ಕು** – ಜೋಲು ಬೀಳು

**ಎಱವಟ್ಟು** – ಆಶ್ರಯ

**ಎಱವಿಱನಾದ** – ಎರ್ರಾಬಿರ್ರಿಯಾದ

**ಎಱೆ** – ಆಧಿಪತ್ಯ; ಸುರಿ; ಅತಿಶಯವಾಗು; ಆಶ್ರಯ

**ಎಱೆತನಿಗ** – ರಾಜನ ಸಂಬಂಧಿಕ

**ಎಱೆಯ** – ಒಡೆಯ; ಪ್ರಭು; ಪ್ರೀತಿಪಾತ್ರ

**ಎಱೆಯಿಸು** – ಸುರಿಸು

**ಎಱೆವಟ್ಟು** – ಆಶ್ರಯ

**ಎಱೆವಿಡಿ** – ಆಶ್ರಯ ಪಡೆ

**ಎಱೆವಿಱನಾಗು** – ಚದುರಿಹೋಗು; ಕಾಂತಿಹೀನವಾಗು

**ಎಱೆವೆಸ** – ಯಜಮಾನನ ಕೆಲಸ

**ಎಱೆವೆಸನ** – ಸುರಿಯುವ ಕೆಲಸ; ಒಡೆಯನ ಕೆಲಸ

**ಎೞಕುೞ** – ಸೆಳೆತ, ಆಕರ್ಷಣೆ

**ಎೞತೆ** – ನೇತಾಡುವಿಕೆ

**ಎೞಲ್** – ಜೋಲಾಡು; ಬಳಲು; ಮನಸೋಲು

**ಎೞಲಿಕ್ಕು** – ತೂಗು ಹಾಕು

**ಎೞಲ್ಚು** – ಎೞಲಿಕ್ಕು

**ಎೞಲ್ತರ್** – ಜೋಲಾಡು

**ಎೞವಾಡು** – ನೇವರಿಸು

**ಎೞವಿಸು** – ಎೞವಾಡು

**ಎೞವು** – ನೇವರಿಸು

**ಎೞೆ** – ಸೆಳೆದುಕೊ; ಆಕರ್ಷಿಸು; ನೂಲು

**ಎೞೆಕುೞಗೊಳ್** – ಆಕರ್ಷಿಸು

**ಎೞೆಗೋಣ** – ಎಳೆದು ತಂದ ಕೋಣ

**ಎೞೆಯಿಸು** – ಎಳೆಯುವ ಹಾಗೆ ಮಾಡು

**ಎೞೆಸು** – ಎೞೆಯಿಸು

**ಎೞ್ಚಱ್** – ಎಚ್ಚರಗೊಳ್ಳು; ಜಾಗರೂಕತೆಯಿಂದಿರು; ಎಚ್ಚರ; ಜಾಗರೂಕತೆ

**ಎೞ್ಚರಿಕೆ** – ಎಚ್ಚರಿಕೆ; ಜಾಗರೂಕತೆ

**ಎೞ್ಚಱಿಸು** – ಎಬ್ಬಿಸು, ಎಚ್ಚರಗೊಳಿಸು

**ಎೞ್ಚಱು** – ಎಚ್ಚರಗೊಳ್ಳು

**ಎೞ್ಚಱುಗೆಡು** – ಎಚ್ಚರ ತಪ್ಪು; ಮೂರ್ಚೆ ಹೋಗು

**ಎೞ್ತರ್** – ಸಮೀಪಿಸು

**ಎೞ್ತರ** – ಎತ್ತರ; ಏಳಿಗೆ; ಅಗ್ಗಳಿಕೆ

**ಎೞ್ಚಱು** – ಎಚ್ಚರಗೊಳ್ಳು

**ಎೞ್ತರವು** – ಬರುವಿಕೆ

**ಎೞ್ತು** – ಗೂಳಿ; ಮಂಚದ ಹಗ್ಗ

**ಎೞ್ದಾಡು** – ಎದ್ದು ನರ್ತಿಸು

**ಎೞ್ಬಟ್ಟು** – ಅಟ್ಟಿಸಿಕೊಂಡು ಹೋಗು

**ಎೞ್ಪೋಗು** – ಎದ್ದು ಹೋಗು

**ಎೞ್ಚಿಸು** – ಎಚ್ಚರಗೊಳಿಸು

**ಎೞ್ಬು** – ಮೇಲೆಬ್ಬಿಸು

**ಎೞ್ಬೆಸನ** – ಸಪ್ತವ್ಯಸನಗಳು

## ಏ

**ಏಂ** – ಏನು

**ಏಕ** – ಒಂದು; ಸಮಾನವಿಲ್ಲದ; ಮುಖ್ಯ

**ಏಕಕ** – ಒಬ್ಬಂಟಿ

**ಏಕಕುಂಡಲ** – ಒಂಟಿ ಕುಂಡಲವನ್ನು ಧರಿಸಿದವನು; ಕುಬೇರ; ಬಲರಾಮ; (ಜೈನ) ಶ್ರೀರಾಮ

**ಏಕಕ್ರಿಯೆ** – ಒಟ್ಟುಗೂಡಿಸುವುದು

**ಏಕಗ್ರಾಹಿ** – ಒಂದೇ ಪಟ್ಟು ಹಿಡಿದವನು; ಹಟವಾದಿ

**ಏಕಚಕ್ರ** – ಒಬ್ಬನೇ ರಾಜನ ಆಳ್ವಿಕೆಗೊಳಪಟ್ಟದ್ದು

**ಏಕಚ್ಛತ್ರಚ್ಛಾಯೆ** – ಒಂದೇ ಕೊಡೆಯ ನೆರಳು; ಒಬ್ಬ ರಾಜನ ಆಳ್ವಿಕೆ

**ಏಕಚ್ಛತ್ರೀಕೃತ** – ಒಂದೇ ಆಳ್ವಿಕೆಗೊಳಪಡಿಸಿದ

**ಏ ಕಜ್ಜಂ** – ಏನು ಕೆಲಸ? ನಿಷ್ಫಲ

**ಏಕದಂಡಿ** – ಒಂದು ದಂಡ ಧ್ರಿಸಿದ ಸನ್ಯಾಸಿ

**ಏಕಪತಿ** – ಒಬ್ಬನೇ ಒಡೆಯ

**ಏಕಪದ** – ಒಂದು ಪಾದ, ಒಂದು ಹೆಜ್ಜೆ

**ಏಕಪಾದಿ** – ಒಂದೇ ಪಾದವುಳ್ಳದ್ದು, ಒಂದು ಕಾಲಿನ ಮೇಲೆ ನಿಂತವನು

**ಏಕಪಾದಗತಿ** – ಒಂದೇ ಕಾಲಲ್ಲಿ ನಡೆಯುವುದು

**ಏಕಪಾದವ್ರತಸ್ಥ** – ಒಂದೆ ಕಾಲ ಮೇಲೆ ನಿಂತು ತಪಸ್ಸು ಮಾಡುವವನು

**ಏಕಪ್ರಕಾರ** – ಒಂದೇ ವಿಧ

**ಏಕಭುಕ್ತ** – ಒಂದೇ ಹೊತ್ತು ಊಟಮಾಡುವುದು

**ಏಕಮತ** – ಒಂದೇ ಅಭಿಪ್ರಾಯ

**ಏಕರಸ** – ಒಂದೇ ರಸ; ಸಮರಸ

**ಏಕರೂಪ** – ಒಂದೇ ರೂಪ

**ಏಕರೂಪಾಧೀನ** – ಒಂದೇ ರೂಪಕ್ಕೆ ಒಳಪಟ್ಟ

**ಏಕವಣ್** – ಒಂದೇ ಬಣ್ಣ

**ಏಕವಾಕ್ಯ** – ಒಂದೇ ಮಾತಾಡುವವನು, ಸತ್ಯವಂತ

**ಏಕವಿಹಾರಿ** – ಒಬ್ಬನೇ ಸಂಚರಿಸುವವನು

**ಏಕಶೇಷ** – ಒಂಟಿ ಉಳಿದ

**ಏಕಸಂಧಿ** – ಒಂದು ಬಾರಿ ಕೇಳಿ ನೆನಪಿನಲ್ಲಿರಿಸಿಕೊಳ್ಳಬಲ್ಲವನು

**ಏಕಸಱೆ** – ಅಖಂಡಶಿಲೆ

**ಏಕಸಿಕ್ಥ** – ಒಂದೇ ಅಗುಳು ಆಹಾರ

**ಏಕಸ್ಥ** – ಒಂದೇ ಆಗಿರುವ

**ಏಕಾಂಗ** – ಒಬ್ಬನೇ

**ಏಕಾಂಗವಿಜಯ** – ಒಬ್ಬನೇ ಯುದ್ಧಮಾಡಿ ಪಡೆಯುವ ಗೆಲವು

**ಏಕಾಂಗವೀರ** – ಒಬ್ಬನೇ ಯುದ್ಧಮಾಡುವವನು

**ಏಕಾಂತ** – ಗುಟ್ಟು

**ಏಕಾಂತನಿಕೇತನ** – ಗುಟ್ಟಿನ ಮನೆ; ಮಂತ್ರಾಲೋಚನೆ ಮಾಡುವ ಮನೆ

**ಏಕಾಕಿನಿ** – ಒಬ್ಬಂಟಿ ಹೆಂಗಸು

**ಏಕಾಕೃತಿ** – ಒಂದೇ ಆಕಾರ

**ಏಕಾಗ್ರ** – ಒಂದೇ ವಿಷಯದ ಮೇಲೆ ಗಮನವಿರುವ

**ಏಕಾಗ್ರಚಿತ್ತ** – ಒಂದೇ ವಿಷಯದ ಮೇಲೆ ಕೇಂದ್ರೀಕರಿಸಿರುವ ಮನಸ್ಸು (ಉಳ್ಳವನು)

**ಏಕಾಗ್ರಗಮನ** – ಒಂದೇ ವಿಷಯದ ಮೇಲೆ ಗಮನವಿರಿಸಿರುವುದು

**ಏಕಾತಪತ್ರ** – ಒಂದೇ ಕೊಡೆ

**ಏಕಾತ್ಮಜ** – ಒಂದೇ ಆತ್ಮದಲ್ಲಿ ಹುಟ್ಟಿದ

**ಏಕಾದಶಧಾರಿ** – (ಜೈನ) ದ್ವಾದಶಾಂಗಗಳಲ್ಲಿ ಹನ್ನೊಂದನ್ನು ಮಾತ್ರ ತಿಳಿದವನು

**ಏಕಾದಶನಿಳಯ** – (ಜೈನ) ಶ್ರಾವಕರು ಆಚರಿಸಬೇಕಾದ ಹನ್ನೊಂದು ವಿಧಿಗಳು : ದರ್ಶನ, ವ್ರತ, ಸಾಮಯಿಕ, ಪ್ರೋಷದೋಪವಾಸ, ಸಚಿತ್ತವಿರತಿ, ರಾತ್ರಿಭುಕ್ತಿತ್ಯಾಗ, ಬ್ರಹ್ಮಚರ್ಯೆ, ಆರಂಭತ್ಯಾಗ, ಪರಿಗ್ರಹತ್ಯಾಗ, ಅನುಮತಿತ್ಯಾಗ, ಉದಿಷ್ಟತ್ಯಾಗ

**ಏಕಾದಶರುದ್ರ** – ಹನ್ನೊಂದು ಬಾರು ರುದ್ರಜಪ ಮಾಡಿ ಅಭಿಷೇಕ ಮಾಡುವ ಕ್ರಮ

**ಏಕಾದಶಸ್ಥಾನ** – ಏಕಾದಶನಿಳಯ

**ಏಕದಶಾಂಗಧರ** – ಏಕಾದಶಧಾರಿ

**ಏಕದಶಾಂಗಧಾರ** – ಏಕದಶಾಂಗಧರ

**ಏಕದಶಾಂಗಧಾರಿ** –ಏಕದಶಾಂಗಧಾರ

**ಏಕವಿಹಾರಿ** – (ಜೈನ) ಒಂಟಿಯಾಗಿ ಸಂಚರಿಸುವ ಸಾಧು

**ಏಕಾಯತಮಾನಸ** – ಏಕಾಗ್ರಚಿತ್ತ

**ಏಕಾಯತ್ತ** – ಒಂದಕ್ಕೆ ವಶವಾದ

**ಏಕಾರಣ** – ಯಾವ ಕಾರಣ

**ಏಕಾರ್ಣವ** – ಒಂದು ಸಮುದ್ರದಂತೆ ನೀರು ತುಂಬಿರುವ

**ಏಕಾವಲಿ(ಳಿ)** – ಒಂದೆಳೆಯ ಸರ

**ಏಕಾಶ್ರಯ** – ಒಂದೇ ಆಶ್ರಯ; ಸಮಾನ ಆಶ್ರಯ

**ಏಕೀಕತ** – ಒಂದಾದ

**ಏಕೀಭೂತ** – ಒಂದರಲ್ಲಿ ಸೇರಿದ

**ಏಕೈಕ** – ಒಂದೇ ಒಂದು

**ಏಕೋಕ್ತಿ** – ಒಂದೇ ಪದ

**ಏಕೋತ್ತರವೃದ್ಧಿ** – ಒಂದೊಂದಾಗಿ ಹೆಚ್ಚುವಿಕೆ

**ಏಕೋದರ** – ಸಹೋದರ

**ಏಗಂ** – ನಿಶ್ಚಿತವಾಗಿ

**ಏಗಳ್** – ಯಾವಾಗ, ಯಾವಾಗಲೂ

**ಏಗುಂ** – ಯಾವಾಗಲೂ

**ಏಗು** – ಏನು ಮಾಡು, ಏನುಪಯೋಗ

**ಏಗೆಡು** – ಏನು ಕೆಡುವುದು

**ಏಗೆಯ್ ಏನು ಮಾಡು**–

**ಏಗೊಳ್** – ಒಪ್ಪು, ಸಮ್ಮತಿಸು

**ಏಟವಿಟ** – ಕ್ಷುದ್ರ ವಿಟ

**ಏಡ** – ಕಿವುಡ

**ಏಡಿಸು** – ಅಪಹಾಸ್ಯಮಾಡು, ಅವಹೇಳಿಸು

**ಏಡು** – ಕೊಳೆ

**ಏಣ್** – ಅಂಚು

**ಏಣ** – ಜಿಂಕೆ

**ಏಣಗೋಣತನ** – ಕೊಂಕುಮಾತು, ಚುಚ್ಚುಮಾತು

**ಏಣವಾಹನ** – ಜಿಂಕೆಯ ವಾಹನದವನು, ವಾಯು

**ಏಣಾಂಕ** – ಜಿಂಕೆಯ ಗುರುತುಳ್ಳವನು, ಚಂದ್ರ

**ಏಣಾಕ್ಷಿ** – ಜಿಂಕೆಯಂತಹ ಚಂಚಲ ಕಣ್ಣುಳ್ಳವಳು

**ಏಣಿ** – ಹೆಣ್ಣು ಜಿಂಕೆ; ನಿಚ್ಚಣಿಕೆ

**ಏಣೀದೃಶೆ** – ಏಣಾಕ್ಷಿ

**ಏತ** – ಮೇಲೇರುವುದು; ನೀರೆತ್ತುವ ಸಾಧನ

**ಏತೊದಳ್** – ಏನು ಸುಳ್ಳು

**ಏದಟ್ಟು** – ಏದುಸಿರುಬಿಡುವಂತೆ ಅಟ್ಟಿಸಿಕೊಂಡು ಹೋಗು

**ಏದೊರೆತು** – ಯಾವ ಬಗೆಯದು, ಎಂತಹುದು

**ಏನ** – ಪಾಪ

**ಏನಸ್ಸಂತಾನ** – ಪಾಪಸಮೂಹ

**ಏನೋಹರ** – ಪಾಪನಿವಾರಕ

**ಏಪೊತ್ತುಂ** –ಯಾವ ಹೊತ್ತಿಲ್ಲಿಯೂ; ಎಲ್ಲ ವೇಳೆಯಲ್ಲೂ

**ಏಬಂ(ಭಂ)ಡ** – ಯಾವ ವಸ್ತು; ಏನು ಉಪಯೋಗ; ಏನು ಲೆಕ್ಕ

**ಏಬಾಟಿ್ತ** – ನಿಷ್ಪ್ರಯೋಜಕ

**ಏರ್** – ನೊಗ–ಎತ್ತುಗಳನ್ನು ಕಟ್ಟಿದ ನೇಗಿಲು–

**ಏರಂಡ** – ಔಡಲ ಗಿಡ

**ಏರಣಿಗ** – ಅಕ್ಕಸಾಲೆ, ಚಿನಿವಾರ

**ಏರಿ** –ಕೆರೆಯ ಕಟ್ಟೆ

**ಏರ್ಪೞು** – ಗಾಯಗೊಳ್ಳು

**ಏರ್ವಡೆ** – ಏರ್ಪೞು

**ಏರ್ವೆಸ(ನ)** – ಯುದ್ಧಕಾರ್ಯ; ಯುದ್ಧ ಪ್ರಯತ್ನ

**ಏರ್ವೆ(ಬೆ)ಸನ** – ಏರ್ವೆಸ(ನ)

**ಏಲೆ** – ಏಲಕ್ಕಿ

**ಏವ** – ಬೇಸರ; ವ್ಯಥೆ; ಮತ್ಸರ; ಜಿಗುಪ್ಸೆ; ಉಪೇಕ್ಷೆ; ದ್ವೇಷ; ನಾಚಿಕೆ ಪದ್ಧತಿ; ರೂಢಿ; ಮಾರ್ಗ

**ಏವಂಗೊಳ್** – ಸಿಟ್ಟು ಮಾಡಿಕೊ

**ಏವಂಬಡೆ** – ಮಾತ್ಸರ್ಯಹೊಂದು

**ಏವಣ್ಣಿಸು** – ಏನು ತಾನೆ ವರ್ಣಿಸು

**ಏವಯಿಸು** – ನೋಯು; ಹೇಸಿಕೆಪಡು

**ಏವರ್** – ಏನು ಬರು; ಏನು ಮಾಡುವರು

**ಏವಾಟಿ್ತ(ಲ್ತಿ)** – ಏನು ಪ್ರಯೋಜನ

**ಏವಿರಿದು** – ಏನು ದೊಡ್ಡದು, ಯಾವ ಮಹತ್ವದ್ದು

**ಏವುದು** – ಏನು ಮಾಡುವುದು

**ಏವೇೞ್** – ಏನು ಹೇಳು

**ಏವೊಗೞ್** – ಏನೆಂದು ಹೊಗಲು

**ಏವೊೞ್ತುಂ** – ಯಾವ ಹೊತ್ತಿಲ್ಲಿಯೂ; ಎಲ್ಲ ವೇಳೆಯಲ್ಲೂ

**ಏವೋಗು** – ಏಕೆ ಹೋಗು

**ಏಷಣಾಸಮಿತಿ** – (ಜೈನ) ಸಾದಕನು ರತ್ನತ್ರಯಭಾವನೆಯಿಂದ ಪ್ರಾಸುಕಾಹಾರವನ್ನು ತೊರೆದು ಸಮಚಿತ್ತದಿಂದ ಊಟಮಾಡುವುದು
**ಏಸಾಡು** – ಬಾಣ ಪ್ರಯೋಗಮಾಡು
**ಏಸು** – ಎಷ್ಟು; ಬಾಣಪ್ರಯೋಗ ಮಾಡು(ವುದು)
**ಏಸುವೆಸ(ನ)** – ಬಾಣಪ್ರಯೋಗ
**ಏಸುವೆೞು** – ಬಾಣದಿಂದ ಗಾಯಗೊಳ್ಳು
**ಏಳಗ** – ಟಗರು
**ಏಳಾ** – ಏಲಕ್ಕಿ
**ಏಳಾಗಂಧ** – ಏಲಕ್ಕಿಯ ವಾಸನೆ
**ಏಳಾವನ** – ಏಲಕ್ಕಿ ತೋಟ
**ಏಳಿದ** – ತಿರಸ್ಕಾರ; ಅವಮಾನ; ನಿಕೃಷ್ಟ
**ಏಳಿದಂಗೆಯ್** – ತಿರಸ್ಕಾರ ಮಾಡು
**ಏಳಿದಂಬಗೆ** – ತಿರಸ್ಕಾರದಿಂದ ಕಾಣು
**ಏಳಿದಂಮಾೞು** – ಏಳಿದಂಗೆಯ್
**ಏಳಿದಿಕೆ(ಕ್ಕೆ)** – ಅವಜ್ಞೆ; ತಿರಸ್ಕಾರ
**ಏಳಿಸು** – ತಿರಸ್ಕಾರಮಾಡು; ಅವಹೇಳನಗೈ
**ಏೞ್(ೞು)** – ಏಟು, ಹೊಡೆತ; ಹತ್ತುವಿಕೆ; ಗಾಯ; ಈಟಿ; ವಾಹನ
**ಏೞಲಿಕ್ಕು** – ಪೀಠ ನೀಡು
**ಏೞನೂಂಕು** – ಮೇಲಕ್ಕೆ ನೂಕು
**ಏಱೆ** – ಕಟ್ಟೆ
**ಏಱೆಟ್ಟಿ** – ಯುದ್ಧ ಮಾಡಲು ಬಳಸುವ ಈಟಿ
**ಏಱಿಸು** – ಮೇಲಕ್ಕೆ ಹತ್ತಿಸು; ಹೆದೆಯೇರಿಸು; ಹೆಚ್ಚು ಮಾಡು; ಸ್ವೀಕರಿಸು
**ಏಱು** – ಗಾಯ; ಹೊಡೆತ
**ಏಱು(ಂ)ಜವ್ವನ** – ಹೆಚ್ಚಾಗುತ್ತಿರುವ ಯೌವನ; ಹೊಸ ಹರೆಯ
**ಏಱು(ಂ)ಜವ್ವನೆ** – ಏಱು(ಂ)ಜವ್ವನವನ್ನು ಪಡೆದವಳು
**ಏಱುಗಾಣ್** – ಗಾಯ ಹೊಂದು
**ಏಱುವೇೞ್** – ಯುದ್ಧಗಳನ್ನು ಹೇಳುವ
**ಏೞ್** – ಏಳು; ಎಚ್ಚರಗೊಳ್ಳು; ಒಂದು ಸಂಖ್ಯೆ
**ಏೞಗ** – ಏಳಗ, ಟಗರು
**ಏೞಡಿ** – (ಆಪ್ತರೊಡನೆ ಇಡುವ) ಏಳು ಹೆಜ್ಜೆ
**ಏೞಿದಿಕೆ** – ತಿರಸ್ಕಾರ
**ಏೞೆಲೆವಾೞೆ** – ಏಳು ಎಲೆಗಳುಳ್ಳ ಬಾಳೆ
**ಏೞ್ಗಟ್ಟು** – (ಏಡು+ಕಟ್ಟು,) ವರ್ಷಗಳ ಅವಧಿಯ ಕಟ್ಟುಪಾಡು
**ಏೞ್ಗಯ್ಯ** – ಏಳೆ ಕೈಗಳುಳ್ಳವನು, ಅಗ್ನಿ
**ಏೞ್ಗೆಗುಂದು** – ಏಳಿಗೆ ಇಳಿಕೆಗೊಳ್ಳು
**ಏೞ್ಗೆಗೆಡು** – ಏೞ್ಗೆಗುಂದು
**ಏೞ್ಗೆವಡೆ** – ಏಳಿಗೆ ಹೊಂದು
**ಏೞ್ಗೆವಾಡಿವ** – (ಚಂದ್ರ ಬೆಳೆಯುವ ಕಾಲದ, ಅಂದರೆ ಶುಕ್ಲಪಕ್ಷದ) ಪಾಡ್ಯ)
**ಏೞ್ಗೆವೆೞು** – ಏೞ್ಗೆವಡೆ
**ಏೞ್ತರ** – ಆಡಂಬರ

## ಐ

**ಐಂದವ** – ಇಂದು ಅಥವಾ ಚಂದ್ರನಿಗೆ ಸಂಬಂಧಿಸಿದ; ಬೆಳುದಿಂಗಳು; ಚಂದ್ರನ ಮಗ, ಬುಧ
**ಐಂದವಬಿಂಬ** – ಚಂದ್ರಬಿಂಬ
**ಐಂದವಕಲೆ** – ಚಂದ್ರನ ಕಲೆ
**ಐಂದವಾೞೆ** – ಒಂದು ಬಗೆಯ ಬಾಳೆ ಹಣ್ಣು
**ಐಂದ್ರ** – ಇಂದ್ರನಿಗೆ ಸಂಬಂಧಿಸಿದ
**ಐಂದ್ರದಿಶೆ** – ಇಂದ್ರದಿಕ್ಕು, ಪೂರ್ವ
**ಐಂದ್ರಧ್ವಜ** – ಇಂದ್ರನ ಧ್ವಜ; (ಜೈನ) ಇಂದ್ರ ಮಾಡುವ ಜಿನಪೂಜೆ
**ಐಂದ್ರಿ** – ಇಂದ್ರನ ಮಡದಿ, ಶಚೀದೇವಿ
**ಐಕಿಲ್** – ಚಳಿ
**ಐನಸ** – ಪಾಪ
**ಐರಣೆ** – ಮಂಗಳಸೂಚಕ ಚಿತ್ರ ಬರೆದ ಗಡಿಗೆ
**ಐರಾವಣ(ತ)** – ಇಂದ್ರನ ಆನೆ
**ಐಶ್ವರ್ಯ** – ಅಧಿಕಾರ; ಶಕ್ತಿ; ಭಾಗ್ಯ
**ಐಷೀಕ** – ದರ್ಭೆಯ ಅಸ್ತ್ರ
**ಐಹಿಕ** – ಇಹಲೋಕ್ಕೆ ಸಂಬಂಧಿಸಿದ
**ಐಳಬಿಳ** – ಕುಬೇರ

## ಒ

**ಒಂತಿ** – ಓತಿಕೇತ
**ಒಂದವಿಂದ** – (ಒಂದು) ಸೋಜಿಗ
**ಒಂದವಿಂದಿ** – ಒಂದು ಗುಂಪಿಗೆ ಸೇರಿದ
**ಒಂದವಿಂದಿಗ** – ಒಂದು ಗುಂಪಿಗೆ ಸೇರಿದವನು
**ಒಂದಿಗ** – ಜೊತೆಯವನು
**ಒಂದಸು** – ಕೂಡಿಸು; ಜೋಡಿಸು
**ಒಂದು** – ಕೂಡು, ಸೇರು; ಪಡೆ, ಹೊಂದು; ಹೊಂದಿಕೊ; ಒಂದು ಸಂಖ್ಯೆ
**ಒಂದುಗುಂದು** – ಒಂದೂ (ಸ್ವಲ್ಪವೂ) ಕಡಿಮೆಯಾಗದೆ
**ಒಂದುಗೊಳ್** – ಒಂದ(ನೆಯದ)ನ್ನು ತೆಗೆದುಕೊ
**ಒಂದುಮಾಡು** – ಒಂದಾಗಿಸು, ಕೂಡಿಸು
**ಒಂದೆ ಮೆಯ್ಯೊಳ್** – ಏಕಾಂಗಿಯಾಗಿ
**ಒಂದೆವಸ** – ಒಂದು ದಿವಸ
**ಒಂದೆವೞೆಗುಟ್ಟು** – ಒಂದೇ ತಮಟೆಯನ್ನು ಹೊಡೆ
**ಒಂದೆಸಕ** – ಇಡಿಯಾದ ಒಂದು ಆಚರಣೆ
**ಒಂದೆಸೆ** – ಒಂದು ದೆಸೆ, ದಿಕ್ಕು, ಕಡೆ
**ಒಂದೊರ್ವರ್** – ಒಬ್ಬೊಬ್ಬರು
**ಒಕ್ಕಣ** – ಒಕ್ಕುವ ಕೆಲಸ
**ಒಕ್ಕಲ್** – ಗುಂಪು; ಮನೆತನ; ಬೇಸಾಯಗಾರ
**ಒಕ್ಕಲಾಗು** – ಬಾಳು, ಜೀವಿಸು

**ಒಕ್ಕಲಿಕ್ಕು** – ಒಕ್ಕಣ ಮಾಡು, ಬಡಿ, ಕೆದರು
**ಒಕ್ಕಲಿಗ** – ಬೇಸಾಯ ಮಾಡುವವನು
**ಒಕ್ಕಲಗಿತ್ತಿ** – ಬೇಸಾಯಗಿತ್ತಿ
**ಒಕ್ಕಲಿಸು** – ವ್ಯಾಪಿಸು
**ಒಕ್ಕಲುವೋಗಿಸು** – ಗುಳೇ ಹೋಗುವ ಹಾಗೆ ಮಾಡು; ಸಂಸಾರಸಹಿತವಾಗಿ ಕೊಲ್ಲು
**ಒಕ್ಕಳ** – ಒರ್+ಕಳ, ಒಂದು ಕೊಳಗ
**ಒಕ್ಕು** – ಹೊರಕ್ಕೆ ಸುರಿ; ಕಾಳು ಬೇರ್ಪಡಿಸು, ಒಕ್ಕಣ ಮಾಡು; ಶಕುನ
**ಒಗಂಟು(ವೇೞ್)** – ಒಗಟು ಹೇಳು; ಅರ್ಥ ತಿಳಿಯದಂತೆ ಹೇಳು
**ಒಗರಡಕೆ** – ಒಗರಾದ ಅಡಕೆ; ಹಸಿ (ಸಂಸ್ಕರಿಸದ) **ಅಡಕೆ–**
**ಒಗಸು** – ಇಷ್ಟವಾಗು
**ಒಗಸುಗಂ** – ಅತಿಶಯವಾಗು
**ಒಗು** – ಹೊರಸೂಸು; ಹೊಮ್ಮುವಿಕೆ
**ಒಗುಮಿಗು** – ಆಧಿಕ್ಯ
**ಒಗೆ** – ಹುಟ್ಟು, ಕಾಣಿಸಿಕೊ; ವಸ್ತ್ರಪ್ರಕ್ಷಾಲನ, ಬಟ್ಟೆಯನ್ನು ಶುದ್ಧಗೊಳಿಸು
**ಒಗೆತರ್** – ಕಾಣಿಸಿಕೊ; ಉಂಟಾಗು
**ಒಗೆಯಿಸು** – ಉಂಟುಮಾಡು
**ಒಗ್ಗಡಿಸು** – ಒಂದಾಗು
**ಒಗ್ಗುಗೆಡು** – ಬೇರೆಯಾಗು
**ಒಚ್ಚತ** – ಸೇರಿದ; ಸೀಮಿತವಾದುದು
**ಒಚ್ಚತಂ** – ಒಂದೇ ಸಮನೆ; ಹೆಚ್ಚಾಗಿ; ಗಾಢವಾಗಿ
**ಒಚ್ಚತಂಗೊಳ್** – ಪಡೆದುಕೊ
**ಒಜ್ಜರ** – ಝರಿ, ಬೆಟ್ಟದಿಂದ ಹರಿಯುವ ನದಿ; ರಾಜಲಾಂಛನ
**ಒಜ್ಜರಂರಿ** – ಝರಿಯಂತೆ ರಭಸದಿಂದ ಹರಿ
**ಒಜ್ಜರಿಸು** – ಸುರಿಸು
**ಒಟ್ಟ** – (ಓಷ್ಠ) ತುಟಿ
**ಒಟ್ಟಜ** – ಕಪ್ಪ, ಕಾಣಿಕೆ
**ಒಟ್ಟಜೆ** – ಅತಿಶಯ; ಸಮೂಹ; ಪರಾಕ್ರಮ
**ಒಟ್ಟಜೆಕಾಱ** – ಪರಾಕ್ರಮಿ
**ಒಟ್ಟಜೆಗೆ(ಗಿ)ಡು** – ಗುಂಪು ಚೆದುರು
**ಒಟ್ಟಳ** – ಗಲಿಬಿಲಿ; ಕೋಲಾಹಲ
**ಒಟ್ಟಿಲ್** – ರಾಶಿ
**ಒಟ್ಟಿಸು** – ಒಟ್ಟಯಿಸು, ರಾಶಿಮಾಡು, ಪುಂಜೀಕರಣ
**ಒಟ್ಟು** – ರಾಶಿಮಾಡು; ರಾಶಿ; ಶಪಥ; ಆಣೆಮಾಡು
**ಒಟ್ಟೆ** – (ಉಷ್ಟ್ರ) ಒಂಟೆ
**ಒಟ್ಟೈಸು** – ಜಾರು; ಆಕ್ರಮಿಸು
**ಒಟ್ಟೆಗುತ್ತ** – ಅಡವಿಟ್ಟ ವಸ್ತು
**ಒಟ್ಟೊಟ್ಟಿಗ** – (ಕೆಟ್ಟ) ಸಹವಾಸದಲ್ಲಿರುವವನು
**ಒಡಂ** – ಸಹಿತವಾಗಿ; ಜೊತೆಯಾಗಿ
**ಒಡಂಗೊಳ್** – ಜೊತೆಯಲ್ಲಿ ಸೇರಿಸಿಕೊ
**ಒಡಂಬಡು** – ಒಪ್ಪಿಗೆ ಕೊಡು; ಅನುಮತಿ ನೀಡು; ಒಡಂಬಡಿಕೆ
**ಒಡಂಬಿ** – ಶರೀರ
**ಒಡಗಚ್ಚು** – ಪ್ರತಿಯಾಗಿ ಕಚ್ಚು
**ಒಡಗಲಸು** – ಸೇರು; ಸೇರಿಸು
**ಒಡಗಳೆ** – ಜೊತೆಯಲ್ಲಿ ಬಿಡು
**ಒಡಗಾಣ್** – ಜೊತೆಜೊತೆಗೆ ಕಾಣು
**ಒಡಗೂಡು** – ಜೊತೆಯಲ್ಲಿ ಸೇರು
**ಒಡನಡಸು** – ಜೊತೆಯಾಗಿ ನಡೆಸು
**ಒಡನಲಿ** – ಜೊತೆಯಲ್ಲಿ ಸಂತೋಷಿಸು
**ಒಡನಾಟ** – ಸಹವಾಸ, ಸ್ನೇಹ
**ಒಡನಾಡಿ** – ಜೊತೆಗಾರ
**ಒಡನಾಡಿಗ** – ಒಡನಾಡಿ
**ಒಡನಾಡು** – ಜೊತೆಯಲ್ಲಿ ಆಡು; ಸ್ನೇಹಮಾಡು
**ಒಡನಿರ್** – ಜೊತೆಯಲ್ಲಿರು
**ಒಡನುಡಿ** – ಜೊತೆಗೆ ಮಾತಾಡು
**ಒಡನೆ** – ಜೊತೆಗೆ; ತಕ್ಷಣ
**ಒಡನೋಡಿ** – ಜೊತೆಯಲ್ಲಿ ನೋಡಿ
**ಒಡನೋದು** – ಜೊತೆಯಲ್ಲಿ ವಿದ್ಯಾಭ್ಯಾಸ ಮಾಡುವವನು
**ಒಡಮೆ** – ಧನ; ಒಡವೆ
**ಒಡಮೆವಡೆ** – ಆಸ್ತಿಯನ್ನು ಪಡೆ
**ಒಡರಿಸು** – ಮಾಡು; ನೆರವೇರಿಸು; ಒಟ್ಟುಗೂಡಿಸು
**ಒಡರ್ಚು** – ತೊಡಗು; ಆರಂಭಿಸು; ನೆರವೇರಿಸು
**ಒಡಲ್** – ಶರೀರ; ಹೊಟ್ಟೆ
**ಒಡವರಿ** – ಜೊತೆಯಾಗಿ ಹರಿ
**ಒಡವರೆಯ** – ಒಂದೇ ಪ್ರಾಯ, ಸಮ ವಯಸ್ಸು
**ಒಡವಳೆ** – ಜೊತೆಯಾಗಿ ಬೆಳೆ
**ಒಡವಾರ** – ಒಂದು ಮರ
**ಒಡವಾಱು** – ಜೊತೆಗೆ ಹಾರು
**ಒಡವಾೞ್** – ಕೂಡಿ ಬಾಳು
**ಒಡವುಗು** – ಕೂಡಿ ಹೊಗು
**ಒಡವುಟ್ಟು** – ಒಂದೇ ತಾಯ ಹೊಟ್ಟೆಯಲ್ಲಿ ಹುಟ್ಟು
**ಒಡವುಟ್ಟಿದರ್** – ಸೋದರರು
**ಒಡವೆರ್ಚು** – ಜೊತೆಯಲ್ಲಿ ಹೆಚ್ಚಾಗು
**ಒಡವೆಳಸು** – ಜೊತೆಯಲ್ಲಿ ಬೆಳೆಸು
**ಒಡವೆಳೆ** – ಜೊತೆಯಲ್ಲಿ ಬೆಳೆ
**ಒಡವೇಱು** – ಜೊತೆಯಲ್ಲಿ ಹೇರಿಕೊ
**ಒಡವೋಗು** – ಜೊತೆಗೇ ಹೋಗು
**ಒಡಸಲ್** – ಜೊತೆಯಲ್ಲಿ ಸಲ್ಲು; ಸೇರು
**ಒಡಸಾಯ್** – ಜೊತೆಯಲ್ಲಿ ಮರಣಹೊಂದು
**ಒಡಱಿಸು** – ಒಡರ್ಚು
**ಒಡೆ** – ಭಾಗವಾಗು, ಚೂರಾಗು; ಚೂರುಮಾಡು
**ಒಡೆಗಳೆ** – ಒಡೆ+ಕಳೆ, ಜೊತೆಯಲ್ಲಿ ಕಳೆದುಕೊ
**ಒಡೆತು** – ಉಳ್ಳುದು
**ಒಡೆಯ** – ಪ್ರಭು; ಯಜಮಾನ
**ಒಡೆಯದು** – ಒಡೆತು
**ಒಡೆಯಿಕ್ಕು** – ಚೂರುಮಾಡು
**ಒಡೆಯಿಡು** – ಒಡೆಯಿಕ್ಕು

**ಒಡ್ಡ** – ರಾಶಿ; ಸಮೂಹ; ಜೂಜಿನ ಪಣದ್ರವ್ಯ
**ಒಡ್ಡಣ** – ಗುಂಪು; ವ್ಯೂಹ; ಸೈನ್ಯ; ಯುದ್ಧರಂಗ
**ಒಡ್ಡವಣೆ** – ಒಡ್ಡಣ
**ಒಡ್ಡಯಿ(ವಿ)ಸು** – ಒಡ್ಡುವಂತೆ ಮಾಡು; ಪ್ರೇರಿಸು; ಎದುರಾಗು
**ಒಡ್ಡ(ಅ)ಟೆ** – ಸತ್ವಗುಂದು
**ಒಡ್ಡಿಸು** – ಒಡ್ಡಯಿಸು, ಒಡ್ಡವಿಸು; ಆವರಿಸು
**ಒಡ್ಡು** – ಸೈನ್ಯ; ಸೈನ್ಯವನ್ನು ಯುದ್ಧಕ್ಕೆ ನಿಲ್ಲಿಸು; ಪಣವಾಗಿ ಮುಂದಿಡು
**ಒಡ್ಡುಂಗಲ್** – ಚಾಚುಗಲ್ಲು; ಬಂಡೆ
**ಒಡ್ಡುಂಗಾಡಿ** – ಒಟ್ಟು ಅಂದ; ಒಟ್ಟಾರೆ ಸೌಂದರ್ಯ
**ಒಡ್ಡುಗಟ್ಟು** – ಗುಂಪಾಗಿ ಸೇರು
**ಒಡ್ಡುಗೆಡು** – ಗುಂಪು ಚೆದುರು
**ಒಡ್ಡುಗೊಳ್** – ಒಡ್ಡುಗಟ್ಟು
**ಒಡ್ಡುವಲಗೆ** – ಗುರಾಣಿ
**ಒಡ್ಡೊಡೆ** – ಗುಂಪು ಚೆದುರು
**ಒಡ್ಡೋಲಗ** – ರಾಜನ ಆಸ್ಥಾನ, ಸಭೆ
**ಒಡ್ಡೋಲಗ(ಂ)ಗೊಡು** – (ರಾಜ) ಸಭೆ ನಡೆಸು
**ಒಣಕ** – ಒಣಕಲಾದವನು
**ಒಣಕುತ್ತ** – ಕೃಶಗೊಳಿಸುವ ಕಾಯಿಲೆ
**ಒಣಗಿಕ್ಕು** – ಒಣಗುಹಾಕು
**ಒಣಗಿಲು**– ಒಣಗಿರುವಿಕೆ
**ಒಣಗು** – ಆರಿಹೋಗು
**ಒಣಬಟ್ಟೆ** – ಒಣಗಿದ ದಾರಿ
**ಒಣರ್** – ಭಾವಿಸು, ತಿಳಿ; ಕೂಡು; ಹೇಳು
**ಒಣರ್ಚು** – ಸೇರಿಸು, ಒಂದುಗೂಡಿಸು
**ಒಣವಸಿಱ್** – ಸಣ್ಣಗಾದ ಹೊಟ್ಟೆ
**ಒತ್ತ** – ಸಂಗೀತದ ಲಯನಿರ್ಣಾಯಕ ಕಾಲ
**ಒತ್ತಂಬ** – ಬಲಾತ್ಕಾರ; ಒತ್ತಾಯ; ಸಮೂಹ; ಭಾರ
**ಒತ್ತಂಬರಿಸು** – ಗಾಢಗೊಳಿಸು
**ಒತ್ತರ** – ಒಂದೇ ಬಗೆ, ರೀತಿ; ಒಂದಾಗಿ ಸೇರಿದುದು
**ಒತ್ತರಿಸು** – ಒಂದೆಡೆಗೆ ತಳ್ಳು; ಮೀರು; ಅವಜ್ಞೆ ಮಾಡು; ನಿವಾರಿಸು; ಹಬ್ಬು, ಆಕ್ರಮಿಸು ಒತ್ತಿಡು – ಒತ್ತೆ ಇಡು–
**ಒತ್ತು** – ಆಕ್ರಮಿಸು; ಚುಚ್ಚು, ತಿವಿ, ನಾಟು; ವ್ಯಂಗ್ಯವಾಗಿ ಮಾತಾಡು; ಮೈ ಹಿಸುಕು, ತಿಕ್ಕು; ಪೀಡಿಸು; ಲಟ್ಟಿಸು; ಅದುಮುವಿಕೆ; ನೆರೆ; ಆಶ್ರಯ
**ಒತ್ತುಂಗರಡೆ** – ಒಂದು ಬಗೆಯ ಕರಡೆ, ಚರ್ಮವಾದ್ಯ
**ಒತ್ತುಂಬಲ** – ಒತ್ತಾಯ
**ಒತ್ತುಂಗೊಳ್** – ಆಶ್ರಯಿಸು
**ಒತ್ತುಬರ್** – ನೆರವಿಗೆ ಬರು
**ಒತ್ತೆ** – ಅಡವು; ಜೂಜಿನ ಪಣದ್ರವ್ಯ; (ಸೂಳೆಯರಿಗೆ) ಭೋಗಕ್ಕಾಗಿ ಕೊಡುವ ಹಣ
**ಒತ್ತೆಗೊಡು** – (ಸೂಳೆಯರಿಗೆ) ಒತ್ತೆ ನೀಡು
**ಒತ್ತೆಗೊಳ್** – ವಿಟರಿಂದ ಮುಂಗಣ ಹಣ ಪಡೆ; ವಶವಾಗು
**ಒತ್ತೆಯಿಡು** – ಅಡವಿಡು
**ಒತ್ತೆವಿಡಿ** – ಒತ್ತೆಯಾಗಿ ಸ್ವೀಕರಿಸು
**ಒತ್ತೆವಿಡಿಸು** – ಒತ್ತೆಯಿಂದ ಬಿಡಿಸು
**ಒತ್ತೆವೋಗು** – ಒತ್ತೆಯಾಗಿ ಹೋಗು
**ಒದಗು** – ದೊರಕು
**ಒದವಿಸು** – ದೊರಕಿಸು; ಉಂಟುಮಾಡು
**ಒದವು** – ಉಂಟಾಗು; ವಯಸ್ಸಿಗೆ ಬರು; ಸಿದ್ಧವಾಗು; ಏಳಿಗೆ ಹೊಂದು; ಸಫಲವಾಗು; ಅಭಿವೃದ್ಧಿ; ನೆರವು; ಕೂಡುವಿಕೆ; ಉಂಟಾಗುವಿಕೆ
**ಒದಱು** – ಭುಜ ಅಥವಾ ತೊಡೆಯನ್ನು ತಟ್ಟು; ಕೊಡಹು; ಕಿರುಚು
**ಒದೆ** – ಪಾದಪ್ರಹರಣ; ಕಾಲಿನಿಂದ ತುಳಿ
**ಒದೆವಡೆ** – ಒದೆತವನ್ನು ಪಡೆ; ಏಟು ತಿನ್ನು
**ಒದ್ದೆ** – ನೆನೆದಿರುವುದು
**ಒನಕೆ** –ಕುಟ್ಟುವ ಸಾಧನ; ಮುಸಲ
**ಒನಕೆವಾಡು** – ಕುಟ್ಟುವಾಗ ಹೇಳುವ ಹಾಡು
**ಒನಲ್** – ಮರುಗು; ಕ್ರೋಧಗೊಳ್ಳು
**ಒನಲಿ** – ಜರಡಿ
**ಒನಲಿಸು** – ಕೆರಳಿಸು
**ಒನೆ** – ಧಾನ್ಯವನ್ನು ಮೊರದಲ್ಲಿ ಶುದ್ಧಗೊಳಿಸು; ಶೂರ್ಪಕರಣ ಮಾಡು; ತೊನೆದಾಡು
**ಒಪ್ಪ** – ಒಪ್ಪಿಗೆ; ಅಲಂಕೃತವಾಗಿ
**ಒಪ್ಪಂಗುಂದು** – ಅಂದ ಕೆಡು
**ಒಪ್ಪಂಬಡೆ** – ಅಂದಗೊಳ್ಳು
**ಒಪ್ಪಂಬೂಸು** – ಒಪ್ಪವನ್ನು ಲೇಪಿಸು, ಮೆರುಗು ನೀಡು
**ಒಪ್ಪಂಬೆಱು** – ಅಂದವನ್ನು ಪಡೆ
**ಒಪ್ಪಕಾಱ** – ಓರಣಗೊಳಿಸುವವನು
**ಒಪ್ಪವಿಡಿ** – ಒಪ್ಪ ಹಾಕು
**ಒಪ್ಪಸಲಗೆಯಿಡು** – ಒಪ್ಪವಿಡುವ ಸಲಾಕಿಯಿಂದ ತೀಡು
**ಒಪ್ಪಿರ್** – ಒಪ್ಪವಾಗಿರು
**ಒಪ್ಪಿಸು** – ನೀಡು; ಅಂಗೀಕಾರ ನೀಡುವಂತೆ ಮಾಡು
**ಒಪ್ಪು** – ಅಂಗೀಕರಿಸು; ಶೋಭಿಸು
**ಒಪ್ಪುಗೊಡು** – ಒಪ್ಪಿಸಿ ಕೊಡು
**ಒಪ್ಪುಗೊಳ್** – ತೆಗೆದುಕೊ
**ಒಪ್ಪುದಾಳ್** – ಶೋಭೆಯನ್ನು ಹೊಂದು
**ಒಪ್ಪುವೆಱು** – ಅಂದವನ್ನು ಹೊಂದು
**ಒಬ್ಬಳ** – ಒರ್+ಬಳ, ಒಂದು ಬಳ್ಳ
**ಒಬ್ಬುಳ** – ರಾಶಿ
**ಒಬ್ಬುಳಕ್ಕು** – ಕೂಡಿಡು
**ಒಮ್ಮು** – ಅನುವರ್ತಿಸು
**ಒಮ್ಮುಕ್ಕುಳ್** – ಒಂದು ಮುಕ್ಕು, ಬಾಯಿ ಹಿಡಿಯುವಷ್ಟು

**ಒಯ್** – ತೆಗೆದುಕೊಡು ಹೋಗು
**ಒಯ್ಕನೆ** – ಸ್ಫುಟವಾಗಿ, ನೇರಾಗಿ
**ಒಯ್ಯಗೆ(ನೆ)** – ಮೆಲ್ಲನೆ, ಮೃದುವಾಗಿ; ಸಾವಕಾಶವಾಗಿ; ಕಡಿಮೆ ಕಾಂತಿಯಿಂದ
**ಒಯ್ಯಾರ** – ಒನಪು; ಬೆಡಗು
**ಒಯ್ಯಾರಂಬಡೆ** – ಒನಪು ಪಡೆ, ಒನಪುಗೊಳ್ಳು
**ಒರಂಟ** – ಒರಟ
**ಒರಂಟು** – ಒರಟುತನ
**ಒರಲ್** – ಒರಳು, ಕುಟ್ಟಲು ರುಬ್ಬಲು ಬಳಸುವ ಸಾಧನ
**ಒರಸು** – ಉಜ್ಜು, ಘರ್ಷಿಸು; ಕಾಟ, ಹಿಂಸೆ
**ಒರೆ** – ತಿಳಿಸು; (ಚಿನ್ನ) ಉಜ್ಜುವ ಕಲ್ಲು; ಸಮಾನತೆ
**ಒರೆಗಲ್** – ಚಿನ್ನವನ್ನು ಪರೀಕ್ಷಿಸುವ ಉಜ್ಜುಗಲ್ಲು
**ಒರೆಪ** – ಉಜ್ಜುವಿಕೆ
**ಒರೆಯಿಡು** – ಹೋಲಿಸು
**ಒರ್ಕಣ್ಗುರುಡಿ** – ಒಂದು ಕಣ್ಣು ಕುರುಡಾಗಿರುವವಳು
**ಒರ್ಕುಡಿತೆ** – ಒಂದು ಬೊಗಸೆ
**ಒಕ್ಕೈಸು** – ಸೇರು, ಒಂದುಗೂಡು
**ಒರ್ಕೋಲ್** – ಒಂದು ಕೋಲು; ದೂರ ಅಳೆಯುವ ಪ್ರಮಾಣ
**ಒರ್ಗುಡಿಸು** – ಓಲು, ಓರೆಯಾಗು; ಕುಸಿ
**ಒರ್ಗೇಣ್** – ಒಂದು ಗೇಣು ಉದ್ದ
**ಒರ್ಗೊಡೆ** – ಗುಂಪು ಒಡೆಯುವುದು
**ಒರ್ಚರ** – (ಒರ್+ಸರ) ಒಂದೆಳೆಯ ಸರ
**ಒರ್ಚವಡಿ** – ಒಂದು ಪದರ; ಒಳಗೊಂದು ಹೊರಗೊಂದು ಪದರವುಳ್ಳ
**ಒರ್ದೆಸೆ** – ಒಂದು ದಿಕ್ಕು; ಒಂದು ಪಕ್ಕ
**ಒರ್ನುಡಿ** – ಒಂದು ಮಾತು
**ಒರ್ಪದ** – ಒಂದು ಹೆಜ್ಜೆ
**ಒರ್ಪಿಡಿ** – ಒಂದು ಹಿಡಿ
**ಒರ್ಪಿಡಿಗೂಳ್** – ಒಂದು ತುತ್ತು ಅನ್ನ
**ಒರ್ಪೆಸರ್** – ಒಂದೇ ಒಂದು ಹೆಸರು
**ಒರ್ಬಸ** – ಒಂದೇ ಗುಂಗು
**ಒರ್ಬಳಸು** – ಒಂದು ಸುತ್ತು
**ಒರ್ಬುಳಿಗೂಡು** – ಒಂದಾಗು
**ಒರ್ಬುಳಿಸು** – ಒಟ್ಟುಗೂಡು
**ಒರ್ಮಡಿ** – ಒಂದು ಸಲ
**ಒರ್ಮನ** – ಒಂದೇ ಮನಸ್ಸು
**ಒರ್ಮಾರ್** – ಒಂದು ಮಾರು (ದೂರ)
**ಒರ್ಮೆ** – ಒಂದು ಬಾರಿ
**ಒರ್ಮೆಯುಂ** – ಒಂದೇ ಸಮನೆ
**ಒರ್ಮೊದಲ್** – ಒಂದೇ ಬಾರಿಗೆ; ಮೊದಲಿಗೇ
**ಒರ್ಮೊಳ** – ಒಂದು ಮೊಳ (ಉದ್ದ)
**ಒರ್ವ** – ಒಬ್ಬ
**ಒರ್ವಗಲ್** – ಒಂದು ಹಗಲು
**ಒರ್ವಾಗ** – ಒಂದು ಭಾಗ, ಪಾಲು
**ಒರ್ವುಳಿ** – ಒಬ್ಬುಳಿ, ಸಮೂಹ
**ಒರ್ವುಳಿಗೊಳ್** – ಒಟ್ಟಾಗು
**ಒರ್ವೂಟೆ** – ಒಂದು ಜಾಗ
**ಒಲ್** –ಪ್ರೀತಿಸು; ಸಮ್ಮತಿಸು;; ಬಯಸು; ಶಕ್ತನಾಗು; ಮೋಹಗೊಳ್ಳು
**ಒಲವರ** – ಪ್ರೀತಿ, ಮೋಹ; ಪ್ರವೃತ್ತಿ, ಒಲವು; ಪಕ್ಷಪಾತ
**ಒಲವರಂಗೊಳ್** – ಒಂದು ಪಕ್ಷ ವಹಿಸು
**ಒಲವು** – ಪ್ರೀತಿ, ಮೋಹ
**ಒಲಿ** – ಒಲ್, ಆಸೆಪಡು
**ಒಲಿಸು** – ಒಪ್ಪಿಸು
**ಒಲೆ** – ತೊನೆದಾಡು
**ಒಲೆದಾಟ** – ತೂಗಾಟ
**ಒಲೆ** – ಮಾತಾಡು; ಅಡುಗೆ ಮಾಡುವ ಉರಿಯ ಸಾಧನ
**ಒಲೆಗಲ್** – ಒಲೆಗೆ ಇಟ್ಟ ಕಲ್ಲು
**ಒಲೆಯಡುಕು** – ಒಲೆ ಹೂಡು
**ಒಲ್ಮೆ** – ಒಲುಮೆ, ಪ್ರೀತಿ
**ಒಲ್ಮೆಗ** – ಒಲಿದವನು
**ಒಲ್ಮೆವೆಱು** – ಪ್ರೀತಿಯನ್ನು ಹೊಂದು
**ಒಲ್ಲಣಿಗೆ** – ಒದ್ದೆಯಾದ ಬಟ್ಟೆ; ಸ್ನಾನವಸ್ತ್ರ
**ಒಲ್ಲನೆ** – ಮೆಲ್ಲನೆ, ನಿಧಾನವಾಗಿ
**ಒಲ್ಲನುಲಿ** – ಮೆಲ್ಲನೆ ಸದ್ದುಮಾಡು; ಒಕ್ಕೊರಲಿನಿಂದ
**ಒಲ್ಲಮೆ** – ಒಲುಮೆಯಿಲ್ಲದಿರುವಿಕೆ
**ಒವಜ** – (ಉಪಾಧ್ಯಾಯ); ಗುರು
**ಒವಜುಗೆಯ್** – ಪಾಠ ಹೇಳಿಕೊಡು
**ಒಸಗೆ** – ಶುಭ, ಮಂಗಳಕಾರ್ಯ; ಸಂತೋಷ; ಶುಭ ಸಂದೇಶ; ಯಶಸ್ಸು, ಕೀರ್ತಿ
**ಒಸಗೆಕಾಱ** – ಸಂತೋಷವುಂಟುಮಾಡುವವನು
**ಒಸಗೆನೀರ್** – ಮಂಗಳಸ್ನಾನ
**ಒಸಗೆವರ್** – ಮಂಗಳವುಂಟಾಗು
**ಒಸಗೆವಱೆ** – ಮಂಗಳವಾದ್ಯ
**ಒಸಗೆವಾಡು** – ಮಂಗಳ ಸನ್ನಿವೇಶಗಳ ಹಾಡು
**ಒಸಗೆವಾತು** – ಸಂತೋಷ ಸಮಾಚಾರ
**ಒಸಗೆವರಸು** – ಸಂಭ್ರಮದಿಂದ
**ಒಸಗೆವೇೞ್** – ಶುಭ ನುಡಿ
**ಒಸಡು** – ಹಲ್ಲುಗಳ ಆಧಾರ ಮಾಂಸಖಂಡ
**ಒಸರ್** – ಜಿನುಗು, ಸ್ರವಿಸು; ಜಿನುಗುವುದು
**ಒಸರಾಱು** – ಹಸಿತನ ಆರಿಹೋಗು
**ಒಸರ್ಚು** – ಜಿನುಗು
**ಒಸರ್ತರ್** – ಒಸರ್ಚು
**ಒಸರ್ದಾಣ** – ನೀರುಕ್ಕುವ ಜಾಗ, ಒರತೆ
**ಒಸೆ** – ಪ್ರೀತಿಸು; ಅನುಗ್ರಹಿಸು; ಹಿಗ್ಗು; ಶೋಭಿಸು
**ಒಸೆಯಿಸು** – ಒಲಿಸಿಕೊ; ಸಂತಸಗೊಳಿಸು
**ಒಳಅಟ್ಟ** – ಅಟ್ಟದ ಒಳಭಾಗ
**ಒಳಕಣ್** – ಗುಳಿಬಿದ್ದ ಕಣ್ಣು
**ಒಳಕೆಯ್** – ಒಳಗೊಳ್ಳು

**ಒಳಕೊ(ಗೊ)ಳ್** – ಸೇರಿಸಿಕೊ; ಹೊಂದು; ಉಂಟಾಗು, ಅಡಕವಾಗು, ಸಹಿಸು
**ಒಳಗಱಿ** – ರಹಸ್ಯ ತಿಳಿ
**ಒಳಗಂಬರ್** – ಒಳಗೆ ಬರು; ಮರ್ಮ ತಿಳಿ
**ಒಳಗಾಗು** – ಒಳಪಡು
**ಒಳಗು** – ಒಳಗಡೆ; ಮರ್ಮ
**ಒಳಗುಗಾಣ್** – ಒಳಗಿನ ವಿಷಯವನ್ನು ತಿಳಿ
**ಒಳಗುಗೊಳಸು** – ಪಡೆಯುವಂತೆ ಮಾಡು
**ಒಳಗುಮಾಡು** – ವಶಪಡಿಸಿಕೊ; ಆವರಿಸು
**ಒಳಗೆ** – ಒಳಗಡೆ; ಅಷ್ಟರಲ್ಲಿ
**ಒಳಪೊಗು** – ಒಳಗೆ ಹೊಗು
**ಒಳಪೊಯ್** – ಒಳಗೊಳ್ಳು, ಒಳಗೆ ಹಾಕಿಕೊ
**ಒಳಪೊಯ್ಸು** – ಒಳಗೊಳಿಸು
**ಒಳವಗೆ** – ಒಳಗಿನ ಶತ್ರು; ಅರಿಷಡ್ವರ್ಗ
**ಒಳವಾಯ್** – ಬಾಯ ಒಳಗು
**ಒಳವುಗಿಸು** – ಒಳಗೆ ಹೊಗಿಸು
**ಒಳವೊಗು** – ಒಳಪೊಗು
**ಒಳಸಾರ್** – ಒಳಪೊಗು
**ಒಳಸುರ್ಕು** – ಒಳಗೇ ಮುದುಡು
**ಒಳಸೇದು** – ತಡೆದುಕೊ
**ಒಳಸೋರ್** – ಕೈವಶವಾಗು; ಹಿಂಜರಿ; ಜಾರು
**ಒಳಱು** – ಕಿರಿಚು, ಅರಚು
**ಒಳ್ಗಂಡ** – ದೊಡ್ಡ ಶೂರ
**ಒಳ್ಗಂಪು** – ಒಳ್ಳೆಯ ಪರಿಮಳ
**ಒಳ್ಗತಿ** – ಸದ್ಗತಿ
**ಒಳ್ಗದಿರ್** – ಹೊಳೆಯುವ ಕಿರಣ
**ಒಳ್ಗನಸು** – ಒಳ್ಳೆಯ ಕನಸು
**ಒಳ್ಗರುಳ್** – ಒಳಕರುಳು
**ಒಳ್ಗಲಿ** – ದೊಡ್ಡ ಪರಾಕ್ರಮಿ
**ಒಳ್ಗಱವೆ** – ಒಳ್ಳೆಯ ಬತ್ತ
**ಒಳ್ಗಿಡಿ** – ಪ್ರಖರವಾದ ಕಿಡಿ
**ಒಳ್ಗುಂಡಿಗೆ** – ಒಳ್ಳೆಯ ಕಮಂಡಲು
**ಒಳ್ಗುಣ** – ಒಳ್ಳೆಯ ಗುಣ
**ಒಳ್ಗುರುಳ್** – ಸುಂದರ ಕೇಶರಾಶಿ
**ಒಳ್ಗುಲ** – ಸತ್ಕುಲ
**ಒಳ್ಗೆಸಱ್** – ಹೆಚ್ಚಾದ ಕೊಚ್ಚೆ
**ಒಳ್ಗೆಱೆ** – ದೊಡ್ಡ ಕೆರೆ
**ಒಳ್ಗೊಂಚಲ್** – ಸೊಂಪಾದ ಗೊಂಚಲು
**ಒಳ್ಗೊಂಬು** – ದೊಡ್ಡ ಕೊಂಬೆ
**ಒಳ್ಗೊಳ** – ಒಳ್ಳೆಯ ಕೊಳ
**ಒಳ್ಗೋಡು** – ಒಳ್ಳೆಯ ಕೋಡು
**ಒಳ್ತನ** – ಒಳ್ಳೆಯತನ
**ಒಳ್ತಪ** – ಒಳ್ಳೆಯ ತಪಸ್ಸು
**ಒಳ್ದಳಿರ್** – ಮಿರುಗುವ ಚಿಗುರು
**ಒಳ್ದಾವರೆ** – ಸುಂದರವಾದ ತಾವರೆ
**ಒಳ್ದುಡುಗೆ** – ಒಳ್ಳೆಯ ತೊಡುಗೆ, ಒಡವೆ
**ಒಳ್ದೆನೆ** – ಸೊಂಪಾಧ ತೆನೆ
**ಒಳ್ದೆರೆ** – ಸುಂದರವಾದ ಅಲೆ
**ಒಳ್ತೊಡವು** – ಒಳ್ದುಡುಗೆ
**ಒಳ್ತೊಡೆ** – ಒಳ್ಳೆಯ ತೊಡೆ
**ಒಳ್ನಗೆ** – ಮೋಹಕ ನಗೆ
**ಒಳ್ನಡಕ** – ಒಳ್ಳೆಯ ನಡತೆ
**ಒಳ್ನಡು** – ಬಡನಡು
**ಒಳ್ನಾಡು** – ಸುಂದರವಾದ ದೇಶ
**ಒಳ್ನಱೆ** – ಒಳ್ಳೆಯ ನಿರಿಗೆ
**ಒಳ್ಗುಡಿ** – ಸೊಗಸಾದ ಧ್ವಜ
**ಒಳ್ಗುದಿ** – ಮೂಕಸಂಕಟ, ಒಳಗುದಿ
**ಒಳ್ನುಡಿ** – ಒಳ್ಳೆಯ ನುಡಿ
**ಒಳ್ನುಡಿಗೇಳ್** – ಒಳ್ಳೆಯ ಮಾತನ್ನು ಕೇಳು
**ಒಳ್ನುಡಿದೋಱು** – ಒಳ್ಳೆಯ ಮಾತನ್ನು ಕೇಳಿಸು
**ಒಳ್ಗೆಸಱ್** – ಹೆಚ್ಚಾದ ಕೆಸರು
**ಒಳ್ನೆಯ್** – ಒಳ್ಳೆಯ ತುಪ್ಪ
**ಒಳ್ನೋಂಪಿ** – ಶ್ರೇಷ್ಠವಾದ ವ್ರತ
**ಒಳ್ಪು** – ಒಳ್ಳೆಯತನ; ಚೆಲುವು; ಒಳಿತು
**ಒಳ್ಪುಗಾಣ್** – ಒಳ್ಳೆದನ್ನು ಕಾಣು
**ಒಳ್ಪುಗಿಡು** – ಸೊಗಸು ಕೆಡು
**ಒಳ್ಪುಗೊಳ್** – ಒಳ್ಳೆಯದನ್ನು ಪಡೆ; ಒಪ್ಪಿಕೊ
**ಒಳ್ಪುವಡೆ** – ಸುಂದರವಾಗು
**ಒಳ್ಪುವೆರಸು** – ದೃಢವಾಗಿ
**ಒಳ್ಪುವೆಱು** – ಶೋಭಿಸು
**ಒಳ್ಪೂಜೆ** – ಶ್ರೇಷ್ಠ ಪೂಜೆ
**ಒಳ್ಮರಲ್** – ಒಳ್ಳೆಯ ಅರಳು
**ಒಳ್ಮಾಡ** – ಮನೆಯ ಒಳಭಾಗ
**ಒಳ್ಮಾವು** – ಒಳ್ಳೆಯ ಮವು
**ಒಳ್ಮಿಡಿ** – ಒಳ್ಳೆಯ ಮಿಡಿ
**ಒಳ್ಮಿದುಳ್** – ಮೆದುಳಿನ ಒಳಭಾಗ
**ಒಳ್ಮುಗುಳ್** – ಒಳ್ಳೆಯ ಮೊಗ್ಗು
**ಒಳ್ಮುಡಿ** – ಸುಂದರ ಮುಡಿ
**ಒಳ್ಮೊಗ** – ಚೆಲುವಾದ ಮುಖ
**ಒಳರ್ವಣಿ** – ಉತ್ತಮ ಮಣಿ
**ಒಳ್ವರಕೆ** – ಒಳ್ಳೆಯ ಹರಕೆ
**ಒಳ್ವರಲ್** – ಒಳ್ಳೆಯ ಹರಳು (ಮಣಿ)
**ಒಳ್ವಾತು** – ಒಳ್ಳೆಯ ನುಡಿ
**ಒಳ್ವೆಣ್** – ಸುಂದರಿಯಾದ ಹೆಣ್ಣು
**ಒಳ್ವೆಸನ** – ಒಳ್ಳೆಯ ಹವ್ಯಾಸ
**ಒಳ್ವೆಸರ್** – ಒಳ್ಳೆಯ ಹೆಸರು
**ಒಳ್ವೆಳಗು** – ಉಜ್ವಲ ಕಾಂತಿ
**ಒಳ್ವೆಱೆ** – ಸುಂದರ ಚಂದ್ರ
**ಒಳ್ವೇಟ** – ಹಿತಕರ ಪ್ರಣಯ
**ಒಳ್ವೊನಲ್** – ಸುಂದರ ನದಿ
**ಒಳ್ಳಕ್ಕರಿಗ** – ಶ್ರೇಷ್ಠ ವಿದ್ವಾಂಸ
**ಒಳ್ಳಡಗು** – ಒಳ್ಳೆಯ ಮಾಂಸ
**ಒಳ್ಳನುರಿ** – (ಗಾಯ) ಭಗಭಗ ಉರಿ
**ಒಳ್ಳನೆ** – ಸುಮ್ಮನೆ

**ಒಳ್ಳರಲ್ದಱಿ** – ಒಳ್ಳೆಯ ಹೂವನ್ನು ಬಿಡಿಸು
**ಒಳ್ಳಲಗು** – ಶ್ರೇಷ್ಠವಾದ ಕತ್ತಿ
**ಒಳ್ಳಾನೆ** – ಒಳ್ಳೆಯ ಆನೆ
**ಒಳ್ಳಾಳ್** – ಒಳ್ಳೆಯ ಶೂರ
**ಒಳ್ಳಿಕೆಯ್** – ಒಳಿತನ್ನು ಮಾಡು
**ಒಳ್ಳಿತವಸರ** – ಒಳ್ಳೆ ಅವಕಾಶ
**ಒಳ್ಳಿತುಗೆಯ್** – ಒಳ್ಳಿಕೆಯ್
**ಒಳ್ಳಿತ್ತು** – ಒಳಿತು, ಒಳ್ಳೆಯದು
**ಒಳ್ಳಿದ** – ಒಳ್ಳೆಯವನು
**ಒಳ್ಳುಡೆ** – ಸುಂದರವಾದ ಉಡುಗೆ
**ಒಳ್ಳುಣಿಸು** – ರುಚಿಯಾದ ಆಹಾರ
**ಒಳ್ಳುಲಿಪು** – ಇಂಪಾದ ಧ್ವನಿ
**ಒಳ್ಳೆ** – ವಿಷವಿಲ್ಲದ ಹಾವು; ಪಡುವಲಕಾಯಿ
**ಒಱ(ಂ)ಗು** – ಮಲಗು; ಸಾಯು; ಆತುಕೊ
**ಒಱಂಟ** – ಒರಟ, ಗಡುಸಾದವನು
**ಒಱಂಟು** – ಮೊಂಡುತನ
**ಒಱಂಟುತನ** – ಒರಟುತನ, ಬಿರುಸು
**ಒಱಂತೆ** – ಒರತೆ, ನೀರ ಬುಗ್ಗೆ
**ಒಱಪು** – ಕಾಂತಿ
**ಒಱಲ್** – ಪ್ರೀತಿಸು; ಪ್ರೀತಿ; ಸ್ನೇಹ; ಕೂಗು; ಕೂಗಾಟ
**ಒಱಲೆ** – ಗೆದ್ದಲು
**ಒಱಲ್ಚು** – ಸಂತಸಪಡಿಸು; ಧ್ವನಿಮಾಡು
**ಒಱಲ್ದಂ** – ಪ್ರೀತಿಸಿದವನು
**ಒಱವು** – ಒರತೆ; ಸ್ರವಿಸು; ಊಟೆ
**ಒಱವುಗಱೆ** – ಬುಗ್ಗೆಯಂತೆ ಚಿಮ್ಮು
**ಒಱವುದೋಡು** – ಒರತೆಯನ್ನು ತೋಡು
**ಒಱೆ** – ಸ್ರವಿಸು; ಕತ್ತಿಯ ಕವಚ
**ಒಱೆಗಳೆ** – ಕತ್ತಿಯನ್ನು ಒರೆಯಿಂದ ಹೊರತೆಗೆ
**ಒಱೆಪು** – ಒರತೆ
**ಒಱೆವಾಯ್** – ಜೊಲ್ಲು ಸುರಿಸುವ ಬಾಯಿ
**ಒಱೆವೋಗು** – ಸುರಿದುಹೋಗು
**ಒಱ್ಕು** – ಪ್ರವಹಿಸು; ಹರಿದು ಹೋಗು
**ಒಱ್ಕುಡಿ** – ತುಂಬಿ ಹರಿ; ಪ್ರವಾಹ
**ಒಱ್ಕುಡಿವೋಗು** – ಪ್ರವಾಹ ನಿಲ್ಲು
**ಒಱ್ಗು** – ಗುಂಪು

## ಓ

**ಓ** – ಪ್ರೀತಿಸು; ಓ ಎಂದು ಉತ್ತರಿಸು; ಸಲಹು
**ಓಂಕಾರ** – ಪ್ರಣವಾಕ್ಷರ
**ಓಂತಿ** – ಓತಿಕೇತ
**ಓಕರಿಸು** – ಕಾರು, ವಾಂತಿಮಾಡು
**ಓಕಃಪ್ರಾಂಗಣ** – ಮನೆಯ ಅಂಗಳ
**ಓಕುಳ** – ಬಣ್ಣದ ನೀರು
**ಓಕುಳಿಯಾಡು** – ಬಣ್ಣದ ನೀರನ್ನು ಪರಸ್ಪರ ಎರಚು
**ಓಕರಿಸು** – ವಾಂತಿ ಮಾಡು; ಅಸಹ್ಯಪಡು
**ಓಗಂಬಾ(ಪಾ)ಡು** – ಸುಪ್ರಭಾತ ಹಾಡು; ದ್ರುತಗತಿಯಿಂದ ಹಾಡು
**ಓಗಟೆ** – ಒಗಟು, ಒಡಪು
**ಓಗಡಿಸು** – ಓಕರಿಸು; ಆಲಸ್ಯ ತೋರು; ಹಿಂಜರಿ
**ಓಗರ** – ಪಕ್ವವಾದ; ಅನ್ನ
**ಓಗರಗಂಪು** – ಬೆರಕೆ ಗಂಧ ; ಸಮ್ಮಿಶ್ರಗಂಧ
**ಓಗರವೂ** – ಬೆರಕೆ ಹೂ
**ಓಘ** – ಧಾರೆ; ಗುಂಪು; ಪ್ರವಾಹ
**ಓಘಮೇಘ** – ಧಾರಾಕಾರ ಮಳೆ
**ಓಜ** – ಒವಜ (ಉಪಾಧ್ಯಾಯ) ಗುರು
**ಓಜಾಯಿತ** – ಶ್ರೇಷ್ಠ ಶಿಲ್ಪಿ
**ಓಜಾಯಿಲ** – ಮೋಸಗಾರ
**ಓಜೆ** – ಕ್ರಮ; ಶ್ರೇಣಿ; ತಾಳ
**ಓಜೆಗೆಯ್ಸು** – ಕ್ರಮಗೊಳಿಸು
**ಓಜೆಗೊಳ್** – ಕ್ರಮ ಅನುಸರಿಸು
**ಓಜೆದಪ್ಪು** – ಕ್ರಮ ತಪ್ಪು
**ಓಜೆವಿಡಿ** – ಓಜೆ+ಪಿಡಿ, ಪಳಗಿಸಿದ ಹೆಣ್ಣಾನೆ
**ಓಜೆವೆರಸು** – ಕ್ರಮದ ಅನುಸರಣೆ ಮಾಡು
**ಓಜೆವೆಱು** – ಅಂದಗೊಳ್ಳು
**ಓಟ** – ಓಡುವಿಕೆ
**ಓಡ** – ತೆಪ್ಪ, ದೋಣಿ
**ಓಡಾಡು** – ತಿರುಗಾಡು
**ಓಡಿಸು** – ಓಡುವಂತೆ ಮಾಡು
**ಓಡು** – ವೇಗವಾಗಿ ಹೋಗು; ಬೋಕಿಬಿಂಚು; ಮಡಕೆ; ತಲೆಯ ಚಿಪ್ಪು
**ಓಣಿಯೋಗು** – ಕೊರಕಲಾಗು
**ಓತ** – ಓದು; ಒಲಿದ
**ಓದನ** – ಓಗರ, ಅನ್ನ
**ಓದಾಳ** – ಓದುಗಾರ
**ಓದಿಸು** – ಕಲಿಸು, ಶಿಕ್ಷಣ ನೀಡು
**ಓದು** – ಪಠಿಸು; ವಿದ್ಯೆ ಕಲಿ; ಜ್ಞಾನ
**ಓದುಂಗಾಱ** – ಓದುವವನು, ವಿದ್ಯಾರ್ಥಿ
**ಓದುಕುಳ** – ಓದಿನಲ್ಲಿ ಆಸಕ್ತನಾದವನು
**ಓದುಗಲಿ** – ವಿದ್ಯೆ ಕಲಿ
**ಓದುವೇಱ್** – ಓದಿಸು
**ಓದುಳ್ಳ** – ಓದಿದವನು; ವಿದ್ವಾಂಸ
**ಓದೊಡೆಯ** – ಓದುಳ್ಳ
**ಓಪ** – ಪ್ರಿಯಕರ
**ಓಪರ್** – ಪ್ರಿಯ–ಪ್ರೇಯಸಿಯರು–
**ಓಪಳ್** – ನಲ್ಲೆ
**ಓಪಾದಿ** – ಹಾಗೆ
**ಓಪು** – ಪ್ರೀತಿ
**ಓರಂಡಲ** – ಬೆಂಬಲ
**ಓರಂ(ತು)ತೆ** – ಒಂದೇ ಸಮನಾಗಿ
**ಓರಂದ** – ಒಂದೇ ಕ್ರಮ, ಏಕಪ್ರಕಾರ
**ಓರಗೆ** – ಸಮವಯಸ್ಕ
**ಓರಗೆಗೊಳ್** – ಜೊತೆಯಾಗು

**ಓರಗೆಯೆನಿಸು** – ಸಮನಾಗು
**ಓರಗೆವೂ** – ಬಗೆಬಗೆಯಾದ ಹೂ
**ಓರಡಿ** – ಒಂದು ಅಡಿ, ಒಂದು ಹೆಜ್ಜೆ
**ಓರನ್ನ** – ಒಂದೇ ತೆರ; ಸರಿ ಸಾಟಿ
**ಓರಣ** – ಸಾಲು, ಪಂಕ್ತಿ; ಅಚ್ಚುಕಟ್ಟು
**ಓರಣಂಗೊಳ್** – ಒಪ್ಪವಾಗು
**ಓರಣಂಗೊಳಿಸು** – ಚೆನ್ನಾಗಿ ಜೋಡಿಸು
**ಓರಣಂಬಿಡಿ** – ಓರಣಂಗೊಳ್
**ಓರಣಿಕೆ** – ಓರಣವಾಗಿರುವಿಕೆ
**ಓರಣಿಸು** – ಓರಣವಾಗಿರು
**ಓರನ್ನ** – ಒಂದೇ ರೀತಿ; ಸಮಾನ
**ಓರನ್ನೆ** – ಸಮಾನೆ
**ಓರನ್ನರ್** – ಒಂದೇ ಬಗೆಯವರು
**ಓರಾಯ** – ಪಂಕ್ತಿ; ಒಂದೇ ಅಳತೆ
**ಓರೆ** – ಓರಗೆ
**ಓರೆಂಜಲ್** – ಜೊತೆಗೆ ಊಟಮಾಡುವವರು
**ಓರೆಡೆ** – ಒಂದು ಎಡೆ
**ಓರೆವೋಗು** – ಒಂದು ಕಡೆಗೆ ಓಲು
**ಓರೊಂದು** – ಒಂದೊಂದು; ಪರಸ್ಪರ
**ಓರೊರ್ಮೆ** – ಒಂದೊಂದು ಬಾರಿ
**ಓರೊರ್ವ** – ಒಬ್ಬೊಬ್ಬ
**ಓರ್ಗುಡಿಸು** – ಕುಪ್ಪೆಹಾಕು
**ಓಲಗ** – ರಾಜಸಭೆ; ರಾಜಸೇವೆ
**ಓಲಗಂಗುಡು** – ರಾಜಸಭೆ ನಡೆಸು
**ಓಲಗವುರುಡು** – ರಾಜಸಭೆಯಲ್ಲಿ ನಡೆಯುವ ಸ್ಪರ್ಧೆ
**ಓಲಗಶಾಲೆ** – ರಾಜನ ಸಭಾಮಂಟಪ
**ಓಲಗಿಗ** – ಸೇವಕ
**ಓಲಗಿಸು** – ಸೇವೆಮಾಡು; ಅರ್ಪಣೆಮಾಡು
**ಓಲಗೆಕಾಱ** – ಸೇವಕ
**ಓಲಾಡಿಸು** – ತೊನೆದಾಡಿಸು; ಸ್ನಾನಮಾಡಿಸು
**ಓಲಾಡು** – ತೊನೆದಾಡು; ಹಿಗ್ಗು; ಜಲಕೇಳಿಯಾಡು
**ಓಲೆ** – ತಾಳೆಗರಿ; ಪತ್ರ; ಕಿವಿಯ ಆಭರಣ; ರಥದ ಮೇಲ್ಕಟ್ಟು
**ಓಲೆಗುಡು** – ಪತ್ರ ಕಳಿಸು
**ಓಲೆಯಡಕು** – ಪತ್ರ ತಲುಪಿಸು
**ಓಲೆಯೊಯ್** – ಓಲೆಯಡಕು
**ಓಲೆವಾಗ್ಯ** – ಓಲೆಯ ಭಾಗ್ಯ; ಮುತ್ತೈದೆತನ
**ಓಲೈಸು** – ಸೇವೆಮಾಡು; ಅನುಸರಿಸು
**ಓವನಿಗೆ** – ಒಂದು ಬಗೆಯ ಹಾಡುಗಬ್ಬ
**ಓವದೆ** – ಓ+ಅದೆ, ಲಕ್ಷ್ಯಮಾಡದೆ
**ಓವರಿ** – ಕೋಣೆ; ಒಳ ಮನೆ; ಗುರಿ, ಈಡು
**ಓವು** –ಓ, ಕಾಪಾಡು
**ಓವೋ** – ಆಶ್ಚರ್ಯ–ದುಃಖಸೂಚಕ ನಿಪಾತಾವ್ಯಯ–
**ಓಷಧೀಶ್ವರ** – ಸಸ್ಯಾಧಿಪತಿ, ಚಂದ್ರ
**ಓಷ್ಠಪುಟಸಂದಂಶ** – ಹಲ್ಲುಮುಡಿ ಕಚ್ಚುವುದು
**ಓಸರಿಗೆ** – ಮನೆಯ ಮುಂದಣ ಅಥವಾ ಹಿಂದಣ ಅಂಗಳ
**ಓಸರಿಗೊಳ್** – ಪಕ್ಕಕ್ಕೆ ಸರಿದು ಹೋಗು
**ಓಸರಿಸು** – ಓರೆ ಮಾಡು, ಓರೆಯಾಗು; ಹಿಂಜರಿ; ನೇವರಿಸು; ಬಿಟ್ಟುಬಿಡು
**ಓಸಱೆ** – ಶಕುನ
**ಓಸಱೆಗೇಳ್** – ಶಕುನ ವಿಚಾರಿಸು
**ಓಹಣ** – ವಾಹನ
**ಓಳ್** – ಸಂಭೋಗಿಸು
**ಓಳಿ** – ಸಾಲು, ಸಮೂಹ; ಓರಣ, ಕ್ರಮ ಓಳಿಗೊಳ್; ಸಾಲುಗೊಳ್ಳು
**ಓಳಿದೋರಣ** – ಸಾಲು ತೋರಣ
**ಓಳಿಯಿಸು** – ಸಾಲಾಗಿಸು
**ಓಳಿವಡು(ಡೆ)** – ಸಾಲುಗಟ್ಟು
**ಓಳಿವೀಡು** – ಸಾಲು ಮನೆ
**ಓಳೀವೆಳ್ಪು** – ಬಿಳಿಬಣ್ಣದ ಸಾಲು
**ಓಳ್ಕೆ** – ರತಿಕ್ರೀಡೆ
**ಓಱಿಯಾವು** – ಕರಾವು, ಕರೆಯುವ ಹಸು

## ಔ

**ಔಂಕು** – ಅಮುಕು
**ಔಘ** – ಸಮೂಹ; ಪ್ರವಾಹ
**ಔಡು** – ತುಟಿ
**ಔಡೊತ್ತು** – ತುಟಿ ಕಚ್ಚು; ಹಲ್ಲುಮಡಿ ಕಚ್ಚು
**ಔತಳ** – ಔತಣ
**ಔತ್ಸುಕ್ಯ** – ಕುತೂಹಲ; ಉತ್ಸಾಹ
**ಔದನಿಕ** – ಬಾಣಸಿಗ, ಅಡಿಗೆಯವನು
**ಔದರಿಕ** – ಹೊಟ್ಟೆಬಾಕ
**ಔದಲೆಗಾಣ್** – ಅಡಗು, ಗುಪ್ತವಾಗು
**ಔದಾರಿಕ** – ಸ್ಥೂಲದೇಹ
**ಔದುಂಬರ** – ಉದುಂಬರ ಮರದಿಂದ ಹುಟ್ಟಿದ್ದು; ಅತ್ತಿಯ ಮರ
**ಔದುಂಬರಕುಷ್ಠ** – ಮೈ ಹುಳಬೀಳುವ ಕುಷ್ಠರೋಗದ ಬಗೆ
**ಔದ್ಧತ್ಯ** – ಉದ್ಧಟತನ
**ಔಪರಿಷ್ಟಕ** – ಮೇಲ್ಭಾಗ; ಒಂದು ಬಗೆಯ ರತಿಕ್ರೀಡೆ
**ಔಮೀನ** – ಅಗಸೆ ಹೊಲ
**ಔಮ್ಯ** – ಅಗಸೆ ಹೊಲ
**ಔರ್ವ(ರ್ವು)** – ಊರ್ವನಿಗೆ ಸಂಬಂಧಿಸಿದ; ತೊಡೆಯಿಂದ ಹುಟ್ಟಿದ; ಭೃಗು ಸಂತತಿಯವನು; ಬಡಬಾಗ್ನಿ
**ಔರ್ವಜ್ವಲ(ಳ)ನ** – ಸಮುದ್ರದ ಬೆಂಕಿ, ಬಡಬಾಗ್ನಿ
**ಔರ್ವಾಗ್ನಿ** – ಬಡಬಾಗ್ನಿ
**ಔರ್ವಾನಳ** – ಬಡಬಾಗ್ನಿ

## ಕ

**ಕಂ** – ನೀರು
**ಕಂಕ** – ಚಿಮಟ, ಇಕ್ಕುಳ; ಕರೀ ಹದ್ದು
**ಕಂಕಟ** – ಕವಚ
**ಕಂಕಣ** – ಬಳೆ
**ಕಂಕಣವಾರ** – ಬಳೆಗಳ ಸಾಲು (ಕಂಕಣ+ಆರ=ಕಂಕಣ ಮತ್ತು ಹಾರ)
**ಕಂಕಪತ್ರ** – ಹದ್ದಿನ ಗರಿ(ಗಳುಳ್ಳ ಬಾಣ)
**ಕಂಕರಿ** – ಒಂದು ವಾದ್ಯ
**ಕಂಕಾಲ(ಳ)** – ಶಿವ
**ಕಂಕಾಳಕೆ** – ಎಲುಬು ಗೂಡು
**ಕಂಕೇಲ(ಳ)** – ಅಶೋಕದ ಮರ
**ಕಂಗನೆ** – ಬಹಳವಾಗಿ
**ಕಂಗು** – ನವಣೆ
**ಕಂಗೆಡಿಸು** – ದಿಕ್ಕು ತೋಚದಂತಾಗಿಸು
**ಕಂಗೊಳಸು** – ಕಣ್ಣನ್ನು ಸೆಳೆ
**ಕಂಚಗಾರ್ತಿ** – ಕಂಚುಗಾರನ ಹೆಂಡತಿ
**ಕಂಚ(ಚು)ಗಾಱ** – ಕಂಚು ಮುಂತಾದ ಲೋಹದ ಕೆಲಸ ಮಾಡುವವನು
**ಕಂಚೀಳೆ** – ಕಂಚಿನಿಂಬೆ, ಈಳೆ ಜಾತಿಯ ಒಂದು ಹಣ್ಣು
**ಕಂಚುಕ** – ಅಂಗಿ
**ಕಂಚುಕಿ** – ರಾಣಿವಾಸದ ಅಧಿಕಾರಿ
**ಕಂಚುಕೀಂದ್ರ** – ಹಾವುಗಳ ರಾಜ; ಆದಿಶೇಷ
**ಕಂಚುಗರ್ಚು** – ಕಂಚಿನ ತಟ್ಟೆ ತೊಳೆ
**ಕಂಚುಗಾಱವಸರ** – ಕಂಚುಗಾಱ+ಪಸರ, ಕಂಚುಗಾರನ ಅಂಗಡಿ
**ಕಂಚುಗಾಱಗೇರಿ** – ಕಂಚುಗಾರರ ಬೀದಿ
**ಕಂಚುವಱಿ** – ಕಂಚಿನ ಹರೆ, ತಮಟೆ
**ಕಂಚುಳಕೆ** – ರವಿಕೆ
**ಕಂಜ** – ಕಮಲ
**ಕಂಜಜ** – ತಾವರೆಯಲ್ಲಿ ಜನಿಸಿದವನು, ಬ್ರಹ್ಮ
**ಕಂಜಜಾತಾಕರ** – ತಾವರೆಯ ಕೊಳ
**ಕಂಜಭವ** – ಕಂಜಜ
**ಕಂಜರಜ** – ತಾವರೆಯ ಪರಾಗ
**ಕಂಜಸಖ** – ತಾವರೆಯ ಪ್ರಿಯ, ಸೂರ್ಯ
**ಕಂಜಾಕ್ಷ**– ತಾವರೆಗಣ್ಣ, ವಿಷ್ಣು
**ಕಂಜಾತ** – ತಾವರೆತಲೆಗಳ ಸಮೂಹ
**ಕಂಜಾಸನ** – ಬ್ರಹ್ಮ
**ಕಂಜಾಸ್ತ್ರ** – ಮನ್ಮಥ
**ಕಂಜಾಳ** – ತಾವರೆಗಳ ಸಮೂಹ
**ಕಂಜೋದರ** – ಹೊಕ್ಕುಳಲ್ಲಿ ತಾವರೆಯನ್ನು ಹೊಂದಿದವನು, ವಿಷ್ಣು
**ಕಂಟ** – ತಾಳೆಗರಿಯ ಮೇಲೆ ಬರೆಯಲು ಬಳಸುತ್ತಿದ್ದ ಸಾಧನ
**ಕಂಟಕ** – ಮುಳ್ಳು; ಪುಲಕ; ತೊಂದರೆ ಮಾಡುವವನು
**ಕಂಟಕಗುಲ್ಮ** – ಮುಳ್ಳುಪೊದೆ
**ಕಂಟಕದ್ವಾರ** – ಮೊಳೆಗಳಿರುವ ಬಾಗಿಲು
**ಕಂಟಕವಕ್ರಿಮ** – ಮುಳ್ಳಿನಂತೆ ಡೊಂಕಾದ
**ಕಂಟಕಸ್ಥಿತಿ** – ಮುಳ್ಳುಗಳಿಂದ ಕೂಡಿದ
**ಕಂಟಕಾಂಕುರ** – ಪುಲಕವುಂಟಾಗು
**ಕಂಟಕಿತ** – ಪುಲಕಿತ
**ಕಂಟಮೊನೆ** – ಬರೆಯುವ ಸಾಧನದ ಮೊನೆ
**ಕಂಟಣ(ಳ)ಸು** – ಅರಳಿಸು; ಹಿಗ್ಗಿಸು; ಸಂಕುಚಿತಗೊಳ್ಳು; ಪುಲಕಗೊಳ್ಳು
**ಕಂಟಿಸು** – ಪೀಡಿಸು
**ಕಂಠಗತವಾಯು** – ಕೊರಳಲ್ಲಿ ಉಸಿರು ಸಿಕ್ಕಿಹಾಕಿಕೊಂಡವನು, ಮರಣೋನ್ಮುಖ
**ಕಂಠಗತಾಸು** – ಕಂಠಗತವಾಯು
**ಕಂಠಗ್ರಹಂಗೆಯ್** – ಕತ್ತು ಹಿಸುಕು
**ಕಂಠದಘ್ನ** – ಕಂಠ ಮುಳುಗುವುದು
**ಕಂಠನಾಳ** – ಕಂಟದ ನಾಳ
**ಕಂಠರುತಿ** – ಕಂಠಧ್ವನಿ
**ಕಂಠಸ್ಥ** – ಕೊರಳಿನಲ್ಲಿರುವ, ಕಂಠಗತ
**ಕಂಠಾಭರಣ** – ಕೊರಳ ಆಭರಣ
**ಕಂಠಿಕಾಬಂಧ**– ಕೊರಳ ಆಭರಣವನ್ನು ತೊಡಿಸುವುದು
**ಕಂಠಿಕಾ(ಕೆ)** – ಹಾರ, ಸರ, ಏಕಾವಳಿ
**ಕಂಠೀರವ** – ಸಿಂಹ
**ಕಂಠೀರವವಾಹನೆ** – ಸಿಂಹವಾಹನೆ, ದುರ್ಗೆ
**ಕಂಠೀರವಾಸಂದಿ** – ಸಿಂಹಾಸನ
**ಕಂಡ** – (ಖಂಡ) ತುಂಡು, ಭಾಗ
**ಕಂಡದಿಂಡೆ** – ಮಾಂಸಖಂಡ
**ಕಂಡಪಟ** – (ಕಾಂಡ ಪಟ) ತೆರೆ, ಪರದೆ
**ಕಂಡರಣೆಗೆಯ್** – ಕೆತ್ತನೆಯ ಕೆಲಸ ಮಾಡು
**ಕಂಡರಿಸು** – ಕಂಡರಣೆಗೆಯ್
**ಕಂಡವಡ** – ಕಂಡಪಟ
**ಕಂಡಿ** – ನುಸುಳುವ ರಂಧ್ರ
**ಕಂಡಿಕೆ** – ತುಂಡು
**ಕಂಡು** – (ಖಂಡ) ಕಂಡಿಕೆ
**ಕಂಡುವೋಗು** – ತುಂಡಾಗು
**ಕಂಡೂಯ(ನ)** – ನವೆ, ತುರಿಕೆ
**ಕಂಡೂಲ** – ನವೆ; ಕಜ್ಜಿ
**ಕಂಡೂಹೃತಿ**– ನವೆಯನ್ನು ಹೋಗಲಾಡಿಸುವುದು
**ಕಂತಿ** – ಜೈನಸನ್ಯಾಸಿನಿ
**ಕಂತಿಕೆ** – ಕಂತಿ
**ಕಂತು** – ಮನ್ಮಥ
**ಕಂತುಕ** – ಚೆಂಡು
**ಕಂತುಮನ** – ಕಾಮಭಾವ
**ಕಂತುಚಾಪ** – ಕಾಮನಬಿಲ್ಲು
**ಕಂತುಚೇತ** – ಕಾಮಾಸಕ್ತಿ

**ಕಂತುಮನ** – ಕಾಮಾಪೇಕ್ಷೆ
**ಕಂತುಶರ** – ಕಂತುಚಾಪ
**ಕಂತೆ** – ಚಿಂದಿ ಬಟ್ಟೆ
**ಕಂತೆಗ** – ಚಿಂದಿ ಬಟ್ಟೆ ಧರಿಸಿದವನು, ವಿರಾಗಿ
**ಕಂದ** – ಮೋಡ; ಮಗು, ಚಿಕ್ಕವರನ್ನು ವಾತ್ಸಲ್ಯದಿಂದ ಸಂಬೋಧಿಸುವುದು
**ಕಂದಕ** – ಅಗಳು, ಕೋಟೆಯ ಸುತ್ತಲಿನ ನೀರು ತುಂಬಿದ ಗುಂಡಿ
**ಕಂದರ** – ಗುಹೆ; ಕೊರಳು; ಕಣಿವೆ
**ಕಂದರೋದರ** – ಕಂದರಗಳನ್ನು ಒಳಗೊಂಡುದು
**ಕಂದರ್ಪ** – ಮನ್ಮಥ
**ಕಂದರ್ಪಸಾಯಕ** – ಕಾಮಬಾಣ
**ಕಂದರ್ಪಾರಿ** – ಕಾಮವೈರಿ, ಶಿವ
**ಕಂದಲ್(ಲ)** – ಮೊಳಕೆ, ಚಿಗುರು
**ಕಂದಲಿ** – ಬಾವುಟ
**ಕಂದ(ಲ್)ಲು** – ಮಣ್ಣಿನ ಗಡಿಗೆ
**ಕಂದಳ(ಳ)** – ಮೊಳಕೆ
**ಕಂ(ಕೆಂ)ದಳ** – ಒಂದು ಬಗೆಯ ಹೂ
**ಕಂದಳಿಕೆ** – ನೆಲ ಬಾಳೆ ಗಿಡ
**ಕಂದಳಿತ** –ಅರಳಿದ
**ಕಂದಳಿಸು** – ಕುಡಿಯೊಡೆ
**ಕಂದಿಸು** – ಬಾಡುವಂತೆ ಮಾಡು
**ಕಂದು** – ಕಾಂತಿಹೀನವಾಗು; ಕೆಂಪು ಮಿಶ್ರ ಕಪ್ಪು ಬಣ್ಣ; ರುಬ್ಬುಗುಂಡು; ಸೆಜ್ಜೆ; ಹಸುಕರು; ಕಾವಲಿ
**ಕಂದುಕ** – ಚೆಂಡು
**ಕಂದುಕಕೇಳಿ** – ಚೆಂಡಾಟ
**ಕಂದುಕಕ್ರೀಡೆ** – ಕಂದುಕಕೇಳಿ
**ಕದುಗೊರಲ** – ಶಿವ
**ಕಂಧರ** – ಕೊರಳು
**ಕಂಧರದ್ವಯಸ** – ಕೊರಳು ತಾಕುವವರೆಗೆ
**ಕಂಧರಬಂಧ** – ಹೆಗಲು
**ಕಂಪ** – ಜೇಡಿಮಣ್ಣು; ನಡುಕ
**ಕಂಪಣ(ನ)** – ಒಂದು ಆಯುಧ
**ಕಂಪನ** – ನಡುಗುವಿಕೆ
**ಕಂ(ಗಂ)ಪಲ್** – ಕೆಸರು
**ಕಂಪಲರ್** – ವಾಸನೆ ಪಸರಿಸು
**ಕಂಪಿಡಿ** – ಗಮಗಮಿಸು
**ಕಂಪಿತ** – ಕಂಪನಗೊಂಡ
**ಕಂಪಿಸು** – ನಡುಗು
**ಕಂಪು** – ಸುಗಂಧ, ವಾಸನೆ
**ಕಂಪುಗು** – ಸುಗಂಧ ಸೂಸು
**ಕಂಪುಗೊಳ್** – ಮೂಸಿನೋಡಿ
**ಕಂಪುವಳ** – ಗಾಳಿ
**ಕಂಪುವೆಱು** – ಸುಂಧವನ್ನು ಪಡೆ
**ಕಂಪುವೇಱು** – ಕಂಪುವೆಱು
**ಕಂಪುವೊಟಿಲ್** – ಸುವಾಸನೆಯ ನಗರ; ಒಂದು ಊರಿನ ಹೆಸರು
**ಕಂಬನಿಗಿಡಿ** –ಕಣ್ಣೀರ ಕಿಡಿ
**ಕಂಬಲಾಶ್ವತ** – ಕಂಬಲ, ಅಶ್ವತ ಎಂಬ ಇಬ್ಬರು ನಾಗರು
**ಕಂಬಳ** – ಕಂಬಳಿ, ಉಣ್ಣೆಯ ಹೊದಿಕೆ
**ಕಂಬಳತೀರ್ಥ** – ಒಂದು ಕ್ಷೇತ್ರದ ಹೆಸರು
**ಕಂಬಿ** – ಕುದುರೆ ಬಾಯಲ್ಲಿನ ಲೋಹದ ತುಂಡು; ಕಲಾಬತ್ತಿನ ಅಂಚು; ತಂತಿ
**ಕಂಬು** – ನೀರು; ಶಂಖ
**ಕಂಬುಗಲ** – ಶಂಖುವಿನಂತಹ ಕೊರಳು
**ಕಂಬುಗ್ರೀವೆ** – ಶಂಖುವಿನಂತಹ ಕೊರಳುಳ್ಳವಳು
**ಕಂಭ** – ಕಂಬ
**ಕಂಭಗಟ್ಟು** – ಕಂಬದ ಸುತ್ತ ಮಾಡಿದ ಅಲಂಕಾರ
**ಕಂಬನಿಱೆಸುಗೆ** – ಕಂಬ ನಿಲ್ಲಿಸುವಿಕೆ
**ಕಂಭನಿಱುಗೆ** – ಕಂಬ ಸ್ಥಾಪಿಸುವುದು
**ಕಂಭಶಕ್ತಿ** – ಬೆಂಬಲ ಶಕ್ತಿ
**ಕಂಸಸೂದನ** – ಕಷ್ಣ
**ಕಂಸಾಳ** – (ಕಾಂಸ್ಯ+ತಾಳ) ಕಂಚಿನ ತಾಳ
**ಕಃ** – ಯಾವನು
**ಕಕರಗೆಯ್ತ** – ಕಕರವೆಂಬ ಮದ್ಯದ ಕಾರ್ಯ, ಅಂದರೆ ಅಮಲು
**ಕಕುದ** – ಶಿಖರ; ಗೂಳಿಯ ಹಿಣಿಲು
**ಕಕುದ್ಮತ್** – ಎತ್ತು
**ಕಕುಭ** – ದಿಕ್ಕು; ಮತ್ತಿಯ ಗಿಡ; ವೀಣೆಯ ಬುರುಡೆ
**ಕಕ್ಕಂಬು** – ಒಂದು ಬಗೆಯ ಬಾಣ, ಮುಳ್ಳಿನ ಬಾಣ
**ಕಕ್ಕಡವಂದಿ** – ದೊಡ್ಡ ಹಂದಿ
**ಕಕ್ಕಡೆ** – ಗರಗಸದಂತೆ ಬಾಯುಳ್ಳ ಒಂದು ಬಗೆಯ ಆಯುಧ; ಗುದ್ದಲಿ
**ಕಕ್ಕಡೆಗಾಸಿಯಾಗು** – ಕಕ್ಕಡೆಯ ಏಟಿನಿಂದ ಗಾಸಿಗೊಳ್ಳು
**ಕಕ್ಕರ** – ಒಂದು ಬಗೆಯ ಮದ್ಯ; ಕೃಕರ, ಒಂದು ವಿಧದ ನೀರುಹಕ್ಕಿ
**ಕಕ್ಕರಗೆಯ್ತ** – ಕಕ್ಕರವೆಂಬ ಮದ್ಯದ ಅಮಲಿನಿಂದ ಮಾಡುವ ಚೇಷ್ಟೆ
**ಕಕ್ಕರನೆ** – ಕರಕರನೆ ಎಂಬ ಅನುಕರಣಶಬ್ದ
**ಕಕ್ಕರವಟಿಯಿಗೆ** – ಮಾಸಲು ಬಣ್ಣದ ಬಟ್ಟೆ
**ಕಕ್ಕರಸಂಜೆ** – ಬಣ್ಣಬಣ್ಣದ ಸಂಜೆ
**ಕಕ್ಕರಿ** – ಮೋಸ, ವಂಚನೆ
**ಕಕ್ಕವಡೆ** – ಮಲ್ಲಯುದ್ಧದ ಒಂದು ವರಸೆ
**ಕಕ್ಕಸಂಬೆಱು** – ಚಡಪಡಿಸು
**ಕಕ್ಕಸಜವ್ವನ** – ಕರ್ಕಶ ಯೌವನ, ಬಲಿತ ಯೌವನ
**ಕಕ್ಕಳಗಟಿಲ್** – ಚೂರುಚೂರಾಗು
**ಕಕ್ಕು** – ವಾಂತಿಮಾಡಿಕೊ; ಗರಗಸದ ಹಲ್ಲು
**ಕಕ್ಕುಂದಟಿ** – ಹಲ್ಲುಗಳಿರುವ ಆಯುಧ, ಗರಗಸ
**ಕಕ್ಷ** – ಕಂಕುಳು

**ಕಕ್ಷಪಾಲಿಕೆ** – ಬಗಲ ಚೀಲ
**ಕಕ್ಷಪುಟ** – ಕಕ್ಷ
**ಕಕ್ಷಮೂಲ** – ಕಕ್ಷ
**ಕಕ್ಷ್ಯ** – ಮನೆಯ ತೊಟ್ಟಿ
**ಕಕ್ಷ್ಯಾಂತರ** – ಒಳ ಆವರಣ
**ಕಕ್ಷ್ಯಾವಕಾಶ** – ಆವರಣದ ಹರಹು
**ಕಗ್ಗು** – ಕಪ್ಪಾಗು; ಕಪ್ಪಿಡು
**ಕಚ** – ತಲೆ ಕೂದಲು
**ಕಚಗ್ರಹ** – ಕೂದಲನ್ನು ಹಿಡಿಯುವಿಕೆ
**ಕಚಗ್ರಹಂಗೆಯ್** – ಮುಡಿ ಹಿಡಿ
**ಕಚಬಂಧ** – ಮುಡಿ, ತುರುಬು
**ಕಚಭಾರ** – ಕೇಶರಾಶಿ
**ಕಚರಿ** – ಅರಿದಾಳ
**ಕಚಾಕಚಿ** – ಪರಸ್ಪರ ಕೂದಲು ಹಿಡಿದೆ ಎಳೆದಾಡು
**ಕಚಾವಳ** – ಕೇಶರಾಶಿ
**ಕಚೌಘ** – ಕೇಶರಾಶಿ
**ಕಚ್ಚಟಿ** – ಬಿರುದಿನ ಬಳೆ; ಒತ್ತಿ ಚಪ್ಪಟೆಯಾದುದು
**ಕಚ್ಚುಟ** – ಕೌಪೀನ
**ಕಚ್ಚೆ** – ಪಂಚೆ ಅಥವಾ ಸೀರೆಯ ಚುಂಗು
**ಕಚ್ಚೆಯಕಟ್ಟು** – ಸಿದ್ಧವಾಗು
**ಕಚ್ಛ** – ಕಚ್ಚೆ
**ಕಚ್ಛಪ** – ಆಮೆ
**ಕಚ್ಛಾವಾಲ** – ಹಿಂಗಚ್ಚೆ
**ಕಜ್ಜ** – ಕಾರ್ಯ
**ಕಜ್ಜಕ** – ಲಾಳದ ಕಡ್ಡಿ
**ಕಜ್ಜಗಿ** – ಕೆಲಸದಲ್ಲಿ ಗಟ್ಟಿಗ
**ಕಜ್ಜಲ(ಳ)** – ಕಣ್ಣಿನ ಕಾಡಿಗೆ
**ಕಟ** – ಆನೆಯ ಗಂಡಸ್ಥಳ; ದವಡೆ
**ಕಟಕ** – ಸೈನ್ಯ; ಪಾಳೆಯ; ಕೈಬಳೆ; ರಾಜಧಾನಿ; ಬಿಲ್ಲಿನ ಹೆದೆ
**ಕಟಕತ್ವ** – ಸೇನಾಧಿಪತ್ಯ
**ಕಟಕಾಚಾರ್ಯ** – ಸೇನೆಯ ತರಬೇತಿದಾರ
**ಕಟಕೋಪಾಧ್ಯಾಯ** – ಕಟಕಾಚಾರ್ಯ
**ಕಟವಾಯ್** – ಬಾಯ ಕೊನೆ
**ಕಟಾಕ್ಷ** – ಕುಡಿನೋಟ
**ಕಟಾಕ್ಷವಿಕ್ಷೇಪ** – ಕುಡಿನೋಟ; ಕಣ್ಣ ಸಂಜ್ಞೆ
**ಕಟಾಕ್ಷವೀಕ್ಷಣ** – ಕಟಾಕ್ಷವಿಕ್ಷೇಪ
**ಕಟಾಕ್ಷಿಸು** – ಓರೆನೋಟ ಬೀರು
**ಕಟಾರ(ರಿ)** – ಕಿರುಗತ್ತಿ
**ಕಟಾಹ** – ದೊಡ್ಡ ಪಾತ್ರೆ
**ಕಠಾರ** – ಕಟಾರ
**ಕಟಿ** – ಸೊಂಟ
**ಕಟಿತಟ** – ಸೊಂಟ ಪ್ರದೇಶ
**ಕಟಿದಘ್ನ** – ಸೊಂಟದವರೆಗೆ ಮುಳುಗುವ
**ಕಟಿಬಂಧ** – ಉಡಿದಾರ; ಡಾಬು
**ಕಟಿವ** – ಕಟಿ
**ಕಟಿಸೂತ್ರ** – ಕಟಿಬಂಧ
**ಕಟು** – ಕಾರವಾದ; ರಭಸದ
**ಕಟುತ್ರಯ** – ಶುಂಠಿ, ಮೆಣಸು, ಹಿಪ್ಪಲಿಗಳ ಮಿಶ್ರಣ
**ಕಟುಕತ್ರಯ** – ಕಟುತ್ರಯ
**ಕಟುರ** – ಕಠೋರ
**ಕಟುವಿಪಾಕೆ** – ಕಟು ರುಚಿಯನ್ನು ನೀಡುವವಳು
**ಕಟ್ಟಂಕ** – ಬಿರುಸಾದ ಕಾಳಗ
**ಕಟ್ಟಂಕದಲ್ಲಣ** – ದೊಡ್ಡ ಶೂರರನ್ನೂ ತಲ್ಲಣಗೊಳಿಸುವವನು
**ಕಟ್ಟಕಡೆ** – ತೀರ ಕೊನೆ
**ಕಟ್ಟಚ್ಚರಿ** – ಕಡಿದಾದ ಅಚ್ಚರಿ
**ಕಟ್ಟಣಕ** – ಸುಂದರ, ಅದ್ಭುತ
**ಕಟ್ಟಣ್ಮು** – ಕಡುಗಲಿತನ
**ಕಟ್ಟಣ್ಮುಕಾಱ** – ಕಡುಗಲಿ
**ಕಟ್ಟರಸ** – ಪ್ರಬಲನಾದ ರಾಜ
**ಕಟ್ಟ(ಲೆ)ಳೆ** –ತೂಕದ ಬಟ್ಟು; ನಿಯಮ; ಚಿನ್ನರತ್ನಗಳನ್ನು ತೂಗುವ ಒಂದು ಅಳತೆ
**ಕಟ್ಟಳ್ಕೆ** – ಒತ್ತಾಗಿರುವುದು
**ಕಟ್ಟಱಿಕೆ** – ಪ್ರಸಿದ್ಧಿ
**ಕಟ್ಟಾನೆ** – ಶಕ್ತಿಶಾಲಿಯಾದ ಆನೆ
**ಕಟ್ಟಾಯ** – ಕಠಿಣ ಸಂದರ್ಭ; ಖಂಡಿತವಾದ ಮಾತು; ಮಹಾ ಪರಾಕ್ರಮ
**ಕಟ್ಟಾಯಕಾರ್ತಿ** – ಬಹು ಚೆಲುವೆ; ಅತಿ ಚತುರೆ
**ಕಟ್ಟಾಯಕಾಱ** – ಮಹಾ ಪರಾಕ್ರಮಿ
**ಕಟ್ಟಾಯತ** – ಚೆನ್ನಾದ ಸಿದ್ಧತೆ
**ಕಟ್ಟಾಳ್** – ಮಹಾ ಶೂರ
**ಕಟಾಳ್ತನ** – ಮಹಾ ಶೌರ್ಯ
**ಕಟ್ಟಾಱು** – ಚೆನ್ನಾಗಿ ಒಣಗು
**ಕಟ್ಟಿಗೆಕಾ(ಗಾ)ಱ** – ದಂಡಧಾರಿ, ಪ್ರತೀಹಾರಿ
**ಕಟ್ಟಿಗೆವಿಡಿ** – ದಂಡಧಾರಿಯಾಗು
**ಕಟ್ಟಿದಿರ್** – ಕಟ್ಟಾ ಎದುರು
**ಕಟ್ಟಿಸು** – ಬಂಧಿಸು; ಅಳವಡಿಸು
**ಕಟ್ಟಿಱುಂಪೆ** – ಕಟ್ಟಿರುವೆ, ಗೊದ್ದ
**ಕಟ್ಟು** – ಬಂಧಿಸು; ತಡೆ ಹಾಕು; ತೊಡು; ಬಂಧನ; ಸಂಕೋಲೆ
**ಕಟ್ಟುಂಗವಳ** – ಬುತ್ತಿ
**ಕಟ್ಟುಂಚುರಿಗೆ** – ಸೊಂಟದಲ್ಲಿ ಕಟ್ಟಿಕೊಂಡ ಸುರಿಗೆ
**ಕಟ್ಟುಕಡಹ** – ತೊಳಲಾಟ
**ಕಟ್ಟುಕಡಿ** – ಆತಂಕಪಡು
**ಕಟ್ಟುಕಡೆ** – ಮರುಗು; ಮರ್ಯಾದೆ ಮೀರು, ನಿಯಮೋಲ್ಲಂಘನೆ ಮಾಡು
**ಕಟ್ಟುಗ್ಗರ** – ಕಟ್ಟುಗ್ರ
**ಕಟ್ಟುಬ್ಬಸ** – ಬಹು ಉಬ್ಬಸ
**ಕಟ್ಟುಬ್ಬೆಗ** – ಬಹು ಚಿಂತೆ
**ಕಟ್ಟುರ್ಬಟೆ** – ಆಧಿಕ್ಯ; ರಭಸ
**ಕಟ್ಟುವಂಜರ** – ಬಲವಾದ ಪಂಜರ; ನಾಗವೇದಿಕೆ
**ಕಟ್ಟುವಡು** – ಕಟ್ಟನಿಂದ ಬಿಗಿ

**ಕಟ್ಟವಡೆ** – ಕಟ್ಟುವಡು
**ಕಟ್ಟುವರ್** – ಕಠಿಣವಾಗು
**ಕಟ್ಟುವೆಱು** – ಕಟ್ಟುವಡು
**ಕಟ್ಟೆ** – ಜಗಲಿ
**ಕಟ್ಟೆಗಟ್ಟು** – ಅಣೆಯನ್ನು ಕಟ್ಟು
**ಕಟ್ಟೆಗ್ಗ** – ಮಹಾ ಮೂರ್ಖ
**ಕಟ್ಟೆಲ್ವು** – ಗಟ್ಟಿಯಾದ ಮೂಳೆ
**ಕಟ್ಟೆಱಕ** – ಬಹು ಪ್ರೀತಿ
**ಕಟ್ಟೇಕಾಂತ** – ಕಡಿದು ಏಕಾಂತ, ಮಹಾ ರಹಸ್ಯ
**ಕಟ್ಟೇವ** – ಕಡು ಬೇಸರ; ತಿರಸ್ಕಾರ
**ಕಟ್ಟೇಱಿಗೆ** – ಬಹಳ ಏಳಿಗೆ
**ಕಠೋರ** – ಬಿರುಸು; ಉಗ್ರ
**ಕಠೋರವಾಣಿ** – ಗಡಸು ಮಾತು
**ಕಡಂಕು** – ಕಬಂಧ, ಅಟ್ಟೆ
**ಕಡಂಗ** – ಕಡಗ, ಒಂದು ಆಭರಣ
**ಕಡಂಗು** – ಉತ್ಸುಕಗೊಳ್ಳು; ಆವೇಶಗೊಳ್ಳು; ಕಂದಕ
**ಕಡಂಗೊಳ್** – ಸಾಲ ತೆಗೆದುಕೊ
**ಕಡಂದುಱು** – ಒಂದು ಕೀಟ
**ಕಡಂಬ** – ಕದಂಬ ವೃಕ್ಷ, ಈಚಲ ಮರ
**ಕಡಂಬಡೆ** – ಕಡಂಗೊಳ್
**ಕಡಂಬರಸ** – ಈಚಲ ರಸ, ಹೆಂಡ
**ಕಡಂಮಾಡು** – ಕಡಂಗೊಳ್
**ಕಡಕು** – ಚೂರು ಕಲ್ಲು
**ಕಡಲ್** – ಸಮುದ್ರ
**ಕಡಲುರಿ** – ಸಮುದ್ರದ ಬೆಂಕಿ, ಬಡಬಾಗ್ನಿ
**ಕಡಲೆ** – ಚಣಕ
**ಕಡಲೆಱೆಯ** – ಕಡಲ ಒಡೆಯ, ವರುಣ
**ಕಡಲೊಡೆಯ** – ಕಡಲೆಱೆಯ
**ಕಡಲ್ಗಟ್ಟು** – ಕಡಲಿನಂತೆ ಅಗಾಧವಾಗು
**ಕಡಲ್ಗಿಚ್ಚು** – ಬಡಬಾಗ್ನಿ
**ಕಡಲ್ವರಿ** – ಕಡಲಿನಂತೆ ಅಗಾಧವಾಗು
**ಕಡಲ್ವುಗು** – ಸಮುದ್ರವನ್ನು ಹೊಗು
**ಕಡವಡ** – ಡೇರೆ
**ಕಡವು** – (ಕದಂಬ) ಕಡವಾಲದ ಮರ
**ಕಡವೆ** – ಕಡವು, ಒಂದು ಜಾತಿಯ ಜಿಂಕೆ
**ಕಡಸು** – ಕರು ಹಾಕದ ಹಸು
**ಕಡಾರ** – ಕೊಪ್ಪರಿಗೆ
**ಕಡಾಹ** – ಕಡಾರ
**ಕಡಿ** – ಹಲ್ಲಿನಿಂದ ಕಚ್ಚು, ಕತ್ತರಿಸು; ತುಂಡು; (ಕಟಿ) ಸೊಂಟ
**ಕಡಿಕ** – ಕಟುಕ
**ಕಡಿಕಂಡ** – ತುಂಡು ತುಂಡು
**ಕಡಿಕಂಡಂಗೆಯ್** – ತುಂಡು ತುಂಡುಮಾಡು
**ಕಡಿಕೆಯ್** – ಕಡಿಕಂಡಂಗೆಯ್; ರಭಸಗೊಳ್ಳು
**ಕಡಿಕೊಂಬು** – ಕತ್ತರಿಸಿದ ಕೊಂಬೆ
**ಕಡಿಗಡಿ** – ಸೀಳು
**ಕಡಿಗೊಂಬುಗೊಳ್** – ಕತ್ತರಿಸಿದ ಕೊಂಬೆಯುಳ್ಳದ್ದಾಗು
**ಕಡಿತ** – ಬಳಪದಿಂದ ಬರೆಯಲು ಕಪ್ಪುಲೇಪನವುಳ್ಳ ಬಟ್ಟೆ; ಪಗಡೆ ಚದುರಂಗಗಳ ಹಾಸು; ಚರ್ಮ; ಕಡತ, ಲೆಕ್ಕದ ಪುಸ್ತಕ
**ಕಡಿತಲೆ** – ಕತ್ತಿ
**ಕಡಿತಲೆಕಾಱ** – ಕತ್ತಿ ಹಿಡಿದವನು
**ಕಡಿತಲೆಯಾಳ್** – ಕತ್ತಿ ಹಿಡಿದ ಅಂಗರಕ್ಷಕ
**ಕಡಿದು** – ತೀವ್ರವಾದ; ಉಗ್ರವಾದ
**ಕಡಿಯಣ** – ಕಡಿವಾಣ
**ಕಡಿಯಿಸು** – ಕತ್ತರಿಸು, ಖಂಡಿಸು
**ಕಡಿವಡೆ** – ತುಂಡಾಗು
**ಕಡಿವೆಱು** – ತುಂಡಾಗು
**ಕಡಿವೋಗು** – ಕಡಿವೆಱು
**ಕಡಿಹ** – ಕತ್ತರಿಸುವಿಕೆ
**ಕಡು** – ಹೆಚ್ಚಾಗಿ
**ಕಡು(ಂ)ಬು** – ಕಡುಬು, ಒಂದು ತಿಂಡಿ
**ಕಡುಕುಂದಱೆ** – ಹಲ್ಲುಗಳುಳ್ಳ ಕತ್ತಿ, ತಿವಿವ ದಸಿ
**ಕಡುಕು** – ಅಟ್ಟೆ, ಕಬಂಧ
**ಕಡುಕೆಂಕ** – ಅತಿ ಕೆಂಪು
**ಕಡುಕೆಯ್** – ರಭಸಗೊಳ್ಳು; ಶೌರ್ಯ ತೋರು
**ಕಡುಗಂದಿ** – ಕರುವಿನ ಮೇಲೆ ಪ್ರೀತಿಯಿಟ್ಟ ಹಸು
**ಕಡುಗಂದಿಕಲಿ** – ಮಹಾ ಶೂರ
**ಕಡುಗಂದಿತನ** – ಅತಿಪ್ರೀತಿ
**ಕಡುಗಂದು** – ಅತಿಯಾಗಿ ಬಾಡು
**ಕಡುಗಂಪು** – ತುಂಬ ಸುವಾಸನೆ
**ಕಡುಗಜ್ಜ** – ದೊಡ್ಡ ಕೆಲಸ
**ಕಡುಗಟ್ಟ** – ಕಡುಕಷ್ಟ
**ಕಡುಗಡಿದು** – ತುಂಬ ವೇಗಶಾಲಿ
**ಕಡುಗಡುಪು** – ತುಂಬ ರಭಸ
**ಕಡುಗರಿದು** – ಕಡುಗಪ್ಪಾದುದು
**ಕಡುಗರ್ಪು** – ತುಂಬ ಕಪ್ಪು
**ಕಡುಗಲಿ** – ಮಹಾ ಶೂರ
**ಕಡುಗಲಿತನ** – ಮಹಾ ಪರಾಕ್ರಮ
**ಕಡುಗವಿಲ** – ಕಡು ಕಂದು ಬಣ್ಣ
**ಕಡುಗಱಿಪ** – ಮಹಾ ಹರಟೆಕೋರ
**ಕಡುಗಟ್ತಿಲೆ** – ದಟ್ಟವಾದ ಕತ್ತಲೆ
**ಕಡುಗಾಡಿ** – ಬಹು ಚೆಲುವು
**ಕಡುಗಾಡಿವೆಱು** – ಬಹಳ ಚೆಲುವನ್ನು ಪಡೆ
**ಕಡುಗಾಯ್** – ಬಹಳ ಬಿಸಿಯಾಗು
**ಕಡುಗಾಯ್ಪು** – ಬಹಳ ಬಿಸಿ
**ಕಡುಗಾಳಿ** – ಬಿರುಗಾಳಿ
**ಕಡುಗಾಳುತನ** – ಮಹಾ ಮೂರ್ಖತೆ; ಮಹಾ ಮೋಸ
**ಕಡುಗಿಱಿದು** – ಬಹು ಚಿಕ್ಕದು
**ಕಡುಗು** – ಸಮರ್ಥನೆ
**ಕಡುಗುಣ್ಪು** – ತುಂಬ ಆಳ

**ಕಡುಗುತ್ತ** – ತೀವ್ರವಾದ ಕಾಯಿಲೆ
**ಕಡುಗುದುರೆ** – ಬಿರುಗುದುರೆ
**ಕಡುಗೂರ್** – ತುಂಬ ಪ್ರೀತಿಸು
**ಕಡುಗೂರಿತು** – ಬಹಳ ಕರಿತವಾದುದು
**ಕಡುಗೂರ್ಪ** – ತುಂಬ ಪ್ರೀತಿಸುವವನು
**ಕಡುಗೂರ್ಮು** – ಆಳವಾದ ಪ್ರೀತಿ; ಬಹಳ ಹರಿತ
**ಕಡುಗೂರ್ಮೆ** – ಬಹಳ ಪ್ರೇಮ
**ಕಡುಗೂರ್ಮೆವೆಱು** – ಅಧಿಕ ಪ್ರೇಮ ಹೊಂದು
**ಕಡುಗೆಂಟು** – ಬಹು ದೂರ
**ಕಡುಗೆಂಪು** – ಆಳವಾದ ಕೆಂಪು ಬಣ್ಣ
**ಕಡುಗೆಚ್ಚಲ್** – ತುಂಬಿದ ಕೆಚ್ಚಲು
**ಕಡುಗೆಯ್ಯ** – ಕೈಚಳಕವುಳ್ಳವನು
**ಕಡುಗೆಲಸಿ** – ಕಷ್ಟಪಟ್ಟು ಕೆಲಸಮಾಡುವವನು
**ಕಡುಗೆಲ್ಲಕಾರ್ತಿ** – ಸದಾ ಗೆಲ್ಲುವವಳು
**ಕಡುಗೆಸಱ್** – ಬಹಳ ಕೆಸರು
**ಕಡುಗೇಡಿ** – ಬಹು ಕೇಡಿಗ
**ಕಡುಗೊಯ್ಯಲ್** – ಪೂರ್ತಿ ಕತ್ತರಿಸುವುದು
**ಕಡುಗೊರ್ಬು(ರ್ವು)** – ತುಂಬ ಕೊಬ್ಬು, ಸೊಕ್ಕು
**ಕಡುಗೋಡುವೆಱು** – ತುಂಬ ತಣ್ಣಗಿರು
**ಕಡುಗೋಪ** – ಬಹಳ ಕೋಪ
**ಕಡುಚಪಲ** – ತುಂಬ ಚಂಚಲವಾಧ
**ಕಡುಚಳಿ** – ತುಂಬ ಚಳಿ
**ಕಡುಚೆಲ್ವ** – ಬಹಳ ಚೆಲುವ
**ಕಡುಚೆಲ್ವು** – ತುಂಬ ಚೆಲುವು
**ಕಡುಚೆಲ್ವೆ** – ಬಹು ಚೆಲುವೆ
**ಕಡುಜರ** – ತೀಕ್ಷ್ಣ ಜ್ವರ
**ಕಡುಜವ** – ತೀವ್ರ ವೇಗ
**ಕಡುಜಾಣ್** – ಬಹು ಜಾಣತನ
**ಕಡುಜಾಣ** – ಯುಂಬ ಜಾಣ
**ಕಡುಜಾಣೆ** – ಬಹು ಜಾಣೆ
**ಕಡುಟಕ್ಕು** – ಮಹಾ ಮೋಸ
**ಕಡುತಪ** – ಕಠಿಣ ತಪಸ್ಸು
**ಕಡುದಣ್ಣಸೇಱು** – ತುಂಬ ತಣ್ಣಗಾಗು
**ಕಡುದಣ್ಪು** – ತುಂಬ ತಂಪು
**ಕಡುದರ್ಪ** – ಬಹು ಗರ್ವ
**ಕಡುದಿಟ** – ಪೂರ್ಣ ಸತ್ಯ
**ಕಡುದುಗುಡ** – ಆಳವಾದ ದುಃಖ
**ಕಡುದೇಸಿವೆಣ್** – ಬಹು ಚೆಲುವೆಯಾದ ಹೆಣ್ಣು
**ಕಡುನಂಜು** – ತೀಕ್ಷ್ಣ ವಿಷ
**ಕಡುನಂಟ** – ಆತ್ಮೀಯ ಬಂಧು
**ಕಡುನನ್ನಿ** – ಪೂರ್ಣ ಸತ್ಯ
**ಕಡುನಾಣ್** – ಬಹು ನಾಚಿಕೆ
**ಕಡುನಿಡಿದುಗೊಳ್** – ಬಹು ನೀಳವಾಗು
**ಕಡುನಿಮಿರ್** – ಬಹು ಉದ್ದವಾಗು
**ಕಡುನೀರಡಸು** – ಬಹು ಬಾಯಾರಿಕೆಗೊಳ್ಳು
**ಕಡುನುಡಿ** – ಕಟು ಮಾತು
**ಕಡುನುಣ್ಪು** – ಬಹು ನುಣುಪು
**ಕಡುನೆಱ** – ಮರ್ಮಸ್ಥಾನ
**ಕಡುನೇಹ** – ತುಂಬ ಪ್ರೀತಿ
**ಕಡುನೋವು** – ಆಳವಾದ ನೋವು
**ಕಡುಪಗಲ್** – ಏರಿದ ಹಗಲು
**ಕಡುಪಾಱು** – ಕಡುಪು+ಆಱು, ತೀಕ್ಷ್ಣತೆ ಕಡಿಮೆಯಾಗು
**ಕಡುಪು** – ಉಗ್ರತೆ; ಪರಾಕ್ರಮ
**ಕಡುಪುಗಿಡಿಸು** – ಉಗ್ರತೆಯನ್ನು ಕಡಿಮೆಮಾಡು
**ಕಡುಪುಗೆಯ್** – ಸಾಹಸ ಮಾಡು
**ಕಡುಪೆಂಪು** – ಅತಿಶಯ ಹಿರಿಮೆ
**ಕಡುಪೊಲ್ಲ** – ಬಲು ಕೆಟ್ಟದ್ದು
**ಕಡುಬಲ್ಲಿದ** – ಬಹು ಬಲಶಾಲಿ; ಬಹು ಶ್ರೀಮಂತ
**ಕಡುಬಿನ್ನಣಂಬಡೆ** – ಬಹಳ ಕೌಶಲವನ್ನು ಹೊಂದು
**ಕಡುಬಿಲ್ಗಾಱ** – ಪ್ರಚಂಡ ಬಿಲ್ಲುಗಾರ
**ಕಡುಬಿಸುಪು** – ತುಂಬ ಬಿಸಿ
**ಕಡುಮುಳಿ** – ಬಹಳವಾಗಿ ಕೋಪಿಸಿಕೊ
**ಕಡುಮುಳಿಸು** – ಕಡುಗೋಪ
**ಕಡುಮೆ** – ಉಗ್ರತೆ
**ಕಡುಮೋಹ** – ಅತಿ ಮೋಹ
**ಕಡುಮೋಹಿತ** – ಅತಿಮೋಹಕ್ಕೊಳಗಾದವನು
**ಕಡುರಯ್ಯ** – ತುಂಬ ಸುಂದರ
**ಕಡುರಾಗಿ** – ತುಂಬ ಮೋಹವುಳ್ಳವನು
**ಕಡುವಂದೆ** – ದೊಡ್ಡ ಹೇಡಿ
**ಕಡುವಿಣ್ಣಿತ್ತು** – ತುಂಬ ಭಾರವಾದುದು
**ಕಡುವಿಣ್ಪು** – ಬಹು ಭಾರ
**ಕಡುವಿತ್ತಿಗ** – ಬಹು ನಿಪುಣ
**ಕಡುವಿನ್ನಣ** – ಮಿಗಿಲಾದ ಕೌಶಲ
**ಕಡುವಿನ್ನನೆ** – ಬಹಳ ಖಿನ್ನತೆಯಿಂದ
**ಕಡುವಿಲ್ಲ** – ಗಟ್ಟಿಗನಾದ ಬಿಲ್ಲುಗಾರ
**ಕಡುವಿಸಿಲ್** – ಬಿರುಬಿಸಿಲು
**ಕಡುವೀೞು** – ಜೋರಾಗಿ ಬೀಳು
**ಕಡುವೆಂಕೆ** – ಪ್ರಖರ ಬೆಂಕಿ
**ಕಡುವೆಟ್ಟಿತ್ತು** – ಬಹು ಕಠಿಣವಾದುದು
**ಕಡುವೆರ್ಚು** – ಬಹು ಏಳಿಗೆ
**ಕಡುವೆಸ** – ದೊಡ್ಡ ಕೆಲಸ
**ಕಡುವೆಸನಿಗ** – ಬಿಡಿಸಲಗದ ದುಶ್ಚಟವುಳ್ಳವನು
**ಕಡುವೇಗ** – ಅಧಿಕ ವೇಗ
**ಕಡುವೇಟಕಾಱ** – ಉತ್ಕಟ ಪ್ರಣಯವುಳ್ಳವನು
**ಕಡುವೇಟಗಾರ್ತಿ** – ಉತಕ್ಟ ಪ್ರೇಮಿಯಾದವಳು
**ಕಡುವೇನೆ** – ಬಹಳ ನೋವು
**ಕಡುವೊಂಗು** – ತೀರ ಸಡಗರಿಸು
**ಕಡುವೊದಗು** – ಜೋರಾಗಿ ಉಂಟಾಗು
**ಕಡುವೊಸತು** – ಹೊಚ್ಚ ಹೊಸದು
**ಕಡುಸಂತಸ** – ಬಹಳ ಸಂತೋಷ
**ಕಡುಸಾರೆ** – ತೀರ ಹತ್ತಿರ
**ಕಡುಸಿಗು** – ತುಂಬ ನಾಚಿಕೆ
**ಕಡುಸೇದೆ** – ತುಂಬ ಬಳಲಿಕೆ

**ಕಡುಸೊರ್ಕು** – ತುಂಬ ಮದ(ವೇರು)
**ಕಡುಸೋಲ** – ದೊಡ್ಡ ಸೋಲು
**ಕಡೆ** – ಮಥಿಸು; ಕೆತ್ತು; ಕೊನೆ; ರಂಗೋಲಿ
**ಕಡೆಗಣ್** – ಕಟಾಕ್ಷ
**ಕಡೆಗಣಿಸು** –ಅಲಕ್ಷ್ಯಮಾಡು
**ಕಡೆಗಣ್ಮು** – ಕಡೆಗಣಿಸು
**ಕಡೆಗಣ್ಣೇಱ್** – ಕುಡಿನೋಟದ ಗಾಯ
**ಕಡೆಗಾಣ್** – ಕೊನೆಗಾಣು
**ಕಡೆಗೋಡಿವರಿ** – ಕೋಡಿ ಬೀಳು
**ಕಡೆಗೋಡಿವರಿಯಿಸು** – ಕೋಡಿ ಬೀಲುವಂತೆ ಮಾಡು
**ಕಡೆಗೋಡಿವಿಡು** – ಕಡೆಗೋಡಿವರಿಯಿಸು
**ಕಡೆದೋಱು** – ಕೊನೆಗಾಣು
**ಕಡೆನೇಣ್** – ಕಡೆಗೋಲಿನ ಹಗ್ಗ
**ಕಡೆಪ** – ಕಡೆಯುವಿಕೆ; ಕೆತ್ತುವಿಕೆ
**ಕಡೆಪಟ್ಟು** – ಕೊನೆಯದಾಗಿ
**ಕಡೆಪಡು** – ಅಲಂಕೃತಗೊಳ್ಳು
**ಕಡೆಮುಟ್ಟು** – ಕೊನೆ ಮುಟ್ಟು
**ಕಡೆಯಾಣಿ** – ಅಪರಂಜಿ
**ಕಡೆಯಿಕ್ಕು** – ಅಲಂಕರಿಸು
**ಕಡೆಯಿಸು** – ಮಥಿಸುವಂತೆ ಮಾಡು
**ಕಡೆಯುಡಿ** – ಕೊನೆಯ ಭಾಗ
**ಕಡೆಯೆಯ್ದಿಸು** – ಕೊನೆಗಾಣಿಸು
**ಕಡೆವಗಲ್** – ಹಗಲ ಕೊನೆ, ಸಂಜೆ
**ಕಡೆವಾಯ್** – ಕಡೆ+ಪಾಯ್, ಕೊನೆ ಮುಟ್ಟು; ಕಟವಾಯಿ, ಬಾಯಿಯ ಕೊನೆ
**ಕಡೆವುಟ್ಟು** – ಕಡೆಯಲ್ಲಿ ಹುಟ್ಟಿದ ಮಗು
**ಕಡೆವೊನ್** – ಪುಟವಿಟ್ಟ ಚಿನ್ನ
**ಕಡೆಸಲ್** – ಕೊನೆ ಮುಟ್ಟು; ಸಾಧ್ಯವಾಗಿಸು
**ಕಡೆಸಿಡಿಲ್** – ಹೊರಕ್ಕೆ ಹಾರು
**ಕಡೆಸಿಲ್ಕು** – ಕೊನೆಗೆ ಉಳಿ
**ಕಡ್ಡ** – ದಿಟ್ಟತನ; ಮತ್ಸರ; ವೈರಿ
**ಕಡ್ಡಗೂಂಟಣಿ** – ದಿಟ್ಟೆಯಾದ ಕುಂಟಣಿ
**ಕಡ್ಡಣ** – ಜಡೆಗಟ್ಟಿದ ಕೂದಲು
**ಕಡ್ಡವಾರ** – ಕೆಟ್ಟ ವಾರ; ಶನಿವಾರ; ವಡ್ಡವಾರ
**ಕಡ್ಡು** – ಗಡ್ಡ
**ಕಡ್ಡುಗೊಳ್** – ರೋಷಗೊಳ್ಳು
**ಕಡ್ಡುದರ್** – ವಿರಸಮಾಡು
**ಕಡ್ಡೆ** – ದುಷ್ಟೆ
**ಕಣಕ್** – ಅನುಕರಣ ಶಬ್ದ
**ಕಣಕಣಿಸು** – ಕಣಕಣ ಎಂದು ಶಬ್ದಮಾಡು
**ಕಣಕಾಲ್** – ಮಂಡಿಯಿಂದ ಪಾದದವರೆಗಿನ ಭಾಗ
**ಕಣಕೆನೆವೋಪಂಬು** – ಕಣಕ್ ಎಂದು ಹೋಗುವ ಬಾಣ(?)
**ಕಣಯ** – ಸೀರೆಯ ಉಡಿಯ ಗಂಟು; ನೀವಿಬಂಧ
**ಕಣಿ** – (ಖನಿ) ಗಣಿ
**ಕಣಿಕಾಲ್** – ಜಂಘೆ
**ಕಣಿಕೆ** – ಚೂರು, ತುಂಡು; ಹನಿ
**ಕಣಿಕೈ** – ಮುಂಗೈ
**ಕಣಿಶ** – ತೆನೆ
**ಕಣೆ** – ಬಾಣ; ಕೊನೆ
**ಕಣೆಗತ್ತಲೆ** – ಬಾಣಗಳು ಆವರಿಸಿ ಉಂಟಾದ ಕತ್ತಲೆ
**ಕಣೆಗೊಳ್** – ಬಾಣವನ್ನು ತೆಗದುಕೊ
**ಕಣೆದೊಡು** – ಬಾಣ ಹೂಡು
**ಕಣೆಯೇಱು** – ಬಾಣದಿಂದಾದ ಗಾಯ
**ಕಣೆವೋಗು** – ದಿಂಡು ತುಂಡಾಗಿಹೋಗು
**ಕಣ್ಕೆ(ಣ್ಗೆ)ತ್ತು** – ಕಣ್ಣು ಮಿಟುಕಿಸು; ಸನ್ನೆ ಮಾಡು
**ಕಣ್ಗಾಣ್** – ಕಣ್ಣಿಗೆ ಕಾಣಿಸು
**ಕಣ್ಗಾಪು** – ಕಣ್ಣ ಕಾವಲು
**ಕಣ್ಗುಡಿತೆ** – ಬೊಗಸೆಗಣ್ಣು
**ಕಣ್ಗೆಡು** – ನೋಡಿವ ಶಕ್ತಿ ಕುಂದು
**ಕಣ್ಗೆಡಿ** – ಕಣ್ಣಿನ ಕಿಡಿ; ಕೋಪದ ಕಿಡಿ
**ಕಣ್ಗುಬ್ಬೆ** – ಕಣ್ಣ ಗುಡ್ಡೆ
**ಕಣ್ಗೆಯ್** – ಕಣ್ಣು ಮುಚ್ಚು, ನಿದ್ದೆಮಾಡು
**ಕಣ್ಗೆವರ್** – ಚೆನ್ನಾಗಿ ಕಾಣು, ಆಕರ್ಷಿಸು
**ಕಣ್ಗೊಳ್** – ಕಣ್ಣು ಸೆಳೆ, ಸುಂದರವಾಗಿ ಕಾಣು
**ಕಣ್ಗೊಳಸು** – ಆಕರ್ಷಿಸು
**ಕಣ್ಚಲ್ಲ** – ಚೆಲ್ಲುನೋಟ
**ಕಣ್ಣಂದೊಱಲ** – ಕಣ್ಣ ಗುಡ್ಡೆ
**ಕಣ್ಣಡಿಗ** – ಪಾದದಲ್ಲಿ ಕಣ್ಣುಳ್ಳವನು, ಶಿವ
**ಕಣ್ಣಪಾಪೆ** – ಕಣ್ಣಿನ ಗುಡ್ಡೆ
**ಕಣ್ಣಲಾಗೆನೆ** – ಕ್ಷಣ ಮಾತ್ರದಲ್ಲಿ
**ಕಣ್ಣ ಹಕ್ಕ** – ಕಣ್ಣಿನ ಜಿಬುರು
**ಕಣ್ಣಱಿ** – ಕಣ್ಣನ್ನು (ಅಭಿಪ್ರಾಯವನ್ನು) ತಿಳಿ
**ಕಣ್ಣಾಗಿರು** – ತೀವ್ರವಾಗಿ ಬಯಸು
**ಕಣ್ಣಾರ್** – ಕಣ್ಣಿಗೆ ತೃಪ್ತಿಯಾಗು
**ಕಣ್ಣಾಲಿ** – ಕಣ್ಣ ಗುಡ್ಡೆ
**ಕಣ್ಣಿ** – ಹಗ್ಗ, ಕುಣಿಕೆ
**ಕಣ್ಣಿಡು** – ದೃಷ್ಟಿಸಿ ನೋಡಿ
**ಕಣ್ಣಿವಲೆ** – ಕಣ್ಣಿಯ (ದಾರದ) ಬಲೆ
**ಕಣ್ಣೀರ್** – ಕಂಬನಿ
**ಕಣ್ಣುರಿ** – (ಶಿವನ) ಕಣ್ಣಿನ ಉರಿ
**ಕಣ್ಣುಳ್ಕು** – ಕೋರೈಸು
**ಕಣ್ಣೂಱು** – ಗಮನ ನೀಡು
**ಕಣ್ಣೆಂಜಲ್** – ಕೆಟ್ಟನೋಟದಿಂದಾಗುವ ಕೆಡುಕು; ದೃಷ್ಟಿಯಾಗುವುದು
**ಕಣ್ಣೆಮೆ** – ಕಣ್ಣ ರೆಪ್ಪೆ
**ಕಣ್ಣೆಮೆಯಿಕ್ಕು** – ರೆಪ್ಪೆ ಮಿಟುಕಿಸು
**ಕಣ್ಣೆಲೆ** – ಕಣ್ಣ ನೆಲೆ
**ಕಣ್ಣೆಱಕ** – ಕಣ್ಣಿಗೆ ಹಬ್ಬ; ದೃಷ್ಟಿ ಬೀಳುವುದು
**ಕಣ್ಣೋಟ** – ಕಣ್+ನೋಟ
**ಕಣ್ದಣಿ** – ಕಣ್+ತಣಿ, ಕಣ್ಣಿಗೆ ತೃಪ್ತಿಯಾಗು
**ಕಣ್ದೆಱಪು** – ಕಣ್ಣ ತೆರಪು, ಕಣ್ಣು ತೆರೆಯುವಿಕೆ

**ಕಣ್ದೆಱವಿ** – ಕಣ್ಣು ತೆರೆಯುವುದು
**ಕಣ್ದೆಱವಿವಡೆ** – ಕಣ್ದೆಱವಿಯನ್ನು ಹೊಂದು
**ಕಣ್ದೆಱೆ** – ಕಣ್ಣು ತೆರೆ
**ಕಣ್ದೊಡವು** – ಕಣ್ಣ ತೊಡವು
**ಕಣ್ದೊಳಲ್** – ಕಣ್ಣು ತೊಳಲು, ಕಂಗೆಡು
**ಕಣ್ಬಚ್ಚ** – ಕಣ್ಣ ಅಲಂಕಾರ
**ಕಣ್ಪೀಲಿ** – ನವಿಲುಗರಿ
**ಕಣ್ಬಡಿಗ** – ಕಣ್ತಪ್ಪಿಸಿ ತಿರುಗುವವನು; ಮೋಸಗಾರ
**ಕಣ್ಬಡು** – ಆಸೆಪಡು
**ಕಣ್ಬನಿ** – ಕಂಬನಿ
**ಕಣ್ಬನಿದುಱುಗಲ್** – ಕಣ್ಣೀರ ಧಾರೆ
**ಕಣ್ಬನಿವಱೆ** – ಕಣ್ಣೀರ ಮಳೆ
**ಕಣ್ಬರಿ(ವು)** – ಕಣ್ಣಿನ ಹರವು
**ಕಣ್ಬರಿಗೆಡು** – ವಿವೇಕವನ್ನು ಕಳೆದುಕೊ
**ಕಣ್ಬರಿವು** – ಕಣ್ಬರಿ
**ಕಣ್ಬಸ** – ಕಣ್ಣಿನ ಅಪೇಕ್ಷೆ; ಬಯಕೆ
**ಕಣ್ಬಸಿವು** – ಕಣ್ಣಿನ ಹಸಿವು
**ಕಣ್ಬೀಡು** – ಕಣ್ಣು ಬಿಡುವಿಕೆ
**ಕಣ್ಬೀಲಿ** – ಕಣ್ಣುಳ್ಳ ಪೀಲಿ, ನವಿಲ ಗರಿ
**ಕಣ್ಬೆಳಗು** – ಕಣ್ಣ ಬೆಳಕು, ಕಾಂತಿ
**ಕಣ್ಬೆಱು** – ಕಣ್ಣು ಪಡೆ
**ಕಣ್ಬೇಟ** – ಕಣ್ಣೊಲುಮೆ; ಮೊದಲ ನೋಟದ ಪ್ರೇಮ
**ಕಣ್ಬೇಟಂಗೊಳ್** – ನೋಟದಿಂದ ಮೋಹವಶನಾಗು
**ಕಣ್ಬೇನೆ** – ಕಣ್ಣ ನೋವು
**ಕಣ್ಬೇಹತನ** – ನೋಟದಿಂದ ಉಂಟಾಗುವ ಬಯಕೆ
**ಕಣ್ಬೊಣರ್** – ಕಣ್+ಪೊಣರ್, ಕಣ್ಣ ಜೋಡಿ
**ಕಣ್ಬೊಲ** – ಕಣ್ಣಿಗೆ ಕಾಣುವಷ್ಟು ದೂರ, ದೃಷ್ಟಿಪಥ
**ಕಣ್ಬೊಳೆಪು** – ಕಣ್ಣಿನ ಕಾಂತಿ
**ಕಣ್ಮಗುಱ್** – ಕಣ್ಣು ಬೇರೆಡೆ ತಿರುಗಿಸು; ಕಣ್ಣು ಮುಚ್ಚು
**ಕಣ್ಮಲರ್** – ಹೂವಿನಂತಹ ಕಣ್ಣು
**ಕಣ್ಮಲೆ** – ಕಣ್ಣು ಕೆರಳಿಸು; ಮನಸ್ಸಿಗೆ ಹೊಳೆ
**ಕಣ್ಮಾಯ** – ಕಣ್ಕಟ್ಟು, ಇಂದ್ರಜಾಲ
**ಕಣ್ಮುಚ್ಚು** – ಕಣ್ಣು ಮುಚ್ಚು; ನಿದ್ರಿಸು; ಸಾಯು
**ಕಣ್ಸನ್ನೆ** – ಕಣ್ಣಿನಿಂದ ನೀಡುವ ಸೂಚನೆ
**ಕಣ್ಸವಿ** – ಕಣ್ಣಿಗೆ ಸವಿಯಾದುದು
**ಕಣ್ಸೆಡೆ** – ನೋಡಿ ಹೆದರು
**ಕಣದಸೋಲ್** – ಕಣ್ಣು ಸೋತುಹೋಗು; ಆಕರ್ಷಣೆಗೊಳ್ಳು
**ಕಣ್ಸೋಲ** – ಕಣ್ಣು ಆಕರ್ಷಣೆಗೊಳ್ಳುವ ಮೂಲಕ ಸೋಲುವುದು
**ಕತ** – ಕಾರಣ; ದುಃಖ
**ಕತಕಬೀಜ** – ಚಿಲ್ಲದ ಬೀಜ; ಕದಡುನೀರನ್ನು ತಿಳಿಗೊಳಿಸುವ ಬೀಜ
**ಕತಿಪಯ** – ಕೆಲವು; ಹಲವು
**ಕತಿಯಿಸು** – ಕಥಿಸು, ನಿರೂಪಿಸು
**ಕತೆ** – ನಿರೂಪಿತ ಘಟನೆ
**ಕತ್ತರಿ** – ಗಾಣಿಗ ಕುಳಿತುಕೊಳ್ಳುವ ಗಾಣದ ಭಾಗ
**ಕತ್ತರಿಗೊಳ್** – ಕತ್ತರಿಯಂತೆ ಹಿಡಿ
**ಕತ್ತರಿವಾಣಿ** – ಕರ್ತರಿ+ಪಾನೀಯ, (ಮುಟ್ಟಿದರೆ) ಕತ್ತರಿಸುವ ನೀರು
**ಕತ್ತರಿವಾಱೆ** – ಮುಟ್ಟಿದರೆ ಕತ್ತರಿಸುವ ಬಾಳೆ
**ಕತ್ತರಿವೀಲಿ**– ಕತ್ತರಿಯಂತೆ ಧರಿಸಿರುವ ನವಿಲುಗರಿ
**ಕತ್ತರಿವೆಸ** –ಕತ್ತರಿಯ ಕೆಲಸ; ಕತ್ತರಿಸುವುದು
**ಕತ್ತಳಕೆ** – ಕಿರುಗತ್ತಿ, ಕಠಾರಿ
**ಕತ್ತಿ** – ಖಡ್ಗ
**ಕತ್ತಿಗೆ** – (ಕರ್ತ್ರಿಕಾ) ಕೈ ಮಚ್ಚು; ಕತ್ತಿ
**ಕತ್ತುರಿ** – ಕಸ್ತೂರಿ, ಒಂದು ಸುಗಂಧ ದ್ರವ್ಯ
**ಕತ್ತುರಿಗದಡು** – ಕಸ್ತೂರಿಯನ್ನು ಕದಡಿ ಮಾಡಿದ ಸುಗಂಧ
**ಕತ್ತುರಿನೀರ್** – ಕಸ್ತೂರಿ ಬೆರಸಿದ ನೀರು
**ಕತ್ತುರಿಬೊಜಂಗ** – ಕಸ್ತೂರಿ ಲೇಪಿಸಿಕೊಂಡ ವಿಟ
**ಕತ್ತುರಿಬೊಟ್ಟು** – ಕಸ್ತೂರಿ ತಿಲಕ
**ಕತ್ತುರಿಮಿಗ** – ಕಸ್ತೂರಿ ಮೃಗ
**ಕತ್ತುರಿವಳೆ** – ಕಸ್ತೂರಿ ಬಳೆ; ಕರಿ ಬಳೆ
**ಕತ್ತುರಿವೆಕ್ಕು** – ಪುನುಗಿನ ಬೆಕ್ಕು
**ಕಥಕ** – ಕತೆ ಹೇಳುವವನು; ಒಂಟೆ
**ಕಥಾಂತರ** – ಮತ್ತೊಂದು ಕತೆ
**ಕಥಾನಾಯಕ** – ಕತೆಯ ಮುಖ್ಯ ಪಾತ್ರ
**ಕಥಾನ್ವಯ** – ಕತೆಯ ವಿನ್ಯಾಸ
**ಕಥಾಪತಿ** – ಕತೆಯ ನಾಯಕ
**ಕಥಾಭಿತ್ತಿ** – ಕತೆಯ ಹಿನ್ನೆಲೆ, ಕತೆಯ ವಸ್ತು
**ಕಥಾವತಾರ** – ಕತೆಯ ಆರಂಭ
**ಕಥಿತ** – ಹೇಳಲಾದ
**ಕಥಿಸು** – ನಿರೂಪಿಸು
**ಕಥೆ** – ಕತೆ
**ಕಥೆವೇಱ್** – ನಿರೂಪಣೆ ಮಾಡು
**ಕದ(ಂ)ಪು** – ಕೆನ್ನೆ, ಗಲ್ಲ
**ಕದಂಬ** – ಈಚಲ ಮರ; ಗುಂಪು, ಸಮೂಹ
**ಕದಂಬಕ** – ಗುಂಪು, ಸಮೂಹ
**ಕದಂಬದಂಬುಲ** – ಸುಗಂಧಭರಿತ ತಂಬುಲ
**ಕದಂಬವೆಳಗು** – ವಿವಿಧ ಬಣ್ಣಗಳ ಮಿಶ್ರ ಕಾಂತಿ
**ಕದಕದಪು** – ನಡುಕ
**ಕದಕದಿಸು** – ನಡುಗು
**ಕದಡು** – ಕಲಕು; ರಾಡಿ, ಬಗ್ಗಡ
**ಕದಡುನೀರು** – ಬಗ್ಗಡಗೊಂಡ ನೀರು
**ಕದಡೇಱ್** – ಬಗ್ಗಡ ತೇಲು
**ಕದನಕ್ಷೇತ್ರ** – ಯುದ್ಧರಂಗ
**ಕದನತ್ರಿಣೇತ್ರ** – ಯುದ್ಧದಲ್ಲಿ ರುದ್ರನಂತೆ ಪ್ರಚಂಡ
**ಕದನಾನಕ** – ರಣಭೇರಿ
**ಕದರ್ಥನೆ** – ಕಾಟ
**ಕದರ್ಥಿಸು** – ಪೀಡಿಸು

**ಕದಲೆಗದಿರ್** – ಪ್ರಖರ ಕಿರಣ
**ಕದಲೊಡೆ** – ತೆನೆಬಿಡು
**ಕದಳ** – ಬಾಳೆ ಗಿಡ
**ಕದಳಕೆ** – (ಕದಲಿಕಾ) ಪತಾಕೆ
**ಕದಳೀಗರ್ಭ** – ಬಾಳೆಯ ಮೋತೆಯ ಒಳಭಾಗ
**ಕದಳೀಘಾತ** – ಒಮ್ಮೆಲೇ ಬೀಳುವಂತೆ ಬಾಳೆಮರಕ್ಕೆ ಹೊಡೆದ ಏಟು; (ಜೈನ) ಅಕಾಲಮರಣ; ಆಹಾರ ನೀರು ಬಿಡುವುದರಿಂದ ಆಗುವ ಆಯುಸ್ಸಿನ ಕಡಿತ
**ಕದಳೀದಳ** – ಬಾಳೆಯ ಎಲೆ
**ಕದಳೀಷಂಡ** – ಬಾಳೆಯ ತೋಟ
**ಕದಿರ್** – ಕಿರಣ, ತೆನೆ, ನೂಲು ತೆಗೆಯುವ ಸಾಧನ
**ಕದಿರ್ಗಂಪು** – ತೆನೆಗಳ ನರುಗಂಪು
**ಕದಿರ್ಜೊನ್ನ** – ಕಾಂತಿಯುಕ್ತ ಬೆಳುದಿಂಗಳು
**ಕದಿರ್ದುಱುಗಲ್** – ಕಿರಣಸಮೂಹ
**ಕದಿರ್ದೊಂಗಲ್** – ಕದಿರ್ದುಱುಗಲ್
**ಕದಿರ್ವರಿ** – ಕಾಂತಿ ಹರಡು
**ಕದುಪು** – ಗುಂಪು
**ಕದುಷ್ಣ** – ಉಗುರು ಬೆಚ್ಚಗಿರುವ
**ಕನಕಪೀಠ** – ಚಿನ್ನದ ಪೀಠ
**ಕನಕ** – ಚಿನ್ನ; ದತ್ತೂರಿ ಗಿಡ
**ಕನಕಗಿರಿ** – ಚಿನ್ನದ ಬೆಟ್ಟ; ಮೇರು ಪರ್ವತ
**ಕನಕಾಚಲ** – ಕನಕಗಿರಿ
**ಕನಕಾವಳ** – (ಜೈನ) ಒಂದು ವರ್ಷದಲ್ಲಿ ಎಂಬತ್ತಮೂರು ಬಾರಿ ಉಪವಾಸವಿರುವ ವ್ರತ
**ಕನತ್** – ಹೊಳೆಯುವ
**ಕನರ್** – ಒಗರು ರುಚಿ
**ಕನರ್ಗಂಪು** – ಒಗರು ವಾಸನೆ
**ಕನರ್ಗಾಯ್** – ಕಸಗಟ್ಟೆ ಕಾಯಿ
**ಕನರ್ಗೊನರ್** – ಎಳೆಯ ಚಿಗುರು
**ಕನಲ್** – ಸಿಟ್ಟುಗೊಳ್ಳು, ಕೋಪಿಸಿಕೊ; ಕೋಪ
**ಕನಲಿಸು** – ಕೆರಳಿಸು, ಸಿಟ್ಟಿಗೆಬ್ಬಿಸು
**ಕನಲ್ಕೆ** – ಕೋಪ
**ಕನಲ್ಗಿಡಿ** – ನಿಗಿನಿಗಿ ಕೆಂಡ
**ಕನಲ್ಚು** – ಕನಲಿಸು
**ಕನವರಿಸು** – ನಿದ್ದೆಯಲ್ಲಿ ಮಾತಾಡು
**ಕನಸು** – ಸ್ವಪ್ನ; ಕಲ್ಪನೆ
**ಕನಸುಗಾಣು** – ಕನಸು ಕಾಣು; ಕಲ್ಪಿಸಿಕೊ
**ಕನಸುದೋಱು** – ಕನಸ್ಸಿನಲ್ಲಿ ಕಾಣಿಸಿಕೊ
**ಕನಿ** – ಪ್ರಕಾಶಿಸು
**ಕನೀಯ** – ಕಿರಿಯ, ತಮ್ಮ; ನೀಚ
**ಕನ್ನ** – ಗೋಡೆಯಲ್ಲಿ ಮಾಡುವ ರಂಧ್ರ
**ಕನ್ನಗಳ್ಳ** – ಕನ್ನ ಹಾಕಿ ಕದಿಯುವವನು
**ಕನ್ನಡ** – ಕನ್ನಡ ನುಡಿ, ಕನ್ನಡ ನಾಡು
**ಕನ್ನಡವಕ್ಕಿ** – ಗಿಳಿ
**ಕನ್ನಡಿ** – ಪ್ರತಿಬಿಂಬ ಕಾಣಿಸುವ ಸಾಧನ
**ಕನ್ನಡಿಗ** – ಕನ್ನಡ ನಾಡಿನವನು
**ಕನ್ನಡಿಗಿತಿ** – ಕನ್ನಡ ನಾಡಿನವಳು
**ಕನ್ನಡಿವಿಡಿ** – ನೋಡಿಕೊಳ್ಳಲು ಕನ್ನಡಿಯನ್ನು ಹಿಡಿ
**ಕನ್ನಡಿಸು** – ಕನ್ನಡದಲ್ಲಿ ಹೇಳು; ಪ್ರತಿಫಲಿಸು
**ಕನ್ನಮಿಕ್ಕು** – ಕಳವಿಗಾಗಿ ಕನ್ನ ಹಾಕು
**ಕನ್ನವಟ್ಟ** – ಮದ್ದಳೆಯ ಧರ್ಮವಿರುವ ಭಾಗ
**ಕನ್ನವಡ** – ತೆರೆ, ಕನ್ನಡಿ ಗೋಡೆ
**ಕನ್ನವುರ** – (ಕರ್ಣಪೂರ) ಕಿವಿಯ ಆಭರಣ
**ಕನ್ನಸ** – ಮಗ್ಗುಲು
**ಕನ್ನೆ** – ಕನ್ಯೆ, ಮದುವೆಯಾಗದ ಹುಡುಗಿ
**ಕನ್ನೆಗೋಸಾಸ** – ಕನ್ಯಾಗೋಸಹಸ್ರ, ಕನ್ಯೆಯರ ಮೇಲೆ ಮತ್ತು ಗೋವುಗಳ ಮೇಲೆ ಮಾಡುವ ಸಾಹಸ
**ಕನ್ನೆತನ** – ಕನ್ಯಾವಸ್ಥೆ
**ಕನ್ನೆವಾ(ಮಾ)ಡ** – ಕನ್ನಿಕೆಯರ ವಾಸಸ್ಥಾನ, ಅಂತಃಪುರ
**ಕನ್ನವೇಟ** – ಕನ್ಯೆಯ ಬೇಟ
**ಕನ್ನೆಸಾಸ** – ಕನ್ಯೆ ಮಾಡುವ ಸಾಹಸ
**ಕನ್ನೈಸು** – ಕಪ್ಪಾಗು
**ಕನ್ಯಕೆ** – ಕನ್ಯೆ
**ಕನ್ಯಾಬ್ರತ** – ಕನ್ಯೆಯಾಗಿಯೇ ಉಳಿಯುವ ವ್ರತ
**ಕನ್ಯಾರತ್ನ** – ಶ್ರೇಷ್ಠ ಕನ್ಯೆ
**ಕನ್ಯಾವ್ರತ** – ಕನ್ಯಾಬ್ರತ
**ಕಪಟ** – ಮೋಸ
**ಕಪಟಕ್ರಿಯೆ** – ಮೊಸದ ಕೃತ್ಯ
**ಕಪಟಪಟು** – ಮೋಸದಲ್ಲಿ ನಿಷ್ಣಾತ
**ಕಪಟಶಬರ** – ಶಬರನ ವೇಷತೊಟ್ಟವನು
**ಕಪರ್ದ** – ಕವಡೆ, ಜಡೆ
**ಕಪರ್ದಿ** – ಶಿವ
**ಕಪಾಲಪಾಣಿ** – ಶಿವ
**ಕಪಾಲಿನಿ** – ಕೈಲಾದಲ್ಲಿರುವ ಶಕ್ತಿದೇವತೆಯರಲ್ಲಿ ಒಬ್ಬಳು
**ಕಪಿಂಜಲ** – ಚಾತಕ ಪಕ್ಷಿ; ಒಬ್ಬ ಋಷಿಕುಮಾರನ ಹೆಸರು
**ಕಪಿಕೇತು** – ವಾನರಧ್ವಜ, ಅರ್ಜುನ; (ಜೈನ) ಬಾವುಟದಲ್ಲಿ ಕಪಿ ಲಾಂಛನವುಳ್ಳವರು; ಸುಗ್ರೀವಾದಿಗಳು
**ಕಪಿತ್ಥ** – ಬೇಲದ ಹಣ್ಣು
**ಕಪಿಧ್ವಜ** – ಕಪಿಕೇತು
**ಕಪಿಧ್ವಜಕುಲ** – ಕಪಿಧ್ವಜವನ್ನು ಹೊಂದಿದವರ ಕುಲ
**ಕಪಿರಾಜಧ್ವಜ** – ಕಪಿಕೇತು
**ಕಪೋತ** – ಪಾರಿವಾಳ; ಒಂದು ಬಗೆಯ ಮರ
**ಕಪೋತಕ** – ಪಾರಿವಾಳದ ಮರಿ
**ಕಪೋತಪಾಲಿಕೆ** – ಪಾರಿವಾಳದ ಗೂಡು
**ಕಪೋತಲೇಶ್ಯೆ** – (ಜೈನ) ಕರ್ಮಸಂಬಂಧವಾದ ಬೂದುಬಣ್ಣ; ಆರು ಲೇಶ್ಯೆಗಳಲ್ಲಿ ಒಂದು
**ಕಪೋತಿಕೆ** – ನಾಟ್ಯದಲ್ಲಿ ಒಂದು ಹಸ್ತವಿನ್ಯಾಸ

**ಕಪೋಲ** – ಕೆನ್ನೆ
**ಕಪೋಲಪತ್ರ** – ಮಕರಿಕಾ ಪತ್ರ; ಕೆನ್ನೆಯ ಮೇಲೆ ಬರೆದುಕೊಳ್ಳುವ ರೇಖೆಗಳು
**ಕಪೋಲಪತ್ರೆ** – ಕಪೋಲಪತ್ರ ಉಳ್ಳವಳು
**ಕಪೋಲಫಲ(ಳ)ಕ** – ಕೆನ್ನೆಯ ಮೇಲಿನ ಚಪ್ಪಟೆಯ ಭಾಗ
**ಕಪೋಳವಿಪುಳೆ** – ತುಂಬಿದ ಕೆನ್ನೆಯವಳು
**ಕಪ್ಪ** – ರಾಜನಿಗೆ ಒಪ್ಪಿಬೇಕಾದ ಪೊಗದಿ
**ಕಪ್ಪಂಗವಿ** – ಕಪ್ಪು+ಕವಿ, ಕತ್ತಲೆ ಕವಿ
**ಕಪ್ಪಂಗವಿಯಾಗು** – ಕತ್ತಲೆ ದಟ್ಟೈಸು
**ಕಪ್ಪಂಗುಡು** – ಕಪ್ಪವನ್ನು ಕೊಡು
**ಕಪ್ಪಂಗೊಳ್** – ಕಪ್ಪ ಸ್ವೀಕರಿಸು
**ಕಪ್ಪಡ** – (ಹರಕಲು) ಬಟ್ಟೆ
**ಕಪ್ಪಡಿ** – ಹರಕಲು ಬಟ್ಟೆ ತೊಟ್ಟವನು, ತಿರುಕ
**ಕಪ್ಪವೀ** – ಕಪ್ಪ ಕೊಡು
**ಕಪ್ಪಟೆ** – ಕಪ್ಪು ಬಣ್ಣ ಹೋಗಿಬಿಡು
**ಕಪ್ಪು** – ಗುಂಡಿ; ಖೆಡ್ಡ
**ಕಪ್ಪುರ** – ಕರ್ಪೂರ
**ಕಪ್ಪುರಗರಡಿಗೆ** – ಕರ್ಪೂರವಿರಿಸುವ ಭರಣಿ
**ಕಪ್ಪುದಂಬುಲ** – (ಪಚ್ಚ) ಕರ್ಪೂರ ಹಾಕಿದ ತಾಂಬೂಲ
**ಕಪ್ಪರದೀವ** – ಕರ್ಪೂರದೀಪ
**ಕಪ್ಪುರವಚ್ಚ** – ಕರ್ಪೂರದ ತಂಪು
**ಕಪ್ಪುರವಳುಕು** – ಕರ್ಪೂರದ ಹರಳು
**ಕಪ್ಪುರವಳ್ಳಿ** – ಕರ್ಪೂರದ ಬಳ್ಳಿ
**ಕಪ್ಪುರವಱ** – ಕರ್ಪೂರದ ಮಳೆ
**ಕಪ್ಪೆ** – ಮಂಡೂಕ
**ಕಫ** – ಶ್ಲೇಷ್ಮ; ದೇಹದ ಮೂರು ಧಾತುಗಳಲ್ಲಿ ಒಂದು: ವಾತ, ಪಿತ್ತ, ಕಫ(ಶೇಷ್ಮ)
**ಕಬಂಧ** – ಅಟ್ಟೆ. ತಲೆಯಿಲ್ಲದ ದೇಹ
**ಕಬಂಧನಾಟಕ** – ಅಟ್ಟೆಗಳ ಕುಣಿದಾಟ
**ಕಬರಿ(ಕಾ)** – ತುರುಬು, ಹೆರಳು
**ಕಬರಿಕಾಬಂಧ** – ಕಟ್ಟಿದ ಮುಡಿ
**ಕಬರಿ(ೀ)ಭ(ಭಾ)ರ** – ಭಾರವಾದ ಮುಡಿ
**ಕಬಲ(ಳ)** – ತುತ್ತು
**ಕಬಳ(ಂ)ಗೊಳ್** – ತುತ್ತು ನುಂಗು
**ಕಬ(ಲಾ)ಳಾಹಾರ** – ಯತಿಗಳು ನುಂಗುವ ತುತ್ತಿನ ಲೆಕ್ಕ
**ಕಬ್ಬ** – ಕಾವ್ಯ
**ಕಬ್ಬಿ** – ಕಡಿವಾಣ
**ಕಬ್ಬಿಗ** – ಕವಿ, ಕಾವ್ಯರಚಕ
**ಕಬ್ಬಿಗಗಳ್ಳ** – ಕೃತಿಚೌರ್ಯ ಮಾಡುವವನು
**ಕಬ್ಬಿಗವಂದಿ** – ಕಬ್ಬಿಗ+ಮಂದಿ, ಕವಿಜನ
**ಕಬ್ಬಿಲ** – ಬೇಡರವನು
**ಕಮಂಡಲ(ಲು)** – ಯತಿಯ ನೀರಿನ ಪಾತ್ರೆ
**ಕಮಠ** – ಆನೆ; ಕೂರ್ಮಾವತಾರ
**ಕಮಠಾಧಿಪ** – ಆದಿಕೂರ್ಮ, ವಿಷ್ಣುವಿನ ಕೂರ್ಮಾವತಾರ
**ಕಮನ** – ಚೆಲುವಾದ
**ಕಮನೀಯ** – ಮನೋಹರ
**ಕಮನೀಯತೆ** – ಮನೋಹರತೆ
**ಕಮಲ** – ತಾವರೆ
**ಕಮಲಕುಲೋದ್ಭವ** – ಕಮಲದಲ್ಲಿ ಹುಟ್ಟಿದವನು, ಬ್ರಹ್ಮ
**ಕಮಲಜ** – ಬ್ರಹ್ಮ
**ಕಮಲನಾಭ** – ಹೊಕ್ಕುಳಲ್ಲಿ ಕಮಲವುಳ್ಳವನು, ವಿಷ್ಣು
**ಕಮಲಬಾಂಧವ** – ಕಮಲಮಿತ್ರ, ಸೂರ್ಯ
**ಕಮಲಭವ** – ಕಮಲಜ, ಬ್ರಹ್ಮ
**ಕಮಲವೈರಿ** – ಕಮಲಗಳ ಶತ್ರು, ಚಂದ್ರ
**ಕಮಲಷಂಡ** – ತಾವರೆಗಳ ಸಮೂಹ
**ಕಮಲಾ(ಲೆ)** – ಲಕ್ಷ್ಮೀ
**ಕಮಲಾಕರ** – ಕೊಳ, ಸರೋವರ
**ಕಮಲಾಕ್ಷ** – ವಿಷ್ಣು
**ಕಮಲಾಕ್ಷಿ** – ಕಮಲದಂತಹ ಕಣ್ಣುಳ್ಳವಳು, ಚೆಲುವೆ
**ಕಮಲಾನನೆ** – ಕಮಲದಂತಹ ಮುಖವುಳ್ಳವಳು, ಸುಂದರಿ
**ಕಮಲಾಪ್ತ** – ಸೂರ್ಯ
**ಕಮಲಾವಸಥ** – ಲಕ್ಷ್ಮಿಯ ವಾಸಸ್ಥಾನ; ಕಮಲವನ್ನು ಮನೆಯಾಗುಳ್ಳವನು, ಬ್ರಹ್ಮ
**ಕಮಲಿ(ಳ)ನಿ** – ತಾವರೆಯ ಬಳ್ಳಿ
**ಕಮಲೆ** – ಲಕ್ಷ್ಮಿ
**ಕಮಲೇಕ್ಷಣ** – ಕಮಲಾಕ್ಷ
**ಕಮಲೋತ್ಸವಕಾರಿ** – (ಕಮಲ)ತಾವರೆಗೆ ಹಬ್ಬವನ್ನುಂಟುಮಾಡುವವನು, ಸೂರ್ಯ; (ಕಮಲೆ) ಲಕ್ಷ್ಮಿಗೆ ಹಬ್ಬವುಂಟುಮಾಡುವವನು, ವಿಷ್ಣು
**ಕಮಲೋದಯ** – ವಿಷ್ಣುವಿನ ಹೊಕ್ಕುಳ ಕಮಲದಲ್ಲಿ ಜನಿಸಿದ, ಬ್ರಹ್ಮ
**ಕಮಳ(ಲ)ಕಾಮುಕ** – ಕಮಲಗಳಿಗೆ ಪ್ರಿಯನಾದವನು, ಸೂರ್ಯ
**ಕಮಳಬಂಧು** – ಕಮಲದ ಸ್ನೇಹಿತ, ಸೂರ್ಯ
**ಕಮಳಾಕರಬಾಂಧವ** – ಕಮಳಬಂಧು
**ಕಮಳಾಪ್ತ** – ಕಮಳಬಂಧು
**ಕಮಳಾರ್ಥಿ** – ಕಮಲವನ್ನು (ಲಕ್ಷ್ಮಿಯನ್ನು) ಬಯಸುವಂಥದು
**ಕಮ್ಮ** – (ಕರ್ಮ) ಕೆಲಸ
**ಕಮ್ಮಂಗಣೆ** – ಕಮ್ಮನೆಯ ಬಾಣ, ಹೂವಿನ ಬಾಣ
**ಕಮ್ಮಂಗಣೆಯ** – ಹೂಬಾಣವುಳ್ಳವನು, ಮನ್ಮಥ
**ಕಮ್ಮಂಗೋಲ** – ಕಮ್ಮಂಗಣೆಯ
**ಕಮ್ಮಕ** – ಬಾಣ
**ಕಮ್ಮಗಱವೆ** – ಕಮ್ಮ+ಕಱವೆ, ಕಮ್ಮಗಡಲೆ ಅಕ್ಕಿ, ಪರಿಮಳ ಸೂಸುವ ಅಕ್ಕಿ

**ಕಮ್ಮಟ** – ಕುಲುಮೆ
**ಕಮ್ಮನೆ** – ಸುಗಂಧವುಳ್ಳ
**ಕಮ್ಮಯಿಸು** – ಕಮ್ಮೈಸು, ಶೋಭೆಯುಂಟುಮಾಡು
**ಕಮ್ಮರ** – ಕಮರಿಕೆ ಎಂಬ ಹಣ್ಣು
**ಕಮ್ಮರಿ** – ಪ್ರಪಾತ, ಕೊಳ್ಳ
**ಕಮ್ಮರಿಯೊವಜ** – ನುಡಿದಂತೆ ನಡೆಯದ ಉಪಾಧ್ಯಾಯ
**ಕಮ್ಮರಿಯೋಜ** – ಕಮ್ಮರಿಯೊವಜ
**ಕಮ್ಮರಿವಾಯ್** – ಕಮರಿಯಲ್ಲಿ ಬೀಳು
**ಕಮ್ಮವಟ್ಟ(ಟ್ಟೆ)** – ಅಧಿಕಾರ ಪತ್ರ(?)
**ಕಮ್ಮಱ** – (ಕರ್ಮಕಾರ), ಕಮ್ಮಾರ
**ಕಮ್ಮಾಯಿಲ** – ಕೆಲಸಗಾರ
**ಕಮ್ಮಿತು** – ಸುಗಂಧಭರಿತವಾದ
**ಕಮ್ಮಿತ್ತಾಗು** – ಸುಗಂಧಭರಿತವಾಗು
**ಕಮ್ಮಿಸು** – ಗಮಗಮಿಸು
**ಕಮ್ಮು** – ಕಮ್ಮಿಸು
**ಕಮ್ಮೆ** – ಒಂದು ನಾಡು; ಒಂದು ವಂಶ
**ಕಮ್ಮೆಣ್ಣೆ** – ಸುವಾಸಿತ ಎಣ್ಣೆ
**ಕಮ್ಮೆಲರ್** – ಸುಗಂಧಭರಿತ ಗಾಳಿ
**ಕಮ್ರ** – ಮನೋಹರವಾದ
**ಕಯ್ಕೊಳ್** – ಸ್ವೀಕರಿಸು
**ಕಯ್ಗಣ್ಮು** – ಅತಿಕ್ರಮಿಸು
**ಕಯ್ಗಟಿ** – ಕೈಮೀರು
**ಕಯ್ಗಾಯ್** – ಕಾಪಾಡು
**ಕಯ್ಗೆಯ್** – ಅಲಂಕರಿಸು
**ಕಯ್ತು** – ಕಹಿಯಾಗಿರುವುದು
**ಕಯ್ಪೆ** – ಕಹಿ
**ಕಯ್ಪೆಸರಂ** – ಕಠಿನೋಕ್ತಿ
**ಕಯ್ಪೆಸೊ(ೞ)ರೆ** – ಕಹಿ ಸೋರೆ
**ಕಯ್ಪೊಯ್** – ಪ್ರತಿಜ್ಞೆಮಾಡು
**ಕಯ್ಮಱಿ** – ಬೆರಗಾಗು
**ಕಯ್ಯೇಱು** – ಆನೆಗಳ ಸೊಂಡಿಲು ಕಾಳಗ
**ಕಯ್ವಾಯ್** – ಸೆಣಸಾಡು
**ಕಯ್ವೀಸು** – ಕೈಯನ್ನು ಬೀಸು; ಯುದ್ಧಾರಂಭಕ್ಕೆ ಸೂಚ ನೆ ಕೊಡು
**ಕರ** – ಕೈ; ಆನೆಯ ಸೊಂಡಿಲು; ತೆರಿಗೆ; ಕಪ್ಪ; ಕಾಂತಿ
**ಕರಂ** – ಹೆಚ್ಚಾಗಿ
**ಕರಂಕ** – ಭರಣಿ, ಸಣ್ಣ ಪೆಟ್ಟಿಗೆ
**ಕರಂಕವಾಹಿನಿ** – ಭರಣಿಯನ್ನು ಹೊತ್ತ ಪರಿಚಾರಿಕೆ
**ಕರಂಗು** – ಕರಗಿ ಹೋಗು, ನೀರಾಗು
**ಕರಂಗೊಳ್** – ಹಿಡಿದುಕೊ
**ಕರಂಜ(ಕ)** – ಹುಲುಗಿಲ ಮರ
**ಕರಂಜಿಕೆ** – ಒಂದು ಬಗೆಯ ಹುಳಿಯಾದ ಕಾಯಿ
**ಕರಂಡ(ಕ)** – ಭರಣಿ
**ಕರಂಡಿ(ಕೆ)ಗೆ** – ಕರಂಡ(ಕ)
**ಕರಂಡೆ** – ಒಂದು ಬಗೆಯ ನೀರು ಹಕ್ಕಿ
**ಕರಂಬ** – ಸಸ್ಯದ ದೇಟು, ಕಾವು
**ಕರಂಬವಾಸಿಗ** – ವಿವಿಧ ಹೂಗಳ ಬಾಸಿಗ
**ಕರಂಪು(ಬು)** – ಸುಟ್ಟ ವಾಸನೆ
**ಕರಕ** – ಆಲಿಕಲ್ಲು; ಕರಗ, ಕಳಶ
**ಕರಕಾಂಬು** – ಕಳಶದ ನೀರು
**ಕರಕರಿಸು** – ಪೀಡಿಸು
**ಕರಕವೃಷ್ಟಿ** – ಆಳಿಕಲ್ಲು ಮಳೆ
**ಕರಕೆ** – ಕಮಂಡಲು
**ಕರಕೋಪಲ** – ಆಲಿಕಲ್ಲು
**ಕರಗ** – ಗಡಿಗೆ
**ಕರಗಂಬೊಱು** – ತಲೆಯ ಮೇಲೆ ಕರಗ ಹೊರು
**ಕರಗದ ದಾರೆ** – ಗಡಿಗೆಯ ನೀರ ಧಾರೆ
**ಕರಗವಳ** – ಕೊಡದಿಂದ ನೀರು ತುಂಬುವವನು
**ಕರಗಸ** – ಗರಗಸ
**ಕರಗಸಿಗ** – ಗರಗಸದಿಂದ ಕೊಯ್ಯುವವನು
**ಕರಗ್ರಹಣ** – ಕೈಹಿಡಿಯುವಿಕೆ; ಮದುವೆ
**ಕರಜ** – ಕೈಯಲ್ಲಿ ಹುಟ್ಟಿದ್ದು, ಉಗುರು
**ಕರಜಾಂಶು** ಉಗುರ ಕಾಂತಿ–
**ಕರಟ** – ಆನೆಯ ಗಂಡಸ್ಥಳ
**ಕರಟಕ** – ಕಾಗೆ; 'ಪಂಚತಂತ್ರ'ದ ನರಿ
**ಕರಟಿ** – ಗಂಡಸ್ಥಳವುಳ್ಳದ್ದು, ಆನೆ
**ಕರಡ** – ಕಾಡು ಹುಲ್ಲು
**ಕರಡಿ** – ಭಲ್ಲೂಕ
**ಕರಡೆ** – ಜರ್ಝರ ಎಂಬ ಚರ್ಮವಾದ್ಯ
**ಕರಣ** – ಜ್ಞಾನೇಂದ್ರಿಯ; ನಾಟ್ಯದ ಒಂದು ಭಂಗಿ; ಹಸ್ತಪಾದಗಳನ್ನು ವಿಶೇಷ ರೀತಿಯಲ್ಲಿ ಚಲಿಸಿ ಮಾಡುವ ಕ್ರಿಯೆ
**ಕರಣಗ್ರಂಥ** – (ಜೈನ) ಕರಣಾನುಯೋಗದ ಗ್ರಂಥ
**ಕರಣತ್ರಯ** – ಮನ ವಚನ ಕಾಯ ಎಂಬ ಮೂರು ಕರಣಗಳು
**ಕರಣಲಬ್ಧಿ** – (ಜೈನ) ಐದು ಲಬ್ಧಿಗಳಲ್ಲಿ ಒಂದು; ಕರಣ ಪರಿಣಾಮಗಳ ಪ್ರಾಪ್ತಿ
**ಕರಣವೇಳೆ**– ಕರಣದ ಹೊತ್ತು
**ಕರಣಶುದ್ಧಿವಡೆ** – ತ್ರಿಕರಣಗಳ ಶುದ್ಧಿ ಹೊಂದು
**ಕರಣಾನುಯೋಗ** – (ಜೈನ) ಅನುಯೋಗಗಳಲ್ಲಿ ಒಂದು; ಶಲಾಕಾಪುರುಷರ ಚರಿತ್ರೆಗಳುಳ್ಳ ಅನುಯೋಗ
**ಕರಣೆ** – (ಆನೆಯ) ಸೊಂಡಿಲು
**ಕರಣೀಯ** – ಮಾಡಬೇಕಾದುದು
**ಕರತನ** – ಉಗ್ರತೆ; ರೇಗುವಿಕೆ
**ಕರತರ್ಜನ** – ಕೈಸನ್ನೆ ಮಾಡಿ ಹೆದರಿಸುವುದು ಅಥವಾ ಹೆದರಿಕೆ ಸೂಚಿಸುವುದು
**ಕರದೀಪಿಕೆ** – ಕೈದೀವಿಗೆ
**ಕರಪಟಶಾಸ್ತ್ರ** – ಚೋರವಿದ್ಯೆ
**ಕರಪೀಡನ** – ಕೈಯಿಂದ ಒತ್ತುವುದು; ತೆರಿಗೆಯ ಭಾರ
**ಕರಭ** – ಒಂಟೆ

**ಕರರುಹ** – ಕೈಯಲ್ಲಿ ಹುಟ್ಟಿದುದು, ಉಗುರು
**ಕರವತ್ತಿ** – ಗರಗಸ
**ಕರವಳ** – ಕತ್ತಿ ಹಿಡಿದವನು; ಮಲ್ಲಯುದ್ಧದ ಒದು ವರಸೆ
**ಕರವಾಲ(ಳ್)(ಳ)** – ಕತ್ತಿ
**ಕರವೀರ** – ಕಣಿಗಲೆ
**ಕರವೇಟಿ** – ಬಲು ಹೇಡಿ
**ಕರಸಾಣೆ** – ಖರಸಾಣೆ, ಮಸೆಗಲ್ಲು, ಸಾಣೆಗಲ್ಲು
**ಕರ(ರೆ)ಹ** – ಆಹ್ವಾನ
**ಕರಾಂಗುಲಿ(ಳಿ)** – ಕೈಬೆರಳು
**ಕರಾತಳ** – ಅಂಗೈ
**ಕರಾಲ** – ಪ್ರಚಂಡ
**ಕರಾಲಂಬನ** – ಕೈಯ ಆಸರೆ
**ಕರಸಿ** – ವದಂತಿ ಹಬ್ಬಿಸುವವನು
**ಕರಿ** – ಸೀದುಹೋಗು; ಎಣ್ಣೆಯಲ್ಲಿ ಬೇಯಿಸು; ಕಪ್ಪು ಬಣ್ಣ; ಆನೆ
**ಕರಿಂಕು** – ಸುಟ್ಟು ಕಪ್ಪಾದುದು
**ಕರಿಂಕುವರಿ** – ಕರಿಕಾಗು
**ಕರಿಂಕುವೀೞ್** – ಕರಿಂಕುವರಿ
**ಕರಿಂಕುವೋಗು** – ಕರಿಂಕುವರಿ
**ಕರಿಂಕೇೞ್** – ಕರಿಂಕುವರಿ
**ಕರಿಂಕೇೞಿಸು** – ಕರಿಕಾಗಿಸು
**ಕರಿಕ** – ಕಪ್ಪು ಮೈಬಣ್ಣದವನು
**ಕರಿಕಲಭ** – ಆನೆ ಮರಿ
**ಕರಿಕೃತ್ತಿ** – ಆನೆಯ ಧರ್ಮ
**ಕರಿಕೊಳ್ಳಿ** – ಕರಿಕಾದ ಕೊಳ್ಳಿ
**ಕರಿಣಿ** – ಹೆಣ್ಣಾನೆ
**ಕರಿದಂತ** – ಆನೆಯ ದಂತ
**ಕರಿದು** – ಕಪ್ಪು
**ಕರಿಪುಗಾೞು** – ಕಪ್ಪು ಬಣ್ಣವನ್ನು ಉಗುಳು
**ಕರಿಮುರಿ** – ಸುಟ್ಟು ಮುರುಟಾದುದು
**ಕರಿಮುರಿಕ** – ಸೀದು ಕಪ್ಪಾದ
**ಕರಿಮುರಿವೋಗು** – ಸುಟ್ಟು ಮುರುಟಿಹೋಗು
**ಕರಿಮೊಗ** – ಆನೆಯ ಮುಖವುಳ್ಳವನು, ಗಣಪತಿ
**ಕರಿಯಾಲಿ** – ಕಣ್ಣ ಕಪ್ಪು ಗುಡ್ಡೆ; ಕಪ್ಪು ಕಣ್ಣು
**ಕರಿರಿಪು** – ಆನೆಯ ವೈರಿ, ಸಿಂಹ
**ಕರಿಸ(ಸೆ)** – ಬಿಸಿಪು, ಬೆಂಕಿ
**ಕರೀರ** – ಬಿದಿರ ಚಿಗುರು
**ಕರು** – ಎರಕದ ಅಚ್ಚು; ಎರಕದ ಬೊಂಬೆ
**ಕರುಣಂಗೆಯ್** – ಕರುಣೆ ತೋರು
**ಕರುಣಂಬಡು** – ಕರುಣಂಗೆಯ್
**ಕರುಣಾಕ್ರಂದನ** – ಅರ್ತನಾದ
**ಕರುಣಾಧ್ವನಿ** – ಕರುಣಾಕ್ರಂದನ
**ಕರುಣಿಸು** – ಕರುಣೆ ತೋರು
**ಕರುಮಾ(ವಾ)ಡ** – ಉಪ್ಪರಿಗೆ
**ಕರುವಿಡಿಸು** – ಎರಕ ಹೊಯ್ಸು
**ಕರುವಿಡು** – ಎರಕ ಹೊಯ್
**ಕರುವೆಸ** – ಎರಕದ ಕೆಲಸ
**ಕರುಳ್** – ಅಂತ್ರ
**ಕರೆ** – ಬರಹೇಳು; ಕೂಗು; ಬಟ್ಟೆಯ ಅಂಚು; ಮೆಣಸು
**ಕರೆಗಣ್ಮು** – ದಡ ತೀಡಿ ಹರಿ; ತುಂಬಿ ತುಳುಕು
**ಕರೆಗೊಯ್** – ಅಂಚು ಕತ್ತರಿಸಿದ (ಹೊಸ) ಬಟ್ಟೆ ತೊಡು
**ಕರೆಯಿಸು** – ಬರಮಾಡಿಕೊ
**ಕರೆವೆರಸು** – ಸೆರಗಿನಿಂದ ಕೂಡಿರು
**ಕರೇಣು** – ಹೆಣ್ಣಾನೆ, ಪಿಡಿ
**ಕರೋಟ(ಟಿ)** – ತಲೆಬುರುಡೆ
**ಕರ್ಕಟಕ** – ಏಡಿ
**ಕರ್ಕಡಿ** – ಕಕ್ಕಡೆ, ಹಲ್ಲುಗಳಿರುವ ಒಂದು ಆಯುಧ
**ಕರ್ಕರ** – ಪಾರಿವಾಳ
**ಕರ್ಕಶತೆ** – ಬಿರುಸು; ಗಡಸುತನ
**ಕರ್ಕಶವೃತ್ತಿ** – ಕಠಿಣ ಪ್ರವೃತ್ತಿ
**ಕರ್ಕೇತನ** – ಒಂದು ಬಗೆಯ ರತ್ನ; ಬೆಳ್ಳಿ
**ಕರ್ಕೊಳ** – ಒಂದು ಬಗೆಯ ಸುಗಂಧದ್ರವ್ಯ
**ಕರ್ಗನೆ** – ಕಪ್ಪಗೆ
**ಕರ್ಗು** – ಕಪ್ಪಾಗು; ಕಪ್ಪಿಡು
**ಕರ್ಗುಡಿವಡು** – (ದೀಪದ) ಕುಡಿ ಕಪ್ಪಾಗು
**ಕರ್ಗೊಳ್ಳಿ** – ಕರಿಕಾದ ಕೊಳ್ಳಿ
**ಕರ್ಚರೆ** – ದೇಹದ ಒಂದು ಭಾಗ(?)
**ಕರ್ಚಿಸು** – ಹಲ್ಲಿನಿಂದ ಕಚ್ಚುವಂತೆ ಮಾಡು; ತೊಳೆಯಿಸು
**ಕರ್ಚು** –ತೊಳೆ; ಪ್ರಕ್ಷಾಲನ; ಹಲ್ಲಿನಿಂದ ಕಚ್ಚು
**ಕರ್ಚುಂಗಲ್** – ಸೂಜಿಗಲ್ಲು
**ಕರ್ಜಟಿ** – ದೇಹದ ಒಂದು ಭಾಗ(?)
**ಕರ್ಣ** – ಕಿವಿ; ಮಹಾಭಾರತದ ಒಂದು ಪಾತ್ರ
**ಕರ್ಣಜಪ** – ಚಾಡಿ ಮಾತು
**ಕರ್ಣಜಾಪ್ಯ** – (ಜೈನ) ಐದು ಬಗೆಯ ಮಂತ್ರಗಳಲ್ಲಿ ಒಂದು ಬಗೆ; ಕಿವಿಯಲ್ಲಿ ಉಸುರುವ ಮಂತ್ರ
**ಕರ್ಣತಾಳ** – ಕರ್ಣಚಾಲನ, ಕಿವಿ ಅಲ್ಲಾಡಿಸುವಿಕೆ
**ಕರ್ಣದೂಷಿಕೆ** – ಕುದುರೆಗೆ ಬರುವ ಒಂದು ರೋಗ
**ಕರ್ಣಧಾರ** – ಹಡಗಿನ ಚಾಲಕ
**ಕರ್ಣಪತ್ರ** – ಕಿವಿಯ ಆಭರಣ
**ಕರ್ಣಪರಂಪರೆ**– ಕಿವಿಯಿಂದ ಕಿವಿಗೆ ಬರುವ ರೀತಿ
**ಕರ್ಣಪಾಲಿಕೆ** – ಕಿವಿಯ ಹಾಲೆ
**ಕರ್ಣಪಿಶಾಚಿ** – ಚಾಡಿ ಹೇಳುವ ಪಿಶಾಚಿ
**ಕರ್ಣರಸಾಯನ** – ಕಿವಿಗೆ ಹಿತವಾಗಿರುವ
**ಕರ್ಣಶೂಲ** – ಕಿವಿ ನೋವು
**ಕರ್ಣಾಭ್ಯರ್ಣ** – ಕಿವಿಯ ಹತ್ತಿರ
**ಕರ್ಣಾವತಂಸ** – ಕಿವಿಯ ಆಭರಣ
**ಕರ್ಣಾವಧಿ** – ಕಿವಿಯವರೆಗೆ
**ಕರ್ಣಿಕಾರ** – ಬೆಟ್ಟದಾವರೆ

**ಕರ್ಣಿಕೆ** – ತಾವರೆಯ ಮಧ್ಯಭಾಗ
**ಕರ್ಣೇಜಪ** – ಚಾಡಿಕೋರ
**ಕರ್ಣೋತ್ತಂಸ** – ಕಿವಿಯ ಆಭರಣ
**ಕರ್ಣೋತ್ಪಲ** – ಕಿವಿಗೆ ಅಲಂಕಾರವಾಗಿಟ್ಟುಕೊಳ್ಳುವ ನೈದಿಲೆ
**ಕರ್ತಾರ** – ಸೃಷ್ಟಿಕರ್ತ
**ಕರ್ದಡಿಗ** – ಕರಿಯ ದಾಂಡಿಗ
**ಕರ್ದಮ** – ಕೆಸರು, ನೀರಲ್ಲಿ ಕದರಿರುವುದು
**ಕರ್ದಮಂಬೊರೆ** – ಕೆಸರು ಮೆತ್ತು
**ಕರ್ದಮಿತ** – ಕೆಸರಿನಿಂದ ಕೂಡಿದ
**ಕರ್ದರಿ** – ಕತ್ತಲೆ ತುಂಬಿದ ಕಮರಿ
**ಕರ್ದಿಂಗಳ್** – ಅಮಾವಾಸ್ಯೆ
**ಕರ್ದು(ಂ)ಕು** – ಕೊಕ್ಕಿನಿಂದ ಕುಟುಕು
**ಕರ್ನೆತ್ತರ್** – ಕಪ್ಪು (ಕಡುಗೆಂಪು) ರಕ್ತ
**ಕರ್ನೆಯ್ದಿಲ್** – ಕನ್ನೈದಿಲೆ
**ಕರ್ಪಟ(ಡ)** – ಬಟ್ಟೆ; ಹರಿದ ಬಟ್ಟೆ
**ಕರ್ಪರ** – ತಲೆಬುರುಡೆ
**ಕರ್ಪಿಡಿ** – ಕಪ್ಪಾಗು
**ಕರ್ಪಿಡು** – ಕರ್ಪಿಡಿ
**ಕರ್ಪು** – ಕಪ್ಪು
**ಕರ್ಪುವೀೞು** – ಕಪ್ಪು (ಕತ್ತಲೆ) ಬೀರು
**ಕರ್ಪುವೆರಸು** – ಕಪ್ಪುಬಣ್ಣದಿಂದ ಕೂಡು
**ಕರ್ಪುವೆೞು** – ಕಪ್ಪು ಬಣ್ಣ ತಾಳು
**ಕರ್ಪೇಱಿಸು** – ಕಪ್ಪು ಮಾಡು
**ಕರ್ಪೇೞು** – ಕಪ್ಪಾಗು
**ಕರ್ಬಕ್ಕಿ** – ಕಬ್ಬಕ್ಕಿ
**ಕರ್ಬಟ್ಟೆಗ** – ಕಪ್ಪು ಹಾದಿಯವನು, ಅಗ್ನಿ
**ಕರ್ಬಲೆ** – ಕರಿಯ ಬಲೆ
**ಕರ್ಬಸು** – ಕಪ್ಪು ಹಸು; ಪಿತ್ತಕೋಶ
**ಕರ್ಬಳ್ಳಿ** – ಕಪ್ಪು ಬಳ್ಳಿ
**ಕರ್ಬಾಳ** – ಕಪ್ಪು ಬಾಳದ ಬೇರು
**ಕರ್ಬುರ** – ಬೂದುಬಣ್ಣ; ನಾನಾ ಬಣ್ಣ; ಬಂಗಾರ
**ಕರ್ಬುರಿತ** – ವಿವಿಧ ಬಣ್ಣಗಳೆ ಸೇರಿದ
**ಕರ್ಬುಲಿ** – ಕಪ್ಪು ಬಣ್ಣದ ಹುಲಿ
**ಕರ್ಬೊಗರ್** – ಕಪ್ಪು ಬಣ್ಣದ ಹೊಳಪು
**ಕರ್ಬೊನ್** – ಕಬ್ಬಿಣ
**ಕರ್ಮಕ್ಷಪಣ** – (ಜೈನ) ಒಂದು ವ್ರತ
**ಕರ್ಮಕ್ಷಯ** – (ಜೈನ) ಇರುವ ಕರ್ಮಗಳನ್ನು ನಾಶಗೊಳಿಸುವುದು ಮತ್ತು ಬರುವ ಕರ್ಮಗಳನ್ನು ನಿವಾರಿಸುವುದು
**ಕರ್ಮಗತಿ** – ಕರ್ಮಫಲ
**ಕರ್ಮಡು** – (ಮರಗಿಡಗಳ ನೆರಳಿನಿಂದ) ಕಪ್ಪಾದ ಮಡು
**ಕರ್ಮನಿರ್ಜರೆ** – (ಜೈನ) ಕರ್ಮಕ್ಷಯ
**ಕರ್ಮಪಾಕ** – ಪೂರ್ವಜನ್ಮದ ಕರ್ಮಗಳ ಫಲ
**ಕರ್ಮಪ್ರಕೃತಿ** – (ಜೈನ) ಹದಿನಾರು; ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿಪ್ರಾಯೋಗಾನುಪೂರ್ವಿ, ತಿರ್ಯಗ್ಗತಿಪ್ರಾಯೋಗಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣ
**ಕರ್ಮಬಂಧ** – ಕರ್ಮದಿಂದಾದ ಬಂಧನ
**ಕರ್ಮಬಂಧನ** – ಕರ್ಮಬಂಧ
**ಕರ್ಮಭೂಮಿ** – (ಜೈನ) ಅವಸರ್ಪಿಣಿ ಕಾಲದ ಐದು–ಆರನೆಯ ವಿಭಾಗಗಳಿಗೆ ಸಂಬಂಧಿಸಿದ ಭೂಮಿ; ಭಾರತ ಮತ್ತು ಐರಾವತ ಕ್ಷೇತ್ರಗಳೊಳಗಿನ ಆರ್ಯಖಂಡ–
**ಕರ್ಮವಶ** – ಕರ್ಮಕ್ಕೆ ಅಧೀನವಾದ
**ಕರ್ಮವಿಪಾಕ** – ಪೂರ್ವಾರ್ಜಿತ ಕರ್ಮದ ಫಲ
**ಕರ್ಮಾಯತ್ತ** – ಕರ್ಮವಶ
**ಕರ್ಮೇಂಧನ** – ಕರ್ಮವೆಂಬ ಸೌದೆ
**ಕರ್ವು** – ಕಬ್ಬು
**ಕರ್ವುಗೋಲ್** – ಕಬ್ಬಿನ ಜಲ್ಲೆ
**ಕರ್ವುದೋಂಟ** – ಕಬ್ಬಿನ ತೋಟ
**ಕರ್ವುವಿಲ್** – ಕಬ್ಬಿನ ಬಿಲ್ಲು, ಮನ್ಮಥನ ಬಿಲ್ಲು
**ಕರ್ವೆಟ್ಟು** – ಕಪ್ಪು ಬೆಟ್ಟ, ನೀಲಾಚಲ
**ಕರ್ವೊಗೆ** – ಕರ್ಬೊಗೆ, ಕಪ್ಪು ಹೊಗೆ
**ಕರ್ವೊನ್** – ಕರ್ಬೊನ್, ಕಬ್ಬಿಣ
**ಕರ್ಷ** – ಎಳೆಯುವಿಕೆ
**ಕರ್ಷಣ** – ಸೆಳೆತ
**ಕರ್ಷಣೀಯ** – ಎಳೆದುಹಾಕಬೇಕಾದ
**ಕರ್ಷೋಪಲ** – ಒರೆಗಲ್ಲು
**ಕಲ್** – ಅಭ್ಯಾಸಮಾಡು; ಕಲ್ಲು, ಬಂಡೆ
**ಕಲ** – ಪಾತ್ರೆ; ಇಂಪಾದ
**ಕಲ(ಳ)ಂಕ** – ಕಲೆ; ದೋಷ
**ಕಲಂಕು** – ಕಲಕು; ಮಥನಮಾಡು
**ಕಲಂಬಡೆ** – ಶಕ್ತಿ ಹೊಂದು, ಜ್ಞಾನ ಪಡೆ
**ಕಲಕಾಂಚಿ** – ಇಂಪಾದ ಶಬ್ದಮಾಡುವ ಒಡ್ಯಾಣ
**ಕಲಗಲ್** – ಬೆರಸು
**ಕಲಡು** – ಕೆರಾಗು
**ಕಲ(ಳ)ತ್ರ** – ಹೆಂಡತಿ
**ಕಲ(ಳ)ಧೌತ** – ಚಿನ್ನ, ಬೆಳ್ಳಿ
**ಕಲಧೌತಕ್ಷ್ಮಾಧರ** – ಚಿನ್ನದ ಬೆಟ್ಟ, ಮೇರುಪರ್ವತ
**ಕಲನ್** – ಪಾತ್ರೆ
**ಕಲಮ** – ಬತ್ತ
**ಕಲಲ** – ಮಾಸಲು ಬಣ್ಣ
**ಕಲಶಜ** – ದ್ರೋಣ; ಅಗಸ್ತ್ಯ
**ಕಲಶವಿಡು** – ಶೋಭೆಯುಂಟುಮಾಡು
**ಕಲಸು** – ಮಿಶ್ರಮಾಡು
**ಕಲಸುಗೂಳ್** – ಕಲಸಿದ ಅನ್ನ
**ಕಲಹ** – ಜಗಳ; ಕಾಳಗ
**ಕಲಹಕೃಷ್ಣಕ** – ಜಗಳಗಂಟ

**ಕಲಹಲಂಪಟ** – ಕಲಹಕೃಷ್ಣಕ
**ಕಲಾಕಲಾಪ** – ಲಲಿತಕಲೆಗಳ ಸಮೂಹ
**ಕಲಾಕಲಿತ** – ಕಲೆಯಿಂದ ಕೂಡಿದ (ಚಂದ್ರ); ಕಲಾವಂತ
**ಕಲಾಪ** – ಸಮೂಹ; ನವಿಲುಗರಿ
**ಕಲಾಪಂಡಿತ** – ಕಲೆಗಳಲ್ಲಿ ಬಲ್ಲಿದ
**ಕಲಾಪತಿಕಲೆ** – ಚಂದ್ರನ ಕಲೆ
**ಕಲಾಪಮಾಲೆ** – ನವಿಲುಗರಿಗಳ ಕಟ್ಟು
**ಕಲಾಪಿ** – ಗಂಡುನವಿಲು
**ಕಲಾಪಿಸ್ತ್ರೀ** – ಹೆಣ್ಣು ನವಿಲು
**ಕಱ** – ಕಲಿತುಕೊ; ಶೂರ
**ಕಱ(ಳ)ಕೆ** – ಮೊಗ್ಗು; ದೀಪದ ಕುಡಿ; ಚಾತುರ್ಯ
**ಕಱಗಂಟಿಕ್ಕು** – ವೀರನಂತೆ ಕೂದಲನ್ನು ಗಂಟುಹಾಕಿಕೊ
**ಕಱಗಂಟು** – ವೀರರ ಕೂದಲು ಗಂಟು
**ಕಱಗೊಂಟಣೀ** – ಗಟ್ಟಿಯದ ಕುಂಟಲಗಿತ್ತಿ
**ಕಱಗೋಂಟೆ** – ಭದ್ರವಾದ ಕೋಟೆ
**ಕಱತನ** – ಪೌರುಷ; ಬಂಟತನ
**ಕಱಲ** – ಬೆರೆತ; ನಿಬಿಡವಾದ; ಪಾಪ
**ಕಱವೃಕ್ಷ** – ಕಲಿ ನೆಲಸಿದ ಮರ
**ಕಱಸು** – ಹೇಳಿಕೊಡು
**ಕಲುಂಬು** – ಕಲಕು; ಕೊಳೆ; ಕಿಲುಬು
**ಕಲುಂಬುಗೊಳ್** – ಕದಡಿಹೋಗು; ಕಲ್ಮಷಹೊಂದು
**ಕಲುಂಬೇಱು** – ಕಲುಂಬುಗೊಳ್
**ಕಲುವಾದರಿ** – ಒಂದು ಬಗೆಯ ಪಾದರಿ ಹೂ
**ಕಲುಷ** – ಕೊಳೆ; ವೈರ; ರೋಷ; ಕಳಂಕ
**ಕಲೆ(ಳೆ)** – ಅಂಶ; ಕುಶಲವಿದ್ಯೆ
**ಕಲೆಗಟ್ಟು** – ಗಾಯದಿಂದ ಗುರುತು ಬೀಳು
**ಕಲೆಮುಟ್ಟು** – ಕಲೆಯಾಗು; ಕಲ್ಮಷಗೊಳ್ಳು
**ಕಲೆವೆರಸು** – ಕಲೆಗಳಿಂದ ಕೂಡು
**ಕಲ್ಕಂಗೂಡು** – ಚೆನ್ನಾಗಿ ಕದಡು
**ಕಲ್ಕಿ** – ವಿಷ್ಣುವಿನ ಹತ್ತನೆಯ ಅವತಾರ
**ಕಲ್ಕೆ** – ಕಲಿಕೆ, ವಿದ್ಯೆ
**ಕಲ್ನೆ(ಲ್ನ)ಲೆ** – (ಜೈನ) ಬೇಸಗೆಯಲ್ಲಿ ಕಲ್ಲ ಮೇಲೆ ನಿಂತು ಮಾಡುವ ತಪಸ್ಸು
**ಕಲ್ನೆಲೆನಿಲ್** – 'ಕಲ್ನೆಲೆ' ತಪಸ್ಸಿಗೆ ನಿಲ್ಲು
**ಕಲ್ಪ** – (ಜೈನ) ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಅರುಣ, ಅಚ್ಯುತ ಎಂಬ ಹದಿನಾರು ಬಗೆಗಳ ಸ್ವರ್ಗ; (ಜೈನ) ಉತ್ಸರ್ಪಿಣಿ–ಅವಸರ್ಪಿಣಿಗಳ ಒಟ್ಟು ಕಾಲಾವಧಿ–
**ಕಲ್ಪಕುಜ** – ಕಲ್ಪವೃಕ್ಷ; (ಜೈನ) ಬೇಕಾದ್ದನ್ನು ಕೊಡುವ ಹತ್ತು ಬಗೆಯ ಕಲ್ಪವೃಕ್ಷಗಳು; ನೋಡಿ, 'ಅಂಗಕಲ್ಪಕುಜ'
**ಕಲ್ಪಕುಜಾತ** – ಕಲ್ಪಕುಜ
**ಕಲ್ಪಜ** – ಸ್ವರ್ಗದಲ್ಲಿ ಹುಟ್ಟಿದುದು; ದೇವತೆ
**ಕಲ್ಪಜಪತಿ** – ಕಲ್ಪೇಂದ್ರ; ದೇವೇಂದ್ರ
**ಕಲ್ಪದ್ರುಮ** – ಕಲ್ಪಕುಜ
**ಕಲ್ಪಪಾದಪ** – ಕಲ್ಪಕುಜ
**ಕಲ್ಪಭೂರುಹ** – ಕಲ್ಪಕುಜ
**ಕಲ್ಪಮಹೀಜ** – ಕಲ್ಪಕುಜ
**ಕಲ್ಪಲತೆ** – ಕಲ್ಪಕುಜ
**ಕಲ್ಪವಾಸಿಗ** – (ಜೈನ) ಸ್ವರ್ಗವಾಸಿ, ದೇವತೆ
**ಕಲ್ಪವೃಕ್ಷ** – ಬೇಡಿದ್ದನ್ನು ನೀಡುವ ಮರ; (ಜೈನ) ಚಕ್ರವರ್ತಿಗಳು ಮಾಡುವ ಒಂದು ಪೂಜೆ; ದೀಪಗಳನ್ನು ಒದಗಿಸುವ ಕಲ್ಪವೃಕ್ಷ; ಇದರಲ್ಲಿ ಹತ್ತು ವಿಧ: ಮದ್ಯಾಂಗ, ಭೂಷಣ, ವಸ್ತ್ರ, ತೂರ್ಯ, ಮಾಲ್ಯ, ಗೃಹ, ಭಾಜನ, ಭೋಜನ, ಜ್ಯೋತಿರ್, ದೀಪ
**ಕಲ್ಪಾಂಘ್ರಿಪ** – ಕಲ್ಪಕುಜ
**ಕಲ್ಪಾಂತ** – ಕಲ್ಪದ ಕೊನೆ
**ಕಲ್ಪಾಂತಕಾಲ** – ಪ್ರಳಯಕಾಲ
**ಕಲ್ಪಾಂತರಸ್ಥಾಯಿ** – ಕಲ್ಪಾಂತರಗಳವರೆಗೆ ಇರುವ
**ಕಲ್ಪಾಂತಸ್ಥಾಯಿ** – ಕಲ್ಪಾಂತರಸ್ಥಾಯಿ
**ಕಲ್ಪಾಮರ** – (ಜೈನ) ಕಲ್ಪಗಳಲ್ಲಿರುವ ದೇವತೆ
**ಕಲ್ಪಾವನಿಜ** – ಕಲ್ಪಕುಜ
**ಕಲ್ಪಾವನೀಜ** – ಕಲ್ಪಕುಜ
**ಕಲ್ಪಿ** – ಕಲಿಯುವಿಕೆ; ವಿದ್ಯೆ, ಕಲೆ, ಕುಶಲವಿದ್ಯೆ
**ಕಲ್ಪಿಂ** – ಕಲಿಯಿರಿ
**ಕಲ್ಪಿಸು** – ಕಲಿಸು; ಹೇಳಿಕೊಡು
**ಕಲ್ಪೇಂದ್ರ** – (ಜೈನ) ಸ್ವರ್ಗವನ್ನಾಳುವ ಇಂದ್ರ; ಇಂಥವರು ಹನ್ನೆರಡು ಮಂದಿ
**ಕಲ್ಪೇಶ್ವರ** – ಕಲ್ಪೇಂದ್ರ
**ಕಲ್ಪೋಪರಮ** – ಕಲ್ಪದ ಕೊನೆ; ಪ್ರಳಯ
**ಕಲ್ಮಾಷ** – ಬೂದುಬಣ್ಣ
**ಕಲ್ಮುಷಿಕ** – ಕಲ್ಮಷ; ದೋಷ
**ಕಲ್ಮೆಯ್** – ಕಲ್ಲಿನಂತಹ ಗಟ್ಟಿ ಮೈ
**ಕಲ್ಯಾಣ** – ಚಿನ್ನ; ಮಂಗಳ (ಜೈನ) ಜಿನನಿಗೆ ಮಾಡುವ ಐದು ಮಹೋತ್ಸವಗಳು; ನೋಡಿ, ಪಂಚಮಹಾಕಲ್ಯಾಣ
**ಕಲ್ಯಾಣಗರ್ಭ** – ಹಿರಣ್ಯಗರ್ಭ, ಬ್ರಹ್ಮ
**ಕಲ್ಯಾಣಮಿತ್ರ** – ಒಳ್ಳೆಯದಕ್ಕೆ ನೆರವಾಗುವ ಗೆಳೆಯ
**ಕಲ್ಯಾಣಿ** – ಪಾರ್ವತಿ
**ಕಲ್ಲಮಱಿ** – ಕಲ್ಲಿನ ಸಂದಿ, ಪೊಟರೆ
**ಕಲ್ಲವಿಲ** – ಕಲ್ಲಾಬಿಲ್ಲಿ
**ಕಲ್ಲಾಯ್ತ** – ಕಲಿಸುವವನು, ಗುರು
**ಕಲ್ಲೆ** – ಬೇಲಿ
**ಕಲ್ಲೆಯುಂ ಕವಿಲೆಯುಂ** – ಅಲ್ಲೋಲ ಕಲ್ಲೋಲ
**ಕಲ್ಲೆರ್ದೆ** – ಕಲ್ಲು ಹೃದಯ; ಕಠೋರತೆ
**ಕಲ್ಲೆರ್ದೆಗವಿ** – ಕಲ್ಲು ಹೃದಯದ ಕಬ್ಬಿಗ; ಕಲ್ಲಿನ ಗವಿ

**ಕಲ್ಲೆರ್ದೆತನ** – ಕಠೋರತೆ
**ಕಲ್ಲೆರ್ದೆಯಳ್** – ಕಲ್ಲು ಹೃದಯದವಳು
**ಕಲ್ಲೋಲ** – ಅಲೆ, ತೆರೆ
**ಕಲ್ವಟೆ** – ಕಲ್ಲುಗಳಿರುವ ದಾರಿ; ಕಲ್ಲಿನ ಪ್ರದೇಶ
**ಕಲ್ಹಾರ** – ಒಂದು ಬಗೆಯ ನೈದಿಲೆ; ಸೌಗಂಧಿಕಾ ಪುಷ್ಪ
**ಕವ** – ಕ್ರಮ
**ಕವಂ(ವು೦(ದಿ** – ಕವುದಿ. ತುಂಡು ಬಟ್ಟೆಗಳಿಂದ ಹೊಲಿದ ಹಚ್ಚಡ
**ಕವಚಹರ** – ಕವಚ ತೊಡುವವನು, ಪ್ರಾಪ್ತವಯಸ್ಕ
**ಕವರ್** – ಸೂರೆ ಮಾಡು; ಸೆರೆ ಹಿಡಿ; ಕವಲು ಮರ, ಕವೆ; ರಥದ ಒಂದು ಭಾಗ
**ಕವರ್ತೆ(ೞ)** – ಬಲಾತ್ಕಾರದಿಂದ ಕಿತ್ತುಕೊಳ್ಳುವುದು; ಲೂಟಿ
**ಕವರ್ತೆಗೊಳ್** – ಸುಲಿಗೆ ಮಾಡು
**ಕವರ್ತೆವೋಗು** – ಕವರ್ತೆಪಡು, ಸುಲಿಗೆಗೆ ಒಳಗಾಗು
**ಕವರ್ದುಕೊಳ್** – ವಶಪಡಿಸಿಕೊ
**ಕವಲ್** – ಕೊಂಬೆ ಒಡೆ; ಟಿಸಿಲು
**ಕವಲಂಬು** – ಕವಲಾದ ಬಾಣ
**ಕವಲಿಱೆ** – ಕವಲೊಡೆದು ಹಬ್ಬು
**ಕವಳ** – ತುತ್ತು
**ಕವಳಿಗೆ** – ಕಡತದ ಕಟ್ಟು
**ಕವಾಟ** – ಬಾಗಿಲು
**ಕವಾಟಪುಟ** – ಬಾಗಿಲ ರೆಕ್ಕೆ , ಕದ
**ಕವಿ** – ಮುಚ್ಚು, ಧರಿಸು; ತುಂಬು, ದಟ್ಟವಾಗು; ಮೇಲೆ ಬೀಳು; ಧರಿಸು; ಮುಚ್ಚಳ; ಚತುರ; ಕಬ್ಬಿಗ; ನೀರ ಹಕ್ಕಿ; ಕಡಿವಾಣ
**ಕವಿಂಜ** – ಕಪಿಂಜಲ, ಒಂದು ಹಕ್ಕಿ
**ಕವಿಯುಂ ಕಲ್ಲೆಯುಂ** – ಅಲ್ಲೋಲ ಕಲ್ಲೋಲ
**ಕವಿಲ್** – (ಕಪಿಲ) ಮಾಸಲು ಕೆಂಪು; ಮಾಸಲು ಕೆಂಪು ಬಣ್ಣವಾಗು
**ಕವ್ವರೆ** – ಸಡಗರ
**ಕಶಾದಂಡ** – ಚಾವಟಿ
**ಕಶೆ** – ಕಶಾದಂಡ
**ಕಷಣ** – ಉಜ್ಜುವಿಕೆ
**ಕಷಾಯ** – ಸುವಾಸನೆಯಿಂದ ಕೂಡಿದ; ಸುಗಂಧ; (ಜೈನ) ಸುಖದುಃಖಗಳನ್ನುಂಟುಮಾಡುವ ನಾಲ್ಕು ಬಗೆಯ ದೋಷ: ಕ್ರೋಧ, ಮಾನ, ಮಾಯಾ, ಲೋಭಗಳು
**ಕಷಾಯಕಂಠ** – ಮಧುರಧ್ವನಿಯ ಕಂಠ
**ಕಷಾಯತೋಯ** – ಸುಗಂಧದ ನೀರು
**ಕಷಾಯಸಲ್ಲೇಖನ** – ಜೈನರ ಪ್ರಕಾರ, ಮನಃಕಷಾಯಗಳನ್ನು ಹೋಗಲಾಡಿಸುವಿಕೆ
**ಕಷಾಯಾಕ್ಷ** – ಕೆಂಪು ಕಣ್ಣುಗಳುಳ್ಳವನು
**ಕಷಾಯಿತ** – ಒಗರಾದ; ಕಹಿಯಾದ
**ಕಷಾಯೋದಕ** – ಐದು ಮರಗಳ ತೊಗಟೆಗಳಿಂದ ಕಾಯಿಸಿದ ನೀರು
**ಕಷ್ಟತಿಕ್ಕೆ** – ತೊಂದರೆ
**ಕಸರ್** – ಗಂಟಲು ಕೆರೆ
**ಕಸವರ** – ಧನ, ಚಿನ್ನ
**ಕಸವು** – ಕಸ; ಕೇಡಿಗ, ದುಷ್ಟ
**ಕಸೆ** – ಚಾವಟಿ; ಲಾಡಿ
**ಕಸೆಗೊಳ್** – ಚಾವಟಿ ತೆಗೆದುಕೊ
**ಕಳ್** – ಕದಿ, ಕಳ್ಳತನಮಾಡು; ಮದ್ಯ, ಕಳ್ಳು
**ಕಳಂಬೇೞ್** – ಕಳವೇೞ್, ರಣರಂಗವನ್ನು ಗೊತ್ತುಪಡಿಸು
**ಕಳ(ಣ)** – ಯುದ್ಧರಂಗ
**ಕಳಕಂಠ** – ಇಂಪಾದ ಧ್ವನಿಯುಳ್ಳದು, ಕೋಗಿಲೆ
**ಕಳಕಂಠಿ** – ಇಂಪಾದ ಕಂಠವುಳ್ಳ, ಹೆಣ್ಣು ಕೋಗಿಲೆ
**ಕಳಕಳಾವರ್ತ** – ಕಳಕಳ ಸದ್ದಿನ ಸುಳಿದಾಟ
**ಕಳಕುಳ** – ಅಸ್ತವ್ಯಸ್ತ
**ಕಳ(ಲ)ತ್ರ** – ಹೆಂಡತಿ
**ಕಳ(ಲ)ಧೌತ** – ಚಿನ್ನ, ಬೆಳ್ಳಿ; ಬಿಳಿ ಬಣ್ಣ; ದತ್ತೂರ
**ಕಳನೇಱು** – ಯುದ್ಧಕ್ಕೆ ತೊಡಗು
**ಕಳ(ಲ)ಭ** – ಆನೆಯ ಮರಿ
**ಕಳ(ಲ)ಮ** – ಬತ್ತ; ಪೈರು; ಗದ್ದೆ
**ಕಳಮಕ್ಷೇತ್ರ** – ಬತ್ತದ ಗದ್ದೆ
**ಕಳಮಾಕ್ಷತ** – ಅಕ್ಕಿಯ ಕಾಳು, ಅಕ್ಷತೆ ಕಾಳು
**ಕಳರುತಿ** – ಮಧುರ ಧ್ವನಿ
**ಕಳಲ್** – ಚದುರಿ ಹೋಗು, ಹಾರಿ ಹೋಗು
**ಕಳವಳಸು** – ತವಕಿಸು; ಸಡಗರಿಸು
**ಕಳವು** – ಕಳ್ಳತನ
**ಕಳಶಪ್ರೋದ್ಭೂತ** – ಕಲಶಜ, ದ್ರೋಣ; ಅಗಸ್ತ್ಯ
**ಕಳಶೋದ್ಧಾರಮಂತ್ರ** – ಕಳಶವೆತ್ತುವಾಗ ಹೇಳುವ ಮಂತ್ರ
**ಕಳ(ಲ)ಹಂಸ** – ಕಂದುಬಣ್ಣದ ರೆಕ್ಕೆಗಳಿರುವ ಹಂಸ
**ಕಳಱು** – ಹೆದರು; ಸವಳು ನೆಲ
**ಕಳಾ(ಲಾ)** – ಕಾಂತಿ; ಕಲೆ; ಚಮತ್ಕಾರ
**ಕಳಾಕಳಿತ** – ಕಲಾಕಲಿತ
**ಕಳಾಧರ** – ಕಲೆಗಳನ್ನು ಬಲ್ಲವನು
**ಕಳಾ(ಳಾ)ನಿಧಿ** – ಕಲೆಗಳ ಸಮೂಹ; ಹದಿನಾರು ಕಲೆಗಳಿಗೆ ಆಶ್ರಯನಾದವನು, ಚಂದ್ರ
**ಕಳಾ(ಲಾ)ಪ** – ಸಮೂಹ; ಡಾಬು
**ಕಳಾಪಿ(ನಿ)** – ಹೆಣ್ಣು ನವಿಲು
**ಕಳಾಪ್ರಣೀತೆ** – ಕಲೆಯಲ್ಲಿ ಪರಿಣತಳಾದವಳು
**ಕಳಾರುಂದ್ರ** – ಕಲೆಗಳಿಂದ ದಟ್ಟವಾದ
**ಕಳಿಂಚು** – ಮೋಸ, ವಂಚನೆ
**ಕಳಿಂದಕನ್ಯೆ** – ಯಮುನಾ ನದಿ
**ಕಳಿಂದಜೆ** – ಕಳಿಂದಕನ್ಯೆ
**ಕಳಿಕ** – ಜೋಳ
**ಕಳಿ(ಲಿ)ಕಾ** – ಮೊಗ್ಗು; ಚಿಗುರು
**ಕಳಿಕೆ** – ಕಣ, ಹನಿ; ಚಿಗುರು

**ಕಳಿಕೆಗರ್ಚು** – ಚಿಗುರ(ಮೊಗ್ಗ)ನ್ನು ಕಚ್ಚು
**ಕಳಿತ** – ಕೂಡಿದ
**ಕಳಿಪು** – ಕಳುಹಿಸಿಕೊಡು
**ಕಳಿಸು** – ಕಳ್ಳತನ ಮಾಡಿಸು
**ಕಳೆ** – ವಿಸರ್ಜಿಸು; ಹೋಗಲಾಡಿಸು
**ಕಳೆಗಳೆ** – ಕಾಂತಿಗುಂದು
**ಕಳೆದಿಡು** – ಬಿಡು. ತ್ಯಜಿಸು
**ಕಳೆಯೇಱು** – ಕಾಂತಿ ಹೆಚ್ಚು
**ಕಳೋನ್ನತ** – ಕಲೆಗಳಿಂದ ವೃದ್ಧಿಗೊಂಡವನು, ಚಂದ್ರ
**ಕಳ್ಗುಡಿ** – ಹೆಂಡ ಕುಡಿ
**ಕಳ್ಗುಡಿಕಿ** – ಹೆಂಡ ಕುಡುಕಿ
**ಕಳ್ಗುಡಿಪಿ** – ಕಳ್ಗುಡಿಕಿ
**ಕಳ್ವಡಿಗ** – ಹೆಂಡದ ಮಾರಾಟಗಾರ
**ಕಳ್ಳಚ್ಚು** – ಕಳ್ಳ ಮುದ್ರೆ
**ಕಳ್ಳವತಿ** – ಹೆಂಡ ಮಾಡಿ ಮಾರುವವಳು
**ಕಳ್ಳವತ್ತಿಗೆ** – ಕಳ್ಳವತಿ
**ಕಳ್ಳವಳ** – ಹೆಂಡ ಮಾಡಿ ಮಾರುವವನು
**ಕಳ್ಳವೆಳ್ಳಿ** – ಕೀಳು ಗುಣಮಟ್ಟದ ಬೆಳ್ಳಿ
**ಕಳ್ಳಸಿಗ** – ಹೆಂಡ ಮಾಡುವವನು
**ಕಳ್ಳಸಿಗಗೇರಿ** – ಹೆಂಡ ಮಾರುವವರ ಬೀದಿ
**ಕಳ್ಳಾಳ್** – ಕಳ್ಳ
**ಕಳ್ಳಿ** – ಎಲೆ ಕಿತ್ತರೆ ಮಂದ ಹಾಲು ಬರುವ ಗಿಡ
**ಕಳ್ಳುಣಿ** – ಹೆಂಡಗುಡುಕ
**ಕಱಂಗು** – ಕಪ್ಪಾಗು
**ಕಱಂಡು** – ಒರಟು
**ಕೞಕುೞ** – ಚದುರಿ ಹೋಗುವಿಕೆ
**ಕಱ(ಱು)ಮೆ** – ಬಲಿತು, ಪಕ್ವವಾಗಿ(?)
**ಕೞಲ್** – ಸಡಿಲವಾಗು
**ಕಱು** – ಮಗು, ಚಿಕ್ಕದು; ಕೋಪಗೊಳ್ಳು, ಕೆರಳು
**ಕಱುಂಕೆ** – ಗರಿಕೆ
**ಕಱುಂಬ** – ಹೊಟ್ಟೆಕಿಚ್ಚಿನವನು
**ಕಱುಂಬು** – ಕರುಬು, ಮತ್ಸರಿಸು
**ಕಱುತ್ತು** – ಕೋಪಿಸಿಕೊಂಡು
**ಕಱುಕುೞಿಗ** – ಕರುಗಳನ್ನು ಕಾಯುವವನು, ವತ್ಸಪಾಲಕ
**ಕಱುಪು** – ಅಸಹನೆ, ಕೋಪ
**ಕಱುಪೇೞ್** – ಕೋಪ ಹೆಚ್ಚು
**ಕಱೆ** – ಹಾಲು ಹಿಂಡು; ಸುರಿ; ಕಪ್ಪು ಕಲೆ; ಕುಂದು
**ಕಱೆಗಂದು** – ಕಪ್ಪಾಗು
**ಕಱೆಗಟ್ಟು** – ಕಲೆಯಾಗು
**ಕಱೆಗರ್ಚು** – ಕಳಂಕವನ್ನು ತೊಡೆದುಹಾಕು
**ಕಱೆಗೊರಲ್** – ಕಪ್ಪು ಕೊರಳು
**ಕಱೆಗೊರಲ** – ಕಪ್ಪು ಕೊರಳುಳ್ಳವನು, ಶಿವ
**ಕಱೆಗೊರಲಾತಂ** – ಕಱೆಗೊರಲ
**ಕಱೆಗೊಳ್** – ಕಲೆಯನ್ನು ಪಡೆ

**ಕಱೆದೊವಲ್** – ಹದಮಾಡಲು ಕಪ್ಪು ಬಣ್ಣ ಬಳಿದ ಧರ್ಮ
**ಕಱೆವೆರಸು** – ಕರೆಯಿಂದ ಕೂಡು; ಕಳಂಕ ಹೊಂದು
**ಕಱೆಹ** – ಹಾಲು ಕರೆಯುವಿಕೆ
**ಕಱ್ಱನೆ** – ಕಪ್ಪಗೆ
**ಕೞಕ(ಕು)ೞ** – ಅಸ್ತವ್ಯಸ್ತತೆ; ದಿಗ್ಭ್ರಾಂತಿ; ಅಲ್ಲೋಲಕಲ್ಲೋಲ
**ಕೞಕೞಿಸು** – ಹೊಳೆ, ಪ್ರಕಾಶಿಸು
**ಕೞಲ್** – ಸೊರಗು; ಸಡಿಲಗೊಳ್ಳು; ಮಜ್ಜಿಗೆ; ಕಾಲಂದುಗೆ
**ಕೞಲಿಸು** – ಸಡಿಲಗೊಳಿಸು
**ಕೞಲುಲಿ** – ಕಾಲಂದುಗೆಯ ಧ್ವನಿ
**ಕೞಲೆ** – ಮುಳ್ಳುಗಳಿಂದ ಕೂಡಿದ ಸಣ್ಣ ರೆಂಬೆ
**ಕೞಲ್ಚು** – ಸಡಿಲಿಸು, ಬಿಚ್ಚು
**ಕೞವೆ(ಮೆ)** – ಬತ್ತ
**ಕೞಿ** – ಹಣ್ಣಾಗು; ಸಾಯಿ; ಗೂಟ
**ಕೞಿಪು** – ದಾಟು; ಬೀಳ್ಕೊಡು; ಕಾಲ ಸರಿ; ಕಳಂಕ
**ಕೞಿಮೞಿ** – ಕುಂದು
**ಕೞಿಯಲರ್** – ಬಾಡಿದ ಹೂವು
**ಕೞಿಯುಣ್** – ಹೆಚ್ಚು ಊಟಮಾಡು
**ಕೞಿಯೇಱ್** – ದೊಡ್ಡ ಗಾಯ
**ಕೞಿಯೋದು** – ಹೆಚ್ಚು ಓದು, ಪಂಡಿತನಾಗು
**ಕೞಿಲೆ** – ಬಿದಿರ ಕುಡಿ
**ಕೞಿವಣ್** – ಮಾಗಿದ ಹಣ್ಣು
**ಕೞಿವದ** – ಕೞಿ+ಪದ, ಹದವಾಗಿ ಮಾಗಿದ ಸ್ಥಿತಿ
**ಕೞಿವು** – ಸಾವು; ಅಳಿವು
**ಕೞಿವೂ** – ಬಾಡಿದ ಹೂ
**ಕೞೆ** – ಬಿದಿರ ಕೊಳವೆ
**ಕೞ್ಕನೆ** – ಇದ್ದಕ್ಕಿದ್ದಂತೆ
**ಕೞ್ಗು** – ಕಪ್ಪಾಗು; ಕಪ್ಪಿಡು
**ಕೞ್ತಲಿಸು** – ಕತ್ತಲೆಯುಂಟುಮಾಡು; ಕತ್ತಲೆಯಾಗು
**ಕೞ್ತಲೆ** – ಕತ್ತಲೆ, ಮಬ್ಬು
**ಕೞ್ತಲೆವಕ್ಕಿ** – ಕತ್ತಲೆಯ ಹಕ್ಕಿ, ಗೂಬೆ
**ಕೞ್ತಲೆವಗೆಯ** – ಕತ್ತಲೆಯ ಶತ್ರು, ಸೂರ್ಯ
**ಕೞ್ತಲೆವಣಿ** – ಚಂದ್ರ
**ಕೞ್ತಲೆವೞಿ** – ಕತ್ತಲೆಯ ಸಂತಾನ
**ಕೞ್ತಲೆವಿಡು** – ಕತ್ತಲೆಯುಂಟುಮಾಡು
**ಕೞ್ತೆ** – ಕತ್ತೆ, ರಾಸಭ
**ಕೞ್ತೆಕುೞಗ** – ಕತ್ತೆ ಕಾಯುವವನು
**ಕೞ್ದಿಂಗಳ್ ಕರ್ದಿಂಗಳ್, ಅಮಾವಾಸ್ಯೆಯ ಚಂದ್ರ–**
**ಕೞ್ಪು** – ಕಪ್ಪು; ಕರೆ
**ಕೞ್ಬಪ್ಪು** – (ಕಟವಪ್ರ) ಶ್ರವಣಬೆಳುಗೊಳ
**ಕಾ** – ಕಾಪಾಡು
**ಕಾಂಕ್ಷಿಸು** – ಅಪೇಕ್ಷಿಸು
**ಕಾಂಕ್ಷೆ** – ಬಯಕೆ
**ಕಾಂಚನ** – ಚಿನ್ನ

**ಕಾಂಚನಮಂಚ** – ಚಿನ್ನದ ಮಂಚ
**ಕಾಂಚನಮಾಲೆ** – ಚಿನ್ನದ ಸರ
**ಕಾಂಚನವರ್ಣ** – ಹೊಂಬಣ್ಣ
**ಕಾಂಚನವೃಷ್ಟಿ** – ಚಿನ್ನದ ಮಳೆ
**ಕಾಂಚನಸರೋರುಹ** – ಹೊಂದಾವರೆ
**ಕಾಂಚಿ** – ಡಾಬು
**ಕಾಂಚೀಕಳಾಪ** – ಕಾಂಚಿ
**ಕಾಂಚೀದಾಮ** – ಕಾಂಚಿ
**ಕಾಂಡ** – ದೇಟು; ಬಾಣ
**ಕಾಂಡಧಿ** – ಅಮುದ್ರ; ಬತ್ತಳಿಕೆ
**ಕಾಂಡಪಟ** – ತೆರೆ, ಪರದೆ
**ಕಾಂಡಾಸನ** – ಬಿಲ್ಲು
**ಕಾಂತ** – ಇಷ್ಟವಾದ; ಪ್ರಿಯಕರ
**ಕಾಂತಾತತಿ** – ಹೆಂಗಸರ ಗುಂಪು
**ಕಾಂತಾರ** – ಕಾಡು
**ಕಾಂತಾರಚರ್ಯೆ** – (ಜೈನ) ಕಾಡಿನಲ್ಲಿ ಭಿಕ್ಷೆಗಾಗಿ ಸಂಚರಿಸುವುದು
**ಕಾಂತಾರಭಿಕ್ಷೆ** – ಕಾಂತಾರಚರ್ಯೆ
**ಕಾಂತಿಗುಂದು** – ನಿಸ್ತೇಜಗೊಳ್ಳು
**ಕಾಂತಿಮಂ(ವಂ)ತ** – ತೇಜಸ್ವಿ
**ಕಾಂತೆ** – ಸ್ತ್ರೀ; ಪ್ರಿಯೆ
**ಕಾಂತ್ಯಾಕರ** – ಕಾಂತಿಯ ಆಕರ, ಚಂದ್ರ
**ಕಾಂತ್ಯಾಸ್ಪದ** – ಕಾಂತ್ಯಾಕರ
**ಕಾಂಸ್ಯ** – ಕಂಚು
**ಕಾಂಸ್ಯತಾಲ(ಳ)** – ಕಂಚಿನ ತಾಳ
**ಕಾಂಸ್ಯತೋರಣ** – ಕಂಚಿನ ತೋರಣ
**ಕಾಕತಾಲೀ(ಳೀ)ಯ** – ಅನಿರೀಕ್ಷಿತ ಘಟನೆ
**ಕಾಕಧ್ವಜ** – ಬಾವುಟದಲ್ಲಿ ಕಾಗೆಯ ಲಾಂಛನವುಳ್ಳವನು, ಕರ್ಣ
**ಕಾಕಪಕ್ಷ** – ಕಾಗೆಯ ರೆಕ್ಕೆ; ಜುಟ್ಟಿನ ಒಂದು ಶೈಲಿ
**ಕಾಕ(ಲಿ)ಳಿ** – ಇಂಪಾದ ದನಿ
**ಕಾಕಾಕ್ಷಿಗೋಳಕನ್ಯಾಯ** – ಒಂದೇ ಕಣ್ಣನ್ನು ಹೊರಳಿಸಿ ಕಾಗೆ ಎಲ್ಲಡೆ ನೋಡಿವ ಬಗೆ; ಒಂದು ಯುಕ್ತಿಯಿಂದ ಹಲವು ಫಲಸಿದ್ಧಿಯಾಗುವುದು
**ಕಾಕಿಣಿರತ್ನ** – (ಜೈನ) ಒಂದು ಜೀವರತ್ನ; ಉಜ್ಜಿದರೆ ಬೆಳಕು ಬೀರುವ ರತ್ನ
**ಕಾಗಿಣಿ** – ನಾಲ್ಕು ವೀಸ ಬೆಲೆಯ ಒಂದು ನಾಣ್ಯ
**ಕಾಗೆದೊಂಡೆ** – ಗುಲಗಂಜಿ
**ಕಾಚ** – ಗಾಜು
**ಕಾಚಭೂಷಣ** – ಗಾಜಿನ ಒಡವೆ
**ಕಾಜು** – ಗಾಜು
**ಕಾಜುವೀೞ್** – ಕರಗಿ ಬೀಳು
**ಕಾಟ** – ಪೀಡೆ; ಒಂದು ಕ್ಷುದ್ರ ದೇವತೆ
**ಕಾಟಿ** – ಒಂದು ಕ್ಷುದ್ರ ದೇವತೆ
**ಕಾಡಾನೆ** – ಅಡವಿಯ ಆನೆ; ಪಳಗಿಸದ ಆನೆ
**ಕಾಡಾವು** – ಕಾಡ ಹಸು
**ಕಾಡಿಗೆಗುಡಿ** – ದೀಪದ ಕಪ್ಪು ಕುಡಿ
**ಕಾಡಿಗೆಯಚ್ಚು** – ಕಾಡಿಗೆ ಹಚ್ಚಿಕೊ
**ಕಾಡಿಗೆವೊಗರ್** – ಕಾಡಿಗೆಯ ಹೊಳಪು
**ಕಾಡಿಸು** – ಕಾಟ ಕೊಡು
**ಕಾಡು** – ಅಡವಿ; ಕಾಟ ಕೊಡು
**ಕಾಡೆರ್ಮೆ** – ಕಾಡೆಮ್ಮೆ
**ಕಾಡೊಡಮೆ** – ಕಾಡ ವಸ್ತು, ಸಂಪತ್ತು
**ಕಾಡೊಡೆಯ** – ಕಾಡಿನ ದೊರೆ, ಬೇಡರ ದೊರೆ
**ಕಾಣ್** – ಕಾಣು, ನೋಡಿ
**ಕಾಣ** – ಒಕ್ಕಣ್ಣ
**ಕಾಣ್ಕೆ** – ಕಾಣುವಿಕೆ; ಕಾಣಿಕೆ (ಉಡುಗೊರೆ)
**ಕಾಣ್ಕೆಗೈ** – ಕಾಣಿಕೆ ಒಪ್ಪಿಸು
**ಕಾಣ್ಕೆಗೊಡು** – ಕಾಣ್ಕೆಗೈ
**ಕಾತರ** – ಕಳವಳಗೊಂಡ; ಕಳವಳ
**ಕಾದಂಬ** – ಹಂಸ; ಕದಂಬವೃಕ್ಷ
**ಕಾದಂಬಿನಿ** – ಮುಗಿಲು
**ಕಾದಂಬಿನೀನಾಥ** – ಮುಗಿಲಿನ ಒಡೆಯ, ಇಂದ್ರ
**ಕಾದಲ** – ಪ್ರಿಯ, ನಲ್ಲ, ಇನಿಯ
**ಕಾದಲೆ** – ಪ್ರಿಯೆ, ನಲ್ಲೆ
**ಕಾದಲ್ಮೆ** – ಪ್ರೇಮ
**ಕಾದಿಗೆ** – (ಖಾತಿಕಾ) ಅಗಳು, ಕಂದಕ
**ಕಾದಿಸು** – ಹೋರಾಡಿಸು
**ಕಾದು** – ಹೋರಾಡು
**ಕಾದ್ರವೇಯ** – ಹಾವು
**ಕಾನೀನ** – ಕನ್ಯೆಯಲ್ಲಿ ಹುಟ್ಟಿದವನು; ಕರ್ಣ
**ಕಾಪಱೆ** – ರಕ್ಷಣೆ ಇಲ್ಲವಾಗು, ಕಾಪು ಹಾಳುಮಾಡು
**ಕಾಪಿಡು** – ರಕ್ಷಿಸು
**ಕಾಪಿನಾಳ್** – ಅಂಗರಕ್ಷಕ
**ಕಾಪಿರಿಸು** – ಕಾವಲಿಗೆ ನಿಲ್ಲಿಸು
**ಕಾಪು** – ರಕ್ಷಣೆ, ಕಾವಲು
**ಕಾಪುಗಾಡು** – ಕಾಯ್ದಿಟ್ಟ ಕಾಡು
**ಕಾಪುಗೊಳ್** – ಕಾವಲಿರು
**ಕಾಪುರುಷ** – ಹೀನ ವ್ಯಕ್ತಿ
**ಕಾಪುವೆರಸು** – ಕಾವಲು ಸಹಿತವಾಗಿ
**ಕಾಪುವೇೞ್** – ಕಾವಲಿರಲು ಹೇಳು
**ಕಾಮಕರ** – ಗರ್ವ
**ಕಾಮಕಾಮಿನಿ** – ವಿಷಯಾಸಕ್ತೆ; ರತಿ
**ಕಾಮಚಾಪ** – ಕಬ್ಬು; ಕಾಮನ ಬಿಲ್ಲು
**ಕಾಮಚಾರಿ** – ಇಷ್ಟ ಪಟ್ಟ ಕಡೆ ಹೋಗಬಲ್ಲವನು
**ಕಾಮಜಾ** – ಒಂದು ಬಗೆಯ ಬೇಟೆ
**ಕಾಮದುಘ** – ಬಯಸಿದ್ದನ್ನು ಕೊಡುವ ಹಸು
**ಕಾಮಧೇನು** – ಕಾಮದುಘ
**ಕಾಮಧ್ವಂಸಿ** – ಜಿತೇಂದ್ರಿಯ; ಶಿವ
**ಕಾಮನಿರ್ಜರೆ** – (ಜೈನ) ಕಾಮನಾಶವಾಗುವುದು
**ಕಾಮಪಾಲ** – ಆಸೆ ನೆರವೇರಿಸುವವನು; ಬಲರಾಮ

**ಗಱಿ** – ಹಕ್ಕಿಯ ರೆಕ್ಕೆ; ಬಾಣದ ತುದಿಯ ಪುಕ್ಕ; ಬಾಣ; ತೆಂಗು ಬಾಳೆಗಳ ಎಲೆ; ಹೂವಿನ ಎಸಳು
**ಗಱಿಗಟ್ಟು** – ಬಾಣಕ್ಕೆ ಗರಿಯನ್ನು ಕಟ್ಟು; ಬಲಿಷ್ಠವಾಗು
**ಗಱಿಗಡಿ** – ಗರಿಯವರೆಗೆ ಕತ್ತರಿಸು
**ಗಱಿಗಣೆ** – ಗರಿ ಕಟ್ಟಿದ ಬಾಣ
**ಗಱಿಗೂಡು** – ಗರಿಗಳ ಚೀಲ
**ಗಱಿತೋ(ದೋ)ಱು** – ಬಾಣವನ್ನು ತೋರಿಸು; ಯುದ್ಧಾರಂಭಕ್ಕೆ ಸೂಚಿಸು
**ಗಱಿಮೀನ್** – ಒಂದು ಜಾತಿಯ ಮೀನು
**ಗಱಿಮೂಡು** – ರೆಕ್ಕೆ ಬರು
**ಗಱಿಯಿಡು** – ಗಱಿಮೂಡು
**ಗಱಿವನಿ** – ರೆಕ್ಕೆಯಿಂದ ಉದುರುವ ಹನಿ
**ಗಱಿವೂ** – ಕೇದಗೆ, ತಾಳೆಹೂ
**ಗಱಿವೆರಸು** – ಗರಿಸಹಿತವಾಗಿ
**ಗಱಿವೊಯ್** – ರೆಕ್ಕೆ ಬಡಿ
**ಗಱಿಸನ್ನೆ** – ಬಾಣದ ಗರಿಯಿಂದ ಮಾಡುವ ಸನ್ನೆ
**ಗಱಿಸನ್ನೆಗೆಯ್** – ಬಾಣದ ಗರಿಯಿಂದ ಸನ್ನೆ ಮಾಡು
**ಗಱುವಱು** – ಬೆಗನೆ; ನಿರಂತರವಗಿ
**ಗಱುಗಱುಸುರಿ** – ಒಂದೇ ಸಮನೆ ಸುರಿ
**ಗಱುಗಟಿಸು** – ಗಱುಗಱುಸುರಿ; ಒಟ್ಟುಗೂಡಿಸು
**ಗಱುಪ** – ಹರಟುವವನು, ವಾಚಾಳಿ
**ಗಱುಪು** – ಹರಟು; ಮತ್ತೆ ಮತ್ತೆ ಧ್ವನಿಮಾಡು
**ಗಟಿಗೆ** – ಒಂದು ದಿವಸದ ಅರವತ್ತನೇ ಒಂದು ಭಾಗ, ಇಪ್ಪತ್ತನಾಲ್ಕು ನಿಮಿಷಗಳು; ಗಡಿಗೆ; ಘಟವಾದ್ಯ
**ಗಟಿಗೆವಟ್ಟಲ್** – ಕಾಲ ಅಳೆಯಲು ಬಳಸುತ್ತಿದ್ದ ಪಾತ್ರೆ
**ಗಱ್** – ಗಣೆ, ಗಳು, ಬಿದಿರ ಕೋಲು; ಕಡೆಗೋಲು; ಗಾಣದಲ್ಲಿ ಅರೆಯುವ ಸಾಧನ; ಜೋಳ ಮುಂತಾದವುಗಳ ದಂಟು
**ಗಱ್ಕಾಱ** – ಬಿದಿರನ್ನು ಬಳಸುವವನು, ದೊಂಬ
**ಗಱ್ಗೂಸಾಡು** – (ದೊಂಬ) ಗಳೆಯ ಮೇಲೆ ಮಗುವನ್ನು ಆಡಿಸು
**ಗಱ್ಯಿಕ್ಕು** – ಬಾಣ ಪ್ರಯೋಗಿಸು
**ಗಱ್ಯೆತ್ತಿಸು** – ಧ್ವಜದಂಡವನ್ನು ಎತ್ತಿ ಹಿಡಿಸು
**ಗಱ್ಯೆತ್ತು** – ಧ್ವಜದಂಡವನ್ನು ಎತ್ತಿ ಹಿಡಿ
**ಗಱ್ವಱಿಗ** – ಗಳೆಯ ಆಟ ಆಡುವವನು, ದೊಂಬ
**ಗಱ್ವಟಿ** – ಗಱ್+ಬಟೆ, ಗಳೆಯ ದಾರಿ
**ಗಱ್ವಟೆಯ ಪಾವು** – ಬಿದಿರ ಗಣೆಯ ಮೇಲೆ ಬರುವ ಹಾವು; ತೆಕ್ಕೆಹಾಕಿಕೊಂಡ ಹಾವು
**ಗಱ್ವಿಡಿದಾಡು** – ಗಳೆಯನ್ನು ಹಿಡಿದು ಆಟವಾಡು
**ಗಾಂಗ** – ಗಂಗೆಗೆ ಸಂಬಂಧಿಸಿದ; ಭಿಷ್ಮ
**ಗಾಂಗತೋಯ** – ಗಂಗೆಯ ನೀರು
**ಗಾಂಗೇಯ** – ಗಂಗೆಯ ಮಗ; ಭೀಷ್ಮ
**ಗಾಂಗೇಯಕ** – ಭೀಷ್ಮ; ಷಣ್ಮುಖ; ಚಿನ್ನ
**ಗಾಂಡಿ(ೀ)ವ** – ಅರ್ಜುನನ ಬಿಲ್ಲು
**ಗಾಂಡಿ(ೀ)ವಿ** – ಅರ್ಜುನ
**ಗಾಂದರ** – ಗಾಂಧಾರ
**ಗಾಂಧರ್ವ** – ಗಂಧರ್ವರಿಗೆ ಸಂಬಂಧಿಸಿದ; ಸಂಗೀತ
**ಗಾಂಧರ್ವವಿದ್ಯೆ** – ಸಂಗೀತವಿದ್ಯೆ
**ಗಾಂಧರ್ವಶಾಸ್ತ್ರ** – ಗಾಂಧರ್ವವಿದ್ಯೆ
**ಗಾಂಧಾರ** – ಒಂದು ದೇಶದ ಹೆಸರು
**ಗಾಂಧಾರಿ** – ಒಂದು ಗಿಡದ ಹೆಸರು; ಗಾಂಧಾರ ರಾಜಪುತ್ರಿ; ಧೃತರಾಷ್ಟ್ರನ ಮಡದಿ
**ಗಾಂಪ** – ದಡ್ಡ, ಗಾವಿಲ
**ಗಾಂಪು** – ಗಾಂಪತನ
**ಗಾಜುಗೋಜು** – ಒಂದರೊಳಗೊಂದು ಸೇರಿಕೊಂಡಿರುವುದು; ಜಟಿಲತೆ
**ಗಾಜುದೊಡಿಗೆ** – ಗಾಜಿನಿಂದ ಮಾಡಿದ ಒಡವೆ
**ಗಾಡಿ** – ಚೆಲುವು; ಬೆಡಗು; ಇಂದ್ರಜಾಲ; ಗಾರುಡಿ
**ಗಾಡಿಕಾರ್ತಿ** – ಸೊಗಸುಗಾತಿ
**ಗಾಡಿಕೆ** – ಸೊಬಗು
**ಗಾಣರು** – ಗಾಯಕರು
**ಗಾಣತಿಗೆಯ್** – ಗಾಯನಮಾಡು
**ಗಾಣವಿಕ್ಕು** – ಗಾಳಹಾಕು
**ಗಾಣಿಕ್ಯ** – ಸೂಳೆಯರ ಗುಂಪು
**ಗಾಣಿಕ್ಯಸದನ** – ಸೂಳೆಯ ಮನೆ
**ಗಾತ್ರ** – ದೇಹ
**ಗಾತ್ರತ್ರ** – ದೇಹವನ್ನು ರಕ್ಷಿಸುವುದು, ಕವಚ
**ಗಾತ್ರಿಸು** – ದೇಹದಲ್ಲಿ ಸುರಿ
**ಗಾನ** – ಗಹನ
**ಗಾನದೇವತೆ** – ಸಂಗೀತದ ಅಭಿಮಾನಿ ದೇವತೆ
**ಗಾನಪಾಠ್ಯ** – ಹಾಡಲು ಬಳಸುವ ಪಠ್ಯ, ಸಾಹಿತ್ಯ
**ಗಾನೋದ್ಯೋಗ** – ಹಾಡುವ ಪ್ರಯತ್ನ
**ಗಾಮ** – ಗಾವ, ಹಳ್ಳಿ
**ಗಾಮಿಲ** – ಹಳ್ಳಿಯವನು
**ಗಾಯಕ** – ಹಾಡುಗಾರ
**ಗಾಯಕತೆ** – ಹಾಡುಗಾರಿಕೆ
**ಗಾಯಕಿ** – ಹಾಡುಗಾರ್ತಿ
**ಗಾಯ(ಯಿ)ನಿ** – ಗಾಯಕಿ
**ಗಾಯಿಕೆ** – ಗಾಯಕಿ
**ಗಾಯಿಲೆ** – ಕಾಯಿಲೆಗೊಳಗಾದ ವ್ಯಕ್ತಿಗಾರಿಗೆ – ಒಂದು ಭಕ್ಷ್ಯ–
**ಗಾರಣ** – ದೂರುವುದು; ಅಪವಾದ ಹೊರಿಸುವುದು
**ಗಾರುಡ** – ಗರುಡಮಂತ್ರ
**ಗಾರುಡಮಣಿ** – ವಿಷವನ್ನು ಹೋಗಲಾಡಿಸುವ ಮಣಿ; ಹಸಿರು ರತ್ನ, ಪಚ್ಚೆ
**ಗಾರುಡಿಗ** – ವಿಷ ಹೋಗಲಾಡಿಸುವ ವಿದ್ಯೆ
**ಗಾರುತ್ಮತ** – ಪಚ್ಚೆಯ ಮಣಿ; ಗರುಡಮಣಿ
**ಗಾರ್ಹಪತ್ಯ** – ತ್ರೇತಾಗ್ನಿಗಳಲ್ಲಿ ಒಂದು

**ಗಾಲಿ** – ಚಕ್ರ
**ಗಾವಣ** – ನೆಲೆ
**ಗಾವರ** – ಝೇಂಕಾರ; ಧ್ವನಿ
**ಗಾವರಂಬೊರೆ** – ಝೇಂಕರಿಸು
**ಗಾವರದುಂಬಿ** – ಝೇಂಕರಿಸುವ ದುಂಬಿ
**ಗಾವಸಿಂಗ** – (ಗ್ರಾಮಸಿಂಹ) ನಾಯಿ
**ಗಾವಳ** – ಗುಂಪು
**ಗಾವಳಸು** – ಗುಂಪುಗೂಡು
**ಗಾವಿಲ** – (ಗ್ರಾಮೀಣ) ಹಳ್ಳಿಗ; ಹೆಡ್ಡ
**ಗಾವಿಲತನ** – ಹೆಡ್ಡತನ
**ಗಾವಿಲ(ಲೆ)** –ಹೆಡ್ಡೆ
**ಗಾವಿಲಿಕೆ** – ಗಾವಿಲತನ
**ಗಾವುಂಡಿತಿ** – ಗೌಡಿತಿ
**ಗಾವುದು** – ಗಾವುದ
**ಗಾವುಳ** – ಸಮೂಹ
**ಗಾಹು** – ಕಪಟ; ಗುರಿ
**ಗಾಹೆ** – (ಗಾಥಾ) ಪದ್ಯ, ಹಾಡು
**ಗಾಳ** – ಮೀನು ಹಿಡಿಯುವ ಕೊಕ್ಕೆ
**ಗಾಳಗೊಳ್** – ಗಾಳಿ ಮೂಲಕ ವಾಸನೆ ತಿಳಿ
**ಗಾಳವಾತು** – ಬೈಗುಳ
**ಗಾಳವೆೞಗು** – ಗಾಳಿ ಬೀಸುವ ಜಾಗ
**ಗಾಳಸು** – ನಿವಾರಿಸು
**ಗಾಳು** – ಕ್ಷುದ್ರ ವ್ಯಕ್ತಿ; ಮೋಸ
**ಗಾಳುಗಣ್** – ಹೊಳೆವ ಕಣ್ಣು
**ಗಾಳುಗೊರವ** – ಕ್ಷುದ್ರ ಜೋಗಿ
**ಗಾಳುತನ** – ಕ್ಷುದ್ರತನ
**ಗಾಳುವೆಣ್** – ಕ್ಷುದ್ರ ಹೆಣ್ಣು
**ಗಾಳ್ದೊೞ್ತು** – ದುಷ್ಟೆಯಾದ ತೊತ್ತು
**ಗಾೞೀಟಿೞ್** – ಗಾಸಿಗೊಳ್ಳು
**ಗಿಂಡಿ** – ಸಣ್ಣ ಪಾತ್ರೆ
**ಗಿಡದುೞುಗಲು** – ಗಿಡಗಳ ತೋಪು
**ಗಿಡಿ** – ತುರುಕು
**ಗಿಡಿ(ಡು)ಗ** – ಡೇಗೆ ಹಕ್ಕಿ
**ಗಿಡಿಗಿಡಿಜಂತ್ರ** – ಎಲುಬುಗೂಡಾದ ದೇಹ
**ಗಿಡಿಗಿರಿ** – ಹಲ್ಲು ಕಚ್ಚಿಕೊಂಡು ಕಿಸಿ
**ಗಿಡು** – ಗಿಡ
**ಗಿಡುದುೞುಗಲ್** – ಗಿಡಗಳ ಗುಂಪು
**ಗಿಡುವುಗಿಸು** – ಕಾಡನ್ನು ಸೇರಿಸು
**ಗಿಣ್ಣಲ್** – ಸಣ್ಣ ಪಾತ್ರೆ
**ಗಿಣ್ಣು** – ದನ ಈದ ಹೊಸತಿನ ಹಾಲು
**ಗಿರಿ** – ಬೆಟ್ಟ; ನುಂಗುವುದು
**ಗಿರಿಕಾರೂಢ** – ಇಲಿಯನ್ನು ಏರಿದವನು, ಗಣೇಶ
**ಗಿರಿಕುಲ** – ಬೆಟ್ಟಸಾಲು
**ಗಿರಿಕೂಟ** – ಗಿರಿಶಿಖರ
**ಗಿರಿಚಕ್ರವರ್ತಿ** – ಹಿಮಾಲಯ; (ಜೈನ) ಪೂರ್ವಪಶ್ಚಿಮಾದ್ಯಂತ ಹಬ್ಬಿರುವ ಬೆಟ್ಟ; ವಿಜಯಾರ್ಧಪರ್ವತ
**ಗಿರಿಜಾತೆ** – ಪಾರ್ವತಿ
**ಗಿರಿಜೆ** – ಗಿರಿಜಾತೆ
**ಗಿರಿದುರ್ಗ** – ಬೆಟ್ಟದ ಮೇಲಿನ ಕೋಟೆ
**ಗಿರಿಧನ್ವ** – ಬೆಟ್ಟ(ಮೇರು)ವನ್ನು ಧನುಸ್ಸಾಗುಳ್ಳವನು, ಶಿವ
**ಗಿರಿಮಲ್ಲಿಗೆ** – ಬೆಟ್ಟದ ಮಲ್ಲಿಗೆ
**ಗಿರಿರಾಜ** – ಹಿಮವಂತ
**ಗಿರಿವ್ರಾತನಾಥ** – ಪರ್ವತರಾಜ
**ಗಿರಿಶ** – ಪರ್ವತನಿವಾಸಿ, ಶಿವ
**ಗಿರಿಸ** – ಗಿರಿಶ
**ಗಿರಿಸಾನು** – ಬೆಟ್ಟದ ತಪ್ಪಲು
**ಗಿರಿಸುತೆ** – ಗಿರಿಜೆ
**ಗಿರೀಂದ್ರ** – ಹಿಮವಂತ
**ಗಿರೀಂದ್ರಮಹ** – ಪರ್ವತಪೂಜೆ
**ಗಿರೆ** – ಸರಸ್ವತಿ
**ಗಿಲನ** – ನುಂಗುವುದು
**ಗಿಳಗೆಡಪ** – ಗಿಳಿಯ ಮಾತು
**ಗಿೞು** – ಭಾವಿಸು; ಹಾಗೆಂದುಕೊ
**ಗಿೞ್ಱನೆ** – ಬೇಗನೆ
**ಗಿೞ್ಱಿನ್** – ಗಿರ್ ಎಂದು ಸದ್ದು ಮಾಡು
**ಗೀಜಗ(ವಕ್ಕಿ)** – ಒಂದು ಜಾತಿಯ ಹಕ್ಕಿ
**ಗೀತ** – ಹಾಡು; ಗಾಯನ
**ಗೀತಾಭೋಗ** – ಸಂಗೀತದ ಆಸ್ವಾದನೆ
**ಗೀತಾರಾವ** – ಗಾಯನಧ್ವನಿ
**ಗೀತಿ** – ಹಾಡು; ಗಾಯನ
**ಗೀರ್ವಾಣ** – ದೇವತೆ
**ಗೀರ್ವಾಣನಾಥ** – ಇಂದ್ರ; (ಜೈನ) ಅರ್ಹಂತ
**ಗೀರ್ವಾಣಬಾಣಾಸನ** – ಕಾಮನ ಬಿಲ್ಲು
**ಗೀರ್ವಾಣಮಾರ್ಗ** – ಆಕಾಶ
**ಗೀರ್ವಾಣಾಧಿಪ** – ಗೀರ್ವಾಣನಾಥ
**ಗುಂಕ** – ಸೇವಕ
**ಗುಂಗುೞು** – ಗುಂಗಾಡು
**ಗುಂಜತ್** – ಗುಂಂಯ್ಗುಡುತ್ತಿರುವ
**ಗುಂಜಾಗೃಹ** – ಹೆಂಡದಂಗಡಿ
**ಗುಂಜಾಫಳ** – ಗುಲಗಂಜಿ
**ಗುಂಜಾಭರಣ** – ಗುಲಗಂಜಿಯ ಆಭರಣ
**ಗುಂಜಿ(ಜೆ)** – ಗುಲಗಂಜಿ
**ಗುಂಜಿದೊಡವು** – ಗುಂಜಾಭರಣ
**ಗುಂಡಿ** – ಗುಂಡಾದ ಪಾತ್ರೆ
**ಗುಂಡಿಗೆ** – ಎದೆ; ಕಮಂಡಲು
**ಗುಂಡಿಗೆವೊಗು** – ಎದೆ ಸೇರು
**ಗುಂಡಿತ್ತು** – ಆಳವಾಗಿರುವ
**ಗುಂಡು** – ಗುಂಡಗಿನ ಕಲ್ಲು; ಸಮೂಹ
**ಗುಂಡುಗೆಡೆ** – ಗುಂಪಾಗಿ ಬೀಳು
**ಗುಂಡುಗೊಳ್** – ಹೊಡೆಯಲು ಗುಂಡುಕಲ್ಲು ತೆಗೆದುಕೊ
**ಗುಂಡುವೆ** – ಒಂದು ಬಗೆಯ ಬಲೆ

**ಗುಂಡೋತ್ತರ** – ತಳಪಾಯ
**ಗುಕ್ಕರಿಸು** – ತುತ್ತುಮಾಡಿ ತಿನ್ನು
**ಗುಗ್ಗುಳ ಲೋಬಾನ**–
**ಗುಗ್ಗುಳಂಬೊತ್ತಿಸು** – ಗುಗ್ಗುಳದ ಧೂಪ ಹಾಕು
**ಗುಚ್ಛ** – ಮೂವತ್ತೆರಡು ಎಳೆಗಳುಳ್ಳ ಹಾರ
**ಗುಜಿಗುಜಿಗೊಳ್** – ಗುಜುಗುಜು ಶಬ್ದವಾಗು
**ಗುಜುಗುಜುಗೊಳ್** – ಗುಜಿಗುಜಿಗೊಳ್
**ಗುಜ್ಜರ** – ಗೂರ್ಜರ ದೇಶ
**ಗುಜ್ಜರವಟ್ಟೆ** – ಗೂರ್ಜರ ದೇಶದ ರೇಷ್ಮೆ ಬಟ್ಟೆ
**ಗುಜ್ಜರಿಗಟ್ತಿ** – ಗುರ್ಜರ ದೇಶದ ಕತ್ತಿ
**ಗುಜ್ಜಿ** – (ಕುಬ್ಜಾ) ಕುಳ್ಳಿ
**ಗುಜ್ಜು** – ಕುಳ್ಳು; ಕುಳ್ಳ
**ಗುಜ್ಜುಗರೆ** – ನಿಧಾನವಾಗು
**ಗುಜ್ಜುಗೊರವ** – ಕುಳ್ಳ ಗೊರವ
**ಗುಜ್ಜುಗೊಳ್** – ಚಿಕ್ಕದಾಗು; ಬಾಗು; ನಿಧನವಾಗು
**ಗುಜ್ಜುಮಾವು** – ಗಿಡ್ಡ ಮಾವಿನ ಮರ
**ಗುಜ್ಜುಮೆಟ್ಟು** – ನಿಧಾನ ನಡಿಗೆ
**ಗುಜ್ಜುವಜ್ಜೆ** – ಗುಜ್ಜುಮೆಟ್ಟು
**ಗುಜ್ಜೆ** – ಕುಳ್ಳಿ
**ಗುಡಿ** – (ಕುಟೀ) ಧ್ವಜ, ಬಾವುಟ; ಗುಡಾರ, ಡೇರೆ
**ಗುಡಿಗಟ್ಟು** – ಬಾವುಟ ಕಟ್ಟು; ರೋಮಾಂಚಗೊಳ್ಳು
**ಗುಡ** – ಬೆಲ್ಲ
**ಗುಡಿ** – ಬಾವುಟ; ಕುಟಿ
**ಗುಡಿಗಟ್ಟು** – ಸುತ್ತುವರಿ; ಉತ್ಸಾಹ ಹೊಂದು; ಧ್ವಜಗಳನ್ನು ಕಟ್ಟು; ಬಣ್ಣ ಬಳಿ
**ಗುಡಿಯಿಸು** – ರಾಶಿ ಹಾಕು
**ಗುಡಿಯಿಱಿ** – ರಾಶಿಯಾಗು
**ಗುಡಿಲ್** – ಗುಡಿಸಿಲು
**ಗುಡಿವಿಡಿಸು** – ಧ್ವಜವನ್ನು ಹಿಡಿಸು
**ಗುಡಿವೊಱಿಸು** – ಧ್ವಜ ಹೊರಿಸು
**ಗುಡಿಸಿಲ್** – ಜೋಪಡಿ
**ಗುಡುಗುಡು** – ಒಂದು ಅನುಕರಣ ಶಬ್ದ
**ಗುಡುವನ** – ಗುಡಾಣ
**ಗುಡ್ಡ** – ಕುಳ್ಳ; ಶಿಷ್ಯ
**ಗುಣ** – ಸ್ವಭಾವ; ನಡವಳಿಕೆ; ಸಿದ್ಧಿಗಳು; ಕಾವ್ಯಗುಣ; ಸದ್ಗುಣ; ಬಿಲ್ಲಿನ ಹಗ್ಗ
**ಗುಣಕಱುಗೊಳ್** – ಪ್ರೀತಿ ಹೊಂದು
**ಗುಣದಂಕಕಾರ್ತಿ** – ಸದ್ಗುಣಗಳಿಂದ ತುಂಬಿದವಳು
**ಗುಣಂಗೆಡು** – ಗುಣ ಹಾಳಾಗು
**ಗುಣಂಗೊಳ್** – ಹೊಗಳು
**ಗುಣಂಗೊಳಿಸು** – ಮೆಚ್ಚಿಸು
**ಗುಣಗ್ರಹಣ** – (ಜೈನ) ಎಂಟು ಬಗೆಯ ಗರ್ಭಾನ್ವಿತ ಕ್ರಿಯೆಗಳಲ್ಲಿ ಒಂದು
**ಗುಣಗ್ರಾಮಣಿ** – ಗುಣವಂತನಾದ ಗ್ರಾಮಮುಖಂಡ
**ಗುಣಚ್ಛೇದಕ** – ಗುಣಗಳನ್ನು ನಾಶಗೊಳಿಸುವವನು
**ಗುಣಜ್ಞ** – ಗುಣಗಳನ್ನು ತಿಳಿದವನು
**ಗುಣನೆ(ಣೆ)** – ನೃತ್ಯಶಾಲೆ; ಸಂಗೀತಶಾಲೆ; ಏಕಾಂತಸ್ಥಳ
**ಗುಣಧಾಮೆ** – ಸದ್ಗುಣಗಳಿಗೆ ನೆಲೆಯಾದವಳು
**ಗುಣನಾಮ** – ಗುಣಕ್ಕೆ ತಕ್ಕನಾದ ಹೆಸರು
**ಗುಣನಿಧಾನ** – ಒಳ್ಳೆಯ ಗುಣಗಳ ನಿಧಿ
**ಗುಣನಿಧಿ** – ಗುಣನಿಧಾನ
**ಗುಣನಿಲಯ** – ಸದ್ಗುಣಗಳಿಗೆ ನೆಲೆಯಾದವನು
**ಗುಣಪಣ** – ಸದ್ಗುಣವೆಂಬ ಹಣ
**ಗುಣಪೃಷ್ಠ** – ಗುಣಗರ್ಭ, ಜೇಡ
**ಗುಣಪ್ರಭ** – ಸದ್ಗುಣಗಳಿಂದ ಕಾಂತಿಯುಕ್ತನಾದವನು
**ಗುಣಭಾಜ** – ಗುಣಗಳಿಗೆ ಪಾತ್ರನಾದವನು
**ಗುಣಮಣಿ** – ಅಮೂಲ್ಯ ರತ್ನ
**ಗುಣಯುತ** – ಸದ್ಗುಣಗಳಿಂದ ಕೂಡಿರುವವನು
**ಗುಣರಹಿತೆ** – ಸದ್ಗುಣಗಳಿಲ್ಲದವಳು
**ಗುಣವತಿ** – ಸದ್ಗುಣಗಳಿಂದ ಕೂಡಿರುವವಳು
**ಗುಣವರ್ಮ** – ಸದ್ಗುಣಗಳ ಕವಚ ತೊಟ್ಟವನು
**ಗುಣವ್ಯಸನ** – ಸದ್ಗುಣಗಳಲ್ಲಿ ಆಸಕ್ತಿ
**ಗುಣವ್ರತ** – (ಜೈನ) ಸದ್ಗುಣಗಳೇ ವ್ರತವಾಗಿರುವವನು; ಶ್ರಾವಕರು ಹೊಂದಿರುವ ದಿಗ್ವಿರತಿ, ದೇಶವಿರತಿ, ಅನರ್ಥದಂಡವಿರತಿ ಎಂಬ ಮೂರು ವ್ರತಗಳು
**ಗುಣಶ್ರೇಣಿನಿರ್ಜರೆ** – (ಜೈನ) ಕರ್ಮಗಳನ್ನು ನಾಶಗೊಳಿಸುವ ಒಂದು ವಿಧಿ
**ಗುಣಸಮವಾಯ** – ಸದ್ಗುಣಗಳ ಸಮೂಹ
**ಗುಣಸ್ತವ** – ಗುಣಗಳ ಹೊಗಳಿಕೆ
**ಗುಣಸ್ಥಾನ** – (ಜೈನ) ಆತ್ಮನ ದರ್ಶನ ಜ್ಞಾನ ಚಾರಿತ್ರಗಳ ವಿಕಾಸಗೊಳ್ಳುವ ಅವಸ್ಥೆಗಳು
**ಗುಣಹೀನ** – ಸದ್ಗುಣಗಳಿಲ್ಲದವನು
**ಗುಣಹೀನೆ** – ಸದ್ಗುಣಗಳಿಲ್ಲದವಳು
**ಗುಣಾಂತರ** – ಬೇರೊಂದು ಗುಣ
**ಗುಣಾಕೃತಿ** – ನೂಲಿನ ಆಕಾರ
**ಗುಣಾಢ್ಯ** – ಸದ್ಗುಣಗಳುಳ್ಳವನು
**ಗುಣಾಣೆ** – ಹೆಂಗಸರ ಶೃಂಗಾರ ಕೋಣೆ
**ಗುಣಾಧಿಕ** – ಸದ್ಗುಣಗಳಿಂದ ದೊಡ್ಡವನಾದವನು
**ಗುಣಾಧೇಯ** – ಸದ್ಗುಣಗಳಿಗೆ ಆಶ್ರಯದಂತಿರುವವನು
**ಗುಣಾಷ್ಟಕ** – (ಜೈನ) ನೋಡಿ, ಅಷ್ಟಗುಣ
**ಗುಣಿಯಿಸು** – ಲೆಕ್ಕಹಾಕು
**ಗುಣೋತ್ಕರ** – ಗುಣಸಮೂಹ
**ಗುಣೋದೀರ್ಣತೆ** – ಸದ್ಗುಣಗಳ ಬೆಳವಣಿಗೆ
**ಗುಣ್ಪಱಿ** – ಹಿರಿಮೆಯನ್ನು ಅರಿ
**ಗುಣ್ಪು** – ಗಾಂಭೀರ್ಯ; ಆಳ
**ಗುಣ್ಪುವಡೆ** – ಆಳವಾದ
**ಗುಣ್ಪುವೆಱು** – ಗಾಂಭೀರ್ಯ ಹೊಂದು
**ಗುದಿ** – ಕಾಲುಗಳನ್ನು ಕಟ್ಟು

**ಗುದ್ದಲಿಗೊಳ್** – ಗುದ್ದಲಿಯಿಂದ ಅಗೆಯಲು ತೊಡಗು
**ಗುಪಿತ** – (ಗುಪ್ತ) ಮುಚ್ಚಿದ
**ಗುಪ್ತಿ** – ಪ್ರಾಕಾರ; (ಜೈನ) ತ್ರಿವಿಧಗುಪ್ತಿ, ಮನೋವಾಕ್ಕಾಯಗಳನ್ನು ನಿಗ್ರಹಿಸುವುದು
**ಗುಪ್ತಿಗುಪ್ತ** – (ಜೈನ)) ತ್ರಿವಿಧಗುಪ್ತಿಗಳಿಂದ ರಕ್ಷಿತನಾದವನು
**ಗುಪ್ತಿತ್ರಯ** – (ಜೈನ) ಮನೋಗುಪ್ತಿ, ವಾಗ್ಗುಪ್ತಿ, ಕಾಯಗುಪ್ತಿಗಳು
**ಗುಬ್ಬಿ** – ಗುಬ್ಬಚ್ಚಿ
**ಗುಬ್ಬಿಗಂಕಣ** – ಚಿಕ್ಕ ಬಳೆ
**ಗುಮ್ಮ** – ಗೋಡೆ ಉರುಳಿಸುವ ಒಂದು ಯಂತ್ರ
**ಗುರುಕುಚ** – ದೊಡ್ಡ ಮೊಲೆ
**ಗುರುಕುಚೆ** – ದೊಡ್ಡ ಮೊಲೆಯುಳ್ಳವಳು
**ಗುರುಕುಲ** – ಗುರುವಿನ ಮನೆ; ವಿದ್ಯಾಕೇಂದ್ರ
**ಗುರುಗಂಜಿ** – ಗುಲಗಂಜಿ
**ಗುರುಜನ** – ಹಿರಿಯರು
**ಗುರುಪಂಚಕ** – (ಜೈನ) ಪಂಚಪರಮೇಷ್ಠಿಗಳು; ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳು
**ಗುರುಪೂಜೋಪಲಂಭನ** – (ಜೈನ) ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ದೇವತೆಗಳಿಂದ ಪೂಜೆಗೊಳ್ಳುವಿಕೆ
**ಗುರುಭಾರ** – ಹೆಚ್ಚು ಹೊರೆ
**ಗುರುಮಂತ್ರ** – ಗುರುವಿನ ಉಪದೇಶ
**ಗುರುವಚನ** – ಗುರುಮಂತ್ರ; ಹಿರಿಯರ ಮಾತು
**ಗುರುವಿಯೋಗ** – ಗುರುಗಳ ಅಗಲಿಕೆ
**ಗುರುಸತಿ** – ಗುರುವಿನ ಹೆಂಡತಿ; ಬೃಹಸ್ಪತಿಯ ಹೆಂಡತಿ
**ಗುರೂಪರೋಧ** – ಗುರು+ಉಪರೋಧ, ಗುರುಗಳ ಒತ್ತಾಯ
**ಗುರೂಪಾಂತ** – ಗುರು+ಉಪಾಂತ, ಗುರುಗಳ ಬಳಿ
**ಗುರ್ದು** – ಗುದ್ದು, ಮುಷ್ಟಿಯಿಂದ ಹೊಡೆ
**ಗುಲುಚ್ಛ** – ಗೊಂಚಲು
**ಗುಲ್ಫ** – ಪಾದದ ಗಂಟು
**ಗುಲ್ಮ** – ಪೊದೆ
**ಗುಹ** – ಷಣ್ಮುಖ
**ಗುಹಾಂಗಣ** – ಗುಹೆಯ ಮುಂದಿನ ಅಂಗಳ
**ಗುಹ್ಯಕ** – ಕುಬೇರ; (ಜೈನ) ದೇವತೆಗಳಲ್ಲಿ ಒಂದು ಭೇದ
**ಗುಳಿಗೆ** – ಉಂಡೆ, ಮಾತ್ರೆ
**ಗುಳಿಗೆಯಿಕ್ಕು** – ಉಂಡೆಯಾಗಿ ಮಾಡು
**ಗುಳಿಗೆಯಿಡು** – ಗುಳಿಗೆಯಿಕ್ಕು
**ಗುಳ್ಳಿಗೊಟ್ಟಿ** – ಗುಳ್ಳೆಗೋಷ್ಠಿ; ಒಂದು ಆಟ
**ಗುಳ್ಳಿಯ** – ಗುಂಡಾಗಿರುವ
**ಗುೞಿ** – ಲಕ್ಷ್ಯ
**ಗುೞಿಗಾಣ್** – ಗುರಿ ಸೇರು
**ಗುೞಿಗುೞಿಸು** – ಆಕ್ಷೇಪಮಾಡು
**ಗುೞಿಮಾಡಿಸು** – ಗುರಿಯಾಗಿ ಮಾಡು
**ಗುೞಿಯಾಗು** – ಈಡಾಗು
**ಗುೞಿಯೆಸು** – ಗುರಿಯ ಕಡೆ ಹೊಡೆ
**ಗುೞಿಯೇಸು** – ಗುರಿಯ ಕಡೆ ಹೊಡೆಯುವಿಕೆ
**ಗುೞಿಯೊಡ್ಡು** – ಗುರಿಯನ್ನು ಮುಂದಿರಿಸು
**ಗುೞುಗುೞಿಸು** – ಗೊಣಗಾಡು, ಗಂಟಲಲ್ಲಿ ಗುರುಗುರು ಶಬ್ದಮಾಡು
**ಗುೞುಗೆ** – ಹಿರಿಯೆ
**ಗುೞಿ** – ಆನೆ ಕುದುರೆಗಳ ಹಕ್ಕರಿಕೆ (ಪಕ್ಷರಕ್ಷೆ)
**ಗುೞುಮ್ಮನೆ** – ಅನುಕರಣವಾಚಕ
**ಗೂಂಟ** – ಗೂಟ, ಬೆಣೆ
**ಗೂಂಟು** – ಕಾಡುಕುದುರೆ
**ಗೂಡು** – ಹಕ್ಕಿಗಳ ವಾಸಸ್ಥಳ
**ಗೂಡುಗೊಳ್** – ಗೂಡನ್ನು ಹೊಂದು
**ಗೂಡುವಾಯ್** – ಎದೆ ಬಡಿದುಕೊ
**ಗೂಢ** – ಕಾಣದಿರುವ, ಅಡಗಿರುವ
**ಗೂಢಪದ** – ಸರಿಯಾಗಿ ಅರ್ಥೈಸಲಾಗದ ಶಬ್ದ
**ಗೂಢಪುಷ್ಕರ** – ಸೊಂಡಲ ತುದಿಯನ್ನು ಮುಚ್ಚಿಕೊಂಡ ಆನೆ
**ಗೂಢಪ್ರಣಿಧಿ** – ಗುಪ್ತಚಾರ
**ಗೂಥ** – ಅಮೇಧ್ಯ
**ಗೂಹನ** – ಅಡಗಿಸುವಿಕೆ
**ಗೂಳ** – ಎತ್ತು, ಹೋರಿ
**ಗೂಳಸೊರ್ಕು** – ಗೂಳಿಯಂತೆ ಸೊಕ್ಕಿರು
**ಗೂೞುಮಾೞುಾಳ** – ವಸ್ತು ವಿನಿಮಯಗಾರ
**ಗೃಹಕೋಕಿಳ** – ಮನೆಯ ಕೋಗಿಲೆ, ಹಲ್ಲಿ
**ಗೃಹಗ್ರಾಮಣಿ** – ಮನೆವಾರ್ತೆಗಾರ
**ಗೃಹತ್ಯಾಗ** – ಮನೆ ತೊರೆಯುವುದು
**ಗೃಹತ್ಯಾಗಕ್ರಿಯೆ** – (ಜೈನ) ವಿರಕ್ತನಾಗಿ ಮನೆಯಿಂದ ಹೊರಬೀಳುವುದು
**ಗೃಹದೀರ್ಘಿಕೆ** – ಅರಮನೆಯ ದೀರ್ಘವಾದ ಕೊಳ
**ಗೃಹದೇವತೆ** – ಮನೆದೇವರು
**ಗೃಹಪತಿ** – ಮನೆಯೊಡೆಯಮನೆವೆಗ್ಗಡೆ; (ಜೈನ) ಚಕ್ರವರ್ತಿಗೆ ತಾವಾಗಿ ದೊರೆಯುವ ಜೀವರತ್ನಗಳಲ್ಲಿ ಒಂದು
**ಗೃಹಪಿಕ** – ಗೃಹಕೋಕಿಳ
**ಗೃಹಮಹತ್ತರ** – ಮನೆವೆಗ್ಗಡೆ, ಅರಮನೆಯ ಮೇಲ್ವಿಚಾರಕ ಅಧಿಕಾರಿ
**ಗೃಹಮೇಧಿಕ** – ಗೃಹಸ್ಥ
**ಗೃಹರಕ್ಷೆ** – ಮನೆಯ ಕಾವಲು
**ಗೃಹವನಮಹತ್ತರ** – ಅರಮೆನಯ ಉದ್ಯಾನಗಳ ಉಸ್ತುವಾರಿ ಹೊತ್ತ ಅಧಿಕಾರಿ
**ಗೃಹಶೋಭೆ** – ಮನೆಯ ಅಂದ; (ಜೈನ) ಜಿನೇಂದ್ರನ ಉಪದೇಶದಿಂದ ತನ್ನ ಶೋಭೆಯನ್ನು ತ್ಯಾಗ ಮಾಡಿ ತಪಸ್ಸಿನಲ್ಲಿ ತೊಡಗುವುದು

**ಗೃಹಸ್ಥ** – ಸಂಸಾರಸ್ಥ
**ಗೃಹಾಂಗ** – (ಜೈನ) ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು; ಮನೆಗಳನ್ನು ಕೊಡುವಂಥ ಕಲ್ಪವೃಕ್ಷ
**ಗೃಹಾಂಗಣ** – ಮನೆಯ ಅಂಗಳ
**ಗೃಹಾಂತರಾಳ** – ಮನೆಯ ಒಳಭಾಗ
**ಗೃಹಾಧಿದೇವತೆ** – ಮನೆದೇವರು
**ಗೃಹಾಧಿವಾಸ** – ಮನೆಯಲ್ಲಿ ವಾಸಿಸುವುದು
**ಗೃಹಾಧ್ಯಕ್ಷ** – ಗೃಹಮಹತ್ತರ
**ಗೃಹಾಭ್ಯಂತರ** – ಗೃಹಾಂತರಾಳ
**ಗೃಹೀತ** – ಹಿಡಿದ; ಹೊಂದಿದ
**ಗೃಹೀತೇಶಿತ್ವ(ಕ್ರಿಯೆ)** – (ಜೈನ) ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು
**ಗೃಹೋಪಕಂಠ** – ಮನೆಯ ಬಳಿ
**ಗೆಂಟಾಗಿಸು** – ದೂರಗೊಳಿಸು
**ಗೆಂಟಾಗು** – ದೂರವಾಗು
**ಗೆಂಟು** – ದೂರ
**ಗೆಗ್ಗೆ** – ಯುದ್ಧದಲ್ಲಿ ಬಳಸುತ್ತಿದ್ದ ಒಂದು ಯಂತ್ರ
**ಗೆಡೆ** – ಸ್ನೇಹ
**ಗೆಡೆಗೊಳ್** – ಸ್ನೇಹ ಹೊಂದು
**ಗೆಡೆವಕ್ಕಿ** – ಜೋಡಿಹಕ್ಕಿ, ಚಕ್ರವಾಕ
**ಗೆಡೆವಚ್ಚು** – ಜೊತೆಯನ್ನು ಬಿಡು
**ಗೆತ್ತು** – ಭಾವಿಸಿ
**ಗೆಯ್ವೊಗ** – ಕಾರ್ಯವೈಖರಿ
**ಗೆರ್ಬು** – ಸಂಭೋಗಿಸು
**ಗೆಲ್** – ಜಯಿಸು
**ಗೆಲಿಸು** – ಗೆಲ್ಲುವಂತೆ ಮಾಡು
**ಗೆಲ್ಲ** – ಗೆಲವು
**ಗೆಲ್ಲಂಕ** – ಗೆಲ್ಲುವ ಅಂಕ
**ಗೆಲ್ಲಂಗುಡು** – ಸೋಲೊಪ್ಪಿಕೊ
**ಗೆಲ್ಲಂಗೊಳ್** – ಗೆಲವನ್ನು ಪಡೆ
**ಗೆಲ್ಲಂಬಡೆ** – ಗೆಲ್ಲಂಗೊಳ್
**ಗೆಲ್ಲಗಾಱ** – ಜಯಶಾಲಿ
**ಗೆಲ್ಲವಾಱು** – ಗೆಲವು ಕಡಿಮೆಯಾಗು
**ಗೆಲ್ಲವೀ** – ಗೆಲ್ಲಂಗುಡು, ಗೆಲವನ್ನು ಎದುರಾಳಿಗೆ ಕೊಡು
**ಗೆಲ್ಲಸೇಸೆ** – ವಿಜಯ ಹಾರೈಸಿ ಹಾಕುವ ಅಕ್ಷತೆ
**ಗೆಲ್ವು** – ಗೆಲವು
**ಗೆಳೆವಕ್ಕಿ** – ಜೋಡಿಹಕ್ಕಿ, ಚಕ್ರವಾಕ
**ಗೆಱೆ** – ಗೀಟು
**ಗೆಱೆಯಾಣೆ** – ಗೆರೆ ಮೀರದಂತೆ ಇಡುವ ಆಣೆ
**ಗೆಣಸು** – ಗೆಣಸು, ಗಡ್ಡೆ
**ಗೇಣ್** – ಅಂಗೈ ಅಗಲಿಸಿದಾಗ ಹೆಬ್ಬೆರಳ ತುದಿಯಿಂದ ಕಿರುಬೆರಳ ತುದಿಯವರೆಗಿನ ಉದ್ದ; ಚೂರಿ
**ಗೇಯ** – ಸಂಗೀತ, ಹಾಡಿಕೆ, ಹಾಡಬಹುದಾದ
**ಗೇಯರಸ** – ಸಂಗೀತದ ಆನಂದ
**ಗೇಹ** – ಮನೆ
**ಗೇಹಾಂಗಣ** – ಮನೆಯ ಅಂಗಳ
**ಗೇಹಾಜಿರ** – ಗೇಹಾಂಗಣ
**ಗೇಹಿನಿ** – ಗೃಹಿಣಿ
**ಗೈರಿಕಪರಾಗ** – ಕೆಂಪು ದೂಳು
**ಗೊಂಕುಳಿಡು** – ಕರ್ಕಶವಾಗಿ ಅರಚು
**ಗೊಂಕುಳುಗಱಿ** – ಹೇಸರಗತ್ತೆ
**ಗೊಂಕೆ** – ಗೋಣು
**ಗೊಂಚಲು** – ಸಮೂಹ
**ಗೊಂಚಲಿಸು** – ಒಟ್ಟಾಗಿ ಸೇರು
**ಗೊಂಚಲ್ಮಿಂಚು** – ಮಿಂಚಿನ ಗೊಂಚಲು
**ಗೊಂಟು** – ದಿಕ್ಕು
**ಗೊಂಟುಗೊಳ್** – ಮೇಲೆ ಸೇರು
**ಗೊಂಟುಗೊಳಿಸು** – ಮೂಲೆ ಸೇರಿಸು
**ಗೊಂಟುವೊಗು** – ಗೊಂಟುಗೊಳ್
**ಗೊಂದಣ** – ಗುಂಪು
**ಗೊಂದಣಂಗುಣಿ** – ಗುಂಪಾಗಿ ಕುಣಿ
**ಗೊಂದಣಂಗೂಡು** – ಗುಂಪು ಸೇರು
**ಗೊಂದಣಂಮಾಡು** – ಗೊಂದಣಂಗುಣಿ
**ಗೊಂದಣಂಬೆಳಗು** – ಕಿರಣಪುಂಜ
**ಗೊಂದಳ** – ಸಮೂಹ
**ಗೊಂದಳವೆಕ್ಕಣ** – ಸಮೂಹ ಕಲಾ ಪ್ರದರ್ಶನ
**ಗೊಂದಳಿಸು** – ಒಟ್ಟುಗೂಡು
**ಗೊಂದೆ** – ಬಸವ, ಎತ್ತು
**ಗೊಜ್ಜಗೆ** – ಇರುವಂತಿಗೆ; ಸೇವಂತಿಗೆ
**ಗುಜ್ಜುವಜ್ಜೆ** – ಪುಟ್ಟ ಹೆಜ್ಜೆ
**ಗೊಜ್ಜೆ** – ಗೊಜ್ಜಗೆ
**ಗೊಟ್ಟಂಗುಡಿಯಿಸು** – ಗೊಟ್ಟದಲ್ಲಿ ಸುರಿದು ಕುಡಿಸು
**ಗೊಟ್ಟಚ್ಚಿ** – ನೆಲಬೇವು ಗಿಡ
**ಗೊಟ್ಟಾಟ** – ಕುತಂತ್ರ
**ಗೊಟ್ಟಿ** – (ಗೋಷ್ಠಿ) ಗುಂಪು
**ಗೊಟ್ಟಿಗೆವರ್** – ಗೋಷ್ಠಿಗೆ ಬರು
**ಗೊಟ್ಟಿಗಾಣ** – ಗೋಷ್ಠಿಗಾಯನ
**ಗೊಟ್ಟಿಗಾಣರ್** – ಗುಂಪಾಗಿ ಹಾಡುವವರು
**ಗೊಟ್ಟಿಗಾಱ** – ಗೋಷ್ಠಿಯಲ್ಲಿ ಭಾಗಿಯಾದವನು
**ಗೊಟ್ಟಿಗೆ** – ಗೋಷ್ಠಿ
**ಗೊಟ್ಟಿಗೆಯ್** – ಗೋಷ್ಠಿ ಸೇರು
**ಗೊಟ್ಟಿಗೇಯ** – ಗೊಟ್ಟಿಗಾಣ
**ಗೊಟ್ಟಿರ್** – ಗೋಷ್ಠಿಯಲ್ಲಿ ಭಾಗಿಯಾಗು
**ಗೊಟ್ಟುಗಟ್ಟು** – ಒಣಗಿ ಕೊರಡಾಗು
**ಗೊಟ್ಟುವಳ್ಳ** – ಬತ್ತಿಹೋದ ಹಳ್ಳ
**ಗೊಡ್ಡ** – ತೊಂದರೆ, ಬಾಧೆ; ಚೇಷ್ಟೆ; ನಿರರ್ಥಕ
**ಗೊಡ್ಡಾಟ** – ಉಪಟಳ, ತುಂಟಾಟ
**ಗೊಡ್ಡು** – ಬಂಜೆ
**ಗೊಡ್ಡುಗೊಳ್** – ನಿರರ್ಥಕವಾಗು
**ಗೊಡ್ಡೆ** – ಅರಸಿಕಳು

**ಗೊಣೆ(ಯ)** – ಬಿಲ್ಲಿನ ಹೆದೆ
**ಗೊತ್ತು** – ಗುರಿ, ನೆಲೆವೀಡು
**ಗೊಬ್ಬರ** – ಸಸಿ ಹುಲುಸಾಗಲು ನೆರವಾಗುವ ಕೊಳೆತ ವಸ್ತುಗಳು
**ಗೊಮ್ಮಟ** – (ಜೈನ) ಕಾಮದೇವರಲ್ಲಿ ಮೊದಲನೆಯವನು, ಬಾಹುಬಲಿ
**ಗೊರವ** – (ಗುರವಃ) ತಪಸ್ವಿ; ತಿರುಕ
**ಗೊರವಿ** – ತಿರುಕಿ, ವಿರಕ್ತೆ
**ಗೊಲೆ** – ಗೊನೆ, ತೆನೆ, ಗೊಂಚಲು; ಬಿಲ್ಲಿನ ತುದಿ
**ಗೊಲೆಗೆತ್ತು** – ಬಿಲ್ಲಿಗೆ ಹೆದೆಯೇರಿಸು
**ಗೊಲೆಗೊಳ್** – (ಹಣ್ಣು) ಗೊನೆ ಬಿಡು
**ಗೊಲೆಗೊಳಸು** – ತುದಿ ಮುಟ್ಟಿಸು
**ಗೊಲ್ಲ** – ಒಂದು ದೇಶ, ಅಲ್ಲಿನ ವ್ಯಕ್ತಿ; ದನಗಾಹಿ
**ಗೊಲ್ಲಣಿಗೆ** – ಗೂಡಾರ
**ಗೋಕರ್ಣ** – ಹಾವು
**ಗೋಕುಲ** – ದನದ ಮಂದೆ; ಕೃಷ್ಣ ಇದ್ದ ಹಳ್ಳಿ
**ಗೋಕ್ಷೀರಕ್ಷತಜತ್ವ** – (ಜೈನ) ತೀರ್ಥಂಕರತ್ವ ಬರುವ ಜೀವನ ರಕ್ತವು ಹಸುವಿನ ಹಾಲಿನಂತೆ ಬೆಳ್ಳಗಾಗುವ ಸ್ಥಿತಿ
**ಗೋಘ್ನ** – ಹಸುವನ್ನು ಕೊಲ್ಲುವವನು
**ಗೋಚಾರನಿಯಮ** – (ಜೈನ) ಸಾಧುವಿನ ಭಿಕ್ಷಾಕ್ರಮ; ಹಸುವಿನಂತೆ ಆಹಾರಕ್ಕಾಗಿ ಚರಿಸುವುದು
**ಗೋಡೆಯೇಱಿಸು** – ಗೋಡೆಯನ್ನು ಕಟ್ಟು
**ಗೋಣ್** – ಕೊರಳು
**ಗೋಣಡಿಗೊಳ್** – ತಲೆಕೆಳಕಾಗು
**ಗೋಣ್ಮುರಿ** – ಕತ್ತನ್ನು ಮುರಿ
**ಗೋಣ್ಮುರಿಗೊಳ್** – ಕತ್ತನ್ನು ತಿರಿಚು
**ಗೋತ್ರ** – ವಂಶ; ಬೆಟ್ಟ; ದನಗಳ ಮಂದೆ
**ಗೋತ್ರಕರ್ಮ** – (ಜೈನ) ಜೀವನಿಗೆ ಅಂಟಿಕೊಳ್ಳು ಎಂಟು ಬಗೆಯ ಕರ್ಮಗಳಲ್ಲಿ ಒಂದು
**ಗೋತ್ರಕಲಹ** – ಮನೆತನದ ಜಗಳ
**ಗೋತ್ರಜ** – ಒಂದೇ ಗೋತ್ರದವರು; ದಾಯಾದಿಗಳು
**ಗೋತ್ರಧರ** – ಬೆಟ್ಟ ಹೊತ್ತವನು, ಶ್ರೀಕೃಷ್ಣ
**ಗೋತ್ರಧಾತ್ರೀಧರ** – ಕುಲಪರ್ವತ
**ಗೋತ್ರನಗ** – ಕುಲಪರ್ವತ
**ಗೋತ್ರಪ್ರಿಯ** – ಪರ್ವತದ ಬಗ್ಗೆ ಪ್ರೀತಿಯಿರುವವನು; ತನ್ನ ಕುಲದ ಬಗ್ಗೆ ಅಭಿಮಾನವುಳ್ಳವನು
**ಗೋತ್ರಭಿತ್** – ಬೆಟ್ಟವನ್ನು ಕತ್ತರಿಸಿದವನು, ಇಂದ್ರ
**ಗೋತ್ರವೈರಿ** – ಪರ್ವತವೈರಿ, ಇಂದ್ರ
**ಗೋತ್ರಸ್ಖಲನೆ** – ಬಾಯಿತಪ್ಪಿ ಬೇರೊಬ್ಬರ ಹೆಸರಿನಿಂದ ಕರೆಯುವುದು
**ಗೋತ್ರಾಚಲ** – ಗೋತ್ರನಗ
**ಗೋತ್ರಾದ್ರಿ** – ಗೋತ್ರನಗ
**ಗೋತ್ರಾರಿ** – ಗೋತ್ರವೈರಿ
**ಗೋದಾನ** – ಗೋವನ್ನು ದಾನವಾಗಿ ಕೊಡುವುದು
**ಗೋದಾಮೆ** – ಗೋದಿ ನಾಗರ ಹಾವು
**ಗೋದೋಹನ** – ಹಸುವಿನ ಹಾಲು ಹಿಂಡುವುದು
**ಗೋಧ** – ಉಡು; ಬಿಲ್ಗಾರರು ಕೈಗೆ ಕಟ್ಟಿಕೊಳ್ಳುವ ಚರ್ಮದ ಪಟ್ಟಿ
**ಗೋಧೂಮ** – ಗೋದಿ
**ಗೋನ(ನಾ)ಸ** – ಹೆಬ್ಬಾವು
**ಗೋನಿಯೋಗ** – ದನಗಾಹಿತನ
**ಗೋಪ** – ದನಗಾಹಿ
**ಗೋಪಕುಮಾರಕ** – ದನಕಾಯುವ ಹುಡುಗ
**ಗೋಪತಿ** – ಸೂರ್ಯ
**ಗೋಪಧ್ವಜ** – ವೃಷಭಧ್ವಜ, ಶಿವ
**ಗೋಪನಂದನ** – ಗೊಲ್ಲರವನ ಮಗ, ಶ್ರಿಕೃಷ್ಣ; ಸೂರ್ಯನ ಮಗ, ಯಮ
**ಗೋಪಾನಸೀಕ** – ಲೋವೆ, ತೊಲೆ
**ಗೋಪಾಮುಖ** – ಬುರುಜು
**ಗೋಪಾಲಕ** – ದನಗಾಹಿ
**ಗೋಪಿ** – ಗೊಲ್ಲಿತಿ
**ಗೋಪುರ** – ಗೋವುಗಳ ನಗರ; ಪುರದ್ವಾರ
**ಗೋಭೂಮಿ** – ಗೋಮಾಳ; ಮೈದಾನ
**ಗೋಮಂಡಲ(ಳ)** – ಹಸುಗಳ ಮಂದೆ
**ಗೋಮಂಡಳಿಗ** – ದನಗಳ ಮಂದೆಯ ಒಡೆಯ
**ಗೋಮಾಯು** – ನರಿ
**ಗೋಮಿನೀ** – ಲಕ್ಷ್ಮಿ
**ಗೋಮಿನೀಧವ** – ಲಕ್ಷ್ಮೀಪತಿ, ವಿಷ್ಣು
**ಗೋಮಿನೀಪತಿ** – ಗೋಮಿನೀಧವ
**ಗೋಮಿನೀವಲ್ಲಭ** – ಗೋಮಿನೀಧವ
**ಗೋಮೇಧಿಕ** – ನವರತ್ನಗಳಲ್ಲಿ ಒಂದು
**ಗೋರ್** – ಬಲೆಯಿಂದ ಮೀನುಹಿಡಿ
**ಗೋರಥ** – ಎತ್ತುಗಳನ್ನು ಹೂಡಿದ ರಥ
**ಗೋರಿ** – ಆಮಿಷ; ಬೇಟೆಯಾಡಬೇಕಾದ ಪ್ರಾಣಿಯನ್ನು ಆಕರ್ಷಿಸಲು ಕಟ್ಟುವ ದೀಹ
**ಗೋರಿಗೊಳ್** – ಬೇಟೆಯ ಮೃಗಗಳು ಆಕರ್ಷಣೆಗೊಳ್ಳು
**ಗೋರಿಗೊಳಸು** – ಆಮಿಷವೊಟ್ಟು
**ಗೋರಿವಲೆ** – ಮೀನು ಹಿಡಿಯುವ ಬಲೆ
**ಗೋಲಾಂಗೂಲ** – ಹಸುವಿನ ಬಾಲ; ಕೋತಿ
**ಗೋವ** – ಗೋಪ, ದನ ಕಾಯುವವನು
**ಗೋವರ್ಧನ** – ದನಗಾಹಿ; ಶ್ರೀಕೃಷ್ಣ
**ಗೋವಳ** – ಗೋಪಾಲಕ
**ಗೋವಳಗಟ್ಟಿಗೆ** – ದನ ಕಾಯುವವನ ಕೋಲು
**ಗೋವಳಗಟ್ಟಿಲೆ** – ಕಗ್ಗತ್ತಲೆ
**ಗೋವಳಗೋಲ್** – ಗೋವಳಗಟ್ಟಿಗೆ
**ಗೋವಳರಾಯ** – ಗೋಪಾಲಕರ ಒಡೆಯ, ಶ್ರೀಕೃಷ್ಣ
**ಗೋವಳಿಗ** – ಗೋಪಾಳಕ
**ಗೋವಿ** – (ಗೋಪಿ) ಗೊಲ್ಲಿತಿ; ಕೊಳಲು
**ಗೋವಿಂಡು** – ಗೋವುಗಳ ಹಿಂಡು
**ಗೋವಿಕೆ** – ದನ ಕಾಯುವವನ ಸ್ವಭಾವ

**ಗೋವು** – ಹಸು
**ಗೂವುವಿಂಡು** – ದಮಗಳ ಹಿಂಡು
**ಗೋವುಳಗ** – ಗೋಪಾಲಕ
**ಗೋಶೀರ್ಷ** – ಗೋವಿನ ತಲೆ; ಗೋರೋಚನ
**ಗೋಷ್ಠ** – ಕೊಟ್ಟಿಗೆ
**ಗೋಷ್ಠಾಗಾರ** – ಗೋಷ್ಠ
**ಗೋಷ್ಠಿ** – ಗುಂಪು
**ಗೋಷ್ಠಿಗೆಯ್** – ಸರಸದಿಂದ ಮತಾಡು
**ಗೋಷ್ಪದ** – ಹಸುವಿನ ಹೆಜ್ಜೆ
**ಗೋಸ** – ಶಬ್ದ
**ಗೋಸಗೆ** – ಬೆಳಗಿನ ಹೊತ್ತು
**ಗೋಸಣೆ(ನೆ)** – (ಘೋಷಣಾ) ಸಾರಿ ಹೇಳುವುದು
**ಗೋಸಣೆ(ನೆ)ಗಳೆ** – ಘೋಷಣೆ ಮಾಡು; ಸಾರು
**ಗೋಸಣೆಗೊಳ್** – ಗೋಸಣೆಗಳೆ
**ಗೋಸಣಂಗೊಳಸು** – ಸಾರಿಸು, ಡಂಗುರ ಹೊಡೆಸು
**ಗೋಸಣೆಮಾಡು** – ಗೋಸಣೆಗಳೆ
**ಗೋಸಣೆಯಿಡಿಸು** – ಗೋಸಣೆಗಳೆ
**ಗೋಸಣೆಯಿಡು** – ಗೋಸಣೆಗಳೆ
**ಗೋಸಣೆವೆಱು** – ಕೀತೀ ಪಡೆ
**ಗೋಸನೆಗುಡುಕು** – ಕರೆದು ಕೊಡುವ ಆಹಾರ
**ಗೋಸನವೋಗು** – ಕೀರ್ತಿಪಡೆ
**ಗೋಸಮಿತಿ** – ಹಸುಗಳ ಮಂದೆ
**ಗೋಸಮೃದ್ಧಿ** – ದನಗಳ ಸಂಪತ್ತು
**ಗೋಸಹಸ್ರ** – ಸಾವಿರ ಗೋವುಗಳು
**ಗೋಸಾಸ** – ಗೋಗ್ರಹಣದಲ್ಲಿ ತೋರುವ ಸಾಹಸ
**ಗೋಸ್ತ** – ದನಗಳ ಕೊಟ್ಟಿಗೆ
**ಗೋಹಳೆ** – ಗಣಿ
**ಗೋಹಳೆಯೆಡೆ** – ತಿಪ್ಪೆ
**ಗೋಳಾಂಗೂಳ** – ಕೋತಿ
**ಗೋಳ** – ಗೋಣಿ, ಆಲದ ಜಾತಿಗೆ ಸೇರಿದ ಒಂದು ಮರ
**ಗೋೞಾ(ೞ)ಯಿಲ** – (ಘೋಟಾರೂಢ) ಕುದುರೆ ಸವಾರ
**ಗೋೞಾಯ್ಲ** – ಗೋೞಾ(ೞ)ಯಿಲ
**ಗೋೞೆಗೆ** – ಹೆಣ್ಣು ಕುದುರೆ
**ಗೋೞೆಡಿಸು** – ಗೋಳಾಡಿಸು
**ಗೋೞೆಡು** – ಗೋಳಾಡು
**ಗೋೞುಂಡೆ** – ಅತಿಯಾದ ದುಃಖ
**ಗೋೞುಂಡೆಗೊಳ್** – ಅತಿ ದುಃಖಿತನಾಗು
**ಗೋೞುಂಡೆಗೊಳಸು** – ಗೋೞೆಡಿಸು
**ಗೋೞ್ಗಿೞ್** – ಗೋಳಾಡು; ಗೋಳಿನ ಧ್ವನಿ
**ಗೋೞ್ಗಿಡೆ** – ಗೋೞ್ಗಿೞ್
**ಗೋೞ್ಮುರಿಗೊಳ್** – ಕತ್ತು ತಿರುಗಿಸು
**ಗೌಜು** – ಗೌಜಲವಕ್ಕಿ, ಒಂದು ಬಗೆಯ ಹಕ್ಕಿ
**ಗೌತ** – ಭಾರಿ ಶ್ರೀಮಂತ ವರ್ತಕ
**ಗೌರ** – ಬಿಳಿಯ ಬಣ್ಣ
**ಗೌರವತ್ರಯ** – (ಜೈನ) ಶಬ್ದ, ಋದ್ಧಿ, ಸಾತ ಎಂಬ ಮೂರು ಬಗೆಯ ಗೌರವ(ಅಹಂಕಾರ)ಗಳು
**ಗೌರವರ್ಣಿನಿ** – ಗೌರವರ್ಣದವಳು
**ಗೌರಹಂಸ** – ಬಿಳಿಯ ಹಂಸ
**ಗೌರಿಮ** – ಗೌರವರ್ಣ
**ಗ್ರಂಥಿಪರ್ಣ** – ಮಾಚಿ ಪತ್ರೆ
**ಗ್ರಥಿತ** – ಕ್ರಮವಾಗಿ ಜೋಡಿಸಿದ
**ಗ್ರಸನ** – ತಿನ್ನುವುದು
**ಗ್ರಸ್ತ** – ನುಂಗಿದ; ದೆವ್ವದ ಹಿಡಿತಕ್ಕೊಳಗಾದವನು
**ಗ್ರಹಗ್ರಸ್ತ** – ದೆವ್ವದಿಂದ ಹಿಡಿಯಲ್ಪಟ್ಟವನು
**ಗ್ರಹಗ್ರಾಮ** – ಗ್ರಹಗಳ ಸಮೂಹ
**ಗ್ರಹಣ** – ಹಿಡಿಯುವಿಕೆ; ಸೂರ್ಯಚಂದ್ರರನ್ನು ಗ್ರಹಗಳು ಹಿಡಿಯುವುದು
**ಗ್ರಹಣಸಲ್ಲೇಖನಾಬುದ್ಧಿ** – ಹಿಡಿಯುವ ಮತ್ತು ಬಿಡುವ ಗುಣ
**ಗ್ರಹಬಲ** – ನವಗ್ರಹಗಳ ಶಕ್ತಿ
**ಗ್ರಾಮ** – ಹಳ್ಳಿ
**ಗ್ರಾಮಕೂಟ** – ಹಳ್ಳಿಯ ಮುಖ್ಯಸ್ಥ
**ಗ್ರಾಮಣಿ** – ಗ್ರಾಮಕೂಟ
**ಗ್ರಾಮಮೃಗ** – ನಾಯಿ
**ಗ್ರಾಮಯಾನ** – ಧರ್ಮಬೋಧೆಗಾಗಿ ಹಳ್ಳಿಗಳಗೆ ಹೋಗುವುದು
**ಗ್ರಾಮಾಧಿಪ** – ಗ್ರಾಮಣಿ
**ಗ್ರಾಮ್ಯ** – ಹಳ್ಳಿಗೆ ಸಂಬಂಧಿಸಿದ; ಗಾವಿಲ
**ಗ್ರಾಮ್ಯಾಳಾಪ** – ಹಳ್ಳಿಗರ ಮಾತು
**ಗ್ರಾಮ್ಯೋಕ್ತಿ** – ನಯವಲ್ಲದ ನುಡಿ
**ಗ್ರಾವ** – ಬಂಡೆಗಲ್ಲು; ಬೆಟ್ಟ
**ಗ್ರಾಸ** – ತುತ್ತು; ಆಹಾರ
**ಗ್ರಾಹ** – ಹಿಡಿಯುವುದು; ಮೊಸಳೆ
**ಗ್ರೀವ(ವೆ)** – ಕೊರಳು
**ಗ್ರೈವೇಯಕ** – ಕಂಠಾಭರಣ; ಆನೆಗೆ ಹಾಕುವ ಸರಪಳಿ; (ಜೈನ) ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಳ, ಸುಮನಸ, ಸೌಮನಸ, ಪ್ರೀತಿಂಕರ ಎಂಬ ಒಂಬತ್ತು ಗ್ರೈವೇಯಕಗಳು
**ಗ್ಲಪನ** – ಬಾಡುವಿಕೆ
**ಗ್ಲಪಿತ** – ಬಾಡಿದ
**ಗ್ಲಾನಿ** – ಮನಸ್ಸಿನ ಜಡತೆ
**ಗ್ಲೌ** – ಚಂದ್ರ

## ಘ

**ಘಂಟಾಜಾಲ** – ಗಂಟಗಳ ಸಮೂಹ
**ಘಂಟಾಪಥ** – (ಗಂಟೆ ಕಟ್ಟಿದ ಆನೆ ಮುಂತಾದವು ಸಾಗುವ) ಹೆದ್ದಾರಿ
**ಘಂಟಾರವ** – ಗಂಟೆಯ ಸದ್ದು

**ಘಂಟಾರುತಿ** – ಘಂಟಾರವ
**ಘಂಟಿಕಾಜಾಲ** – ಕಿರುಗಂಟೆಗಳ ಸಮೂಹ
**ಘಟ** – ಗಡಿಗೆ
**ಘಟಚೇಟಿ(ಕೆ)** – ನೀರು ತರುವ ದಾಸಿ
**ಘಟಜಾತ** – ಬಿಂದಿಗೆಗಳ ಸಮೂಹ
**ಘಟಪಾಕವಿಲೇಪನ** – ಮಡಕೆಯ್ನು ಸುಡುವ ಮೊದಲು ಅದಕ್ಕೆ ಬಳಿಯುವ ಲೇಪನದ್ರವ್ಯ
**ಘಟಸರ್ಪ** – ಮಡಕೆಯಲ್ಲಿರುವ ನಾಗರಹಾವು
**ಘಟಾ** – ಗುಂಪು
**ಘಟಾಘಟಿತ** – ಆನೆಯ ಸಮೂಹದಿಂದ ಕೂಡಿದ
**ಘಟಾವಣೆ** – ಹೊಂದಿಕೆ
**ಘಟಾಳ** – ಆನೆಗಳ ಸಾಲು
**ಘಟಿಕಾತ್ಮ** – ಸಣ್ಣ ಗಡಿಗೆ; ಗಳಿಗೆಗಳ ಎಣಿಕೆಯಿಂದ ಕೂಡಿದುದು
**ಘಟಿಕಾಸ್ಥಾನ** – ಧಾರ್ಮಿಕ ವಿಷಯಗಳುಚ್ಚ ಶಿಕ್ಷಣ ಕೇಂದ್ರ; ಸಿದ್ಧಿಕ್ಷೇತ್ರ
**ಘಟಿತ** – ಕೂಡಿದ
**ಘಟಿಸು** – ಸಂಭವಿಸು
**ಘಟೀಯಂತ್ರ** – ಬಾವಿಯಿಂದ ನೀರೆತ್ತುವ ರಾಟಣ
**ಘಟೆ** – ಆನೆಗಳ ಗುಂಪು
**ಘಟೋಧ್ನಿ** – ದೊಡ್ಡ ಕೆಚ್ಚಲುಳ್ಳ ಹಸು
**ಘಟ್ಟಾಘಟ್ಟಿ** – ಪರಸ್ಪರ ಹೊಡೆದಾಟ
**ಘಟ್ಟಿಕೆ** – ಉಂಟಾಗುವಿಕೆ
**ಘಟ್ಟಿತ** – ಹೊಡೆಯಲ್ಪಟ್ಟ
**ಘಟ್ಟಿಸು** – ಅಪ್ಪಳಿಸು
**ಘಟ್ಟಿವಳ್ತಿ** – ಗಂಧ ತೇಯುವವಳು
**ಘನ** – ಮೋಡ
**ಘನಕದಂಬಮುಕ್ತಕ** – ಒತ್ತಾಗಿ ಅರಳಿರುವ ಕದಂಬಪುಷ್ಪಗಳ ಸಮೂಹ
**ಘನಕಾಲ** – ಮಳೆಗಾಲ
**ಘನಗ್ರಾವ** – ಆಲಿಕಲ್ಲು
**ಘನಘಟಾ(ಟೆ)** – ಮೋಡದ ರಾಶಿ
**ಘನತರ** – ಬಹಳ ದೊಡ್ಡ
**ಘನತರಂಗಿಣಿ** – ದೊಡ್ಡ ನದಿ
**ಘನದ್ವನಿ** – ಗುಡುಗು
**ಘನನಿನದ** – ಘನಧ್ವನಿ
**ಘನಪಟಳ** – ಘನಘಟೆ
**ಘನಪಥ** – ಆಕಾಶ
**ಘನಪದವಿ** – ಉತ್ತಮಸ್ಥಾನ; ಮೋಡದ ಪದವಿ
**ಘನಬಾಹಾಬಲ** – ಅಪಾರ ಬಾಹುಬಲ
**ಘನಮಹಿಮ** – ಅಪಾರ ಮಹಿಮೆಯನ್ನು ಹೊಂದಿದವನು
**ಘನಮಾರ್ಗ** – ಘನಪಥ
**ಘನಮಾಲಿಕೆ** – ಮೋಡಗಳ ಸಾಲು
**ಘನಮೂಲ** – ಭದ್ರವಾದ ಬೇರು
**ಘನರವ** – ಗುಡುಗು
**ಘನರಸ** – ಕರ್ಪೂರ
**ಘನವರ್ಷ** – ಭಾರಿ ಮಳೆ
**ಘನವಾತ** – (ಜೈನ) ಭೂಲೋಕವನ್ನು ಆವರಿಸಿರುವ ಘನೋದದೀ, ಘನವಾತ, ತನುವಾತಗಳೆಂಬ ಮೂರು ವಾಯುಗಳಲ್ಲಿ ಒಂದು
**ಘನವಿವರ** – ಮೋಡಗಳ ನಡುವಣ ಬಿರುಕು
**ಘನಶ್ರೀ** – ಮೋಡಗಳ ಕಾಂತಿ
**ಘನಸಮಯ** – ಮೋಡಗಳ ಕಾಲ, ಮಳೆಗಾಲ
**ಘನಸಾರ** – ತುಂಬ ಶ್ರೇಷ್ಠ; ಪಚ್ಚಕರ್ಪೂರ
**ಘನಸುಚ್ಛಾಯ** – ದಟ್ಟವಾದ ನೆರಳಿರುವ
**ಘನಸ್ತನ** – ದೊಡ್ಡ ಮೊಲೆ
**ಘನಸ್ತನಿತ** – ಗುಡುಗು
**ಘನಸ್ವನ** – ಗುಡುಗು
**ಘನಾಗಮ** – ಮಳೆಗಾಲ
**ಘನಾಘನ** – ಮಳೆಯ ಮೋಡ
**ಘನಾನಕ** – ನಗಾರಿ
**ಘನಾನಿಲ** – ಘನವಾತ
**ಘನೀಭಾವ** – ಗಟ್ಟಿಯಾಗಿರುವಿಕೆ
**ಘನೋದದೀ** – (ಜೈನ) ಅನಂತಲೋಕವನ್ನು ಸುತ್ತಿರುವ ವಾತತ್ರಿತಯಗಳಲ್ಲಿ ಒಂದು
**ಘನೋದಯೋಪಳ** – ಆಲಿಕಲ್ಲು
**ಘನೋಪಲ(ಳ)** – ಆಲಿಕಲ್ಲು
**ಘಮ್ಮನೆ** – ಬೇಗನೆ
**ಘರವಟ್ಟಿಗೆ ಆಳ್** – ಗರವಟಿಗೆ (ಗಸ್ತು) ತಿರುಗುವ ಆಳು
**ಘರವಟ್ಟಿಸು** – ಬೀಸು, ತಿರುಗಿಸು
**ಘರ್ಘರಧ್ವನಿ** – ಗರಗರ ಶಬ್ದ, ಕರ್ಕಶಶಬ್ದ
**ಘರ್ಘರಿ(ಕೆ)** – ಗೆಜ್ಜೆಯ ಆಭರಣ
**ಘರ್ಮ** – ಬೆವರು; ಬೇಸಗೆ
**ಘರ್ಮಜಲ** – ಬೆವರು; ಬಿಸಿನೀರು
**ಘರ್ಮೋದಕ** – ಘರ್ಮಜಲ
**ಘರ್ಮೋರ್ಮಿ** – ಬಿಸಿಲಿನ ದಗೆಯ ಅಲೆ
**ಘಲ್ಘಲ್** – ಒಂದು ಅನುಕರಣ ಶಬ್ದ
**ಘಸಣಿ** – ಆತಂಕ
**ಘಸ್ಮರ** – ತಿನ್ನಾಳಿ; ನಾಶಮಾಡುವವನು
**ಘಸ್ರ** – ಹಗಲು
**ಘಳಯ** – ನಿಯಮ
**ಘಳಯಿಸು** – ಸಂಭವಿಸು
**ಘಳಿಲನೆ** – ಬೇಗನೆ
**ಘಟಿುಟನೆ** – ರಭಸವಾಗಿ
**ಘಾತಿ** – ಹೊಡೆತ; ಕೊಲೆಪಾತಕಿ
**ಘಾತಿಕರ್ಮ(ಚತುಷ್ಟಯ)** – (ಜೈನ) ಆತ್ಮನ ಗುಣಕ್ಕೆ ಘಾತಕವಾದ ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ ಎಂಬ ನಾಲ್ಕು ಕರ್ಮಗಳು
**ಘಾತಿಕ್ಷಯ** – (ಜೈನ) ಘಾತಿಕರ್ಮಗಳ ನಾಶ
**ಘಾತಿಚತುಷ್ಕ** – ಘಾತಿಕರ್ಮ(ಚತುಷ್ಟಯ)
**ಘಾತಿಚತುಷ್ಟಯ** – ಘಾತಿಕರ್ಮ(ಚತುಷ್ಟಯ)

**ಘಾತಿತ್ರಿಕ** – (ಜೈನ) ಘಾತಿಕರ್ಮಗಳಲ್ಲಿ ಜ್ಞಾನಾವರಣೀಯ, ದರ್ಶನಾವರಣಿಯ, ಮೋಹನೀಯ ಎಂಬ ಮೂರು
**ಘಾತಿದ್ವಿಷದ್** – ಘಾತಿ ಕರ್ಮಗಳೆಂಬ ಶತ್ರು
**ಘಾತಿನಿ** – ವಿನಾಶಕಾರಕಿ
**ಘಾತಿಪ್ರಚುರೆ** – (ಜೈನ) ಘತಿಕರ್ಮಗಳಿಂದ ಕೂಡಿದವಳು
**ಘಾತಿಸು** – ಹೊಡೆ
**ಘಾರಾಘಾರಿ** – ರಭಸ
**ಘಾಸ** – ಮೇವು
**ಘಾಸರ** – ಹಗಲು
**ಘುಂಟ** – ಪಾದದ ಗೆಣ್ಣು
**ಘುಂಟಿಕೆ** – ಘುಂಟ
**ಘುಡಿಘುಡಿಸು** – ಘುಡುಘುಡು ಸದ್ದುಮಾಡು
**ಘುಣಾಕ್ಷರಪ್ರಾಯ** – ಹುಳುಗಳಿಂದ ಓಲೆಗರಿಯಲ್ಲಿ ಗೆರೆ ಬಿದ್ದು ಅಕ್ಷರಗಳಂತೆ ಕಾಣಿಸುವುದು
**ಘುರುಘುರಿಸು** – ಘುರುಘುರು ಸದ್ದುಮಾಡು
**ಘುಸೃಣ** – ಕುಂಕುಮ
**ಘುಜೂಘುಜಿಸು** – ಒಂದು ಅನುಕರಣ ಶಬ್ದ
**ಘುಳುಮ್ಮನೆ** – ಘುಳುಂ ಎಂದು
**ಘೂಕ** – ಗೂಬೆ
**ಘೂತ್ಕರಿಸು** – ಘೂ ಎಂದು ಶಬ್ದಮಾಡು
**ಘೂರ್ಜರ** – ಗುರ್ಜರ ದೇಶ
**ಘೂರ್ಣ** – ನಡುಗುವ
**ಘೂರ್ಣಿತ** – ಅಲುಗುತ್ತಿರುವ
**ಘೂರ್ಣಿಸು** – ಪ್ರಕ್ಷುಬ್ಧವಾಗು
**ಘೃಣಿ** – ಜುಗುಪ್ಸೆ; ಕಾಂತಿ; ಕಿರಣ
**ಘೃಣಿಪಟಲ** – ಕಿರಣಸಮೂಹ
**ಘೃತ** – ತುಪ್ಪ
**ಘೃತಾಹುತಿ** – ತುಪ್ಪದ ಆಹುತಿ
**ಘೋಟಾರೂಢ** – ಕುದುರೆ ಸವಾರ
**ಘೋಣ** – ಮೂಗು
**ಘೋರಂಬಡಿಸು** – ಪೀಡೆಯುಂಟುಮಾಡು
**ಘೋರತಪ** – ಕಠಿಣವಾದ ತಪಸ್ಸು
**ಘೋರತಮ** – ಹೆದರಿಕೆ ತರುವ ಕಗ್ಗತ್ತಲು
**ಘೋಷಣೆವಡೆ** – ಕೀರ್ತಿ ಹೊಂದು
**ಘೋಷಾಕರ** – ಕಣಜ
**ಘೋಷಿಸು** – ಗಟ್ಟಿಯಾಗಿ ಹೇಳು
**ಘೋಟಿಾಯ್ತು** – ಕುದುರೆ ಸವಾರ
**ಘ್ರಾಣ** – ಮೂಗು
**ಘ್ರಾಣಗಹ್ವರ** – ಮೂಗಿನ ಹೊಳ್ಳೆ
**ಘ್ರಾಣೇಯ** – ಮೂಸಿನೋಡಬಹುದಾದ; ಒಳ್ಳೆಯ ವಸನೆಯುಳ್ಳ
**ಘೂರ್ಣಿಸು** – ಕ್ಷೋಭೆಗೊಂಡು ಶಬ್ದಮಾಡು
**ಘೋಷ** – ಗೊಲ್ಲರ ಹಟ್ಟಿ
**ಘೋಳಾಯ್ಲ** – ಕುದುರೆ ಸವಾರ

## ಚ

**ಚಂಕನತ್** – ಹೊಳೆಯುವ
**ಚಂಕ್ರಮಣ** – ತಿರುಗಾಟ
**ಚಂಗಲವೆ** – ಕೆಂದಾವರೆ
**ಚಂಚರೀಕ** – ದುಂಬಿ
**ಚಂಚಲ** – ಅಲುಗುವ
**ಚಂಚು** – ಹಕ್ಕಿಯ ಕೊಕ್ಕು
**ಚಂಚುಗೂಡು** – ಕೊಕ್ಕುಗಳನ್ನು ಸೇರಿಸು
**ಚಂಚುಪುಟ** – ಮುಚ್ಚಿದ ಕೊಕ್ಕು
**ಚಂಚುರ** – ಚತುರ; ಸುಂದರವಾದ
**ಚಂಚುರತೆ** – ಜಾಣತನ; ಸೌಂದರ್ಯ
**ಚಂಡ** – ಪ್ರಖರವಾದ; ಬಲಿಷ್ಠವಾದ
**ಚಂಡಕರ** – ಉರಿವ ಕಿರಣ; ಸೂರ್ಯ
**ಚಂಡಣೆಗುಡು** – ನಿರ್ದಿಷ್ಟ ಭಂಗಿಯಲ್ಲಿ ನಿಲ್ಲು
**ಚಂಡಭೈರವ** – ಭಯಂಕರನಾದ ಭೈರವ
**ಚಂಡಮರೀಚಿ** – ಸೂರ್ಯ
**ಚಂಡಮಾರಿ** – ಭಯಂಕರ ಮಾರಿ; ಒಬ್ಬಳು ಕ್ಷುದ್ರ ದೇವತೆ
**ಚಂಡರುಚಿ** – ಸೂರ್ಯ
**ಚಂಡವಿಕ್ರಮ** – ಭಯ ಹುಟ್ಟಿಸುವ ಪರಾಕ್ರಮವುಳ್ಳವನು
**ಚಂಡವೇಗ** – ಬಹಳ ವೇಗ
**ಚಂಡಾಂಶು** – ಚಂಡರುಚಿ
**ಚಂಡಾಮಯ** – ತೀವ್ರವಾದ ಕಾಯಿಲೆ
**ಚಂಡಾಲ** – ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನು
**ಚಂಡಾಳ** – ಹೊಲತಿ
**ಚಂಡಿ** – ದುರ್ಗೆ
**ಚಂಡಿಕೆವಿಡಿ** – ಜುಟ್ಟು ಹಿಡಿ
**ಚಂಡಿಕೆವೆರಸು** – ಜುಟ್ಟನ್ನು ಹೊಂದಿರು
**ಚಂಡಿಸು** – ಹಟಮಾಡು
**ಚಂದ** – ಲಾವಣ್ಯ
**ಚಂದಂಬೆಱು** – ಚೆಲುವಾಗಿರು
**ಚಂದನ** – ಶ್ರೀಗಂಧದ ಮರದ ಸುಗಂಧ
**ಚಂದನಕರ್ದಮ** – ಶ್ರೀಗಂಧದ ಲೇಪನದ್ರವ್ಯ
**ಚಂದನಕುಜ** – ಶ್ರೀಗಂಧದ ಮರ
**ಚಂದನಕ್ಷೋದ** – ಗಂಧದ ಪುಡಿ
**ಚಂದನಚರ್ಚೆ** – ಗಂಧಲೇಪನ
**ಚಂದನವಕ್ಕಿ** – ಒಂದು ಜಾತಿಯ ಹಕ್ಕಿ
**ಚಂದನಸಾರ** – ಚಂದನಕರ್ದಮ
**ಚಂದ(ದು)ವ** – ಚಂದ್ರ
**ಚಂದವಾವುಗೆ** – ಒಳ್ಳೆಯ ಪಾದುಕೆ
**ಚಂದಿರ** – ಚಂದ್ರ
**ಚಂದ್ರಕ** – ನವಿಲುಗರಿಯ ಕಣ್ಣು

**ಚಂದ್ರಕಬಲ(ಳ)** – ಕೆಂಪು ಬಣ್ಣದ ಒಂದು ಬಗೆಯ ಪರಿಮಳದ್ರವ್ಯ; ಸರ್ಪಗಂಧ ಎಂಬ ಹೂ
**ಚಂದ್ರಕಲಾಪ** – ಚಂದ್ರನನ್ನು ಆಭರಣವಾಗುಳ್ಳವನು, ಶಿವ
**ಚಂದ್ರಕಲೆ** – ಚಂದ್ರನ ಹದಿನಾರು ಕಲೆಗಳು
**ಚಂದ್ರಕಾಂತ** – ಬೆಳುದಿಂಗಳಿನಿಂದ ಆರ್ದ್ರಗೊಳ್ಳುವ ಬಿಳಿಯ ಕಲ್ಲು
**ಚಂದ್ರಕಾಂತಪುತ್ರಿಕೆ** – ಚಂದ್ರಕಾಂತಶಿಲೆಯ ಪ್ರತಿಮೆ
**ಚಂದ್ರಕಾಂತಶಿಲೆ** – ಚಂದ್ರಕಾಂತ
**ಚಂದ್ರಕಿ** – ನವಿಲು
**ಚಂದ್ರಕಿತ** – ಕೆಂಪುಬಣ್ಣದ; ಹೊಳೆಯುವ
**ಚಂದ್ರಕಿವಾಹ** – ನವಿಲನ್ನು ವಾಹನವಾಗುಳ್ಳವನು, ಷಣ್ಮುಖ
**ಚಂದ್ರಖಂಡ** – ಚಂದ್ರನ ತುಂಡು
**ಚಂದ್ರಗತಿ** – ಚಂದ್ರನ ಚಲನೆ; (ಜೈನ) ಬೆಳುದಿಂಗಳಿನಂತೆ ಬಡವಬಲ್ಲಿದರ ನಡುವೆ ವ್ಯತ್ಯಾಸವಿಲ್ಲದೆ ಮಾಡುವ ಚರಿಗೆ
**ಚಂದ್ರದ್ರವ** – ಕರ್ಪೂರದ ರಸ
**ಚಂದ್ರಪ್ರಭ** – ಚಂದ್ರನಂತೆ ಕಾಂತಿಯುಕ್ತ; (ಜೈನ) ಎಂಟನೆಯ ತೀರ್ಥಂಕರ
**ಚಂದ್ರಬಲ** – ಚಂದ್ರನು ಒಳ್ಳೆಯ ಸ್ಥಾನದಲ್ಲಿರುವ ಕಾರಣ ಉಂಟಾಗುವ ಶುಭಫಲ
**ಚಂದ್ರಭುವನ** – ಚಂದ್ರಲೋಕ
**ಚಂದ್ರಮ** – ಚಂದ್ರ
**ಚಂದ್ರಮಂಡಲ** – ಚಂದ್ರಬಿಂಬ
**ಚಂದ್ರಮಯೂಖ** – ಬೆಳುದಿಂಗಳು
**ಚಂದ್ರರೋಚಿ** – ಬೆಳುದಿಂಗಳು
**ಚಂದ್ರವಿಮಾನ** – (ಜೈನ) ಸ್ವರ್ಗಗಳಲ್ಲಿ ಒಂದು
**ಚಂದ್ರಶಾಲ** – ಮಹಡಿಯಲ್ಲಿನ ಅಂಗಳ
**ಚಂದ್ರಾತಪ** – ಬೆಳುದಿಂಗಳು
**ಚಂದ್ರಾಭರಣ** – ಶಿವ
**ಚಂದ್ರಾಲೋಕ** – ಬೆಳುದಿಂಗಳು
**ಚಂದ್ರಾಶ್ಮ** – ಚಂದ್ರಕಾಂತಶಿಲೆ
**ಚಂದ್ರಿಕಾವಿಹರಣ** – ಬೆಳುದಿಂಗಳಿನಲ್ಲಿನ ವಿಹಾರ
**ಚಂದ್ರಿಕೆ** – ಬೆಳೆದಿಂಗಳು
**ಚಂದ್ರೋದಯ** – ಚಂದ್ರ ಮೂಡುವುದು
**ಚಂದ್ರೋಪಲ** – ಚಂದ್ರಕಾಂತ
**ಚಂಪಕ** – ಸಂಪಿಗೆ; ಕೆಂಬಣ್ಣ
**ಚಂಪಕಸ್ರಜ** – ಸಂಪಿಗೆಯ ಮಾಲೆ
**ಚಂಪೆಯ** – ಡೇರೆ
**ಚಂಬಕ(ವಱಿ)** – ಒಂದು ಬಗೆಯ ಧರ್ಮವಾದ್ಯ
**ಚಕಚಕಿತ** – ಹೊಳೆಯುವ
**ಚಕಚಕಿಸು** – ಹೊಳಪಿನಿಂದ ಕೂಡಿರು
**ಚಕಿತ** – ಸ್ಥಿರವಲ್ಲದ; ಆಶ್ಚರ್ಯಗೊಂಡ
**ಚಕಿತಲೋಚನೆ** – ಚಂಚಲವಾದ ಕಣ್ಣುಳ್ಳವಳು
**ಚಕಿತಾಕ್ಷಿ** – ಚಕಿತಲೋಚನೆ
**ಚಕೋರ** – ಬೆಳುದಿಂಗಳನ್ನೇ ಕುಡಿಯುವುದೆಂದು ಹೇಳಲಾಗುವ ಒಂದು ಕಲ್ಪಿ ಪಕ್ಷಿ
**ಚಕೋರಾಕ್ಷಿ** – ಹೊಳಪುಗಣ್ಣುಳ್ಳವಳು
**ಚಕೋರಿ(ಕೆ)** – ಹೆಣ್ಣು ಚಕೋರ
**ಚಕೋರೇಕ್ಷಣ** – ಚಕೋರದ ಕಣ್ಣು; ಹೊಳಪುಗಣ್ಣು
**ಚಕ್ಕಣ** – ಚಾಕಣ, ಮದ್ಯಪಾನದಲ್ಲಿ ನಂಜಿಕೊಳ್ಳುವ (ಖಾರವಾದ) ತಿಂಡಿ
**ಚಕ್ಕವಕ್ಕಿ** – ಚಕ್ರವಾಕ
**ಚಕ್ಕಳ** – ಚಾಪೆ
**ಚಕ್ಕಟೆ** – ಚಪ್ಪಟೆಯಾದುದು
**ಚಕ್ಕುಮೊಕ್ಕು** – ಒಂದು ಅನುರಣ ಶಬ್ದ
**ಚಕ್ರ** – ಗಾಲಿ; ಸುದರ್ಶನಚಕ್ರ; ಭೂಮಿ; ಒಂದು ವ್ಯೂಹ; ಚಕ್ರವಾಕ
**ಚಕ್ರಂಗೊಳ್** – ಚಕ್ರಾಯುಧವನ್ನು ಕೈಗೆತ್ತಿಕೊ
**ಚಕ್ರಧರ** – ಚಕ್ರವನ್ನು ಧರಿಸಿದವನು; ಚಕ್ರವರ್ತಿ
**ಚಕ್ರಧರತ್ವ** – ಚಕ್ರವನ್ನು ಧರಿಸಿರುವುದು
**ಚಕ್ರನಾಥ** – ಚಕ್ರವರ್ತಿ
**ಚಕ್ರನೇಮಿ** – ಚಕ್ರದ ಅಂಚು
**ಚಕ್ರಪಕ್ಷಿ** – ಚಕ್ರವಾಕ
**ಚಕ್ರಪರಿವರ್ತನ** – (ಜೈನ) ಮತ್ತೆ ಮತ್ತೆ ಹುಟ್ಟುವಿಕೆ
**ಚಕ್ರಪೂಜೆ** – (ಜೈನ) ಚಕ್ರರತ್ನದ ಪೂಜೆ
**ಚಕ್ರಭೃತ್ಕುಲ** – ಚಕ್ರವರ್ತಿಕುಲ
**ಚಕ್ರಭೃತ್ತ್ವ** – ಚಕ್ರವನ್ನು ಧರಿಸಿರುವುದು
**ಚಕ್ರಮಿಥುನ** – ಚಕ್ರವಾಕಜೋಡಿ
**ಚಕ್ರರತ್ನ** – (ಜೈನ) ಚಕ್ರವರ್ತಿಯಾಗುವವನ ಆಯುಧಾಗಾರದಲ್ಲಿ ಹುಟ್ಟುವ ಚಕ್ರಾಯುಧ
**ಚಕ್ರವಾಳ** – ಮಂಡಲ, ಸುತ್ತುವಲಯ
**ಚಕ್ರಾರಾವ** – ಗಾಲಿಯ ಸದ್ದು
**ಚಕ್ರಲಾಭ** – (ಜೈನ) ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಚಕ್ರರತ್ನವು ದೊರೆಯುವುದು
**ಚಕ್ರವರ್ತಿ** – ಸಾರ್ವಭೌಮ; ವಿಷ್ಣು
**ಚಕ್ರವರ್ತಿತ್ವ** – ಚಕ್ರವರ್ತಿಯಾಗಿರುವಿಕೆ
**ಚಕ್ರವಲ್ಲಭ** – ಚಕ್ರವರ್ತಿ
**ಚಕ್ರವಾಕ** – ಸದಾ ಜೊತೆಯಾಗಿರುವ (ರಾತ್ರಿಯಲ್ಲಿ ಬೇರೆಯಾಗಿ ವಿರಹ ಅನುಭವಿಸುವ) ಕಲ್ಪನೆಯ ಜೋಡಿಹಕ್ಕಿ
**ಚಕ್ರವಾಲ(ಳ)** – ಮಂಡಲಾಕೃತಿ; ಪರ್ವತಪಂಕ್ತಿ
**ಚಕ್ರವಾಳಗದ್ಯ** – ಒಂದು ವಿಶಿಷ್ಟ ಬಗೆಯ ಗದ್ಯರಚನೆ
**ಚಕ್ರವೀಱ್** – ಹೊರಳು
**ಚಕ್ರವ್ಯೂಹ** – ಒಂದು ಬಗೆಯ ಸೇನಾವ್ಯೂಹ
**ಚಕ್ರಸಹಾಯ** – ಚಕ್ರದ ಸಹಾಯ ಪಡೆದಿರುವವನು, ವಿಷ್ಣು
**ಚಕ್ರಾಂಕ** – ಗಾಲಿಗಳ ಗುರುತು
**ಚಕ್ರಾಂಕವ್ಯಂಜಿತ** – ಗಾಲಿಗಳ ಗುರುತಿನಿಂದ (ಚಕ್ರವಾಕಗಳಿಂದ) ಶೋಭಿಸುವ

**ಚಕ್ರಾಂಗ** – ಹಂಸಪಕ್ಷಿ
**ಚಕ್ರಾಂಗಿ** – ಹೆಣ್ಣು ಹಂಸ
**ಚಕ್ರಾಂಶು** – ಸುದರ್ಶನಚಕ್ರದ ಕಾಂತಿ
**ಚಕ್ರಾಚಕ್ರಿ** – ಚಕ್ರಗಳನ್ನು ಹಿಡಿದು ಮಾಡುವ ಯುದ್ಧ
**ಚಕ್ರಾಧಿನಾಥ** – ಚಕ್ರನಾಥ
**ಚಕ್ರಾಧಿಪ** – ಚಕ್ರನಾಥ
**ಚಕ್ರಾಧೀಶ** – ಚಕ್ರನಾಥ
**ಚಕ್ರಾನಿಲ** – ಸುಂಟರಗಾಳಿ
**ಚಕ್ರಾಭಿಷೇಕ** – (ಜೈನ) ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು
**ಚಕ್ರಾಹ್ವ** – ಚಕ್ರವಾಕಗಳ ಜೋಡಿ
**ಚಕ್ರಿ** – ಗಾಲಿಯನ್ನುಳ್ಳದ್ದು, ರಥ; ಚಕ್ರಾಯುಧ; ಚಕ್ರವನ್ನು ಹೊಂದಿದವನು, ವಿಷ್ಣು; ಚಕ್ರವರ್ತಿ
**ಚಕ್ರಿಕಾವರ್ತಿ** – ಚಕ್ರದಂತೆ ಸುತ್ತುವ ಶೀಲವುಳ್ಳವನು, ಕೃತ್ರಿಮೋಪಾಯವುಳ್ಳವನು
**ಚಕ್ರಿಪದ** – ಚಕ್ರವರ್ತಿ ಪದವಿ
**ಚಕ್ರಿಯೋಧ** – ಚಕ್ರವರ್ತಿಯ ಸೈನಿಕ
**ಚಕ್ರಿಸೈನಿಕ** – ಚಕ್ರಿಯೋಧ
**ಚಕ್ರೀವ** – ಕತ್ತೆ
**ಚಕ್ರೇಶ** – ವಿಷ್ಣು; ಚಕ್ರವರ್ತಿ; ಜೈನ) ಚಕ್ರರತ್ನದ ಒಡೆಯ
**ಚಕ್ರೇಶ್ವರ** – ಚಕ್ರವರ್ತಿ
**ಚಕ್ಷಣ** – ಚಕ್ಕಣ
**ಚಕ್ಷುಶ್ಶ್ರುತಿ** – ಕಣ್ಣೆ ಕಿವಿಯಾಗಿರುವ ಪ್ರಾಣಿ, ಹಾವು
**ಚಕ್ಷುಷ್ಮಂತ** – ಮುಂದಾಲೋಚನೆಯವನು
**ಚಕ್ಷೂರಾಗ** – ನೋಟದಲ್ಲಿ ತೋರಿಸುವ ಪ್ರೀತಿ
**ಚಚ್ಚರಂ** – ಬೇಗ; ವಾಸ್ತವವಾಗಿ
**ಚಚ್ಚರಿಗ** – ಆತುರಗಾರ
**ಚಜ್ಝಾ** – ಪುಂಗಿ
**ಚಜ್ಝಾರವ** – ಪುಂಗಿಯ ನಾದ
**ಚಟುಲ** – ಚಂಚಲ; ಚುರುಕುತ
**ಚಟುಲತೆ** – ಚುರುಕುತನ
**ಚಟುಳಿತ** – ಚಲಿಸುವ
**ಚಟೂಕ್ತಿ** – ಪ್ರಿಯವಾದ ಮಾತು
**ಚಟೂರಿಸು** – ಎದುರಿಗೇ ಹೊಗಳು
**ಚಟ್ಟ** – (ಛಾತ್ರ) ಶಿಷ್ಯ
**ಚಟ್ಟು** – ಮಲ್ಲಯುದ್ಧದಲ್ಲಿ ಒಂದು ವರಸೆ
**ಚಡ** – ಶೀಘ್ರವಾಗಿ
**ಚಣಕ** – ತುಂಡು ಚಲ್ಲಣ; ಕಡಲೆ
**ಚತುರ** – ನಾಲ್ಕು
**ಚತುರಂಗ** – ನಾಲ್ಕು ಅಂಗಗಳನ್ನುಳ್ಳದ್ದು; ಆನೆ, ಕುದುರೆ, ರಥ, ಪದಾತಿಗಳಿಂದ ಕೂಡಿದ ಸೈನ್ಯ;; ಚದುರಂಗದ ಆಟ
**ಚತುರಂಗಬಲ** – ಆನೆ, ಕುದುರೆ, ರಥ, ಪದಾತಿಗಳಿಂದ ಕೂಡಿದ ಸೈನ್ಯ
**ಚತುರಂಗುಲ** – ನಾಲ್ಕು ಅಂಗುಲ
**ಚತುರಂತಕ್ಷಿತಿ** – ನಾಲ್ಕು ಸಮುದ್ರದವರೆಗಿನ ಭೂಮಿ
**ಚತುರಂತಯಾನ** – ಪಲ್ಲಕ್ಕಿ
**ಚತುರಚೂಡಾಮಣಿ** – ಚತುರರಲ್ಲಿ ಮಿಗಿಲಾದವನು
**ಚತುರತರ** – ಹೆಚ್ಚು ಚಾತುರ್ಯದ
**ಚತುರತೆ** – ಚಾತುರ್ಯ
**ಚತುರಭಾವ** – ಚತುರತೆ
**ಚತುರವೃತ್ತಿ** – ಚತುರತೆ
**ಚತುರಶೀತಿ** – ಎಂಬತ್ತನಾಲ್ಕು
**ಚತುರಶ್ರ(ಸ್ರ)** –ನಾಲ್ಕು ಮೂಲೆಗಳುಳ್ಳದ್ದು; ಚಚ್ಚೌಕ
**ಚತುರಾಂತರ** – ಚಚ್ಚೌಕದ ನಡುವೆ; ಹಸೆಯ ಜಗುಲಿ
**ಚತುರಾಸ್ಯ** – ಚತುರ ನುಡಿಗಳನ್ನಾಡುವವನು
**ಚತುರಾಸ್ಯತ್ವ** – (ಜೈನ) ಕೇವಲಜ್ಞಾನಿಗೆ ಉಂಟಾಗುವ ಹತ್ತು ವಿಶೇಷಗಳಲ್ಲಿ ಒಂದು: ನಾಲ್ಕು ಕಡೆಯೂ ಒಮ್ಮೆಗೇ ನೋಡಿವ ಶಕ್ತಿ
**ಚತುರಾಸ್ಯಪ್ರಿಯೆ** – ಸರಸ್ವತಿ
**ಚತುರಿಂದ್ರಿಯ** – ಪಂಚೇಂದ್ರಿಯಗಳಲ್ಲಿ ಕಿವಿಯ ಹೊರತು ಉಳಿದ ನಾಲ್ಕು ಇಂದ್ರಿಯಗಳಿರುವ ಜೀವಿ, ಕೀಟ
**ಚತುರಿಕೆ** – ಚತುರೆ
**ಚತುರುಪಧಾ** – ಧರ್ಮ ಅರ್ಥ ಕಾಮ ಭಯ; ದೇಶ ಜನ್ಮ ಆಚಾರ ಕುಲ
**ಚತುರುಪಧಾವಿಶುದ್ಧಿ** – ಧರ್ಮ ಅರ್ಥ ಕಾಮ ಮೋಕ್ಷಗಳ ದೃಷ್ಟಿಯಿಂದ ಶುದ್ಧನಾದವನು
**ಚತುರುಪಾಯ** – ಸಾಮ ದಾನ ಭೇದ ದಂಡಗಳು
**ಚತುರೋಕ್ತಿ** – ಚತುರ ನುಡಿ
**ಚತುರೋಪಾಯ** – ಚತುರುಪಾಯ
**ಚತುರ್ಗತಿ** – (ಜೈನ) ದೇವ, ಮಾನವ, ತಿರ್ಯಕ್, ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳು
**ಚತುರ್ಜ್ಞಾನ** – (ಜೈನ) ಮತಿ, ಶ್ರುತಿ, ಅವಧಿ, ಮನಃಪರ್ಯಯಗಳೆಂಬ ನಾಲ್ಕು ಬಗೆಯ ಜ್ಞಾನಗಳು
**ಚತುರ್ಣಿ(ರ್ನಿ)ಕಾಯ** – (ಜೈನ) ಭವನವಾಸಿ, ವ್ಯಂತರ, ಜ್ಯೋತಿಷ್ಯ, ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತಾಸಮೂಹ
**ಚತುರ್ಥಧ್ಯಾನ** – (ಜೈನ) ಆರ್ತ, ರೌದ್ರ, ಧರ್ಮ, ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು
**ಚತುರ್ಥಸ್ನಾನ** – ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ
**ಚತುರ್ಥಾಂಶ** – ನಾಲಕ್ನೆಯ ಒಂದು ಭಾಗ
**ಚತುರ್ದಂತ** – ನಾಲ್ಕು ಹಲ್ಲು(ಗಳುಳ್ಳದ್ದು), ಐರಾವತ
**ಚತುರ್ದಶ** – ಹದಿನಾಲ್ಕು

**ಚತುರ್ದಶಪೂರ್ವ** – (ಜೈನ) ಶ್ರುತಾಂಗಗಳ ವಿವರಣೆ ನೀಡುವ ಹದಿನಾಲ್ಕು ಪೂರ್ವಗ್ರಂಥಗಳು: ಉತ್ಪಾದ, ಅಗ್ರಾಯಣೀ, ವೀರ್ಯಾನುವಾದ, ಅಸ್ತನಾಸ್ತಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಖ್ಯಾನ, ವಿದ್ಯಾನುವಾದ, ಕಲ್ಯಾಣವಾದ, ಪ್ರಾಣವಾಯು, ಕ್ರಿಯಾವಿಶಾಲ, ಲೋಕಬಿಂದುಸಾರ

**ಚತುರ್ದಶಭುವನ** – ಹದಿನಾಲ್ಕು ಲೋಕಗಳು

**ಚತುರ್ದಶಮನು** – ಹದಿನಾಲ್ಕು ಮಂದಿ ಮನುಗಳು; (ವೈದಿಕ) ಸ್ವಾಯಂಭುವ, ಸ್ವಾರೋಚಿತ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ; (ಜೈನ) ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತು, ನಾಭಿರಾಜ

**ಚತುರ್ದಶಲೋಕ** – ಹದಿನಾಲ್ಕು ಲೋಕಗಳು: ಭೂ, ಭುವ, ಸುವ, ಮಹ, ಜನ, ತಪ, ಸತ್ಯ, ಎಂಬ ಊರ್ಧ್ವಲೋಕಗಳು ಮತ್ತು ಅತಳ, ವಿತಳ, ಸುತಳ, ತಲಾತಳ, ಮಹಾತಳ, ರಸಾತಳ, ಪಾತಾಳ ಎಂಬ ಏಳು ಅಧೋಲೋಕಗಳು

**ಚತುರ್ನಿ(ರ್ಣಿ)ಕಾಯಾಮರ** – ಭುವನ, ವನ, ಜ್ಯೋತಿ, ಕಲ್ಪ – ಇವುಗಳ ದೇವತೆಗಳು–

**ಚತುರ್ನೃಪವಿದ್ಯೆ** – ರಾಜನು ಕಲಿಯಬೇಕಾದ ವಿದ್ಯೆಗಳು; ಸಾಮ, ದಾನ, ಭೇದ, ದಂಡ

**ಚತುರ್ಬಲ** – ಚತುರಂಗಬಲ

**ಚತುರ್ಭಕ್ತಿ** – (ಜೈನ) ಅರ್ಹತ್, ಆಚಾರ್ಯ, ಬಹುಶ್ರುತ, ಶ್ರುತ ಎಂಬ ನಾಲ್ಕು ಭಕ್ತಿಗಳು

**ಚತುರ್ಭುಜ** – ನಾಲ್ಕು ತೋಳು(ಗಳುಳ್ಳವನು), ಕೃಷ್ಣ, ವಾಸುದೇವ

**ಚತುರ್ಮುಖ** – ನಾಲ್ಕುಮುಖಗಳವನು, ಬ್ರಹ್ಮ; (ಜೈನ) ಮಹಾಸಾಮಂತರು ಮಾಡುವ ಜಿನಪೂಜೆ

**ಚತುರ್ವರ್ಗ** – ನಾಲ್ಕು ಪುರುಷಾರ್ಥಗಳು

**ಚತುರ್ವಲ** – ಚತುರಂಗಬಲ

**ಚತುರ್ವಿಂಶತಿ** – ಇಪ್ಪತ್ತನಾಲ್ಕು

**ಚತುರ್ವಿಧದತ್ತಿ** –(ಜೈನ) ದಯಾ, ಪಾತ್ರ, ಸಮ, ಅನ್ವಯ ಎಂಬ ನಾಲ್ಕು ಬಗೆಯ ದತ್ತಿಗಳು

**ಚತುರ್ವಿಧಾಮರ** – ಚತುಣಿ(ನಿ)ಕಾಯ

**ಚತುರ್ವಿಧಾರಾಧನೆ** – (ಜೈನ) ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ, ಸಮ್ಯಕ್‌ತಪಸ್ಸು ಎಂಬ ನಾಲ್ಕು ಆರಾಧನಾ ಬಗೆಗಳು

**ಚತುರ್ವಿಧಾಹಾರ** – ಅನ್ನ, ಪಾನ, ಖಾದ್ಯ, ಲೇಹ್ಯ ಎಂಬ ನಾಲ್ಕು ಬಗೆಯ ಆಹಾರಗಳು: (ಜೈನ) ಲೇಪ್ಯ, ಓಜ, ಕಬಳ, ಮಾನಸ ಎಂಬ ಆಹಾರಗಳು

**ಚತುರ್ವೇದ** – ಋಕ್, ಯಜುರ್, ಸಾಮ, ಅಥರ್ವಣ ಎಂಬ ನಾಲ್ಕು ವೇದಗಳು

**ಚತುರ್ವೇದಪಾರಗ** – ಚತುರ್ವೇದಗಳಲ್ಲಿ ಪರಿಣತ

**ಚತುಶ್ಶಾಲೆ** – ನಾಲ್ಕು ಕಡೆ ಕೈಸಾಲೆಯಿರುವ ಅಂಗಳ

**ಚತುಷ್ಕ** – ನಾಲ್ಕರ ಗುಂಪು

**ಚತುಷ್ಕಗೋಪುರ** – ನಾಲ್ಕು ಗೋಪುರಗಳಿರುವ

**ಚತುಷ್ಕಷಾಯ** – (ಜೈನ) ಕ್ರೋಧ, ಮಾನ, ಮಾಯಾ, ಲೋಭಗಳೆಂಬ ನಾಲ್ಕು ಕಷಾಯಗಳು

**ಚತುಷ್ಕೋಣ** – ನಾಲ್ಕು ಮೂಲೆ; ಚೌಕಾಕೃತಿ

**ಚತುಷ್ಟಯ** – ನಾಲ್ಕರ ಗುಂಪು

**ಚತುಷ್ಪ(ಷ್ಪಾ)ದ(ದಿ)**– ನಾಲ್ಕು ಕಾಲುಗಳು (ಇರುವಂಥದು)

**ಚತುಷ್ಷಷ್ಟಿ** – ಅರವತ್ತನಾಲ್ಕು

**ಚತುಸ್ಸಂಜ್ವಲನ** – (ಜೈನ) ಚತುಷ್ಕಷಾಯ

**ಚತ್ತಾಣ** – ಒಂದು ಬಗೆಯ ಕಾವ್ಯ

**ಚತ್ರ** – ಧರ್ಮಸತ್ರ

**ಚದುಕ** – ನಾಲ್ಕು ಕಂಬಗಳ ಆಧರವುಳ್ಳ ಮಂಟಪ

**ಚದುರ್** – ಚಾತುರ್ಯ

**ಚದುರ** – ಬುದ್ಧಿವಂತ

**ಚದುರಂಗ** – ಚತುರಂಗ

**ಚದುರಂಗಕಾಱ** – ಚದುರಂಗ ಆಡುವವನು

**ಚದುರಗೊಟ್ಟಿಗ** – ಗೋಷ್ಠಿಯಲ್ಲಿ ಚೆನ್ನಗಿ ಮಾತಾಡುವವನು

**ಚದುರತನ** – ಚಾತುರ್ಯ

**ಚದುರಸಿಗೆ** – (ಚತುರಶ್ರಕ) ಚೌಕಾಕಾರದ ವಸ್ತ್ರ

**ಚದುರಿಕೆ** – ಚದುರತನ

**ಚದುರಿಗ** – ಚದುರ

**ಚದುರೆ** – ಜಾಣೆ

**ಚದುರೆವೆಣ್** – ಚದುರೆಯಾದ ಹೆಣ್ಣು

**ಚದುರ್ಗಿಡು** – ಚದುರು ಮಂಕುಗೊಳ್ಳು

**ಚಪಲ(ಳ)** – ಚಂಚಲ; ಚಟುಲ

**ಚಪಲತನ** – ಚಾಂಚಲ್ಯ

**ಚಪಲತಾಸಂಗ** – ಎಳೆಯ ಬಿದಿರಿನ ಸಂಬಂಧ

**ಚಪಲತೆ** – ಚಪಲತನ

**ಚಪಲಾ** – ಮಿಂಚು

**ಚಪಲಾಕ್ಷಿ** – ಚಂಚಲವಾದ ಅಥವಾ ಮಿಂಚಿನ ಕಣ್ಣುಗಳುಳ್ಳವಳು

**ಚಪಲಾವೇಗ** – ಮಿಂಚಿನ ವೇಗ

**ಚಪಲೆ** – ಚಂಚಲೆ; ಮಿಂಚು

**ಚಪೇಟ** – ಅಂಗೈ

**ಚಪೇಟಚರಣಾಘಾತ** – ಕೈಯ ಹೊಡೆತ ಮತ್ತು ಕಾಲ ಒದೆತ
**ಚಪ್ಪಟೆ** – ಸಮತಲವಾಗಿರುವುದು
**ಚಪ್ಪರಣೆ** – ತಿನ್ನುವಾಗ ಲೊಟ್ಟೆ ಹೊಡೆಯುವುದು
**ಚಪ್ಪರಿಕೆ** – ಹೊಗಳಿಕೆ
**ಚಪ್ಪರಿಸು** – ಸವಿ; ಧ್ವನಿಮಾಡು; ಗದ್ದರಿಸು
**ಚಪ್ಪಲರ್** – ಚಪ್ಪಟೆಗೊಳ್ಳು
**ಚಪ್ಪಟೆ** – ಚಪ್ಪಟೆಯಾದುದು
**ಚಮತ್ಕರಿಸು** – ಅಚ್ಚರಿಗೊಳಿಸು
**ಚಮತ್ಕಾರಿತ** – ಅಚ್ಚರಿಗೊಳಿಸಿದ
**ಚಮತ್ಕೃತಿ** – ಅಚ್ಚರಿ
**ಚಮರಜ** – ಚಾಮರ
**ಚಮರರುಹ** – ಚಮರಜ
**ಚಮರಿ** – ಚಮರೀ ಮೃಗ; ಚಾಮರಗಿತ್ತಿ
**ಚಮರೀಜ** – ಚಮರಜ
**ಚಮರೀಮೃಗ** – ಚಮರಿ
**ಚಮರಿರುಹ** –ಚಮರಜ
**ಚಮೂ** – ಸೇನೆ
**ಚಮೂಪತಿ** – ದಂಡಾಧಿಪತಿ
**ಚಮೂರ** – ಹುಲಿ
**ಚಮೂರು** – ಜಿಂಕೆ
**ಚಮ್ಮಟಿಕೆ** – ಚಾವಟಿ
**ಚಮ್ಮಟಿಗೆ** – (ಚರ್ಮಷಟ್ಟಿಕಾ) ಬಾರುಗೋಲು
**ಚಮ್ಮವಾವುಗೆ** – ಚರ್ಮದ ಪಾದುಕೆ
**ಚಯ** – ಸಮೂಹ
**ಚರ** – ಚಲಿಸುವ; ನಡೆಯುವವನು; ಸೇವಕ
**ಚರಣ** –ಮಾಡುವಿಕೆ; ನಡವಳಿಕೆ
**ಚರಣಗ್ರಂಥ** – (ಜೈನ) ಚರಣಾನುಯೋಗವನ್ನು ವಿವರಿಸುವ ಗ್ರಂಥ
**ಚರಣತಲ(ಳ)** – ಅಂಗಾಲು
**ಚರಣನ್ಯಾಸ** – ಹೆಜ್ಜೆಯಿಡುವಿಕೆ
**ಚರಣಮುದ್ರಿಕೆ** – ಕಾಲುಂಗುರ
**ಚರಣಸಂಘಟ್ಟ** – ಪಾದಗಳ ತುಳಿತ
**ಚರಣಾನುಯೋಗ** – (ಜೈನ) ಸದಾಚಾರವನ್ನು ನಿರೂಪಿಸುವ ಶಾಸ್ತ್ರಭಾಗ
**ಚರಣಾಯುಧ** – ಚರಣವನ್ನೇ ಆಯುಧವಾಗುಳ್ಳುದು, ಹುಂಜ
**ಚರಣೆ** – ಮೇವು ಹಾಕುವ ಗೋದಲೆ
**ಚರಣೋಪಾಂತ** – ಚರಣದ ಹತ್ತಿರ
**ಚರಪುರುಷ** – ದೂತ
**ಚರಮ** – ಕೊನೆಯ
**ಚರಮಕಲ್ಯಾಣ** – (ಜೈನ) ಪಂಚಕಲ್ಯಾಣಗಳಲ್ಲಿ ಕೊನೆಯದು, ಪರಿನಿರ್ವಾಣ
**ಚರಮತನು** – ಕೊನೆಯ ಜನ್ಮ; (ಜೈನ) ಮೋಕ್ಷಕ್ಕೆ ಹೋಗುವವನು
**ಚರಮದೇಹ** – ಚರಮತನು
**ಚರಮದೇಹಧರ** – ಕೊನೆಯ ಸಲ ದೇಹಧರಿಸಿದವನು, ಮೋಕ್ಷಗಾಮಿ
**ಚರಮದೇಹಧಾರಿ** – ಚರಮದೇಹಧರ
**ಚರಮಧ್ಯಾನ** – (ಜೈನ) ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು; ಮೊದಲ ಮೂರು: ಆರ್ತ, ರೌದ್ರ, ಧರ್ಮ
**ಚರಮಪಾಳ** – ಕೊನೆಯ ಕರ್ಮಬಂಧ
**ಚರಮಶರೀರ** – ಚರಮತನು
**ಚರಮಸಮಯ** – ಕಡೆಗಾಲ
**ಚರಮಾಂಗ** – ಚರಮತನು
**ಚರಿಗೆ** – (ಜೈನ) ಮುನಿಗಳ ಭಿಕ್ಷೆ
**ಚರಿಗೆಗೊಡು** – (ಜೈನ) ಮುನಿಗಳು ಭಿಕ್ಷೆಗೆ ಹೊರಡು
**ಚರಿಗೆದೋಱು** – (ಜೈನ) ಮುನಿಗಳು ಭಿಕ್ಷೆ ಸ್ವೀಕರಿಸು
**ಚರಿಗೆಚರ್** – (ಜೈನ) ಮುನಿಗಳು ಭಿಕ್ಷೆಗೆ ಬರುವುದು
**ಚರಿಗೆವೊಗಿಸು** – (ಜೈನ) ಮುನಿಗಳು ಭಿಕ್ಷೆಗೆಂದು ಮನೆಮನೆಗೆ ಕಳುಹಿಸು
**ಚರಿಗೆವೊಗು** – (ಜೈನ) ಮುನಿಗಳು ಭಿಕ್ಷೆಗಾಗಿ ಮನೆಯನ್ನು ಹೊಗು
**ಚರಿಗೆವೋಗು** – (ಜೈನ) ಮುನಿಗಳು ಭಿಕ್ಷೆಗಾಗಿ ಹೋಗು
**ಚರಿತ** – ನಡದುಹೋದ; ನಡಿಗೆ
**ಚರಿತಂ** – ತ್ವರಿತವಾಗಿ
**ಚರಿತಪುರಾಣ** – ಮಹಾಪುರುಷರ ಕತೆ
**ಚರಿತಾರ್ಥ** – ಕೃತಾರ್ಥ
**ಚರಿಯಿಸು** – ಸುತ್ತಾಡು, ಓಡಾಡು
**ಚರಿಯೆ** – (ಜೈನ) ಚರಿಗೆ, ಮುನಿಗಳು ಆಹಾರಕ್ಕೆ ಮಾಡುವ ಸಂಚಾರ
**ಚರಿಸು** – ಚಲಿಸು
**ಚರು** – ಹವಿಸ್ಸು; ಹೋಮಕ್ಕಾಗಿ ಸಿದ್ಧಪಡಿಸಿದ ಅನ್ನ
**ಚರ್ಚಿಕೆ** – ಗಂಧ ಬಳಿಯುವುದು
**ಚರ್ಚಿತ** – ಲೇಪಿಸಿದ
**ಚರ್ಚಿಸು** – ವಾದಿಸು; ಆಲೋಚನೆಮಾಡು
**ಚರ್ಚು** – ಮಗುವನ್ನು ಸಲಹು; ಉರಿ
**ಚರ್ಚೆ** – ಅನುಲೇಪನ
**ಚರ್ದಿಸು** – ವಾಂತಿಮಾಡಿಕೊ
**ಚರ್ಮರತ್ನ** – (ಜೈನ) ಚಕ್ರವರ್ತಿಗೆ ತಾನಾಗಿ ದೊರೆಯುವ ಜೀವರತ್ನಗಳಲ್ಲಿ ಒಂದು: ನೀರಿನ ಮೇಲೆ ತೇಲಲು ಬಳಸುವ ಚರ್ಮದ ಸಾಧನ
**ಚರ್ಮದಾವುಗೆ** – ಚರ್ಮದ ಹಾವುಗೆ
**ಚರ್ಯಾಮಾರ್ಗ** – (ಜೈನ) ಚರಿಗೆಗಾಗಿ ಹೋಗುವ ಉದ್ದೇಶ
**ಚರ್ಯೆ** – ನಡತೆ; (ಜೈನ) ಅಹಿಂಸೆಯ ಪ್ರತಿಜ್ಞೆ ಮತ್ತು ಆವರಣೆ

**ಚರ್ವಣ** – ಅಗಿದು ತಿನ್ನುವುದು
**ಚರ್ವಿತಚರ್ವಣ** – ಅಗಿದದ್ದನ್ನೇ ಅಗಿಯುವುದು; ಪುನರುಕ್ತಿ
**ಚಲ(ಳ)** – ಹಟ, ಛಲ; ಅಲುಗುವ
**ಚಲಂ(ಲುಂ)ಕು** – ಚಿಮುಕಿಸು
**ಚಲಂಬಿಡಿ** – ಹಟದಿಂದಿರು
**ಚಲ(ಳ)ನ** – ಅಲುಗುವಿಕೆ; ನಡೆಯುವಿಕೆ
**ಚಲಿತ** – ನಡೆದುಹೋದ; ಅಲುಗಾಡಿದ; ಚಂಚಲಗೊಂಡ
**ಚಲಿಸು** – ಅಲುಗಾಡು; ಕದಡು
**ಚಲು(ಂ)ಕು** – ನೀರನ್ನು ಸುರಿ
**ಚಲ್ಲ** – ಸರಸ; ಸೊಗಸು
**ಚಲ್ಲಂಬೆರಸು** – ಚೆಲ್ಲಾಟದೊಡಗೂಡಿ; ಸರಸವಾದ
**ಚಲ್ಲಕಾರ್ತಿ** – ಸೊಗಸುಗಾತಿ
**ಚಲ್ಲವತಿ** – ಸರಸಗಾತಿ
**ಚಲ್ಲಣ** – ಚೆಡ್ಡಿ, ಅರ್ಧೋರುಕ
**ಚಲ್ಲವ(ವೊತ್ತ)** – ನಂಬಿಸಿ ಹೊಟ್ಟೆ ಹೊರೆಯುವವನು
**ಚಲ್ಲವಾಡು** –ಸರಸವಾಡು
**ಚಲ್ಲಿ** – ಚಲನೆ; ನೃತ್ಯದ ಒಂದು ಗತಿ; ಕನ್ನಡಿ
**ಚಲ್ಲಿಸು** – ಎರಚಿಸು
**ಚವರಿ** – ಚಮರೀಮೃಗದ ಕೂದಲು
**ಚವಿ** – (ಛವಿ) ಕಾಂತಿ
**ಚಷಕ** – ಬಟ್ಟಲು, ತಟ್ಟೆ
**ಚಳಕಿಗೆ** – ತೋಳಬಂದಿ
**ಚಳಣ** – ಕಾಲು, ಪಾದ
**ಚಳಮತಿ** – ಚಂಚಲಬುದ್ಧಿಯವನು(ಳು)
**ಚಳತ್** – ಚಲಿಸುತ್ತಿರುವ
**ಚಳಿ** – ಶೀತದಿಂದ ಬಳಲು; ಶೈತ್ಯ; (ಬಣ್ಣ) ಮಸುಕಾಗು
**ಚಳಿತು** – ದಣಿದು, ವಿಗತ ಪ್ರಭಾವನಾಗಿ
**ಚಳಿಲ್** – ಒಂದು ಅನುಕರಣ ಶಬ್ದ
**ಚಳಿವಿನಂ** – ದಣಿಯುವವರೆಗೂ
**ಚಳಿವೆಟ್ಟಾಣ್ಮ** – ಚಳಿವೆಟ್ಟು+ಆಣ್ಮ, ಹಿಮಗಿರಿಯ ಒಡೆಯ, ಹಿಮವಂತ
**ಚಾಂದಸ** – ಸಂಪ್ರದಾಯನಿಷ್ಠ; ಮಂದಮತಿ
**ಚಾಂದ್ರಪ್ರಭ** – (ಜೈನ) ಚಂದ್ರಪ್ರಭನೆಂಬ ತೀರ್ಥಂಕರನಿಗೆ ಸಂಬಂಧಪಟ್ಟ
**ಚಾಂದ್ರಾಯಣ** – ಚಂದ್ರನ ಚಲನೆ, ವೃದ್ಧಿ–
ಕ್ಷಯಗಳು–
**ಚಾಂಪೇಯ** – ಸಂಪಿಗೆ ಜಾತಿಯ ಮರ
**ಚಾಗ** – (ತ್ಯಾಗ) ದಾನ; ಹಸಿರುಬಣ್ಣ
**ಚಾಗಂಗೆಯ್** – ದಾನಗೈ
**ಚಾಗಗುಣ** – ದಾನಮಾಡುವ ಗುಣ
**ಚಾಗವಿಕ್ಕು** – ದಾನಕೊಡು
**ಚಾಗಿ** – ತ್ಯಾಗಿ
**ಚಾಗಿಗುಣ** – ತ್ಯಾಗಶೀಲ ಗುಣ

**ಚಾಟು** – ಸಂತಸಕರವಾದ ನುಡಿ
**ಚಾಟುಕಾರಂಗೆಯ್** – ಸಂತಸಗೊಳಿಸು
**ಚಾಟುಕಾರಿಸು** – ಹೊಗಳು
**ಚಾಟುಕಾಱ** – ಪ್ರಿಯನುಡಿಗಳನ್ನಾಡುವವನು
**ಚಾಟುತನ** – ಮಾತಿನ ಚಾತುರ್ಯ
**ಚಾಟುಭಣಿತಿ** – ಚತುರತೆಯಿಂದ ಕೂಡಿದ ಮಾತು
**ಚಾತುರಂಗ** – ಚತುರಂಗ ಸೈನ್ಯ
**ಚಾತುರಿಯ** – ಚಾತುರ್ಯ
**ಚಾತುರ್ದಂತ** – ನಾಲ್ಕು ದಂತಗಳುಳ್ಳದ್ದು, ಐರಾವತ
**ಚಾತುರ್ದಂತಬಲ** – ಗಜಸೈನ್ಯ
**ಚಾತುರ್ಬಲ** – ಚಾತುರಂಗ
**ಚಾತುರ್ಮಾಸ(ಸ್ಯ)** – ಮಳೆಗಾಲದ ನಾಲ್ಕು ತಿಂಗಳು (ಆಷಾಢ ಶುಕ್ಲ ಪೌರ್ಣಮಿಯಿಂದ ಕಾರ್ತಿಕ ಶುಕ್ಲ ಪೌರ್ಣಮಿಯವರೆಗೆ) ಮುನಿಗಳು ಒಂದೆಡೆ ನೆಲಸಿ ನಡೆಸುವ ವ್ರತ
**ಚಾತುರ್ಯ** – ಜಾಣ್ಮೆ
**ಚಾತುರ್ಯವಚನ** – ಜಾಣ್ಮೆಯ ಮಾತು
**ಚಾತುರ್ಯಾಮ** – ನಾಲ್ಕು ಜಾವಗಳು
**ಚಾತುರ್ವರ್ಣ** – ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು
**ಚಾತುರ್ವರ್ಣ್ಯ** – ಚಾತುರ್ವರ್ಣ
**ಚಾದಗೆ** – ಚಾತಕ ಪಕ್ಷಿ
**ಚಾದಗೆವಕ್ಕಿ** – ಚಾದಗೆ
**ಚಾಪಚಾಪಳ** – ಬಿಲ್ವಿದ್ಯೆಯಲ್ಲಿ ನಿಪುಣ
**ಚಾಪಟಂಕೃತಿ** – ಬಿಲ್ಲಿನ ಠೇಂಕಾರ
**ಚಾಪಧರ** – ಧನುರ್ಧಾರಿ
**ಚಾಪಪ್ರಮುಕ್ತ** – ಬಿಲ್ಲಿನಿಂದ ಬಿಡಲಾದ
**ಚಾಪಲತಾಯೋಗ** – ಚಂಚಲತೆ; ಬಿಲ್ಲಿನ ಸಂಬಂಧ
**ಚಾಪಲತಾರೋಹಣ** – ಚಾಂಚಲ್ಯವುಂಟಾಗುವುದು; ಬಿಲ್ಲಿನ ಹೆದೆಯೇರಿಸುವುದು
**ಚಾಪಲತೆ** – ಬಳ್ಳಿಯಂತಿತುವ ಬಿಲ್ಲು
**ಚಾಪವಲ್ಲರಿ** – ಚಾಪಲತೆ
**ಚಾಪಳಮತಿ** – ಚಂಚಲಮತಿ
**ಚಾಪಾಗಮ** – ಬಿಲ್ವಿದ್ಯೆ
**ಚಾಪಾಚಾರ್ಯ ಬಿಲ್ವಿದ್ಯೆಯನ್ನು ಹೇಳಕೊಡುವ ಗುರು–**
**ಚಾಮರ** – ಚಮರ
**ಚಾಮರಗ್ರಾಹಿಣಿ** – ಚಾಮರ ಹಿಡಿದು ಬೀಸುವವಳು
**ಚಾಮರಿ** – ಚಾಮರ ಹಿಡಿದು ಬೀಸುವವನು
**ಚಾಮರಗಿತಿ** – ಚಾಮರಗ್ರಾಹಿಣಿ
**ಚಾಮೀಕರ** – ಚಿನ್ನ
**ಚಾಮೀಕರಪೀಠ** – ಚಿನ್ನದ ಪೀಠ
**ಚಾರಚಕ್ಷು** – ಚಾರರೆಂಬ ಕಣ್ಣುಗಳುಳ್ಳವನು
**ಚಾರಣ** – ತಿರುಗಾಟ; ದ್ವಂದ್ವಯುದ್ಧದ ಒಂದು ವರಸೆ; ಹೊಗಳುಭಟ; (ಜೈನ) ಸಂಚಾರ ಮಾಡುವ, ಅವಧಿಜ್ಞಾನವಿರುವ ಗಗನಗಾಮಿ ಋಷಿಗಳು

**ಚಾರಣಋದ್ಧಿ** – (ಜೈನ) ಚಾರಣಋಷಿಗಳ ಗಗನಸಂಚಾರಶಕ್ತಿ
**ಚಾರಣಋದ್ಧಿವಡೆ** – ಚಾರಣಋದ್ಧಿಯನ್ನು ಸಿದ್ಧಿಸಿಕೊಳ್ಳುವುದು
**ಚಾರಣಋಷಿ** – ಚಾರಣಋದ್ಧಿಯನ್ನು ಪಡೆದ ಋಷಿ
**ಚಾರಣಕ್ರಮ** – ಅಂಕುಶದಿಂದ ಆನೆಯನ್ನು ಮುನ್ನಡೆಸುವ ಕ್ರಮ
**ಚಾರಣಗುಣ** – ಚಾರಣಋದ್ಧಿ
**ಚಾರಣಯೋಗಿ** – ಚಾರಣಋಷಿ
**ಚಾರಿ** – ಪಗಡೆಕಾಯಿ; ನಾಟ್ಯದಲ್ಲಿನ ಹೆಜ್ಜೆಯ ಒಂದು ಗತಿ; ತಂತ್ರ, ಕೃತ್ರಿಮ ಸಾಧನ
**ಚಾರಿತ್ರಂಗೆಡು** – ನಡತೆಗೆಡು
**ಚಾರಿತ್ರಮೋಹ(ನೀಯ)** – (ಜೈನ) ಮೋಹನೀಯ ಕರ್ಮಗಳಲ್ಲಿ ಒಂದು; ಆಚಾರವನ್ನು ದೂಷಿಸುವ ಕರ್ಮದ ಒಂದು ವಿಧ
**ಚಾರಿಸು** – ಕತ್ತಿ ಝಳಪಿಸು; ಚತುರತೆಯಿಂದ ನಡೆಸು
**ಚಾರು** – ಸುಂದರವಾದ
**ಚಾರುಚರಿತ್ರ** – ಒಳ್ಳೆಯ ನಡತೆ(ಯುಳ್ಳವನು)
**ಚಾರುತರ** – ಹೆಚ್ಚು ಸುಂದರವಾದ
**ಚಾರುತ್ವ** – ಚೆಲುವು
**ಚಾರುರೂಪ** – ಸುಂದರ ರೂಪ
**ಚಾರುಹಾಸ** – ಮೋಹಕವಾದ ನಗೆಯುಳ್ಳವನು
**ಚಾರುಹಾಸಿನಿ** – ಮೋಹಕವಾದ ನಗೆಯುಳ್ಳವಳು
**ಚಾರ್ವಾಕಮತ** – ನಿರೀಶ್ವರತೆಯನ್ನು ಪ್ರತಿಪಾದಿಸುವ ಮತ
**ಚಾವಲಿ(ಳ)ಸು** – ಚಾಪಲ್ಯವುಂಟುಮಾಡು; ಆಕ್ಷೇಪಿಸು
**ಚಾಳಯ** – ಗತಿಲಂಘನ
**ಚಾಳಸು** – ಚಪಲಗೊಳಿಸು; ಸೋಲಿಸು
**ಚಾಟಿಲ್** – ರಾಹು
**ಚಿಂತನ** – ಧ್ಯಾನ
**ಚಿಂತಾಕುಲತೆ** – ಚಿಂತೆಯಿಂದ ಪೀಡಿತವಾದ
**ಚಿಂತಾಕುಲಿತ** – ಚಿಂತೆಯಿಂದ ಪೀಡಿತನಾದವನು
**ಚಿಂತಾಕ್ರಾಂತೆ** – ಚಿಂತೆಯಿಂದ ಕೂಡಿದವಳು
**ಚಿಂತಾಪರವಶತೆ** – ಚಿಂತೆಯಲ್ಲಿ ಮೈಮರೆಯುವುದು
**ಚಿಂತಾಭರ** – ಚಿಂತೆಯ ಹೊರೆ
**ಚಿಂತಾಮಣಿ** – ಕೇಳಿದ್ದನ್ನು ಕೊಡುವ ದೇವಲೋಕದ ಒಂದು ಮಣಿ
**ಚಿಂತಾರತ** – ಮನಸ್ಸಿನಲ್ಲಿಯೇ ಒಂದುಗೂಡುವುದು
**ಚಿಂತಾರತಿ** – ಚಿಂತೆಯಲ್ಲಿನ ಆಸಕ್ತಿ
**ಚಿಂತಿಸು** – ಆಲೋಚಿಸು
**ಚಿಂತೆ** – ಉಬ್ಬೆಗ; ಯೋಚನೆ
**ಚಿಂತೆಗೆಯ್** – ಉಮ್ಮಳಪಡು
**ಚಂದ** – ನಪುಂಸಕ
**ಚಿಕಿಚ್ಚೆ** – ಚಿಕಿತ್ಸೆ
**ಚಿಕಿತ್ಸಿತ** – ಚಿಕಿತ್ಸೆಗೊಳಗಾದ
**ಚಿಕುರ** – ಮುಂಗುರುಳು
**ಚಿಕ್ಕಣ** – ಮೆತ್ತಗಿರುವುದು
**ಚಿಕ್ಕುಟ** – ಚಿಕ್ಕಾಡು, ಸಣ್ಣ ಸೊಳ್ಳೆಯಂಥ ಕೀಟ
**ಚಿಕ್ಕೊತ್ತೆ** – ಸೂಳೆಯರಿಗೆ ಕೊಡುವ ಹಗಲೊತ್ತೆ
**ಚಿಗಿ** – ಬೆರಳಿಂದ ಚಿಮ್ಮು
**ಚಿಗುರ್** – ತಳಿರು; ಪಲ್ಲವಿಸು
**ಚಿಗುಳಿ** – ಎಳ್ಳುಬೆಲ್ಲಗಳ ಉಂಡೆ
**ಚಿಗುಳಿದುಳಿ** – ತುಳಿದು ಜಜ್ಜಿಹಾಕು
**ಚಿಟುಕಂಕಳೆ** – ನೆಟಿಕೆ ಮುರಿ
**ಚಿಟುಂಕಿಸು** – ಚಿಟಿಕೆ ಹೊಡೆ; ನೆಟಿಕೆ ಮುರಿ
**ಚಿಟ್ಟೆ** – ಮಿಡಿತೆ
**ಚಿತಾನಳ** – ಚಿತೆಯ ಬೆಂಕಿ
**ಚಿತ್ತಂಗೊಳ್** – ಮನಸ್ಸಿಡು
**ಚಿತ್ತಂಗೊಳಿಸು** – ಒಲಿಸಿಕೊ
**ಚಿತ್ತಂಬಡೆ** – ಮನಸ್ಸಿಗೆ ತಂದುಕೊ
**ಚಿತ್ತಂಬುಗು** – ಮನಸ್ಸನ್ನು ಹೊಗು
**ಚಿತ್ತಂಬೆಱು**– ಮನಸ್ಸನ್ನು ಸೆರೆಹಿಡಿ
**ಚಿತ್ತಕ್ಷೋಭ** – ಮನಸ್ಸಿನ ಅಶಾಂತಿ
**ಚಿತ್ತಜ** – ಮನ್ಮಥ; (ಜೈನ) ಬಾಹುಬಲಿಯ ಅನೇಕ ಹೆಸರುಗಳಲ್ಲಿ ಒಂದು
**ಚಿತ್ತಜಕೇಳಿ** – ಕಾಮಕ್ರೀಡೆ
**ಚಿತ್ತಜನ್ಮ** – ಮನ್ಮಥ
**ಚಿತ್ತನಾಥ** – ಮನಸ್ಸಿನ ಒಡೆಯ, ನಲ್ಲ
**ಚಿತ್ತನಿರೋಧ** – ಮನೋನಿಗ್ರಹ
**ಚಿತ್ತಪಲ್ಲಟ** – ಮನಸ್ಸು ಬದಲಾಯಿಸುವುದು
**ಚಿತ್ತಭವ** – ಮನ್ಮಥ; ಬಾಹುಬಲಿ
**ಚಿತ್ತಭ್ರಾಂತಿ** – ಮನಸ್ಸು ಭ್ರಮೆಗೊಳ್ಳುವುದು; ಹುಚ್ಚು
**ಚಿತ್ತೈಸು** – ಗಮನಕೊಡು
**ಚಿತ್ತವಿಮೋಹನ** – ಮನಸ್ಸನ್ನು ಸೆಳೆಯುವುದು, ಮರುಳುಗೊಳಿಸುವುದು
**ಚಿತ್ತವಿಶುದ್ಧಿ** – ಮನಸ್ಸಿನ ಪರಿಶುದ್ಧತೆ
**ಚಿತ್ತವೃತ್ತಿ** – ಸ್ವಭಾವ, ಮನೋಧರ್ಮ
**ಚಿತ್ತಶಯ** – ಮನ್ಮಥ
**ಚಿತ್ತಸಂಭವ** – ಮನ್ಮಥ
**ಚಿತ್ತಾಗಾರ** – ಚಿತ್ರಿಸಿದ ಆಕಾರ
**ಚಿತ್ತಾರಿ** – ಚಿತ್ರಕಾರಿ; ಚಿತ್ರಕಾರ
**ಚಿತ್ತಾರಿಗ** – ಚಿತ್ತಾರಿ
**ಚಿತ್ತು** – ಜ್ಞಾನಸ್ವರೂಪವಾದ ಆತ್ಮ
**ಚಿತ್ತೋದ್ಭವ** – ಮನ್ಮಥ
**ಚಿತ್ರ** – ಸ್ಪಷ್ಟವಾದ; ಬರೆದ ಆಕೃತಿ; ವಿಚಿತ್ರ
**ಚಿತ್ರಂಬರೆ** – ಚಿತ್ರವನ್ನು ರಚಿಸು
**ಚಿತ್ರಕ** – ಚಿತ್ರ ಬರೆಯುವವನು
**ಚಿತ್ರಕರ್ಮ** – ಚಿತ್ರರಚನೆ
**ಚಿತ್ರಕಾಯ** –ಸುಂದರ ದೇಹ; ಹುಲಿ; ಚಿರತೆ
**ಚಿತ್ರಕೃತಿ** – ಚಿತ್ರರಚನೆ
**ಚಿತ್ರಪಟ** – ಚಿತ್ರವನ್ನು ಬರೆದಿರುವ ಬಟ್ಟೆ

**ಚಿತ್ರಪತ್ರ** – ವಿಚಿತ್ರಾಕಾರ ಅಥವಾ ಬಣ್ಣಗಳುಳ್ಳ ಎಲೆ
**ಚಿತ್ರಪುತ್ರಿಕೆ** – ಆಕರ್ಷಕವಾದ ಬೊಂಬೆ
**ಚಿತ್ರಪ್ರಪಂಚ** – ಅದ್ಭುತಗಳ ಸಮೂಹ
**ಚಿತ್ರಪ್ರವರ್ತನ** – ಬಣ್ಣ ಹಾಕುವ ಒಂದು ಪ್ರಕಾರ
**ಚಿತ್ರಭಿತ್ತಿ** – ಚಿತ್ರಗಳಿರುವ ಗೋಡೆ
**ಚಿತ್ರವರ್ತ** – ಚಿತ್ರಪ್ರವರ್ತನ
**ಚಿತ್ರವಿಧ** – ಅದ್ಭುತ ರೀತಿ
**ಚಿತ್ರವಿವಕ್ಷೆ** – ಚಿತ್ರರಚನಾಸಕ್ತಿ
**ಚಿತ್ರವೃತ್ತಿ** – ಅಚ್ಚರಿಯ ಚಿತ್ರರಚನಾ ಕ್ರಮ
**ಚಿತ್ರಸೂತ್ರ** – ಚಿತ್ರಗಳಿರುವ ಬಟ್ಟೆ
**ಚಿತ್ರಹಾರ** – ಬಣ್ಣಬಣ್ಣಗಳ ಹಾರ
**ಚಿತ್ರಾಂಬರ** – ಬಣ್ಣಬಣ್ಣದ ಬಟ್ಟೆ
**ಚಿತ್ರಾಭಾಸ** – ಚಿತ್ರದ ಒಂದು ಬಗೆ
**ಚಿತ್ರಾಯತನ** – ಚತ್ರಾಣ; ಒಂದು ಕಾವ್ಯಪ್ರಕಾರ
**ಚಿತ್ರಾರ್ಥ** – ಚಿತ್ರದ ಒಂದು ಬಗೆ
**ಚಿತ್ರಾರ್ಪಿತ** – ಚಿತ್ರಣಗೊಂಡ
**ಚಿತ್ರಾವಹ** – ಆಶ್ಚರ್ಯಕರವಾದ
**ಚಿತ್ರಾವಟಿ** – ಬಣ್ಣಬಣ್ಣದ ಬಟ್ಟೆ
**ಚಿತ್ರಿಕ** – ಚಿತ್ರಕಾರ
**ಚಿತ್ರಿಕೆ** – ಬೊಂಬೆ
**ಚಿತ್ರಿಸು** – ಚಿತ್ರವನ್ನು ರಚಿಸು
**ಚಿತ್ರೆ** – (ಜೈನ) ಒಬ್ಬ ದೇವತಾಸ್ತ್ರೀ
**ಚಿನ್ನ** – ಹೊನ್ನು; (ಛಿನ್ನ) ಕತ್ತರಿಸಿದುದು
**ಚಿನ್ನಪೂ** – ಹೂವಿನಾಕಾರದ ಚಿನ್ನದ ಆಭರಣ
**ಚಿನ್ನವರದ** – ಚಿನ್ನ+ಪರದ, ಚಿನ್ನದ ವ್ಯಾಪಾರಿ
**ಚಿಬ್ಬಂಬೊಯ್** – ಮೈಮೇಲೆ ಚುಕ್ಕೆಗಳನ್ನಿಡು
**ಚಿಬ್ಬು** – ಮೈಮೇಲಿನ ಸಣ್ಣ ಚುಕ್ಕೆಗಳು
**ಚಿಮಿಚಿಮಿಸು** – ಒಂದು ಅನುಕರಣ ಶಬ್ದ; ಹೊರಳಾಡು
**ಚಿಮ್ಮು** – ಬೆರಳಿಂದ ಚಿಮ್ಮು; ಆಯುಧ ಝಳಪಿಸು
**ಚಿರ** – ಸ್ಥಿರ, ಬಹುಕಾಲ ಬಾಳುವ
**ಚಿರಂಟಿ** – ಯುವತಿ
**ಚಿರಂತನಾಚಾರ್ಯ** – ಹಿಂದಿನ ಆಚಾರ್ಯರುಗಳು
**ಚಿರಂಜೀವಿ** – ಹೆಚ್ಚು ಕಾಲ ಬದುಕುವವನು; ಕಾಗೆ
**ಚಿರಕಾಲ** – ಬಹುಕಾ;ಲ
**ಚಿರಜೀವಿತೆ** – ಬಹುಕಾಲ ಬದುಕುವುದು
**ಚಿರನಿಮಿಷ** – ಬಹುಕಾಲ ಕಣ್ಣು ಮುಚ್ಚಿರುವುದು
**ಚಿರಬಿಲ್ವ** – ಹೊಂಗೆಮರ
**ಚಿರಾಯುಷ್ಯ** – ದೀರ್ಘಕಾಲ ಬದುಕುವುದು
**ಚಿಳಚಿಮ** – ಒಂದು ಜಾತಿಯ ಸಣ್ಣ ಮೀನು
**ಚಿಲಮಿಲಿ** – ಹಕ್ಕಿಗಳ ಗುಂಪಿನ ಧ್ವನಿ
**ಚಿಲಮಿಲಿಸು** – ಚಿಲಿಮಿಲಿ ಶಬ್ದಮಾಡು
**ಚಿಲುಕೂಲಿ** – ಒಂದು ಬಗೆಯ ಹಕ್ಕಿ
**ಚಿಲ್ಲ** – ವಂಡು ನೀರನ್ನು ತಿಳಿಗೊಳಿಸುವ ಬೀಜ; ಕತಕ
**ಚಿವುಡು** – ಉಗುರಿನಿಂದ ಚಿವುಟಿಹಾಕು
**ಚಿಹ್ನ** – ಗುರುತು
**ಚೀತ್ಕರತಿ** – ಆರ್ತಧ್ವನಿ
**ಚೀನಚೇಳ** – ಚೀನಾಂಬರ
**ಚೀನವಸನ** – ಚೀನಾಂಬರ
**ಚೀನಾಂಶುಕ** – ಚೀನಾಂಬರ
**ಚೀನೋತ್ತರೀಯ** – ರೇಷ್ಮೆಯ ಮೇಲುವಸ್ತ್ರ
**ಚೀರಿ(ಕಾ)** – ಝೀಂಕರಿಸುವ ಒಂದು ಹುಳು
**ಚೀರ್ಗರೆ** – ಚೀರು, ಕಿರಿಚು
**ಚೀಲ** – (ಚೀರ) ಬಟ್ಟೆ; ಬಟ್ಟೆಯ ಕೋಶ
**ಚೀಲಣಸು** – ಕೆತ್ತನೆ ಕೆಲಸ ಮಾಡು
**ಚುಂಚು** – ಜುಟ್ಟು; ಮುಂಗುರುಳು
**ಚುಂಚುಮೀಸೆ** – ಹುರಿಗೊಂಡ ಮೀಸೆ
**ಚುಂಚುಲೋವೆ** – ಗೋಡೆಯ ಚಾಚು ಭಾಗ
**ಚುಂಬನ** – ಮುತ್ತು
**ಚುಂಬಿ** – ತಾಗುವ
**ಚುಂಬಿಸು** – ಮುತ್ತಿಡು
**ಚುಚ್ಚು** – ಇರಿ; ಇರಿತ
**ಚುನ್ನ** – ನಿಂದೆ; ಕೊಂಕುಮಾತು
**ಚುನ್ನಮಾ(ವಾ)ಡು** – ಕೊಂಕುಮಾತಾಡು
**ಚುನ್ನಂಗೆಯ್** – ಅಪಹಸ್ಯಮಾಡು
**ಚುನ್ನಕ** – ನಿಂದಕ
**ಚುಬುಕ** – ಗಲ್ಲ
**ಚುಬುಕಾಗ್ರ** – ಗದ್ದದ ತುದಿ
**ಚುಮ್ಮೆನ್** – ಜೋರಾಗಿ ಸುಯ್‌ಗುಟ್ಟು
**ಚುಯ್** – ಸುಯ್‌ಗುಟ್ಟುವುದರ ಅನುಕರಣ ಶಬ್ದ
**ಚುರ್ಚು** – ಚುಚ್ಚು; ಉರಿ
**ಚುರ್ಚುಂಗೊಳ್ಳಿ** – ಉರಿಯುವ ಕೊಳ್ಳಿ
**ಚುಲುಕ** – ಅಂಗೈ, ಹಿಡಿ
**ಚುಳಕಪಾನ** – ಅಂಗಯ ತುಂಬ ನೀರು
**ಚುಳುಕಾಡು** – ತುಳುಕಾಡು
**ಚೂಚಕ** – ಗೊಂಚಲು
**ಚೂಚುಕ** – ಮೊಲೆತೊಟ್ಟು
**ಚೂಡಾಕರಣ** – ಚೌಲಕರ್ಮ; ಮೊದಲ ಬಾರಿಗೆ ಗಂಡುಮಕ್ಕಳ ತಲೆಗೂದಲು ತೆಗೆಸುವುದು; ಷೋಡಶ ಸಂಸ್ಕಾರಗಲಲ್ಲಿ ಒಂದು
**ಚೂಡಾಪೀಡ** – ಶಿರೋಭೂಷಣ, ತಲೆಯ ಆಭರಣ
**ಚೂಡಾಮಣಿ** – ತಲೆವಣಿ, ಶಿರೋರತ್ನ
**ಚೂಡಾರತ್ನ** – ಚೂಡಾಮಣಿ
**ಚೂಡೋದಯ** – ಚೂಡಾಕರಣ
**ಚೂತ** – ಮಾವಿನ ಮರ
**ಚೂತತತಿ** – ಮಾವಿನ ತೋಪು
**ಚೂತದ್ರುಮ** – ಮಾವಿನ ಮರ
**ಚೂತನಂದನ** – ಮಾವಿನ ತೋಪು
**ಚೂತವನ** – ಮಾವಿನ ತೋಪು
**ಚೂತಾಂಕುರ** – ಮಾವಿನ ಚಿಗುರು
**ಚೂತೋತ್ಕರ** – ಚೂತನಂದನ
**ಚೂರ್ಣನೀಯ** – ಪುಡಿಮಾಡಬಹುದಾದ

**ಚೂರ್ಣಯೋಗ** – ಪುಡಿ ಎರಚಿ ಮಂಕುಗೊಳಿಸುವುದು
**ಚೂರ್ಣವಾಸ** – ಸುವಾಸಿತ ಚೂರ್ಣ
**ಚೂರ್ಣಾಳಕ** – ಮುಂಗುರುಳು
**ಚೂರ್ಮೊನೆ** – ಹರಿತವಾದ ಅಲಗು
**ಚೂರ್ಮೊನೆಗೊಳ್** – ಹರಿತವಾದ ಅಲಗನ್ನು ಹೊಂದು
**ಚೂಲ** – ಜುಟ್ಟು
**ಚೂಲಿ(ಳಿ)ಕೆ** – ಆನೆಯ ಕಿವಿಯ ತಳ; ಪರ್ವತಶಿಖರ
**ಚೂಳಾಕರಣ** – ಚೂಡಾಕರಣ
**ಚೂಳಾಕರ್ಮ** – ಚೂಡಾಕರ್ಮ
**ಚೂಳಕಾವರ್ಧನ** – ಸೀಮಂತ
**ಚೂಳಕೆ** – ತುದಿ
**ಚೆಂಗದಿರ್** – ಕೆಂಪು ಬೆಳಕು
**ಚೆಂಗಯ್** – ಕೆಂಪಾದ ಅಂಗೈ
**ಚೆಂಗಲವೆ** – ಕೆಂದಾವರೆ
**ಚೆಂಗಾರೆ** – ಕೆಂಪು ಕಾರೆ ಹಣ್ಣು
**ಚೆಂಗೊರಲ್** – ಕೆಂಪು ಕೊರಳು
**ಚೆಂಗೋಲ್** – ಕೆಂಪು ಬಾಣ
**ಚೆಂಚಿತಿ** – ಬೇಡಿತಿ
**ಚೆಂಡಿಕೆ** – ಜುಟ್ಟು
**ಚೆಂದಲ್** – ಕೆಂಪು ಅಕ್ಕಿಯ ಬತ್ತ
**ಚೆಂದಳಿರ್** – ಕೆಂಪಾದ ಚಿಗುರು
**ಚೆಂದಳಿರ್ದೊಂಗಲ್** – ಕೆಂಪು ಚಿಗುರಿನ ಗೊಂಚಲು
**ಚಿಂದಳಿರ್ವಾಸು** – ಕೆಂಪು ಚಿಗುರಿನ ಹಾಸಿಗೆ
**ಚೆಂದೆಂಗು** – ಕೆಂಪು ತೆಂಗು
**ಚೆಂಬರಿಗೆ** – ಚೆನ್ನಾಗಿರುವ ಗುರಾಣಿ
**ಚೆಂಬಿಸಿಲ್** – ಕೆಂಪು ಬಣ್ಣದ ಬಿಸಿಲು
**ಚೆಂಬುಗೆಂಪು** – ತಾಮ್ರದ ಬಣ್ಣ, ಕೆಂಪು
**ಚೆಂಬುಡಿ** – ಕೆಂಪು ಪುಡಿ
**ಚೆಂಬೂ** – ಕೆಂಪಾದ ಹೂ
**ಚೆಂಬೊಂಗಟ್ಟು** – ತಾಮ್ರದ ಚೌಕಟ್ಟು
**ಚೆಂಬೊಂಗಳಸ** – ತಾಮ್ರದ ಕಳಶ
**ಚೆಂಬೊಗರ್** – ಕೆಂಪು ಕಾಂತಿ
**ಚೆಂಬೊನ್** – ಚಿನ್ನ; ತಾಮ್ರ; ಚಿನ್ನದ ನಾಣ್ಯ
**ಚೆಕ್ಕನೆ** – ಇದ್ದಕ್ಕಿದ್ದಂತೆ
**ಚೆಕ್ಕರಿಸು** – ಕುರಿಯಂತೆ ಅರಚು
**ಚೆಚ್ಚರ** – ಎಚ್ಚರಿಕೆ, ಜಾಗರೂಕತೆ
**ಚೆಚ್ಚರಂ** – ಥಟ್ಟನೆ
**ಚೆಚ್ಚರಿಕೆ** – ಚಳಕ
**ಚೆಚ್ಚರಿಸು** – ಚಾಕಚಕ್ಯತೆಯಿಂದ ಕೂಡು
**ಚೆನ್ನ** – ಶೂರ
**ಚೆನ್ನಗಂಡ** – ಚೆಲುವನಾದ ವೀರ
**ಚೆನ್ನನೆ** – ಚೆನ್ನಾಗಿ
**ಚೆನ್ನಪೂ** – ಸುಂದರವಾದ ಹೂ
**ಚೆನ್ನಪೊಂಗ** – ಚೆನ್ನಗಂಡ
**ಚೆನ್ನಭಾಷಿತ** – ಒಳ್ಳೆಯ ಮಾತು
**ಚೆನ್ನಿಗ** – ಚೆಲುವ
**ಚೆನ್ನಿಗತನ** – ಚೆಲುವು
**ಚೆನ್ನೀರ್** – ಕೆಂಪು ನೀರು, ರಕ್ತ
**ಚೆನ್ನುವಡೆ** – ಚೆಲುವಾಗು
**ಚೆನ್ನೆ** – ಸುಂದರಿ
**ಚೆನ್ನೈದಿಲ್** – ಕೆಂಪು ನೈದಿಲೆ
**ಚೆನ್ನೈದಿಲ್ಗೊಳ** – ಕೆಂಪು ನೈದಿಲೆಯ ಕೊಳ
**ಚೆಮ್ಮೂಗು** – (ಗಿಣಿಯ) ಕೆಂಪು ಮೂಗು
**ಚೆಯ್ಗುಡು** – ಮುದ್ದಾಡು
**ಚೆಲಂಕು** – ಈಡಾಡು, ಚೆಲ್ಲು
**ಚೆಲ್ಲ** – ಸರಸ
**ಚೆಲ್ಲಂಬೀಱು** – ವಿಲಾಸ ತೋರು
**ಚೆಲ್ಲಂಬೆರಸು** – ಚೆಲ್ಲಾಟದಿಂದ ಕೂಡು
**ಚೆಲ್ಲ** – ಸರಸ, ವಿನೋದ
**ಚೆಲ್ಲಗಣ್ಬೊಣರ್** – ಚೆಲ್ಲಗಣ್+ಪೊಡರ್, ವಿಲಾಸಯುಕ್ತ ಕಣ್ಣುಗಳ ಜೋಡಿ
**ಚೆಲ್ಲೆಗಣ್** – ಅಗಲವಾದ ಕಣ್ಣು
**ಚೆಲ್ವ** – ಚೆಲುವ
**ಚೆಲ್ವಿಕೆ** – ಚೆಲುವು
**ಚೆಲ್ವಿಡಿ** – ಚೆಲುವಿನಂದ ಕೂಡಿರು
**ಚೆಲ್ವು** – ಚೆಲುವು
**ಚೆಲ್ವುದೋಱು** – ಚೆಲುವನ್ನು ಕಾಣಿಸು
**ಚೆಲ್ವುವರಿ** – ಚೆಲುವನ್ನು ಪಸರಿಸು; ಚೆನ್ನಾಗಿ ಸಾಗು
**ಚೆಲ್ವುವಱು** – ಚೆಲುವನ್ನು ಪಡೆ
**ಚೆಲ್ವೆ** – ಚೆಲುವೆ
**ಚೆಲ್ವೆಸೆ** – ಚೆಲುವಾಗಿ ಶೋಭಿಸು
**ಚೆಲ್ವೊಡರಿಸು** – ಚೆಲುವುಂಟುಮಾಡು
**ಚೆಲ್ವೊವೆ** – ಚೆಲುವಿನಿಂದ ತುಂಬು
**ಚೆಲ್ವೋಡು** – ಅಂದಗೆಡು
**ಚೇಟಿ(ಕೆ)** – ದಾಸಿ
**ಚೇಣ** – ಕಲ್ಲು ಒಡೆಯುವ ಉಳಿ
**ಚೇತ** – ಚೇತನ, ಮನಸ್ಸು
**ಚೇತಃಪದ್ಮ** – ಹೃದಯಕಮಲ
**ಚೇತನಭಾವ** – ಚೈತನ್ಯವಿರುವ ಅನುಭವ
**ಚೇತನಾಚೇತನ** – ಚೇತನವಿರುವ ಮತ್ತು ಇಲ್ಲದಿರುವ
**ಚೇತನವಡೆ** – ಚೇತರಿಸಿಕೊ
**ಚೇತರಣೆ** – ಚೈತನ್ಯ
**ಚೇತರಿಸು** – ಚತನ್ಯವನ್ನು ಹೊಂದು
**ಚೇತೋಜಾತ** – ಮನ್ಮಥ; ಪ್ರದ್ಯುಮ್ನ
**ಚೇತೋನಂದನ** – ಚೇತನಕ್ಕೆ ಆನಂದದಾಯಕವಾದ
**ಚೇತೋವೃತ್ತಿ** – ಮನೋವ್ಯಾಪಾರ
**ಚೇತೋಹಾರಿ** – ಮನಸ್ಸನ್ನು ಆಕರ್ಷಿಸುವ
**ಚೇರ** – ಒಂದು ದೇಶ, ಕೇರಳ
**ಚೇಲ** – ಬಟ್ಟೆ
**ಚೇಲಾಂಚಲ** – ಬಟ್ಟೆಯ ಅಂಚು
**ಚೇಷ್ಟಿತ** – ಮಾಡಲ್ಪಟ್ಟ

**ಚೇಷ್ಟೆ** – ಚಲನೆ
**ಚೇಷ್ಟೆಗೆಡು** – ಚಲನೆ ಇಲ್ಲವಾಗು
**ಚೈತನ್ಯ** – ಜೀವ, ಚೇತರಿಕೆ
**ಚೈತಾಗ್ನಿ** – ಚಿತೆಯ ಬೆಂಕಿ
**ಚೈತ್ರ** – ಚಾಂದ್ರಮಾನ ವರ್ಷದ ಮೊದಲ ತಿಂಗಳು
**ಚೈತ್ರದೂತಿ** – ಮಾವು
**ಚೈತ್ರಮಿತ್ರ** – ವಸಂತನ ಗೆಳೆಯ, ಮನ್ಮಥ
**ಚೈತ್ರರಥ** – ಕುಬೇರನ ಉದ್ಯಾನ
**ಚೈತ್ರಾನಿಲ** – ಚೈತ್ರಮಾಸದ ಗಾಳಿ
**ಚೈತ್ಯ** – ಜೈನ ಅಥವಾ ಬೌದ್ಧ ದೇವಾಲಯ
**ಚೈತ್ಯಕ್ಷಿತಿಜಾತ** – ಅರಳಿಮರ
**ಚೈತ್ಯಗೃಹ** – ಬಸದಿ
**ಚೈತ್ಯಗೇಹ** – ಚೈತ್ಯಾಗೃಹ
**ಚೈತ್ಯಭವ** – ಬಸದಿಯಲ್ಲಿ ಉಂಟಾದ
**ಚೈತ್ಯರಾಜಿ** – ಬಸದಿಗಳ ಗುಂಪು
**ಚೈತ್ಯವೃಕ್ಷ** – ಅರಳಿಮರ
**ಚೈತ್ಯಾಲ(ಳ)ಯ** – ಚೈತ್ಯಗೃಹ
**ಚೈತ್ಯಾವಸಥ** – ಬಸದಿ
**ಚೈತ್ಯಾವಾಸ** – ಬಸದಿ
**ಚೈತ್ಯಾಳಿ** – ಬಸದಿಗಳ ಗುಂಪು
**ಚೈರಂತನ** – ಚಿರಂತನವಾದ, ಸನಾತನ
**ಚೈರಂತನಕ್ರಮ** – ಸನಾತನಕ್ರಮ
**ಚೊಕ್ಕ** – ಅಂದವಾದ; ಅಪ್ಪಟವಾದ
**ಚೊಕ್ಕದಂಬುಲ** – ಒಳ್ಳೆಯ ತಾಂಬೂಲ
**ಚೊಕ್ಕಳತನ** – ಅಚ್ಚುಕಟ್ಟುತನ
**ಚೊಕ್ಕಳಿಕೆ** – ಅಚ್ಚುಕಟ್ಟು
**ಚೊಕ್ಕೆಯ** – ಮಲ್ಲಯುದ್ಧದ ಒಂದು ವರಸೆ; ಉಪಾಯ
**ಚೊಚ್ಚಲ್** – ಮೊದಲನೆಯ
**ಚೊಲ್ಲೆಯ** – ತುರುಬಿನ ಕೊನೆ; ಹೂವಿನ ದಂಡೆ; ಕುಪ್ಪಸ
**ಚೋಚ** – ತೆಂಗು
**ಚೋಜಿಗ** – ಸೋಜಿಗ
**ಚೋದಿಸು** – ರಥ ಮುಂತಾದವನ್ನು ನಡೆಸು
**ಚೋದ್ಯ** – ಆಶ್ಚರ್ಯ
**ಚೋದ್ಯಂಬಡು** – ಸೋಜಿಗಗೊಳ್ಳು
**ಚೋದ್ಯಾವಹ** – ಆಶ್ಚರ್ಯಕರವಾದ
**ಚೌಕ** – ಚತುಷ್ಕೋನಾಕಾರ
**ಚೌಕ(ಖ)ಂಡ** – ಮನೆಯ ಚೌಕಾಕಾರದ ತೊಟ್ಟಿ
**ಚೌಕಸತ್ತಿಗೆ** – ಚೌಕಾಕಾರದ ಕೊಡೆ
**ಚೌಕಿ(ಗೆ)** – ಮನೆಯ ಅಂಗಳ, ತೊಟ್ಟಿ
**ಚೌಜಂತ** – ನಾಲ್ಕು ದಂತಗಳುಳ್ಳದು, ಐರಾವತ
**ಚೌತ** – (ಚತುರಸ್ರ) ನಿಶ್ಚಿತ
**ಚೌತೆಱ** – ನಾಲ್ಕು ರೀತಿ
**ಚೌದಂತ** – ಚೌಜಂತ
**ಚೌಪಳಿಗೆ** – ಮಂಟಪ; ಹಜಾರ
**ಚೌಲ** – ಚೂಡಾಕರ್ಮ
**ಚೌವಟಮಲ್ಲ** – ಮಹಾ ಪರಾಕ್ರಮಿ
**ಚೌವಟ್ಟ** – ಬೀದಿಯ ಚೌಕ
**ಚೌವೇದಿ** – ಚತುರ್ವೇದಿ
**ಚ್ಯುತ** – ಕೆಳಗೆ ಬಿದ್ದ
**ಚ್ಯುತಿ** – ಬೀಳುವುದು; ನಾಶ

## ಛ

**ಛಂದ** – ಸುಂದರವಾದುದು
**ಛಂದೋವಿದ್ಯೆ** – ಛಂದಶ್ಶಾಸ್ತ್ರ
**ಛಟಾ** – ಸಮೂಹ
**ಛಟೆ** – ಕಾಂತಿ
**ಛಟ್ಟ** – ಚಾಂದ್ರಮಾನದ ಪ್ರಕಾರ ಷಷ್ಠಿ ತಿಥಿ
**ಛತ್ರಪ್ರಸರ** – ರಾಜಛತ್ರಿಗಳ ಸಮೂಹ
**ಛತ್ರರತ್ನ** – (ಜೈನ) ಚಕ್ರವರ್ತಿಗೆ ತಾನಾಗಿ ದೊರಕುವ ಏಳು ರತ್ನಗಳಲ್ಲಿ ಒಂದು
**ಛತ್ರಾಕಾರ** – ಗುಂಡನೆಯ ಅಕಾರ
**ಛದ(ನ)** – ಮುಸುಕು; ಹೊದಿಕೆ
**ಛದ್ಮಬಾಲಿಶ** – ಮಾರುವೇಷ ಹಾಕಿಕೊಂಡು ಆಟ ಆಡುವವನು
**ಛದ್ಮಸ್ಥ** – ಮರೆಮಾಚಿಕೊಂಡಿರುವವನು; (ಜೈನ) ಕೇವಲಜ್ಞಾನಕ್ಕೆ ಹಿಂದಿನ ಅವಸ್ಥೆಯಲ್ಲಿರುವವನು
**ಛದ್ಮಸ್ಥಕಾಲ** – (ಜೈನ) ಛದ್ಮಸ್ಥ ಅವಸ್ಥೆಯಲ್ಲಿರುವವನು
**ಛನ್ನ** – ಆವರಿಸಿದ
**ಛಪ್ಪಿಸು** – ಆಕ್ರಮಣ ಮಾಡು
**ಛಮ್** – ಒಂದು ಅನುಕರಣ ಶಬ್ದ
**ಛರ್ದಿ** – ವಾಂತಿಮಾಡಿಕೊಳ್ಳುವುದು
**ಛರ್ದಿಗೆಯ್** – ವಾಂತಿಮಾಡಿಕೊ
**ಛರ್ದಿಸು** – ಛರ್ದಿಗೆಯ್
**ಛಲ(ಳ)** – ನೆಪ
**ಛವಿ** – ಕಾಂತಿ
**ಛಾಂದಸ** – ವೇದಾಧ್ಯಯನ ಪ್ರವೀಣ
**ಛಾಂದಸಿಕ್ಕೆ** – ದಡ್ಡತನ
**ಛಾಂದಸಿಗ** – ಛಾಂದಸ
**ಛಾಗಲ** – ಹೋತ
**ಛಾತ್ರ** – ವಿದ್ಯಾರ್ಥಿ
**ಛಾದ್ಯ** – ಮರೆಮಾಡುವ; ಮೇಲ್ಕಟ್ಟು, ವಿತಾನ
**ಛಾಯಾಗ್ರಹಣಂಗೆಯ್** – ವ್ಯಕ್ತಿಯ ಚಲನವಲನವನ್ನು ನಿರೋಧಿಸಲು ಅವನ ನೆರಳನ್ನು ತಡೆಹಿಡಿ
**ಛಾಯಾಲಕ್ಷ್ಯ** – ಪ್ರತಿಬಿಂಬವನ್ನು ನೋಡಿ ಹೊಡೆಯಬಾಕಾದ ಗುರಿ
**ಛಿಂದಕ** – ಅಮರದವಳ್ಳಿ
**ಛಿಮರ** – ಛಿದ್ರಗೊಳ್ಳುವ

**ಛಿದ್ರಕದ್ವಾರ** – ನೀರು ಹೋಗಲು ಮಾಡಿರುವ ತೂತು
**ಛಿದ್ರನಿವಾಸ** – ಬಿಲದಲ್ಲಿ ವಾಸಿಸುವ, ಹಾವು
**ಛಿದ್ರಾನ್ವೇಷಿ** – ರಂಧ್ರವನ್ನು ಹುಡುಕುವವನು; ಇತರರಲ್ಲಿ ತಪ್ಪನ್ನೇ ಹುಡುಕುವವನು
**ಛಿದ್ರಿಸು** – ಭೇದಿಸು, ನಾಶಮಡು
**ಛುರಣ** – ಹರಡುವಿಕೆ
**ಛುರಿಕೆ** – ಸುರಿಗೆ
**ಛುರಿದ** – ಬೆರೆತುಕೊಂಡಿರುವ
**ಛುಛ್** – ಒಂದು ಅನುಕರಣ ಶಬ್ದ
**ಛೇದ** – ಕತ್ತರಿಸುವುದು; ತುಂಡು
**ಛೇದಿಸು** – ಕತ್ತರಿಸು

## ಜ

**ಜಂಕಿಸು** – ಗದರಿಸು; ಹೀಯಾಳಿಸು
**ಜಂಕೆ** – ಗದರಿಕೆ
**ಜಂಗಮ** – ಸಂಚರಿಸುವ
**ಜಂಗುಳಿ** – ಗುಂಪು
**ಜಂಗುಳಿದೇವರು** – ಜನಜಂಗುಳಿಯ ದೇವತೆಗಳು
**ಜಂಘಚಾರಣ** – (ಜೈನ) ಎಂಟು ಬಗೆಯ ಚಾರಣಶಕ್ತಿಯಿರುವವರಲ್ಲಿ ಒಬ್ಬ; ನೆಲಕ್ಕೆ ಕಾಲೂರದೆ ನಡೆಯಬಲ್ಲವನು
**ಜಂಘಾಲ(ಳ)** – ವೇಗವಾಗಿ ಓಡುವವನು
**ಜಂಜು** – ಬೀಸುವ ಗಾಳಿ ಅಥವಾ ಬೀಳುವ ಮಳೆಯ ಸದ್ದು
**ಜಂಝಾಪ್ರಭಂಜನ** – ಮಳೆಹನಿಯೊಡಗೂಡಿದ ಗಾಳಿ
**ಜಂಝಾಸಮೀರ** – ಜಂಝಾಪ್ರಭಂಜನ
**ಜಂತ** – ದಂತ
**ಜಂತಿಗ** – ದಂತದ ವ್ಯಾಪಾರಿ
**ಜಂತು** – ಕರುಳಿನಲ್ಲಿ ಹುಟ್ಟುವ ಹುಳು
**ಜಂತೆ** – ಛಾವಣಿಯ ತೊಲೆಗಳ ನಡುವೆ ಹಾಕುವ ಸಣ್ಣ ಅಡ್ಡಪಟ್ಟಿ
**ಜಂತೆತ್ತು** – ಜಂತುಗಳು ಹೆಚ್ಚಾಗು
**ಜಂತ್ರ** – ಯಂತ್ರ
**ಜಂಪ** – ನೆಗೆತ; ಕುಪ್ಪಳಿಕೆ
**ಜಂಪತಿ** – ದಂಪತಿ
**ಜಂಪೆ** – ಮನೆಯ ಒಂದು ಭಾಗ
**ಜಂಬಾಲ(ಳ)** – ಕೆಸರು
**ಜಂಬೀರ** – ನಿಂಬೆ
**ಜಂಬು** – ನೇರಿಳೆ
**ಜಂಬುಕ** – ನರಿ
**ಜಂಬೂದ್ರುಮ** – ನೇರಿಳೆ ಮರ
**ಜಂಬೂದ್ವೀಪ** – ಜಂಬೂ, ಪ್ಲಕ್ಷ್ಯ, ಶಾಲ್ಮಲೀ, ಕುಶ, ಕ್ರೌಂಚ, ಶಾಕ, ಪುಷ್ಕರ ಎಂಬ ಸಪ್ತದ್ವೀಪಗಳಲ್ಲಿ ಒಂದು; (ಜೈನ) ಜಂಬೂದ್ವೀಪದಲ್ಲಿ ಭರತವರ್ಷ, ಹೈಮವತವರ್ಷ, ಹರಿವರ್ಷ, ವಿದೇಹವರ್ಷ, ರಮ್ಯಕವರ್ಷ, ಹೈರಣ್ಯವತವರ್ಷ, ಐರಾವತವರ್ಷ ಎಂಬ ಏಳು ಭಾಗಗಳು
**ಜಂಬೂನದಗಿರಿ** – ಮೇರುಪರ್ವತ
**ಜಂಬೂಫಲ(ಳ)** – ನೇರಿಳೆ ಹಣ್ಣು
**ಜಂಭರಿಪು** – ಜಂಭ ಎಂಬ ರಾಕ್ಷಸನ ಶತ್ರು, ಇಂದ್ರ
**ಜಂಭಾರಾತಿ** – ಜಂಭರಿಪು
**ಜಂಭಾರಿ** – ಜಂಭರಿಪು
**ಜಂಭೀರ** – ನಿಂಬೆ
**ಜಕ್ಕ** – ಯಕ್ಷ
**ಜಕ್ಕಂಜಕೆ** – ಬಹಳ ನಿಂದನೆಮಾಡು
**ಜಕ್ಕಂದೊಟಿ** – ಗುಂಡಗೆ ಸುತ್ತುವ ಉಯ್ಯಾಲೆ
**ಜಕ್ಕಂದೊಟಿಲ** – ಕೋಣ
**ಜಕ್ಕವಕ್ಕಿ** – ಚಕ್ರವಾಕ ಪಕ್ಷಿ
**ಜಕ್ಕಿ** – ಯಕ್ಷಿ
**ಜಕ್ಕುಗೊಳ್** – ಚಿವುಲು ಉಗುರಗುರುತು ಹೊಂದು
**ಜಕ್ಕುಲಿ(ಳಿ)ಸು** – ಮೋಹಗೊಳಿಸು; ಆವರಿಸು; ವ್ಯಾಪಿಸು; ಕಚಗುಳಿಯಿಡು
**ಜಗ** – ಜಗತ್ತು
**ಜಗಚ್ಚಕ್ರ** – ಭೂಮಂಡಲ
**ಜಗಜ್ಜನ** – ಜಗತ್ತಿನ ಜನ
**ಜಗಜ್ಜನಕ** – ಲೋಕದ ತಂದೆ
**ಜಗಜ್ಜಯ** – ಲೋಕವನ್ನು ಗೆಲ್ಲುವುದು
**ಜಗಜ್ಜೀವನ** – ಜಗತ್ತನ್ನು ಬದುಕಿಸುವ
**ಜಗಜ್ಜೈತ್ರ** – ಜಗತ್ತನ್ನು ಗೆಲ್ಲುವ
**ಜಗತಿ** – ಜಗಲಿ
**ಜಗತೀತಲ** – ಭೂಮಿತಳ
**ಜಗತೀಧರ** – ಬೆಟ್ಟ
**ಜಗತೀನಾಥ** – ರಾಜ
**ಜಗತೀಪಾಲ** – ರಾಜ
**ಜಗತ್ತ್ರಯ** – ಮೂರು ಲೋಕಗಳು: ಸ್ವರ್ಗ, ಮರ್ತ್ಯ, ಪಾತಾಳ
**ಜಗತ್ತ್ರಿತಯ** – ಜಗತ್ತ್ರಯ
**ಜಗತ್ಪತಿ** – ಜಗತ್ತಿನ ಒಡೆಯ
**ಜಗತ್ಪರ್ಯಷ್ಟಿ** – ಲೋಕಪೂಜೆ
**ಜಗತ್ಪ್ರಕಟ** – ಜಗತ್ತಿನಲ್ಲಿ ಪ್ರಸಿದ್ಧವಾದ
**ಜಗತ್ಪ್ರತೀತ** – ಜಗತ್ಪ್ರಸಿದ್ಧ
**ಜಗತ್ಪ್ರಥಿತ** – ಜಗತ್ಪ್ರಕಟ
**ಜಗತ್ಪ್ರಭು** – ಜಗತ್ತಿನ ಒಡೆಯ
**ಜಗತ್ಪ್ರಾಣ** – ಜಗತ್ತಿಗೆ ಪಾಣಸ್ವರೂಪಿಯಾದವನು
**ಜಗತ್ಪ್ರಿಯ** – ಜಗತ್ತಿಗೇ ಪ್ರಿಯನಾದವನು
**ಜಗತ್ಸ್ತುತ್ಯ** – ಜಗತ್ತಿನ ಹೊಗಳಿಕೆಗೆ ಪಾತ್ರನಾದವನು
**ಜಗದಾಧಾರಕ** – ಲೋಕಕ್ಕೆ ಆಧಾರದಂತಿರುವವನು
**ಜಗದೀಶ**– ಜಗತ್ಪತಿ
**ಜಗದೇಕದೇವ** – ಲೋಕದ ಒಬ್ಬನೇ ಆದ ಒಡೆಯ

**ಜಗದೇಕಬಂಧು** – ಲೋಕದ ಒಬ್ಬನೇ ಆದ ಬಂಧು
**ಜಗದೇಕವೀರ** – ಜಗತ್ತಿನ ಮಹಾ ಪರಾಕ್ರಮ
**ಜಗದ್ಗುರು** – ಜಗತ್ತಿಗೇ ಗುರುವಾದವನು
**ಜಗದ್ಧರೆ** – ಲೋಕವನ್ನು ಎತ್ತಿ ಹಿಡಿಯುವವಳು
**ಜಗದ್ಬಂಧು** – ಜಗತ್ತಿನ ಬಂಧು
**ಜಗದ್ರಕ್ಷಕ** – ಜಗತ್ತನ್ನೆಲ್ಲ ಕಾಪಾಡುವವನು
**ಜಗದ್ವಂದಿತ** – ಜಗತ್ತನಿಂದ ನಮಸ್ಕರಿಸಿಕೊಳ್ಳುವವನು
**ಜಗದ್ವಳಯ** – ಭೂಮಂಡಲ
**ಜಗದ್ವಿಖ್ಯಾತ** – ಜಗತ್ತಿನಲ್ಲಿ ಪ್ರಸಿದ್ಧನಾದವನು
**ಜಗದ್ವಿದಿತ** – ಜಗದ್ವಿಖ್ಯಾತ
**ಜಗದ್ವಿಶ್ರುತ** – ಜಗದ್ವಿಖ್ಯಾತ
**ಜಗನ** –ಜಘನ
**ಜಗನ್ನಾಥ** – ಜಗತ್ತಿನ ಒಡೆಯ
**ಜಗನ್ನುತ** – ಜಗತ್ತನ ಸ್ತುತಿಗೆ ಪಾತ್ರನಾದವನು
**ಜಗನ್ಮಂಡನ** – ಜಗತ್ತಿಗೆ ಆಭರಣವಾಗಿರುವವನು
**ಜಗನ್ಮಾನ್ಯ** – ಜಗತ್ತಿನಿಂದ ಮಾನ್ಯನಾದವನು
**ಜಗಲಿ** – ಕಟ್ಟೆ
**ಜಗಲಿಗಟ್ಟು** – ಜಗುಲಿಯನ್ನು ಕಟ್ಟು; ಜಗುಲಿಯ ಕಟ್ಟು
**ಜಗಳೆ** – ಕಂಸಾಳೆ
**ಜಗೞ** – ಕಲಹ
**ಜಗೞಂಬೊಗು** – ಜಗಳ ತೆಗೆ
**ಜಗೞಗಂಟ** – ಜಗಳ ಮಾಡುವ ಸ್ವಭಾವದವನು
**ಜಗುನೆ** – ಯಮುನಾನದಿ
**ಜಗುೞ್** – ಜಾರು; ಹೊರಟುಹೋಗು
**ಜಗುೞ್ದಿರ್** – ಜಾರಿಹೋಗು
**ಜಘನ** – ನಿತಂಬ
**ಜಘಣಸ್ಥಲ** – ನಿತಂಬಪ್ರದೇಶ
**ಜಘನ್ಯ** – ಹಿಂಬದಿಯ; ಕೀಳಾದ
**ಜಘನ್ಯಪಾತ್ರ** – (ಜೈನ)ಸ್ವೀಕಾರಕ್ಕೆ ಅರ್ಹರಾದವರಲ್ಲಿ ಕನಿಷ್ಠನಾದವನು
**ಜರ್ಝರ** – ಕರ್ಕಶಧ್ವನಿ; ಮೆಲುಧ್ವನಿ
**ಜಝಾರೆ** – ಕೊಂಡಾಟದ ಮಾತು
**ಜಟಧಿ** – ಸಮುದ್ರ; ಮೂಢ ಬುದ್ಧಿ
**ಜಟಮಟಿಕ(ಗ)** – ಮೋಸಗಾರ; ಸಡಗರಪಡು
**ಜಟಮಟಿಸು** – ಮೋಸಗೊಳಿಸು; ಸಡಗರಿಸು
**ಜಟಾಜೂಟ** – ಜಟೆಗಟ್ಟಿದ ಕೂದಲು
**ಜಟಿ** – ಜಟೆಯನ್ನು ಹೊಂದಿರುವವನು, ಶಿವ
**ಜಟಿಕಾ** – ಜಡೆ
**ಜಟಿಕಾವಳಯ** – ಜಟೆಗಳ ಸಮೂಹ
**ಜಟಿಲ** – ಗಂಟುಗಂಟು, ತೊಡಕು
**ಜಟಿಲಿತ** – ಗಂಟುಗಂಟಾದ
**ಜಟ್ಟಿಗ** – ಶೂರ
**ಜಠರ** – ಗಟ್ಟಿಂಯಾದ; ಹೊಟ್ಟೆ
**ಜಠರಾಗ್ನಿ** – ಜೀರ್ಣಮಾಡುವ ಅಗ್ನಿ
**ಜಠರಾನಳ** – ಜಠರಾಗ್ನಿ

**ಜಡ** – ಅಲಸಿ; ನೀರು
**ಜಡಗ್ರಾಹಿ** – ನೀರನ್ನು ಹಿಡಿದಿಡುವವನು; ಅಲಸಿ
**ಜಡಜಂತು** – ಬುದ್ಧಹೀನ ವ್ಯಕ್ತಿ
**ಜಡಜಜ** – ಬ್ರಹ್ಮ; ದಡ್ಡನ ಮಗ
**ಜಡಜನ** – ಅಲಸಿಗರಾದ ಜನ
**ಜಡಜಾತಜಾತ** – ಬ್ರಹ್ಮ
**ಜಡತೆ** – ನಿರುತ್ಸಾಹ
**ಜಡತ್ವ** – ಜಡತೆ
**ಜಡಧರ** – ನೀರನ್ನು ಧರಿಸಿರುವುದು, ಮೋಡ
**ಜಡಧಿ** – ಸಮುದ್ರ
**ಜಡಪ್ರಕೃತಿ** – ಚಟುವಟಿಕೆಯಿಲ್ಲದ ಸ್ವಭಾವ; ಆಲಸ್ಯ
**ಜಡಭಾವಿ** – ನೀರಿನಿಂದ ತುಂಬಿದ; ಆಲಸ್ಯದಿಂದ ಕೂಡಿದ
**ಜಡಮತಿ** – ಮಂದಬುದ್ಧಿ
**ಜಡಮೂರ್ತಿ** – ಜಡಸ್ವಭಾವದ ವ್ಯಕ್ತಿ
**ಜಡರಾಶೀಂದ್ರ** – ವರುಣ
**ಜಡವಾದ** – ನಿರೀಶ್ವರವಾದ; ಜಗತ್ತು ಪಂಚಭೂತಗಳಿಂದ ಆಗಿದೆ ಎಂಬ ವಾದ
**ಜಡವಿಕೃತಿ** – ನೀರಿನ ವಿಕಾರ; ಆಲಸ್ಯದ ವಿಕಾರ
**ಜಡವೃತ್ತಿ** – ಜಡಸ್ವಭಾವ; ನೀರಿನಿಂದ ತುಂಬಿದ
**ಜಡಸಂಗ** – ನೀರಿನ ಸಹವಾಸ; ಮೂರ್ಖರ ಸಹವಾಸ
**ಜಡಸಂಸಕ್ತಿ** – ಮಂದಮತಿಗಳ ಸಹವಾಸ
**ಜಡಸ್ಥಿತಿ** – ಜಡಸ್ವಭಾವ;
**ಜಡಹೃದಯ** – ಮಂದಬುದ್ಧಿಯವನು
**ಜಡಾಕರ** – ಸಮುದ್ರ
**ಜಡಾಕರತ್ವ** – ನೀರಿಗೆ ಆಶ್ರಯವಾಗಿರುವುದು; ಮೂರ್ಖರಿಗೆ ಆಶ್ರಯ ನೀಡುವುದು
**ಜಡಾತ್ಮ** – ಜಡಹೃದಯ
**ಜಡಾವಸಥ** – ನೀರಿನ ಆಶ್ರಯವುಳ್ಳುದು; ಮೂರ್ಖರಿಗೆ ಆಶ್ರಯ ನೀಡಿರುವುದು
**ಜಡಾಶ(ಶ್ರ)ಯ** – ಜಡಾವಸಥ
**ಜಡಿ** – ಗದರಿಸು; ಹೊಡೆ; ಸೋನೆಮಳೆ
**ಜಡಿಪ** – ಹಕ್ಕಿಗಳ ಕೂಜನ
**ಜಡಿಪು** – ಜಡಿಪ; ಝಳಪಿಸು
**ಜಡಿವಳೆ** – ಸೋನೆಮಳೆ
**ಜಡೀಕೃತ** – ಮಂದಗತಿಯುಳ್ಳ
**ಜಡುಲ** – ಮೈಯೆಲ್ಲ ಮಚ್ಚೆಗಳುಳ್ಳವನು
**ಜಡೆ** – ಜಟೆ; ಹೆರಳು; ಬಿಳಲು
**ಜಡೆಗಟ್ಟು** – ಕೂದಲು ಗಂಟುಗಂಟಾಗು
**ಜಡೆಗೊಳ್** – ಜಡೆಗಟ್ಟು
**ಜಡೆದುಱುಂಬು** – ಜಡೆಗಟ್ಟಿದ ತುರುಬು
**ಜಡೆದುಱುಗಲ್** – ಜಡೆಗೊಂಚಲು
**ಜಡೆಮುಡಿ** – ಜಡೆಗಟ್ಟಿದ ಕೂದಲಿನ ತಲೆ
**ಜಡೆವಾಳ** – ಲಾಮಂಚ
**ಜತಿ** – ಯತಿ; ಪದ್ಯರಚನೆಯಲ್ಲಿನ ಉಸಿರ್ದಾಣ
**ಜತಿಗೊಡು** – ಶ್ರುತಿಗೂಡು

**ಜತಿಮೆಟ್ಟು** – ಲಯಾನುಸಾರಿ ಗತಿ
**ಜತು** – ಅರಗು
**ಜತುಕ** – ಇಂಗು; ಬಾವಲಿ
**ಜತುಗೃಹ** – ಅರಗಿನ ಮನೆ
**ಜತುಗೇಹ** – ಜತುಗೃಹ
**ಜತುರಸ** – ಕರಗಿದ ಅರಗು
**ಜತ್ರ(ತ್ತು)ಕ** – ಮೋಸ, ವಂಚನೆ
**ಜತ್ತಕುಱು** – ವಿನೋದ
**ಜತ್ತವಟ್ಟ** – ವರ್ತುಲವಾದ ಬೊಂಬೆಗಳನ್ನು ಕುಣಿಸುವ ಹಲಗೆಯ ಯಂತ್ರ
**ಜತ್ತುಕುಱಿಾಡು** – ವಿನೋದಮಾಡು
**ಜತ್ತುಳ** – ನೊರೆ
**ಜನ** – ಜನಗಳ ಸಮುದಾಯ
**ಜನಕ** – ಹುಟ್ಟಿಸುವವನು; ತಂದೆ; ವಿದೇಹ ರಾಜ
**ಜನಜನಿತ** – ಜನರಲ್ಲಿ ಹರಡಿರುವ, ಪ್ರಸಿದ್ಧವಾದ
**ಜನಾಂತ** – ನಾಡು, ದೇಶ
**ಜನಾತಿಶಯ** – ಜನರ ಮನಸ್ಸು
**ಜನತೆ** – ಜನಸಮುದಾಯ
**ಜನನ** – ಹುಟ್ಟು; ಉತ್ಪತ್ತಿಜನನಾಥ – ರಾಜ–
**ಜನನೀಚರ** – (ಜೈನ) ಹಿಂದಿನ ಜನ್ಮದಲ್ಲಿ ತಾಯಿಯಾಗಿದ್ದ
**ಜನನುತ** – ಜನರಿಂದ ಹೊಗಳಲ್ಪಟ್ಟ
**ಜನನೋತ್ಸವ** – ಮಗು ಹುಟ್ಟಿದ ಸಂಭ್ರಮ
**ಜನಪ** – ರಾಜ
**ಜನಪತಿ** – ರಾಜ
**ಜನಪದ** – ಜನಸಮುದಾಯ; ನಾಡು
**ಜನಪಾಲ** – ಜನರಕ್ಷಕ; ರಾಜ
**ಜನಪಾಲಾಗ್ರಣಿ** – ರಾಜಶ್ರೇಷ್ಠ
**ಜನಪ್ರವಾದ** – ಸುದ್ದಿ, ಸಮಾಚಾರ
**ಜನವಡೆ** – ಜನರ ಗುಂಪು
**ಜನವಶ್ಯಚೂರ್ಣ** – ಜನರನ್ನು ವಶೀಕರಣಗೊಳಿಸುವ ಪುಡಿ
**ಜನವಾದ** – ಕಿಂವದಂತಿ
**ಜನಸಂಕೀರ್ಣ** – ಜನಗಳ ಗುಂಪು
**ಜನಸಂಮರ್ದ** – ಜನಸಮೂಹ
**ಜನಸಂಮೋಹನ** – ಜನರನ್ನು ಮರುಳುಗೊಳಿಸುವ
**ಜನಾಂತ** – ನಿರ್ಜನಸ್ಥಳ; ಜನನಿಬಿಡಪ್ರಾಂತ
**ಜನಾಧಪ** – ರಾಜ
**ಜನಾನಂದನ** – ಜನರಿಗೆ ಸಂತೋಷ ತರುವವನು
**ಜನಾನುರಾಗ** – ಜನಗಳ ಪ್ರೀತಿ
**ಜನಾಪವಾದ** – ಜನರು ಹೊರೆಸುವ ಅಪವಾದ
**ಜನಾರ್ದನ** – ಜನರನ್ನು ಕೊಲ್ಲುವವನು; (ಜೈನ) ವಾಸುದೇವ; ಲಕ್ಷ್ಮಣ
**ಜನಾವನ** – ಜನರನ್ನು ಸಂತೋಷಪಡಿಸುವಂಥ(ದು)
**ಜನೇಶ** – ರಾಜ
**ಜನೇಶ್ವರ** – ರಾಜ
**ಜನೋಕ್ತಿ** – ಜನರ ಮಾತುಗಳು
**ಜನ್ನ** – ಯಜ್ಞ
**ಜನ್ನದಾರ** – ಜನಿವಾರ
**ಜನ್ನವಿ(ವ)ರ** – ಜನಿವಾರ
**ಜನ್ಮ** – ಯುದ್ಧ
**ಜನ್ಮಕಲ್ಯಾಣ** – (ಜೈನ) ಜಿನ ಪಂಚಕಲ್ಯಾಣಗಲಲ್ಲಿ ಒಂದು; ಜನಶಿಶು ಹುಟ್ಟಿದಾಗ ದೇವೇಂದ್ರನು ತನ್ನ ಪರಿಜನರೊಡನೆ ನಡೆಸುವ ಉತ್ಸವ
**ಜನ್ಮಕ್ಷೇತ್ರ** – ಹುಟ್ಟುವ ಜಾಗ; ಯೋನಿ
**ಜನ್ಮನಾಮ** – ಮಗು ಹುಟ್ಟಿದಾಗ ಇಡುವ ಹೆಸರು
**ಜನ್ಮನಿವಾಸ** – ಹುಟ್ಟಿದ ಜಾಗ
**ಜನ್ಮಭವನ** – ಹುಟ್ಟಿದ ಮನೆ
**ಜನ್ಮಭೀರು** – ಹುಟ್ಟಿಗೆ ಹದರುವವನು
**ಜನ್ಮಭೂಮಿ** – ಹುಟ್ಟಿದ ದೇಶ
**ಜನ್ಮಮಂದಿರ** – ಹುಟ್ಟಿದ ಮನೆ
**ಜನ್ಮಸದನ** – ಹುಟ್ಟಿದ ಮನೆ
**ಜನ್ಮಸವನ** – (ಜೈನ) ಜಿನನ ಪಂಚಕಲ್ಯಾಣಗಳಲ್ಲಿ ಒಂದು; ಜಿನಶಿಶು ಹುಟ್ಟಿದ ಕೂಡಲೆ ದೇವೇಂದ್ರನು ತನ್ನ ಪರಿಜನರೊಂದಿಗೆ ಆ ಮಗುವಿಗೆ ಮಾಡುವ ಅಭಿಷೇಕ
**ಜನ್ಮಸಾಫಲ್ಯ** – ಜೀವನದ ಸಾರ್ಥಕತೆ
**ಜನ್ಮಸಾರ್ಥಕ** – ಜನ್ಮಸಾಫಲ್ಯ
**ಜನ್ಮಸ್ನಪನ** – ಜನ್ಮಸವನ
**ಜನ್ಮಾಂತರ** – ಮತ್ತೊಂದು ಹುಟ್ಟು
**ಜನ್ಮಾಂತರಜ್ಞಾನ** – ಹಿಂದಿನ–ಮುಂದಿನ ಜನ್ಮಗಳ ಬಗೆಗಿನ ತಿಳಿವಳಿಕೆ–
**ಜನ್ಮಾಂತರವೈರ** – ಹಿಂದಿನ ಜನ್ಮದ ವೈರ
**ಜನ್ಮಾಂಧಕಿ** – ಹುಟ್ಟು ಕುರುಡಿ
**ಜನ್ಮಾನುಬಂಧಿ** – ಜನ್ಮಾಂತರದ ಸಂಬಂಧವುಳ್ಳವನು(ಳು)
**ಜನ್ಮಾಭಿಷವ** – ಜನ್ಮಸವನ
**ಜನ್ಮಾಭಿಷವಣ** – ಜನ್ಮಸವನ
**ಜನ್ಮಾಭಿಷೇಕ** – ಜನ್ಮಸವನ
**ಜನ್ಮಾವನಿ** – ಹುಟ್ಟಿದ ದೇಶ
**ಜನ್ಮಾವಳಿ** – ಭವಾವಳಿ; ಹುಟ್ಟಿನ ಪರಂಪರೆ
**ಜನ್ಮಾವಾಸ** – ಹುಟ್ಟಿದ ಮನೆ
**ಜನ್ಮಾಳಿ** – ಭವಾವಳಿ
**ಜನ್ಮೋತ್ಸವ** – ಮಗು ಹುಟ್ಟಿದ ಹಬ್ಬ; (ಜೈನ) ಜನ್ಮಕಲ್ಯಾಣ
**ಜನ್ಮಜನಕಮೋಹ** – ತಂದೆಮಕ್ಕಳ ನಡುವಣ ಪ್ರೀತಿ
**ಜನ್ಯೆ** – ಮದುವಣಗಿತ್ತಿಯ ಸೇವಕಿ
**ಜಪನ** – ಜಪ
**ಜಪಾ** – ದಾಸವಾಳ
**ಜಪಾಕ್ಷಿತಿಜ** – ದಾಸವಾಳದ ಗಿಡ
**ಜಪಾಪ್ರಸವ** – ದಾಸವಾಳದ ಹೂ
**ಜಪಾಪ್ರಸೂನ** – ಜಪಾಪ್ರಸವ
**ಜಪಿಸು** – ಜಪಮಾಡು

**ಜಪೋಪೇತ** – ಜಪದಿಂದ ಕೂಡಿದುದು; ದಾಸವಾಳದ ಹೂವಿನಿಂದ ಕುಡಿದುದು
**ಜಬ್ಬುಲಿ** – ದುರ್ಬಲ
**ಜಮದಾಡೆ** – ಕಠಾರಿ
**ಜಮಳ** – ಜೋಡಿ
**ಜಯ** – ಗೆಲವು
**ಜಯಂತ** – (ಜೈನ) ಹದಿನಾಲ್ಕು ವಿಮಾನಗಳಲ್ಲಿ ಒಂದು
**ಜಯಗಜ** – ರಾಮನ ಯುದ್ಧದ ಆನೆ
**ಜಯದ** – ಜಯಕಾರ ಮಾಡುವವನು
**ಜಯಧ್ವಜ** – ಗೆಲವನ್ನು ಸೂಚಿಸುವ ಬಾವುಟ
**ಜಯಧ್ವನಿ** – ಜಯಕಾರ
**ಜಯಧ್ವಾನ** – ಜಯಕಾರ
**ಜಯನಶಾಲಿಕೆ** – ಆಯುಧಾಗಾರ
**ಜಯನಶಾ(ಸಾ)ಲೆ** – ಜಯನಶಾಲಿಕೆ
**ಜಯನಿನದ** – ಜಯಧ್ವನಿ
**ಜಯಪತ್ರ** – ಗೆದ್ದವನಿಗೆ ಕೊಡುವ ದಾಖಲೆಪತ್ರ
**ಜಯಪ್ರಮೋದ** – ಗೆಲವಿನ ಸಂತೋಷ
**ಜಯಯಾತ್ರೆ** – ಜೈತ್ರಯಾತ್ರೆ, ದಂಡಯಾತ್ರೆ
**ಜಯಲಕ್ಷ್ಮಿ** – ಗೆಲವಿನ ಅಧಿದೇವತೆ
**ಜಯವಂತ** – ಜಯಶಾಲಿ
**ಜಯವಾದ** – ಜಯಕಾರ
**ಜಯಶಾಲಿ** – ಗೆದ್ದವನು
**ಜಯಶೀಲ** – ಗೆಲ್ಲುವ ಸ್ವಭಾವದವನು
**ಜಯಾವಸಥ** – ವಿಜಯಕ್ಕೆ ನೆಲೆಯಾದವನು
**ಜಯಾಶೀರ್ಘೋಷ** – ಜಯವಾಗಲೆಂದು ಮಾಡುವ ಆಶೀರ್ವಾದ
**ಜಯೋದ್ದಾಮ** – ಗೆಲವಿನ ಘನತೆ ಪಡೆದವನು
**ಜರ** – ಜ್ವರ; ಮುಪ್ಪು
**ಜರಗು** – ಚಿನ್ನದ ಹುಡಿ ಬೆರೆತ ಮಣ್ಣು
**ಜರ(ಲ)ಗಂಕರ್ಚು** – ಮಣ್ಣಿನಲ್ಲಿರುವ ಚಿನ್ನದ ಕಣಗಳನ್ನು ಬೇರ್ಪಡಿಸಲು ಅದನ್ನು ತೊಳೆಯುವುದು
**ಜರಚ್ಛದನ** – ಜರತ್+ಛದನ, ಹಣ್ಣೆಲೆ
**ಜರಠ** – ಜೀರ್ಣಗೊಂಡ
**ಜರಡು** – ಕವಚ
**ಜರತ್** – ವಯಸ್ಸಾದ, ಮುದಿ
**ಜರತಿ** – ಮುದುಕಿ
**ಜರತ್ಕಂಚುಕಿ** – ವಯಸ್ಸಾದ ಕಂಚುಕಿ; ಮುದಿ ಹಾವು
**ಜರದ್ದ್ರುಮ** – ಜರತ್+ದ್ರುಮ, ಜೀರ್ಣವಾದ ಮರ
**ಜರದ್ವಧು** – ಮುದುಕಿ
**ಜರಾಯು** – ಗರ್ಭಕೋಶ
**ಜರಾವಿಭೇದ** – ಮುಪ್ಪಿನಿಂದ ಬದಲಾದವನು
**ಜರಾಶಿಥಿಲ** – ಮುಪ್ಪಿನಿಂದ ದೇಹಸೌಷ್ಠವ ಸಡಿಲಾದ
**ಜರಿ** – (ಝರೀ), ಗಿರಿನದಿ; ಕುಸಿ
**ಜರಿವೊನಲ್** – ಬೆಟ್ಟದಿಂದ ಇಳಿದು ಬರುವ ಜಲಧಾರೆ
**ಜರೆ** – ಮುಪ್ಪು
**ಜರ್ಕು** – ಉಗುರಿನಿಂದ ಗಾಯಮಾಡು
**ಜರ್ಗುವೀಟಿಲ್** – ಕುಸಿದು ಬೀಳು
**ಜರ್ಜರ** – ಛಿದ್ರವಾದ; ಶಿಥಿಲಗೊಂಡ
**ಜರ್ಜರಿತ** – ಛಿದ್ರಗೊಂಡ, ಚುಚ್ಚಿ ಗಾಯಮಾಡುವ
**ಜರ್ಜರಿತಾಂಗ** – ಛಿದ್ರಗೊಂಡ ದೇಹವುಳ್ಳವನು
**ಜರ್ಜರಿಸು** – ಅಜ್ಜುಗುಜ್ಜಾಗಿಸು
**ಜರ್ವು** – ಹುಬ್ಬು ಹಾರಿಸು; ಗದರಿಸು; ಹುಬ್ಬಿನ ಚಲನೆ; ಗದರಿಕೆ
**ಜಲ** – ನೀರು; ಹಿಮ
**ಜಲಂಧರ** – ನೀರನ್ನು ಹೊರುವವನು; ಒಬ್ಬ ರಾಕ್ಷಸ
**ಜಲಕಣಿಕೆ** – ನೀರಿನ ಹನಿ
**ಜಲಕರಿ** – ನೀರಾನೆ
**ಜಲಕೇಳಿ** – ನೀರಾಟ
**ಜಲಕ್ಕನೆ** – ಶುಚಿಯಾಗಿ; ಸ್ಪಷ್ಟವಾಗಿ; ತಟಕ್ಕನೆ
**ಜಲಕ್ರೀಡೆ** – ಜಲಕೇಳಿ
**ಜಲಕ್ಲಿನ್ನ** – ಒದ್ದೆಯಾದ
**ಜಲ(ಳ)ಖಾತಿಕೆ** – ನೀರು ತುಂಬಿದ ಕಮದಕ
**ಜಲಗಜ** – ಜಲಕರಿ
**ಜಲಚರ** – ನೀರಿನಲ್ಲಿ ವಾಸಿಸುವ ಪ್ರಾಣಿ
**ಜಲಜ** – ತಾವರೆ; ಶಂ; ಕಪ್ಪೆಚಿಪ್ಪು
**ಜಲಜಲಿಸು** – ಜುಳುಜುಳು ಸದ್ದುಮಾಡು
**ಜಲಜಾತವಿರೋಧಿ** – ಕಮಲದ ಶತ್ರು, ಚ<ದ್ರ
**ಜಲಜಾತಸಖ** – ಕಮಲಮಿತ್ರ, ಸೂರ್ಯ
**ಜಲಜಿನಿ** – ತಾವರೆಗಳುಳ್ಳದ್ದು, ಕೊಳ
**ಜಲ(ಳ)ದ** – ಮೋಡ
**ಜಲದನಿಕಾಯ** – ಸುಗಂಧದ ಹುಲ್ಲು, ಭದ್ರಮುಸ್ತೆ
**ಜಲದಮಾರ್ಗ** – ಮೋಡಗಳ ದಾರಿ, ಆಕಾಶ
**ಜಲದವರ್ಣ** – ಮೇಘವರ್ಣ
**ಜಲದಾಗಮ** – ಮೋಡ ಬರುವ ಕಾಲ, ಮಳೆಗಾಲ
**ಜಲ(ಳ)ದಾಧ್ವ** – ಜಲದಮಾರ್ಗ
**ಜಲ(ಳ)ದಾನ** – ನೀರಿನ ತರ್ಪಣ
**ಜಲ(ಳ)ದಾನಕ್ರಿಯೆ** – ಜಲ(ಳ)ದಾನ
**ಜಲದಾವಳಿ** – ಮೋಡಗಳ ಸಮೂಹ
**ಜಲದುರ್ಗ** – ನೀರಿನ ನಡುವೆ ರಚಿತವಾದ ಕೋಟೆ
**ಜಲ(ಳ)ದೇವತೆ** – ನೀರಿನ ಅಭಿಮಾನಿ ದೇವತೆ
**ಜಲ(ಳ)ಧರ** – ಮೋಡ
**ಜಲ(ಳ)ಧರಪಥ** – ಜಲದಮಾರ್ಗ
**ಜಲ(ಳ)ಧರಮಾರ್ಗ** – ಜಲ(ಳ)ಧರಪಥ
**ಜಲ(ಳಧಾರೆ** – ನೀರಿನ ಧಾರೆ
**ಜಲ(ಳ)ಧಿ** – ಸಮುದ್ರ
**ಜಲಧಿತಲ್ಪ** – ವಿಷ್ಣು
**ಜಲಧಿಪ** – ವರುಣ
**ಜಲನಿಧಿ** – ಸಮುದ್ರ
**ಜಲನಿಧಿತಲ್ಪ** – ಜಲಧಿತಲ್ಪ
**ಜಲನಿಲಯ** – ನೀರೇ ಮನೆಯಾದವನು

**ಜಲ(ಳ)ನೀಳಿಕೆ** – ಪಾಚಿ, ಹಾವಸೆ
**ಜಲಪಕ್ಷಿ** – ನೀರ ಹಕ್ಕಿ
**ಜಲಪ್ರಸರ** – ನೀರಿನ ವಿಸ್ತಾರ
**ಜಲಬಿಂದು** – ನೀರಿನ ಹನಿ
**ಜಲಬುದ್ಬುದ** – ನೀರಿನ ಗುಳ್ಳೆ
**ಜಲಭೃಚ್ಚಾಪ** – ಕಾಮನಬಿಲ್ಲು
**ಜಲಭೃತ್ತು** – ಮೋಡ
**ಜಲ(ಳ)ಮಂತ್ರ** – ಜಲಸ್ತಂಭನ ಮಂತ್ರ
**ಜಲಮಾನುಷಿ** – ಜಲಕನ್ನಿಕೆ
**ಜಲಯಂತ್ರ** – ಪಿಚಕಾರಿ
**ಜಲಯಾತ್ರೆ** – ಸಮುದ್ರಪ್ರಯಾಣ
**ಜಲಯುದ್ಧ** – ನೀರನ್ನು ಚಿಮ್ಮುವ ಕಾಳಗ
**ಜಲರಾಶಿ** – ಸಮುದ್ರ
**ಜಲರಾಶಿಪ್ರಭವೆ** – ಸಮುದ್ರದಲ್ಲಿ ಹುಟ್ಟಿದವಳು, ಲಕ್ಷ್ಮಿ
**ಜಲರುಹ** – ನೀರಲ್ಲಿ ಹುಟ್ಟಿದುದು, ತಾವರೆ
**ಜಲರುಹನಾಭ** – ತಾವರೆಯನ್ನು ನಾಭಿಯಲ್ಲಿ ಪಡೆದವನು, ವಿಷ್ಣು
**ಜಲರುಹರಿಪು** – ತಾವರೆಯ ಶತ್ರು, ಚಂದ್ರ
**ಜಲರುಹೋದರ** – ಜಲರುಹನಾಭ ಜಲಲವ – ನೀರಿನ ಹನಿ–
**ಜಲಲವ** – ನೀರಿನ ಹನಿ
**ಜಲಲಿಪಿ** – ನೀರ ಮೇಲೆ ಬರೆದದ್ದು, ನಶ್ವರ
**ಜಲವಾಹ** – ಮೋಡ
**ಜಲವಿಕಳ** – ನೀರು ಬತ್ತಿರುವುದು
**ಜಲವಿಹಂಗ** – ನೀರು ಹಕ್ಕಿ
**ಜಲವ್ಯಾಲ(ಳ)** – ನೀರುಹಾವು
**ಜಲಶಯನ** – ವಿಷ್ಣು
**ಜಲಶೀಕರ** – ತುಂತುರು ಹನಿ
**ಜಲ(ಳ)ಸೇಕ** – ನೀರನ್ನು ಚಿಮುಕಿಸುವುದು
**ಜಲಾಂಜಲಿ(ಳಿ)** – ಜಲತರ್ಪಣ
**ಜಲಾಕರ** – ಕೊಳ
**ಜಲಾರ್ದ್ರ** – ನೀರಲ್ಲಿ ತೊಯ್ದ
**ಜಲಾವರ್ತ** – ನೀರಿನ ಸುಳಿ
**ಜಲಾಶಯ** – ಕೊಳ
**ಜಲೂ(ಳೂ)ಕ** – ಜಿಗಣೆ
**ಜಲೇ(ಳೇ)ಶ** – ವರುಣ
**ಜಲೌಘ** – ನೀರರಾಶಿ
**ಜಲ್ಪ** – ಮಾತಾಡು; ಹರಟೆ
**ಜಲ್ಪಿತ** – ಹೇಳಿದ; ಮಾತು
**ಜಲ್ಲನೆ** – ತಟಕ್ಕನೆ
**ಜಲ್ಲಮಲ** – ಮೈಕೊಳೆ
**ಜಲ್ಲಳ** – ಜರಡಿ
**ಜಲ್ಲಿಮಿಗ** – ಚಮರೀಮೃಗ
**ಜವ** – ಯಮ; ವೇಗ; ಸಾಮರ್ಥ್ಯ
**ಜವಂಗಿಡಿಸು** – ಶಕ್ತಿಗುಂದಿಸು
**ಜವಂಗುಂದಿಸು** – ಜವಂಗಿಡಿಸು
**ಜವಂಗೆಡು** – ಸಕ್ತಿಗುಂದು
**ಜವಂಜವ** – ಹುಟ್ಟುಸಾವುಗಳ ಆವರ್ತನೆ, ಸಂಸಾರ
**ಜವಂಬೆಱು** – ವೇಗಗೊಳ್ಳು
**ಜವಜವಾಗು** – ದುರ್ಬಲಗೊಳ್ಳು
**ಜವನ** – ವೇಗ
**ಜವನಿಕೆ** – ತೆರೆ
**ಜವನಿಕೆಗಳೆ** – ತೆರೆ ಸರಿಸು
**ಜವಪ್ರಸರ** – ವೇಗ ಹೆಚ್ಚುವುದು
**ಜವಳ** – ಬಟ್ಟೆ; ಜೋಡಿ
**ಜವಳಗಟ್ಟು** – ಎರಡನ್ನು ಸೇರಿಸಿ ಕಟ್ಟು
**ಜವಳಗಹಳೆ**– ಜೊಡಿ ಕಹಳೆ
**ಜವಳಗೊಡೆ** – ಜೋಡಿ ಕೊಡೆ
**ಜವಳವೆಱಿ** – ಇಬ್ಬರು ಚಂದ್ರರು
**ಜವುಗೇಱಿಸು** – ಬಗ್ಗಡವಾಗಿ ಮಾಡು
**ಜವೆ** – ಗೋಧಿ
**ಜವ್ವನ** – ಜೌವನ, ಹರಯ
**ಜವ್ವನಂನೆಱಿ** – ಯೌವನ ತುಂಬಿಕೊ
**ಜವ್ವನಂಬಡೆ** – ಯೌವನವನ್ನು ಹೊಂದು
**ಜವ್ವನಿ** – ಹರಯದವಳು
**ಜವ್ವನಿಗ** – ಹರಯದವನು
**ಜವ್ವನಿಗೆ** – ಜವ್ವನಿ
**ಜವ್ವನೆ** – ಜವ್ವನಿ
**ಜಸ** – ಯಶಸ್ಸು, ಕೀರ್ತಿ
**ಜಸಂಬಡೆ** – ಕೀರ್ತಿಯನ್ನು ಪಡೆ
**ಜಸವೆಱು** – ಜಸಂಬಡೆ
**ಜಹ್ನುಜಾಂಬು** – ಗಂಗೆಯ ನೀರು
**ಜಹ್ನುಜೆ** – ಗಂಗೆ
**ಜಳಕನಾಗು** – ಪ್ರಸಿದ್ಧವಾಗು; ಪ್ರಕಟಗೊಳ್ಳು
**ಜಳಂಬ** – ಝಳಂಬ, ಮೇಲ್ಮುಸುಕು
**ಜಳಕಂಬೊಗಿಸು** – ಸ್ನಾನಮಾಡಿಸು
**ಜಳದಳಾಕ್ಷಿ** – ಕಮಲದಳದಂತಹ ಕಣ್ಣುಳ್ಳವಳು
**ಜಳಜಭವಾಂಡ** – ಬ್ರಹ್ಮಾಂಡ
**ಜಳದ** – ಮೋಡ
**ಜಳದವೃಂದ** – ಮೋಡಗಳ ಸಮೂಹ
**ಜಳದಾಧ್ವ** – ಆಕಾಶ
**ಜಳದಾನ** – ತರ್ಪಣ
**ಜಳದೆ** – ನೀರಲ್ಲಿ ನೆನೆಸಿದ ಬಿಸಣಿಗೆ; ಬಾಳದ ಬೇರಿನ ಬೀಸಣಿಗೆ
**ಜಳಪಾನ** – ನೀರು ಕುಡಿಯುವುದು
**ಜಳಪ್ಲವ** – ಪ್ರವಾಹ
**ಜಳಮನುಷ್ಯ** – ನೀರುಮನುಷ್ಯ
**ಜಳರುಹಕಾಂಡ** – ತಾವರೆಯ ದಂಟು
**ಜಳರುಹಪತ್ರ** – ಕಮಲದಳ
**ಜಳವಟ್ಟಿಗೆ** – ಒಂದು ಆಭರಣ
**ಜಳವಾಸ** – ನೀರಲ್ಲಿ ವಾಸಿಸುವುದು
**ಜಳವಾಯಸ** – ನೀರ ಕಾಗೆ
**ಜಳವಿಹಗ** – ನೀರುಹಕ್ಕಿ

**ಜಳವಿಹಗಿ** – ಹೆಣ್ಣು ನೀರುಹಕ್ಕಿ
**ಜಳಸ್ತಂಭಮಂತ್ರ** – ನೀರಲ್ಲಿದ್ದೂ ತೊಂದರೆಯಾಗದಂತೆ ತಡೆಯುವ ವಿದ್ಯೆ
**ಜಳಾವಗಾಹ** – ನೀರಲ್ಲಿ ಮುಳುಗಿ ಮೀಯುವುದು
**ಜಳೂಕ** – ಜಿಗಣೆ
**ಜಱಿಗೊಳ್** – ನಿಂದೆಗೊಳಗಾಗು
**ಜಱುಚು** – ಹರಟೆ ಹೊಡೆ; ಜಂಬ ಕೊಚ್ಚು
**ಜಱಿ** – ನಿಂದಿಸು
**ಜಾಂಗಲ** – ಬರಡುಭೂಮಿ; ಮಾಂಸ
**ಜಾಂಗಳವಿದ್ಯೆ** – ವಿಷವೈದ್ಯ
**ಜಾಂಗುಲ(ಳ)** – ಜಾಂಗಳಿವಿದ್ಯೆ
**ಜಾಂಡಲಕೆ** – ಒಂದು ಸಸ್ಯ
**ಜಾಂಬವ** – ಚಿನ್ನ; ಜಾಂಬವನಿಗೆ ಸಂಬಂಧಿಸಿದ; ಸಮುದ್ರ
**ಜಾಂಬೂನದ** – ಚಿನ್ನ
**ಜಾಗ** – ಮರಕತ; ಶುಭಕಾರ್ಯದಲ್ಲಿ ಅಂಕುರಾರ್ಪಣದ ಅಂಗವಾಗಿ ಪಾತ್ರೆಯಲ್ಲಿ ಬೆಳೆಯುವ ಪೈರು
**ಜಾಗರ** – ಎಚ್ಚರ; ಜಾಗ; ಮೊಳೆತ ಪೈರು
**ಜಾಗರೂಕ** – ಎಚ್ಚರಿಕೆಯ ಸ್ವಭಾವದ
**ಜಾಜು** – (ಧಾತು) ಕೆಂಪಾದ ಕಲ್ಲು, ಕಾವಿ ಕಲ್ಲು
**ಜಾಜುವೆಟ್ಟ** – ಕೆಂಪುಕಲ್ಲಿನ ಬೆಟ್ಟ
**ಜಾಜ್ವಲ್ಯಮಾನ** – ಹೊಳೆಯುತ್ತಿರುವ
**ಜಾಣ್** – ಬುದ್ಧಿವಂತಿಕೆ
**ಜಾಣ** – ಬುದ್ಧಿವಂತ
**ಜಾಣೆ** – ಬುದ್ಧಿವಂತೆ
**ಜಾಣೊಡೆಯ** – ಜಾಣ್‌ಗೆ ಒಡೆಯ, ಬುದ್ಧಿವಂತ
**ಜಾಣ್ಗೂಡು** – ಬುದ್ದಿವಮತಿಕೆಯನ್ನು ಹೊಂದು
**ಜಾಣ್ಗೆಡು** – ಬುದ್ಧಿಗೆಡು
**ಜಾಣ್ಗೊಳ್** – ಜಾಣ್ಗೂಡು
**ಜಾಣ್ನುಡಿ** – ಜಾಣತನದ ನುಡಿ
**ಜಾಣ್ನುಡಿಕಾರ್ತಿ** – ಜಾಣತನದ ಮಾತನ್ನಾಡುವವಳು
**ಜಾಣ್ತನ** – ಜಾಣತನ
**ಜಾಣ್ಪಡೆ** – ಜಾಣತನವನ್ನು ಹೊಂದು
**ಜಾಣ್ಬಿಡು** – ದಡ್ಡತನದಿಂದ ಕೂಡು
**ಜಾಣ್ಮಾತು** – ಜಾಣತನದ ಮಾತು
**ಜಾಣ್ಮೆ**– ಜಾಣತನ
**ಜಾತಕರ್ಮ** – ಮಗು ಹುಟ್ಟಿದಾಗ ಮಾಡುವ ಕರ್ಮ; ಷೋಡಶಸಂಸ್ಕಾರಗಳಲ್ಲಿ ಒಂದು
**ಜಾತನಿರ್ವೇದ** – ವಿರಕ್ತಿ ಹೊಂದಿದವನು
**ಜಾತಪ್ರಿಯ** – ದಯಾವಂತ
**ಜಾತರೂಪ** – ಬೆತ್ತಲೆ; ದಿಗಂಬರ ಜೈನರ ಸನ್ಯಾಸ; ಚಿನ್ನ
**ಜಾತರೂಪಧರ** – ದಿಗಂಬರ ಸನ್ಯಾಸಿ
**ಜಾತರೂಪವಿಧಿ** – ದಿಗಂಬರದೀಕ್ಷೆ
**ಜಾತವೇದ** – ಅಗ್ನಿ
**ಜಾತವೇದೋಜಾತೆ** – ಅಗ್ನಿಯಲ್ಲಿ ಹುಟ್ಟಿದವಳು, ದ್ರೌಪದಿ
**ಜಾತಹರ್ಷ** – ಸಂತೋಷ ಹೊಂದಿದವನು
**ಜಾತಿ** – ಹುಟ್ಟು; ಕುಲ; ಜಾಜಿಯ ಗಿಡ
**ಜಾತಿಕ್ಷತ್ರಿಯ** – ಹುಟ್ಟಿನಿಂದ ಕ್ಷತ್ರಿಯ
**ಜಾತಿಜಾಂಗಣ** – ಸತ್ಕುಲಜರ ಮನೆಯ ಪರಿಸರ
**ಜಾತಿಬಧಿರ** – ಹುಟ್ಟು ಕಿವುಡ
**ಜಾತಿಬೆಳ್** – ಹುಟ್ಟು ದಡ್ಡ
**ಜಾತಿಭಂಗ** – ತನ್ನ ಜಾತಿಯ ನಾಶ
**ಜಾತಿಮದ** – ಹುಟ್ಟಿನ ಗರ್ವ; ತನ್ನ ಜಾತಿಯ ಬಗೆಗಿನ ಗರ್ವ
**ಜಾತಿಸಂಕರ** – ಜಾತಿಗಳ ಕಲಬೆರಕೆ
**ಜಾತಿಸಂಮೋಹನ** – ಜಾತಿಯ ಮೇಲಿನ ಮಮತೆ
**ಜಾತಿಸ್ಮರ** – ಹಿಂದಿನ ಜನ್ಮದ ನೆನಪುಳ್ಳವನು
**ಜಾತಿಸ್ಮರತೆ** – ಹಿಂದಿನ ಜನ್ಮದ ನೆನಪು
**ಜಾತಿಸ್ಮರತ್ವ** – ಜಾತಿಸ್ಮರತೆ
**ಜಾತಿಸ್ಮರೆ** – ಹಿಂದಿನ ಜನ್ಮದ ನೆನಪುಳ್ಳವಳು
**ಜಾತಿ(ೀ)ಪತ್ರೆ** – ಜಾಯಿಕಾಯಿ
**ಜಾತಿ(ೀ)ಫಲ** – ಜಾಯಿಕಾಯಿ
**ಜಾತೀಲತೆ** – ಜಾಜಿಯ ಬಳ್ಳಿ
**ಜಾತೋತ್ಸವ** – ಹುಟ್ಟುಹಬ್ಬ
**ಜಾತ್ಯಂತರ** – ಬೇರೆ ಜಾತಿ
**ಜಾತ್ಯಂಧ(ಕ)** – ಹುಟ್ಟುಕುರುಡ
**ಜಾತ್ಯಂಧಕಿ** – ಹುಟ್ಟುಗುರುಡಿ
**ಜಾತ್ಯಂಧೆ** – ಜಾತ್ಯಂಧಕಿ
**ಜಾತ್ಯಶ್ವ** – ಒಳ್ಳೆ ತಳಿಯ ಕುದುರೆ
**ಜಾತ್ರೆಯೋಗು** – ಪಯಣಮಾಡು
**ಜಾದಿ** – (ಜಾತಿ) ಜಾಜಿ
**ಜಾದಿನ ಸೇಲೆ** – ಕಾವಿಬಣ್ಣದ ಬಟ್ಟೆ
**ಜಾದು** – ಕಾವಿಬಣ್ಣ; ಜಾಜು, ಗೈರಿಕ ಧಾತು
**ಜಾದುಗಲ್** – ಜಾಜು
**ಜಾನ** – ಧ್ಯಾನ; ಚಿಂತನೆ
**ಜಾನಿಸು** – ಧ್ಯಾನಮಾಡು
**ಜಾನು** – ಮೊಣಕಾಲು
**ಜಾನುಚಂಕ್ರಮಣ** – ಅಂಬೆಗಾಲಿಕ್ಕುವುದು
**ಜಾನುದಘ್ನ** – ಮೊಳಕಾಲು ಮುಟ್ಟುವ
**ಜಾಮಾತೃ** – ಮಗಳ ಗಂಡ
**ಜಾಮಿಸು** – ಸುಡು; ಶವಸಂಸ್ಕಾರಮಾಡು
**ಜಾಯಾಜೀವ** – ಹೆಂಡತಿಯ ಸಂಪಾದನೆಯನ್ನು ಆಧರಿಸಿರುವವನು; ನಟ
**ಜಾಯಾಜೀವಿ** – ನಟ
**ಜಾಯಿಲ** – ನಾಯಿ; (ಯಾಯಿನ್) ಜಾತಿ ಕುದುರೆ
**ಜಾಯೆ** – ಹೆಂಡತಿ
**ಜಾರ** – ಹಾದರಿಗ
**ಜಾರಜಾತ** – ಜಾರನಿಂದ ಹುಟ್ಟಿದವನು
**ಜಾರನಾರಿ** – ಹಾದರಗಿತ್ತಿ
**ಜಾರಸ್ತ್ರೀ** – ಜಾರನಾರಿ

**ಜಾರೆ** – ಜಾರನಾರಿ
**ಜಾಲ** – ಬಲೆ
**ಜಾಲಕ** – ಬಲೆ
**ಜಲಗಾರ್ತಿ** – ಬೆಸ್ತ ಹೆಂಗಸು
**ಜಾಲಗಾಱ** – ಬೆಸ್ತ
**ಜಾವ** – (ಯಾಮ) ಮೂರು ಗಂಟೆಯ ಅವಧಿ; ಪ್ರಹರ
**ಜಾವಜ್ಜೀವ** – ಜೀವವಿರುವವರೆಗೆ
**ಜಾವಮಿ(ವಿ)ರ್** – ಕಾವಲಾಗಿರು
**ಜಾವಳ** – ಸಾಮಾನ್ಯ
**ಜಾಹ್ನವಿ** – ಜಹ್ನುಋಷಿಯ ಮಗಳು; ಗಂಗೆ
**ಜಾಹ್ನವೀಧರ** – ಜಾಹ್ನವಿಯನ್ನು ಧರಿಸಿದವನು, ಶಿವ
**ಜಾಲತಿಯೋಗು** – ಜರ್ಜರಿತಗೊಳ್ಳು
**ಜಾಳಮಾರ್ಗ** – ಕಿಟಕಿ
**ಜಾಳರಂಬೋಗು** – ಜರ್ಜರಿತಗೊಳ್ಳು
**ಜಾಳರಿಗೆ** – ಜಾಲರಿಯಿರುವ ಕಿಟಕಿ
**ಜಾಳರಿಗೆಪೋಗು** – ಜಾಳರಂಬೋಗು
**ಜಾಳಾಂಧರ** – ಜಾಳಿಗೆ
**ಜಾಳಸು** – ಹೋಗು
**ಜಾಱು** – ನುಣುಚಿಕೊ; ಹಿಮ್ಮೆಟ್ಟುವಿಕೆ; ಮಾಯೆ
**ಜಾಱುಂಗಲ್** – ಜಾರಿಕೆಯುಳ್ಳ ಕಲ್ಲು
**ಜಾಡಿಗೆ** – ಉಡುಗೆ, ಬಟ್ಟೆ
**ಜಿಂಕರ** – ಒಂದು ಬಗೆಯ ವಾದ್ಯ
**ಜಿಂಕುವರಿ** – (ನೊಣಗಳು) ಗುಂಯ್‌ಗುಟ್ಟು
**ಜಿಂಜಿ** – ಒಂದು ಅನುಕರಣ ಶಬ್ದ
**ಜಿಗಿಲ್** – ಅಂಟಿಕೊಳ್ಳು
**ಜಿಗೀಷು** – ಜಯದ ಅಪೇಕ್ಷೆಯುಳ್ಳವನು
**ಜಿಗುಱಿ** – ಜಿಗಣೆ
**ಜಿಘಾಂಸು** – ಕೊಲ್ಲುವ ಇಚ್ಛೆಯುಳ್ಳವನು, ವೈರಿ
**ಜಿತಕಾಮ** – ಕಾಮವನ್ನು ಗೆದ್ದವನು, ಶಿವ; ಅರ್ಹಂತ
**ಜಿತತ್ರಿತಾಪ** – ಅಧಿದೈವಿಕ, ಅಧಿಭೌತಿಕ, ಅಧ್ಯಾತ್ಮಿಕ ಎಂಬ ಮೂರು ತಾಪಗಳನ್ನು ಗೆದ್ದವನು
**ಜಿತಶತ್ರು** – ಶತ್ರುಗಳನ್ನು ಗೆದ್ದವನು
**ಜಿತಸ್ಮಯ** – ಅರಿಷಡ್ವರ್ಗವನ್ನು ಗೆದ್ದವನು
**ಜಿತಾಂತಕ** – ಯಮನನ್ನು ಗೆದ್ದವನು, ಶಿವ
**ಜಿತಾಕ್ಷರ** – ಮೋಕ್ಷವನ್ನು ಗೆದ್ದವನು
**ಜಿತಾತ್ಮ** – ಮನಸ್ಸನ್ನು ಗೆದ್ದವನು
**ಜಿತೇಂದ್ರಿಯತ್ವ** – ಇಂದ್ರಿಯ ನಿಗ್ರಹ
**ಜಿತ್ವರ** – ಜಯಶಾಲಿ
**ಜಿನ** – ಗೆದ್ದವನು; ಸ್ಥಿರವಾದ; ಅರ್ಹಂತ; ಬುದ್ಧ
**ಜಿನಗೃಹ** – ಬಸದಿ
**ಜಿನಗೇಹ** – ಜಿನಗೃಹ
**ಜಿನಚರಿತ** – ತೀರ್ಥಂಕರರ ಕತೆ
**ಜಿನಚೈತ್ಯ** – ಜಿನಗೃಹ
**ಜಿನದೀಕ್ಷಿತ** – ಜಿನದೀಕ್ಷೆ ಪಡೆದವನು
**ಜಿನದೀಕ್ಷೆ** – ಜೈನ ಸನ್ಯಾಸದೀಕ್ಷೆ
**ಜಿನಧರ್ಮ** – ಜೈನಧರ್ಮ
**ಜಿನನಾಥ** – ತೀರ್ಥಂಕರ
**ಜಿನನಿಕೇತ** – ಜಿನಗೃಹ
**ಜಿನನುತಿ** – ಜಿನನ ಸ್ತುತಿ
**ಜಿನಪ(ತಿ)** – ಜಿನನಾಥ
**ಜಿನಪ್ರತಿಮೆ** – ಜಿನವಿಗ್ರಹ
**ಜಿನಬಿಂಬ** – ಜಿನಪ್ರತಿಮೆ
**ಜಿನಭವನ** – ಜಿನಗೃಹ
**ಜಿನಮಂದಿರ** – ಜಿನಗೃಹ
**ಜಿನಮತ** – ಜೈನಮತ
**ಜಿನಮತಾರುಚಿ** – ಜಿನಮತ+ಅರುಚಿ, ಜಿನಮತದ್ವೇಷ
**ಜಿನಮಹಾಕಲ್ಯಾಣ** – ತೀರ್ಥಂಕರನಿಗೆ ಮಾಡುವ ಪಂಚಕಲ್ಯಾಣಗಳು
**ಜಿನಮಾರ್ಗ** – ಜಿನಮತ
**ಜಿನಮುದ್ರೆ** – ಜಿನನ ರೂಪ
**ಜಿನಮುನಿ** – ಜೈನಸನ್ಯಾಸಿ
**ಜಿನಯತಿ** – ಜಿನಮುನಿ
**ಜಿನರಾತ್ರಿ** – ಆದಿ ತೀರ್ಥಂಕರನು ಮೋಕ್ಷ ಪಡೆದ ರಾತ್ರಿ
**ಜಿನರೂಪ** – (ಜೈನ) ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು
**ಜಿನವರ್ತನ** – ಜೈನಮಾರ್ಗಾನುಸರಣೆ
**ಜಿನವೃಂದಾರಕ** – ತೀರ್ಥಂಕರ
**ಜಿನಶಾಸನ** – ಜೈನಸಿದ್ಧಾಂತ
**ಜಿನಸಪರ್ಯೆ** – ಜಿನಪೂಜೆ
**ಜಿನಸಮಯ** – ಜೈನಧರ್ಮ
**ಜಿನಸಮಯಿ** – ಜೈನಮತದವನು
**ಜಿನಸವನ** – ಜಿನನ ಅಭಿಷೇಕ
**ಜಿನಾಂಬಿಕೆ** – ತೀರ್ಥಂಕರನ ತಾಯಿ
**ಜಿನಾಗಮ** – ಜಿನಸಮಯ
**ಜಿನಾಗಾರ** – ಜಿನಗೃಹ
**ಜಿನಾಭಿಷವಣ** – ಜಿನಸವನ
**ಜಿನಾರ್ಭಕ** – ಜಿನಶಿಶು
**ಜಿನಾಲಯ** – ಜಿನಗೃಹ
**ಜಿನಾವಸಥ** – ಜಿನಗೃಹ
**ಜಿನಾವಾಸ** – ಜಿನಗೃಹ
**ಜಿನಿಗಿಸು** – ನಿಶ್ಶೇಷಗೊಳಿಸು
**ಜಿನುಂಗು** – ತೊಟ್ಟಿಡು
**ಜಿನೇಂದ್ರ** – ತೀರ್ಥಂಕರ
**ಜಿನ್ನ** – ಜೀರ್ಣ
**ಜಿವುಳ** – ಚಿಗುಳಿ
**ಜಿಷ್ಣು** – ಗೆದ್ದವನು; ದೇವೇಂದ್ರ
**ಜಿಷ್ಣುಚಾಪ** – ಇಂದ್ರಧನುಸ್ಸು; ಕಾಮನ ಬಿಲ್ಲು
**ಜಿಹಣತನ** – ಗಾಯನ, ಹಾಡುಗಾರಿಕೆ
**ಜಿಹ್ಮ** – ವಕ್ರ
**ಜಿಹ್ಮಗಪತಿ** – ಹಾವು; ಆದಿಶೇಷ
**ಜೀಂಕರಿಸು** – ಹೊಗಳು, ಕೊಂಡಾಡು

**ಜೀಮೂತ** – ಮೋಡ
**ಜೀಮೂತಪಥ** – ಆಕಾಶ
**ಜೀಯ** – ಒಡೆಯ
**ಜೀರ(ರಿ)ಗೆಯೊಕ್ಕಲ್** – ಜೀರಿಗೆಕಾಳನ್ನು ಗಿಡದಿಂದ ಬೇರ್ಪಡಿಸುವುದು
**ಜೀರಗೆಯೊಕ್ಕಲ್ಮಾಡು** – ಸದೆಬಡಿ
**ಜೀರ್ಗರೆ** – ಜೀರ್ ಎಂದು ಸದ್ದುಮಾಡು
**ಜೀರಿಗೆಬೆಲ್ಲ** – ಮದುವೆಯಲ್ಲಿ ಗಂಡುಹೆಣ್ಣುಗಳು ಪರಸ್ಪರರ ತಲೆಯ ಮೇಲೆ ಜೀರಿಗೆ ಮತ್ತು ಬೆಲ್ಲ ಹಾಕುವ ಶಾಸ್ತ್ರ
**ಜೀ(ಚೀ)ರ್ಕೊಳವಿ** – ಪಿಚಕಾರಿ; ನೀರು ಚಿಮ್ಮುವ ಕೊಳವೆ
**ಜೀರ್ಣ** – ಜರ್ಜರಿತಗೊಂಡ
**ಜೀರ್ಣಚ್ಛದ** – ಹಣ್ಣೆಲೆ
**ಜೀರ್ಣೀಸು** – ಕೊಲೆ; ಅರಗಿಸು
**ಜೀವ** – ಜೀವವಿರುವುದು, ಜಂತು
**ಜೀವಂಗಿಡಿಸು** – ಸಾಮರ್ಥ್ಯಗುಂದುವಂತೆ ಮಾಡು
**ಜೀವಂಜೀವ(ಕ)** – ಪಾರಿವಾಳ
**ಜೀವಂಬಡೆ** – ಚೇತರಿಕೆಯನ್ನು ಹೊಂದು
**ಜೀವಂಬೊಯ್** – ಚೇತರಿಕೆಯನ್ನು ತುಂಬು
**ಜೀವಹ** – ಜೈನಸನ್ಯಾಸಿ
**ಜೀವಘಾತ** – ಜೀವ ತೆಗೆಯುವುದು
**ಜೀವತತ್ತ್ವ**– (ಜೈನ) ಏಳು ತತ್ವಗಳಲಿ ಮೊದಲನೆಯದು
**ಜೀವತ್ರಾಣ** – ಜೀವಿಗಳನ್ನು ಕಾಪಾಡುವ(ವನು)
**ಜೀವದಯಾಷ್ಟಮಿ** – (ಜೈನ) ಒಂದು ವ್ರತ; ಆಶ್ವಯುಜ ಶುಕ್ಲ ಅಷ್ಟಮಿಯ ದಿನ ಮಾಡುವ ವ್ರತ
**ಜೀವದಯೆ** – ಎಲ್ಲ ಜೀವಿಗಳ ಬಗ್ಗೆ ತೋರುವ ಕರುಣೆ
**ಜೀವಧನ** – ಪಶುಸಂಪತ್ತು
**ಜೀವನ** – ಬದುಕು; ನೀರು
**ಜೀವನಧಿ** – ಜೀವನ+ಧಿ, ಸಮುದ್ರ
**ಜೀವನಾರ್ಥ** – ಬಾಳು
**ಜೀವನಿವಹ** – ಜೀವಿಗಳ ಸಮೂಹ
**ಜೀವನ್ಮೃತ(ಕ)** – ಜೀವಿಸಿದ್ದರೂ ಸತ್ತಂತಿರುವವನು
**ಜೀವನ್ಮೃತರು** – ದರಿದ್ರ, ವ್ಯಾಧಿಗ್ರಸ್ತ, ಮೂರ್ಖ, ಪ್ರವಾಸೀ, ನಿತ್ಯಸೇವಕ
**ಜೀವಪದಾರ್ಥ** – (ಜೈನ) ಒಂಬತ್ತು ಪದಾರ್ಥಗಳಲ್ಲಿ ಮೊದಲನೆಯದು; ಜೀವ ಎಂಬ ತತ್ವ
**ಜೀವರಕ್ಕೆ** – ಕವಚ
**ಜೀವರತ್ನ** – (ಜೈನ) ಚಕ್ರವರ್ತಿಗೆ ದೊರೆಯುವ ಏಳು ರತ್ನಗಳು: ಚಕ್ರ, ರಥ, ಸ್ತ್ರೀ, ನಿಧಿ, ರತ್ನಗಳು, ಅಶ್ವ, ಗಜ; ಮತ್ತೊಂದು ಪಟ್ಟಿ: ಚಕ್ರ, ಹಸ್ತಿ, ಅಶ್ವ, ಮಣಿ, ಸ್ತ್ರೀ, ಗೃಹಪತಿ, ಪರಿನಾಯಕ; ಮತ್ತೂ ಒಂದು ಪಟ್ಟಿ: ಸೇನಾಪತಿ, ಸ್ಥಪತಿ, ಗೃಹಪತಿ, ಪುರೋಹಿತ, ಗಜ, ವಾಜಿ, ಸ್ತ್ರೀ
**ಜೀವವಧೆ** – ಕೊಲ್ಲುವುದು
**ಜೀವಸಂಭಾವನೆ** – ಜೀವದ ಪರಿಕಲ್ಪನೆ
**ಜೀವಸಿದ್ಧಿ** – (ಜೈನ) ಜೀವನ ಅಸ್ತಿತ್ವವನ್ನು ಸಾಧಾರವಾಗಿ ಪ್ರತಿಪಾದಿಸುವುದು
**ಜೀವಹತಿ** – ಜೀವವಧೆ
**ಜೀವಾಕರ್ಷಣ** – ಜೀವವನ್ನು ಸೆಳೆಯುವುದು
**ಜೀವಾತು** – ಪ್ರಾಣ ಉಳಿಸುವ ಔಷಧಿ, ಸಂಜೀವನಿ
**ಜೀವಾಸ್ತಿಕಾಯ** – ಪಂಚಾಸ್ತಿಕಾಯಗಳಲ್ಲಿ ಒಂದು
**ಜೀವಿತ** – ವೃತ್ತಿ, ಸಂಬಳ
**ಜೀವಿತಂಬಡೆ** – ಸಂಬಳ ಪಡೆ
**ಜೀವಿತಾತ್ಯಯ** – ಜೀವ ಬಿಡುವುದು
**ಜೀವಿತಾಶಯ** – ಸಮುದ್ರ
**ಜೀವಿತೇಶ** – ಜೀವನದ ಒಡೆಯ
**ಜೀವಿತೇಶ್ವರ** – ಜೀವಿತೇಶ
**ಜೀವಿಸು** – ಬದುಕು
**ಜೀವಿಸುಹ** – ಬದುಕುವಿಕೆ
**ಜೀವೆ** – ಬದುಕು
**ಜೀೞ್** – ಜೀರೆಂದು ಸದ್ದುಮಾಡು
**ಜೀೞ್ಜೀೞ್** – ಕಿರಿಚು, ಕೀರು; ಸಶಬ್ದವಾಗಿ ಮೇಲೇಳು
**ಜುಂಕ** – ಒಂದು ಬಗೆಯ ವಾದ್ಯ
**ಜುಗುಮ** – ಜೋಡಿ
**ಜುದ್ದ** – ಯುದ್ಧ
**ಜೂಂಟ** – ಮೋಸಗಾರ
**ಜೂಗ** – ಒಂದು ಬಗೆಯ ನಾಯಿ
**ಜೂಗಾಯಿ** – ಒಂದು ಬಗೆಯ ತಿಂಡಿ
**ಜೂಟ** – ಜಡೆಗಟ್ಟಿದ ಕೂದಲು
**ಜೂಟಬಂಧ** – ಜಡೆಗಳ ಕಟ್ಟು
**ಜೂದಾಡು** – ಜೂಜಾಡು
**ಜೂದು** – (ದ್ಯೂತ) ಜೂಜು
**ಜೂದುಂಗಾೞ್** – ಜೂಜುಗಾರ
**ಜೂಬುಮಾಡು** – ಹೆದರಿಸು
**ಜೂಳಗಿಂಡಿ** – ಸೊಂಡಿಲಾಕಾರದ ನಳಿಗೆಯುಳ್ಳ ಗಿಂಡಿ
**ಜೂಳೆಯ** – ಮುತ್ತಿನ ಬೈತಲೆ ಆಭರಣ
**ಜೃಂಭಣ** – ಆಕಳಿಕೆ
**ಜೃಂಭಾಸ್ತ್ರ** – ಒಂದು ದಿವ್ಯಾಸ್ತ್ರ
**ಜೃಂಭಿತ** – ಜೃಂಭಣ
**ಜೃಂಭಿನಿ** – ಬೇಕಾದಾಗ ಕಾಣಿಸಿಕೊಳ್ಳುವ, ಕಣ್ಮರೆಯಾಗುವ ಒಂದು ಚೋರ ವಿದ್ಯೆ
**ಜೆಟ್ಟಿಕೋೞಿ** – ಪಂದ್ಯದ ಕೋಳಿ
**ಜೆಟ್ಟೆ** – ಜ್ಯೇಷ್ಠೆ
**ಜೆಟ್ಟಿಗ** – ಬಲಶಾಲಿ
**ಜೇಂಕರಿಸು** – ಪ್ರಶಂಸೆಮಾಡು
**ಜೇಗ(ಂ)ಟೆ** – ಜಾಗಟೆ

**ಜೇಡ** – ನೇಕಾರ; ಜೇಡನ ಹುಳು
**ಜೇನ್** – ಜೇನುತುಪ್ಪ, ಹುಳು
**ಜೇನಿಡು** – ಜೇನುಗಳು ಗೂಡು ಕಟ್ಟು
**ಜೇನುತುಪ್ಪ** – ಜೇನುಗೂಡಲ್ಲಿ ಜೇನುಹುಳುಗಳು ಕೂಡಿಡುವ ಹೂವಿನ ಮಕರಂದ
**ಜೇನುಪು(ವು)ಟ್ಟಿ** – ಜೇನುಗೂಡು
**ಜೇನೆಯ್** – ಜೇನುತುಪ್ಪ
**ಜೇನ್ವಳೆ** – ಜೇನಿನ ಮಳೆ
**ಜೇವಣ** – ಊಟ
**ಜೇವಣಶಾ(ಸಾ)ಲೆ** – ಊಟದ ಮನೆ
**ಜೇವೆ** – ತಂಬೂರಿಯ ಜೀವಾಳ
**ಜೇವೊ(ವ)ಡೆ** – ಬಿಲ್ಲಿನ ಠೇಂಕಾರ ಮಾಡು
**ಜೇವೊಡೆಗೆಯ್** – ಜೇವೊಡೆ
**ಜೇವೊಡೆವೊಯ್** – ಜೇವೊಡೆ
**ಜೈತ್ರ** – ಜಯವನ್ನು ಪಡೆದ
**ಜೈತ್ರಧ್ವಜ** – ಗೆಲವಿನ ಸಂಕೇತವಾದ ಬಾವುಟ
**ಜೈತ್ರಯಾತ್ರೆ** – ದಿಗ್ವಿಜಯಯಾತ್ರೆ
**ಜೈತ್ರಾಸ್ತ್ರ** – ಗೆಲವನ್ನು ಸಾಧಿಸುವ ಅಸ್ತ್ರ
**ಜೈನ** – ಜಿನನಿಗೆ ಸಂಬಂಧಿಸಿದ; ಜನಿಮತಾನುಯಾಯಿ
**ಜೈನಗೃಹ** – ಬಸದಿ
**ಜೈನಗೇಹ** – ಜೈನಗೃಹ
**ಜೈನಜನ** – ಜೈನಮತಾವಲಂಬಿಗಳು
**ಜೈನತನ** – ಜಿನಮತಾನುಸರಣೆ
**ಜೈನದೀಕ್ಷಿತ** – ಜೈನದೀಕ್ಷೆ ಪಡೆದವನು
**ಜೈನಬಿಂಬ** – ಜಿನನ ಮೂರ್ತಿ
**ಜೈನಶಾಸನ** – ಜಿನಶಾಸನ
**ಜೈನಸಮಯ** – ಜೈನಮತ
**ಜೈನಸ್ತವ** – ಜಿನಸ್ತುತಿ
**ಜೈನಾಗಮ** – ಜೈನ ಸಿದ್ಧಾಂತ
**ಜೈನಾಗಮವಿದ** – ಜೈನಸಿದ್ಧಾಂತದಲ್ಲಿ ಪರಿಣತ
**ಜೈನಾಲಯ** – ಬಸದಿ
**ಜೈನೋಕ್ತಿ** – ಜಿನನ ನುಡಿ
**ಜೈವಾತೃಕ** – ದೀರ್ಘಾಯುಷಿ; ಚಂದ್ರ
**ಜೊಂಗುಳ** – ಮೂರ್ಛೆ
**ಜೊಂಡೆಗರ್ಬು** – ರಸಭರಿತ ಕಬ್ಬು
**ಜೊಂಡೇಳ್** – ಮುದ್ದೆಯಾಗು
**ಜೊಂಪ** – ಗೊಂಚಲು
**ಜೊಂಪಿಸು** – ತೂಕಡಿಸು
**ಜೊತ್ತು** – ರಾಶಿ
**ಜೊತ್ತಿಸು** – ಮರುಳು ಮಾಡು
**ಜೊನ್ನ** – (ಜ್ಯೋತ್ಸ್ನಾ) ಬೆಳುದಿಂಗಳು
**ಜೊನ್ನಪಾಡಿವ** – ಶುಕ್ಲಪಕ್ಷದ ಪಾಡ್ಯಮಿ
**ಜೊನ್ನವಕ್ಕಿ** – ಬೆಳುದಿಂಗಳನ್ನು ಕುಡಿಯುವ ಹಕ್ಕಿ, ಚಕೋರ
**ಜೊಮ್ಮನೆ** – ಬಳಲಿಕೆಯಿಂದ
**ಜೊಮ್ಮನೆವೋಗು** – ಆಯಾಸದಿಂದ ಮೈಮರೆ
**ಜೊಮ್ಮೇಱು** – ಜೊಮ್ಮನೆವೋಗು
**ಜೋಗ** – (ಯೋಗ) ತಪಸ್ಸು; ದೋಣಿ; ಒಂದು ಬಗೆಯ ವಸ್ತ್ರ
**ಜೋಗ(ಗು)** – (ಯೋಗ) ಧ್ಯಾನ; ಒಂದು ಬಗೆಯ ಬಟ್ಟೆ
**ಜೋಗಂಬೋಗು** – ಮೈಮರೆ
**ಜೋಗವಟ್ಟಿಗೆ** – (ಯೋಗಪಟ್ಟಿಕಾ) ಯೋಗಿಯು ಸುತ್ತಿಕೊಳ್ಳುವ ಬಟ್ಟೆ
**ಜೋಗವಾವುಗೆ** – ಜೋಗಿಯ ಹಾವುಗೆ
**ಜೋಗಿ** – (ಯೋಗಿ) ತಪಸ್ವಿ
**ಜೋಗಿಣಿ** – (ಯೋಗಿನಿ) – ತಪಸ್ವಿನಿ–
**ಜೋಗಂಗೊಳ್** – ತಪಸ್ಸು ಮಾಡು
**ಜೋಗುಳ** – ಲಾಲಿ ಹಾಡು
**ಜೋಗುಳಂಬಡು** – ಜೋಗುಳ ಹಾಡು
**ಜೋಗೆತ್ತು** – ಜವುಗಾಗು, ನೀರಿನಿಂದ ತುಂಬು
**ಜೋಡ** – ಹಾದರಿಗ
**ಜೋಡಾಗು** – ಜೊತೆಯಾಗು
**ಜೋಡಾಡು** – ಹಾದರಮಾಡು
**ಜೋಡು** – ಜೊತೆ; ಸಮಾನ; ಅಂಗರಕ್ಷೆ
**ಜೋಡುವಕ್ಕಿ** – ಚಕ್ರವಾಕ
**ಜೋಡೆ** – ಹಾದರಗಿತ್ತಿ
**ಜೋಡೆಗೆಯ್ತು** – ಹಾದರ
**ಜೋತಿಷ್ಕ** – (ಜೈನ) ಭವನವಾಸಿ, ವ್ಯಂತರ, ಜೋತಿಷ್ಕ, ಕಲ್ಪವಾಸಿಗಳೆಂಬ ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಗುಂಪು; ಜ್ಯೋತಿಷ್ಯಲೋಕದಲ್ಲಿನ ಸೂರ್ಯಚಂದ್ರ ಮೊದಲಾದ ದೇವತೆಗಳು
**ಜೋದ** – (ಯೋಧ) ಸೈನಿಕ; ಮಾವತಿಗ
**ಜೋನೆಗವಳ** – ಯವನರಿಂದ ತಯಾರಾದ ಬಟ್ಟೆ
**ಜೋಯಿಸ** – ಜ್ಯೋತಿಷ್ಯ, ಜ್ಯೋತಿಷಿ
**ಜೋಯಿಸಿಗ** – ಜ್ಯೋತಿಷಿ
**ಜೋಲ್** – ಜೋತುಬೀಳು
**ಜೋವೇಱು** – ಜೋಮು ಹಿಡಿ, ಮರಗಟ್ಟು
**ಜೋಹ** – ಚೋಹ, ವೇಷ; ನಟ
**ಜೋಳ** – ಒಂದು ಬಗೆಯ ಧಾನ್ಯ, ಅನ್ನದ ಋಣ
**ಜೋಳಕ್ಕೆ ತಪ್ಪು** – ಅನ್ನದ ಋಣ ತೀರಿಸದಿರು
**ಜೋಳವಾಳಿ** – ಜೋಳದ ಪಾಳಿ, ಅನ್ನದ ಋಣ ತೀರಿಸಲು ಮಾಡುವ ಕರ್ತವ್ಯ; ಕರ್ತವ್ಯ ಮಾಡುವವನು
**ಜೋಳಿಗಟ್ಟ** – ಜೊತೆಗಟ್ಟು
**ಜೋಳಿದೆಗೆ** – ಜೋಡಿಮಾಡು
**ಜೋಳಿಸು** – ಕೂಡಿಸು
**ಜೌ(ಜೋ)ಗು** – ಸದಾ ತೇವವಾಗಿರುವ ಪ್ರದೇಶ
**ಜ್ಞಾತವ್ಯ** – ತಿಳಿಯಬೇಕಾದ
**ಜ್ಞಾತಿಬಹಿಷ್ಕೃತ** – ದಾಯಾದಿ(ಬಂಧು)ಗಳಿಂದ ಬಹಿಷ್ಕೃತನಾದವನು

**ಜ್ಞಾನ** – ಅರಿವು; ಆತ್ಮಜ್ಞಾನ; (ಜೈನ) ಕುಮತಿ, ಕುಶ್ರುತ, ವಿಭಂಗ, ಮತಿ, ಶ್ರುತ, ಅವಧಿ, ಮನಃಪರ್ಯಾಯ ಎಂದು ಎಂಟು ಬಗೆ; ಮತಿ, ಶ್ರುತ, ಅವಧಿ, ಮನಃಪರ್ಯಾಯ, ಕೇವಲ ಎಂಬ ಜ್ಞಾನಗಳು
**ಜ್ಞಾನಧನ** – ತಿಳಿವನ್ನೇ ಸಂಪತ್ತಾಗಿ ಉಳ್ಳವನು
**ಜ್ಞಾನಮಯ** – ಜ್ಞಾನದಿಂದ ಕೂಡಿರುವುದು; ಪಂಚಕೋಶಗಳಲ್ಲಿ ಒಂದು
**ಜ್ಞಾನರ್ಧಿಸಂಪನ್ನ** – ಬಹುಶ್ರುತ
**ಜ್ಞಾನವೃದ್ಧ** – ಜ್ಞಾನದಲ್ಲಿ ಹಿರಿಯ
**ಜ್ಞಾನಾವರಣ** – (ಜೈನ) ಜ್ಞಾನಕ್ಕೆ ಪ್ರತಿಬಂಧಕವಾದ ಕರ್ಮ
**ಜ್ಞಾನಾವರಣಪಂಚಕ** – (ಜೈನ) ಮತಿಇಆನ, ಶ್ರುತಿಜ್ಞಾನ, ಅವಧಿಜ್ಞಾನ, ಮನಃಪರ್ಯಾಯಜ್ಞಾನ ಮತ್ತು ಕೇವಲಜ್ಞಾನ ಎಂಬ ಐದು ಜ್ಞಾನಾವರಣಗಳು
**ಜ್ಞಾನಾವರಣೀಯ** – (ಜೈನ) ಎಂಟು ಬಗೆಯ ಘಾತಿಕರ್ಮಗಳಲ್ಲಿ ಒಂದು; ಜ್ಞಾನವ್ನು ಮರೆಮಾಡುವ ಕರ್ಮ
**ಜ್ಞಾನಿ** – ತಿಳಿದವನು
**ಜ್ಞಾನೋಪಯೋಗ** – (ಜೈನ) ಷೋಡಶ ಭಾವನೆಗಳಲ್ಲಿ ಒಂದು
**ಜ್ಞಾಯಕ** – ತಿಳಿದುಕೊಳ್ಳತಕ್ಕವನು
**ಜ್ಞೇಯ** – ತಿಳಿದುಕೊಳ್ಳಬೇಕಾದ
**ಜ್ಯಾ** – ಬಿಲ್ಲಿನ ಹೆದೆ; ಭೂಮಿ
**ಜ್ಯಾಕಿಣ** – ಬಿಲ್ಲಿನ ಹೆದೆ ತಗುಲಿ ಆಗುವ ದಡ್ಡು
**ಜ್ಯಾಘಾತ** – ಬಿಲ್ಲಿನ ಹೆದೆಯ ಪೆಟ್ಟು
**ಜ್ಯಾಪ್ರತಿಪಾಳನ** – ಭೂಮಿಯ ರಕ್ಷಣೆ
**ಜ್ಯಾಮಂಡಲ** – ಭೂಮಂಡಲ
**ಜ್ಯಾಯ** – ಜ್ಯೇಷ್ಠ, ಅಗ್ರಜ
**ಜ್ಯಾಯಾಂಸ** – ಹಿರಿಯ
**ಜ್ಯಾರವ** – ಬಿಲ್ಲಿನ ಹೆದೆಯ ಠೇಂಕಾರ
**ಜ್ಯಾರವಂಗೆಯ್** – ಬಿಲಿನಿಂದ ಠೇಂಕಾರಮಡು
**ಜ್ಯಾರಾವ** – ಠೇಂಕಾರ
**ಜ್ಯಾಲೇಖೆ** – ಬಿಲ್ಲಿನ ಹೆದೆಯ ದಾರ
**ಜ್ಯೋತಿಃಪ್ರಭೆ** – ನಕ್ಷತ್ರಗಳ ಬೆಳಕು
**ಜ್ಯೋತಿರಂಗ** – (ಜೈನ) ದಶವಿಧ ಕಲ್ಪವೃಕ್ಷಗಳಲ್ಲಿ ಒಂದು; ಬೆಳಕನ್ನು ನೀಡುವ ಕಲ್ಪವೃಕ್ಷ
**ಜ್ಯೋತಿರಿಂಗಣ** – ಮಿಣುಕುಹುಳು
**ಜ್ಯೋತಿರ್ಜ್ಞಾನ** – ಜ್ಯೋತಿಷ್ಯದ ತಿಳಿವಳಿಕೆ
**ಜ್ಯೋತಿರ್ಮಂಡಲ** – ಆಕಾಶಕಾಯಗಳ ಸಮೂಹ
**ಜ್ಯೋತಿರ್ಲತೆ** – ಬೆಳಕಿನ ಬಳ್ಳಿ
**ಜ್ಯೋತಿರ್ವಿಮಾನ** – (ಜೈನ) ಜ್ಯೋತಿಷ್ಕದೇವತೆಗಳ ವಿಮಾನ
**ಜ್ಯೋತಿಷಿ** – ಜೋಯಿಸ; (ಜೈನ) ಒಂದು ದೇವತಾವರ್ಗ
**ಜ್ಯೋತಿಷ್ಕ** – (ಜೈನ) ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳಲ್ಲಿರುವ ಒಂದು ದೇವತಾವರ್ಗ
ಜ್ಯೋತಿಷ್ಕಾಮರ – ಜ್ಯೋತಿಷ್ಕ –
**ಜ್ಯೋತಿಪ್ಪ್ರಭ** – ನಕ್ಷತ್ರಗಳ ಬೆಳಕನ್ನುಳ್ಳ
**ಜ್ಯೋತಿಸು** – ಬೆಳಗಿಸು
**ಜ್ಯೋತಿಸ್ತೃಣ** – ಬೆಳಕು ಚೆಲ್ಲುವ ಹುಲ್ಲು
**ಜ್ಯೋತ್ಸ್ನ(ತ್ಸ್ನೆ) – ಬೆಳುದಿಂಗಳು–**
**ಜ್ಯೋತ್ಸ್ನಾವಿಲಾಸ** – ಬೆಳುದಿಂಗಳ ವೈಭವ
**ಜ್ವರಿತ** – ಜ್ವರಪೀಡಿತ
**ಜ್ವಳನಸಖ** – ಬೆಂಕಿಯ ಗೆಳೆಯ, ಗಾಳಿ
**ಜ್ವಾಳ** – ಬೆಂಕಿ

## ಝ

**ಝಂಕಟ** – ಒಂದು ವಾದ್ಯ
**ಝಂಕಾರ** – ಝಂ ಎಂಬ ಸದ್ದು
**ಝಂಕಾರಿತ** – ಝಂಕಾರವನ್ನು ಮಾಡುವ
**ಝಂಕೃತ** – ಝಂಕಾರ
**ಝಂಕೃತಿ** – ಝಂಕಾರ
**ಝಂಪಾಳ** – ಮೇಲ್ಮುಸುಕು
**ಝಂಪಾಳ** – ಡೇರೆ
**ಝಣಂಬ** – ಮೇಲುಹೊದಿಕೆ
**ಝಣನ್ನೂಪುರ** – ಝಣತ್+ನೂಪುರ, ಝಣಝಣ ಎಂದು ಶಬ್ದಮಾಡುವ ಕಡಗ
**ಝಮ್ಮಗೆ** – ಒಂದು ಅನುಕರಣ ಶಬ್ದ
**ಝಲ್ಲರಿ** – ಒಂದು ಚರ್ಮವಾದ್ಯ; ಕಂಚಿನ ತಾಳ; ಜರಡಿ
**ಝಷ** – ಮೀನು
**ಝಷಕೇತನ** – ಮೀನಿನ ಗುರುತುಳ್ಳ ಧ್ವಜವುಳ್ಳವನು, ಮನ್ಮಥ
**ಝಷಕೇತು** – ಝಷಕೇತನ
**ಝಷನೇತ್ರ** – ಮೀನಿನ ಆಕಾರದ ಕಣ್ಣು
**ಝಷಪತಾಕೆ** – ಮೀನಿನ ಗುರುತುಳ್ಳ ಧ್ವಜ
**ಝಳಂಬಂ** – ಮೇಲು ಮುಸುಕು, ಹೊದಿಕೆ
**ಝಾಳೆಯಂಗೊಳ್** – ತೆಗೆದುಕೊ; ಕಿತ್ತುಕೊ
**ಝೇಂಕರಿಸು** – ಆರ್ಭಟಿಸು
–
**ಟ–**
–
**ಟಂಕ** – ಬೆಟ್ಟದ ಇಳಿಜಾರು; ಕುದುರೆ ಲಾಳ; ಕಲ್ಲು ಕೆತ್ತುವ ಚಾಣ
**ಟಂಕಾರ** – ಬಿಲ್ಲಿನ ಠೇಂಕಾರ
**ಟಂಕಾರಿಸು** – ಟಂಕದಿಂದ ಕೆತ್ತು
**ಟಂಕಾಹತಿ** – ಚಾಣದ ಪೆಟ್ಟು
**ಟಂಕೃತಿ** – ಟಂಕಾರ
**ಟಂಕೋತ್ಕೀರ್ಣ** – ಚಾಣದಿಂದ ಕೆತ್ತಿದುದು

**ಟಕಾರಿ** – ತೋರಣ
**ಟಕ್ಕ** – ಠಕ್ಕ, ಮೋಸಗಾರ
**ಟಕ್ಕು** – ಠಕ್ಕು, ಮೋಸ
**ಟಕ್ಕನಿಕ್ಕು** – ಎಚ್ಚರ ತಪ್ಪಿಸುವ ಮದ್ದನ್ನಿಡು
**ಟಕ್ಕುದೋಱು** – ವಂಚನೆ ಮಡು
**ಟಕ್ಕುವಗೆ** – ಮೋಸದ ಬುದ್ಧಿ
**ಟಮಾಳ** – ಮೋಸ
**ಟಱಟಱ** – ಒಂದು ಅನುಕರಣ ಶಬ್ದ
**ಟಾಠಡಾಢಣ** – ಟವರ್ಗದ ಅಕ್ಷರಗಳು; ಅವುಗಳಂತೆ ನಿಶ್ಚಿತ
**ಟೆಂಟಣಿಸು** – ದ್ವೇಷಿಸು
**ಟೆಪ್ಪರ** – ಕುದುರೆಯದರಂತಹ ಪುಟನೆಗೆತ
**ಟೆಬ್ಬರಿಸು** – ಚಲನೆಯಿಲ್ಲದಂತೆ ಮಾಡು
**ಟೊಣೆ** – ಭೇದಿಸು; ಕಣ್ತಪ್ಪಿಸು; ವಂಚಿಸು
**ಟೊಪ್ಪರ** – ಟೋಪಿ, ಶಿರಸ್ತ್ರಾಣ

## ಠ

**ಠಕ್ಕವಿದ್ಯೆ** – ಮೋಸದ ಸ್ವಭಾವ
**ಠಕ್ಕಿಕ್ಕು** – ಮೋಸಗೊಳಿಸು
**ಠಕ್ಕುಗಾರ್ತಿ** – ಮೋಸಗಾತಿ
**ಠಕ್ಕುಗೊಳ್** – ಮೋಸಕ್ಕೊಳಗಾಗು
**ಠಕ್ಕುಮತ** – ಮೋಸದ ಮತ
**ಠಕ್ಕುವೀೞ್** – ಮಂಕುಬಡಿ; ಮೋಸಕ್ಕೊಳಗಾಗು
**ಠಣ(ಂ)ಕರಿಸು** – ಠಣ್ ಎಂದು ಶಬ್ದಮಾಡು
**ಠಣತ್ಕಾರ** – ಠಣ್ಣಣ್ ಎಂಬ ಗಂಟೆಯ ಶಬ್ದ
**ಠವಣಿಸು** – ಸೇರಿಸುಠವಣೆ – ವೀಣಾವಾದನದ ಒಂದು ಕ್ರಮ–
**ಠಾಣಾಂತರ** – ತಾಣಾಂತರ, ಪಾಳೆಯ
**ಠಾಯ** – ಆಲಾಪನೆಯಲ್ಲಿನ ಮಧ್ಯಲಯ; ಮಲ್ಲಯುದ್ಧದ ಒಂದು ವರಸೆ
**ಠೀವಿ** – ಗತ್ತು
**ಠೊಪ್ಪರ** – ರಭಸ

## ಡ

**ಡಂಗ** – ಸುಂಕವಸೂಲಿಗಾಗಿರುವ ಕಾವಲು ಕಟ್ಟೆ
**ಡಂಗುರಂಬೊಯ್(ಹೊಯ್)** – ತಮಟೆಯ ಶಬ್ದದೊಂದಿಗೆ ಪ್ರಕಟಪಡಿಸು
**ಡಂಗುರಂಬೊಯ್ಲು** – ಡಂಗುರ ಸಾರಿಸು
**ಡಂಗುರಿಸು** – ಡಂಗುರಂಬೊಯ್
**ಡಂಗೆ** – ದೊಣ್ಣೆ
**ಡಂಗೆಗೊಳ್** – ಹಟಹಿಡಿ
**ಡಂಗೆಯಂಗೊಳ್** – ಡಂಗೆಗೊಳ್
**ಡಂಬ** – ತೋರಿಕೆ; ಮೋಸ
**ಡಂಬಿಸು** – ಮೋಸಮಾಡು
**ಡಂಬರ** – ಚೆಲುವು
**ಡಂಭತನ** – ಸೋಗು
**ಡಕ್ಕೆ** – ಒಂದು ವಾದ್ಯ
**ಡಕ್ಕೆವಾಜಿಸು** – ಡಕ್ಕೆಯನ್ನು ಹೊಡೆ
**ಡಕ್ಕೆವಾಯ್** – ಡಕ್ಕೆಯಂತೆ ಶಬ್ದಮಾಡು
**ಡಗೆ** – ಮೋಸ
**ಡಮ(ವ)ರುಕ(ಗ)** – ಒಂದು ಚರ್ಮವಾದ್ಯ
**ಡಮರುಧ್ವಾನ** – ಡಮರುಗದ ಸದ್ದು
**ಡವಕೆ** – ಪೀಕದಾನಿ, ಕಾಳಾಂಜಿ; ಡಮರುಗ ಎಂಬ ಒಂದು ವಾದ್ಯ
**ಡವಕೆವಾಜಿಸು** – ಡವಕೆಯನ್ನು ಹೊಡೆ
**ಡವಕೆವಿಡಿ** – ಪೀಕದಾನಿಯನ್ನು ಒಡ್ಡು
**ಡಾಕಿಣಿ(ನಿ)** – ರಕ್ಕಸಿ; ರಕ್ಕಸಿಯ ಕತ್ತಿ
**ಡಾಣೆ** – ದೊಣ್ಣೆ; ಒಂದು ಆಯುಧ, ಗದೆ
**ಡಾವರ** – ಪೀಡೆ, ಗಲಭೆ
**ಡಾಮರ** – ಕ್ಷಾಮ; ಪೀಡೆ
**ಡಾವರಿಗ** – ಸೂರೆಗಾರ
**ಡಾಹ** – (ದಾಹ) ಸುಡುವಿಕೆ
**ಡಾಳ** – ಕಾಂತಿ
**ಡಾಳಿಸು** – ಚಾಮರ ಬೀಸು; ಪಗಡೆಯ ದಾಳ ಹಾಕು
**ಡಾಳೆ** – ಗಯ್ಯಾಳಿ
**ಡಾಳೆವೆಂಡತಿ** – ಗಯ್ಯಾಳಿ ಹೆಣ್ಣು
**ಡಿಂಗರ** – ಸೇವಕ
**ಡಿಂಡಿಮ** – ಢಕ್ಕೆ ಎಂಬ ಒಂದು ಚರ್ಮವಾದ್ಯ
**ಡಿಂಡೀರ** – ನೊರೆ
**ಡಿಂಡೀರಪಾಂಡುರ** – ನೊರೆಯಂತೆ ಬೆಳ್ಳಗಿನ
**ಡಿಂಡೀರಪಿಂಡ** – ನೊರೆಯ ಮುದ್ದೆ, ರಾಶಿ
**ಡಿಳ್ಳ** – ಭೀತಿ
**ಡಿಳ್ಳವಾಱು** – ಎದೆ ಡವಡವಗುಟ್ಟು
**ಡುಂಡುಕ** – ತಿಗಣೆ
**ಡುಂಡುಚಿ** – ಒಂದು ಚರ್ಮವಾದ್ಯ
**ಡುಂಡುಭ** – ಇರ್ತಲೆಯ ಹಾವು
**ಡುಱುಕೆನ್** – ಗುಟುರು ಹಾಕು
**ಡೆಂಕಣಿ** – ಯುದ್ಧದಲ್ಲಿ ಕಲ್ಲು ಎಸೆಯುವ ಒಂದು ಯಂತ್ರ
**ಡೆಂಕೆ** – ಜಂತೆ
**ಡೆಂಚೆಯ** – ಪಗಡೆ ದಾಳ
**ಡೆಳ್ಳೆ** – ಬಿದಿರಿನ ಬುಟ್ಟಿ
**ಡೊಂಕಣಿ** – ಸಬಳ; ಕೋಟೆಯ ಬತೇರಿ
**ಡೊಂಕಣಿಕಾಱ** – ಸಬಳ ಹಿಡಿದು ಹೋರಾಡುವವನು
**ಡೊಂಬ** – ದೊಂಬ
**ಡೊಂಬರಕೊಡಗ** – ಕೊಲ್ಲಟಿಗರು ಆಟಕ್ಕಾಗಿ ಬಳಸುವ ಕೋತಿ; ಇತರರು ಹೇಳಿದಂತೆ ಕೇಳುವವನು
**ಡೊಂಬವಿದ್ದೆ** – ದೊಂಬರ ವಿದ್ಯೆ; ಯಕ್ಷಿಣಿ;

ವಂಚನೆ
**ಡೊಂಬವೆಱ** – ದೊಂಬರ ಒಂದು ಚರ್ಮವಾದ್ಯ
**ಡೊಂಬಿತಿ** – ಡೊಂಬರ ಹೆಣ್ಣು; ವಂಚಕಿ
**ಡೊಂಬಿಸು** – ವಂಚಿಸು
**ಡೊಕ್ಕನೆ** – 'ಡೊಕ್'; ಒಂದು ಅನುಕರಣ ಶಬ್ದ; ಗುದ್ದು
**ಡೊಕ್ಕರ** – ಹೊಡೆತ; ಮಲ್ಲಯುದ್ಧದ ಒಂದು ವರಸೆ
**ಡೊಕ್ಕರಂಗೊಳ್** – ಹೊಡೆತದಿಂದ ಜರ್ಜರಿತನಾಗು
**ಡೊಕ್ಕರಿ** – ಜೀರ್ಕೊಳವೆ
**ಡೊಕ್ಕರಿಸು** – ಪೆಟ್ಟು ಕೊಡು, ಅಪ್ಪಳಿಸು
**ಡೊಳ್ಳಗ** – ಡೊಳ್ಳು ಬಾರಿಸುವವನು; ಡೊಳ್ಳು ಹೊಟ್ಟೆಯವನು
**ಡೊಳ್ಳು** – ದೊಡ್ಡ ಹೊಟ್ಟೆ
**ಡೋಹರ** – ಚಂಡಾಲಜಾತಿಯವನು
**ಡೋಳಾಕೇಳ** – ಉಯ್ಯಾಲೆಯಾಡುವುದು
**ಡೌಡೆ** – ಡಿಂಡಿಮ ಎಂಬ ಚರ್ಮವಾದ್ಯ
**ಡೌಡೆವಱ** – ಡೌಡೆ

## ಢ

**ಢಾಳೆಯರ್** – ಲಾವಣ್ಯವತಿಯರು
**ಢಿಳ್ಳ** – ಸಡಿಲವಾದ

## ತ

**ತಂಗದಿರ್ಗಲ್** – ಚಂದ್ರಕಾಂತಶಿಲೆ
**ತಂಗುಟ್ಟಿರಿಕ** – ತಂಗಳನ್ನು ಬೇಡುವವನು
**ತಂಗೆ(ಗಿ)** – ಕಿರಿಯ ಸೋದರಿ
**ತಂಡ** – ಗುಂಪು
**ತಂಡಂಗೊಳ್** – ಗುಂಪುಗೂಡು
**ತಂಡಂಬೆಱು** – ತಂಡಂಗೊಳ್
**ತಂಡಸು** – ಕಂಟಿಕಿ, ಮುಳ್ಳುಮರ
**ತಂಡುಂಮುಂಡು** – ಅಸ್ತವ್ಯಸ್ತತೆ
**ತಂಡುಲ** – ಅಕ್ಕಿ
**ತಂತನ್ಯಮಾನ** – ಪ್ರತಿಬಿಂಬಿಸುವ
**ತಂತ್ರ** – ಸೈನ್ಯ; ಉಪಾಯ; ಆಗಮಶಾಸ್ತ್ರ
**ತಂತ್ರಾಧ್ಯಕ್ಷ** – ಸೇನಾಪತಿ
**ತಂತ್ರಾವಾಪ** – ರಾಷ್ಟ್ರಚಿಂತನೆ
**ತಂತ್ರಿ** – ತಂತಿ, ದಾರ
**ತಂತ್ರೋದಿತ** – ತಂತ್ರಶಾಸ್ತ್ರದಲ್ಲಿ ಉಕ್ತವಾದ
**ತಂದಲ್** – ತುಂತುರು, ಸೋನೆ
**ತಂದೆ** – ಜನಕ
**ತಂದ್ರತೆ** – ಆಲಸ್ಯ
**ತಂದ್ರಿ** – ನಿದ್ದೆ
**ತಂದ್ರೀಭೂತ** – ಜಡಗೊಂಡ
**ತಂಬಟ** – ತಮ್ಮಟೆ
**ತಂಬುಲ** – ತಾಂಬೂಲ
**ತಂಬುಲಂಗೊಡು** – ತಾಂಬೂಲ ಕೊಡು
**ತಂಬುಲಂಗೊಳ್** – ತಾಂಬೂಲ ಸ್ವೀಕರಿಸು
**ತಂಬುಲಂದೀವು** – ತಾಂಬೂಲವನ್ನು ತುಂಬು
**ತಂಬುಲಂಬಿಡಿ** – ತಾಂಬೂಲ ಹಿಡಿ
**ತಂಬುಲಗುಟುಕು** – ಗುಟುಕಿನಂತೆ ತಾಮಭುಲ ತಿನ್ನಿಸು
**ತಂಬುಲಿ(ಗ)** – ವೀಳೆಯದೆಲೆಯ ಮಾರಾಟಗಾರ
**ತಂಬುಲಿಗವಸರ** – ತಂಬಿಲಿಗ+ಪಸರ, ವೀಳೆಯದೆಲೆಯ ಅಂಗಡಿ
**ತಂಬೆಲರ್** – ತಂಗಾಳಿ
**ತಕ್ಕ** – ಯೋಗ್ಯನಾದ
**ತಕ್ಕಂದ** – ಯೋಗ್ಯವಾದ ರೀತಿ
**ತಕ್ಕಟೆ** – ಯೋಗ್ಯತೆ ಕುಂದು
**ತಕ್ಕಿಸು** – ಬಯಸು
**ತಕ್ಕು** – ಯೋಗ್ಯತೆ; ಸಾಮರ್ಥ್ಯ
**ತಕ್ಕುಂಗೆಡು** – ಯೋಗ್ಯತೆ ಕುಂದು
**ತಕ್ಕುಗುಡು** – ಬೆಂಬಲ ಕೊಡು
**ತಕ್ಕುಗೆಡಿಸು** – ಯೋಗ್ಯತೆ ಕೆಡಿಸು
**ತಕ್ಕುಗೊಡು** – ಠಕ್ಕುಗೊಡು, ವಂಚಿಸು
**ತಕ್ಕುಮೆ** – ಯೋಗ್ಯತೆ
**ತಕ್ಕೂರ್ಮೆ** – ಯೋಗ್ಯತೆ; ತತ್+ಕೂರ್ಮೆ, ಅಂತಹ ಪ್ರೀತಿ; ಕೃತಜ್ಞತೆ
**ತಕ್ಕೆ** – ತಕ್ಕವಳು
**ತಕ್ಕೆವರ್** – ಹತ್ತಿರ ಬರು
**ತಕ್ರ** – ಮಜ್ಜಿಗೆ
**ತಕ್ಷ(ಕ)** – ಬಡಗಿ; ರಥಕಾರ
**ತಕ್ಷಕಪತಿ** – ಮಹಾ ಶಿಲ್ಪಿ
**ತಕ್ಷಕರತ್ನ** – (ಜೈನ) ಜೀವರತ್ನಗಳಲ್ಲಿ ಒಂದಾದ ಸ್ಥಪತಿ, ವಾಸ್ತುಶಿಲ್ಪಿ
**ತಗಡು** – ಲೋಹದ ಫಲಕ
**ತಗರ್** – ಟಗರು; ಅಡ್ಡಗಟ್ಟು
**ತಗರ್ತಲೆಯ** – ಒಂದು ಬಾಣ
**ತಗವೆ** – ಅಡೆತಡೆ
**ತಗು** – ತಕ್ಕನಾಗು
**ತಗುಣಬಿಗುಣಂಬರಿ** – ಅಲೆದಾಡು
**ತಗುಣೆಗಾಟಂಗುಡು** – ತಿಗಣೆಯಂತೆ ಕಾಟಕೊಡು
**ತಗುಳ್** – ಸೇರು; ಅನುಸರಿಸು; ಅಟ್ಟು; ದುಡುಕು
**ತಗುಳ** – ಗೊಂಚಲು
**ತಗುಳಿಸು** – ಜೋಡಿಸು
**ತಗುಳ್ಚು** – ತಗುಲಿಸು, ಜೋಡಿಸು
**ತಗುಳ್ಪು** – ಜೋಡಣೆ
**ತಗೆ** – ನಿಲ್ಲಿಸು; ಅಡ್ಡಿ
**ತಗೆಪು** – ಸಾಲದ ನಿರ್ಬಂಧ
**ತಗೆಬಗೆ** – ಕಳವಳ
**ತಗ್ಗುಗುಟ್ಟು** – ಜೋರಾಗಿ ಕುಟ್ಟು
**ತಜಿನೆವಟಿಯಿಗೆ** – ಒಂದು ಬಗೆಯ ಧ್ವಜ

**ತಜ್ಞ(ಜ್ಞ)** – ತತ್+ಜ್ಞ, ಅದನ್ನು ತಿಳಿದವನು ಒಂದು ವಿಷಯವನ್ನು ಚೆನ್ನಾಗಿ ಬಲ್ಲವನು
**ತಜ್ಞತೆ** – ಪಾಂಡಿತ್ಯ
**ತಟ** – ದಡ, ಬೆಟ್ಟದ ತಪ್ಪಲು
**ತಟಂ** – ಕೂಡಲೆ
**ತಟಂಕಷ** – ದಡವನವನು ಮುಟ್ಟುವ, ಸಮಗ್ರವಾದ
**ತಟಂಬಿಡಿ** – ದಡದಗುಂಟ ಸಾಗು
**ತಟಜ** – ದಡದಲ್ಲಿ ಹುಟ್ಟಿದ
**ತಟಾಂತರ** – ದಡದ ಪ್ರದೇಶ
**ತಟಾಕ** – ಕೆರೆ
**ತಟಿತ್** – ಮಿಂಚು
**ತಟಿಚ್ಚಂಚಳೆ** – ಮಿಂಚಿನಂತೆ ಚಚಂಚಲಳಾದ
**ತಟಿಚ್ಛೃಂಗಾಟ** – ಮಿಂಚಿನ ಹೊಳಪು
**ತಟಿದಂಗನೆ** – ಮಿಂಚೆಂಬ ಹೆಣ್ಣು
**ತಟಿದ್ವಲ್ಲರಿ** – ಮಿಂಚಿನ ಬಳ್ಳಿ
**ತಟಿದ್ವಳಯ** – ಮಿಂಚಿನ ವಲಯ
**ತಟಿದ್ವಿಲಾಸ** – ಮಿಂಚಿನ ವಿಲಾಸ
**ತಟಿನಿ** – ನದಿ
**ತಟಿನ್ನಾದ** – ಗುಡುಗು
**ತಟಿನ್ಮಾಲಿ(ಳ)ಕೆ** – ಮಿಂಚಿನ ಮಾಲೆ
**ತಟಿಲ್ಲತೆ** – ಮಿಂಚಿನ ಬಳ್ಳಿ
**ತಟ್ಟಿ** – ತಡಿಕೆ; ಒಂದು ಬಗೆಯ ಬಲೆ
**ತಟ್ಟಿಗಟ್ಟು** – ತಡಿಕೆ ಕಟ್ಟು
**ತಟ್ಟಿಮೆಡಱು** – ತಡಿಕೆಯನ್ನು ಹೆಣೆ
**ತಟ್ಟಿವೆಣೆ** – ತಡಿಕೆಯನ್ನು ಹೆಣೆ
**ತಟ್ಟಿಱೆ** – ಅಪ್ಪಳಿಸು
**ತಟ್ಟು** – ಅಪ್ಪಳಿಸು; ಸನ್ಯಾಸಿಯ ಹೊದಿಕೆ; ಥಟ್ಟು, ಗುಂಪು; ಸೈನ್ಯ
**ತಟ್ಟುಂಗೆಡೆ** – ಶಕ್ತಿಗುಂದಿ ಬೀಳು
**ತಟ್ಟುಂತಾಱುಂ**– ಅಸ್ತವ್ಯಸ್ತವಾಗಿ
**ತಟ್ಟುಕ** – ತಟ್ಟುವವನು
**ತಟ್ಟುಗುಟ್ಟು** – ಅಪ್ಪಳಿಸು
**ತಟ್ಟುಗೆಯ್** – ಚಪ್ಪಟೆಗೊಳಿಸು
**ತಟ್ಟುಪೊಟ್ಟು** – ಥಟ್ ಪಟ್ ಎಂದು
**ತಟ್ಟುಱ್ರು** – ಸೀಳಿಕೊಂಡ ಹೊರಬರು
**ತಡ** – ಅಡ್ಡಿ; ವಿಳಂಬ; ದಡ
**ತಡಂಗ** – ತಟಾಕ
**ತಡಂಗಡಿ** – ಕತ್ತರಿಸು
**ತಡಂಗಲಿಸು** – ಕೂಡಿಕೊ, ಸೇರಿಕೊ
**ತಡಂಗಾ** – ತಡೆದು ರಕ್ಷಿಸಿಕೊ
**ತಡಂಗಾಲ್** – ತೊಡರುಗಾಲು
**ತಡಂಗಾಲ್ಗೊಳ್** – ತೊಡರುಗಾಲಾಗು
**ತಡಂಗಾಲ್ವೊಯ್** – ತೊಡರುಗಾಲು ಹಾಕು
**ತಡಂಗಿಡಿಸು** – ನೆಲೆಗೆಡಿಸು
**ತಡಂಗೂಡು** – ಸೇರಿಕೊ
**ತಡಂಗೆಡೆ** – ಕುಸಿದುಬೀಳು
**ತಡಂತೊಡರ್** – ಬೆರೆತುಕೊ
**ತಡಂನುಡಿ** – ನಿಧಾನ ಮಾತು
**ತಡಂಬಡೆ** – ಒಪ್ಪು
**ತಡಂಬರಿ** – ಹಬ್ಬು
**ತಡಂಬಾಯ್** – ದಾಟು
**ತಡಂಬುಗಿಸು** – ಬೆರೆಸು
**ತಡಂಬೊಯ್** – ಅಪ್ಪಳಿಸು; ಪ್ರತಿಭಟಿಸು
**ತಡಂಮಾಡು** – ದಾರಿ ತಪ್ಪಿಸು
**ತಡಂಮೆಟ್ಟು** – ಮೆಟ್ಟಂಗಾಲಿಡು, ಮೆಲ್ಲಗೆ ನಡೆ
**ತಡಕೆಯ್** – ಅಪ್ಪುಗೆ
**ತಡತಡವರ್** – ತೊದಲು
**ತಡತಡಂದೊಡರ್** – ತೂಕತಪ್ಪು
**ತಡತಡಿಸು** – ದಡದಡಿಸು
**ತಡಬಡಿಸು** – ತಬ್ಬಿಬ್ಬುಗೊಳ್ಳು
**ತಡ(ತಡ)ಮಾ(ವಾ)ಗು** – ವಿಳಂಬವಾಗು; ತಬ್ಬಿಬ್ಬಾಗು
**ತಡಮಾಡು** – ತಳ್ಳಂಕಗೊಳಿಸು
**ತಡಮಿಕ್ಕು** – ತಡೆಯೊಡ್ಡು
**ತಡವರಿಸು** – ತಡಕಾಡು; ತೊದಲು
**ತಡವಾಯ್** – ಸಮನಾಗು
**ತಡವಿಕ್ಕು** – ತಡಮಾಡು
**ತಡವು** – ತಡಕಾಡು; ತೊದಲು; ವಿಳಂಬ
**ತಡಸು** – ಒಂದು ಮರ
**ತಡಹರ** – ಬೊಕ್ಕೆ
**ತಡಾಗ** – (ತಟಾಕ) ಸಣ್ಣ ಕೆರೆ
**ತಡಿ** – ದಡ
**ತಡಿಗಾಣ್** – ದಡಕಾಣು
**ತಡಿಗೊಳ್** – ದಡದ ಗುಂಟ ಸಾಗು
**ತಡಿದೆರೆ** – ದಡಕ್ಕಪ್ಪಳಿಸುವ ತೆರೆ
**ತಡಿಮೀರು** – ದಡಮೀರು
**ತಡಿವಿಡಿ** – ತಡಿಗೊಳ್
**ತಡಿಸಾರ್** – ದಡ ಸೇರು
**ತಡುಂಬು** – ಹೋಗಲಾಡಿಸು
**ತಡೆ** – ವಿಳಂಬ ಮಾಡು; ಅಡ್ಡಿಪಡಿಸು
**ತಡೆಗಾಲ್ವೊಡೆ** – ತೊಡರುಗಾಲು ಹಾಕು
**ತಡೆಗೆಡಹು** – ಬೀಳಿಸು
**ತಡೆಗೆಡೆ** – ಎಡವಿಬೀಳು
**ತಡೆಗೊಳ್** – ಅಡ್ಡ ಬರು
**ತಡೆಪಂಬೆಱು** – ನಿಧಾನಗೊಳ್ಳು
**ತಡೆಯಿಸು** – ಅಡ್ಡಿಪಡಿಸು
**ತಣಿ** – ತೃಪ್ತಿ ಪಡೆ
**ತಣಿಪು** – ತೃಪ್ತಿ; ತೃಪ್ತಿಪಡಿಸು
**ತಣಿಯಿಸು** – ತೃಪ್ತಿಪಡಿಸು
**ತಣಿಯುಣ್** – ತೃಪ್ತಿಯಾಗುವಂತೆ ತಿನ್ನು
**ತಣಿಯೂಡು** – ತೃಪ್ತಿಯಾಗುವಂತೆ ಊಟಮಾಡಿಸು
**ತಣಿವು** – ತೃಪ್ತಿ
**ತಣ್ಗಂಪು** – ಮದುರವಾದ ವಾಸನೆ
**ತಣ್ಗದಿರ್** – ತಂಪು ಕಿರಣ

**ತಣ್ಗದಿರ** – ಚಂದ್ರ
**ತಣ್ಗದಿರ್ಪೊದಱ್** – ತಣ್ಗದಿರ್+ಪೊದಱ್,
ಬೆಳದಿಂಗಳ ರಾಶಿ
**ತಣ್ಗರಗ** – ತಂಪಾದ ಕೊಡ
**ತಣ್ಗಲಸುಗೂೞ್** – ತಣ್ಣಗಿರುವ ಅನ್ನ
**ತಣ್ಗಳಸ** – ತಣ್ಗರಗ
**ತಣ್ಗಾಲ್** – ತಂಪಾದ ನೀರಿನ ಕಾಲುವೆ
**ತಣ್ಗಾಳಿ** – ತಂಗಾಳಿ
**ತಣ್ಗೂೞ್** – ತಣ್ಣನೆಯ ಕೂಳು; ತಂಗಳು
**ತಣ್ಗೊಳ** – ತಂಪಾದ ನಿರಿರುವ ಕೊಳ
**ತಣ್ಗೋಡು** – ತಂಪು ಉಂಟುಮಾಡು
**ತಣ್ಚೊಡರ್** – ತಂಪಾದ ದೀಪ
**ತಣ್ಣಲೆ** – ತಂಪಾದ ಅಲೆ
**ತಣ್ಣಸ** – ತಂಪು
**ತಣ್ಣಸಗೆಯ್ಯವಟ್ಟ** – ಚಂದ್ರ
**ತಣ್ಣಸಗೊಳ್** – ತಂಪಾಗು
**ತಣ್ಣಸುವುಟ್ಟು** – ತಂಪು ಉಂಟಾಗು
**ತಣ್ಣಿತ್ತು** – ತಂಪಾದ
**ತಣ್ಣೀರ್** – ತಣ್ಣನೆಯ ನೀರು
**ತಣ್ಣಿದ** – ತಂಪಾದವನು
**ತಣ್ಣೆಲರ್** – ತಂಗಾಳಿ
**ತಣ್ಣೆಲೆ** – ತಂಪು ಎಲೆ, ಹಸಿರೆಲೆ
**ತಣ್ಣೆೞಲ್** – ತಂಪಾದ ನೆರಳು
**ತಣ್ಣೇಳೆ** – ತಣ್ಣನೆಯ ಎಳೆ
**ತಣ್ತೊಡವು** – ತಂಪಾದ ಆಭರಣ
**ತಣ್ದಳಿರ್** – ತಂಪಾದ ಚಿಗುರು
**ತಣ್ಪಱೆ** – ತಣ್ಪು+ಅಱೆ, ಶೀತಲತೆ ಹೋಗು
**ತಣ್ಪಿಡಿ** – ತಂಪಿನಿಂದ ಕೂಡು
**ತಣ್ಪು** – ತಂಪು
**ತಣ್ಪುಗಂಪು** – ಶೀತಲ ಸುಗಂಧ
**ತಣ್ಪುಗೆಯ್** – ತಂಪನ್ನುಂಟುಮಾಡು
**ತಣುದರ್** – ತಂಪನ್ನು ತಾ
**ತಣ್ಪುವಡೆ** – ತಂಪನ್ನು ಹೊಂದು
**ತಣ್ಪುವೀೞು** – ತಂಪು ಬೀರು
**ತಣ್ಪುವೆಸಕೆಯ್** – ತಂಪಾಗುವಂತೆ ಮಾಡು
**ತಣ್ಪುವೆಱು** – ತಂಪು ಹೊಂದು
**ತಣ್ಪುವೇಱು** – ತಣ್ಪುವೆಱು
**ತಣ್ಪೇಱು** – ತಂಪು ಹೆಚ್ಚಾಗು
**ತಣ್ಬನಿ** – ತಂಪು ಹನಿ
**ತಣ್ಬಸಲೆ** – ತಮಪಾದ ಹುಲ್ಲುಹಾಸಲೆ
**ತಣ್ಬಿಸಿಲ್** – ತಂಪಾದ ಬಿಸಿಲು, ಎಲೆಬಿಸಿಲು
**ತಣ್ಬುೞಿಲ್** – ತಂಪು ಮರಳು; ತಂಪಾದ ತೋಪು
**ತಣ್ಬೆಳಗು** – ತಂಪಾದ ಕಾಂತಿ
**ತಣ್ಬೊೞ್ತು** – ತಂಪು ಹೊತ್ತು
**ತಣ್ಮಲೆ** – ತಂಪನ್ನು ಹರಡು
**ತತ್** – ಆ, ಅದು
**ತತ** – ಹರಡಿದ; ತಂತಿ; ತಂತಿವಾದ್ಯ
**ತತಿ** – ಸಮೂಹ
**ತತ್ಕಾಲ** – ಆ ಕಾಲ
**ತತ್ಕಾಲಂ** – ಆ ಕಾಲದಲ್ಲಿ
**ತತ್ತನಯ** – ಆ ಮಗ; ಅವನ ಮಗ
**ತತ್ತರಿಸು** – ನಡುಗು
**ತತ್ತಱ(ಂ)ದ(ತ)ಱೆ** – ಕೊಚ್ಚಿಹಾಕು
**ತತ್ತಿ** – ಮೊಟ್ಟೆ
**ತತ್ತಱ(ಳ)ಗುದಿ** – ಜೋರಾಗಿ ಕುದಿ
**ತತ್ತಪಣ** – ಜೊತೆಗೊಳಿಸುವಿಕೆ, ಹೊತ್ತಿಸುವಿಕೆ
**ತತ್ತುಪಣಂಗೆಯ್** – ಉಪಚಾರಮಾಡು
**ತತ್ತ್ವಗರ್ಭ** – ತತ್ವ(ತನ್ನತನ)ದಿಂದ ತುಂಬಿದ
**ತತ್ತ್ವಚಯ** – ತತ್ವಸಮೂಹ
**ತತ್ತ್ವಜ್ಞ** – ತತ್ವಜ್ಞಾನಿ
**ತತ್ತ್ವಪರಿಣತ** – ತತ್ತ್ವಜ್ಞ
**ತತ್ತ್ವವೇದಿ** – ತತ್ತ್ವಜ್ಞ
**ತತ್ತ್ವಾಂಧ** – ತತ್ವದ ಬಗ್ಗೆ ಕುರುಡಾಗಿರುವವನು
**ತತ್ತ್ವಾರ್ಥವಿನಿಶ್ಚಯ** – ತತ್ವದ ಅರ್ಥದ ಬಗೆಗಿನ
ನಿಶ್ಚಿತ ಜ್ಞಾನ
**ತತ್ತ್ವಾರ್ಥಶ್ರದ್ಧಾನ** – ತತ್ತ್ವಾರ್ಥದಲ್ಲಿ ಶ್ರದ್ಧೆ
**ತತ್ತ್ವೋಕ್ತಿ** – ತತ್ವದ ಬಗೆಗಿನ ಮಾತುಗಳು
**ತತ್ಸಮ** – ಅದಕ್ಕೆ ಸಮನಾದ; ವ್ಯತ್ಯಾಸವಿಲ್ಲದೆ
ಅಥವಾ ಸ್ವಲ್ಪ ವ್ಯತ್ಯಾಸದಿಂದ ಕನ್ನಡದಲ್ಲಿ
ಬಳಸುವ ಸಂಸ್ಕೃತ ಶಬ್ದ
**ತತ್ಸವಿತುರ್ವರೇಣ್ಯ** – ಬ್ರಾಹ್ಮಣ, ಶ್ರೌತ
**ತತ್ಸ್ವರೂಪ** – ಅದೇ ರೂಪ
**ತತ್ಸ್ವರೂಪಗುಣ** – ಅದೇ ರೂಪ ಮತ್ತು
ಗುಣಗಳು
**ತಥಾಗತಮತ** – ಬೌದ್ಧಮತ
**ತಥ್ಯ** – ನಿಶ್ಚಯ
**ತಥ್ಯಾಭಿಯೋಗ** – ಸರಿಯಾದ ಪ್ರಯತ್ನ
**ತದನಂತರಂ** – ಆನಂತರ
**ತದರ್ಧಪ್ರಮಿತ** – ಅದರ ಅರ್ಧದಷ್ಟು ಅಳತೆಯ
**ತದವಸಾನ** – ಅದರ ಕೊನೆ
**ತದಾತನ** – ಆ ಕಾಲದ
**ತದಾತ್ವಸುಖ** – ಆ ಕಾಲದ ಸುಖ
**ತದಿಗೆ** – ಹುಣ್ಣಿಮೆ, ಅಮಾವಾಸ್ಯೆಗಳನಂತರದ
ಮೂರನೆಯ ದಿನದ ತಿಥಿ
**ತದೀಯ** – ಅದಕ್ಕೆ (ಆ ವ್ಯಕ್ತಿಗೆ) ಸಂಬಂಧಿಸಿದ
**ತದುಕು** – ಸಲ್ಲಕಿ ಗಿಡ
**ತದೆ** – ಹೊಡೆ; ಏಟು
**ತದೆವಡೆ** – ಏಟು ತಿನ್ನು
**ತದ್ಭವ** – ಅದರಿಂದ ಹುಟ್ಟಿದ; ಹೆಚ್ಚು
ವ್ಯತ್ಯಾಸದಿಂದ ಕನ್ನಡಕ್ಕೆ ಬಂದ ಸಂಸ್ಕೃತ
ಶಬ್ದ
**ತದ್ವಿರುದ್ಧ** – ಅದಕ್ಕೆ ವಿರುದ್ಧವಾದ
**ತದ್ವ್ಯತಿರಿಕ್ತ** – ಅದಕ್ಕೆ ವ್ಯತ್ಯಾಸವಾದ
**ತನತು(ತ್ತು)** – ತನ್ನದು

**ತನಯ** – ಮಗ
**ತನಯೆ** – ಮಗಳು
**ತನಿತು** – ತಾನಾಗಿ; ಸೇರಿ
**ತನಿಗಂಡ** – ಬೇರೆಯಾದ ಮಾಂಸಖಂಡ
**ತನಿಗಂಪು** – ಸುವಾಸನೆ
**ತನಿಗರ್ಮು** – ಹೊಳೆಯುವ ಕಪ್ಪು ಬಣ್ಣ
**ತನಿಗರ್ವು** – ಪಕ್ವವಾದ ಕಬ್ಬು
**ತನಿಗಳ್** – ಹದವಾದ ಕಳ್ಳೂ
**ತನಿಗಿಚ್ಚು** – ಹಿತಕರವಾದ ಬೆಂಕಿ
**ತನಿಗೆಂಡ** – ಉರಿಯುವ ಕೆಂಡ
**ತನಿಗೆತ್ತು** – ಹೆಚ್ಚಾಗಿ ನಡುಗು; ಅತಿಶಯ ನಡುಕ
**ತನಿಗೊರ್ವಿಸು** – ಹೆಚ್ಚಾಗಿ ಕೊಬ್ಬಿಸು
**ತನಿಗೊರ್ವು** – ಚೆನ್ನಾಗಿ ಕೊಬ್ಬು; ಅಧಿಕ ಮದ
**ತನಿನಂಜು** – ಕಟುವಿಷ
**ತನಿರಸ** – ರುಚಿಯಾದ ರಸ
**ತನಿವಂಡು** – ತನಿ+ಬಂಡು, ಸಿಹಿ ಮಕರಂದ
**ತನಿವಣ್** – ಸಿಹಿ ಹಣ್ಣು
**ತನಿವದನು** – ಸರಿಯಾದ ಹದ, ರೀತಿ
**ತನಿವಾಲ್** – ಮಧುರವಾದ ಹಾಲು
**ತನಿವೆರ್ಚು** – ಬಹಳವಾಗಿ ಜಾಸ್ತಿಯಾಗು
**ತನಿವೆಳಗು** – ಶೀತಲ ಕಾಂತಿ
**ತನಿವೆಳ್ದಿಂಗಳ್** – ಶೀತಲ ಬೆಳುದಿಂಗಳು
**ತನಿಬೇಟ** – ಮಧುರವಾದ ಪ್ರಣಯ
**ತನಿಸುಸಿಲ್** – ಮಧುರ ಸಂಭೋಗ
**ತನಿಸೊರ್ಕು** – ಮಧುರವಾದ ಅಮಲು
**ತನಿಸೋ(ಂ)ಕು** – ಹಿತಕರ ಸ್ಪರ್ಶ; ಹಿತವಾಗಿ ಸ್ಪರ್ಶಿಸು
**ತನು** – ಕೃಶವಾದ; ದೇಹ
**ತನುಜ** – ಮಗ
**ತನುಜಾತ** – ತನುಜ
**ತನುಜೆ** – ಮಗಳು
**ತನುತರ** – ಹೆಚ್ಚು ಕೋಮಲ
**ತನುತ್ರ** – ಕವಚ
**ತನುತ್ವ** – ಕೃಶತೆ
**ತನುತ್ವಂಬಡೆ** – ಕೃಶವಾಗು
**ತನುದಂಡ** – ದೇಹದಂಡನೆ
**ತನುಧರ್ಮ** – ದೇಹದ ಸ್ವಭಾವ
**ತನುಭವೆ** – ಮಗಳು
**ತನುಭೃದ್ಗಣ** – ಜೀವಸಮೂಹ
**ತನುಮಧ್ಯೆ** – ಸಣ್ಣ ಸೊಂಟವುಳ್ಳವಳು
**ತನುಮುನಿ** – ಕೃಶನಾದ ಮುನಿ
**ತನುರಕ್ಷೆ** – ದೇಹರಕ್ಷೆ
**ತನುರುಚಿ** – ದೇಹಕಾಂತಿ
**ತನು(ನೂ)ರುಹ** – ಮೈಯ ಕೂದಲು
**ತನುರೋಮಾವಳಿ** – ತನುರುಹ
**ತನುವಾತ** – (ಜೈನ) ವಿಶ್ವಾಕಾಶವನ್ನು ಆವರಿಸಿಕೊಂಡಿದ್ದು, ಎಂಟು ಲೋಕಗಳಿಗೆ ಆಧಾರವಾದ ಮೂರು ಅನಿಲಗಳಲ್ಲಿ ಕೊನೆಯದು
**ತನುವಿದಾಹ** – ದೇಹದ ತಾಪ
**ತನುವಿಧು** – ರೇಖಾಚಂದ್ರ
**ತನುವೆರಸು** – ದೇಹಸಮೇತ
**ತನುಸೋಂಕು** – ದೇಹಸ್ಪರ್ಶನ
**ತನುಸೌಂದರ್ಯ** – ದೇಹದ ಚೆಲುವು
**ತನೂಜ** – ಮಗ
**ತನೂಜಾತೆ** – ಮಗಳು
**ತನೂದರ** – ತೆಳುವಾದ ಹೊಟ್ಟೆ
**ತನೂದರಿ** – ತೆಳುವಾದ ಹೊಟ್ಟೆಯುಳ್ಳವಳು
**ತನೂಭವ** – ತನೂಜ
**ತನೆ** – ಬಸಿರು
**ತನೆವಂದಿ** – ಗಬ್ಬ ಧರಿಸಿದ ಹಂದಿ
**ತನ್ಮತ** – ಅವನ ಮತ
**ತನ್ಮಧ್ಯ** – ಅದರ ನಡುವೆ
**ತನ್ಮಯ** – ಅದರಲ್ಲೇ ಲೀನವಾಗಿರುವ
**ತನ್ವಂಗಿ** – ಕೋಮಲ ಶರೀರೆ
**ತನ್ವಿ** – ತನು+ಅಂಗಿ, ತನ್ವಂಗಿ
**ತಪ** – ಶಾಖ; ತಪಸ್ಸು; ಮಾಘಮಾಸ
**ತಪಂಗೆಯ್** – ತಪವನ್ನಾಚರಿಸು
**ತಪಂಗೊಳ್** – ತಪವನ್ನು ಕೈಗೊಳ್ಳು
**ತಪಂಬಡು** – ತಪಂಗೆಯ್
**ತಪಃಪರೀಷಹ** – (ಜೈನ) ತಪಸ್ಸನ್ನು ಮಾಡುವಾಗ ಸಹಿಸಿಕೊಳ್ಳಬೇಕಾದ ತೊಂದರೆಗಳು
**ತಪಃಪ್ರಭಾವ** – ತಪಸ್ಸಿನ ಪರಿಣಾಮಕಾರಿಕತೆ
**ತಪಃಶೀಲ** – ತಪಸ್ಸಿನಲ್ಲಿನ ಆಸಕ್ತಿ
**ತಪನ** – ಸುಡುವ; ಸೂರ್ಯ
**ತಪನಕರ** – ಬಿಸಿಲು
**ತಪನಕಾಂತಾಶ್ಮ** – ಸೂರ್ಯಕಾಂತಶಿಲೆ
**ತಪನತಪ್ತ** – ಬಿಸಿಲಿನಲ್ಲಿ ಸುಟ್ಟ
**ತಪನಾತಪ** – ಸುಡುವ ಬಿಸಿಲು
**ತಪನಾಸ್ತ್ರ** – ಸೂರ್ಯಸ್ತ್ರ
**ತಪನೀಯ** – ಸುಡಬೇಕಾದುದು; ಬಂಗಾರ
**ತಪನೀಯಸಾನು** – ಚಿನ್ನದ ಶಿಖರ
**ತಪನೀಯಸೂತ್ರ** – ಚಿನ್ನದ ಎಳೆ
**ತಪನೋದಯ** – ಸೂರ್ಯೋದಯ
**ತಪನೋಪಲಪುತ್ರಿಕೆ** – ಸೂರ್ಯಕಾಂತಶಿಲೆಯ ಪ್ರತಿಮೆ
**ತಪಮಾನ್** – ತಪಂ+ಆನ್, ತಪಸ್ಸನ್ನು ಕೈಗೊಳ್ಳು
**ತಪಮಿರ್** – ತಪಮಾನ್
**ತಪಯೋಗ** – ತಪಸ್ಸಿನ ಸಂಬಂಧ
**ತಪಶ್ಚರಣ** – ತಪಸ್ಸಿನ ಆಚರಣೆ
**ತಪಸ್ತಪ್ತ** – ತಪಸ್ಸಿನಲ್ಲಿ ಬೆಂದ
**ತಪಸ್ಥೆ** – ತಪಸ್ಸಿನಲ್ಲಿ ತೊಡಗಿರುವವಳು
**ತಪಸ್ಸು** – (ಜೈನ) ಅನಶನ, ಅವಮೋ(ಮೌ)ದರ್ಯ,

ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಾವಾಸ(ವಿವಿಕ್ತಶಯನಾಶನ), ಕಾಯಕ್ಲೇಶ ಎಂಬ ಬಾಹ್ಯ ತಪಸ್ಸುಗಳೂ; ಪ್ರಾಯಶ್ಚಿತ್ತ, ವಿನಯ, ವೈಯಾವೃತ್ಯ, ಸ್ವಾಧ್ಯಾಯ, ಧ್ಯಾನ, ವ್ಯತ್ಸರ್ಗ ಎಂಬ ಅಭ್ಯಂತರ ತಪಸ್ಸುಗಳೆಂಬ ಒಟ್ಟು ಹನ್ನೆರಡು ಬಗೆ

**ತಪಿ** – ತಪನ, ಸೂರ್ಯ

**ತಪೋಗ್ರಹಣ** – ತಪಸ್ಸನ್ನು ಕೈಗೊಳ್ಳುವುದು

**ತಪೋಧನ** – ತಪಸ್ಸನ್ನೇ ಧನವಾಗುಳ್ಳ ಋಷಿ

**ತಪೋಧನಾಖ್ಯಾನ** – ತಪೋಧನರ ಬಗೆಗಿನ ಕತೆ; (ಜೈನ) ತ್ರಿಷಷ್ಟಿ ಶಲಾಕಾಪುರುಷರ ಕತೆ

**ತಪೋಧನೆ** – ತಪಸ್ಸನ್ನೇ ಧನವಾಗುಳ್ಳವಳು

**ತಪೋಧರ** – ತಪೋಧರ

**ತಪೋನಿಯಮ** – ತಪಸ್ಸಿನ ನಿಯಮ

**ತಪೋನಿಯುಕ್ತ** – ತಪಸ್ಸಿನಲ್ಲಿ ತೊಡಗಿದ

**ತಪೋನಿಯೋಗ** – ತಪದ ಆಚರಣೆ

**ತಪೋಭರ** – ತಪಸ್ಸಿನ ತೀವ್ರತೆ

**ತಪೋಭಾರ** – ತಪಸ್ಸಿನ ಭಾರ

**ತಪೋರಾಜ್ಯ** – ತಪಸ್ಸಿನ ಸಾಮ್ರಾಜ್ಯ

**ತಪೋರುಪಮಾರ್ಗ** – ತಪಸ್ಸನ್ನು ಮಾಡಬೇಕಾದ ರೀತಿ

**ತಪೋಲಕ್ಷ್ಮಿ** – ತಪಸ್ಸೆಂಬ ಲಕ್ಷ್ಮಿ

**ತಪೋವನ** – ತಪಸ್ಸನ್ನು ಮಡುವ ಜಾಗ

**ತಪೋವೃತ್ತಿ** – ತಪಸ್ಸಿನ ಆಚರಣೆ

**ತಪೋವೃದ್ಧಿ** – ತಪಸ್ಸಿನ ಏಳಿಗೆ

**ತಪೋಹೀನತೆ** – ತಪಸ್ಸು ಇಲ್ಲದಾಗುವುದು

**ತಪ್ತ** – ಕಾಯ್ದ

**ತಪ್ತಾಯಸ** – ಕಾದ ಕಬ್ಬಿಣ

**ತಪ್ತಾಯಸರಸ** – ಕಾದ ಕಬ್ಬಿಣದ ದ್ರವ

**ತಪ್ತಾಶ್ಮ** – ಸೂರ್ಯಕಾಂತಶಿಲೆ

**ತಪ್ಪು** – ಸರಿಯಲ್ಲದ್ದು; ತಪ್ಪುಮಾಡು; ದೋಷ

**ತಪ್ಪುನೋಟ** – ಕಳ್ಳನೋಟ

**ತದ್ದುನೋಡು** – ಕದ್ದು ನೋಡು

**ತಪ್ಪುವಿಡಿ** – ತಪ್ಪನ್ನು ಕಂಡುಹಿಡಿ

**ತಮ** – ಕತ್ತಲೆ; ತಮೋಗುಣ; ಅಜ್ಞಾನ

**ತಮಂಗಮಂಟಪ** – ಸಭಾಂಗಣ

**ತಮಃಪಟ(ಲ)** – ಕತ್ತಲ ರಾಶಿ

**ತಮ(ಃ)ಪ್ರಭೆ** – ಒಂದು ನರಕ

**ತಮಃಸಂಗತಿ** – ಕತ್ತಲೊಡನೆ ಸಹವಾಸ

**ತಮರ್** – ತವರು

**ತಮರ್ಮನೆ** – ತವರುಮನೆ

**ತಮಸ್ತಮ** – ಗಾಢ ಕತ್ತಲೆ; ಅಜ್ಞಾನವೆಂಬ ಕತ್ತಲು

**ತಮಸ್ವಿನಿ** – ರಾತ್ರಿ

**ತಮಸ್ಸಂಹೃತಿ** – ಕತ್ತಲನ್ನು ಕೊನೆಗಾಣಿಸುವಿಕೆ

**ತಮಸ್ಸ್ವಭಾವ** – ತಾಮಸ ಗುಣ

**ತಮಾಲ(ಳ)** – ಹೊಂಗೆಯ ಮರ

**ತಮಾಲ(ಳ)ಪತ್ರ** – ಹೊಂಗೆಯ ಎಲೆ

**ತಮಾಲಮಾಲೆ** – ಹೊಂಗೆಯ ತೋಪು

**ತಮಾಲವನ** – ಹೊಂಗೆಯ ತೋಪು

**ತಮಾಲವೀಧಿ** – ಹೊಂಗೆಯ ಸಾಲುಮರಗಳ ದಾರಿ

**ತಮಾಲ ಪ್ರವಾಳ** – ಹೊಂಗೆಯ ಚಿಗುರು

**ತಮಾಳಕಾಳಕೆ** – ಹೊಂಗೆಯಂತೆ ಕಪ್ಪು ಕೂದಲುಳ್ಳವಳು

**ತಮಾಳವನ** – ತಮಾಲವನ

**ತಮಿಸ್ರ** – ಕತ್ತಲೆ

**ತಮೋಧಿ** – ಕತ್ತಲ ಮೊತ್ತ

**ತಮೋಬಂಧ** – ಕತ್ತಲ ಕಟ್ಟು; ಅಜ್ಞತೆಯ ಕಟ್ಟು

**ತಮೋರಿ** – ತಮಃ+ಅರಿ, ಕತ್ತಲ ಶತ್ರು, ಸೂರ್ಯ

**ತಮೋವಿಕೃತಿ** – ಕತ್ತಲೆ(ತಮೋಗುಣ)ಯ ವಿಕಾರ

**ತಮೋಹರ** – ಕತ್ತಲ (ಅಜ್ಞಾನದ) ನಿವಾರಣೆ

**ತಮ್ಮ** – ಕಿರಿಯ ಸಹೋದರ; ಸ್ವಂತದ

**ತಮ್ಮಡಿ** – ಗುರು

**ತಮ್ಮುತಿರ್ವರುಂ** – ತಾವಿಬ್ಬರು

**ತರ್** – ತೆಗೆದುಕೊಂಡು ಬಾ

**ತರ** – ಕ್ರಮ; ಸಾಲು; ವೇಗ

**ತರಂಗ** – ಅಲೆ; ಸೀರೆಯ ನೆರಿಗೆ

**ತರಂಗಭಂಗ** – ಅಲೆಯು ಒಡೆಯುವುದು

**ತರಂಗಲೇಖೆ** – ಅಲೆಯ ಅಂಚು

**ತರಂಗಿಣಿ** – ಅಲೆಗಳಿಂದ ಕೂಡಿದುದು, ನದಿ

**ತರಂಗಿಸು** – ಅಲೆಯಂತೆ ಮುಮದುವರಿ

**ತರಂಗೊಳಸು** – ಕ್ರಮಪಡಿಸು

**ತರಂಬಿಡಿ** – ಸಾಲುಗಟ್ಟು

**ತರಂಬೆಱು** – ತರಂಬಿಡಿ

**ತರಕಸ** – ಬಿಲ್ಲು; ಬತ್ತಳಿಕೆ

**ತರಕ್ಷು** – ಕಿರುಬ; ಹುಲಿ

**ತರಜೆಗತ್ತರಿ** – ಕುದುರೆಗೆ ತೊಡಸುವ ಒಂದು ಆಭರಣ

**ತರಣ** – (ತ್ರಾಣ) ಶಕ್ತಿ

**ತರಣದ್ರೋಣಿ** – ದಾಟಿಸುವ ದೋಣಿ

**ತರಣಿ** – ದೋಣಿ; ಸೂರ್ಯ

**ತರಣಿಕಾಂತ** – ಸ್ಫಟಿಕ

**ತರಣಿಕುಲ** – ದೋಣಿಗಳ ಗುಂಪು; ಸೂರ್ಯವಂಶ

**ತರಣಿಪ್ರಭ** – ಸೂರ್ಯನ ಪ್ರಭೆಯುಳ್ಳವನು

**ತರತ್ತರಂಗ** – ಚಲಿಸುವ ಅಲೆ

**ತರತ್ತರಂಗ** – ಚಲಿಸುವ ಅಲೆ

**ತರತ್ತರಳ** – ಚಲಿಸುವ

**ತರತ್ತಾರನೇತ್ರ** – ಚಂಚಲವಾದ ಗುಡ್ಡೆಯಿರುವ ಕಣ್ಣು

**ತರಲ** – ಅಚ್ಚರಿ; ಚಂಚಲ

**ತರಲ(ಳ)ತೆ** – ಚಾಂಚಲ್ಯ

**ತರಲಾ(ಳಾ)ಕ್ಷಿ** – ಚಂಚಲವಾದ ಕಣ್ಣು(ಳ್ಳವಳು)

**ತರಲಾ(ಳಾ)ಪಾಂಗ** – ಚಂಚಲ ಕುಡಿನೋಟ

**ತರಲಾ(ಳಾ)ಯತಾಕ್ಷಿ**– ಚಂಚಲವಾದ ಹಾಗೂ ಅಗಲವಾದ ಕಣ್ಣುಳ್ಳವಳು

**ತರಲೇಕ್ಷಣ** – ಚಂಚಲ ನೇತ್ರ
**ತರವಾರಿ** – ಕತ್ತಿ
**ತರಸಾದಂ** – ನೈರುತ್ಯ ದೇವತೆ
**ತರಸ್ವಿ** – ಗರುಡ
**ತರಹರಿಸು** – ಸಹಿಸಿಕೊ
**ತರಳತರ** – ತುಂಬ ಚಂಚಲವಾದ
**ತರಳತಾರನೇತ್ರ** – ಚಂಚಲ ಹಾಗೂ ಕಾಂತಿಯುಕ್ತ ಕಣ್ಣು
**ತರಳತೆ** – ಚಾಂಚಲ್ಯ
**ತರಳನಯನೆ** – ತರಲಾ(ಳಾ)ಕ್ಷಿ
**ತರಳಲೋಚನೆ** – ತರಲಾ(ಳಾ)ಕ್ಷಿ
**ತರಳಾಂಬಿಕೆ** – ತರಲಾ(ಳಾ)ಕ್ಷಿ
**ತರಳೀಕೃತ** – ನಡುಗುವಂತೆ ಮಾಡಿದ
**ತರಿಸು** – ತರುವಂತೆ ಮಾಡು
**ತರಿಯಿಸು** – ದಾಟು
**ತರು** – ಮರ
**ತರುಕೋಟರ** – ಮರದ ಪೊಟರೆ
**ತರುಚರ** – ಕೋತಿ
**ತರುಚರಕಾಂತೆ** – ಹೆಣ್ಣು ಕೋತಿ
**ತರುಜಾತ** – ತೋಪು
**ತರುಣ** – ಎಳೆಯದಾದ; ಹರೆಯದವನು
**ತರುಣತ್ವ** – ಎಳೆತನ
**ತರುಣದಿನಾಧೀಶ** – ಬಾಲಸೂರ್ಯ
**ತರುಣಾರುಣ** – ತಿಳಿ ಕೆಂಪು
**ತರುಣಾರ್ಕ** – ಬಾಲಸೂರ್ಯ
**ತರುಣಿ** – ಹರೆಯದವಳು
**ತರುಣಿಕೇಕರ** – ತರುಣಿಯ ಕುಡಿನೋಟ
**ತರುಣೇಂದು** – ಬಾಲಚಂದ್ರ
**ತರುನಿವಹ** – ಮರಗಳ ಗುಂಪು
**ತರುವಲಿ** – ಹುಡುಗ; ತಬ್ಬಲಿ
**ತರುವಲಿತನ** – ಹುಡುಗುತನ; ತಬ್ಬಲಿತನ
**ತರುವ್ರಾತ** – ಮರಗಳ ಸಮೂಹ
**ತರುಶಿಖೆ** – ಬಿಳಲು
**ತರುಷಂಡ** – ತರುವ್ರಾತ
**ತರುಸಾರ** – ಚೇಗು
**ತರ್ಕ** – ವಾದ; ತರ್ಕಶಾಸ್ತ್ರ
**ತರ್ಕಮಾಡು** – ವಾದಮಾಡು
**ತರ್ಕೈಸು** – ತಳ್ಕೈಸು, ಅಪ್ಪಿಕೊ
**ತರ್ಜನ** – ನಿಂದನೆ; ಹೆದರಿಸುವುದು
**ತರ್ಜನನಿರತ** – ನಿಂದನೆಯಲ್ಲಿ ತೊಡಗಿದವನು
**ತರ್ಜನಿ** – ತೋರುಬೆರಳು
**ತರ್ಜನೋಕ್ತಿ** – ನಿಂದೆಯ ಮಾತು
**ತರ್ಜಿತೆ** – ಧಿಕ್ಕರಿಸಲ್ಪಟ್ಟವಳು
**ತರ್ಜಿಸು** – ನಿಂದಿಸು; ಬೆದರಿಸು; ದೂರಮಾಡು
**ತರ್ಣಕ** – ಹೊಸದಾಗಿ ಹುಟ್ಟಿದ ಕರು
**ತರ್ಪಣ** – ತುಷ್ಟಿ
**ತರ್ಬು** – ತಬ್ಬಿಕೊ, ಅಪ್ಪು
**ತರ್ಷ** – ತರ್ಪಣ; ಬಯಕೆ, ಹಂಬಲ
**ತಲ(ಳ)** – ಕೆಳಗಡೆ; ಅಂಗೈ; ಅಧೋಲೋಕಗಳಲ್ಲಿ ಒಂದು
**ತಲೆ** – ಶಿರಸ್ಸು
**ತಲೆಗರೆ** – ಅಡಗಿಕೊ
**ತಲೆಗವಿ** – ತಲೆಯನ್ನು ಮರೆಮಾಡು
**ತಲೆಗಾ(ಯ್)** – ತಲೆಯನ್ನು ಕಾಯಿ; ರಕ್ಷಿಸು
**ತಲೆಗಾಪಿನಾಳ್** – ಮೈಗಾವಲ ಭಟ
**ತಲೆಗುತ್ತು** – ತಲೆಬಾಗು
**ತಲೆದರ್ಗು** – ತಲೆ ತಗ್ಗಿಸು
**ತಲೆದುಡುಗೆ** – ತಲೆಯ ಆಭರಣ
**ತಲೆದೂಗು** – ಮೆಚ್ಚಿಕೊ; ಸಮ್ಮತಿಸು
**ತಲೆದೊಡವು** – ತಲೆದುಡುಗೆ
**ತಲೆದೋಱು** – ಕಾಣಿಸಿಕೊ
**ತಲೆನವಿರ್** – ತಲೆಗೂದಲು
**ತಲೆನೀರ್** – ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ
**ತಲೆನಾಯಕ** – ಮುಖ್ಯ ನಾಯಕ
**ತಲೆನೀರ್ಮೀ** – ತಲೆಗೆ ಸ್ನಾನಮಾಡು
**ತಲೆನೇಣ್** – ಪ್ರಾಣಿಗಳ ಕೊರಳಿನ ಹಗ್ಗ
**ತಲೆಮಡು** – ತಲೆಗೆ ತಾಗು
**ತಲೆಯಿಕ್ಕು** – ತಲೆಯಿಡು; ಮಲಗು
**ತಲೆಯುರ್ಚು** – ಅಡಗಿಕೊ
**ತಲೆಯೂಱು** – ತಲೆಬಾಗು
**ತಲೆಯೆಱಕ** – ತಲೆ ತಗ್ಗಿಸು
**ತಲೆಯೇಱು** – ತಲೆಗೆ ಹತ್ತು; ತಲೆಯ ಗಾಯ
**ತಲೆಯೊತ್ತು** – ತಲೆತೂರಿಸು
**ತಲೆವ(ಮ)ಡು** – ಎದುರಾಗು
**ತಲೆವಣಿ** – ತಲೆಯ ಮಣಿ; ಶ್ರೇಷ್ಠ
**ತಲೆವರಿ** – ಮುಂದೆ ಹೋಗು
**ತಲೆವರಿಗೆ** – ಗುರಾಣಿ
**ತಲೆವಣಿ** – ತಲೆ+ಪಣಿ, ಲೋಚುಮಾಡು; ಅಲಂಕರಿಸು
**ತಲೆವಾಗಿಲ್** – ಮುಂಬಾಗಿಲು
**ತಲೆವಿಕ್ಕು** – ತಲೆ+ಪಿಕ್ಕು, ತಲೆ ಬಾಚು
**ತಲೆವಿಡಿಗಲಿ** – ತಲೆಹಿಡುಕ
**ತಲೆವಿಲ್** – ಶ್ರೇಷ್ಠವಾದ ಬಿಲ್ಲು; ಬಿಲ್ಲಿನ ತುದಿ
**ತಲೆವೀಡು** – ಶ್ರೇಷ್ಠವಾದ ಬೀಡು
**ತಲೆವೀಸು** – ಒಪ್ಪದಿರು, ಬೇಡವೆಂದು ಹೇಳು
**ತಲೆವೂಸು** – ತಲೆ+ಪೂಸು, ತಲೆಗೆ ಲೇಪಿಸು
**ತಲೆವೇನೆ** – ತಲೆ ಬೇನೆ
**ತಲೆವೇಸಱು** – ತಲೆ ಬೇಸರ
**ತಲೆವೊಲ** – ಮುಖ್ಯ ಪ್ರದೇಶ
**ತಲೆಸುತ್ತು** – ತಲೆಗೆ ಸುತ್ತುವ ಬಟ್ಟೆ, ಶೀರ್ಷಕ
**ತಲೆಸೂಡು** – ತಲೆಯಲ್ಲಿ ಧರಿಸು; ಶಿರಸಾವಹಿಸು
**ತಲೋ(ಳೋ)ದರಿ** – ತೆಳುವಾದ ಹೊಟ್ಟೆಯುಳ್ಳವಳು
**ತಲ್ಪ(ಳ್ಪ)** – ಹಾಸಿಗೆ; ಮಹಡಿ

**ತಲ್ಲಣ** – ತಲ್ಲಣ, ಭಯ
**ತಲ್ಲಣಿಸು** – ಭಯಗೊಳ್ಳು
**ತವ(೦)ಗ** – ಉನ್ನತಾಸನ; ವೇದಿಕೆ
**ತವಕ** – ಆತುರ
**ತವಕಿಗ** – ಉತ್ಸುಕನಾದವನು
**ತವಕಿಸು** – ಉತ್ಸುಕಗೊಳ್ಳು
**ತವದೊಣೆ** – ಅಕ್ಷಯವಾದ ಬತ್ತಳಿಕೆ
**ತವರಾಜ** – ಒಂದು ಬಗೆಯ ಬಿಳಿ ಸಕ್ಕರೆ
**ತವ(ಪ)ಸಿ** – ತಪಸ್ವಿ
**ತವಸು** – ತಪಸ್ಸು
**ತವಿಗೋಲ್** – ತವಿಸುವ ಕೋಲು, ಬಾಣ
**ತವಿಲ್** – ಕುಂದು; ತೊಂದರೆ; ನಾಶ
**ತವಿಸು** – ಕ್ಷಯಿಸು
**ತವುಂಕಲ್** – ಕ್ಷಯ
**ತವು** – ಕ್ಷಯಿಸು
**ತವುಗೆ** – ಕೊನೆ
**ತವುಡು** – ಹೊಟ್ಟು
**ತವುತರ್** – ಕ್ಷೀಣಗೊಳ್ಳು; ಬರಿದಾಗು; ಮತ್ತೆ ಬಾ
**ತವುದಲೆ** – ಮುಗಿತಾಯ
**ತವುದಲೆಗಾಣಿಸು** – ಕೊನೆಗಾಣಿಸು
**ತವೆ** – ಮುಗಿದುಹೋಗು
**ತಸ್ಕರ** – ಕಳ್ಳ
**ತಳ್** – ಎದುರಿಸು; ತಳೆ
**ತಳ** – ಕೈ, ಅಂಗೈ
**ತಳಕು** – ಲೇಪನಮಾಡು
**ತಳಚ್ಛಂದ** – ತಳದ ವಿನ್ಯಾಸ
**ತಳತಂತ್ರ** – ಪದಾತಿ ಸೈನ್ಯ
**ತಳಪಟ್ಟು** – ಕುಸ್ತಿಯ ಒಂದು ವರಸೆ
**ತಳಮಳಗು** – ಬೆರಗು; ಗೊಂದಲ
**ತಳಮಳಗಾಗು** – ಗೊಂದಲಗೊಳ್ಳು; ಬೆರಗಾಗು
**ತಳಮಳಗೊಳಿಸು** – ಕಳವಳವುಂಟುಮಾಡು
**ತಳಮಳಿಸು** – ಕಳವಳಗೊಳ್ಳು
**ತಳಮಿತಮಧ್ಯೆ** – ಬಹು ತೆಳ್ಳನೆ ಸೊಂಟವುಳ್ಳವಳು
**ತಳರ್** – ಚಲಿಸು; ಹೊರಡು
**ತಳರಡಿ** – ಅಸ್ಥಿರವಾದ ಹೆಜ್ಜೆ, ದಟ್ಟಡಿ
**ತಳರ್ಚು** – ತಳರಿಸು, ಚಲಿಸುವಂತೆ ಮಾಡು; ಹೊರಡು
**ತಳರ್ನಡೆ** – ಪುಟ್ಟ ಹೆಜ್ಜೆ, ಮಂದಗಮನ
**ತಳರ್nುಡಿ** – ತೊದಲು ನುಡಿ
**ತಳರ್ಪು** – ಹರಹು
**ತಳರ್ವಕ್ಕಿ** – ದಟ್ಟಡಿಯಿಡುವ ಹಕ್ಕಿ, ಹಂಸ
**ತಳಲ್** – ಚಿಗುರು
**ತಳಲುಂಬಳಲುಂಗುಟ್ಟು** – ಸದೆಬಡಿ
**ತಳವರ್ಗ** – ಸೈನ್ಯ
**ತಳವಱ** – ತಳವಾರ, ನಗರರಕ್ಷಕ
**ತಳವಱಿಕೆ** – ತಳವಾರನ ಕೆಲಸ
**ತಳವೆಳಗಾಗು** – ಗಾಬರಿಗೊಳ್ಳು
**ತಳವೆಳಗು** – ಬೆರಗು; ಗಾಬರಿ
**ತಳಸಾರ್** – ತಳ ಸೇರು
**ತಳಸು** – ತಡಸಲ ಮರ
**ತಳಾಮಳಕ** – ಅಂಗೈಯ ನೆಲ್ಲಿ; ಸುಸ್ಪಷ್ಟ
**ತಳಾಱ** – ತಳವಱ
**ತಳಾಱಿಕೆ** – ತಳವಱಿಕೆ
**ತಳಾಱುಗೆಯ್** – ತಳವಾರನ ಕೆಲಸ ಮಾಡು
**ತಳಿ** – ಎರಚು, ಸೇಚಿಸು; ಅನ್ನಸತ್ರ
**ತಳಿಗೆ** – ತಟ್ಟೆ
**ತಳಿಗೋಂಟೆ** – ಬೇಲಿ
**ತಳಿಪ(ಪು)** – ಸಿಂಪಡಿಸುವಿಕೆ
**ತಳಿಯಿಸು** – ಚಿಮುಕಿಸು
**ತಳಿರ್** – ಚಿಗುರು
**ತಳಿರುಯ್ಯಲ್** – ಚಿಗುರಿನ ಉಯ್ಯಾಲೆ
**ತಳಿರೆಲೆ** – ಚಿಗುರೆಲೆ
**ತಳಿರೋಳಿ** – ಚಿಗುರಿನ ಸಾಲು
**ತಳಿರ್ಗಳಸ** – ಚಿಗುರುಗಳನ್ನಿಟ್ಟಿರುವ ಕಳಶ
**ತಳಿರ್ಗಾಸೆ** – ಚಿಗುರು ಬಣ್ಣದ ಬಟ್ಟೆ; ಕಾವಿ ಬಟ್ಟೆ
**ತಳಿರ್ಗೊಂಚಲ್** – ಚಿಗುರಿನ ಗೊಂಚಲು
**ತಳಿರ್ಗೊಂಬು** – ಚಿಗುರಿದ ಕೊಂಬೆ
**ತಳಿರ್ಚು** – ಚಿಗುರು ಬಿಡು
**ತಳಿರ್ಜೊಂಪ** – ಚಿಗುರಿನ ಗೊಂಚಲು
**ತಳಿರ್ದೊಂಗಲ್** – ತಳಿರ್ಗೊಂಬು
**ತಳಿರ್ದೋರಣ** – ಚಿಗುರುಗಳ ತೋರಣ
**ತಳಿರ್ವಂದರ್** – ಚಿಗುರಿನ ಮಂಟಪ
**ತಳಿರ್ವಟ್ಟೆ** – ಚಿಗುರಿನ (ಬಣ್ಣದ) ಬಟ್ಟೆ
**ತಳಿರ್ವನೆ** – ಚಿಗುರಿನ ಮನೆ
**ತಳಿರ್ವಸೆ** – ಚಿಗುರಿನ ಹಸೆ, ಹಾಸಿಗೆ
**ತಳಿರ್ವಾಸು** – ಚಿಗುರಿನ ಹಾಸಿಗೆ
**ತಳಿರ್ವೇಱಿಸು** – ಚಿಗುರುವಂತೆ ಮಾಡು
**ತಳಿರ್ವೇಱು** – ಚಿಗುರು
**ತಳಿರ್ವೊಱೆ** – ಚಿಗುರಿನ ಹೊರೆ
**ತಳಿರ್ವೋಗು** – ಚಿಗುರಲು ತೊಡಗು
**ತಳಿಸು** – ಕುಟ್ಟು
**ತಳುವು** – ತಳ್ವು, ತಡಮಾಡು
**ತಳೆ** – ಧರಿಸು; ಪ್ರಾಣಿಗಳನ್ನು ಕಟ್ಟುವ ಹಗ್ಗ
**ತಳೆಯಿಕ್ಕು** – ಪ್ರಾಣಿಗಳ ಕಾಲಗಳಿಗೆ ಹಗ್ಗ ಕಟ್ಟು
**ತಳೋದಕ** – ಕಾಲು ತೊಳೆದ ನೀರು
**ತಳೋದರಿ** – ತೆಳುನಡುವಿನ ಹೆಂಗಸು
**ತಳೋಪಲಾತ** – ತಳದಲ್ಲಿ ಕಲ್ಲುಗಳಿರುವ
**ತಳ್ಕಱೆ** – ಲೇಪನಮಾಡು
**ತಳ್ಕು** – ಅನುಲೇಪನ; ಲೇಪಿಸು
**ತಳ್ಪು** – ಧರಿಸಿರುವಿಕೆ
**ತಳ್ವೊಯ್** – ನೂಕು; ವ್ಯಾಪಿಸು; ಸುರಿ; ಒತ್ತಾಗಿ ಸೇರು
**ತಳ್ವು** – ತಡಮಾಡು; ವಿಳಂಬ
**ತಳ್ವುದು** – ಸೇರುವುದು

**ತಳ್ವುಗೆಯ್** – ವಿಳಂಬ ಮಾಡು
**ತಳ್ಳಂಕ** – ಆತಂಕ
**ತಳ್ಳಂಕ(ಂ)ಗುಟ್ಟು** – ತುಂಬಿ ತುಳುಕು
**ತಳ್ಳಂಕಂಗೊಳ್** – ಆತಂಕಪಡು
**ತಳ್ಳಂಕಂಗುಟ್ಟಿಸು** – ಆತಂಕಗೊಳಿಸು
**ತಳ್ಳಂಕಗೊಳಸು** – ಆತಂಕಗೊಳಿಸು
**ತಳ್ಳಂಕುಗೆಡೆ** – ಆತಂಕದಿಂದ ಕುಸಿದುಬೀಳು
**ತಳ್ಕಱಿ** – ಲೇಪಿಸು, ಬಳಿ
**ತಱಂಟುದಲೆ** – ಬೋಳುತಲೆ
**ತಱಕಟ** – ಚೇಷ್ಟೆ
**ತಱಗೆಲೆ** – ಒಣಗಿದ ಎಲೆ
**ತಱತಱಂ** – ಅಸಂಬದ್ಧತೆಯಿಂದ
**ತಱಬಱಕ** – ಹರುಕುಮುರುಕು
**ತಱಿ** – ಕತ್ತರಿಸು
**ತಱಿವಣಲ್** – ಹರಳುಹರಳಾಗಿರುವ ಮರಳು
**ತಱಿಸಲ್** – ನಿರ್ಧರಿಸು
**ತಱಿಸಲ(ವು)** – ನಿರ್ಧಾರ, ನಿರ್ಣಯ
**ತಱುಂಬು** – ಅಡ್ಡಗಟ್ಟಿ ನಿಲ್ಲಿಸು; ಸನ್ನೆಕೋಲು
**ತಱುವಾಯ್** – ಕ್ರಮ; ಆನಂತರದಲ್ಲಿ
**ತಱ್** – ಸೇರು
**ತೞತೞಗುದಿ** – ಜೋರಾಗಿ ಕುದಿ
**ತೞತೞನೆ** – ಹೊಳಪಿನಿಂದ ಕೂಡಿ
**ತೞತೞಿಸು** – ಹೊಳೆಯುತ್ತಿರು
**ತೞಪೞನೆ** – ಜೋರಾಗಿ
**ತೞಲ್** – ಬಲಿತ ಕಾಯಿ (ಮುತ್ತಗಾಯ್)
**ತೞಿ** – ತೊಲೆ, ದಪ್ಪನಾದ ದಿಮ್ಮಿ
**ತೞಿಗೋಂಟೆ** – ತಳಿಗೋಂಟೆ, ಬೇಲಿ
**ತೞ್** – ಧರಿಸು; ಛತ್ರಿ
**ತೞ್ದಿಱುಗಲ್** – ಛತ್ರಿಗಳ ಸಮೂಹ
**ತೞ್ವಿಡಿ** – ಕೊಡೆ ಹಿಡಿ
**ತೞ್ಕು** – ಹೆಣೆದುಕೊಂಡಿರು
**ತೞ್ಕಿಗೊಳ್** – ಆಲಂಗಿಸು
**ತೞ್ಕೈ(ಕೈ)ಸು** – ಆಲಂಗಿಸು, ಅಪ್ಪಿಕೋ
**ತೞ್ಗು** – ತಗ್ಗು, ಕ್ಷೀಣಿಸು
**ತೞ್ತಱಗುದಿ** – ತೞತೞಗುದಿ
**ತೞ್ತಱಿ** – ಮೇಲೆ ಬಿದ್ದು ಹೊಡೆ
**ತೞ್ಪಲ್** – ಬೆಟ್ಟದ ತಪ್ಪಲು
**ತೞ್ಪು** – ಆಲಿಂಗನ; ಆಲಂಗಿಸು
**ತೞ್ಪೊಯ್** – ಮೆತ್ತಿಕೊ
**ತಾಂಕು(ಗು)** – ಮೇಲೆ ಬೀಳು; ತಡೆ
**ತಾಂಗು** – ತಡೆದುಕೋ
**ತಾಂಟಿಸು** – ಅಪ್ಪಳಿಸು; ಸೋಕಿಸು
**ತಾಂಟು** – ಅಪ್ಪಳಿಸು
**ತಾಂಡವಪ್ರೌಢಿ** – ತಾಂಡವನೃತ್ಯದಲ್ಲಿ ಪ್ರೌಢಿಮೆ
**ತಾಂಬೂಲ** – ಅಡಕೆ; ವೀಳೆಯ
**ತಾಂಬೂಲಕರಂಕ** – ತಾಂಬೂಲದ ಭರಣಿ
**ತಾಂಬೂಲಕರಂಕವಾಹಕ** – ತಾಂಬೂಲಕರಂಕವನ್ನು ಹಿಡಿದಿರುವವನು
**ತಾಂಬೂಲಕರಂಕವಾಹಿನಿ** – ತಾಂಬೂಲಕರಂಕವನ್ನು ಹಿಡಿದಿರುವ ದಾಸಿ
**ತಾಂಬೂಲದಾನ** – ತಾಂಬೂಲ ನೀಡು
**ತಾಂಬೂಲಿಕಾನಿಕೇತನ** – ವೀಳೆಯವನ್ನು ಮಾರುವ ಸ್ಥಳ
**ತಾಟಂಕ** – ಕಿವಿಯ ಓಲೆ
**ತಾಡನ** – ಹೊಡೆಯುವುದು
**ತಾಡಿತ** – ಹೊಡೆಯಲಾದ
**ತಾಣ** – (ಸ್ಥಾನ) ಎಡೆ
**ತಾಣಬಟ್ಟ** – ಸ್ಥಾನಭ್ರಷ್ಟ
**ತಾಣಾಂತರ** – (ಸ್ಥಾನಾಂತರ) ಸ್ಥಳ, ಬೀಡು
**ತಾತ** – ತಂದೆ
**ತಾತ್ಪರ್ಯ** – ಅಭಿಪ್ರಾಯ
**ತಾತ್ಪರ್ಯಕಾರ್ಯ** – ಉದ್ದಿಷ್ಟ ಕಲಸ
**ತಾತ್ಪರ್ಯಾರ್ಥ** – ಆಶಯ
**ತಾದಾತ್ಮ್ಯ** – ಅದರಲ್ಲಿ ಲೀನವಾಗಿರುವುದು
**ತಾನ** – ದಾರ
**ತಾನಕ** – ಶಸ್ತ್ರವಿದ್ಯೆಯ ಒಂದು ಪ್ರಭೇದ
**ತಾಪಣೆ** – (ಸ್ಥಾಪನೆ) ನೆಲೆಗೊಳಿಸು
**ತಾಪಸ** – ತಪಸ್ವಿ
**ತಾಪಸಕುಮಾರ** – ಮುನಿಕುಮಾರ
**ತಾಪಸನಿಕಾಯ** – ಮುನಿಗಳ ಗುಂಪು
**ತಾಪಸರೂಪ** – ಮುನಿವೇಷ
**ತಾಪಸಾಚರಣ** – ತಪಸ್ಸು
**ತಾಪಸಾಶ್ರಮ** – ತಪೋವನ
**ತಾಪಿ** – ತಪತೀನದಿ
**ತಾಪಿಂಛ(ಜ)** – ಹೊಂಗೆಯ ಮರ
**ತಾಪಿಚ್ಛ** – ತಾಪಿಂಛ(ಜ)
**ತಾಪು** – ಭೇದಿಸು; ಸೀಳು
**ತಾಮರಸ** – ತಾವರೆ
**ತಾಮರಸನೇತ್ರ** – ಕಮಲನೇತ್ರ
**ತಾಮರಸಮುಖಿ** – ತಾವರೆಯಂತೆ ಮುಖವುಳ್ಳವನು
**ತಾಮರೆ** – ತಾವರೆ
**ತಾಮರೆಗೆಱೆ** – ತಾವರೆಯ ಕೊಳ
**ತಾಮರೆಗೊಳ** – ತಾಮರೆಗೆಱೆ
**ತಾಮ್ರ** – ಒಂದು ಲಿಲೋಹ; ಕೆಂಬಣ್ಣ
**ತಾಮ್ರಚೂಡ(ಳ)** – ಹುಂಜ
**ತಾಮ್ರತುಂಡ** – ಕೆಂಪು ಕೊಕ್ಕು; ಗಿಣಿ
**ತಾಮ್ರಪರ್ಣಿ** – ಒಂದು ನದಿ
**ತಾಮ್ರಮಯ** – ತಾಮ್ರದಿಂದ ತುಂಬಿದ
**ತಾಮ್ರಲೋಚನ** – ಕೆಂಗಣ್ಣು(ಳ್ಳವನು)
**ತಾಯ್** – ತಾಯಿ
**ತಾಯ್ಗುರು** – ಮೂಲಸ್ಥಾನ
**ತಾಯ್ಗಾಡು** – ಮೂಲಸ್ಥಾನವಾದ ಕಾಡು
**ತಾಯ್ಗಿರಿ** – ತಾಯಿ ಬೆಟ್ಟ; ಬೆಟ್ಟಗಳ ತಾಯಿ

**ತಾಯ್ದೊಟ್ಟಿಲ್** – ಆಶ್ರಯ
**ತಾಯ್ಮಣಲ್** – ತಳದ ಮರಳು
**ತಾಯ್ಮೆಱಿದ್ದೆಱೆ** – ತಳದ ಮರಳು ಕಾಣುವಂತಾಗು
**ತಾಯ್ವಾಲ್** – ತಾಯ ಹಾಲು
**ತಾಯ್ವಡಿ** – ಮರಿ ಹಾಕಿದ ಆನೆ
**ತಾಯ್ವೆದೆಗೂಡು** – ನೆಲವು ಹದಗೊಳ್ಳು
**ತಾರ** – ಬೆಳ್ಳಿ; ಜೋರು ಧ್ವನಿ
**ತಾರಕ** – ದಾಟಿಸುವವನು; ಏರುದನಿ; ನಕ್ಷತ್ರ
**ತಾರಕಗಣ** – ನಕ್ಷತ್ರಪುಂಜ
**ತಾರಕಾರಿ** – ತಾರಕ+ಅರಿ, ತಾರಕನ ಶತ್ರು, ಷಣ್ಮುಖ; ನಕ್ಷತ್ರಗಳ ಶತ್ರು, ಸೂರ್ಯ
**ತಾರಕಿತ** – ನಕ್ಷತ್ರಗಳಿಂದ ಕೂಡಿದ
**ತಾರಕೋತ್ಕರ** – ನಕ್ಷತ್ರಪುಂಜ
**ತಾರಗಿರೀಂದ್ರ** – ಬೆಳ್ಳಿಬೆಟ್ಟ
**ತಾರಗೆ** – ನಕ್ಷತ್ರ
**ತಾರಗೆದುಱುಗಲ್** – ನಕ್ಷತ್ರಗಳ ಗೊಂಚಲು
**ತಾರನಗೇಂದ್ರ** – ತಾರಗಿರೀಂದ್ರ
**ತಾರಗೆವಟ್ಟೆ** – ನಕ್ಷತ್ರಮಾರ್ಗ, ಆಕಾಶ
**ತಾರಯಿಸು** – ಜೋರಾಗಿ ಧ್ವನಿಮಾಡು
**ತಾರಲ್** – ಪೊದರು
**ತಾರಶೈಲ** – ಬೆಳ್ಳಿಬೆಟ್ಟ
**ತಾರಹಾರ** – ಮುತ್ತಿನ ಹಾರ
**ತಾರಾಗ** – ತಾರ+ಅಗ, ತಾರಶೈಲ
**ತಾರಾಗಣ** – ನಕ್ಷತ್ರಸಮೂಹ
**ತಾರಾಗಣವಿಮಾನ** – (ಜೈನ) ಒಂದು ಬಗೆಯ ಜ್ಯೋತಿರ್ವಿಮಾನ
**ತಾರಾಚಲ(ಳ)** – ತಾರಾಗ
**ತಾರಾದ್ರಿ** – ತಾರಾಗ
**ತಾರಾಧಿಪ(ತಿ)** – ಚಂದ್ರ
**ತಾರಾಧೀಶ** – ಚಂದ್ರ
**ತಾರಾಧೀಶ್ವರ** – ತಾರಾಧೀಶ
**ತಾರಾಧ್ವ** – ನಕ್ಷತ್ರಮಾರ್ಗ, ಆಕಾಶ
**ತಾರಾನಿಕರ** – ನಕ್ಷತ್ರಪುಂಜ
**ತಾರಾಪತಿ** – ತಾರಾಧೀಶ
**ತಾರಾಪಥ** – ತಾರಾಧ್ವ
**ತಾರಾಪರಿಕರ** – ತಾರಾನಿಕರ
**ತಾರಾಭ್ರಮಂಡಲ** – ಮೋಡವಿಲ್ಲದ ಆಕಾಶ
**ತಾರಾಮಂಡಲ** – ತಾರಾನಿಕರ
**ತಾರಾವಳಿ** – ತಾರಾನಿಕರ
**ತಾರಾವೀಧಿ** – ತಾರಾಧ್ವ
**ತಾರಾಹಾರ** – ಮುತ್ತಿನ ಹಾರ
**ತಾರುಣ್ಯ** – ಹರಯ
**ತಾರುಣ್ಯವತಿ** – ಚಿಕ್ಕ ಹರಯದವಳು
**ತಾರೆ** – ನಕ್ಷತ್ರ; ಕಣ್ಣು; ಮುತ್ತು
**ತಾರೆಲೆ** – ಜನಸಾಮಾನ್ಯರ ಒಂದು ಹಾಡು
**ತಾರೇಶ** – ಚಂದ್ರ
**ತಾರ್ಕಿಕ** – ತರ್ಕಶಾಸ್ತ್ರಜ್ಞ
**ತಾರ್ಕ್ಷ್ಯ** – ಹದ್ದು; ಗರುಡ
**ತಾರ್ಕ್ಷ್ಯಸ್ಥ** – ಗರುಡನ ಮೇಲೆ ಕುಳಿತವನು, ವಿಷ್ಣು
**ತಾರ್ಕ್ಷ್ಯೇಷು** – ಗರುಡಾಸ್ತ್ರ
**ತಾಣ್** – ತೃಣಕ್ಕೆ ಸಂಬಂಧಿಸಿದ
**ತಾರ್ಮುಟ್ಟು** – ಸೋಂಕು; ಅಪ್ಪಳಿಸು
**ತಾಲನಂದನ** – ತಾಳೆಮರಗಳ ಗುಂಪು
**ತಾಲವನ** – ತಾಲನಂದನ
**ತಾಲ(ಳ)ವೃಂತ** – ಬೀಸಣಿಗೆ
**ತಾಲು(ಳು)ಗೆ** – ಗಂಟಲು
**ತಾವಡಿ** – ಅಲೆತ; ಆಯಾಸ
**ತಾವಡಿಗೊಳ್** – ಆಯಾಸಗೊಳ್ಳು
**ತಾವರೆದಂಟು** – ತಾವರೆಯ ಕಾಂಡ
**ತಾವರೆನೂಲ್** – ತಾವರೆಯ ನಾರು
**ತಾವರೆಯರಲ್** – ತಾವರೆಯ ಹೂ
**ತಾವರೆವಂಡು** – ತಾವರೆ+ಬಂಡು, ತಾವರೆಯ ಮಕರಂದ
**ತಾವರೆವಗೆ(ಯ)** – ತಾವರೆಯ ಶತ್ರು, ಚಂದ್ರ
**ತಾವರೆವಳ್ಳಿ** – ತಾವರೆಯ ಬಳ್ಳಿ
**ತಾವರೆವೂ** – ತಾವರೆಯ ಹೂ
**ತಾಳ್** – ಧರಿಸು; ಹೊಂದು; ಸಹಿಸು; ಗಂಟಲು
**ತಾಳಂಗುಟ್ಟು** – ತಾಳಹಾಕು
**ತಾಳ** – ತಾಳೆಯ ಗರಿ
**ತಾಳಧ್ವಜ** – ಭೀಷ್ಮ
**ತಾಳನಿವರ್ತನ(ನೆ)** – ತಾಳವನ್ನು ಹಿಡಿಯುವುದು
**ತಾಳಪತಾಕ** – ಬಲದೇವ
**ತಾಳಲಕ್ಷ್ಮ** – ತಾಳದ ಲಾಂಛನವುಳ್ಳವನು, ಬಲರಾಮ
**ತಾಳವಟ್ಟ** – (ತಾಳವೃಂತ) ತಾಳೆ ಗರಿಯ ಬೀಸಣಿಗೆ
**ತಾಳವಟ್ಟದ ಬಿಲ್ಲು** – ತಾಳವಟ್ಟ ಎಂಬ ಬಿಲ್ಲು
**ತಾಳಿಗಟ್ಟು** – ಮಂಗಳಸೂತ್ರವನ್ನು ಕಟ್ಟು
**ತಾಳಿಸು** – ಎಣ್ಣೆಯೊಡನೆ ಹುರಿ
**ತಾಳೀತರು** – ತಾಳೆಮರ
**ತಾಳುಂತಟ್ಟುಂ** – ಚೆಲ್ಲಾಪಿಲ್ಲಿಯಾಗು
**ತಾಳುಂತಟ್ಟುಂಬೊಯ್** – ಚೆಲ್ಲಾಪಿಲ್ಲಿಯಾಗುವಂತೆ ಹೊಡೆ
**ತಾಳುಗೆ** – (ತಾಲುಕಾ) ದವಡೆ
**ತಾಳುತಳ** – ಅಂಗುಳ ತಳಭಾಗ
**ತಾಳೆದನಿ** – ತಾಳೆಗರಿಗಳ ಸರಸರ ಶಬ್ದ
**ತಾಳೋದ್ಘಾಟನಿ** – ಬೀಗ ತೆಗೆಯುವುದು; ಒಂದು ಕಳ್ಳತನದ ವಿದ್ಯೆ
**ತಾಳೋಲೆ** – ತಾಳೆಗರಿಯ ಓಲೆ
**ತಾಳ್ದು** – ಧರಿಸು; ಹೊಂದು; ಸಹಿಸು
**ತಾಱ್** – ಶಕುನ
**ತಾಱಲ್** – ಒಣಕಲು; ಪೊದೆ
**ತಾಱಿಲ್ವಡಿ** – ಪೊದೆಯಲ್ಲಿ ಅಡಗಿಕೊ
**ತಾಱೆ** – ಅಳಲೆ
**ತಾಱೆಗಬೀಱೆಗ** – ಅಸ್ತವ್ಯಸ್ತ

**ತಾಱು** – ಕೃಶವಾಗು; ಒಣಗು
**ತಾಱುಂತಟ್ಟುಂ** – ತಾಳುಂತಟ್ಟುಂ
**ತಾಱುಂಬಟಿ** – ಕ್ರಮರಹಿತವಾಗಿ
**ತಾಱುಂಬಟಿಗೊಳ್** – ಇಡಿಕಿರಿ
**ತಾಱುಂಬಟಿಯಂ** – ತಾಱುಂಬಟಿ
**ತಾೞ್** – ತಾಳೆಯ ಮರ
**ತಾೞಿ** – ಕೇದಗೆ
**ತಾೞ್ಗಿಳ್** – ತಾಳೆಯ ಮರಗಳು
**ತಿಂಗ(ಗಿ)ಣಿ(ಗೆ)** – ಕುಚ್ಚು
**ತಿಂಗಳ್** – ಚಂದ್ರ; ವರ್ಷದ ಹನ್ನೆರಡನೇ ಒಂದು ಭಾಗ; ಬೆಳುದಿಂಗಳು
**ತಿಂಗಳ್ಗಲ್** – ಚಂದ್ರಕಾಂತಶಿಲೆ
**ತಿಂಗುಟಿ** – ತಿನ್ನಲು ಸಾಕಿದ ಕುರಿ
**ತಿಂತಿಣಿ** – ಸಮೂಹ, ಗುಂಪು
**ತಿಂತಿಣಿವಡೆ** – ಒತ್ತಾತ್ತಾಗಿ ಸೇರು
**ತಿಂತಿಣಿವಣ್** – ಗೊಂಚಲುಗೊಂಚಲಾಗಿ (ಒತ್ತಾಗಿ) ಬಿಟ್ಟ ಹಣ್ಣು
**ತಿಂತಿಣಿಸು** – ತಿಂತಿಣಿವಡೆ
**ತಿಂತ್ರಿಣಿ** – ಹುಣಸೆ ಮರ
**ತಿಂಬಡ** – ತಿನ್ನುವ ಪದಾರ್ಥ
**ತಿಂಬು** – ತುಂಬು
**ತಿಗಟ** – ಉದ್ದ
**ತಿಗುಡು** – ಮರದ ತೊಗಟೆ
**ತಿಗುಣ** – ತ್ರಿಗುಣ, ಮೂರು ಪಟ್ಟು
**ತಿಗುಣಂಗೊಳ್** – ಮುರು ಪಟ್ಟಷ್ಟು ಆಗು
**ತಿಗುಣಿಸು** – ಮೂರು ಪಟ್ಟಾಗು
**ತಿಗುರಿ** – ಚಕ್ರ; ಸುಳಿ
**ತಿಗುರಿದಿರುಪು** – ಜೋರಾಗಿ ತಿರುಗಿಸು
**ತಿಗುಳನಾಡು** – ತಮಿಳುದೇಶ
**ತಿಗ್ಮಕರ** – ಪ್ರಖರ ಕಿರಣಗಳುಳ್ಳವನು, ಸೂರ್ಯ
**ತಿಗ್ಮಪ್ರಭೆ** – ಪ್ರಖರ ಕಾಂತಿ
**ತಿಗ್ಮಮರೀಚಿ** – ತಿಗ್ಮಕರ
**ತಿಗ್ಮರುಙ್ಮಾಲಿ** – ತಿಗ್ಮರುಕ್+ಮಾಲಿ, ಪ್ರಖರಕಿರಣಗಳ ಮಾಲೆಯುಳ್ಳವನು, ಸೂರ್ಯ
**ತಿಗ್ಮರೋಚಿ** – ಸೂರ್ಯ
**ತಿಗ್ಮಾಂಶು** – ಸೂರ್ಯ
**ತಿಟ್ಟಮಿಡು** – ಚಿತ್ರ ಬರೆಯಲು ತೊಡಗು
**ತಿಟ್ಟು** – ಬೈಗುಳ; ದಿನ್ನೆ
**ತಿಣಿ** – ಒಟ್ಟಿಗೆ ಸೇರು
**ತಿಣುಕು** – ಮುಲುಕು; ಹೆಣಗಾಟ; ಹೂಸುಬಿಡು
**ತಿಣ್ಣ** – (ತೀಕ್ಷ್ಣ) ಭಾರ
**ತಿಣ್ಣಂ** – ತೀಕ್ಷ್ಣವಾಗಿ; ನಿಬಿಡವಾಗಿ
**ತಿಣ್ಣನೆ** – ಹೆಚ್ಚಾಗಿ
**ತಿಣ್ಣಮಿಡು** – ಬಲವಾಗಿ ಹೊಡೆ
**ತಿಣ್ಣವೆಳಗು** – ಪ್ರಖರವಾದ ಬೆಳಕು
**ತಿಣ್ಪು** – ಅತಿಶಯತೆ; ದಾರ್ಢ್ಯ
**ತಿತಿಕ್ಷಾನ್ವಿತ** – ಸಹನೆಯ ಗುಣದವನು
**ತಿತ್ತಿರಿಗಾಳೆ** – ಒಂದು ಬಗೆಯ ಕಹಳೆ
**ತಿದಿ** – ಚರ್ಮ; ಬೆಂಕಿಗೆ ಗಾಳಿಯೂದುವ ಸಾಧನ
**ತಿದಿಯುಗಿ** – ಚ ರ್ಮವನ್ನು ಸುಲಿ
**ತಿದಿಯುಸಿರ್** – ತಿದಿಯಿಂದ ಹೊಮ್ಮುವ ಗಾಳಿ
**ತಿನ್** – ಸೇವಿಸು
**ತಿನಿಸು** – ತಿನ್ನುವ ಪದಾರ್ಥ
**ತಿಪ್ಪುೞ್** – ಹಕ್ಕಿಯ ಗರಿ
**ತಿಪ್ಪೆ** – ಕಸದ ರಾಶಿ
**ತಿಬ್ಬ** – (ತೀವ್ರ) ಚುರುಕಾದ
**ತಿಬ್ಬಂ** – ಶೀಘ್ರವಾಗಿ
**ತಿಬ್ಬಂಮಾಡು** – ತೀವ್ರಗೊಳಿಸು
**ತಿಮಿರ್** – ತಿಕ್ಕು, ಲೇಪಿಸು; ಪರಿಮಳದ್ರವ್ಯ
**ತಿಮಿರ** – ಕತ್ತಲೆ; ಕಣ್ಣಿನ ಒಂದು ರೋಗ, ಪೊರೆ
**ತಿಮಿರು** – ಲೇಪನ
**ತಿಮುೞನಾೞ್** – ತಿಗುಳರ ನಾಡು, ತಮಿಳುನಾಡು
**ತಿರ** – (ಸ್ಥಿರ) ಶಾಶ್ವತ
**ತಿರಸ್ಕರಣ** – ತಾತ್ಸಾರ
**ತಿರಸ್ಕರಿಸು** – ಕಡೆಗಣಿಸು
**ತಿರಿ** – ಅಲೆದಾಡು, ಚಲಿಸು; ಭಿಕ್ಷೆ ಬೇಡು
**ತಿರಿದಾಡು** – ಅಲೆದಾಡು
**ತಿರಿದುಣ್** – ಭಿಕ್ಷೆ ಎತ್ತಿ ತಿನ್ನು
**ತಿರಿಕ** – ತಿರ್ಯಕ್ ಗತಿ (ಪಶುಜನ್ಮ)
**ತಿರಿ(ರು)ಕ** – ಅಲೆದಾಡುವವನು; ಭಿಕ್ಷುಕ
**ತಿರಿಕವ್ರಾತ** – ತಿರ್ಯಕ್‌ಜಾತಿಯ ಜೀವಿಗಳ ಗುಂಪು
**ತಿರಿಕೊೞಿಗೊಳ್** – ಭಿಕ್ಷೆ ಬೇಡು
**ತಿರಿಕೋಪಸರ್ಗ** – (ಜೈನ) ತಿರ್ಯಕ್‌ಜೀವಿಗಳಿಂದ ತಪಸ್ವಿಗಳಿಗೆ ಆಗುವ ತೊಂದರೆ
**ತಿರಿಗುತ್ತ** – ಭಿಕ್ಷೆ ಬೇಡುವ ಕಷ್ಟ
**ತಿರಿತರ್** – ಅಲೆದಡು
**ತಿರಿಪು** – ತಿರುಗಿಸು; ಅಲೆದಾಡಿಸು
**ತಿರೀಟ** – ಕಿರೀಟ
**ತಿರು** – ಬಿಲ್ಲಿನ ಹಗ್ಗ; (ಶ್ರೀ) ಶ್ರೇಷ್ಠ
**ತಿರುಗೊಲೆ** – ಬಿಲ್ಲಿನ ಕೊಪ್ಪು
**ತಿರುವಾಯ್** – ಹೆದೆಯ ಮಧ್ಯ
**ತಿರುವು** – ಬಿಲ್ಲಿನ ಹೆದೆ
**ತಿರುವುವೊಯ್** – ಹೆದೆಯಿಮದ ಠೇಂಕಾರಮಾಡು
**ತಿರುವೊಯ್ಲು** – ಬಾಣ ಬಿಡುವಾಗ ಬಿಲ್ಗಾರನ ಕೈಗೆ ಬೀಳುವ ಹೆದೆಯ ಪೆಟ್ಟು
**ತಿರುಳ್** – ಸಾರ
**ತಿರುಳೆಲೆ** – ಎಲೆಯ ಸುಳಿ
**ತಿರೋಧಾನ** – ಮರೆಯಾಗುವುದು, ಅಂತರ್ಧಾನ
**ತಿರೋಹಿತ** – ಮರೆಯಾದ(ವನು)
**ತಿರೋಹಿತವೇಷ** – ವೇಷ ಮರೆಸಿಕೊಂಡವನು
**ತಿರ್ದು** – ಸರಿಪಡಿಸು; ತಿದ್ದುವಿಕೆ
**ತಿರ್ದುವರ್** – ಸಮಂಜಸವಾಗು
**ತಿರ್ದುಹ** – ಸರಿಗೊಳಿಸುವಿಕೆ

**ತಿರ್ಯಗ್ಗತಿ** – (ಜೈನ) ಚತುರ್ಗತಿಗಳಲ್ಲಿ ಒಂದು; ಪಶುಪ್ರಾಣಿಗಳ ಗುಂಪು
**ತಿರ್ಯಗ್ಜಾತಿ** – ಪಶುಪ್ರಾಣಿಗಳ ಜಾತಿ
**ತಿರ್ಯಗ್ಜೀವ** – ಪಶುಪ್ರಾಣಿಗಳು
**ತಿರ್ಯಗ್ಡೀನ** – ಅಡ್ಡಡ್ಡಲಾಗಿ ನಡೆದಾಡುವುದು
**ತಿರ್ಯಗ್ಲೋಕ** – ಪಶುಪ್ರಾಣಿಗಳಿರುವ ಭೂಲೋಕ
**ತಿರ್ಯಗ್ವರ್ತಿತ** – ಅಡ್ಡಡ್ಡಲಾಗಿ ಓಡಾಡುವ
**ತಿರ್ಯಗ್ವಳಿತ** – ಅಡ್ಡಲಾಗಿ ಬಾಗಿಸಿದ
**ತಿಲಕ** – ಸುಂದರವಾದ ಹೂಬಿಡುವ ಒಂದು ಮರ; ಹಣೆಯ ಮೇಲಿನ ಬೊಟ್ಟು
**ತಿಲಕಿತ** – ತಿಲಕವಿರುವ; ತಿಲಕಪ್ರಾಯನಾದ
**ತಿಲಕಿಸು** – ತಿಲಕವನ್ನಿಡು
**ತಿಲಕೋಪಶೋಭಿ** – ತಿಲಕದ ಮರಗಳಿಂದ (ಹಣೆಯ ತಿಲಕದಿಂದ) ಶೋಭಿಸುವ;
**ತಿಲಜ** – ಎಳ್ಳಿನಿಂದ ಉಂಟಾದುದು, ಎಣ್ಣೆ
**ತಿಲ್ವಕ** – ಬಿಳಿ ಸಾಂಬ್ರಾಣಿಯ ಮರ
**ತಿವಳಿ** – ಸ್ತ್ರೀಯ ಹೊಕ್ಕುಳಿನ ಮೇಲಿರುವ ಮೂರು ಮಡಿಕೆಗಳು; ಒಂದು ಬಗೆಯ ವಾದ್ಯ
**ತಿವಿ** – ಗುದ್ದು, ಮುಷ್ಟಿಪ್ರಹಾರ ಮಾಡು
**ತಿವುಡುಗಳೆ** – ತವುಡು ತೆಗೆದ
**ತಿವುರಾಂತಕ** – ತ್ರಿಪುರಾಂತಕ
**ತಿವುರಿ** – ಡೇರೆ
**ತಿವುರು** – ಲೇಪ
**ತಿಸರ** – (ತ್ರಿಸರ) ಮೂರೆಳೆಯ ಸರ
**ತಿಸರಿ** – ಒಂದು ತಂತಿವಾದ್ಯ
**ತಿಸುಳ** – ತ್ರಿಶೂಲ
**ತಿಳಿ** – ಬಗ್ಗಡ ಹೋಗಿ ಶುದ್ಧವಾಗು; ನೈರ್ಮಲ್ಯ
**ತಿಳಿಗೊಳ** – ನಿರ್ಮಲವಾದ ಕೊಳ
**ತಿಳಿನೀರ್** – ಶುದ್ಧವಾದ ನೀರು
**ತಿಳಿಪು** – ಶುದ್ಧವಾಗು; ಕೋಪವನ್ನು ಉಪಶಮನಗೊಳಿಸು
**ತಿಳಿವಳಿಕೆ** – ಅರಿವು
**ತಿಳಿವು** – ತಿಳಿವಳಿಕೆ
**ತಿಱಿ** – ಹೂ ಕೊಯ್ಯಿ
**ತಿಱಿಕಲ್** – ಅಣ್ಣೆಕಲ್ಲು, ಮೇಲೆಸೆದು ಹಿಡಿಯುವ ಸಣ್ಣಕಲ್ಲು
**ತಿಱಿಕಲ್ಲಾಡು** – ತಿಱಿಕಲ್ ಆಟವಾಡು
**ತಿಱಿಕೊಱಿ** – ತಿರಿದು ತಿನ್ನುವವನು, ಕಾಳನ್ನು ಆಯ್ದುಕೊಂಡು ಜೀವಿಸುವವನು
**ತಿಱು** – ಸಲ್ಲಿಸು; ವಿನಿಮಯಮಾಡು
**ತಿಱುನೀರ್** – ಸತ್ತವರಿಗಾಗಿ ಕೊಡುವ ನೀರು, ತರ್ಪಣ
**ತಿಱುನೀರಿಕ್ಕು** – ತಿಱುನೀರನ್ನು ಕೊಡು
**ತಿಱ್ಱಂದಿರಿ** – ತಿರ್ರನೆ ತಿರುಗು
**ತಿಱ್ಱಗೆ(ನೆ)** – ಒಂದು ಅನುಕರಣ ಶಬ್ದ
**ತೀಂಟು** – ತೀಟು, ತಾಕು
**ತೀಂಟೆ** – ತೀಟೆ, ನವೆ
**ತೀಂಟೆತ್ತು** – ನವೆಯಾಗು
**ತೀಕ್ಷ್ಣ** – ಹರಿತವಾದ; ಗಾಢವಾದ
**ತೀಕ್ಷ್ಣಾಪಾಂಗ** – ಹರಿತವಾದ ಕುಡಿನೋಟ
**ತೀಟ** – ತಿಡುವಿಕೆ; ಸ್ಪರ್ಶ
**ತೀಡು** – ಉಜ್ಜು; ನವೆಯಾಗು
**ತೀನ್** – ನವೆ, ಕಡಿತ; ತಿನಿಸು, ತಿಂಡಿತೀನ್ಮಸೆ – ನವೆ ಜಾಸ್ತಿಯಾಗು–
**ತೀಯಕಾರ್ತಿ** – ತೀಟೆಯಿರುವವಳು, ಬೆದೆ ಬಂದವಳು
**ತೀರ್** – ಮುಗಿತಾಯಗೊಳ್ಳು; ಕೈಗೂಡು
**ತೀರ** – ದಡ
**ತೀರಂಬಿಡಿ** – ದಡವನ್ನು ಅನುಸರಿಸು
**ತೀರಸ್ಥ** – ದಡದಲ್ಲಿರುವ
**ತೀರಮೆ** – ಸಾಕಾಗುವುದು
**ತೀರ್ಚು** – ಮುಗಿಸು, ಕೊನೆಗೊಳಿಸು
**ತೀರ್ಥ(ಂ)ಕರ** – (ಜೈನ) ಅರ್ಹಂತ
**ತೀರ್ಥಕರತ್ವ** – (ಜೈನ) ತೀರ್ಥಂಕರನ ಪದವಿ
**ತೀರ್ಥಜಲ** – ಪವಿತ್ರಕ್ಷೇತ್ರದ ನೀರು
**ತೀರ್ಥನಾಥ** – ತೀರ್ಥ(ಂ)ಕರ
**ತೀರ್ಥಪ್ರವರ್ತಕ** – ತೀರ್ಥ(ಂ)ಕರ
**ತೀರ್ಥಯಾನ** – ತೀರ್ಥಯಾತ್ರೆ
**ತೀರ್ಥಾಂಬು** – ತೀರ್ಥಜಲ
**ತೀರ್ಥಾಖ್ಯಾನ** – ಧರ್ಮಜಿಜ್ಞಾಸೆ
**ತೀರ್ಥಾಧಿನಾಥ** – ತೀರ್ಥ(ಂ)ಕರ
**ತೀರ್ಥೇಶ** – ತೀರ್ಥ(ಂ)ಕರ
**ತೀರ್ಥೇಶ್ವರ** – ತೀರ್ಥ(ಂ)ಕರ
**ತೀರ್ಥೋದಕ** – ತೀರ್ಥಜಲ
**ತೀರ್ಥೋಪವಾಸ** – ಪುಣ್ಯಕ್ಷೇತ್ರದಲ್ಲಿ ಮಾಡುವ ಉಪವಾಸತೀವಿಸು – ತುಂಬಿಸು–
**ತೀವು** – ತುಂಬು
**ತೀವ್ರ** – ಹರಿತವಾದ; ಗಾಢವಾದ
**ತೀವ್ರಕಿರಣ** – ಸೂರ್ಯ
**ತೀವ್ರಾಂಶು** – ಸೂರ್ಯ
**ತೀಱ್** – ಕಬಳಿಸು
**ತುಂಗ** – ಎತ್ತರವಾದ, ದೊಡ್ಡದಾದ
**ತುಂಗಘೋಣ** – ಉದ್ದ ಮೂಗು(ಳ್ಳವನು)
**ತುಂಗತೆ** – ಹಿರಿಮೆ
**ತುಂಗತೆವೆಱು** – ಹಿರಿಮೆಯನ್ನು ಹೊಂದು
**ತುಂಗವಂಶ** – ಶ್ರೇಷ್ಠಕುಲ; ಎತ್ತರವಾದ ಬಿದಿರು
**ತುಂಗಾಕಾರ** – ದೊಡ್ಡ ಆಕಾರ
**ತುಂಡ** – ಮುಖ; ಕೊಕ್ಕು
**ತುಂತು** – ತುರುಕು
**ತುಂತುಱ್** – ತುಂತುರು ಹನಿ
**ತುಂದಿಲ** – ತುಂಬಿದ
**ತುಂಬ** – ಹೆಚ್ಚು, ಬಹಳ
**ತುಂಬಕಿ** – ಕೆನ್ನೆಯೂದಿಸಿಕೊಂಡು ಹಾಡುವ ದೋಷ
**ತುಂಬಿ** – ದುಂಬಿ, ಭ್ರಮರ; ತಂಬೂರಿಯ ಬುರುಡೆ

**ತುಂಬಿಗುರುಳ್** – ದುಂಬಿಯಂತೆ ಕಪ್ಪಾದ ಕೂದಲು
**ತುಂಬಿವಿಂಡು** – ದುಂಬುಗಳ ಗುಂಪು
**ತುಂಬು** – ಪೂರ್ತಿಮಾಡು; ಹಣ್ಣುಹೂಗಳ ನಾಳ; ಕೆರೆಯ ತೂಬು
**ತುಂಬುರಕೊ(ಗೊ)ಳ್ಳಿ** – ತೂಬರೆ ಮರದ ಕೊಳ್ಳಿ
**ತುಂಬುವೆಱೆ** – ತುಂಬಿದ ಚಂದ್ರ
**ತುಟಿತ** – (ಜೈನ) ಬಹು ದೊಡ್ಡ ಕಾಲಪ್ರಮಾಣ
**ತುಟ್ಟಿಸು** – ಬಲಗುಂದು
**ತುಡು** – ತೊಡು, ಹಿಡಿದು
**ತುಡು(ಂ)ಕು** – ಹಿಡಿದುಕೋ; ತುಂಬು; ವಾದ್ಯ ಬಾಜನೆಯ ಒಂದು ಬಗೆ
**ತುಡುಗಣಿ** – ತೊಂಡು
**ತುಡುಗು** – ಕಳ್ಳತನ
**ತುಡುಗೆ** – ಆಭರಣ
**ತುಡುಜೊಡರ್** – ಉರಿಯುವ ಸೊಡರು
**ತುಣವ** – ಜಂಖಾ ಎಂಬ ವಾದ್ಯ
**ತುತಿ** – (ಸ್ತುತಿ) ಹೊಗಳಿಕೆ
**ತುತ್ತು** – ತಿನ್ನು; ಒಂದು ಸಲ ಬಾಯಲ್ಲಿ ತುಂಬುವಷ್ಟು
**ತುದಿ** – ಮೇಲ್ಭಾಗ
**ತುದಿಗೊಂಬು** – ಕೊಂಬೆಯ ತುದಿ
**ತುದಿಗೋಡು** – ತುದಿಗೊಂಬು
**ತುದಿನಾಲಗೆ** – ನಾಲಗೆ ತುದಿ
**ತುಪ್ಪ** – ಘೃತ
**ತುಪ್ಪುೞ್** – ಪ್ರಾಣಿಗಳ ಮೈಗೂದಲು
**ತುಪ್ಪೇಱು** – ಜಿಡ್ಡಾಗು
**ತುಬ್ಬು** – ಕಳ್ಳನನ್ನು ಪತ್ತೆಮಾಡು; ಸಿಕ್ಕಿಬಿಡು; ಸೂಚಿಸು
**ತುಮುಲ(ಳ)ಕೇಳಿ** – ಗದ್ದಲದಿಂದ ಕೂಡಿದ ಆಟ
**ತುಮುೞ್** – ಹೊರಕ್ಕೆ ಬರು
**ತುಯ್ಯಲ್** – ಪಾಯಸ
**ತುರಂಗ(ಮ)** – ಕುದುರೆ
**ತುರಂಗತ್ವ** – ಕುದುರೆಯ ರೂಪ
**ತುರಂಗದಳ** – ಚತುರಂಗದಳದಲ್ಲಿ ಒಂದು; ಕುದುರೆ ಸೈನ್ಯ
**ತುರಂಗಮದಟು** – ತುರಂಗದಳ
**ತುರಂಗವದನ/ನೆ** – ಕಿನ್ನರ ಗಂಡು/ಹೆಣ್ಣು
**ತುರಂಗವಾಹಳಿ** – ಕುದುರೆಯ ಸಾಲು
**ತುರಂಗಸಂಗರ** – ತುರಂಗದಳದ ಯುದ್ಧ
**ತುರಂಗಸಾಧನ** – ತುರಂಗದಳ
**ತುರಂಗಿ** – ಕುದುರೆ ಸವಾರ
**ತುರಗ** – ಕುದುರೆ
**ತುರಗಚಯ** – ಕುದುರೆಗಳ ಸಮೂಹ
**ತುರಗದಟು** – ತುರಂಗದಳ
**ತುರಗರತ್ನ** – (ಜೈನ) ಜೀವರತ್ನಗಳಲ್ಲಿ ಒಂದು
**ತುರಗಾರೂಢ** – ಕುದುರೆ ಸವಾರ
**ತುರಗಾರೋಹ(ಣ)** – ಕುದುರೆ ಸವಾರಿ
**ತುರಗಾಶ್ವ** – ವೇಗವಾಗಿ ಓಡುವ ಕುದುರೆ
**ತುರಗಾಸ್ಯ** – ಕಿನ್ನರ; ಅಶ್ವಿನಿ ನಕ್ಷತ್ರ
**ತುರಾಷಾಟ್ಖಡ್ಗ** – ವಜ್ರಾಯುಧ
**ತುರಿತ** – (ತ್ವರಿತ) ಬೇಗ
**ತುರಿಪ** – ತುರಿತ
**ತುರಿಪಂಗೆಯ್** – ಆತುರಗೊಳ್ಳು
**ತುರಿಪಕಾಱ** – ಆತುರಗಾರ
**ತುರೀಯ** – ನಾಲ್ಕನೆಯ; ಪರಬ್ರಹ್ಮಸ್ಥಿತಿಯ
**ತುರೀಯಾವಸ್ಥೆ** – ನಾಲ್ಕನೆಯ ಅವಸ್ಥೆ
**ತುರುಪಟ್ಟಿ** – ಗೊಲ್ಲರ ಹಟ್ಟಿ
**ತುರುಷ್ಕ** – ಒಂದು ದೇಶ; ಸಾಂಬ್ರಾಣಿ ಮರ
**ತುಲನ** – ತೂಕಮಾಡುವುದು
**ತುಲಾಕೋಟಿ** – ತಕ್ಕಡಿಯ ತುದಿಗಡ್ಡಿ
**ತುಲಾದಂಡ** – ತಕ್ಕಡಿಯ ದಂಡ
**ತುಷಾರ** – ಮಂಜು
**ತುಷಾರಕರ** –ಚಂದ್ರ
**ತುಷಾರಪುಂಜ** – ಮಂಜಿನ ರಾಶಿ
**ತುಷಾರವರ್ಷ** – ಮಂಜಿನ ಮಳೆ
**ತುಷಾರೋಪಳ** – ಕರ್ಪೂರದ ಬಿಲ್ಲೆ
**ತುಷಿತ** – (ಜೈನ) ಲೋಕಾಂತಿಕ ದೇವತೆಗಳಲ್ಲಿ ಒಂದು ಗುಂಪು
**ತುಷ್ಟ** – ತೃಪ್ತಿಗೊಂಡ
**ತುಷ್ಟಿ** – ತೃಪ್ತಿ
**ತುಷ್ಟಿದಾನ** – ಪಸಾಯದಾನ
**ತುಹಿನ** – ಹಿಮ
**ತುಹಿನಕಣ** – ಹಿಮಬಿಂದು
**ತುಹಿನಕರ** – ಚಂದ್ರ
**ತುಹಿನಕ್ಷೋಣೀಭ್ರ** – ಹಿಮವತ್ಪರ್ವತ
**ತುಹಿನಕ್ಷ್ಮಾಧರ** – ತುಹಿನಕ್ಷೋಣೀಭ್ರ
**ತುಹಿನಗಿರಿ** – ತುಹಿನಕ್ಷೋಣೀಭ್ರ
**ತುಹಿನಗು** – ತುಹಿನಕರ
**ತುಹಿನಪವನ** – ತಂಪು ಗಾಳಿ
**ತುಹಿನಭೂಮೀಧ್ರ** – ತುಹಿನಕ್ಷೋಣೀಭ್ರ
**ತುಹಿನಮಹೀಧರ** – ತುಹಿನಕ್ಷೋಣೀಭ್ರ
**ತುಹಿನಾಂಶುಬಿಂಬ** – ಚಂದ್ರಬಿಂಬ
**ತುಹಿನಾಂಶುಮಂಡಲ** – ತುಹಿನಾಂಶುಬಿಂಬ
**ತುಹಿನಾಚಲ** – ತುಹಿನಕ್ಷೋಣೀಭ್ರ
**ತುಹಿನಾದ್ರಿ** – ತುಹಿನಕ್ಷೋಣೀಭ್ರ
**ತುಹಿನೋದ್ಗತಿ** – ಶೈತ್ಯದ ಹೆಚ್ಚಳ
**ತುಳಾಡಿ** – ಮಲ್ಲಯುದ್ಧದ ಒಂದು ವರಸೆ
**ತುಳುಂಕಾಡು** – ಹೊರಹೊಮ್ಮು
**ತುಳುಂಕು** – ಹೊರಚೆಲ್ಲು; ಚಿಮುಕಿಸು
**ತುಳುಂಕುಗುಟ್ಟು** – ಹೆಚ್ಚಾಗಿ ತುಳುಕಾಡು
**ತುಳುಕುನೀರಾಡು** – ನೀರು ಚಿಮುಕಿಸಿ ಆಟವಾಡು
**ತುಳುನಾಡು** – ಒಂದು ದೇಶ
**ತುೞೆ** – ನವೆ
**ತುೞಿಪ** – ವೇಗ

**ತುಱಿಪಗಾಱ(ತಿ)** – ಕಾಮಾತುರ(ರೆ)
**ತುಱಿಸು** – ಕೆರೆದುಕೊ
**ತುಱು** – ಹಸು
**ತುಱುಕಾ(ಗಾ)ರ** – ಹಸು ಕಾಯುವವನು
**ತುಱುಕಾರ್ತಿ** – ಹಸು ಕಾಯುವವಳು
**ತುಱು(ಂ)ಗಲ್** – ಗುಂಪು; ಗೊಂಚಲು
**ತುಱು(ಂ)ಬು**– ಮುಡಿದುಕೊ; ಕೂದಲ ಮುಡಿ
**ತುಱುಕು** – ಒತ್ತಾಗಿ ಸೇರಿಸು
**ತುಱುಗಲ್ಗೊನೆವಣ್** – ಇಡಿಕಿರಿದ ಗೊನೆಯ ಹಣ್ಣು
**ತುಱುಗಳವು** – ದನಗಳ ಕಳವು
**ತುಱುಗಾ** – ದನಗಳನ್ನು ಕಾಪಾಡು
**ತುಱುಗಾ(ಕಾ)ರ್ತಿ** – ಗೊಲ್ಲ ಹೆಂಗಸು
**ತುಱುಗಾಱ** – ಗೊಲ್ಲ
**ತುಱುಗು** – ಒತ್ತಾಗಿ ಸೇರು
**ತುಱುಗೆಮೆ(ವೆ)** – ಒತ್ತಾದ ಕೂದಲಿನ ರೆಪ್ಪೆ
**ತುಱುಗೆಮೆ(ವೆ)ಗಣ್** – ದಟ್ಟ ಕೂದಲ ರೆಪ್ಪೆಯುಳ್ಳ ಕಣ್ಣು
**ತುಱುಗೊಳ್** – ದನಗಳನ್ನು ಹಿಡಿ
**ತುಱುಗೋಳ್** – ಗೋಗ್ರಹಣ, ದನಗಳನ್ನು ಕದ್ದೊಯ್ಯುವಾಗ ಮಾಡುವ ಹೋರಾಟ
**ತುಱುನೆಲೆ** – ದನಗಳ ಕೊಟ್ಟಿಗೆ
**ತುಱುಪಟ್ಟಿ** – ದನಗಳ ಹಟ್ಟಿ; ಗೊಲ್ಲರ ಹಟ್ಟಿ
**ತುಱುವ(ಪ)ಳ್ಳಿ** – ಗೊಲ್ಲರ ಹಳ್ಳಿ
**ತುಱುವೆ** – ಒಂದು ಹೂವಿನ ಗಿಡ
**ತುೞಿ** – ಕಾಲಿಂದ ಮೆಟ್ಟು; ನಾಶಪಡಿಸು; ತುಳಿತ
**ತುೞಿಕಲ್** – ಬಾಡಿಹೋಗುವುದು
**ತುೞಿಯಿಸು** – ತುಳಿಯುವಂತೆ ಮಾಡು
**ತುೞಿಲ್** – ಶೌರ್ಯ; ನಮಸ್ಕಾರ
**ತುೞಿಲಸಂದ** – ವೀರ; ಪಂಚಮವರ್ಣದವನು
**ತುೞಿಲಾಳ್** – ಪರಾಕ್ರಮಿ
**ತುೞಿಲಾಳಾಯ್ತ** – ವೀರವೃತ್ತಿ
**ತುೞಿಲಾಳ್ತನ** – ಶೌರ್ಯ
**ತುೞಿಲ್ಗೆಯ್** – ನಮಸ್ಕಾರಮಾಡು
**ತುೞೀಲ್ಸಂದ** – ವೀರ; ಪಂಚಮ
**ತುೞಿವು** – ತುಳಿಯುವಿಕೆ
**ತೂಂಕಂಗೊಳ್** – ಮೂರ್ಛೆ ಹೋಗು
**ತೂಂಕಡಂಗಾಣ್** – ತೂಕಡಿಸು
**ತೂಂಕಡಿಕೆಗಣ್** – ನಿದ್ದೆಗಣ್ಣು
**ತೂಂಕಡಿಸು** – ತೂಕಡಿಸು, ನಿದ್ದೆಯಿಂದ ಜೂಗರಿಸು
**ತೂಂಕಡು** – ಜೋಂಪು, ನಿದ್ದೆ
**ತೂಂಕಡು** – ನಿದ್ದೆ
**ತೂಂಕು** – ತೂಗು; ಜೋಲುಬೀಳು
**ತೂಂತಿಡು** – ತೂತು ಮಾಡು; ತುಂಬು
**ತೂಂತು** – ತುರುಕು; ತೂತು
**ತೂಂತುವೋಗು** – ತೂತುಬೀಳು
**ತೂಂಬು** – ನೀರು ಹೋಗಲು ಇರುವ ತೂಬು
**ತೂಂಬುರ್ಚು** – ತೂಬು ತೆಗೆ
**ತೂಕ** – ಭಾರ
**ತೂಕರಿಸು** – ದೃಷ್ಟಿ ತೆಗೆಯಲು ಊದುವುದು
**ತೂಕವಣೆ** – ನೃತ್ಯದ ಒಂದು ಗತಿ
**ತೂಗಾಡು** – ತೊನೆದಾಡು
**ತೂಗಿ ತೊನೆ** – ತೂಗಾಡು
**ತೂಗಿಸು** – ತೂಕ ಮಾಡಿಸು
**ತೂಗು** – ತೂಕಮಾಡು
**ತುಗುಂಗೊಂಬು** – ತೂಗಾಡುವ ಕೊಂಬೆ
**ತೂಗುಂಜೊಡರ್** –ತೂಗುಹಾಕಿರುವ ಸೊಡರು
ತೂಗುಂದಲೆ – ತೊನೆದಾಡುವ ತಲೆ–
**ತೂಗುಂದೆನೆ** – ತೊನೆದಾಡುವ ತೆನೆ
**ತೂಗುಂದೊಟ್ಟಿಲು** – ತೂಗಾಡುವ ತೊಟ್ಟಿಲು
**ತೂಗುಮಂಚ** – ಉಯ್ಯಾಲೆ ಮಂಚ
**ತೂಣ** – (ಸ್ಥೂಣ), ಕಂಬ; ಯಮ
**ತೂಣೀರ** – ಬತ್ತಳಿಕೆ
**ತೂನ್** – ಜಗ್ಗು, ಹಿಡಿದು ಎಳೆ
**ತೂಪಿಱಿ** – ದೃಷ್ಟಿ ತೆಗೆಯಲು ಬಾಯಿಂದ ಊದು
**ತೂರ್ಣ** – ತ್ವರಿತ
**ತೂರ್ಣ್ಗತಿ** – ವೇಗದ ನಡಿಗೆ
**ತೂಪಿಱಿ** – ದೃಷ್ಟಿ ತೆಗೆಯಲು ಉಫ್ ಎಂದು ಊದು
**ತೂರ್ಪನಿ** – ತುಂತುರು ಹನಿ
**ತೂರ್ಯ** – ವಾದ್ಯ; ನಾಲ್ಕನೆಯ
**ತೂರ್ಯಕ್ಷ್ಮಾಜ** – (ಜೈನ) ದಿವ್ಯವಾದ್ಯಗಳನ್ನು ನೀಡುವ ಕಲ್ಪವೃಕ್ಷ
**ತೂರ್ಯತ್ರಿಕ** – ನೃತ್ಯ, ಗೀತ, ವಾದ್ಯ – ಇವುಗಳ ಮೇಳ–
**ತೂರ್ಯತ್ರಿತಯ** – ತೂರ್ಯತ್ರಿಕ
**ತೂರ್ಯನಾದ** – ಕಹಳೆಯ ಧ್ವನಿ
**ತೂರ್ಯನಿನದ** – ತೂರ್ಯನಾದ
**ತೂರ್ಯರವ** – ತೂರ್ಯನಾದ
**ತೂರ್ಯಸ್ವನ(ರ)** – ತೂರ್ಯನಾದ
**ತೂರ್ಯಾಂಗ** – (ಜೈನ) ತೂರ್ಯಕ್ಷ್ಮಾಜ
**ತೂರ್ಯರಾವ** – ತೂರ್ಯನಾದ
**ತೂಲ(ಳ)** – ಹತ್ತಿ; ತುಪ್ಪುಳ
**ತೂಲಿಕೆ** – ಕುಂಚ; ತುಪ್ಪುಳ
**ತೂಳ್** – ಹಿಮ್ಮೆಟ್ಟು, ಚೆದುರಿ ಹೋಗು
**ತೂಳ** – (ಸ್ಥೂಲ) ದಪ್ಪ
**ತೂಳಿಕೆ** – ಬಣ್ಣ ಹಾಕುವ ಕುಂಚ
**ತೂಳಿ** – ತೂಲ, ಹತ್ತಿ
**ತೂಱು** – ಜಳ್ಳನ್ನು ಗಾಳಿಯಿಂದ ಬೇರ್ಪಡಿಸು; ತುಂತುರು ಬೀಳು
**ತೂಱಿಕೊಳ್** – ತೂರಿಕೊಳ್ಳು
**ತೃಣ** – ಹುಲ್ಲು
**ತೃಣಕಲ್ಪ** – ಹುಲ್ಲಿಗೆ ಸಮನಾದ
**ತೃಣಕುಟಿ** – ಹುಲ್ಲಿನ ಗುಡಿಸಲು, ಪರ್ಣಶಾಲೆ
**ತೃಣಗ್ರಾಹಿ** – ನೀಲ ರತ್ನ

**ತೃಣಪುರುಷ** – ಬೆದರುಗೊಂಬೆ
**ತೃಣಶರಣ** – ಹುಲ್ಲಿನ ಗುಡಿಸಲು
**ತೃಣಶಿಖರ** – ಹುಲ್ಲಿನ ಮೊನೆ
**ತೃಣಾಗ್ರ** – ತೃಣಶಿಖರ
**ತೃಣೀಕೃತ** – ಹುಲ್ಲಿನಂತೆ ತುಚ್ಛವಾಗಿ ಪರಿಗಣಿತವಾದ
**ತೃತೀಯಕಲ್ಯಾಣ** – (ಜೈನ) ಪಂಚಕಲ್ಯಾಣಗಳಲ್ಲಿ ಮೂರನೆಯದಾದ ಪರಿನಿಷ್ಕ್ರಮಣ ಕಲ್ಯಾಣ
**ತೃತೀಯದ್ವೀಪ** – (ಜೈನ) ಎಂಟುದ್ವೀಪಗಳಲ್ಲಿ ಮೂರನೆಯದಾದ ಪುಷ್ಕರದ್ವೀಪ
**ತೃತೀಯಪೀಠ** – (ಜೈನ) ಸಮವಸರಣದ ಮೂರು ಪೀಠಗಳಲ್ಲಿ ಎಲ್ಲಕ್ಕಿಂತ ಎತ್ತರದ್ದು
**ತೃತೀಯೆ** – ಮೂರನೆಯವಳು; ತದಿಗೆ
**ತೃಪ್ತ** – ತೃಪ್ತಿಹೊಂದಿದ
**ತೃಷಾಪರ** – ಬಾಯಾರಿಕೆಗೊಂಡ
**ತೃಷಾರ್ತ** – ಬಾಯಾರಿಕೆಯಿಂದ ಗಾಸಿಹೊಂಡ
**ತೃಷಾವಿಷಾದ(ನ)** – ಬಾಯಾರಿಕೆಯಿಂದಾದ ಖಿನ್ನತೆ
**ತೃಷ್ಣಾಕರೆ** – ಬಾಯಾರಿಕೆಯುಂಟುಮಾಡುವವಳು
**ತೃಷ್ಣಾತುರ** – ಬಾಯಾರಿಕೆಯಿಂದ ಬಳಲುವ
**ತೃಷ್ಣಾಭಿಭೂತ** – ಬಾಯಾರಿಕೆಯಿಂದ ಪೀಡಿತನಾದ(ವನು)
**ತೃಷ್ಣೆ** – ತೃಷೆ
**ತೆಂಕಣ್(ಣ)** – ದಕ್ಷಿಣ
**ತೆಂಕನಾಡು** – ದಕ್ಷಿಣ ದೇಶ
**ತೆಂಕಮುಖ** – ದಕ್ಷಿಣಾಭಿಮುಖ
**ತೆಂಕಮೊಗ** – ತೆಂಕಮುಖ
**ತೆಂಗಾಳಿ** – ತೆಂಕಣದ ಗಾಳಿ
**ತೆಂಗು** – ನಾರಿಕೇಳ
**ತೆಂಟು** – ಕೇರು
**ತೆಂಬೆರಲ್** – ತೆಂಕಣ ಗಾಳಿ
**ತೆಂಬೆಲರ್** – ತೆಂಗಾಳಿ
**ತೆಕ್ಕನೆವೋಗು** – ಅಚ್ಚರಿಗೊಳ್ಳು
**ತೆಕ್ಕು** – ನವೆಗೆ ನೆಕ್ಕು
**ತೆಕ್ಕೆಗಟ್ಟು** – ಒಟ್ಟಾಗು
**ತೆಕ್ಕೆವೇೞು** – ಗುಂಪಾಗು
**ತೆಗಪು** – ತೆಗೆಸು; ಬೇಯಿಸು
**ತೆಗಲೆ(ಳೆ)** – ಹೆಕ್ಕತ್ತು, ಹೆಗಲು
**ತೆಗಳಕೆ(ಗೆ)** – ಪರದ, ನಿರಿಗೆ
**ತೆಗಳಗೆವೀ(ವಿ)ೞ್** – ಪದರಪದರವಾಗು
**ತೆಗೞ್** – ನಿಂದಿಸು; ನಿಂದೆ
**ತೆಗೞೆಸು** – ತೆಗಳುವಂತೆ ಮಾಡು
**ತೆಗೞ್ಕೆ** – ತೆಗಳಿಕೆ
**ತೆಗರ್ೞತೆ** – ಸರಸ
**ತೆಗೆ** – ಹೊರಗೆ ತಾ
**ತೆಗೆನೆೞ್** – ಪೂರ್ತಿ ಎಳೆ
**ತೆಗೆಯಾರ್ಳ** – ದಾಳಿಮಾಡುವ ಶೂರ
**ತೆಗೆಯಿಸು** – ಹೊರಬರುವಂತೆ ಮಾಡು; ತೆಗೆ+ಇಸು, ಬಾಣವನ್ನು ವೇಗವಾಗಿ ಬಿಡು
**ತೆಣಙು** – ತಿಣುಕು
**ತೆತ್ತಿಸು** – ಅಳವಡಿಸು
**ತೆನೆ** – ಧಾನ್ಯದ ತೆಂಡೆ, ಕಣಿಶ
**ತೆನೆವೋಗು** – ತೆನೆ ಬಿಡು
**ತೆಪ್ಪ(ಸ)** – ಹರಿಗೋಲು
**ತೆಪ್ಪರ್ತ** – ಮೂರ್ಛೆಯಿಂದ ಎದ್ದವನು
**ತೆಪ್ಪಙು** – ತೆರ್ಪಙು, ಚೇತರಿಸಿಕೊ
**ತೆಬ್ಬೞೆಸು** – ಮೇಲಕ್ಕೆತ್ತು
**ತೆಮರ್** – ಓಡಿಸು; ತೆವರು, ದಿನ್ನೆ
**ತೆಮಳ್ದು** – ಕೂಡಿಹಾಕು
**ತೆಮೞ್** – ತೆವಳಿಕೊಂಡು ಹೋಗು; ಸೇರಿಸಿಕೊ
**ತೆರ(ಂ)ಟು** – ಮದುವೆಯಲ್ಲಿ ಮುಯ್ಯ ಸೀರೆ ಕೊಡು
**ತೆರವು** – ತೆರಿಗೆ , ಶುಲ್ಕ
**ತೆರಳ್** – ಚಲಿಸು
**ತೆರಳ(ಣೆ)** – ರೇಷ್ಮೆಹುಳು
**ತೆರಳ್ಕೆ** – ತೆರಳುವಿಕೆ
**ತೆರಳ್ಚು** – ಚಲಿಸುವಂತೆ ಮಾಡು; ಸೇರಿಸು; ಪೂರೈಸು
**ತೆರೆ** – ಅಲೆ; ಜವನಿಕೆ
**ತೆರೆಗೊನೆ** – ಅಲೆಯ ಮೇಲುತುದಿ
**ತೆರೆಗೊಳ್** – ಅಲೆಗಳಿಂದ ಕೂಡು
**ತೆರೆದುಱುಗಲ್** – ತೆರೆಗಳ ಸಮೂಹ
**ತೆರೆದೊಂಗಲ್** – ತೆರೆದುಱುಗಲ್
**ತೆರೆಪೊಡೆ** – ಮಡಿಲು, ಉಡಿ
**ತೆರೆಮಸಗು** – ಅಲೆಗಳುಂಟಾಗು
**ತೆರೆಮುಗಿಲ್** – ಅಲೆಅಲೆಯಾದ ಮೋಡ
**ತೆರೆಮುೞುಗು** – ಅಲೆಗಳಲ್ಲಿ ಮುಳುಗು
**ತೆರೆಯುಲಿಪು** – ಅಲೆಗಳ ಧ್ವನಿ
**ತೆರೆಯೇೞ್** – ಉಬ್ಬರವುಂಟಾಗು
**ತೆರೆವಳಿಗೆ** – ಅವಕುಂಠನ
**ತೆರೆವಿಡಿ** – ಅಲೆಗಳನ್ನು ಅನುಸರಿಸು
**ತೆರೆವೇಂಟೆ** – ಬಲೆಯನ್ನು ಹಾಕಿ ಆಡುವ ಬೇಟೆ
**ತೆರೆವೊಯ್ಲು** – ತೆರೆಗಳ ಅಪ್ಪಳಿಸುವಿಕೆ
**ತೆರೆಸುತ್ತು** – ತೆರೆಯಲ್ಲಿ ಸುತ್ತು; ತೆರೆಯನ್ನು ಸುತ್ತು
**ತೆರ್ಕೆಗಡಲ್** – ಎರಡು ಸಮುದ್ರಗಳ ಸೇರುವಿಕೆ
**ತೆಲ್ಲಂಟ(ತೆಲ್ಲಟ)** – ಕಾಣಿಕೆ, ಬಳುವಳಿ
**ತೆಲ್ಲಂಟ(ಗೆ)ಗೊಡು** – ಉಡುಗೊರೆ ನೀಡು
**ತೆಲ್ಲ(ಂ)ಟದರ್** – ಉಡುಗೊರೆಯನ್ನು ತಾ
**ತೆಲ್ಲಟಗೊಳ್** – ಉಡುಗೊರೆಯನ್ನು ಸ್ವೀಕರಿಸು
**ತೆಲ್ಲಿಗ** – ತೈಲಿಗ, ಗಾಣಿಗ
**ತೆಲ್ಲಿಗಿತಿ** – ಗಾಣಿಗಿತ್ತಿ
**ತೆವಳೆ(ಗಾಣ್)** – ಉದಾಸೀನ(ಮಾಡು)
**ತೆಳ್ಗದಂಪು** – ಕೋಮಲ ಕೆನ್ನೆ
**ತೆಳ್ಗಲ್ಲ** – ತೆಳ್ಗದಂಪು
**ತೆಳ್ದೆರೆ** – ಸಣ್ಣ ಅಲೆ

**ತೆಳ್ಸಡು** – ಸಣ್ಣ ಸೊಂಟ
**ತೆಳ್ಪು(ಳುಂಪು)** – ತಿಳಿಯಾಗಿರುವುದು; ಪರಿಶುದ್ಧತೆ
**ತೆಳ್ಪುಗೆಡು** – ಶುದ್ಧತೆ ನಾಶವಾಗು
**ತೆಳ್ಪುವೆಱು** – ಪರಿಶುದ್ಧವಾಗು
**ತೆಳ್ವಣ್ಣ** – ತಿಳಿಯಾದ ಬಣ್ಣ
**ತೆಳ್ವದ** – ಕಾಮದ್ರವ
**ತೆಳ್ವರಿಜು** – ತೆಳುವಾದ ಬಟ್ಟೆ; ಕೃಶವಾದ ಶರೀರ
**ತೆಳ್ವಸಿಱ್** – ತೆಳುವಾದ ಹೊಟ್ಟೆ
**ತೆಳ್ವಳಕು** – ಶುಭ್ರವಾದ ಹರಳು
**ತೆಳ್ವೆಳಗು** – ತಿಳಿಯಾದ ಬೆಳಕು
**ತೆಳ್ವೆಱ** – ಬಿದಿಗೆ ಚಂದ್ರ
**ತೆಳ್ವೊಡೆ** – ತೆಳ್ವಸಿಱ್
**ತೆಳ್ವೊರೆ** – ತೆಳುವಾದ ಪೊರೆ
**ತೆಳ್ಸರಿ** – ಸಣ್ಣ ಸೋನೆ
**ತೆಳ್ಳಗೆ** – ತೆಳುವಾಗಿ; ತಿಳಿಯಾಗಿ
**ತೆಳ್ಪತು** – ತೆಳುವಾಗಿರುವಿಕೆ
**ತೆಳ್ಗಂಪು** – ನರುಗಂಪು
**ತೆಱ** – ರೀತಿ
**ತೆಱಂದಿರಿ** – ಜೋರಾಗಿ ಬೀಸು, ಹಾರು; ಗಿರಗಿರ ಸುತ್ತು
**ತೆಱಂದಿರಿಪು** – ವಿಧವಿಧವಾಗಿ ತಿರುಗಿಸು
**ತೆಱಂಬೊಳೆ** – ತೆರತೆರನಾಗಿ ಹೊಳೆ
**ತೆಱಂಬೊಳೆಯಿಸು** – ತೆರತೆರನಾಗಿ ಹೊಳೆಯಿಸು
**ತೆಱಪು** – ತೆರೆಯುವಿಕೆ, ಸಮಯಾವಕಾಶ
**ತೆಱಪುಗಣ್** – ಅಗಲವಾದ ಕಣ್ಣು
**ತೆಱಪುಗಾಣ್** – ಅವಕಾಶ ಕಾಣು
**ತೆಱಪುಗಾಣಿಸು** – ಅವಕಾಶ ಕಾಣಿಸು, ಎಡೆಗಾಣಿಸು
**ತೆಱಪುಗೊಡು** – ಎಡೆಕೊಡು
**ತೆಱಪುಗೊಳ್** – ಎಡೆಯನ್ನು ಪಡೆ
**ತೆಱಪುವಡೆ** – ಎಡೆ ಹೊಂದು
**ತೆಱಪುವಾರ್** – ಅವಕಾಶಕ್ಕಾಗಿ ಎದುರುನೋಡಿ
**ತೆಱಪುವೆಱು** – ತೆಱಪುವಡೆ
**ತೆಱವು** – ಎಡೆ; ಕಪ್ಪ
**ತೆಱು** – ಹಣ ಕೊಡು
**ತೆಱೆ** – ತೆಗೆ; ತೆರಿಗೆ
**ತೆಱೆಗೊಳ್** – ತೆರಿಗೆ ವಸೂಲುಮಾಡು
**ತೆಱೆದೆಱು** – ತೆರಿಗೆಯನ್ನು ತೆರು
**ತೇ** – ತೇಯಿ, ತಿಕ್ಕು
**ತೇಂಕಾಡಿಸು** – ತೇಲಿಸು
**ತೇಂಕಾಡು** – ತೇಲಾಡು
**ತೇಂಕಿಸು** – ತೇಲುವಂತೆ ಮಾಡು
**ತೇಂಕು** – ತೇಲಾಡು
**ತೇಂಕುದಾಣ** – ನಾಡಿಮಿಡಿತದ ಸ್ಥಾನ
**ತೇ(ಂ)ಗು** – ಉದಾನವಾಯು ಬಿಡು
**ತೇಂಗುಹ** – ಹಕ್ಕಿ ಹಿಚಿಕೆಹಾಕುವುದು
**ತೇಜ** – ಕಾಂತಿ; ಪರಾಕ್ರಮ
**ತೇಜಂಗಿಡಿಸು** – ಕಾಂತಿಗುಂದಿಸು; ಸಾಮರ್ಥ್ಯ ಕುಗ್ಗಿಸು
**ತೇಜಂಗೆಡು** – ಕಾಂತಿಗುಂದು; ಸಾಮರ್ಥ್ಯ ಕುಗ್ಗು
**ತೇಜಃಕ್ಷಯ** – ಕಾಂತಿಹೀನತೆ
**ತೇಜಃಪಿಂಡ** – ಬೆಂಕಿಯ ಉಂಡೆ
**ತೇಜಃಪ್ರಸರ** – ಕಾಂತಿಯ ಹರಡುವಿಕೆ
**ತೇಜಶ್ಚಕ್ರ** – ತೇಜಸ್ಸಿನ ಚಕ್ರ
**ತೇಜಸ್ವಿ** – ಕಾಂತಿಯುಕ್ತನಾದವನು
**ತೇಜಸ್ಸು** – ಕಾಂತಿ
**ತೇಜೋತಿಶಯ** – ಅತಿಶಯ ತೇಜಸ್ಸು
**ತೇಜೋನಿಧಿ** – ಕಾಂತಿಯ ನಿಧಿ
**ತೇಜೋನಿಳಯ** – ಕಾಂತಿಯ ನೆಲೆ
**ತೇಜೋಭಿರಾಮ** – ತೇಜಸ್ಸಿನಿಂದ ಶೋಭಿಸುವವನು
**ತೇಜೋವೃತ್ತಿ** – ಕಾಂತಿಯುಂಟಾಗುವಿಕೆ
**ತೇನತೇನಂ** – ಮೇಲಿಂದ ಮೇಲೆ
**ತೇಪೆ** – ಸೂಳೆ
**ತೇರ್** – ಬಂಡಿ; ರಥ
**ತೇರಂಜಿಸು** – ಸಾಣೆಯಿಂದ ಹೊಳಪು ಕೊಡು
**ತೇರಂಟೆ** – ಸಹಸ್ರಪಾದಿ, ಝುರಿಹುಳು
**ತೇರಜೆ** – ಒಂದು ಬಗೆಯ ಪ್ರಾಣಿ
**ತೇರಣ** – ಗೆದ್ದಲು
**ತೇರಯ್** – ದಾಳಿ ಮಾಡು
**ತೇರಯಿಸು** – ದಾಳಿಮಾಡು
**ತೇರಯ್ಯೆ** – ಆಸೆ
**ತೇರಸಿ** – ತ್ರಯೋದಶಿ
**ತೇರೆಸಗು** – ರಥವನ್ನು ಚೋದಿಸು
**ತೇರೊಡ್ಡು** – ರಥಗಳ ಸಮೂಹ
**ತೇರೈಸು** – ತವಕಪಡು
**ತೇಱ್** – ಚೇಳು
**ತೊಂಗಲ್** – ಕುಚ್ಚು, ಗೊಂಚಲು
**ತೊಂಗಲ್ಗಂಟೆ** – ಗೊಂಚಲು ಗಂಟೆ
**ತೊಂಡಲ್** – (ಇರುವೆ) ಸಾಲು
**ತೊಂಡಲ** – ತಲೆಯ ಆಭರಣ
**ತೊಂಡು** – ಸ್ವೇಚ್ಛಾವೃತ್ತಿ, ತುಡುಗುತನ
**ತೊಂಡುಗೆಡೆ** – ಗಿಳಿಯು ಗಳಹು; ರಾಶಿಯಾಗು
**ತೊಂಡುಮರುಳ್** – ಉದ್ಧಟ ಪಿಶಾಚಿ
**ತೊಂಡುವೆಣ್ಬುರುಳ** – ಗಳಹುವ ಹೆಣ್ಣು ಗಿಳಿ
**ತೊಂತುಳ** – ಸಿಕ್ಕುಸಿಕ್ಕು
**ತೊಂಬೆ** – ಕುಚ್ಚು, ಗೊಂಚಲು
**ತೊಗರ್** – ಚೊಗರು, ಒಗರು
**ತೊಟ್ಟಗೆ** – ತಕ್ಷಣವೇ
**ತೊಟ್ಟನೆ** – ತಕ್ಷಣ
**ತೊಟ್ಟಿಲ್** – ಮಗು ಮಲಗಲು ಬಿದಿರಿನಿಂದ ಮಾಡಿದ ತೂಗುಹಾಸಿಗೆ
**ತೊಟ್ಟಿಲಗ** – ತೊಟ್ಟಿಲಲ್ಲಿ ಮಲಗುವ ಹಸುಗೂಸು
**ತೊಟ್ಟು** – ಆರಂಭಿಸಿ
**ತೊಟ್ಟುಕಱಲ್** – ತೊಟ್ಟುಬಿಡು

**ತೊಡಕಿಕ್ಕು** – ಕಷ್ಟಕ್ಕೆ ಈಡುಮಾಡು
**ತೊಡಂಕು** – ಸಿಕ್ಕಿಸು; ಗೋಜಲು; ತೊಡಗು
**ತೊಡಂಕುವಲೆ** – ಒಂದು ಬಗೆಯ ಬಲೆ
**ತೊಡಂದುಡಿಸು** – ಆಭರಣವನ್ನು ತೊಡಿಸು
**ತೊಡಂಬೆ** – ಹಣ್ಣುಹೂಗಳ ತೊಟ್ಟು; ಗೊಂಚಲು
**ತೊಡಂಬೆಪಱಿ** – ತೊಟ್ಟು ಕಳಚು
**ತೊಡಂಬೆವಿಡು** – ತೊಟ್ಟು ಕಳಚಿಕೊ
**ತೊಡಗಿಸು** – ಶುರುಮಾಡು
**ತೊಡಗಿಸು** – ಆರಂಭಿಸು
**ತೊಡರ್** – ಸಿಲುಕಿಕೊ; ತೊಡಕು;ಸುತ್ತಿಕೊ
**ತೊಡರಿಕ್ಕು** – ತೊಡರುಗಳನ್ನು ಒಡ್ಡು
**ತೊಡರ್ಚು** – ಸಿಲುಕಿಸು
**ತೊಡರ್ಪು** – ಸಿಕ್ಕು; ಬಂಧನ
**ತೊಡವು** – ಒಡವೆ, ಆಭರಣ
**ತೊಡವೆಳಗು** – ಆಭರದ ಕಾಂತಿ
**ತೊಡಿಸು** – ಧರಿಯಿಸು
**ತೊಡು** – ಧರಿಸು; ಹೂಡು
**ತೊಡುಗೆ** – ಆಭರಣ
**ತೊಡೆ** – ಸೊಂಟದಿಂದ ಮಂಡಿಯವರೆಗಿನ ಭಾಗ; ಲೇಪಿಸು; ಒರಸಿಹಾಕು
**ತೊಡೆಯಿಸು** – ಲೇಪನಮಾಡು
**ತೊಡೆಯೇಱಿಸು** – ತೊಡೆಯ ಮೇಲೆ ಕೂರಿಸಿಕೊ
**ತೊಡೆವೇನೆ** – ತೊಡೆಯ ಬೇನೆ
**ತೊಡೆಸಕ್ಕಿ(ಕ್ಕೆ)** – ನೇರ ಸಾಕ್ಷಿ
**ತೊಣೆ** – ಸಮನಾದುದು; ಬತ್ತಳಿಕೆ
**ತೊಣ್ಮೆ** – ಪ್ರಾಚೀನ, ಮೂಲ(?)
**ತೊದಲ್(ಳ್)** – ಮುದ್ದುಮಾತಾಡು; ತಡವರಿಸು; ಸುಳ್ಳು
**ತೊದಳಿಸು** – ಮಾತಾಡುವಾಗ ತೊದಲು
**ತೊದಳ್ನುಡಿ** – ತೊದಲು ಮಾತಾಡು
**ತೊದಳ್ವಾತು** – ತೊದಲು ಮಾತು
**ತೊನಸೆ** – ಚಿಗಟದಂತಹ ಕೀಟ
**ತೊನೆ** – ಅಲ್ಲಾಡು, ತೂಗಾಡು
**ತೊನೆಪ** – ತೂಗಾಡುವಿಕೆ
**ತೊನ್ನ** – ತೊನ್ನುರೋಗಿ
**ತೊನ್ನುಗೊಳ್** – ತೊನ್ನು ಉಂಟಾಗು
**ತೊಯ್** – ಒದ್ದೆಯಾಗು
**ತೊರೆ** – ಎದೆಹಾಲು ಸುರಿ
**ತೊರೆಯೆರೆಯ** – ನದಿಗಳ ಒಡೆಯ, ಸಮುದ್ರ
**ತೊಲಗಿಸು** – ದೂರ ಮಾಡು
**ತೊಲಗು** – ದೂರವಾಗು; ಬಿಟ್ಟುಬಿಡು
**ತೊಲೆ** – (ತುಲಾ) ತಕ್ಕಡಿ
**ತೊವರ್** – ಒಗರು ರುಚಿ
**ತೊವರೇಱು** – ಒಗರು ರುಚಿಯುಂಟಾಗು
**ತೊವರ್ಗಂಪು** – ಒಗರಿನಿಂದ ಕೂಡಿದ ವಾಸನೆ
**ತೊವಲ್** – ಚಿಗುರು; ಚಿಗುರೆಲೆ; ತೊಗಲು, ಚರ್ಮ
**ತೊವಲನಿಕ್ಕು** – ಚಿಗುರನ್ನು ಹಾಕು
**ತೊವಲಿಕ್ಕು** – ಚಿಗುರು ಬಿಡು; ಚಿಗುರಿನಿಂದ ಮುಚ್ಚು
**ತೊವಲ್ಗೊಳ್** – ಶರಣಾಗತಿಯ ಸಂಕೇತವಾಗಿ ಚಿಗುರನ್ನು ಹಿಡಿದುಕೊ
**ತೊವಲ್ವಿಡಿ** – ತೊವಲ್ಗೊಳ್
**ತೊವಲ್ವೆರಸು** – ಚಿಗುರಿನಿಂದ ಕೂಡಿದ
**ತೊಳ(ಂ)ಕು** – ದೇಹದ ನಡುವಣ ಭಾಗ
**ತೊಳಗು** – ಪ್ರಕಾಶಿಸು; ಕಾಂತಿ
**ತೊಳೆ** – ಪ್ರಕ್ಷಾಲನಗೈ, ಶುದ್ಧಮಾಡು; ಹಣ್ಣಿನ ಭಾಗ (ಫಲತೂಲ)
**ತೊಱವಿ** – ಬಿಡುಗಡೆ; ತೊರೆಯುವುದು
**ತೊಱೆ** – ತ್ಯಜಿಸು; ನದಿ
**ತೊಱೆಯೆಱೆಯ** – ನದಿಯ ಒಡೆಯ, ಸಮುದ್ರ
**ತೊಱೆವು** – ತೊರೆಯುವಿಕೆ
**ತೊಱಲ್** – ಸುತ್ತಾಡು
**ತೊಱಲ್ಚು** – ಸುತ್ತಿಸು
**ತೊಱಲ್ತರ್** – ಸುತ್ತಾಡಿಕೊಂಡು ಬಾ
**ತೊಱಲಕಲ್** – ಬೀಸುವ ಕಲ್ಲು; ಸುತ್ತಾಡು
**ತೊಱಸು** – ಕಲಕು
**ತೊಱ್ತಾಳ್** – ತೊತ್ತನ್ನಾಗಿಸಿಕೊ
**ತೊೞ್ತಿರ್** – ತೊತ್ತುಗಳು
**ತೊೞ್ತು** – ತೊತ್ತು, ದಾಸಿ, ದಾಸ
**ತೊೞ್ತುಗೆಲಸ** – ತೊತ್ತು ಮಾಡುವ ಕೆಲಸ
**ತೊೞ್ತುಗೊಡು** – ತೊತ್ತಾಗಿ ಮಾಡಿಕೊ
**ತೊೞ್ತುವೆಸ(ಗೆಯ್)** – ತೊತ್ತಿನ ಕೆಲಸ (ಮಾಡು)
**ತೊೞ್ತುೞಿ(ಮಾಡು)** – ತೊತ್ತಳ, ಅಜ್ಜಿಬಜ್ಜಿ(ಮಾಡು)
**ತೊೞ್ತುೞಿದುೞಿ** – ತೊತ್ತಳದುಳಿ
**ತೊೞ್ತುವೆಸ** – ತೊತ್ತಿನ ಕೆಲಸ
**ತೊೞ್ತುಪುಟ್ಟಿ** – ತೊತ್ತಿಗೆ ಹುಟ್ಟಿದವನು
**ತೋ** – ನೆನೆಯಿಸು
**ತೋಕ** – ಮಗು
**ತೋಂಟ** – ತೋಟ
**ತೋಂಟವಾಳ** – ತೊಟಗಾರ
**ತೋಂಟ(ಱಗ)ವೆಸ** – ತೋಟದ ಕೆಲಸ
**ತೋಱ** – ಜಗಳ; ಮುಷ್ಟಿಯುದ್ಧ
**ತೋಡು** – ಅಗೆ; ಅಗೆದ ಜಾಗ; ಹೊರಟುಹೋಗು; ಜೋಡಿ; ಬಾಣ ಹೂಡು
**ತೋಡುಂ ಬೀಡುಂ** – ತೊಡುವುದೂ ಬಿಡುವುದೂ
**ತೋಪು** – ಮರಗಳ ಗುಂಪು
**ತೋಮರ** – ಒಂದು ಆಯುಧ, ಭರ್ಜಿ
**ತೋಯ** – ನೀರು
**ತೋಯಜನಾಭ** – ಕಮಲನಾಭ, ಬ್ರಹ್ಮ
**ತೋಯಧಿಷಂಡ** – ಕೊಳ; ಕಮಲಗಳ ಸಮೂಹ
**ತೋಯಧಿ** – ಸಮುದ್ರ
**ತೋಯನಿಧಾನ** – ತೋಯಧಿ
**ತೋಯಭೃತ್ತು** – ಮೋಡ
**ತೋಯರುಹನಾಭ** – ತೋಯಜನಾಭ

**ತೋಯಾಕರ** – ನೀರಿನ ಆವಾಸ, ಕೊಳ
**ತೋಯಾಧೀಶ** – ವರುಣ
**ತೋಯಾಶಯ** – ಜಲಾಶಯ
**ತೋಯೋದ್ದೇಶ** – ತೋಯಾಶಯ
**ತೋರ** – ದಪ್ಪನಾದ
**ತೋರಗಂಭ** – ದಪ್ಪನಾದ ಕಂಬ; ಆಧಾರಸ್ತಂಭ
**ತೋರಗಾಯ್** – ದಪ್ಪ ಕಾಯಿ
**ತೋರಗಿಡಿ** – ದಪ್ಪ ಕಿಡಿ
**ತೋರಗುರುಳ್** – ದಪ್ಪ ಮುಡಿ
**ತೋರಗೆಂಡ** – ದಪ್ಪ ಕೆಂಡ
**ತೋರಗೊನೆ** – ದಪ್ಪ ಗೊನೆ
**ತೋರಣಂಗಟ್ಟಿಸು** – ತೋರಣಕಟ್ಟುವಂತೆ ಮಾಡು
**ತೋರಣಂಗಟ್ಟು** – ತೋರಣವನ್ನು ಕಟ್ಟು
**ತೋರಣಗಂಬ** – ತೋರಣ ಕಟ್ಟುವ ಕಂಬ
**ತೋರಣಗ್ರಥನ** – ತೋರಣದ ರಚನೆ
**ತೋರಣದರ್ಪಣ** – ತೋರಣದಲ್ಲಿನ ಕನ್ನಡಿ
**ತೋರಣದ್ವಾರ** – ತೋರಣ ಕಟ್ಟುವ ಬಾಗಿಲು
**ತೋರತಕ್ಕು** – ಅಧಿಕ ಪರಿಣತಿ
**ತೊರದುಱುಂಬು** – ದಪ್ಪ ಮುಡಿ
**ತೋರದೆರೆ** – ದೊಡ್ಡ ಅಲೆ
**ತೋರಬಾಷ್ಪ** – ಅಧಿಕ ಕಣ್ಣೀರು
**ತೋರಮಲ್ಲಿಗೆ** – ದಪ್ಪ ಮಲ್ಲಿಗೆ
**ತೋರಮುಡಿ** – ತೊರದುಱುಂಬು
**ತೋರಮುತ್ತು** – ದಪ್ಪ ಮುತ್ತು
**ತೋರಮುಯ್ಯು** – ಅಗಲವಾದ ಭುಜ
**ತೋರಕುಚ** – ದೊಡ್ಡ ಮೊಲೆ
**ತೋರವಜ್ಜೆ** – ದೊಡ್ಡ ಹೆಜ್ಜೆ
**ತೋರವಣ್** – ದೊಡ್ಡ ಹಣ್ಣು
**ತೋರವಣ್ಗೊನೆ** – ದಪ್ಪ ಹಣ್ಣುಗಳಿರುವ ಗೊನೆ
**ತೋರವೆಟ್ಟು** – ದೊಡ್ಡ ಬೆಟ್ಟ
**ತೋರಹತ್ತ** – ದೊಡ್ಡ ಸೊಂಡಿಲು
**ತೋರಹಾರ** – ದೊಡ್ಡ ಹಾರ
**ತೋರಜಿಕೆ** – ಹೆಚ್ಚಿನ ಖ್ಯಾತಿ
**ತೋರಿತು** – ದೊಡ್ಡದು
**ತೋರ್ಕೆ** – ತೋರಿಕೆ; ಆಕಾರ
**ತೋರ್ಕೆಗಿಡು** – ಕಾಣದಾಗು
**ತೋರ್ಕೆಗುಡು** – ಒಪ್ಪಿಸಿಕೊಡು; ಕಾಣಿಕೆ ನೀಡು
**ತೋರ್ಕೆವಡೆ** – ಕಾಣಿಸಿಕೊ
**ತೋರ್ಕೆವರ್** – ತೋರ್ಕೆವಡೆ
**ತೋರ್ಪು** – ಕಾಣ್ಕೆ, ತೋರ್ಕೆ
**ತೋರ್ಪುಗೆಡು** – ತೋರ್ಕೆಗಿಡು
**ತೋಲ್** – ತೊವಲು, ಚರ್ಮ
**ತೋಲ್ಗಟ್ಟು** – ಮುಂಗೈಗೆ ಚರ್ಮ ಕಟ್ಟಿಕೊ
**ತೋಲ್ಪಂಜರ** – ತೊಗಲಿನ ಹಂದರ
**ತೋಲ್ವಾವಲ್** – ತೊಗಲು ಬಾವಲಿ
**ತೋಲ್ವುಲ್ಲೆ** – ತೊಗಲಿನಿಂದ ಮಾಡಿದ ಜಿಂಕೆ
**ತೋಳ್** – ಬಾಹು
**ತೋಳವಟ್ಟ** – ಸೊಂಡಿಲ ಹೊಡೆತ
**ತೋಳೆ** – ತೊಗಲ ಬಾವಲಿ
**ತೋಳೆವಿಂಡು** – ಬಾವಲಿಗಳ ಸಮೂಹ
**ತೋಳಗಟ್ಟು** – ತೋಳಬಂದಿ ಎಂಬ ಆಭರಣ
**ತೋಳ್ದುಱುಗಲ್** – ತೋಳುಗಳ ಸಮೂಹ
**ತೋಳ್ಮೊದಲ್** – ತೋಲಿನ ಆರಂಭ, ಕಂಕುಳು
**ತೋಳ್ವಲ** – ಬಾಹುಬಲ
**ತೋಳ್ವಲಯ** – ತೋಳಿಗೆ ಹಾಕಿಕೊಳ್ಳುವ ಬಳೆ
**ತೋಳ್ವಲೆ** – ತೋಳ ಸೆರೆ; ಹಿಡಿತ
**ತೋಳ್ವಲ್ಮೆ** – ತೋಳ ಬಲ್ಮೆ
**ತೋಳ್ವಳೆ** – ತೋಳ್ವಲಯ
**ತೋಳ್ವಾಸ** – ಹಿಡಿತ; ಅಪ್ಪುಗೆ
**ತೋಳ್ವೆಸುಗೆ** – ತೋಳ ಬೆಸುಗೆ; ಅಪ್ಪುಗೆ
**ತೋಳ್ವೆಱಗು** – ತೋಳ್+ಪೆಱಗು, ತೋಳ ಹಿಂಭಾಗ
**ತೋಱು** – ಕಾಣು; ಕಾಣಿಸು
**ತೋಱಿಕು(ಕೊ)ಡು** – ತೋರಿಸಿ ಕೊಡು
**ತೋಱುಂಬೊಣೆ** – ತೋರಿಸುವ ಹೊಣೆ (ಜಾಮೀನು)
**ತೌಗೆ** – ಮುಕ್ತಾಯ, ಅಂತ್ಯ
**ತೌದಲೆ** – ಕೊನೆಗಾಲ
**ತ್ಯಾಗ** – ಬಿಡುವುದು
**ತ್ಯಾಜ್ಯ** – ಬಿಡಲು ತಕ್ಕನಾದ
**ತ್ರಪು** – ತವರ ಎಂಬ ಲೋಹ
**ತ್ರಯಸ್ತ್ರಿಂಶತ್** – ಮೂವತ್ತಮೂರು
**ತ್ರಯೀಮಯ** – ಮೂರು ವೇದಗಳ ಸ್ವರೂಪನಾದವನು, ಸೂರ್ಯ
**ತ್ರಯೋದಶ** – ಹದಿಮೂರನೆಯ
**ತ್ರಸ** – ಚಲಿಸುವ; (ಜೈನ) ಈ ಹೆಸರಿನ ಕರ್ಮದ ಉದಯದಿಂದ ಎರಡರಿಂದ ಐದು ಇಂದ್ರಿಯಗಳನ್ನು ಪಡೆದ ಜೀವ
**ತ್ರಸಕಾಯ** – (ಜೈನ) ಚಲಿಸುವ ದೇಹವುಳ್ಳ ಪ್ರಾಣಿ
**ತ್ರಸಜೀವ** – ತ್ರಸಕಾಯ
**ತ್ರಸನಾಮ** – ಹದಿಮೂರು ಪ್ರಕೃತಿಗಳಲ್ಲಿ ಒಂದು; ತ್ರಸಜೀವವನ್ನು ಪಡೆಯುವಂತೆ ಮಾಡುವ ಕರ್ಮ
**ತ್ರಸನಾಳ** – (ಜೈನ) ತ್ರಸಜೀವಿಗಳ ವಾಸಸ್ಥಳ
**ತ್ರಸ್ತ** – ಭಯಗೊಂಡ; (ಜೈನ) ಒಂದು ನರಕ
**ತ್ರಸ್ತರಿಯಾಡು** – ಮೂದಲಿಸು
**ತ್ರಸ್ತಾಭಿಭೂತ** – ಹೆದರಿದವನು
**ತ್ರಾಣ** – ಶಕ್ತಿ; ರಕ್ಷಣೆ
**ತ್ರಾಯಸ್ತ್ರಿಂಶ** – (ಜೈನ) ದೇವೇಂದ್ರನಿಗೆ ಪುರೋಹಿತ, ಮಂತ್ರಿ, ಅಮಾತ್ರಂತಿರುವ ಮೂವತ್ತಮೂರು ದೇವತೆಗಳು
**ತ್ರಾಸಂಗೊಳ್** –ಭಯಗೊಳ್ಳು
**ತ್ರಿಕರಣ** – ಕಾಯ, ವಾಕ್ಕು, ಮನಸ್ಸು ಎಂಬ ಅಂಗಗಳು; (ಜೈನ) ಜೀವಕ್ಕೊದಗುವ ಅಧಃಕರಣ, ಅಪೂರ್ವಕರಣ,

ಅನಿವೃತ್ತಿಕರಣ ಎಂಬ ಮೂರು ಬಗೆಯ ಪರಿಣಾಮಗಳು
**ತ್ರಿಕರಣಪರಿಣತ** – ಕರಣತ್ರಯಗಳ ಬಗ್ಗೆ ಸಂಪೂರ್ಣ ತಿಳಿವಳಿಕೆಯಿರುವವನು
**ತ್ರಿಕರಣಶುದ್ಧಿ** – ಕಾಯ, ವಾಕ್ಕು, ಮನಸ್ಸುಗಳ ಪರಿಶುದ್ಧತೆ
**ತ್ರಿಕಾಲ** – ಭುತ, ವರ್ತಮಾನ, ಭವಿಷ್ಯತ್ ಎಂಬ ಕಾಲಗಳು
**ತ್ರಿಕಾಲಗೋಚರ** – ಯೋಗಶಕ್ತಿಯಿಂದ ತ್ರಿಕಾಲಗಳ ಆಗುಹೋಗುಗಳನ್ನು ತಿಳಿಯುವ ಶಕ್ತಿ
**ತ್ರಿಕಾಲದರ್ಶಿ** – ತ್ರಿಕಾಲಗೋಚರ ಶಕ್ತಿಯನ್ನು ಪಡೆದವನು
**ತ್ರಿಕಾಲಪ್ರಜ್ಞಪ್ತಿ** – ಲೋಕಾಕಾರಾದಿಗಳನ್ನು ನಿರೂಪಿಸುವ ಶಾಸ್ತ್ರಗ್ರಂಥ
**ತ್ರಿಖಂಡ** – (ಜೈನ) ಗಂಗಾ ಮತ್ತು ಸಿಂಧೂನದಿಗಳಿಂದ ಪ್ರತ್ಯೇಕಗೊಳಿಸಲ್ಪಟ್ಟ ಮೂರು ಭಾಗಗಳು
**ತ್ರಿಖಂಡಾಧಿಪ** – (ಜೈನ) ತ್ರಿಖಂಡಗಳ ಒಡೆಯ
**ತ್ರಿಗಾರವ** – (ಜೈನ) ಖುದ್ಧಿ, ರಸ, ಸಾತ ಎಂಬ ಮೂರು ಬಗೆಯ ಗಾರವ(ಅಹಂಕಾರ)ಗಳು
**ತ್ರಿಗುಣ** – ಸತ್ವ, ತಮಸ್ಸು, ರಜಸ್ಸುಗಳೆಂಬ ಮೂರು ಗುಣಗಳು; ಮೂರು ಪಟ್ಟು
**ತ್ರಿಗುಣಿಸು** – ಮೂರು ಪಟ್ಟಷ್ಟು ಆಗು
**ತ್ರಿಗುಪ್ತಿ** – (ಜೈನ) ಕಾಯ, ವಾಕ್ಕು, ಮನಸ್ಸುಗಳನ್ನು ನಿಯಂತ್ರಿಸಿಕೊಂಡು ಧರ್ಮಧ್ಯಾನದಲ್ಲಿ ನಿರತನಾಗುವುದು
**ತ್ರಿಗುಪ್ತಿಗುಪ್ತ** – ತ್ರಿಗುಪ್ತಿಯನ್ನು ಸಾಧಿಸಿದವನು
**ತ್ರಿಜಗ** – ಸ್ವರ್ಗ, ಮರ್ತ್ಯ, ಪಾತಾಳಗಳು
**ತ್ರಜಗಚ್ಚೂಡಾಮಣಿ** – ತ್ರಿಜಗತ್+ಚೂಡಾಮಣಿ, ಮೂರು ಲೋಕಗಳಿಗೂ ತಲೆಯ ಆಭರಣದಂತಿರುವವನು
**ತ್ರಜಗತ್ಪೂಜ್ಯ** – ಮೂರು ಲೋಕದ ಜನರಿಂದಲೂ ಗೌರವಾಸ್ಪದನಾದವನು
**ತ್ರಿಜಗಧೀಶ್ವರ** – ಮೂರು ಲೋಕಗಳ ಒಡೆಯ
**ತ್ರಿಜಗದ್ಗುರು** – ಮೂರು ಲೋಕದ ಜನರಿಗೂ ಗುರುವೆನಿಸಿದವನು
**ತ್ರಿಜಗದ್ವಂದಿತ** – ತ್ರಿಜಗತ್+ವಂದಿತ, ಮೂರು ಲೋಕದ ಜನರಿಂದಲೂ ವಂದಿತನಾದವನು
**ತ್ರಿಜಗನ್ನಾಥ** – ಮೂರು ಲೋಕಗಳ ಒಡೆಯ
**ತ್ರಿಜ್ಞಾನಧರ** – (ಜೈನ) ಶ್ರುತಿ, ಮತಿ, ಅವಧಿ ಎಂಬ ಮೂರು ಬಗೆಯ ಜ್ಞಾನಗಳನ್ನು ಪಡೆದವನು
**ತ್ರಿಣಯನ** – ಮೂರು ಕಣ್ಣುಗಳುಳ್ಳವನು, ಶಿವ
**ತ್ರಿತತ್ವಾತ್ಮಕ** – ತ್ರಿಗುಣಗಳ ಸ್ವರೂಪನಾದವನು, ಶಿವ
**ತ್ರಿತಯ** – ಮೂರರ ಗುಂಪು
**ತ್ರಿತಾಪ** – ಅಧಿದೈವಿಕ, ಅಧ್ಯಾತ್ಮಿಕ, ಅಧಿಭೌತಿಕ ಎಂಬ ತಾಪತ್ರಯಗಳು
**ತ್ರಿದಂಡ** – ಸನ್ಯಾಸಿಯ ಕೋಲು; (ಜೈನ) ಕಾಯ, ಮನೋ, ವಾಕ್ ಎಂಬ ಮೂರು ದಂಡಗಳು
**ತ್ರಿದಂಡಿ** – ಕಾಯ, ಮನೋ, ವಾಕ್‌ಗಳ ಮೇಲೆ ನಿಯಂತ್ರಣ ಸಾಧಿಸಿದ ಯತಿ
**ತ್ರಿದಧ** – ದೇವತೆ
**ತ್ರಿದಶ** – ಮೂರು ಹತ್ತುಗಳು, ಮೂವತ್ತು; ಸದಾ ಬಾಲ್ಯ, ಕೌಮಾರ್ಯ, ಯೌವನಗಳೆಂಬ ಮೂರು ಅವಸ್ಥೆಗಳನ್ನು ಮಾತ್ರ ಉಳ್ಳವನು, ದೇವತೆ
**ತ್ರಿದಶಕುಜ** – ಕಲ್ಪವೃಕ್ಷ
**ತ್ರಿದಶಕ್ಷ್ಮಾ** – ದೇವಲೋಕ
**ತ್ರಿದಶಗಣ** – ದೇವತೆಗಳ ಸಮೂಹ
**ತ್ರಿದಶಗಣಾಧಿನಾಯಕ** – ದೇವತೆಗಳ ಅಧಿಪತಿ, ದೇವೇಂದ್ರ
**ತ್ರಿದಶಗಣಾಧಿಪ** – ತ್ರಿದಶಗಣಾಧಿನಾಯಕ
**ತ್ರಿದಶತ್ವ** – ದೇವತ್ವ
**ತ್ರಿದಶನಗೇಂದ್ರ** – ದೇವತೆಗಳ ಬೆಟ್ಟ, ಮೇರು
**ತ್ರಿದಶನದೀಸಲಿಲ** – ಗಂಗಾನದಿಯ ನೀರು
**ತ್ರಿದಶನದೀಸುತ** – ಗಂಗೆಯ ಮಗ, ಭೀಷ್ಮ
**ತ್ರಿದಶನದೀಸುತ** – ಭೀಷ್ಮ
**ತ್ರಿದಶನಿವಾಸ** – ದೇವತೆಗಳ ಮನೆ, ದೇವಲೋಕ
**ತ್ರಿದಶಪತಿ** – ತ್ರಿದಶಗಣಾಧಿನಾಯಕ
**ತ್ರಿದಶಪದ** – ದೇವಪದವಿ
**ತ್ರಿದಶಲೋಕ** – ದೇವಲೋಕ
**ತ್ರಿದಶಶರಾಸನ** – ದೇವತೆಗಳ ಬಿಲ್ಲು
**ತ್ರಿದಶಸಂಕುಳ** – ದೇವತೆಗಳ ಸಮೂಹ
**ತ್ರಿದಶಸ್ತುತ** – ದೇವತೆಗಳಿಂದ ಸ್ತುತನಾದವನು
**ತ್ರಿದಶಸ್ತುತ್ಯ** – ದೇವತೆಗಳಿಂದ ಸ್ತುತಿಗೊಂಡವನು
**ತ್ರಿದಶಾಂಗನೆ** – ದೇವತಾಸ್ತ್ರೀ
**ತ್ರಿದಶಾಚಲ** – ತ್ರಿದಶನಗೇಂದ್ರ
**ತ್ರಿದಶಾಧಿನಾಥ** – ತ್ರಿದಶಗಣಾಧಿನಾಯಕ
**ತ್ರಿದಶಾಧೀಶ** – ತ್ರಿದಶಗಣಾಧಿನಾಯಕ
**ತ್ರಿಜಗಧೀಶ್ವರ** – ತ್ರಿದಶಗಣಾಧಿನಾಯಕ
**ತ್ರಿದಶಾನಕ** – ದೇವತೆಗಳ ದುಂದುಭಿ
**ತ್ರಿದಶಾನೀಕ** – ದೇವತೆಗಳ ಸಮೂಹ
**ತ್ರಿದಶಾರಿ** – ದೇವತೆಗಳ ಶತ್ರು
**ತ್ರಿದಶಾವಾಸ** – ತ್ರಿದಶನಿವಾಸ
**ತ್ರಿದಶಾಸನ** – ದೇವತೆಗಳ ಪೀಠ
**ತ್ರಿದಶೇಂದ್ರ** – ದೇವೇಂದ್ರ
**ತ್ರಿದಶೇಭ** – ಐರಾವತ
**ತ್ರಿದಿವ** – ದೇವಲೋಕ
**ತ್ರಿದಿವಾಂಗನೆ** – ದೇವತಾಸ್ತ್ರೀ
**ತ್ರಿದೋಷ ಸಂಭವಾಮಯ** – ವಾತ–ಪಿತ್ಥ–ಶ್ಲೇಷ್ಮಗಳ ದೋಷದಿಂದ ಉಂಟಾಗುವ ರೋಗಗಳು

**ತ್ರಿಪತಾಕೆ** – ಮೂರು ಬಾವುಟಗಳು; ಹಣೆಯ ಮೇಲಿನ ಮೂರು ಮಡಿಕೆಗಳು
**ತ್ರಿಪಥಗೆ** – ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ಹರಿಯುವವಳು, ಗಂಗೆ
**ತ್ರಿಪಲ್ಯೋಪಮ** – (ಜೈನ) ವ್ಯವಹಾರ, ಉದ್ಧಾರ, ಅದ್ಧಾ ಎಂಬ ಮೂರು ಪಲ್ಯಗಳಷ್ಟು ಆವಧಿ
**ತ್ರಿಪುಂಡ್ರ(ಕ)** – ಕಣೆಯ ಮೇಲಿನ ಮೂರು ವಿಭೂತಿ ಪಟ್ಟೆಗಳು
**ತ್ರಿಪುರ** – ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬ ಮಕ್ಕಳಿಗೆ ಕ್ರಮವಾಗಿ ಸೇರಿದ ಒಂದರ ಕೆಳಗೊಂದಿರುವ ಚಿನ್ನ, ಬೆಳ್ಳಿ, ಕಬ್ಬಿಣಗಳಿಂದಾದ ಪಟ್ಟಣಗಳು
**ತ್ರಿಪುರಭಂಜನ** – ತ್ರಿಪುರಗಳನ್ನು ನಾಶಮಾಡಿದವನು, ಶಿವ
**ತ್ರಿಪುರಾರಿ** – ತ್ರಿಪುರಭಂಜನ
**ತ್ರಿಪ್ರಾಭೃತ** – ಭೂಮಿ, ಹಣ, ವಸ್ತ್ರಗಳೆಂಬ ಮೂರು ಉಡುಗೊರೆಗಳು; (ಜೈನ) ಪ್ರಶಸ್ತನೋ ಆಗಮಭಾವ, ಅಪ್ರಶಸ್ತನೋ ಆಗಮಭಾವ, ಗ್ರಾಂಥಿಕ ಎಂಬ ಮೂರು ಪ್ರಾಭೃತ(ಉಡುಗೊರೆ)ಗಳು
**ತ್ರಿಭಂಗಿ** – ಶರೀರವನ್ನು ಮೂರು ಕಡೆಗಳಲ್ಲಿ ಬಾಗಿಸಿ ನಿಲ್ಲುವ ನಾಟ್ಯದ ಒಂದು ಭಂಗಿ
**ತ್ರಿಭಂಗಿಭಣಿತೆ** – ತ್ರಿಭಂಗದ ರೀತಿ
**ತ್ರಿಭುವನ** – ಸ್ವರ್ಗ, ಮರ್ತ್ಯ, ಪಾತಾಳಗಳು
**ತ್ರಿಭುವನಗುರು** – ಮೂರೂ ಲೋಕಗಳಿಗೆ ಗುರು
**ತ್ರಿಭುವನಪತಿ** – ಮೂರು ಲೋಕಗಳಿಗೂ ಒಡೆಯ
**ತ್ರಿಭುವನಮೋಹನ** – ಮೂರೂ ಲೋಕಗಳನ್ನು ಆಕರ್ಷಿಸುವವನು
**ತ್ರಿಭುವನಾಧೀಶ** – ತ್ರಿಭುವನಪತಿ
**ತ್ರಿಮಾರ್ಗಗೀತ** – (ಜೈನ) ರೂಪಸ್ತವ, ಗುಣಸ್ತವ, ವಸ್ತುಸ್ತವ ಎಂಬ ಮೂರು ಬಗೆಯ ಗೀತಗಳು
**ತ್ರಿಮೂಢತಾನಿರಶನ** – (ಜೈನ) ಲೋಕಮೂಢತೆ, ದೇವಮೂಢತೆ, ಪಾಖಂಡಿಮೂಢತೆ ಎಂಬ ಮೂರು ಬಗೆಯ ಮೌಢ್ಯಗಳನ್ನು ತೊರೆಯುವುದು; ಇದು ಸಮ್ಯಗ್ದರ್ಶನದ ಒಂದು ಅಂಗ
**ತ್ರಿಯಾಮಾಂತ್ಯ** – ಬೆಳಗಿನ ಜಾವ
**ತ್ರಿಯಾಮೆ** – ಮೂರು ಜಾಮಗಳನ್ನುಳ್ಳದು, ರಾತ್ರಿ
**ತ್ರಿರಾತ್ರ** – ಮೂರು ದಿನಗಳ ಅವಧಿ
**ತ್ರಿಲೋಕ** – ತ್ರಿಭುವನ
**ತ್ರಿಲೋಕಗುರು** – ತ್ರಿಭುವನಗುರು
**ತ್ರಿಲೋಕಚೂಡಾಮಣಿ** – ಮೂರು ಲೋಕಗಳಿಗೂ ತಲೆಯ ಆಭರಣದಂತಿರುವವನು, ಅರ್ಹಂತ
**ತ್ರಿಲೋಕಜನನಿ** – ಮೂರು ಲೋಕಗಳಿಗೂ ತಾಯಿಯಂತಿರುವವಳು, ಅರ್ಹಂತನ ತಾಯಿ
**ತ್ರಿಲೋಕಪ್ರಭು** – ತ್ರಿಭುವನಾಧೀಶ
**ತ್ರಿಲೋಕಾಂಬಿಕೆ** – ತ್ರಿಲೋಕಜನನಿ
**ತ್ರಿಲೋಕಾಧಿಪತಿ** – ತ್ರಿಲೋಕಪ್ರಭು
**ತ್ರಿಲೋಕೇಶ್ವರ** – ತ್ರಿಲೋಕಪ್ರಭು
**ತ್ರಿಲೋಕೈಕಚೂಡಾಮಣಿ** – ತ್ರಿಲೋಕಚೂಡಾಮಣಿ
**ತ್ರಿವರ್ಗ** – ಧರ್ಮ, ಅರ್ಥ, ಕಾಮ
**ತ್ರಿವಳಿ** – ಹೊಟ್ಟೆಯ ಮೇಲಿನ ಮೂರು ಮಡಿಕೆ
**ತ್ರಿವಾತ** – (ಜೈನ) ಲೋಕವನ್ನು ಸುತ್ತುವರಿದಿರುವ ವಾತ, ಘನವಾತ, ತನುವಾತಗಳೆಂಬ ಗಾಳಿಯ ಆವರಣಗಳು
**ತ್ರಿವಿಕ್ರಮ** – ಮೂರು ಲೋಕಗಳನ್ನೂ ತನ್ನ ಮೂರು ಹೆಜ್ಜೆಗಳಿಂದ ಆವರಿಸಿದವನು, ವಿಷ್ಣು
**ತ್ರಿವಿಧಮಾರ್ಗ** – ಸಂಗೀತದಲ್ಲಿನ ಶುದ್ಧ, ಸಾಳಗ, ಸಂಕೀರ್ಣವೆಂಬ ಮೂರು ಬಗೆಯಲ್ಲಿ ಹಾಡುವ ರೀತಿ
**ತ್ರಿವಿಧಶಕ್ತಿ** – ಪ್ರಭು, ಮಂತ್ರ, ಉತ್ಸಾಹಗಳೆಂಬ ಮೂರು ಶಕ್ತಿಗಳು
**ತ್ರಿವಿಷ್ಟಪ** – ದೇವಲೋಕ
**ತ್ರಿಶಂಕು** – ಸೂರ್ಯವಂಶದ ದೊರೆ; ಹರಿಶ್ಚಂದ್ರನ ತಂದೆ; ಅನ್ಯಸ್ತ್ರೀ ಅಪಹರಣ, ಸುಳ್ಳು ಹೇಳಿದುದು, ಹಸಿ ಮಾಂಸ ತಿಮದುದು ಎಂಬ ಮೂರು ತಪ್ಪುಗಳನ್ನು ಮಾಡಿ ವಸಿಷ್ಠನ ಶಪಕ್ಕೆ ಗುರಿಯಾದ ಸತ್ಯವ್ರತನಿಗೆ ಆನಂತರ ಬಂದ ಹೆಸರು
**ತ್ರಿಶಕ್ತಿ** – ರಾಜನಲ್ಲಿರಬೇಕಾದ ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿಗಳು
**ತ್ರಿಶಲ್ಯ** – (ಜೈನ) ಮಿಥ್ಯಾ, ಮಾಯಾ, ನಿದಾನಗಳೆಂಬ ಮೂರು ಮೋಹಗಳು
**ತ್ರಿಶಾಲ** – ಮೂರು ಸ್ತರಗಳಿಂದ ಕೂಡಿದ
**ತ್ರಿಶುದ್ಧಿ** – ತ್ರಿಕರಣಶುದ್ಧಿ
**ತ್ರಿಷಷ್ಠಿ** – ಅರವತ್ತಮೂರು
**ತ್ರಿಷಷ್ಠಿಶಲಾಕಾಪುರುಷರು** – (ಜೈನ) ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು: ವೃಷಭ, ಅಜಿತ, ಸಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿನಾಥ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವನಾಥ, ವರ್ಧಮಾನ; ಹನ್ನೆರಡು ಮಂದಿ ಚಕ್ರವರ್ತಿಗಳು: ಭರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ; ಒಂಬತ್ತು ಮಂದಿ

ಬಲದೇವರು: ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ; ಒಂಬತ್ತು ಮಂದಿ ವಾಸುದೇವರು: ತ್ರಿಪೃಷ್ಠ, ದ್ವಿಪೃಷ್ಠ, ಸ್ವಯಂಭೂ, ಪುರುಷೋತ್ತಮ, ಪುರುಷಸಿಂಹ, ಪುಂಡರೀಕ, ದತ್ತ, ಲಕ್ಷ್ಮಣ, ಕೃಷ್ಣ; ಒಂಬತ್ತು ಮಂದಿ ಪ್ರತಿವಾಸುದೇವರು: ಅಶ್ವಗ್ರೀವ, ತಾರಕ, ಮೇರುಕ, ಮಧುಕೈಟಭ, ನಿಶುಂಬ, ಬಲಿ, ಪ್ರಹರಣ, ರಾವಣ, ಜರಾಸಂಧ

**ತ್ರಿಸಂಜ್ಞ** – ಮಾತು, ಕಣ್ಣಾಡಿಸುವುದು, ಅಂಗಚಲನೆ ಎಂಬ ಮೂರು ಚಲನೆಗಳು

**ತ್ರಿಸಂಧ್ಯಾಸೇವೆ** – ಬೆಳಿಗ್ಗೆ, ಮಧ್ಯಾಹ್ನ, ಸಂಜೆಗಳಲ್ಲಿ ಮಾಡುವ ಸೇವೆ

**ತ್ರಿಸಂಧ್ಯೆ** – ಬೆಳಿಗ್ಗೆ, ಮಧ್ಯಾಹ್ನ, ಸಂಜೆಗಳು

**ತ್ರಿಸರವೇಣಿ** – ಮೂರು ಸರಗಳ ಹೆಣಿಗೆ

**ತ್ರಿಸಾಕ್ಷಿ** – ಕಾಯ, ವಾಕ್, ಮನಗಳೆಂಬ ಮೂರು ಸಾಕ್ಷಿಗಳು – (ಜೈನ) ಆತ್ಮ, ಇಂದ್ರ, ಸಿದ್ಧ ಎಂಬ ಸಾಕ್ಷಿಗಳು –

**ತ್ರಿಸಾಕ್ಷಿಕ** – (ಜೈನ) ತ್ರಿಸಾಕ್ಷಿಗಳುಳ್ಳವನು

**ತ್ರಿಸೆ** – (ತೃಷಾ) ಬಾಯಾರಿಕೆ

**ತ್ರಿಸ್ಥಾನ** – ಮಂದ್ರ, ಮಧ್ಯಮ, ತಾರಗಳೆಂಬ ಸಂಗೀತದಲ್ಲಿನ ಮೂರು ಸ್ಥಾಯಿಗಳು

**ತ್ರಿಸ್ಥಾಯಿ** – ತ್ರಿಸ್ಥಾನ

**ತ್ರೀಂದ್ರೀಯ** – ಸ್ಪರ್ಶ, ರಸನ, ಘ್ರಾಣ ಎಂಬ ಮೂರು ಇಂದ್ರಿಯಗಳನ್ನುಳ್ಳ ಜೀವ, ಕ್ರಿಮಿಕೀಟಗಳು

**ತ್ರೇತಾಗ್ನಿ** – ಗಾರ್ಹಪತ್ಯ, ದಕ್ಷಿಣ, ಆಹವನೀಯ ಎಂಬ ಮೂರು ಅಗ್ನಿಗಳು

**ತ್ರೇತೆ** – ಮೂರರ ಗುಂಪು, ತ್ರೇತಾಯುಗ

**ತ್ರೈಕಾಲ್ಯಯೋಗಿ** – ತ್ರಿಕಾಲಜ್ಞಾನಿಯಾದ ಯೋಗಿ

**ತ್ರೈಗುಣ್ಯ**– ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳು

**ತ್ರೈದಶ್ಯ** – ತ್ರಿದಶ(ದೇವತೆ)ಸಂಬಂಧಿಯಾದ

**ತ್ರೈಮೂರ್ತಿ** – ಬ್ರಹ್ಮ, ವಿಷ್ಣು, ಶಿವ ಎಂಬ ತ್ರಿಮೂರ್ತಿಗಳು

**ತ್ರೈಲೋಕ್ಯ** – ತ್ರಿಭುವನ

**ತ್ರೈಲೋಕ್ಯಗುರು** – ತ್ರಿಭುವನಗುರು

**ತ್ರೈಲೋ(ಳೋ)ಕ್ಯನಾಥ** – ತ್ರಿಲೋಕಾಧಿಪತಿ

**ತ್ರೈಲೋಕ್ಯನೇತ್ರ** – ಮೂರು ಲೋಕಗಳಿಗೂ ಕಣ್ಣಿನಂತಿರುವವನು

**ತ್ರೈಲೋಕ್ಯಲೋಚನ** – ತ್ರೈಲೋಕ್ಯನೇತ್ರ

**ತ್ರೈಲೋಕ್ಯಸಾರ** – ಮುರು ಲೋಕಗಳಲ್ಲಿಯೂ ಅತ್ಯಂತ ಶ್ರೇಷ್ಠವಾದ

**ತ್ರೈಲೋಕ್ಯೇಶ್ವರ** – ತ್ರಿಲೋಕಾಧಿಪತಿ

**ತ್ರೈವಿದ್ಯ** – ಋಕ್, ಯಜುಸ್, ಸಾಮ ವೇದಗಳು; (ಜೈನ) ಜೀವಸ್ಥಾನ, ಕ್ಷುದ್ರಕಬಂಧ, ಬಂಧಸ್ವಾಮಿತ್ವವಿಚಯಗಳೆಂಬ ಷಟ್ಖಂಡಾಗಮದ ಮೂರು ಖಂಡಗಳನ್ನು ತಿಳಿದವನು

**ತ್ರೈವಿದ್ಯದೇವ** – (ಜೈನ) ತ್ರೈವಿದ್ಯಗಳಲ್ಲಿ ಪರಿಣತ

**ತ್ರೈವಿದ್ಯವ್ರತಿ** – ತ್ರೈವಿದ್ಯದೇವ

**ತ್ರೈವಿದ್ಯಾಸ್ಪದ** – ವ್ಯಾಕರಣ, ತರ್ಕ, ಜೈನಸಿದ್ಧಾಂತಗಳಲ್ಲಿ ಬಲ್ಲಿದನಾದವನು

**ತ್ರೈವಿದ್ಯೇಶ** – ತ್ರೈವಿದ್ಯಗಳನ್ನು ತಿಳಿದವನು; (ಜೈನ) ತ್ರೈವಿದ್ಯ

**ತ್ರ್ಯಂಬಕ** – ಮೂರು ಕಣ್ಣುಳ್ಳವನು, ಶಿವ

**ತ್ರ್ಯಶ್ರೀಕೃತ** – ನಾಟ್ಯದ ಒಂದು ಭಂಗಿ

**ತ್ರೋಟಿ** – ಕೊಕ್ಕು

**ತ್ವಕ್** – ಚರ್ಮ

**ತ್ವಗಸ್ಥಿಭೂತ** – ದೇಹದಲ್ಲಿ ಚರ್ಮ–ಮೂಳೆಗಳು ಮಾತ್ರ ಉಳಿದಿರುವಷ್ಟು ಕೃಶವಾದ–

**ತ್ವಗ್ಜ** – ತೊಗಲಿನಿಂದ ಮಾಡಿದ

**ತ್ವದೀಯ** – ನಿನ್ನ, ನಿನಗೆ ಸಂಬಂಧಿಸಿದ (ಸೇರಿದ)

**ತ್ವರಿತ** – ಬೇಗನೆ; ಬೇಗ

**ತ್ವರಿತಂ** – ಶೀಘ್ರವಾಗಿ

**ತ್ವಿಡ್** –ಪ್ರಕಾಶ

**ಥ–**

**ಥಟ್ಟು** – ಸೈನ್ಯ

**ಥಳಥಳಸು** – ಹೊಳೆ

## ದ

**ದಂಟು** – ತಾವರೆ ಮುಂತಾದುದರ ನಾಳ

**ದಂಡ** – ದಂಡನೆ; ಕೋಲು

**ದಂಡಂಗೊಳ್** – ದಂಡನೆಯನ್ನು ಪಡೆ

**ದಂಡಖಂಡ** – ಚಿಕ್ಕ ಕೋಲು

**ದಂಡತೋರಣಕ** – ನೀರೆತ್ತುವ ರಾಟೆಯ ಅರೆಕಾಲುಗಳ ಪಂಕ್ತಿ

**ದಂಡತ್ರಯ** – (ಜೈನ) ಮನಸ್ಸು, ದೇಹ, ಮಾತುಗಳಿಗೆ ಸಂಬಂಧಿಸಿದ ಮೂರು ಬಗೆಯ ದೋಷಗಳು

**ದಂಡಧರ** – ದಂಡವನ್ನು ಹಿಡಿದಿರುವವನು; ಅಧಿಕಾರ ಹಿಡಿದವನು; ಯಮ

**ದಂಡಧಾರ** – ಅಧಿಕಾರದಂಡ ಹಿಡಿದವನು

**ದಂಡನಮಸ್ಕಾರ** – ಸಾಷ್ಟಾಂಗ ನಮಸ್ಕಾರ

**ದಂಡನಾಯಕ** – ಸೇನಾಧಿಪತಿ

**ದಂಡನೀತಿ** – ರಾಜನೀತಿ

**ದಂಡಪಾಣಿ** – ಗದೆ ಹಿಡಿದವನು, ಯಮ

**ದಂಡಭ್ರಮ** – ತಪ್ಪು ತಿಳಿವಳಿಕೆಯಿಂದ ಮುಗ್ಧನನ್ನು ದಂಡಿಸುವುದು

**ದಂಡರತ್ನ** – (ಜೈನ) ಏಳು ಜೀವರತ್ನಗಳಲ್ಲಿ ಒಂದು, ದಿವ್ಯದಂಡ
**ದಂಡಾಧಿನಾಯಕ** – ದಂಡನಾಯಕ
**ದಂಡಾಧಿಪ** – ದಂಡನಾಯಕ
**ದಂಡಾಧೀಶ** – ದಂಡನಾಯಕ
**ದಂಡಾಧ್ಯಕ್ಷಕ** – ನ್ಯಾಯಾಧಿಪತಿ
**ದಂಡಿಗೆ (ದಂಡಿಕಾ)** – ಪಲ್ಲಕ್ಕಿ; ಒಂದು ತಂತೀವಾದ್ಯ
**ದಂಡಿತ** – ದಂಡನೆಗೊಳಗಾದ; ಸೋತ
**ದಂಡಿಸು** – ಶಿಕ್ಷೆಗೊಳಪಡಿಸು
**ದಂಡು** – ಸೈನ್ಯ
**ದಂಡುಱುಂಬೆ** – ಗಯ್ಯಾಳಿ, ದಿಟ್ಟೆ
**ದಂಡುಱೆಗ** – ದಂಡವಾಗಿ ಪಡೆದವನು, ಯುದ್ಧಖೈದಿ
**ದಂಡುಱೆಗೊಳ್** – ಯುದ್ಧದಲ್ಲಿ ವಶಪಡಿಸಿಕೊ
**ದಂಡೆ** – ಕುಚ್ಚು
**ದಂಡೆಗಟ್ಟು** – ಮಾಲೆಯಾಗಿ ಕಟ್ಟು
**ದಂಡೆಗೊಡು** – ವೀರಮಂಡಿಯಲ್ಲಿ ಕುಳಿತುಕೊ
**ದಂಡೆಗೊಳ್** – ದಾಳಿಮಾಡು
**ದಂಡೆದೊಮಡಿಲ್** – ಕುಚ್ಚಿನ ಹಾಗಿರುವ ಒಂದು ಆಭರಣ
**ದಂಡೋಕ್ತಿ** – ದಂಡನೆಯ ಮಾತು
**ದಂಡೋಪನತ** – ಸಾಷ್ಟಾಂಗ ನಮಸ್ಕಾರ ಮಾಡಿದವನು
**ದಂತ** – ಹಲ್ಲು; ಆನೆಯ ಕೋರೆ
**ದಂತಕಾಂತಿ** – ಹಲ್ಲುಗಳ ಕಾಂತಿ
**ದಂತಕೂಟ** – ಆನೆಯ ದಂತದ ಮೊನೆ
**ದಂತಚಯ** – ಹಲ್ಲುಗಳ ಸಾಲು
**ದಂತಚ್ಛದ** – ತುಟಿ
**ದಂತಧಾವನ** – ಹಲ್ಲುಜ್ಜುವುದು
**ದಂತಪಂಕ್ತಿ** – ಹಲ್ಲುಸಾಲು
**ದಂತಪತ್ರ** – ಕಿವಿಗೆ ಹಾಕಿಕೊಳ್ಳುವ ಓಲೆ
**ದಂತಪ್ರಭೆ** – ದಂತಕಾಂತಿ
**ದಂತರುಚಿ** – ದಂತಕಾಂತಿ
**ದಂತಶಲ್ಕ** – ದಂತದ ಚೆಕ್ಕೆ
**ದಂತಾಂಕುರ** – ಹಲ್ಲು ಮೊಳೆಯುವುದು
**ದಂತಾಂಶು** – ದಂತಕಾಂತಿ
**ದಂತಾಂಶುಕ** – ತುಟಿ
**ದಂತಾವರಣ** – ತುಟಿ
**ದಂತಾವಲ(ಳ)** – ಆನೆ
**ದಂತಾಹತಿ** – ಆನೆಯ ದಂತದ ಹೊಡೆತ
**ದಂತಿ** – ಆನೆ
**ದಂತಿನಿ** – ಹೆಣ್ಣಾನೆ
**ದಂತಿಪ** – ಆನೆಯನ್ನು ಕಾಯುವವನು, ಮಾವತಿಗ
**ದಂತಿರಾಜ** – ಶ್ರೇಷ್ಠ ಆನೆ; ಐರಾವತ
**ದಂತಿಶಿಶು** – ಮರಿ ಆನೆ
**ದಂತಿಸಂತಾನ** – ಆನೆಗಳ ಸಮೂಹ
**ದಂತುರ** – ಹರಡಿರುವ
**ದಂತುರಿತ** – ವ್ಯಾಪಿಸಿದ
**ದಂದಶೂಕ** – ಹಾವು
**ದಂದಶೋಕಪತಾಕ** – ಸರ್ಪಧ್ವಜ, ದುರ್ಯೋಧನ
**ದಂದಶೂಕಪತಿ** – ಆದಿಶೇಷ
**ದಂದಶೂಕಪ್ರಮಾಥಿ** – ಹಾವುಗಳ ಮರ್ದಕ, ಗರುಡ
**ದಂದಶೂಕಭಯ** – ಹಾವಿನ ಭಯ
**ದಂದಶೂಕವನಿತೆ** – ಹೆಣ್ಣು ಹಾವು
**ದಂದಹ್ಯಮಾನಗಾತ್ರೆ** – ಸುಡುವ ದೇಹವುಳ್ಳವಳು; ಬಹಳ ವ್ಯಥೆಪಡುವವಳು
**ದಂದಹ್ಯಮಾನಮಾನಸ** – ಬೇಯುವ ಮನಸ್ಸುಳ್ಳವನು
**ದಂದುಗ** – ವ್ಯಥೆ; ಗೊಂದಲ
**ದಂಪತಿ** – ಗಂಡಹೆಂಡಿರು
**ದಂಪತಿವಕ್ಕಿ** – ಚಕ್ರವಾಕ ಜೋಡಿ
**ದಂಬಿಸು** – ಮೋಸಗೊಳಿಸು
**ದಂಭಾಲಿ(ಳಿ)** – ವಜ್ರಾಯುಧ
**ದಂಭೋಳಿ** – ದಂಭಾಲಿ(ಳಿ)
**ದಂಭೋಳಿಹಸ್ತ** – ದಂಭೋಳಿಯನ್ನು ಹಿಡಿದವನು, ಇಂದ್ರ
**ದಂಶ** – ಕಾಡುನೊಣ; ಚಿಗಟ
**ದಂಶ(ನ)** – ಕಚ್ಚುವುದು
**ದಂಷ್ಟ್ರ(ಕ)** – ದಾಡೆ, ಕೋರೆ ಹಲ್ಲು
**ದಂಷ್ಟ್ರಾಂಕುರ** – ಮೊಳೆಯುತ್ತಿರುವ ಕೋರೆ
**ದಂಷ್ಟ್ರಾಕಿರಣ** – ಕೋರೆದಾಡೆಗಳ ಕಾಂತಿ
**ದಂಷ್ಟ್ರಾಗ್ರ** – ಕೋರೆದಾಡೆಯ ಮೊನೆ
**ದಂಸ** – ದಂಶ
**ದಕ್ಕಣ** – ನೋಡಲು ಚೆಂದವಾದ
**ದಕ್ಕು** – ದಸಿ
**ದಕ್ಕುಂದಲೆವರಿ** – ಗರ್ವದಿಂದ ಮುಂದೆ ನುಗ್ಗು
**ದಕ್ಷ** – ಸಮರ್ಥ
**ದಕ್ಷತೆ** – ಸಾಮರ್ಥ್ಯ
**ದಕ್ಷಿಣ** – ಬಲಗಡೆ
**ದಕ್ಷಿಣಖುರ** – ಬಲಗಾಲಿನ ಗೊರಸು
**ದಕ್ಷಿಣಚರಣ** – ಬಲಗಾಲು
**ದಕ್ಷಿಣಪಕ್ಷ** – ಬಲಪಕ್ಕ
**ದಕ್ಷಿಣಬಾಹು** – ಬಲತೋಳು
**ದಕ್ಷಿಣಭುಜ** – ದಕ್ಷಿಣಬಾಹು
**ದಕ್ಷಿಣಮುಷ್ಟಿ** – ಬಲ ಮುಷ್ಟಿ
**ದಕ್ಷಿಣವರ್ತನ** – ಬಲಕ್ಕೆ ತಿರುಗುವುದು
**ದಕ್ಷಿಣಶ್ರೇಣಿ** – ದಕ್ಷಿಣರಾಜ್ಯಗಳ ಸಾಲು
**ದಕ್ಷಿಣಹಸ್ತ** – ಬಲಗೈ
**ದಕ್ಷಣಾಂಘ್ರಿ** – ಬಲಗಾಲು
**ದಕ್ಷಿಣಾಂಸ** – ಬಲಭುಜ
**ದಕ್ಷಣಾಕ್ಷಿಸ್ಪಂದ** – ಬಲಗಣ್ಣು ಅದುರುವಿಕೆ
**ದಕ್ಷಿಣಾಗ್ನಿ** – ದಕ್ಷಿಣ ದಿಕ್ಕು; ಅಗ್ನಿತ್ರಯದಲ್ಲಿ ಒಂದು
**ದಕ್ಷಿಣಾಪಥ** – ವಿಂಧ್ಯಪರ್ವತದ ದಕ್ಷಿಣಕ್ಕಿರುವ ಭೂಭಾಗ

**ದಕ್ಷಿಣಾಭಿಮುಖ** – ದಕ್ಷಿಣಕ್ಕೆ ಎದುರಾದ
**ದಕ್ಷಿಣಾಮೂರ್ತಿ** – ಶಿವನ ಇಪ್ಪತ್ತೈದು ಲೀಲಾಮೂರ್ತಿಗಳಲ್ಲಿ ಒಂದು
**ದಕ್ಷಿಣಾವರ್ತ** – ಬಲಭಾಗವಾಗಿ ಸುತ್ತು, ಪ್ರದಕ್ಷಿಣೆ
**ದಕ್ಷಿಣಾವರ್ತನಾಭಿ** – ಬಲಸುಳಿ
**ದಕ್ಷಿಣಾವೃತ್ತಿ** – ಸಂಗೀತದಲ್ಲಿ ಗೀತ ಹಾಗೂ ವಾದ್ಯಗಳ ಪ್ರಾಧಾನ್ಯ
**ದಕ್ಷಿಣೆಗೊಡು** – ಗುರುಹಿರಿಯರಿಗೆ ದಾನ ನೀಡು
**ದಕ್ಷಿಣೇಂದ್ರ** – ದಕ್ಷಿಣ ದಿಕ್ಪತಿ; (ಜೈನ) ಆರು ಮಂದಿ ದಕ್ಷಿಣೇಂದ್ರರು: ಸೌಧರ್ಮ, ಸನತ್ಕುಮಾರ, ಬ್ರಹ್ಮ, ಶುಕ, ಅನತ, ಅರಣ್ಯ
**ದಗುಂತಿ** – ಆಧಿಕ್ಯ
**ದಗ್ಧವಾರಿ** – ಉರಿಯುವ ನೀರು
**ದಟ್ಟ** – ಒತ್ತಾದ
**ದಟ್ಟಡಿ** – ಮಕ್ಕಳಿಡುವ ತಪ್ಪು ಹೆಜ್ಜೆ
**ದಟ್ಟಡಿಯಿಡು** – ನಡೆಯಲು ತೊಡಗು
**ದಟ್ಟವಬಳ್ಳಿ** – ದಟ್ಟವಾಗಿ ಹಬ್ಬಿರುವ ಬಳ್ಳಿ
**ದಟ್ಟಿತು(ತ್ತು)** – ದಪ್ಪನಾದ
**ದಡದಡಿಸು** – ಜೋರಾಗಿ ನಡುಗು
**ದಡಿ** – ಕೋಲು
**ದಡಿಗ** – ದೊಣ್ಣೆಯನ್ನು ಹಿಡಿದವನು; ಪರಾಕ್ರಮಿ
**ದಡಿಗವೆಣ** – ಭರಿ ಹೆಣ
**ದಡಿಯ** – ದಡಿಗ
**ದಡ್ಡಕ್ಕರ** – ಒತ್ತಕ್ಷರ, ದ್ವಿತ್ವ
**ದಡ್ಡಸ** – ಡೊಳ್ಳು
**ದಡ್ಡಿ** – ತೆರೆ; ಬಲೆ
**ದಡ್ಡು** – ಒರಟು; ಜಡ್ಡುಗಟ್ಟಿರುವ
**ದಡ್ಡುಗಟ್ಟು** – ಒರಟಾಗು
**ದಡ್ಡುವೀೞ್** – ಜಡ್ಡುಗಟ್ಟು
**ದಣೆಂಬ** – ಮೆತ್ತೆ
**ದಣುವಟ್ಟ** – ಕುಸ್ತಿಯ ಒಂದು ವರಸೆ
**ದತ್ತ** – ಕೊಟ್ಟ
**ದತ್ತಕನಿಷ್ಠಿಕ** – (ಎಣಿಕೆಯಲ್ಲಿ) ಮೊದಲನೆಯವನು
**ದತ್ತಾವಧಾನ** – ಗಮನ ಹರಿಸುವುದು
**ದತ್ತಿ** – ದಾನ
**ದಧಿ** – ಮೊಸರು
**ದಧಿಮುಖ** – (ಜೈನ) ಒಂದು ಪರ್ವತ; ಇಂಥ ಹದಿನಾರು ಪರ್ವತಗಳಿರುವುವೆಂದು ಪುರಾಣಗಳ ಹೇಳಿಕೆ
**ದನಗಾಹಿ** – ಗೋಪಾಲ
**ದನಿ** – (ಧ್ವನಿ) ಸಪ್ಪುಳ
**ದನಿಗೆಯ್** – ಸದ್ದುಮಾಡು
**ದನಿದೋಱು** – ದನಿಮಾಡು
**ದನಿಯೆತ್ತು** – ದನಿಯುಂಟುಮಾಡು
**ದನುಜ** – ದನು ಎಂಬುವವನ ವಂಶದ ರಾಕ್ಷಸ
**ದನುಜವಿರೋಧಿ** – ರಾಕ್ಷಸವೈರಿ, ಕೃಷ್ಣ
**ದನುಜಾಂತಕ** – ರಾಕ್ಷಸರನ್ನು ಕೊಲ್ಲುವವನು
**ದನುಜಾಧೀಶ್ವರ** – ರಾಕ್ಷಸರ ಒಡೆಯ, ರಾವಣ
**ದನುಜಾರಾತಿ** – ದನುಜವಿರೋಧಿ
**ದನುಜಾರಾತಿಜಾತಾಧಿವಾಸ** – ಮೇರುಪರ್ವತ
**ದನುಜಾರಿ** – ದನುಜವಿರೋಧಿ
**ದನುಜಾರಿರಿಪು** – ಕೃಷ್ಣನ ಶತ್ರು, ಜರಾಸಂಧ
**ದನುಜೇಂದ್ರ** – ರಾಕ್ಷಸರ ರಾಜ
**ದನಿಜೋದೀರಿತ** – (ಜೈನ) ರಾಕ್ಷಸರಿಂ ಉಂಟಾದ ದುಃಖ
**ದನುಸುತ** – ದನುಜ
**ದಪ್ಪಗ** – (ದರ್ಪಕ) ಮನ್ಮಥ
**ದಬ್ಬಳ(ಣ)** – ದಪ್ಪನಾದ ಸೂಜಿ
**ದಬ್ಬುಕ** – ಕಲ್ಲು ಸೀಳುವ ಚಾಣ; ಹಾರೆ
**ದಮ** – ನಿಗ್ರಹ
**ದಮನಕ** – 'ಪಂಚತಂತ್ರ'ದ ಒಂದು ನರಿ
**ದಮಿತಾರಿ** – ಅರಿಗಳನ್ನು ದಮನಮಾಡಿದವನು
**ದಮ್ಮ** – ದ್ರಮ್ಮ, ಒಂದು ಚಿನ್ನದ ನಾಣ್ಯ
**ದಮ್ಮಾಣಿ** – (ಧರ್ಮಪಾನೀಯ) ಧರ್ಮಾರ್ಥವಾಗಿ ಪ್ರಯಾಣಿಕರಿಗೆ ಕೊಡುವ ನೀರು
**ದಮ್ಮಿ** – ಧರ್ಮವಂತ
**ದಯಂಗೆಯ್** – ಕೃಪೆ ತೋರಿಸು
**ದಯಕಾಱ** – ದಯಾವಂತ
**ದಯಾಗರ್ಭ** – ಕರುಣಾಳು
**ದಯಾದತ್ತಿ** – (ಜೈನ) ನಾಲ್ಕು ವಿಧವಾದ ದತ್ತಿಗಳಲ್ಲಿ ಒಂದು; ನೋಡಿ, ಚತುರ್ವಿಧದತ್ತಿ
**ದಯಾಪರ** – ದಯಾವಂತ
**ದಯಾಪರಿಣತಿ** – ದಯೆಯಿಂದ ಕೂಡಿರುವುದು
**ದಯಾಬ್ಧಿ** – ದಯೆಯ ಸಾಗರ
**ದಯಾರಸ** – ಕರುಣೆಯ ರಸ
**ದಯಾರಸಾರ್ಣವ** – ಕರುಣೆಯೆಂಬ ರಸದ ಸಮುದ್ರ
**ದಯಾರ್ದ್ರಹೃದಯ** – ದಯೆಯಿಂದ ತೊಯ್ದ ಹೃದಯವುಳ್ಳವನು
**ದಯಾಲು(ಳು)** – ದಯೆಯಿಂದ ಕೂಡಿರುವವನು
**ದಯಿತ** – ಪ್ರಿಯ
**ದಯಿತಾಸಂಬಂಧ** – ನಲ್ಲೆಯ ಸಂಬಂಧ
**ದಯಿತೆ** – ನಲ್ಲೆ, ಹೆಂಡತಿ
**ದಯೆ** – ಕರುಣೆ
**ದಯೆಗೆಡು** – ಕರುಣೆಯನ್ನು ಕಳೆದುಕೊ
**ದಯೆಗೆಯ್** – ಕರುಣೆಯನ್ನು ಹೊಂದು
**ದಯೆವೆರಸು** – ದಯೆಯಿಂದ ಕೂಡಿ(ರು)
**ದಯ್ಯೈಕನಿಧಿ** – ದಯೆಯೆಗ ಒಬ್ಬನೇ ಆದವನು
**ದರ** – ಸ್ವಲ್ಪ
**ದರದಳಿತ** – ಕೊಂಚ ಅರಳಿದ
**ದರನಿಮೀಲಿತಲೋಚನ** – ಅರೆಮುಗಿದ ಕಣ್ಣು
**ದರನಿಮೀಳಿತಾಂಬಕ** – ದರನಿಮೀಲಿತಲೋಚನ
**ದರವಿಕಸಿತ** – ದರದಳಿತ

**ದರವುರ** – ಕೀಳಾದ
**ದರವುರಂಗಾಣ್** – ಆಕಸ್ಮಿಕವಾಗಿ ನೋಡಿ
**ದರವುರಗಲಿ** – ಅಲ್ಪಶೂರ
**ದರವುರವಿದ್ದೆ** – ಕ್ಷುಲ್ಲಕಜ್ಞಾನ
**ದರವುರಿಗ** – ಸಾಮಾನ್ಯ
**ದರಸ್ಮಿತ** – ಮುಗುಳ್ನಗೆ
**ದರವುರಿಗ** – ಸಾಮಾನ್ಯ
**ದರಸ್ಮೇರ** – ದರಸ್ಮಿತ
**ದರಹಸಿತ** – ಮುಗುಳ್ನಗೆಯಿಂದ ಕೂಡಿದ
**ದರಹಾಸ** – ದರಸ್ಮಿತ
**ದರಹಾಸಪೇಶಲ** – ಮುಗುಳ್ನಗೆಗೂಡಿ ಮನೋಹರನಾದ
**ದರಿ** – ಕಂದರ; ಬಿರುಕು
**ದರೀ** – ಬಿಲ
**ದರಿಗೊಳ್** – ಬಿರುಕುಬಿಡು
**ದರೆ** – (ಧರೆ) ಭೂಮಿ
**ದರ್ಕು** – ದಸಿ, ಚೂಪಾದ ಬೆಣೆ
**ದರ್ಕುಂದಲೆ** – ಶೂಲಕ್ಕೇರಿಸಿದ ತಲೆ
**ದರ್ಕುಂದಲೆವಾಯ್** – ಸೊಕ್ಕಿನಿಂದ ಕೂಡು
**ದರ್ದುರ** – ಕಪ್ಪೆ; ಊದಿಕೊಳ್ಳುವಿಕೆ
**ದರ್ಪಕ** – ಮನ್ಮಥ
**ದರ್ಪಕದರ್ಪಭಂಜನ** – ಕಾಮನ ದರ್ಪವನ್ನು ನಿಗ್ರಹಿಸಿದವನು, ಅರ್ಹಂತ
**ದರ್ಪಕವಿರೋಧಿ** – ಕಾಮನ ವೈರಿ, ಶಿವ
**ದರ್ಪಣ** – ಕನ್ನಡಿ
**ದರ್ಪಿತ** – ಅಹಂಕಾರದಿಂದ ಕೂಡಿದ
**ದರ್ಪಿಷ್ಠ** – ಅಹಂಕಾರಿ
**ದರ್ಭಶಯನ** – ದರ್ಭೆಯ ಹಾಸಿಗೆ
**ದರ್ಭಶಯ್ಯೆ** – ದರ್ಭಶಯನ
**ದರ್ಭಾಂಕುರ** – ದರ್ಭೆಯ ಮೊನೆ
**ದರ್ಭಾಧಿಕಾರ** – ದರ್ಭೆ ಹಿಡಿದು ಕರ್ಮ ಮಾಡುವ ಅಧಿಕಾರ
**ದರ್ಭಾಸ್ತರಣ** – ದರ್ಭಶಯನ
**ದರ್ವಿ** – ಸೌಟು
**ದರ್ವೀಕರ** – ಸೌಟು ಹಿಡಿದವನು, ಬಾಣಸಿಗ; ಹಾವು
**ದರ್ಶಕ** – ನೋಡಿವವನು
**ದರ್ಶನ** – ನೋಡಿವುದು
**ದರ್ಶನಮೋಹ** – (ಜೈನ) ಎರಡು ಬಗೆಯ ಮೋಹನೀಯಕರ್ಮಗಳಲ್ಲಿ ಒಂದು; ಸಮ್ಯಗ್ದರ್ಶನಕ್ಕೆ ಅಡ್ಡಿಯಾದುದು
**ದರ್ಶನಮೋಹನೀಯ** – ದರ್ಶನಮೋಹವನ್ನು ಉಂಟುಮಾಡುವಂಥದು
**ದರ್ಶನರತ್ನ** – (ಜೈನ) ಸಮ್ಯಕ್‌ದೃಷ್ಟಿ
**ದರ್ಶನವತ್ಸಲ(ಳ)ತ್ವ** – ದರ್ಶನದಲ್ಲಿ ಒಲವು; ಹದಿನಾರು ಭಾವಗಳಲ್ಲಿ ಒಂದು
**ದರ್ಶನವಿಶುದ್ಧ** – (ಜೈನ) ಪರಿಶುದ್ಧ ಸಮ್ಯಕ್ದರ್ಶನ ಉಳ್ಳವನು
**ದರ್ಶನವಿಶುದ್ಧಿ** – (ಜೈನ) ತೀರ್ಥಂಕರತ್ವಕ್ಕೆ ಕಾರಣವಾಗುವ ಹದಿನಾರು ಭಾವಗಳಲ್ಲಿ ಒಂದು; ಸಮ್ಯಗ್ದರ್ಶನದ ಬಗೆಗಿನ ಪರಿಶುದ್ಧ ದೃಷ್ಟಿ
**ದರ್ಶನಶುದ್ಧಿ(ದ್ಧತೆ)** – (ಜೈನ) ದರ್ಶನವಿಶುದ್ಧಿ
**ದರ್ಶನಾಚಾರ** – (ಜೈನ) ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ವ್ಯವಹರಿಸುವಿಕೆ
**ದರ್ಶನಾವರಣ** – (ಜೈನ) ಆತ್ಮನ ದರ್ಶನಶಕ್ತಿಯನ್ನು ಮರೆಮಾಡುವುದು
**ದರ್ಶನಾವರಣಚತುಷ್ಕ** – (ಜೈನ) ಚಕ್ಷು, ಅಚಕ್ಷು, ಅವಧಿ, ಕೇವಲ ಎಂಬ ದರ್ಶನಾವರಣದ ನಾಲ್ಕು ಅಂಗಗಳು
**ದರ್ಶನಾವರಣೀಯ** – (ಜೈನ) ನಾಲ್ಕು ಘಾತಿಕರ್ಮಗಳಲ್ಲಿ ಒಂದು; ನವವಿಧ ದರ್ಶನಾವರಣೀಯ: ಚಕ್ಷು, ಅಚಕ್ಷು, ಅವಧಿ, ದೇವಲ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆ, ನೋಡಿ, 'ಘಾತಿಕರ್ಮ'
**ದರ್ಶನಿಕ** – (ಜೈನ) ಹನ್ನೊಂದು ವರ್ಗದ ಶ್ರಾವಕರಲ್ಲಿ ಮೊದಲನೆಯವನು
**ದಲ್** – ನಿಶ್ಚಿತವಾಗಿ; ಅಲ್ಲವೇ ಎಂಬ ಅವಧಾರಣಸೂಚಕ ಶಬ್ದ
**ದಲ(ಳ)ನ** – ಸೀಳುವಿಕೆ
**ದವ** – ಕಾಡು
**ದವದಹನ** – ಕಾಡುಗಿಚ್ಚು
**ದವನ** – ಸುವಾಸನೆಯ ಎಲೆಗಳುಳ್ಳ ಒಂದು ಸಸ್ಯ
**ದವಶಿಖಿ** – ಕಾಡುಗಿಚ್ಚು
**ದವಳಾರ** – ಬಿಳಿಯ ಹಾರ; (ಧವಲಾಗಾರ) ಬಿಳಿಯ ಮನೆ
**ದಶಕಂಠ** – ಹತ್ತು ತಲೆಗಳುಳ್ಳವನು, ರಾವಣ
**ದಶಕಂಠವೈರಿ** – ರಾವಣವೈರಿ, ಶ್ರೀರಾಮ
**ದಶಕಂಧರ** – ದಶಕಂಠ
**ದಶಕುಲಧರ್ಮ** – (ಜೈನ) ಸನ್ಯಾಸಿ ಅನುಸರಿಸಬೇಕಾದ ಕ್ಷಮೆ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪಸ್ಸು, ತ್ಯಾಗ, ಅಕಿಂಚನ್ಯ, ಬ್ರಹ್ಮಚರ್ಯೆಗಳೆಂಬ ಹತ್ತು ಧರ್ಮಗಳು
**ದಶಗುಣ** – ಹತ್ತು ಪಟ್ಟು; ಹಾಡಬೇಕಾದ ಕೃತಿಯಲ್ಲಿ ನಿರೀಕ್ಷಿಸುವ ಹತ್ತು ಗುಣಗಳು
**ದಶಗ್ರೀವ** – ದಶಕಂಠ
**ದಶಧರ್ಮ** – ದಶಕುಲಧರ್ಮ
**ದಶಧರ್ಮಧ(ಧಾ)ರ(ರಿ)** – (ಜೈನ) ದಶಧರ್ಮಗಳನ್ನು ಹೊಂದಿದವನು
**ದಶನ** – ಕಚ್ಚುವುದು; ಹಲ್ಲು
**ದಶನಕಾಂತಿ** – ಹಲ್ಲುಗಳ ಕಾಂತಿ

**ದಶನಕ್ಷತ** – ದಂತಕ್ಷತ, ಸಂಭೋಗಸಮಯದಲ್ಲಿ ಕಚ್ಚುದುರಿಂದಾಗುವ ಹಲ್ಲಿನಗುರುತು
**ದಶಣಘಟ್ಟನ** – ಹಲ್ಲು ಕಡಿಯುವುದು
**ದಶನ(ನಿ)ಚಯ** – ದಂತಪಂಕ್ತಿ
**ದಶನಚ್ಛದ** – ಹಲ್ಲುಗಳನ್ನು ಮುಚ್ಚಿರುವುದು, ತುಟಿ
**ದಶನಘಟ್ಟನ** – ಹಲ್ಲು ಕಡಿಯುವಿಕೆ
**ದಶನದ್ಯುತಿ** – ದಶನಕಾಂತಿ
**ದಶನಪವನ** – ಐದು ಪ್ರಾಣವಾಯುಗಳು (ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ) ಮತ್ತು ಐದು ಉಪವಾಯುಗಳು (ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ)
**ದಶನರುಚಿ** – ದಶನಕಾಂತಿ
**ದಶನವಸನ** – ದಶನಚ್ಛದ
**ದಶನಹತಿ** – ದಶನಕ್ಷತ
**ದಶನಾಂಶು** – ದಶನಕಾಂತಿ
**ದಶನೌಘ** – ದಶನಚಯ
**ದಶಪೂರ್ವಧರ** – (ಜೈನ) ಉತ್ಪಾದಪೂರ್ವ, ಆಗ್ರಾಯಣೀಯ, ವೀರ್ಯಾನುವಾದಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ ಎಂಬ ದಶಪೂರ್ವಗಳನ್ನು ಅಭ್ಯಸಿಸಿದವನು
**ದಶಮ** – ಹತ್ತನೆಯ
**ದಶಮದಶೆ** – ಮದನಾವಸ್ಥೆಯ ಹತ್ತನೆಯದು, ಮರಣ
**ದಶಮಾವಸ್ಥೆ** – ದಶಮದಶೆ
**ದಶಮುಖ** – ಹತ್ತು ಮುಖಗಳು; ರಾವಣ
**ದಶರಥ** – ಹತ್ತು ದಿಕ್ಕುಗಳಲ್ಲಿಯೂ ರಥವನ್ನು ನಡೆಸಬಲ್ಲವನು
**ದಶರೂಪಕ** – ನಾಟಕ, ಪ್ರಕರಣ, ಚಾರಣ, ಭಾಣ, ಸಮವಕಾರ, ಡಿಮ, ಈಹಾಮೃಗ, ವ್ಯಾಯೋಗ, ಪ್ರಹಸನ, ವೀಧಿ ಎಂಬ ಹತ್ತು ರೂಪಕಗಳು
**ದಶವದನ** – ದಶಮುಖ
**ದಶವಿಧಧರ್ಮ** – ದಶಕುಲಧರ್ಮ
**ದಶವಿಧನಾದ** – ಭ್ರಮರ, ಶಂಖ, ಮೃದಂಗ, ತಾಳ, ಗಂಟೆ, ವೀಣೆ, ಭೇರಿ, ದುಂದುಭಿ, ಸಮುದ್ರಗರ್ಜನೆ, ಮೇಘಗರ್ಜನೆಗಳೆಂಬ ಹತ್ತು ನಾದಗಳು
**ದಶವಿಧಶ್ರವಣಧರ್ಮ** – ದಶಕುಲಧರ್ಮ
**ದಶವಿಧಸತ್ಯ** – (ಜೈನ) ಜನಪದ, ಸಮ್ಮತಿ, ಸ್ಥಾಪನಾ, ನಾಮ, ರೂಪ, ಪ್ರತೀತ್ಯ, ವ್ಯವಹಾರ, ಸಂಭಾವನಾ, ಭಾವ, ಉಪಮಾ ಎಂಬ ಹತ್ತು ಬಗೆಯ ಸತ್ಯಗಳು
**ದಶವ್ಯಾಕರಣ** – ಐಂದ್ರ, ಚಾಂದ್ರ, ಕಾಶಕೃತ್ಸ್ನ, ಕೌಮಾರ, ಶಾಕಟಾಯನ, ಸಾರಸ್ವತ, ಶಾಕಲ, ಅಪಿಶಲ, ಕಾತಂತ್ರ, ಪಾಣಿನೀಯ ಎಂಬ ಹತ್ತು ವ್ಯಾಕರಣಗಳು
**ದಶಶತಕರ (ಕಿರಣ)** – ಸೂರ್ಯ
**ದಶಾಂಗ** – ಹತ್ತು ಅಂಗಗಳು; (ಜೈನ) ಭೋಗಭೂಮಿಯ ಮಧ್ಯ, ಭೂಷಣ, ವಸ್ತ್ರ, ಆತೋದ್ಯ, ಸ್ರಗ್ಭವನ, ಭಾಜನ, ಅಶನ, ದೀಪ, ಪ್ರೋದ್ಯತ್, ಜ್ಯೋತಿಸ್ಥಿತಿ ಎಂಬ ಹತ್ತುಕಲ್ಪವೃಕ್ಷಗಳು
**ದಾಂಗಕಲ್ಪಕುಜ** – (ಜೈನ) ದಶಾಂಗ
**ದಶಾಂಗಕಲ್ಪತರು** – (ಜೈನ) ದಶಾಂಗ
**ದಶಾಂಗಭೋಗ** – ಚಕ್ರವರ್ತಿಗಳಿಗೆ ದೊರಕುವ ದಿವ್ಯನಗರ, ಚತುರ್ದಶರತ್ನಗಳು, ನವನಿಧಿ, ಸೈನ್ಯ, ಭೋಜನ, ಭಾಜನ, ಶಯ್ಯಾ, ಆಸನ, ವಾಹನ, ನಾಟ್ಯ ಎಂಬ ಹತ್ತು ಭೋಗಗಳು
**ದಶಾನನ** – ಹತ್ತುಮುಖಗಳುಳ್ಳವನು, ರಾವಣ
**ದಶಾವತಾರ** – ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಎಂಬ ವಿಷ್ಣುವಿನ ಹತ್ತು ಅವತಾರಗಳು
**ದಶಾಸ್ಯ** – ದಶಾನನ
**ದಶಾಸ್ಯಾಂತಕ** – ದಶಾಸ್ಯನನ್ನು ಕೊಂದವನು, ಶ್ರೀರಾಮ
**ದಷ್ಟ(ಷ್ಟೆ)** – ಕಚ್ಚಿಸಿಕೊಂಡವನು(ಳು)
**ದಸಿ(ಕು)** – ತಿವಿಗೋಲು; ಶೂಲ
**ದಸಿಕ** – ಶೂಲಕ್ಕೇರಿಸುವವನು
**ದಸೆ** – ಅವಸ್ಥೆ
**ದಸ್ರಾತ್ಮಜರ್** – ದಸ್ರ+ಆತ್ಮಜರ್, ಅಶ್ವಿನೀದೇವತೆಗಳ ಮಕ್ಕಳು; ನಕುಲ ಮತ್ತು ಸಹದೇವ
**ದಹನ** – ಅಗ್ನಿ; ಸುಡುವಿಕೆ
**ದಹನಕ್ರಿಯೆ** – ಹೆಣವನ್ನು ಸುಡುವ ಕಾರ್ಯ
**ದಹನಾರ್ಚಿ** – ಅಗ್ನಿಜ್ವಾಲೆ
**ದಹನಾಶೆ** – ಅಗ್ನಿಯ ದಿಕ್ಕು, ಆಗ್ನೇಯ
**ದಹಿಸು** – ಸುಡು
**ದಹ್ಯಮಾನ** – ಸುಡುತ್ತಿರುವ
**ದಳ** – ಪತ್ರ, ಎಸಳು; ದಟ್ಟ
**ದಳನ(ಣ)** – ಸೀಳುವಿಕೆ
**ದಳಂಗೊಳಿಸು** – ದಟ್ಟಗೊಳಿಸು
**ದಳಂಬಡೆ** – ದಟ್ಟಗೊಳ್ಳು
**ದಳತ್** – ಅರಳುವ, ಚಿಗುರುವ
**ದಳತ್ಕೋಕನದಜಠರ** – ದಳತ್+ಕೋಕನದ+ಜಠರ, ತಾವರೆಯನ್ನು ಹೊಕ್ಕುಳಲ್ಲಿ ಉಳ್ಳವನು, ವಿಷ್ಣು
**ದಳತ್ಪದ್ಮ** – ಅರಳುವ ತಾವರೆ
**ದಳಬೆಸ** – ದಳಗಳನ್ನು ಬಿಡಿಸುವ ಕೆಲಸ(?)
**ದಳವೇಱು** – ಸಾಂದ್ರವಾಗು; ವಿಕಸನಗೊಳ್ಳು
**ದಳಂಬ** – ದಡಿಬ, ಮಡಿ ಬಟ್ಟೆ

**ದಳಿತಮಾರ** – ಕಾಮನನ್ನು ದಮನಮಾಡಿದವನು
**ದಳಿತಾಬ್ಜ** – ಅರಳಿದ ಕಮಲ
**ದಳಿತೇಂದೀವರ** – ಅರಳಿದ ನೈದಿಲೆ
**ದಳಿತೇಕ್ಷಣೆ** – ಅಗಲವಾದ ಕಣ್ಣುಳ್ಳವಳು
**ದಳವ** – ದಡಿಬ
**ದಳಯಿಸು** – ಸೀಳು
**ದಳವಿಡಿ** – ಕೂಡಿಸು
**ದಳಿಸು** – ನೆರೆ, ಕೂಡು
**ದಳ್ಳಿಸು** – ಗರ್ವದಿಂದ ಮೆರೆ; ಸುಡು
**ದಳ್ಳಿಱೆ** – ತಿವಿ
**ದಳ್ಳುರಿ** – ದೊಡ್ಡ ಉರಿ; ಗರ್ವದಿಂದ ಮೆರೆ
**ದೞ** – ಸೈನ್ಯ; ತುರಗಬಲ
**ದೞದುೞ** – ಬಲ್ಲೂರೆ, ಸುಲಿಗೆ
**ದೞಮುಖಧವಳ** – ಸೇನೆಯ ಮುಂಭಾಗದಲ್ಲಿ ಶೋಭಿಸುವವನು
**ದೞಮುಖಾದಿತ್ಯ** – ಸೇನೆಯ ಮುಂಭಾಗದಲ್ಲಿ ಸೂರ್ಯನಂತಿರುವವನು
**ದಟ್ಟಿಱೆ** – ಸಂಕೋಲೆ
**ದಾಂಗುಡಿ** – (ದಾವು+ಕುಡಿ) ದಾಟುವ ಕುಡಿ, ಹಬ್ಬುವ ಕುಡಿ
**ದಾಂಗುಡಿವಡೆ** – ಹಬ್ಬು
**ದಾಂಗುಡಿವರಿ** – ದಾಂಗುಡಿವಡೆ
**ದಾಂಗುಡಿವಿಡು** – ದಾಂಗುಡಿವಡೆ
**ದಾಂಟು** – ದಾಟು, ಲಂಘಿಸು; ನೆಗೆತ
**ದಾಕ್ಷಿಣಾತ್ಯೆ** – ದಕ್ಷಿಣದೇಶದಲ್ಲಿ ಜನಿಸಿದವಳು
**ದಾಕ್ಷಿಣ್ಯ** – ಅನುಕಂಪ
**ದಾಘ** – ದಾಹ, ತಾಪ
**ದಾಡಿಮ** – ದಾಳಿಂಬೆ
**ದಾಡೆ** – ಕೋರೆಹಲ್ಲು
**ದಾಡೆಗಡಿ** – ಹಲ್ಲು ಕಡಿ
**ದಾಡೆಗುಟ್ಟು** – ದಾಡೆಗಡಿ
**ದಾತ** – (ದಾತೃ) ದಾನಿ
**ದಾತವ್ಯ** – ಕೊಡಲು ಅರ್ಹವಾದ
**ದಾತೃ** – ದಾನಿ
**ದಾತ್ರ** – ಕುಡುಗೋಲು
**ದಾದಿ** – (ಧಾತ್ರಿ) ಸಾಕಿದವಳು; ದಾಸಿ
**ದಾದಿಕಾಱವೆಸ** – ದಾಸಿಯ ಕೆಲಸ
**ದಾನ** – ಮದೋದಕ; ತ್ಯಾಗ
**ದಾನಗುಣ** – ದಾನಕೊಡುವ ಸ್ವಭಾವ
**ದಾನಚತುಷ್ಟಯ** – (ಜೈನ) ಆಹಾರ, ಅಭಯ, ಭೈಷಜ, ಶಾಸ್ತ್ರಗಳೆಂಬ ನಾಲ್ಕು ಬಗೆಯ ದಾನಗಳು
**ದಾನಚಿಂತಾಮಣಿ** – ಚಿಂತಾಮಣಿಯಂತೆ ಕೊಡುಗೈದಾನಿ
**ದಾನತೀರ್ಥಪ್ರವರ್ತಕ** – (ಜೈನ) ಚರಿಗೆಗೆ ಬಂದ ಮುನಿಗೆ ಮೊದಲು ದಾನ ನೀಡುವವನು
**ದಾನದಂತಿ** – ಮದೋದಕವನ್ನು ಸುರಿಸುವ ಆನೆ
**ದಾನಧಾರಾಂಬು** – ಸುರಿಯುವ ಮದಜಲ
**ದಾನಧಾರೆ** – ದಾನಧಾರಾಂಬು
**ದಾನಪರ** – ದಾನ ನೀಡುವುದರಲ್ಲಿ ನಿರತ; ದಾನದಂತಿ
**ದಾನಪ್ಲವ** – ಮದಜಲದ ಪ್ರವಾಹ
**ದಾನವ** – ದನುವಿನ ಮಗ; ರಾಕ್ಷಸ
**ದಾನವಕುಲ** – ರಾಕ್ಷಸವರ್ಗ
**ದಾನವಖಳ** – ಖೂಳ ರಾಕ್ಷಸ
**ದಾನವಮರ್ದನ** – ರಾಕ್ಷಸಸಂಹಾರಿ
**ದಾನವರಾಜ** – ರಾಕ್ಷಸರಾಜ
**ದಾನವರಿಪು** – ರಾಕ್ಷಸಶತ್ರು, ವಿಷ್ಣು
**ದಾನವಸೇನೆ** – ರಾಕ್ಷಸ ಪಡೆ
**ದಾನವಾರಿ** – ರಾಕ್ಷಸಶತ್ರು
**ದಾನವಿಘ್ನ** – ದಾನಕ್ಕೆ ಮಾಡುವ ಅಡ್ಡಿ
**ದಾನವಿನೋದ** – ದಾನ ನೀಡುವುದರಲ್ಲಿ ಸಂತಸ ಪಡೆಯುವವನು
**ದಾನವ್ಯಸನಿ** – ದಾನ ನಿಡುವವುದರಲ್ಲಿ ಅತ್ಯಾಸಕ್ತ
**ದಾನವ್ರತ** – (ಜೈನ) ದಾನಮಾಡುವ ವ್ರತ; ಒಂದು ಶಿಕ್ಷಾವ್ರತ
**ದಾನಶಾಲೆ** – ಧರ್ಮಶಾಲೆ
**ದಾನಶೂರ** – ದಾನ ನಿಡುವುದರಲ್ಲಿ ಶೂರ
**ದಾನಾಂಧ** – ಮದದಿಂದ ಕುರುಡಾದ (ಆನೆ)
**ದಾನಾಂಬುಧಾರೆ** – ಮದಜಲದ ಧಾರೆ
**ದಾನಾನುಮೋದ** – ದಾನ ಕೊಡಲು ಸಮ್ಮತಿ
**ದಾನಾಸಾರ** – ದಾನ ಕೊಡುವಾಗ ಹೊಯ್ಯುವ ನೀರಿನ ಮಳೆ
**ದಾನಿ** – ದಾನ ಕೊಡುವವನು
**ದಾಮ** – ಮನೆ; ಹಗ್ಗ; ಸೊಂಟಪಟ್ಟಿ (ಡಾಬು)
**ದಾಮಕ** – ಹಾರ
**ದಾಮೋದರ** – ಚಿಕ್ಕಂದಿನಲ್ಲಿ ಯಶೋದೆ ಸೊಂಟಕ್ಕೆ ಹಗ್ಗ ಕಟ್ಟುತ್ತಿದ್ದುದರಿಂದ ಕೃಷ್ಣನಿಗೆ ಈ ಹೆಸರು, ವಿಷ್ಣು
**ದಾಯ** – ಪಗಡೆಯ ಗರ; ಬಹುಮಾನ; ಅವಕಾಶ
**ದಾಯಂಗೊಡು** – ಅವಕಾಶ ನೀಡು
**ದಾಯಂಬಡೆ** – ಅವಕಾಶ ಪಡೆದುಕೊ; ಬೇಕಾದ ಗರ ಪಡೆದುಕೊ
**ದಾಯಾದ** – ಜ್ಞಾತಿ; ಪಾಲು ಪಡೆಯಲು ಅರ್ಹನಾದವನು
**ದಾಯಿಗರ್** – ದಾಯಾದಿಗಳು
**ದಾಯಿಗತನ** – ದಾಯಾದಿಯ ಸ್ವಭಾವ, ವೈರ
**ದಾಯಿತ(ದ)** – ಇಷ್ಟಮಿತ್ರ; ನೆಂಟ
**ದಾರ** – ನೂಲು; ದ್ವಾರ
**ದಾರಕ** – ಹುಡುಗ; ಸೀಳುವವನು
**ದಾರಕಮಲ್ಲ** – ಗಟ್ಟಿಗನಾದ ಹುಡುಗ
**ದಾರವಂದ** – (ದ್ವಾರಬಂಧ) ಬಾಗಿಲ ಚೌಕಟ್ಟು
**ದಾರವಟ್ಟ** – ಪುರದ್ವಾರ; ಮುಂಬಾಗಿಲು
**ದಾರವಟ್ಟಿಗ** – ಬಾಗಿಲು ಕಾಯುವವನು

**ದಾರಿಕೆ** – ಸೂಳೆ
**ದಾರಿಗೆಡು** – ದಾರಿತಪ್ಪು
**ದಾರಿತ** – ಸೀಳಿದ
**ದಾರಿದ್ರ(ದ್ರ್ಯ)** – ಬಡತನ
**ದಾರಿದ್ರ್ಯವಿದ್ರಾವಣ** – ಬಡತನವನ್ನು ನೀಗುವವನು
**ದಾರಿದ್ರ್ಯಾಭಿಭೂತ** – ಬಡತನದ ಪೀಡೆಗೊಳಗಾದವ
**ದಾರು** – ದಿಮ್ಮಿ
**ದಾರುಕರ್ಮ** – ಮರಗೆಲಸ
**ದಾರುಣ** – ಕ್ರೂರ
**ದಾರುಣತೆ** – ಕ್ರೌರ್ಯ
**ದಾರುಣಮುಖ** – ಕ್ರೂರಮುಖದವನು
**ದಾರುದಾರುಣ** – ದಿಮ್ಮಿಯಂತೆ ನಿಸ್ಪಂದವಾದ
**ದಾವ** – ದವ, ಕಾಡು
**ದಾವಣ** – ಚಪ್ಪರ
**ದಾವಣಿ** – ಹಗ್ಗ
**ದಾವಣಿಗಟ್ಟು** – ಸಾಲುಗಟ್ಟು
**ದಾವಣಿಗುಱಿ** – ಸಾಲಾಗಿ ಕಟ್ಟಿದ ಕುರಿಗಳು
**ದಾವತಿ** – ಧಾವತಿ, ಶ್ರಮ, ದಣಿವು
**ದಾವದಗ್ಧ** – ಕಾಡುಗಿಚ್ಚಲ್ಲಿ ಸುಟ್ಟುಹೋದ
**ದಾವದಹನ** – ಕಾಡುಗಿಚ್ಚು
**ದಾವಪಾವಕ** – ದಾವದಹನ
**ದಾವಶಿಖಿ** – ದಾವದಹನ
**ದಾವಾಗ್ನಿ** – ದಾವದಹನ
**ದಾವಾನಲ(ಳ)** – ದಾವದಹನ
**ದಾವು** – ಹಗ್ಗ
**ದಾಶ** – ಬೆಸ್ತ
**ದಾಕ್ಷಿಕ** – ಕಚ್ಚಲ್ಪಟ್ಟವನು
**ದಾಸವಣ** – ದಾಸವಾಳ
**ದಾಸೇರಕ** – ದಾಸಿಯ ಮಗ
**ದಾಹ** – ತಾಪ
**ದಾಹಿಕಾಶಕ್ತಿ** – ಸುಡುವ ಶಕ್ತಿ
**ದಾಹಿನಿ** – ಬೇಯುತ್ತಿರುವವಳು
**ದಾಹೋತ್ತರ** – ಸುಟ್ಟು ಪರಿಶುದ್ಧವಾದದ್ದು
**ದಾಳ** – ಪಗಡೆಯಾಟದ ಗರ ಬೀಳಿಸುವ ಸಾಧನ
**ದಾಳಂಬ** – ದಾಡಿಮ
**ದಾೞಾದಾೞಿ** – ಆಕ್ರಮಣ
**ದಾೞಿ** – ಸೇನೆಯೊಡನೆ ಮಾಡುವ ಆಕ್ರಮಣ
**ದಾೞಿಕಾಱ** – ಆಕ್ರಮಣಕಾರ
**ದಾೞಿ(ಯಿ)ಡು** – ಆಕ್ರಮಣಮಾಡು
**ದಾೞಿಪೊಗು** – ದಾಳಿಯಿಟ್ಟು ಪ್ರವೇಶಿಸು
**ದಾೞಿವೋಗು** – ಆಕ್ರಮಿಸಿ ಹೋಗು
**ದಿಂಕಿಕ್ಕು** – ಕುಪ್ಪಳಿಸು, ನೆಗೆದಾಡು
**ದಿಂಕುಗೊಳ್** – ಚಿಮ್ಮು, ಹಾರು, ಕುಪ್ಪಳಿಸು
**ದಿಂಕುವಾಱು** – ಕುಣಿದಾಡು
**ದಿಂಡು** – ಪಿಂಡಿ, ಹೊರೆ; ಬಾಳೆಯ ದಂಟಿನ ಒಳಭಾಗ
**ದಿಂಡುಕ** – ದಪ್ಪವಾದ ದೇಹವುಳ್ಳವನು
**ದಿಂಡುಗೆಡಪು** – ಮರದ ತುಂಡಿನಂತೆ ಕೆಡವು
**ದಿಂಡುಗೆಡೆ** – ಮರದ ತುಂಡಿನಂತೆ ಬೀಳು
**ದಿಂಡುಮಗುೞ್** – ಕುಸಿದು ಬೀಳು
**ದಿಂಡುವಾಯ್** – ರಭಸದಿಂದ ನುಗ್ಗು
**ದಿಕ್ಕರಿ**– ದಿಗ್ಗಜ
**ದಿಕ್ಕರಿಕರ** – ದಿಗ್ಗಜದ ಸೊಂಡಿಲು
**ದಿಕ್ಕರಿನಿಚಯ** – ದಿಗ್ಗಜಗಳ ಸಮೂಹ
**ದಿಕ್ಕು** – ದೆಸೆ
**ದಿಕ್ಕುಂಜರ** – ದಿಕ್ಕರಿ
**ದಿಕ್ಕುಂಭಿ** – ದಿಕ್ಕರಿ
**ದಿಕ್ಕುಮಾರ** – ದಿಕ್ಪಾಲಕ
**ದಿಕ್ಚಕ್ರ** – ದಿಗ್ವಲಯ
**ದಿಕ್ತಟ** – ದಿಕ್ಕಿನ ಕೊನೆ
**ದಿಕ್ಪ** – ದಿಕ್ಪಾಲಕ
**ದಿಕ್ಪತಿ** – ದಿಕ್ಕಿನ ಒಡೆಯ
**ದಿಕ್ಪಾರ** – ದಿಕ್ಕಿನ ಎಲ್ಲೆ
**ದಿಕ್ಪ್ರಸರ** – ದಿಕ್ಕುಗಳ ಸಮೂಹ
**ದಿಕ್ಸ್ವಸ್ತಿಕ** – (ಜೈನ) ಒಂದು ಸಭಾಮಂಟಪ
**ದಿಗಂತ** – ದಿಕ್ಕಿನ ಕೊನೆ, ಕ್ಷಿತಿಜ
**ದಿಗಂತರ** – ದಿಕ್ಕುಗಳ ನಡುವಣ ಪ್ರದೇಶ
**ದಿಗಂತರಾಳ** – ದಿಗಂತರ
**ದಿಗಂತರೋಪಗತ** – ದಿಕ್ಕಿನ ಕೊನೆ ಮುಟ್ಟಿದ
**ದಿಗಂತರದೀಕ್ಷೆ** – (ಜೈನ) ದಿಗಂಬರ ಸನ್ಯಾಸಿಯ ದೀಕ್ಷೆ
**ದಿಗಂತರರೂಪ** – ಬೆತ್ತಲೆ ರೂಪ
**ದಿಗಂಬರಲೀಲೆ** – (ಜೈನ) ದಿಗಂಬರತ್ವದ ಶೋಭೆ
**ದಿಗಂಬರವಿಳಾಸ** – ದಿಗಂಬರಲೀಲೆ
**ದಿಗಧಿಪ** – ದಿಕ್ಪಾಲಕ
**ದಿಗಧೀಶ** – ದಿಗಧಿಪ
**ದಿಗವಲೋಕನಗೃಹ** – ದಿಕ್ಕುಗಳನ್ನು ನೋಡಲು ಅನುಕೂಲವಾಗುವ ಎತ್ತರವಾದ ಮನೆ
**ದಿಗಿಭ** – ದಿಕ್ಕರಿ
**ದಿಗಿಭೇಂದ್ರ** – ಶ್ರೇಷ್ಠ ದಿಕ್ಕರಿ, ಐರಾವತ
**ದಿಗ್ಗಜ** – ಭೂಮಿಯನ್ನು ಎಂಟು ದಿಕ್ಕುಗಳಲ್ಲಿ ಹೊತ್ತಿವೆ ಎನ್ನಲಾದ ಐರಾವತ, ಪುಂಡರೀಕ, ವಾಮನ ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂಬ ಆನೆಗಳು
**ದಿಗ್ಗಜರಾಜಿ** – ದಿಗ್ಗಜಗಳ ಗುಂಪು
**ದಿಗ್ಜಯಂಗೆಯ್** – ದಿಗ್ವಿಜಯವನ್ನು ಕೈಗೊಳ್ಳು
**ದಿಗ್ಜಯೋದ್ಯಮ** – ದಿಕ್ಕುಗಳನ್ನು ಗೆಲ್ಲುವ ಕೆಲಸ
**ದಿಗ್ದಂತಿ** – ದಿಕ್ಕರಿ
**ದಿಗ್ದಂತಿಯೂಥ** – ದಿಕ್ಕರಿಗಳ ಸಮೂಹ
**ದಿಗ್ದಾಹ** – ದಿಕ್ಕಿನಲ್ಲಿ ಕಾಣಿಸಿಕೊಳ್ಳುವ ಬೆಂಕಿ; ಅಪಶಕುನ
**ದಿಗ್ದೇವತೆ** – ದಿಕ್ಕಿನ ಅಧಿದೇವತೆ
**ದಿಗ್ಧೂಮ** – ದಿಕ್ಕಿನಲ್ಲಿ ಕಾಣಿಸಿಕೊಳ್ಳು ಹೊಗೆ

**ದಿಗ್ಭವ** – ದಿಕ್ಕಿನಲ್ಲಿ ಉಂಟಾಗುವ ವೈಹಾಯಸ, ಭೌಮ, ದಿಗ್ಭವ, ಸೈನ್ಯಜ, ಗೃಹೋದ್ಭೂತ ಎಂಬ ಐದು ಬಗೆಯ ಉತ್ಪತಗಳು
**ದಿಗ್ಭ್ರಾಮಿತ** – ಗದಾಯುದ್ಧದ ಒಂದು ವರಸೆ
**ದಿಗ್ರದನಿ** – ದಿಕ್ಕರಿ
**ದಿಗ್ರಾಜಿ**– ದಿಕ್ಕುಗಳ ಸಮೂಹ
**ದಿಗ್ವಸನ** – ದಿಗಂಬರ
**ದಿಗ್ವಾರಣ** – ದಿಗ್ಗಜ
**ದಿಗ್ವಾಸ** – ದಿಗಂಬರ
**ದಿಗ್ವಿಜಯ** – ಎಲ್ಲ ದಿಕ್ಕುಗಳ ರಾಜ್ಯಗಳನ್ನೂ ಗೆಲ್ಲುವುದು
**ದಿಗ್ವಿತತಿ** – ದಿಕ್ಕುಗಳ ಸಮೂಹ
**ದಿಗ್ವಿವರ** – ದಿಕ್ಕುಗಳ ನಡುವಣ ಪ್ರದೇಶ
**ದಿಙ್ನಾಗ** – ದಿಕ್ಕರಿ
**ದಿಙ್ನಿಕರ** – ದಿಕ್ಕುಗಳ ಸಮೂಹ
**ದಿಙ್ಮಾತ್ರ** – ಸ್ಥೂಲವಾದ ಸೂಚನೆ
**ದಿಙ್ಮುಖ** – ದಿಕ್ಕಿನ ಮುಂಭಾಗ
**ದಿಙ್ಮೂಢ** – ದಿಕ್ಕು ತೋಚದಂತೆ ಗೊಂದಲಗೊಂಡವನು
**ದಿಟ** – ವಾಸ್ತವ
**ದಿಟಂ** – ನಿಶ್ಚಿತವಾಗಿಯೂ
**ದಿಟ್ಟಿ** – (ದೃಷ್ಟಿ) ಕಣ್ಣು; ನೋಟ
**ದಿಟ್ಟಿಗೆವರ್** – ಕಣ್ಣಿಗೆ ಬೀಳು
**ದಿಟ್ಟಿಗೆಡು** – ಕಂಗೆಡು
**ದಿಟ್ಟಿವಿಸ** – (ದೃಷ್ಟಿವಿಷ) ಕೆಟ್ಟ ಕಣ್ಣು
**ದಿಟ್ಟಿವೆಳಗು** – ಕಣ್ಣ ಕಾಂತಿ
**ದಿಟ್ಟಿಸು** – ನೋಡಿ
**ದಿತಿಜ** – ದಿತಿಯ ಮಗ; ರಾಕ್ಷಸ; ನೈರುಯ್ತ್ತ ದಿಕ್ಕಿನ ಅಧಿಪತಿಯಾದ ನೈಋತ್ಯ
**ದಿತಿಜಕುಲ(ಳ)** – ರಾಕ್ಷಸ ಕುಲ
**ದಿತಿಜಾರಿ** – ರಾಕ್ಷಸರ ಶತ್ರು; ಕೃಷ್ಣ
**ದಿತಿಸುತ** – ದಿತಿಜ
**ದಿನ** – ಹಗಲು; ಸೂರ್ಯ ಇರುವಷ್ಟು ದಿನದ ಅವಧಿ
**ದಿನಕರ** – ಸೂರ್ಯ
**ದಿನಕರತನಯ** – ಸೂರ್ಯನ ಮಗ, ಕರ್ಣ; ಶನಿ; ಯಮ; ಸುಗ್ರೀವ
**ದಿನಕರತೇಜ** – ಸೂರ್ಯನ ಕಾಂತಿ
**ದಿನಕರಸುತ** – ಕರ್ಣ
**ದಿನಕರೋಪಲ** – ಸೂರ್ಯಕಾಂತಶಿಲೆ
**ದಿನಕೃತ್** – ಸೂರ್ಯ
**ದಿನಕೃತ್ತನೂಭವ** – ದಿನಕೃತ್+ತನೂಭವ, ಸೂರ್ಯನ ಮಗ, ಕರ್ಣ
**ದಿನಕೃದ್ಬಿಂಬ** – ದಿನಕೃತ್+ಬಿಂಬ, ಸೂರ್ಯಬಿಂಬ
**ದಿನಕೃದ್ರಥ** – ದಿನಕೃತ್+ರಥ, ಸೂರ್ಯನ ರಥ
**ದಿನಕೃನ್ಮಂಡಲ** – ದಿನಕೃತ್+ಮಂಡಲ, ಸೂರ್ಯಮಂಡಲ
**ದಿನನಾಥ** – ದಿನದ ಒಡೆಯ, ಸೂರ್ಯ
**ದಿನನಾಯಕ** – ದಿನನಾಥ
**ದಿನಪ** – ದಿನನಾಥ
**ದಿನಪಕುಲ** – ಸೂರ್ಯವಂಶ
**ದಿನಪತಿ** – ದಿನನಾಥ
**ದಿನಪತಿವಾರ** – ರವಿವಾರ
**ದಿನಪಾಂಶು** – ಸೂರ್ಯಕಿರಣ, ಬಿಸಿಲು
**ದಿನಮಣಿ** – ಸೂರ್ಯ
**ದಿನಮುಖ** – ದಿನದ ಮೊದಲು, ಬೆಳಗಿನ ಜಾವ
**ದಿನಾಂತ** – ದಿನದ ಕೊನೆಯ ಭಾಗ, ಸಂಜೆ
**ದಿನಾಧಿನಾಯಕ** – ದಿನಪ
**ದಿನಾಧಿಪ** – ದಿನಪ
**ದಿನಾಧಿಪತಿ** – ದಿನಪ
**ದಿನೇಶ** – ಸೂರ್ಯ
**ದಿನೇಶತನಯ** – ಸೂರ್ಯನ ಮಗ, ಕರ್ಣ
**ದಿಬ್ಬಣ** – ಮದುವೆಯ ಮೆರವಣಿಗೆ
**ದಿಬ್ಯ** – (ದಿವ್ಯ) ಪ್ರಮಾಣ, ದೈವ ಸಾಕ್ಷ್ಯ; ಇವು ಐದರಿಂದ ಒಂಬತ್ತು ಬಗೆ ಎಂದು ಸ್ಮೃತಿಕಾರರು; ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಏಳು ಬಗೆಯ ದಿಬ್ಯಗಳು: ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ ಮತ್ತು ವಿಷ
**ದಿಬ್ಯಂಬಿಡಿ** – ದಿವ್ಯದ ವಸ್ತು ಹಿಡಿದು ಪ್ರಮಾಣಮಾಡು
**ದಿಬ್ಯದೇಹ** – ದಿವ್ಯದೇಹ
**ದಿಬ್ಯಸಭೆ** – ದಿವ್ಯಸಭೆ
**ದಿಬ್ಯಾಹಾರ** – ದಿವ್ಯಾಹಾರ, ಶ್ರೇಷ್ಠವಾದ ಆಹಾರ
**ದಿಮ್ಮಿದ** – ಹಿರಿಯ
**ದಿವ** – ಆಕಾಶ; ಸ್ವರ್ಗ
**ದಿವಸ** – ಒಂದು ಹಗಲು ಮತ್ತು ರಾತ್ರಿ
**ದಿವಸಕರ(ಕೃತ್)** – ಸೂರ್ಯ
**ದಿವಸಕರೋದಯ** – ಸುರ್ಯೋದಯ
**ದಿವಸವಿರಾಮ** – ಹಗಲಿನ ಕೊನೆ, ಸಂಜೆ
**ದಿವಸವ್ಯಾಪಾರ** – ದಿನದ ವ್ಯವಹಾರ
**ದಿವಸಾಂಧ** – ಹಗಲು ಕುರುಡ
**ದಿವಸಾವಸಾನ** – ದಿವಸವಿರಾಮ
**ದಿವಸಾಷ್ಟಕ** – ಎಂಟು ದಿವಸಗಳು
**ದಿವಸೇಂದ್ರ** – ಸೂರ್ಯ
**ದಿವಸೇಂದ್ರಾನ್ವಾ(ನ್ವ)ಯ** – ಸೂರ್ಯವಂಶ
**ದಿವಾಂಧ** – ದಿವಸಾಂಧ
**ದಿವಾಕರ** – ದಿವಸಕರ
**ದಿವಾಸ್ವಾಪ** – ಹಗಲು ನಿದ್ದೆ
**ದಿವಿಜ** – ಸ್ವರ್ಗದಲ್ಲಿ ಜನಿಸಿದವನು, ದೇವತೆ
**ದಿವಿಜಕಾಂತೆ** – ದೇವತಾಸ್ತ್ರೀ
**ದಿವಿಜಕುಜ** – ಕಲ್ಪವೃಕ್ಷ
**ದಿವಿಜಾಕ್ಷ್ಮಾಜ** – ದಿವಿಜಕುಜ
**ದಿವಿಜಖೇಟಕ** – ದೇವತೆಗಳ ಊರು, ಅಮರಾವತಿ

**ದಿವಿಜಗಜ** – ದೇವಲೋಕದ ಆನೆ, ಐರಾವತ
**ದಿವಿಜಚಾಪ** – ದೇವಲೋಕದ ಬಿಲ್ಲು, ಇಂದ್ರನ ಬಿಲ್ಲು, ಕಾಮನಬಿಲ್ಲು
**ದಿವಿಜಾಜನ** – ದೇವಲೋಕದ ಜನ
**ದಿವಿಜತನಯ** – ದೇವತೆಯ ಮಗ, ಇಂದ್ರನ ಮಗ, ಅರ್ಜುನ
**ದಿವಿಜತೆ** – ದೇವತ್ವ
**ದಿವಿಜದೀರ್ಘಿಕೆ** – ದೇವಲೋಕದ ನದಿ, ಗಂಗೆ
**ದಿವಿಜಧುನಿ** – ದಿವಿಜದೀರ್ಘಿಕೆ
**ದಿವಿಜನದಿ** – ದಿವಿಜದೀರ್ಘಿಕೆ
**ದಿವಿಜನದೀಸೂನು** – ಗಂಗಾಪುತ್ರ, ಭಿಷ್ಮ
**ದಿವಿಜನಾಯಕ** – ದೇವೇಂದ್ರದಿವಿಜನಿಕಾಯ ದೇವತೆಗಳ ಸಮೂಹ
**ದಿವಿಜನಿವಾಸ** – ದೇವತೆಗಳ ವಾಸಸ್ಥಳ, ಸ್ವರ್ಗ
**ದಿವಿಜಪತಿ** – ದೇವೇಂದ್ರ
**ದಿವಿಜಪೇಟಕ** – ದೇವತೆಗಳ ಸಮೂಹ
**ದಿವಿಜಭವನ** – ದೇವತೆಗಳ ಮನೆ, ಸ್ವರ್ಗ
**ದಿವಿಜಮಹೀಜ** – ಕಲ್ಪವೃಕ್ಷ
**ದಿವಿಜರಾಜ** – ದೇವೇಂದ್ರ
**ದಿವಿಜವಧೂಟಿ** – ದೇವತಾಸ್ತ್ರೀ
**ದಿವಿಜವನಿತೆ** – ದೇವತಾಸ್ತ್ರೀ
**ದಿವಿಜವಲ್ಲಭ** – ದಿವಿಜಪತಿ
**ದಿವಿಜವಿಮಾನ** – ಪುಷ್ಪಕವಿಮಾನ; (ಜೈನ) ದೇವತೆಗಳು ವಾಸಿಸುವ ಸ್ವರ್ಗದ ಒಂದು ವಿಭಾಗ
**ದಿವಿಜಾರಾಸನ** – ಇಂದ್ರಚಾಪ, ಕಾಮನ ಬಿಲ್ಲು
**ದಿವಿಜಸ್ತ್ರೀ** – ದಿವಿಜವನಿತೆ
**ದಿವಿಜಾಂಗನೆ** – ದಿವಿಜವನಿತೆ
**ದಿವಿಜಾಂಗರಕ್ಷ(ಕ)** – ದೇವತೆಗಳ ಅಂಗರಕ್ಷಕ
**ದಿವಿಜಾಚಳ** – ದೇವತೆಗಳ (ಚಿನ್ನದ) ಬೆಟ್ಟ, ಮೇರು
**ದಿವಿಜಾದ್ರಿ** – ದಿವಿಜಾಚಳ
**ದಿವಿಜಾಧಿನಾಥ** – ದೇವೇಂದ್ರ
**ದಿವಿಜಾಧೀಶ** – ದೇವೇಂದ್ರ
**ದಿವಿಜಾಧೀಶ್ವರ** – ದೇವೇಂದ್ರ
**ದಿವಿಜಾನೋಕಹ** – ಕಲ್ಪವೃಕ್ಷ
**ದಿವಿಜಾಪಗೆ** – ದೇವಗಂಗೆ
**ದಿವಿಜಾರಾಧ್ಯ** – ದೇವತೆಗಳಿಗೆ ಪೂಜ್ಯನಾದವನು, ಅರ್ಹಂತ
**ದಿವಿಜಾವಾಸ** – ದೇವಲೋಕ
**ದಿವಿಜಾಶಾಗಿರಿ** – ದೇವಲೋಕದ ದಿಕ್ಕೆನಿಸಿದ ಪೂರ್ವದ ಬೆಟ್ಟ, ಉದಯಗಿರಿ
**ದಿವಿಜಾಶ್ವತ್ಥಾಮ** – ದೇವಲೋಕದ ಕುದುರೆಯಾದ ಉಚ್ಚೈಃಶ್ರವಸ್ಸಿನ ಕೆನೆತ
**ದಿವಿಜಾಸನ** – ದಿವ್ಯ ಪೀಠ
**ದಿವಿಜೇಂದ್ರ** – ದೇವೇಂದ್ರ
**ದಿವಿಜೇಂದ್ರಾವಾಸ** – ಇಂದ್ರನ ಮನೆ
**ದಿವಿಜೇಂದ್ರೇಭ** – ಇಂದ್ರನ ಆನೆ, ಐರಾವತ
**ದಿವಿಜೇಶ್ವರ** – ಇಂದ್ರ
**ದಿವಿಜೋರ್ವೀಜ** – ಕಲ್ಪವೃಕ್ಷ
**ದಿವಿಜೋರ್ವೀಧರ** – ದಿವಿಜಾಚಳ
**ದಿವಿಜೋರ್ವೀರುಹ** – ದಿವಿಜೋರ್ವೀಜ
**ದಿವಿಷನ್ಮಣಿ** – (ದಿವಿಷತ್+ಮಣಿ) ದೇವಲೋಕದ ಮಣಿ, ಚಿಂತಾಮಣಿ
**ದಿವೈಶ್ವರ್ಯ** – ದೇವಲೋಕದ ಸಂಪತ್ತು
**ದಿವೋದ್ಭೂತ** – ಸ್ವರ್ಗದಲ್ಲಿ ಹುಟ್ಟಿದ
**ದಿವೌಕ** – ದೇವತೆಗಳ ಮನೆ, ಸ್ವರ್ಗ
**ದಿವೌಕಸ** – ಸ್ವರ್ಗವನ್ನು ಮನೆಯಾಗುಳ್ಳವನು, ದೇವತೆ
**ದಿವ್ಯ** – ಸ್ವರ್ಗದ; ದಿಬ್ಯ; ದೈವ; ಆರೋಪವನ್ನು ಸಾಬೀತುಮಾಡಲು ಆಚರಿಸುವ ವಿವಿಧ ಬಗೆಯ ಪರೀಕ್ಷೆಗಳು
**ದಿವ್ಯಂಬಿಡಿ** – ದಿಬ್ಯಂಬಿಡಿ
**ದಿವ್ಯಕರಿ** – ಐರಾವತ
**ದಿವ್ಯಕಾಂತೆ** – ದೇವತಾಸ್ತ್ರೀ
**ದಿವ್ಯಚಕ್ಷು** – ದೈವಿಕ ದೃಷ್ಟಿ
**ದಿವ್ಯಚಿತ್ತ** – ಶುದ್ಧ ಮನಸ್ಸು(ಳ್ಳವನು)
**ದಿವ್ಯಚ್ಛಾಯೆ** – ಸುಂದರವಾದ ನೆರಳು
**ದಿವ್ಯಜಾತಿ** – (ಜೈನ) ಪಾರಿವ್ರಾಜ್ಯಲಕ್ಷಣಗಳಲ್ಲಿ ಒಂದು; ಅದರಲ್ಲಿ ನಾಲ್ಕು ವಿಭಾಗ; ದಿವ್ಯ, ವಿಜಯ, ಪರಮ, ಅನುಪಮ; ಇವುಗಳಿಂದ ಕ್ರಮವಾಗಿ ಅಹಮಿಂದ್ರತ್ವ, ಚಕ್ರವರ್ತಿತ್ವ, ಅರ್ಹಂತ್ಯ, ಸಿದ್ಧತ್ವಗಳು **ಉಂಟಾಗುತ್ತವೆ**–
**ದಿವ್ಯಜ್ಞಾನಿ** – ಅಲೌಕಿಕ ಜ್ಞಾನವುಳ್ಳವನು
**ದಿವ್ಯಜ್ಯೋತಿ** – ಲೋಕೋತ್ತರ ಕಾಂತಿ
**ದಿವ್ಯತನು** – ದಿವ್ಯಶರೀರ
**ದಿವ್ಯತಪೋಧನ** – ಶ್ರೇಷ್ಠ ತಾಪಸಿ
**ದಿವ್ಯತೆ** – ದೇವತ್ವ
**ದಿವ್ಯದೃಷ್ಟಿ** – ಅತಿಮಾನುಷ ದೃಷ್ಟಿ
**ದಿವ್ಯದೇಹ** – ದಿವ್ಯತನು
**ದಿವ್ಯದ್ಯೋತಿ** – ದಿವ್ಯಜ್ಯೋತಿ
**ದಿವ್ಯದ್ವಿಪ** – ಶ್ರೇಷ್ಠವಾದ ಆನೆ; ಐರಾವತ
**ದಿವ್ಯಧ್ವನಿ** – ಪವಿತ್ರ ನುಡಿ
**ದಿವ್ಯನಗ** – ಮೇರುಪರ್ವತ; ಕಲ್ಪವೃಕ್ಷ
**ದಿವ್ಯನಿಧಾನ** – ಪಾವಿತ್ರ್ಯದ ನಿಧಿ(ಯಾದವನು)
**ದಿವ್ಯನಿನಾದ** – ದಿವ್ಯಧ್ವನಿ
**ದಿವ್ಯಪ್ರಭಾವ** – ಅಲೌಕಿಕಪ್ರಭಾವ
**ದಿವ್ಯಪ್ರಾಸಾದ** – ದಿವ್ಯ ಮಂದಿರ
**ದಿವ್ಯಭಾಷೆ** – ದೇವನುಡಿ
**ದಿವ್ಯಭೋಗ** – ಅಲೌಕಿಕ ಸುಖ
**ದಿವ್ಯಮುನಿ** – ಶ್ರೇಷ್ಠ ತಾಪಸಿ
**ದಿವ್ಯಮೂರ್ತಿ** – ಆನಂದನೀಡುವ ರೂಪ
**ದಿವ್ಯರೂಪ** – ದಿವ್ಯಮೂರ್ತಿ
**ದಿವ್ಯವಚನ** – ಪವಿತ್ರ ನುಡಿ

**ದಿವ್ಯವಧು** – ದೇವತಾಸ್ತ್ರೀ
**ದಿವ್ಯವಪು** – ಅನುಪಮ ಶರೀರ
**ದಿವ್ಯವಸನ**– ಉತ್ಕೃಷ್ಟ ಉಡುಗೆ
**ದಿವ್ಯವಿಷ್ಟರ** – ಉತ್ಕೃಷ್ಟವಾದ ಪೀಠ
**ದಿವ್ಯಶಯ್ಯೆ** – ಉತ್ಕೃಷ್ಟವಾದ ಹಾಸಿಗೆ
**ದಿವ್ಯಶರೀರ** – ದಿವ್ಯತನು
**ದಿವ್ಯಸಂಭವ** – ದೈವಾಂಶಸಂಭೂತ
**ದಿವ್ಯಸಂಯೋಗ** – ದೇವತೆಗಳ ಸಹವಾಸ
**ದಿವ್ಯಸುಖ** – ಸ್ವರ್ಗಭೋಗ
**ದಿವ್ಯಸೌಂದರಿ** – ದೇವಲೋಕದ ಸುಮದರಿ
**ದಿವ್ಯಹಂಸ** – ಶ್ರೇಷ್ಠ ಹಂಸ; ಸನ್ಯಾಸಿ
**ದಿವ್ಯಾಂಗ** – ದಿವ್ಯತನು
**ದಿವ್ಯಾಂಗನೆ** – ದೇವತಾಸ್ತ್ರೀ
**ದಿವ್ಯಾಂಬು** – ಪವಿತ್ರಜಲ
**ದಿವ್ಯಾಕಾರ** – ದಿವ್ಯಮೂರ್ತಿ
**ದಿವ್ಯಾಕಾರೆ** – ದಿವ್ಯಾಕಾರ ಉಳ್ಳ ಸ್ತ್ರೀ
**ದಿವ್ಯಾಕೃತಿ** – ದಿವ್ಯಮೂರ್ತಿ
**ದಿವ್ಯಾಜ್ಞೆ** – (ಜೈನ) ಪಾರಿವ್ರಾಜ್ಯಲಕ್ಷಣಗಳಲ್ಲಿ ಆಜ್ಞೆ ಎಂಬುದು ಒಂದು; ಅದರಲ್ಲಿ ಮೂರು ಬಗೆ; ದಿವ್ಯ, ವಿಜಯ, ಪರಮ; ದಿವ್ಯಾಜ್ಞೆಯಿಂದ ದೇವತೆಗಳನ್ನು ವಶೀಕರಿಸಿಕೊಳ್ಳಬಹುದು
**ದಿವ್ಯಾನುಭವ** – ಅಲೌಕಿಕ ಅನುಭವ
**ದಿವ್ಯಾನುಭುತಿ** – ದಿವ್ಯಾನುಭವ
**ದಿವ್ಯಾಭರಣ** – ಉತ್ಕೃಷ್ಟವಾದ ಒಡವೆ
**ದಿವ್ಯಾಯುಧ** – ಉತ್ಕೃಷ್ಟ ಆಯುಧ
**ದಿವ್ಯಾರ್ಚನೆ** – ಉತ್ಕೃಷ್ಟ ಪೂಜೆ
**ದಿವ್ಯಾವಧಿ** – (ಜೈನ) ಅವಧಿಜ್ಞಾನ; ಮೂರೂ ಕಾಲಗಳ ಘಟನೆಗಳನ್ನು ತಿಳಿಯಬಹುದಾದ ಶಕ್ತಿ
**ದಿವ್ಯಾವಧಿಬೋಧ** – (ಜೈನ) ಅವಧಿಜ್ಞಾನಿ
**ದಿವ್ಯಾಶ್ವ** – ಉತ್ಕೃಷ್ಟವಾದ ಕುದುರೆ
**ದಿವ್ಯಾಸ್ತ್ರ** – ದೇವತೆ ದಯಪಾಲಿಸಿರುವ ಅಸ್ತ್ರ
**ದಿವ್ಯಾಹಾರ** – ಉತ್ಕೃಷ್ಟ ಆಹಾರ
**ದಿವ್ಯೋಪದೇಶ** – ಉತ್ಕೃಷ್ಟ ಉಪದೇಶ
**ದಿವ್ಯೌಷಧ(ಧಿ)** – ಉತ್ಕೃಷ್ಟ ಔಷಧಿ
**ದಿಶಾಂತರ** – ದಿಕ್ಕುಗಳ ನಡುವಣ ಪ್ರದೇಶ
**ದಿಶಾಕರಟಿ** – ದಿಕ್ಕರಿ
**ದಿಶಗಜ** – ದಿಕ್ಕರಿ
**ದಿಶಾಘಾಟ** – ದಿಕ್ಕಿನ ನೆಲೆಲ
**ದಿಶಾಚಕ್ರ** – ದಿಕ್ಚಕ್ರ; ದಿಕ್ಕುಗಳ ವಲಯ
**ದಿಶಾದಂತಿ** – ದಿಕ್ಕರಿ
**ದಿಶಾಧೂಮ** – ದಿಕ್ಕುಗಳಲ್ಲಿನ ಹೊಗೆ
**ದಿಶಾಪಟ್ಟ** – (ಶತ್ರುಗಳನ್ನು_ ದಿಕ್ಕುದಿಕ್ಕಿಗೆ ಓಡಿಸುವವನು
**ದಿಶಾಪರಿಧಿ** – ದಿಶಾಚಕ್ರ
**ದಿಶಾಭಿತ್ತಿ** – ದಿಕ್ಕಿನ ಕೊನೆ
**ದಿಶಾಮಂಡಲ** – ದಿಶಾಚಕ್ರ
**ದಿಶಾಮೂಢ** – ದಿಗ್ಭ್ರಮೆಗೊಂಡವನು
**ದಿಶಾವಲೋಕನ** – ದಿಕ್ಕುಗಳೆಡೆ ನೋಡಿವುದು
**ದಿಶಾವಳಯ** – ದಿಶಾಚಕ್ರ
**ದಿಶಾವಳಿ** – ದಿಕ್ಕುಗಳ ಸಮೂಹ
**ದಿಶಾಸ್ಥಗಿತ** – ದಿಕ್ಕುಗಳನ್ನು ಆವರಿಸಿರುವ
**ದಿಶಾಳಿ** – ದಿಶಾವಳಿ
**ದಿಶೆ** – ದಿಕ್ಕು
**ದಿಶೇಂದ್ರ** – ದಿಕ್ಪಾಲಕ
**ದೀಕ್ಷೆ** – (ಜೈನ) ಸನ್ಯಾಸದೀಕ್ಷೆ
**ದೀಕ್ಷೆಗುಡು** – (ಜೈನ) ಸನ್ಯಾಸದೀಕ್ಷೆ ಕೊಡು
**ದೀಕ್ಷೆಗೆಯ್** – (ಜೈನ) ಸನ್ಯಾಸದೀಕ್ಷೆ ಸ್ವೀಕರಿಸು
**ದೀಕ್ಷೆಗೊಳ್** – (ಜೈನ) ಸನ್ಯಾಸದೀಕ್ಷೆ ಹೊಂದು
**ದೀಕ್ಷೆಯಿಕ್ಕು** – ಉಪದೇಶಮಾಡು
**ದೀಕ್ಷೋಪವಾಸ** – (ಜೈನ) ವ್ರತದ ಕಾರಣ ಮಾಡುವ ಉಪವಾಸ
**ದೀಧಿತಿ** – ಕಾಂತಿ
**ದೀನತೆ** – ದೈನ್ಯ; ದುರ್ಬಲತೆ
**ದೀನತ್ವ**– ಕುಂದುವಿಕೆ
**ದೀನಭಾವ** – ದೈನ್ಯ
**ದೀನಾನನ** – ಬಾಡಿದ ಮುಖ
**ದೀನಾರ** – ಒಂದು ಚಿನ್ನದ ನಾಣ್ಯ
**ದೀನಾಸ್ಯೆ** – ಬಾಡಿದ ಮುಖ ಉಳ್ಳವಳು
**ದೀಪ** – (ದ್ವೀಪ) ನಡುಗಡ್ಡೆ; ಸೊಡರು
**ದೀಪಕಲಿ(ಳಿ)ಕೆ** – ದೀಪದ ಕುಡಿ
**ದೀಪಕಳಾಪ** – ದೀಪಗಳ ಸಮೂಹ
**ದೀಪದ್ಯುತಿ** – ದೀಪದ ಕಾಂತಿ
**ದೀಪನೀಯ** – ಸುಡುವ
**ದೀಪವರ್ತಿ** – ದೀಪದ ಬತ್ತಿ
**ದೀಪವಿಕಲ್ಪ** – ದೀಪದಂತೆ ಕಾಣುವುದು
**ದೀಪಶಿಖೆ** – ದೀಪದ ಕುಡಿ
**ದೀಪಸ್ಪರ್ಶನ** – ದೀಪ ಹೊತ್ತಿಸುವುದು
**ದೀಪಾಂಕುರ** – ದೀಪದ ಕುಡಿ
**ದೀಪಾಂಗ** – (ಜೈನ) ದೀಪಗಳನ್ನು ನೀಡುವ ಒಂದು ಕಲ್ಪವೃಕ್ಷ, ನೋಡಿ, ಕಲ್ಪವೃಕ್ಷ
**ದೀಪಾಂಗಕುಜ** – ದೀಪಾಂಗ
**ದೀಪಾಂಗವೃಕ್ಷ** – ದೀಪಾಂಗ
**ದೀಪಾರ್ಚಿ ಸೊಡರಿನ ಜ್ವಾಲೆ**–
**ದೀಪಾವಳಿ** – ದೀಪಗಳ ಸಾಲು
**ದೀಪಿಕಾಂಕುರ** – ದೀಪದ ಕುಡಿ
**ದೀಪಿಕೆ** – ಸೊಡರು
**ದೀಪ್ತತಪ** – (ಜೈನ) ತಪಸ್ಸಿನಿಂದ ಯೋಗಿಗೆ ಉಂಟಾಗುವ ದೇಹಕಾಂತಿ
**ದೀಪ್ತಿ** – ಬೆಳಕು
**ದೀಪ್ತಿಕೆ** – ಸೊಡರು
**ದೀಪ್ತೌಷಧಿ** – ಪರಿಣಾಮಕಾರಿ ಓಷಧಿ
**ದೀಪ್ರ** – ಕಾಂತಿಯುಕ್ತವಾದ

**ದೀರ್ಘ** – ನೀಳ, ಉದ್ದವಾದ
**ದೀರ್ಘಕರ** – ಉದ್ದವಾದ ತೋಳು; ಉದ್ದ ಸೊಂಡಿಲು
**ದೀರ್ಘಕೇಶ** – ಉದ್ದ ಕೂದಲು
**ದೀರ್ಘನಿದ್ರಿತ** – ಸಾವಿಗೊಳಗಾದವನು
**ದೀರ್ಘನಿದ್ರೆ** – ಸಾವು
**ದೀರ್ಘರೋಷಿ** – ತುಂಬ ಕಾಲ ಕೋಪಗೊಂಡಿರುವವನು
**ದೀರ್ಘಿಕಾ(ಕೆ)** – ಸರೋವರ; ನದಿ
**ದೀರ್ಣಾನನ** – ದೀರ್ಣ+ಆನನ, ತೆರೆದ ಬಾತಿ
**ದೀವ(ಹ)** – ಬೇಟೆಯ ಪ್ರಾಣಿಯನ್ನು ಆಕರ್ಷಿಸಲು ಒಡ್ಡುವ ಸಾಕಿದ ಪ್ರಾಣಿ
**ದೀವಗಾಱ** – ದೀವದ ಬೇಟೆಯಾಡುವವನು; ಮೃಗಪಕ್ಷಿಗಳನ್ನು ಸಾಕುವವನು
**ದೀವಟಿಗ** – ಪಂಜು ಹಿಡಿಯುವವನು
**ದೀವದ ಬೇಂಟೆ** – ದೀವ ಒಡ್ಡಿ ಆಡುವ ಬೇಟೆ
**ದೀವದ ಹುಲಿ** – ಬೇಟೆಯಲ್ಲಿ ಬಳಸುವ ಮೋಸದ ಹುಲಿ
**ದೀವಿಗೆ** – ಸೊಡರು
**ದೀಹದ ಪುಲಿ** – ಬೇಟೆಯ ಪ್ರಾಣಿಯನ್ನು ಆಕರ್ಷಿಸಲು ಒಡ್ಡುವ ಸಾಕಿದ ಹುಲಿ
**ದೀಹಾರ** – ದೀವದ ಪ್ರಾಣಿಗಳನ್ನಿರಿಸುವ ಜಾಗ
**ದುಂಡಿ** – ಸುಂದರ ಹೆಂಗಸು
**ದುಂದುಭಿ** – ಒಂದು ಚರ್ಮವಾದ್ಯ; ಅರವತ್ತು ಸಂವತ್ಸರಗಳಲ್ಲಿ ಒಂದು
**ದುಂದುಭಿ(ನಿ)ನಾದ** – ದುಂದುಭಿಯ ಧ್ವನಿ
**ದುಂದುಮೆ** – ಹರೆಯ; ಹರೆಯ ಜೊತೆ ಹೇಳುವ ಹಾಡು
**ದುಃಖ** – ವ್ಯಥೆ
**ದುಃಖಂಗೆಯ್** – ದುಃಖಪಡು
**ದುಃಖಪಡು** – ದುಃಖಂಗೆಯ್
**ದುಃಖಜೀವಿ** – ವ್ಯಥೆಯಿಂದ ಬದುಕುವವನು
**ದುಃಖವಿಹ್ವಳ** – ವ್ಯಥೆಯಿಂದ ಪರಿತಪಿಸುವವನು
**ದುಃಖಶತ** – ಅನೇಕ ಬಗೆಯ ಕಷ್ಟಗಳು
**ದುಃಖಾಧಿಕೆ** – ಹೆಚ್ಚಿನ ವ್ಯಥೆ
**ದುಃಖೋಪಶಮನ** – ವ್ಯಥೆಯ ನಿವಾರಣೆ
**ದುಃಖೋಪಾತ್ತ** – ದುಃಖವನ್ನುಂಟುಮಾಡುವುದು
**ದುಃಪಕ್ವಾನ್ನ** – ಸರಿಯಾಗಿ ಬೇಯದಿರುವ ಅನ್ನ; (ಜೈನ) ಐದು ಭೋಗೋಪಭೋಗ ಅತಿಚಾರಗಳಲ್ಲಿ ಬೇಯದ ಆಹಾರ ತಿನ್ನಬೇಕೆಂಬ ಒಂದು ನಿಯಮ
**ದುಃಸ್ವಪ್ನದರ್ಶನ** – ಕೆಟ್ಟ ಕನಸು ಕಾಣುವುದು
**ದುಕೂಲ** – ರೇಷ್ಮೆ ಬಟ್ಟೆ
**ದುಕೂಲಚೇಲ** – ದುಕೂಲ
**ದುಕೂಲವಸನ** – ದುಕೂಲ
**ದುಕುಳವಿತಾನ** – ರೇಷ್ಮೆಯ ಮೇಲ್ಕಟ್ಟು
**ದುಕೂಲಾಂಬರೆ** – ದುಕೂಲವಸ್ತ್ರವನ್ನು ಧರಿಸಿದವಳು
**ದುಗ** – (ದ್ವಿಕ) ಜೋಡಿ, ಎರಡು
**ದುಗುಣ** – (ದ್ವಿಗುಣ) ಎರಡು ಪಟ್ಟು, ಎರಡು ಸಲ
**ದುಗು(ಗೂ)ಲ** – ದುಕೂಲ, ರೇಷ್ಮೆ ಬಟ್ಟೆ
**ದುಗ್ಧ** – ಕರೆಯದುದು, ಹಾಲು
**ದುಗ್ಧಕಂಠ** – ಹಾಲು ಕುಡಿಯುವ ಮಗು
**ದುಗ್ಧಜಳಭೇದನ** – ಹಾಲುನೀರುಗಳನ್ನು ಬೇರ್ಪಡಿಸುವುದು
**ದುಗ್ಧಧಾರೆ** – ಹಾಲಿನ ಪ್ರವಾಹ
**ದುಗ್ಧಲವ** – ಹಾಲಿನ ಹನಿ
**ದುಗ್ಧವಾರಿಧಿ** – ಹಾಲಿನ ಸಮುದ್ರ
**ದುಗ್ಧವಾರ್ಧಿ** – ದುಗ್ಧವಾರಿಧಿ
**ದುಗ್ಧಸಾಗರ** – ದುಗ್ಧವಾರಿಧಿ
**ದುಗ್ಧಸಿಂಧು** – ದುಗ್ಧವಾರಿಧಿ
**ದುಗ್ಧಾಂಬುಧಿ** – ದುಗ್ಧವಾರಿಧಿ
**ದುಗ್ಧಾಂಬುರಾಶಿ** – ದುಗ್ಧವಾರಿಧಿ
**ದುಗ್ಧಾಂಭೋರಾಶಿ** – ದುಗ್ಧವಾರಿಧಿ
**ದುಗ್ಧಾಬ್ಧಿ** – ದುಗ್ಧವಾರಿಧಿ
**ದುಗ್ಧಾಭಿಷೇಕ** – ಹಾಲಿನ ಮಜ್ಜನ
**ದುಗ್ಧಾರ್ಣವ** – ದುಗ್ಧವಾರಿಧಿ
**ದಿಗ್ಧೋದಧಿ** – ದುಗ್ಧವಾರಿಧಿ
**ದುಗ್ಧೋದಧಿತಲ್ಪ** – ಹಾಲಿನ ಸಮುದ್ರವನ್ನೇ ಹಾಸಿಗೆಯಾಗುಳ್ಳವನು, ವಿಷ್ಣು
**ದುಟ್ಟಗೊರವ** – ದುಷ್ಟ ಸನ್ಯಾಸಿ
**ದುಡು(ಢು)ಮ್ಮಿಱೆ** – ದುಡುಂ ಎಂದು ಶಬ್ದಮಾಡು
**ದುಪ್ಪೋಡಿ** – ಎರಡು ಹೋಳು
**ದುರಂತ** – ಕೊನೆಯಿಲ್ಲದ
**ದುರಂತರ** – ಕಡಿಮೆ ಅಂತರವಿರುವುದು; ದುಃಖಕರ
**ದುರಂತೋದ್ವೇಗ** – ಕೊನೆಯಿಲ್ಲದ ತಳಮಳ
**ದುರಘ** – ಮಹಾಪಾತಕ
**ದುರತ್ಯಯ** – ಗೆಲ್ಲಲು ಕಷ್ಟಕರವಾದ
**ದುರಭಿಹಿತ** – ಇಷ್ಟವಾಗದ ಮಾತು
**ದುರವಾಪ** – ಪಡೆಯಲು ಅಸಾಧ್ಯವಾದುದು
**ದುರಾಗ್ರಹ** – ಕೆಟ್ಟ ಹಟ
**ದುರಾಚರಣ** – ಹೀನ ನಡವಳಿಕೆ
**ದುರಾಚಾರಿ** – ಕೆಟ್ಟ ನಡತೆಯವಳು
**ದುರಾತ್ಮ** – ಕೆಟ್ಟ ವ್ಯಕ್ತಿ
**ದುರಾಪ** – ಗೆಲ್ಲಲಸಾಧ್ಯವಾದ
**ದುರಾರೋಹ** – ಏರಲು ಕಷ್ಟಕರವಾದುದು
**ದುರಾಲೋಕನ** – ನೋಡಲಾಗದ, ಕೋರೈಸುವ
**ದುರಾಹವರಂಗ** – ದುರ್+ಆಹವರಂಗ, ಕಷ್ಟಕರ ಯುದ್ಧರಂಗ
**ದುರಿತ** – ಪಾಪ
**ದುರಿತದೂರ** – ಪಾಪವನ್ನು ದೂರಮಾಡಿದವನು
**ದುರಿತಯುತ** – ಪಾಪದಿಂದ ಕೂಡಿದವನು
**ದುರಿತವರ್ತಿ** – ಪಾಪದಲ್ಲಿಯೇ ಸುತ್ತುವವನು

**ದುರಿತವಶ** – ದುರಿತಕ್ಕೆ ವಶವಾದ
**ದುರಿತವಿಜಯ** – ಪಾಪವನ್ನು ಗೆಲ್ಲುವುದು
**ದುರಿತವಿನಾಶ** – ಪಾಪನಿವಾರಣೆ
**ದುರಿತವ್ರಾತ** – ಪಾಪರಾಶಿ
**ದುರಿತಹರ** – ಪಾಪನಿವಾರಕ
**ದುರಿತಹರಣ** – ದುರಿತವಿನಾಶ
**ದುರಿತಾಸಹಿಷ್ಣು** – ದುರಿತ+ಅಸಹಿಷ್ಣು, ಪಾಪವನ್ನು ಸಹಿಸದವನು
**ದುರುಕ್ತ(ಕ್ತಿ)** – ಕೆಟ್ಟ ಮಾತು; ತಿರಸ್ಕಾರದ ನುಡಿ
**ದುರುಳ** – ಧೂರ್ತ
**ದುರೂಪೆ** – ಕುರೂಪಿಯಾದವಳು
**ದುರೋದರ** – ಜೂಜು; ಜೂಜಿನ ಪಣದ್ರವ್ಯ
**ದುರೋದರಕ್ರೀಡೆ** – ಜೂಜಾಟ
**ದುರ್ಗ** – ಸೇರಲು ಅಸಾಧ್ಯವಾದ; ಕೋಟೆ; ಏಳು ರಾಜ್ಯಾಂಗಗಳಲ್ಲಿ ಒಂದು; ಜಲದುರ್ಗ, ಗಿರಿದುರ್ಗ, ಸ್ಥಲದುರ್ಗ, ವನದುರ್ಗಗಳಲ್ಲಿ ಕ್ರಮವಾಗಿ ಎರಡೆರಡು ಬಗೆ: ಅಂತರ್ದೀಪ, ಮಹಾಸ್ಥಳ; ಗುಹ್ಯಾಖ್ಯ, ಪ್ರಸ್ತರ; ಉದಕಸ್ತಂಭ, ವೈರಿಣಿ;
**ಕರ್ದಮೋದಕ, ಸ್ತಂಭನಗಹನ** –
**ದುರ್ಗಂಧ** – ಕೆಟ್ಟ ವಾಸನೆ
**ದುರ್ಗಂಧೆ** – ಕೆಟ್ಟ ವಾಸನೆಯ ದೇಹವುಳ್ಳವಳು
**ದುರ್ಗಗುಣ** – ಕೋಟೆಯ ಲಕ್ಷಣಗಳು: ಅಂತರ್ದ್ವೀಪ, ಮಹಾಸ್ಥಳ, ಗುಹ್ಯ, ಪ್ರಸ್ತರ, ಉದಕಸ್ತಂಭ, ವೈರಿಣಿ, ಕರ್ದಮೋದಕ, ಸ್ತಂಭನಗಹನ ಎಂಬ ಎಂಟು
**ದುರ್ಗತಿ** – ಕೆಟ್ಟ ಸ್ಥಿತಿ
**ದುರ್ಗತಿವೋಗು** – ದುರ್ಗತಿಗೆ ಒಳಗಾಗು
**ದುರ್ಗಪಂಚಕ** – ಐದು ಬಗೆಯ ದುರ್ಗಗಳು: ಜಲದುರ್ಗ, ಗಿರಿದುರ್ಗ, ವನದುರ್ಗ, ಸ್ಥಳದುರ್ಗ, ಈರಿಣದುರ್ಗ
**ದುರ್ಗಭೂಮಿ** – ದುರ್ಗವಿರುವ ಜಾಗ
**ದುರ್ಗಮ** – ಹೋಗಲು ಅಸಾಧ್ಯವಾದ
**ದುರ್ಗಾಶ್ರಯವಿಗ್ರಹ** – ಕೋಟೆಯನ್ನು ಆಶ್ರಯಿಸಿ ಯುದ್ಧಮಾಡುವವನು; ಪಾರ್ವತಿಯನ್ನು ಆಶ್ರಯಿಸಿದ ದೇಹವುಳ್ಳವನು
**ದುರ್ಗಿ** – ದುರ್ಗಾದೇವಿ
**ದುರ್ಜನ** – ನೀಚ ವ್ಯಕ್ತಿ(ಗಳು)
**ದುರ್ಜಯ** – ಗೆಲ್ಲಲು ಅಸಾಧ್ಯನಾದ(ವನು)
**ದುರ್ಣಯ** – ಕೆಟ್ಟ ನಡತೆ
**ದುರ್ದಮ** – ದಮನಮಾಡಲು ಕಷ್ಟಕರವಾದ
**ದುರ್ದಮತೆ** – ದಮನಿಸಲು ಅಸಾಧ್ಯವಾಗಿರುವುದು
**ದುರ್ದರ್ಶ** – ನೋಡಲು ಕಷ್ಟಕರವಾದ
**ದುರ್ದಿನ** – ಮೋಡ ಕವಿದು ಸೂರ್ಯ ಕಾಣಿಸದ ದಿನ
**ದುರ್ಧರ** – ಸಹಿಸಲು ಕಷ್ಟಕರವಾದ
**ದುರ್ನಯ** – ದುರ್ಣಯ
**ದುರ್ನಯವರ್ತಿ** – ಕೆಟ್ಟ ನಡತೆಯವನು
**ದುರ್ನಯೋಕ್ತಿ** – ಕೆಟ್ಟ ಮಾತು
**ದುರ್ನಿಮಿತ್ತ** – ಅಪಶಕುನ
**ದುರ್ನಿರೀಕ್ಷ್ಯ** – ನೋಡಲಸಾಧ್ಯವಾದ(ದುದು)
**ದುರ್ಬುದ್ಧಿ** – ನೀಚ ಬುದ್ಧಿ
**ದುರ್ಬುಧ** – ಕೆಟ್ಟ ಬುದ್ಧಿಯುಳ್ಳವನು, ದುಷ್ಟ
**ದುರ್ಬೆಸನಿ** – (ದುರ್ವ್ಯಸನಿ) ಕೆಟ್ಟ ಚಟದವನು
**ದುರ್ಭಗ** – ದುರದೃಷ್ಟ; (ಜೈನ) ಇತರರ ಮನಸ್ಸಿನಲ್ಲಿ ಅಸಹ್ಯವುಂಟುಮಾಡುವ ಸ್ಥಿತಿ, ಒಂದು ಬಗೆಯ ನಾಮಪ್ರಕೃತಿ
**ದುರ್ಭಗತ್ವ** – ದುರದೃಷ್ಟ
**ದುರ್ಭಗವನಿತೆ** – ಗಂಡನಿಗೆ ಬೇಕಿಲ್ಲದವಳು
**ದುರ್ಭಗೆ** – ದುರ್ಭಗವನಿತೆ
**ದುರ್ಭಾವನೆ** – ದುರಾಲೋಚನೆ
**ದುರ್ಭೇದ್ಯ** – ಭೇದಿಸಲು ಅಸಾಧ್ಯವಾದ
**ದುರ್ಮಂತ್ರಿ** – ದುಷ್ಟ ಸಚಿವ
**ದುರ್ಮತಿ** – ಕೆಟ್ಟ ಬುದ್ಧಿ
**ದುರ್ಮದ** – ಸೊಕ್ಕಿದ
**ದುರ್ಮರಣ** – ಅಸಹಜ ಸಾವು
**ದುರ್ಮರ್ಷಣ** – ಸಹಿಸಲಸಾಧ್ಯವಾದ
**ದುರ್ಮುಖ** – ಕೆಟ್ಟ ಮುಖವುಳ್ಳವನು; ನಿಂದಕ
**ದುರ್ಮೋಹ** – ಕೆಟ್ಟ ಮೋಹ
**ದುರ್ಯಶ** – ಅಪಯಶಸ್ಸು
**ದುರ್ಯಶಸ್ಸು** – ದುರ್ಯಶ
**ದುರ್ಯೋಧನ** – ಗೆಲ್ಲಲು ಅಸಾಧ್ಯನಾದ ಶೂರ
**ದುರ್ಲಂಘ್ಯ** – ದಾಟಲಾಗದ
**ದುರ್ಲಭ** – ಸುಲಭವಾಗಿ ಸಿಗದ
**ದುರ್ಲಲಿತಚರಿತ** – ನಿಷ್ಠುರ ನಡವಳಿಕೆ
**ದುರ್ವರ್ಣೆ** – ಕೆಟ್ಟ ಬಣ್ಣದವಳು
**ದುರ್ವಹ** – ಹೊರಲಾಗದ(ದುದು)
**ದುರ್ವಾದ** – ಕೆಟ್ಟ ವಾದ
**ದುರ್ವಾಪಣ** – ಬಿಡಿಸಲಾಗದ
**ದುರ್ವಾರ** – ನಿವಾರಿಸಲಾಗದ
**ದುರ್ವಿದ** – ಮೂರ್ಖ
**ದುರ್ವಿದಗ್ಧ** – ಪಾಂಡಿತ್ಯರಹಿತ; ತಿಳಿವಳಿಕೆಯಿಲ್ಲದ
**ದುರ್ವಿನೀತೆ** – ವಿನಯರಹಿತೆ
**ದುರ್ವಿಪಾಕ** – ಕೆಟ್ಟ ಪರಿಣಾಮ
**ದುರ್ವಿಲಸಿತ** – ಕೆಟ್ಟ ಕೆಲಸ; ದುರಹಂಕಾರ
**ದುರ್ವಿಷಯ** – ಕೆಟ್ಟ ವಿಷಯ
**ದುರ್ವಿಳಸನ** – ದುರ್ವಿಲಸಿತ
**ದುರ್ವೃತ್ತ** – ಕೆಟ್ಟ ನಡತೆ(ಯವನು)
**ದುರ್ವೇಶ** – ಒಳಹೊಗಲು ಅಸಾಧ್ಯವಾದ
**ದುರ್ವ್ಯಸನ** – ಕೆಟ್ಟ ಚಟ
**ದುರ್ವ್ಯಸನಿ** – ಕೆಟ್ಟ ಚಟವಿರುವವನು
**ದುರ್ಲ್ಲಟಿ** – ಭಿಕ್ಷಾಪಾತ್ರೆ
**ದುರ್ಲ್ಲಹ** – (ದುರ್ಲಭ) ಪಡೆಯಲಸಾಧ್ಯವಾದ
**ದುವ್ವೆ** – ದೂವೆ, ಹೊಗೆ

**ದುಶ್ಚರ** – ನಡೆಯಲು (ಆಚರಿಸಲು) ಕಷ್ಟಕರವಾದ
**ದುಶ್ಚರಿತ** – ಕೆಟ್ಟ ನಡವಳಿಕೆಯುಳ್ಳ(ವನು)
**ದುಶ್ಚರಿತ್ರ** – ದುಶ್ಚರಿತ
**ದುಶ್ಚಾರಿತ್ರ** – ದುಶ್ಚರಿತ
**ದುಶ್ಚ್ಯವನ** – ಕದಲಿಸಲಾಗದ; ಇಂದ್ರ
**ದುಶ್ಶಾಸನ** – ಹದ್ದುಬಸ್ತಿನಲ್ಲಿಡಲಾಗದ
**ದುಶ್ಶ್ರವ** – ಕೇಳಲು ಕಷ್ಟಕರವಾದ
**ದುಶ್ಶ್ರಾವ** – ದುಶ್ಶ್ರವ
**ದುಶ್ಶ್ರುತಿ** – ಕೆಟ್ಟ ಮಾತು; ಅಪಕೀರ್ತಿ
**ದುಶ್ಶ್ವಾಪದ** – ಕೆಟ್ಟ ಮೃಗ
**ದುಷ್ಕರ** – ಕಷ್ಟ
**ದುಷ್ಕರ್ಮ** – ಕೆಟ್ಟ ಕೆಲಸ
**ದುಷ್ಕವಿತೆ** – ಕೆಟ್ಟ ಕವಿತೆ
**ದುಷ್ಕೃತ** – ಪಾಪ
**ದುಷ್ಕೃತಿ** – ದುಷ್ಕೃತ
**ದುಷ್ಟಚತುಷ್ಟಯ** – ಮಹಾಭಾರತದಲ್ಲಿನ ನಾಲ್ವರು ಕೆಡುಕರು; ದುರ್ಯೋಧನ, ದುಶ್ಶಾಸನ, ಕರ್ಣ, ಶಕುನಿ
**ದುಷ್ಟತೆ** – ಕೆಟ್ಟತನ
**ದುಷ್ಟನಿಗ್ರ** – ಕೆಟ್ಟವರ ನಿಯಂತ್ರಣ
**ದುಷ್ಟಪರಿವಾರ** – ಕೆಟ್ಟವರ ಗುಂಪು
**ದುಷ್ಟಮನ** – ಕೆಟ್ಟ ಮನಸ್ಸು
**ದುಷ್ಟಮೃಗ** – ಕಾಡುಪ್ರಾಣಿ
**ದುಷ್ಟು** – ದುಷ್ಟತನ
**ದುಷ್ಪರಿಣಿತಿ** – ಕೆಟ್ಟ ಪರಿಣಾಮ
**ದುಷ್ಪರಿಣಾಮ** – ದುಷ್ಪರಿಣಿತಿ
**ದುಷ್ಪುತ್ರ** – ಕೆಟ್ಟ ಮಗ
**ದುಷ್ಪ್ರತೀತಿ** – ಕೆಟ್ಟ ಹೆಸರು
**ದುಷ್ಪ್ರವೇಶ್ಯ** – ಒಳಹೊಗಲು ಕಷ್ಟಕರವಾದ
**ದುಷ್ಪ್ರೇಕ್ಷ** – ನೋಡಲು ಕಷ್ಟಕರವಾದ
**ದುಷ್ಪ್ರೇರಣೆ** – ಕೆಟ್ಟ ರೀತಿಯ ಪ್ರಚೊದನೆ
**ದುಷ್ಷಮಕಾಲ** – ಕೆಟ್ಟ ಕಾಲ
**ದುಷ್ಷಮಸುಷಮ** – (ಜೈನ) ಅವಸರ್ಪಿಣಿಕಾಲದ ಒಂದು ಭಾಗ
**ದುಷ್ಷಮೆ** – ದುಷ್ಷಮಕಾಲ
**ದುಸ್ತಮ** – ಕಗ್ಗತ್ತಲೆ
**ದುಸ್ತರ** – ದಾಟಲಾಗದ
**ದುಸ್ತರಾವಸ್ಥೆ** – ಕಷ್ಟ ಸ್ಥಿತಿ
**ದುಸ್ತಾಮಸ** – ಗಾಢವಾದ ಕತ್ತಲೆ, ಅಜ್ಞಾನ
**ದುಸ್ವಪ್ನ** – ಕೆಟ್ಟ ಕನಸು
**ದುಸ್ವರ** – ಕೆಟ್ಟಸ್ವರ; (ಜೈನ) ದುಷ್ಟಸ್ವರಕ್ಕೆ ಕಾರಣವಾದ (ಎಪ್ಪತ್ತೆರಡು ಬಗೆಯ) ನಾಮಕರ್ಮಪ್ರಕೃತಿಗಳಲ್ಲಿ ಒಂದು
**ದುಸ್ಸಂಗ** – ಕೆಟ್ಟ ಸಹವಾಸ
**ದುಸ್ಸಹ** – ಸಹಿಸಲಸಾಧ್ಯವಾದ
**ದುಸ್ಸ್ಥಲ** – ಕೆಟ್ಟ ಪ್ರದೇಶ
**ದುಸ್ಸ್ವರ** – ದುಸ್ವರ
**ದುಸ್ಸ್ವರೆ** – ಕೆಟ್ಟ ದನುಯುಳ್ಳವಳು
**ದುಹತ್ತ** – (ದ್ವಿಹಸ್ತ) ಎರಡು ಕೈ
**ದುಹಿತೃ** – ಮಗಳು
**ದುಖುದುಂಬಿತನ** – ಕಿಡಿಗೇಡಿತನ
**ದೂಂಟಿಂದೆ ದೂಂಟಿಂಗೆ** – ಹೆಜ್ಜೆ ಹೆಜ್ಜೆಗೂ
**ದೂಂಟು** – ಹಾರು; ಹೆಜ್ಜೆ; ಒಂದು ಕಾಲಿನಿಂದ ನಡೆ
**ದೂಟು** – ಹೆಜ್ಜೆ
**ದೂತ** – ನಿಯೋಗಿ, ರಾಜಪ್ರತಿನಿಧಿ
**ದೂತಕಾರ್ಯ** – ನಿಯೋಗಿಯ ಕೆಲಸ
**ದೂತಟ್ಟು** – ದೂತನನ್ನು ಕಳಿಸು
**ದೂತಮುಖ್ಯ** – ದೂತರಲ್ಲಿ ಪ್ರಮುಖ
**ದೂತವಚನ** – ದೂತನ ಮಾತು
**ದೂದ** – (ದೂತ) ಸಂದೇಶವಾಹಕ
**ದೂದಟ್ಟು** – ದೂದು+ಅಟ್ಟು, ಸಂದೇಶ ಕಳಿಸು
**ದೂದವಿ** – ದೂತಿಕೆ, ಕುಂಟಣಿ
**ದೂದು** – ದೌತ್ಯ; ಸಂದೇಶ
**ದುದುವೋಗು** – ಸಂದೇಶ ಕೊಂಡೊಯ್
**ದೂನ** – ದುಃಖ
**ದೂನಿಸು** – ದುಃಖಪಡು
**ದೂರದರ್ಶಿತ್ವ** – ಮುಂದಾಲೋಚನೆ
**ದೂರಪ್ರಿಯ** – ದೂರನಾದ ನಲ್ಲ
**ದೂರಫಲ** – ಬಹಳ ಕಾಲದ ಮೇಲೆ ಸಿಕ್ಕುವ ಫಲ
**ದೂರಭವ್ಯ** – (ಜೈನ) ಸಮ್ಯಕ್ತ್ವಕ್ಕೆ ಇನ್ನೂ ದೂರವಿರುವವನು
**ದೂರಸ್ಥ** – ದೂರದಲ್ಲಿರುವ(ವನು)
**ದೂರೀಕೃತ** – ದೂರ ಮಾಡಿದ
**ದುರೋತ್ಸಾರಿತ** – ದೂರದಲ್ಲಿ ನಿಲ್ಲಿಸಿದ
**ದೂರ್ತವಡೆ** – ವಂಚಕರ ಸಮೂಹ
**ದೂರ್ತು** – ವಂಚಕತನ
**ದೂರ್ವಾ** – ಗರಿಕೆ
**ದೂರ್ವಾಂಕುರ** – ಗರಿಕೆಯ ಚಿಗುರು
**ದೂರ್ವಾಂಚಿತ** – ಗರಿಕೆಯ ಅಲಂಕಾರವುಳ್ಳ
**ದೂವಾಪ್ರವಾಲ** – ದೂರ್ವಾಂಕುರ
**ದೂರ್ವೆ** – ಗರಿಕೆ
**ದೂವಟ** – ರೇಷ್ಮೆ ಬಟ್ಟೆ
**ದೂವಟ್ಟಿಗೆ** – (ದ್ವಿಪಟ್ಟಿಕಾ) ಎರಡು ಪದರದ ಬಟ್ಟೆ
**ದೂವೆ** – ಹೊಗೆ; ಚಿತೆ; ಗರಿಕೆ; ಆವಗೆ
**ದೂವೆಗಿ(ಕಿ)ಚ್ಚು** – ಆವಗೆಯ ಬೆಂಕಿ
**ದೂವೆದೊಟ್ಟು** – ಕೀಳು ದಾಸಿ
**ದೂಷಣ** – ನಿಂದನೆ
**ದೂಷಣಿಕ** – ನಿಂದಕ
**ದೂಷಿಸು** – ನಿಂದಿಸು
**ದೂಷ್ಯ** – ನಿಂದನಾರ್ಹ; ಬಟ್ಟೆ
**ದೂಷ್ಯಕುಟಿ** – ಡೇರೆ
**ದೂಸ(ಸು)** – (ದೂಷ್ಯ) ಬಟ್ಟೆ
**ದೂಸಕ** – (ದೂಷಕ) ನಿಂದಕ
**ದೂಸರ** – ಬೂದುಬಣ್ಣ

**ದೂಸರಮಂಗೆಯ್** – ಮಲಿನಮಾಡು
**ದೂಸಱ್** – ಕಾರಣ, ನಿಮಿತ್ತ
**ದೂಸಿಗ** – ಬಟ್ಟೆಯ ವ್ಯಾಪಾರಿ
**ದೂಸಿಗವಸರ** – ದೂಸಿಗ+ಪಸರ, ಬಟ್ಟೆಯಂಗಡಿ
**ದೂಳ** – ಧೂಳು; ಪುಡಿ
**ದೂಳಸೆಜ್ಜರ** – ದೂಳಾಟ
**ದೂಳ್ವಡಿಸು** – ಪುಡಿಗುಟ್ಟು
**ದೂಱಿಸು** – ಚಿಂತಿಸುವುದು
**ದೂಱು** – ತೆಗಳು; ತೆಗಳಿಕೆ; ಚಾಡಿ ಹೇಳು
**ದೃಕ್ಪ್ರಭೆ** – ಕಣ್ಣ ಕಾಂತಿ
**ದೃಕ್ಸಹಸ್ರ** – ಸಹಸ್ರ ಕಣ್ಣುಗಳು
**ದೃಕ್ಸೌಮ್ಯ** – ಕಣ್ಣಿಗೆ ಹಿತಕರವಾದ
**ದೃಗಂಬು** – ಕಂಬನಿ
**ದೃಗ್ದಾಮ** – ದೃಷ್ಟಿಯೆಂಬ ಹಗ್ಗ
**ದೃಗ್ದೀಪ್ತಿ** – ದೃಕ್ಪ್ರಭೆ
**ದೃಢಗುಣ** – ಸ್ಥಿರ ಸ್ವಭಾವ
**ದೃಢಚರ್ಯೆ** – (ಜೈನ) ಧಾರ್ಮಿಕಗ್ರಂಥಗಳ ಅಧ್ಯಯನ
**ದೃಢಬ್ರತೆ** – ಕಟ್ಟುನಿಟ್ಟಾಗಿ ವ್ರತ ಪಾಲಿಸುವವಳು
**ದೃಢವ್ರತ** – ಕಟ್ಟುನಿಟ್ಟಾದ ವ್ರತ (ಪಾಲಿಸುವವನು)
**ದೃಢೀಕೃತ** – ಭದ್ರಪಡಿಸಿದ
**ದೃಪ್ತ** – ದರ್ಪದಿಂದ ಕೂಡಿದ; ಹೆಮ್ಮೆಯ
**ದೃಪ್ಯದ್ಬಳ** – ದೃಪ್ಯತ್+ಬಳ, ಬಲಿಷ್ಠ ಸೈನ್ಯ
**ದೃಶ್ಯಂ** – ನೋಡಬಹುದಾದುದು
**ದೃಷ್ಟಾಂತ** – ನಿದರ್ಶನ; ಕುರುಹು
**ದೃಷ್ಟಿಪಾತ** – ನೋಟ
**ದೃಷ್ಟಿಮೋಹ** – (ಜೈನ) ಸಮ್ಯಗ್ದರ್ಶನವನ್ನು ಹಾಳುಮಾಡುವ ಕರ್ಮ
**ದೃಷ್ಟಿಯುದ್ಧ** – ರೆಪ್ಪೆಯಿಕ್ಕದೆ ಪರಸ್ಪರರನ್ನು ನೋಡಿವ ಯುದ್ಧ
**ದೃಷ್ಟಿಯುದ್ಧಂಗೆಯ್** – ದೃಷ್ಟಿಯುದ್ಧಮಾಡು
**ದೃಷ್ಟಿವಿಭವ** – (ಜೈನ) ಸಮ್ಯಗ್ದರ್ಶನದ ಪ್ರಭಾವ
**ದೃಷ್ಟಿವಿಷ** – ಶಂಖಪಾಲ ಎಂಬ ಹಾವು
**ದೃಷ್ಟಿವಿಷಭುಜಂಗ(ಮ)** – ನೋಟದಿಂದಲೇ ಕೊಲ್ಲುವ ಹಾವು
**ದೃಷ್ಟಿವಿಷಾಹಿ** – ದೃಷ್ಟಿವಿಷಭುಜಂಗ(ಮ)
**ದೆಖ್ಖಾದೆಖ್ಖಿ** – ದ್ವಂದ್ವಕಾಳಗ
**ದೆಪ್ಪಳಸು** – ಬೆರಗಾಗು
**ದೆಯ್ವ** – ದೈವ, ದೇವತೆ; ಅದೃಷ್ಟ
**ದೆಯ್ವಬಲ** – ದೇವರ ಕೃಪೆ
**ದೆವಸ** – ದಿವಸ
**ದೆಸೆ** – (ದಿಶಾ) ದಿಕ್ಕು; ಜಾಗ
**ದೆಸೆಗಾಣ್** – ದಿಕ್ಕು ಕಾಣು; ಚೆನ್ನಾಗಿ ನೋಡಿ
**ದೆಸೆಗೆಡಿಸು** – ದಿಕ್ಕು ತೋಚದಂತೆ ಮಾಡು
**ದೆಸೆಗೆಡು** – ದಿಕ್ಕು ತೋಚದಂತಾಗು
**ದೆಸೆದಪ್ಪು** – ದಿಕ್ಕುತಪ್ಪು
**ದೆಸೆದೇವತೆ** – ದಿಗ್ದೇವತೆ
**ದೆಸೆಬಿ(ವಿ)ದ್ಧಂ** – (ದಿಶಾವಿದ್ಧ) ಅಧಿಕವಾಗಿ
**ದೆಸೆವಲಿ** – ದಿಗ್ಬಲಿ
**ದೆಸೆವೆಟ್ಟು** – ದಿಕ್ಕು ಎಂಬ ಬೆಟ್ಟ
**ದೇಗುಲ** – (ದೇವಕುಲ) ದೇವಾಲಯ
**ದೇಗುಲಿಗ** – ದೇವಸ್ಥಾನದ ಕೆಲಸಗಾರ
**ದೇಯ್ಯ** – ದಾನದ ವಸ್ತು
**ದೇವ** – ದೇವತೆ; (ಜೈನ) ಲೋಕಾತೀತ ದೇವತೆ
**ದೇವಕಾಂತೆ** – ದೇವತಾಸ್ತ್ರೀ
**ದೇವಕುಜ** – ಕಲ್ಪವೃಕ್ಷ
**ದೇವಕುರು** – (ಜೈನ) ಮೇರುಪರ್ವತದ ದಕ್ಷಿಣದಲ್ಲಿರುವ ಭೋಗಭೂಮಿ
**ದೇವಕುಲ** – ದೇಗುಲ, ದೇವಸ್ಥಾನ
**ದೇವಕೃತ** – ದೇವರಿಂದಾದ; (ಜೈನ) ಮೂವತ್ತನಾಲ್ಕು ಅತಿಶಯಗಳಲ್ಲಿ ಒಂದು
**ದೇವಗಣ** – ದೇವತೆಗಳ ಸಮೂಹ
**ದೇವಗಣಿಕೆ** – ಅಪ್ಸರಸ್ತ್ರೀ: ರಂಭೆ, ಊರ್ವಶಿ, ತಿಲೋತ್ತಮೆ, ಮಂಜುಘೋಷೆ, ಮೇನಕೆ, ಸುಕೇಶಿ, ಘೃತಾಚಿ
**ದೇವಗತಿ** – ದೇವತ್ವವನ್ನು ಹೊಂದುವುದು
**ದೇವಗತಿವಡೆ** – ದೇವತ್ವವನ್ನು ಹೊಂದು
**ದೇವಗುರು** – ಬೃಹಸ್ಪತಿ
**ದೇವಗೃಹ** – ದೇವಸ್ಥಾನ
**ದೇವಚಾಪ** – ಕಾಮನಬಿಲ್ಲು
**ದೇವಚ್ಛಂದ** – ನೂರು (ಎಂಬತ್ತೊಂದು) ಎಳೆಗಳ ಮುತ್ತಿನ ಹಾರ
**ದೇವಜ್ಯೇಷ್ಠ** – ದೇವತೆಗಳ ಹಿರಿಯ, ಬ್ರಹ್ಮ
**ದೇವಡಿಗ** – ಪೂಜಾರಿ
**ದೇವಡಿತಿ** – ದೇವತಾಸ್ತ್ರೀ; ಅಪ್ಸರೆ
**ದೇವತನು** – ದೇವತೆಯ(ದರಂತಹ) ಶರೀರ
**ದೇವತಾನಿಷ್ಠ** – ಭಕ್ತ
**ದೇವತಾಮೂಢ** – (ಜೈನ) ಮೂಢತ್ರಯಗಳಲ್ಲಿ ಒಂದು; ಸಲ್ಲದವನನ್ನು ಪೂಜಿಸುವುದು
**ದೇವತಾರೂಪ** – ದೇವತೆಯ ಆಕೃತಿ
**ದೇವತೂರ್ಯ** – ದೇವದುಂದುಭಿ
**ದೇವತೆ** – ಅತಿಮಾನುಷ ಜೀವಿ
**ದೇವತೋಪದ್ರವ** – ದೇವತೆಗಳಿಂದಾಗುವ ತೊಂದರೆ
**ದೇವತ್ರಯ** – ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರ
**ದೇವತ್ವ** – ದೇವತನ
**ದೇವದತ್ತ** – ಅರ್ಜುನನ ಶಂಖದ ಹೆಸರು
**ದೇವದಾರು** – ಒಂದು ಮರ
**ದೇವದುಂದುಭಿ** – ಸ್ವರ್ಗದ ನಗಾರಿ
**ದೇವದೇವ** – ದೇವತೆಗಳ ದೇವ
**ದೇವದೌವಾರಿಕ** – ದೇವಲೋಕದ ಪಡಿಯರ
**ದೇವನಗ** – ಮೇರುಪರ್ವತ
**ದೇವನಿಕಾಯ** – ದೇವತೆಗಳ ಗುಂಪು
**ದೇವಪತಿ** – ದೇವೇಂದ್ರ

**ದೇವಪಥ** – ಆಕಾಶ
**ದೇವಮಣಿ** – ಕೌಸ್ತುಭರತ್ನ
**ದೇವಮಾತೃಕ** – ಮಳೆಯ ನೀರಿನಿಂದ ಕೃಷಿಗೊಳ್ಳುವ ಪ್ರದೇಶ
**ದೇವಮನಿ** – ನಾರದ
–
**ದೇವರ್** – ಭಗವಂತ; ಹಿರಿಯರನ್ನು ಸಂಬೋಧಿಸುವ ಒಂದು ಬಗೆ
**ದೇವರ** – ಮೈದುನ
**ದೇವರಾಜ** – ದೇವೇಂದ್ರ
**ದೇವವಂದ್ಯ** – ದೇವತೆಗಳ ಗೌರವಕ್ಕೆ ಪಾತ್ರನಾದವನು
**ದೇವವಾನಸ** – ದೇವರಂತಹ ಮನುಷ್ಯ
**ದೇವವಾರಣ** – ಐರಾವತ
**ದೇವವೀಧಿ** – ದೇವತೆಗಳ ಗುಂಪು
**ದೇವವ್ರತ** – ಬ್ರಹ್ಮಚರ್ಯೆ; ಭೀಷ್ಮ
**ದೇವಸಂಘಾತ** – ದೇವತೆಗಳ ಗುಂಪು
**ದೇವಸಬ(ವ)ಳ** – ದೇವಮಾನ (ಒಂದು ಅಳತೆ)
**ದೇವಸಿದ್ಧಿ** – ದೇವಕೃಪೆಯಿಂದಾಗುವ ಕಾರ್ಯಸಿದ್ಧಿ
**ದೇವಸೇನೆ** – ದೇವತೆಗಳ ಸೈನ್ಯ
**ದೇವಸೌಖ್ಯ** – ದೇವತೆಗಳು ಅನುಭವಿಸುವ ಸುಖ
**ದೇವಸ್ತಿತಿ** – ದೇವ ಪ್ರಾರ್ಥನೆ
**ದೇವಸ್ತ್ರೀ** – ದೇವಕನ್ಯೆ
**ದೇವಸ್ವ** – ದೇವರ ಸ್ವತ್ತು; ದೇವಸ್ಥಾನದ ಆಸ್ತಿ
**ದೇವಾಂಗ(ವಸ್ತ್ರ)** – ರೇಷ್ಮೆಯ ಬಟ್ಟೆ
**ದೇವಾಂಗನೆ** – ದೇವತಾಸ್ತ್ರೀ
**ದೇವಾಂಗವಸನ** – ರೇಷ್ಮೆ ಬಟ್ಟೆ
**ದೇವಾಗಮ(ನ** – ದೇವತೆಗಳ ಆಗಮನ, ಬರುವಿಕೆ
**ದೇವಾಗಾರ** – ಸ್ವರ್ಗ, ದೇವಸ್ಥಾನ
**ದೇವಾಧಿದೇವ** – ದೇವರುಗಳಿಗೂ ದೇವನಾದವನು
**ದೇವಾಧೀಶ** – ದೇವೇಂದ್ರ
**ದೇವಾನಕ** – ದೇವದುಂದುಭಿ
**ದೇವಾನಾಂಪ್ರಿಯ** – ದೇವತೆಗಳಿಗೆ ಪ್ರಿಯನಾದವನು; ದಡ್ಡ
**ದೇವಾಪಗೆ** – ದೇವತೆಗಳ ನದಿ
**ದೇವಾಯತನ** – ದೇವಾಲಯ
**ದೇವಾರ** – (ದೇವಾಗಾರ) ದೇವಾಲಯ
**ದೇವಾರಣ್ಯ** – (ಜೈನ) ಮೇರುಗಿರಿಯ ತಪ್ಪಲಿನ ಭದ್ರಸಾಲವನ
**ದೇವಾರಿ** – ದೇವತೆಗಳ ಶತ್ರು, ರಾಕ್ಷಸ
**ದೇವಾರ್ಚನೆ** – ದೇವರ ಪೂಜೆ
**ದೇವಾರ್ಚನೆಗೆಯ್** – ದೇವರಪೂಜೆ ಮಾಡು
**ದೇವಾರ್ಭಕ** – (ಜೈನ) ಅರ್ಹಂತಶಿಶು
**ದೇವಾವನಿಜಾತ** – ದೇವಲೋಕದ ಮರ, ಕಲ್ಪವೃಕ್ಷ
**ದೇವಾಸುರ** – ದೇವತೆ ಮತ್ತಿ ರಾಕ್ಷಸ
**ದೇವಾಸುರಯುದ್ಧ** – ದೇವತೆಗಳು ಹಾಗೂ ರಾಕ್ಷಸರ ನಡುವಣ ಯುದ್ದ
**ದೇವಿ** – ಪಟ್ಟದ ರಾಣಿ
**ದೇವಿತನ** – ಪಟ್ಟದ ರಾಣಿಯ ಪದವಿ
**ದೇವೇಂದ್ರ** – ದೇವತೆಗಳ ಒಡೆಯ
**ದೇವೇಂದ್ರಚಾಪ** – ಕಾಮನ ಬಿಲ್ಲು
**ದೇವೇಂದ್ರತ್ವ** – ದೇವೇಂದ್ರಪದವಿ
**ದೇವೇಶ** – ದೇವೇಂದ್ರ; ಈಶ್ವರ
**ದೇವೋತ್ತರಕುರು** – (ಜೈನ) ಮೇರುಪರ್ವತದ ದಕ್ಷಿಣಕ್ಕೆ ಹಾಗೂ ನಿಷಧಕ್ಕೆ ಉತ್ರದಲ್ಲಿರುವ ಒಂದು ಭೋಗಭೂಮಿ
**ದೇವೋಪಘಾತ** – ದೇವತೆಗಳಿಂದಾಗುವ ತೊಂದರೆ
**ದೇಶ** – ಪ್ರದೇಶ, ಸ್ಥಳ; ನಾಡು
**ದೇಶನಿವೇಶೋಪದೇಶ** – (ಜೈನ) ಜೈನಪುರಾಣಗಳ ಎಂಟು ಅಂಗಗಳಲ್ಲಿ ಒಂದು; ದೇಶದ ವಿನ್ಯಾಸ, ವಿಸ್ತೀರ್ಣ, ರೀತಿ ಮುಂತಾದವನ್ನು ತಿಳಿಸುವುದು
**ದೇಶವಿರತ** – (ಜೈನ) ದೇಶವಿರತಿ ವ್ರತ ತೊಟ್ಟವನು
**ದೇಶವಿರತಿ** – (ಜೈನ) ಮೂರು ಬಗೆಯ ಗುಣವ್ರತಗಳಲ್ಲಿ ಒಂದು; ಜೀವನಪರ್ಯಂತ ನಿಗದಿತ ಅವಧಿಯಲ್ಲಿ ನಿರ್ದಿಷ್ಟ ಪ್ರದೇಶಗಳ ಹೊರಗೆ ಸಂಚರಿಸದಿರುವ ವ್ರತ
**ದೇಶಾಂತರಿ(ಗ)** – ಪರದೇಶಿಗ
**ದೇಶಾಖ್ಯಾನ** – (ಜೈನ) ದೇಶನಿವೇಶೋಪದೇಶ
**ದೇಶವ್ರತಾತಿಚಾರ** – (ಜೈನ) ಪ್ರೇಕ್ಷಣ, ಶಬ್ದ, ಅನಯನ, ರೂಪಾಭಿವ್ಯಕ್ತಿ, ಪುದ್ಗಲಕ್ಷೇಪ ಎಂಬ ಐದು ಬಗೆಯ ವ್ರತಗಳು
**ದೇಶಾವಧಿ** – (ಜೈನ) ಮೂರು ಬಗೆಯ ಅವಧಿಜ್ಞಾನಗಳಲ್ಲಿ ಒಂದು; ದೇಶಕಾಲಭಾವಗಳಿಗೆ ಸಂಬಂಧಿಸಿದಂತೆ ಸೀಮಿತ ಪದಾರ್ಥಗಳ ಜ್ಞಾನ
**ದೇಶಿ** – ಒಂದು ಪ್ರದೇಶದ ವಿಶಿಷ್ಟ ರೀತಿ; ಉಪಭಾಷೆ
**ದೇಶಿಕ** – ಉಪಾಧ್ಯಾಯ
**ದೇಶೀಯಪದ** – ದೇಶೀಯಪದ, ಕನ್ನಡದ ಸ್ವಂತಪದ
**ದೇಶೀಯಾಕ್ಷರ** – ಅಚ್ಚಗನ್ನಡ ಅಕ್ಷರ
**ದೇಸಿ(ಸೆ)** – ದೇಶಿ; ಅಚ್ಚಗನ್ನಡ; ಸೊಗಸು
**ದೇಸಿಗ** – ಪರದೇಶಿ; ನಿರ್ಗತಿಕ
**ದೇಸಿಗತನ** – ದಿಕ್ಕಿಲ್ಲದಿರುವಿಕೆ; ಭಿಕ್ಷಾವೃತ್ತಿ
**ದೇಸಿಗಾರ್ತಿ** – ಚೆಲುವೆ
**ದೇಸಿಗಿತಿ** – ದಿಕ್ಕಿಲ್ಲದವಳು
ದೇಸಿಗೆ – ದೇಸಿಗಿತಿ
ದೇಸಿವಡೆ – ಚೆಲುವು ಪಡೆ
ದೇಸಿವೆಱು – ಚೆಲುವನ್ನು ಹೊಂದು
ದೇಹದೀಪ್ತಿ – ದೇಹಕಾಂತಿ
ದೇಹಸುಖ – ಶರೀರ ಸುಖ
ದೇಹಾಂಶು – ದೇಹಕಾಂತಿ

ದೇಹಾರ – ದೇವಾರ, ಗುಡಿ
ದೇಹಿ – ದೇಹವುಳ್ಳುದು; 'ಕೊಡು'
ದೇಹೋಚ್ಛ್ರಿತಿ – ದೇಹದ ಎತ್ತರ
ದೈತ – ನಲ್ಲ; ಗಂಡ
ದೈತೇಂದ್ರ – ಒಡೆಯರ ಒಡೆಯ
ದೈತೇಯ – ದಿಕ್ಪಾಲಕರಲ್ಲಿ ಒಬ್ಬನಾದ ನಿರ್ಋತಿ
ದೈತ್ಯ – ರಾಕ್ಷಸ
ದೈತ್ಯಮರ್ದನ – ರಾಕ್ಷಸರನ್ನು ಮರ್ದಿಸುವವನು
ದೈತ್ಯಾರಿ – ದೈತ್ಯಮರ್ದನ
ದೈತ್ಯೇಂದ್ರ – ರಾಕ್ಷಸರಾಜ
ದೈನ್ಯಂದೋಱು – ದೀನತೆಯನ್ನು ತೋರಿಸು
ದೈನ್ಯದೃಷ್ಟಿ – ದೀನತೆಯಿಂದ ಕೂಡಿದ ನೋಟ
ದೈನ್ಯಭಾವ – ದೀನತೆ
ದೈನ್ಯವಚನ – ದೀನತೆಯಿಂದ ಕೂಡಿದ ನುಡಿ
ದೈರ್ಘ್ಯ – ಉದ್ದ, ದೀರ್ಘತೆ
ದೈವಜ್ಞ – ಜ್ಯೋತಿಷಿ
ದೈವಪರ – ಅದೃಷ್ಟದಲ್ಲಿ ಮಾತ್ರವೇ
ನಂಬಿಕೆಯಿಟ್ಟವನು
ದೈವಬಲ – ಅದೃಷ್ಟಬಲ
ದೈವವಿಸೂತ್ರ – ವಿಧಿನಿಯಮ
ದೈವಹೀನ – ಅದೃಷ್ಟಹೀನ
ದೈವಾಯತ್ತ – ದೇವರ(ಅದೃಷ್ಟದ) ವಶದಲ್ಲಿರುವ
ದೊಂಡೆ – ಗೆಡ್ಡೆಗಟ್ಟಿದ; ತೊಡಕಾದ
ದೊಂಡೆಗರುಳ್ – ಹೆಣೆದುಕೊಮಡ ಕರುಳು
ದೊಂದೆ – ಪಂಜು
ದೊಂಬ – ಡೊಂಬ, ಕೊಲ್ಲಟಿಗ
ದೊಡ್ಡಮಾರ್ಗ – ಆನೆಕುದುರೆಗಳ ಕಿರುದೊಡೆಯ
ದದ್ದು
ದೊಡ್ಡಿತು(ತ್ತು) – ದಪ್ಪನಾದ
ದೊಣೆ – ಬೆಟ್ಟದ ಮೇಲಣ ಸ್ವಾಭಾವಿಕ ಹೊಂಡ;
ಬತ್ತಳಿಕೆ
ದೊಣೆವೋಗು – ಗುಳಿಬೀಳು
ದೊಮ್ಮಳಿಸು – ಗುಂಪಾಗು; ಸಂಭ್ರಮಿಸು;
ಸುತ್ತಾಡು; ರಭಸಗೊಳ್ಳು
ದೊರಕು – ಸಿಗು
ದೊರೆ – ರಾಜ; ಸಿಗು; ಸಮ; ಯೋಗ್ಯ; ಸಮೀಪಿಸು
ದೊರೆಕೊಳ್ – ಸಿಗು; ಸಮಾನವಾಗು
ದೊರೆಕೊಳಿಸು – ಸಿಗುವಂತೆ ಮಾಡು;
ಉಂಟುಮಾಡು; ಹೋಲಿಕೆಯಾಗು
**ದೊರೆಗಾಣ್** – ಸಮನಾಗಿ ಕಾಣು
**ದೊರೆಗಿ(ಗೆ)ಡಿಸು** – ಅಯೋಗ್ಯವಾಗಿಸು
**ದೊರೆಗೆಡು** – ಕ್ರಮ ತಪ್ಪು
**ದೊರೆತು** – ಲಕ್ಷಣವುಳ್ಳದ್ದು, ಸಮ
**ದೊರೆತೆ (ದೊರೆತು+ಎ) ಅಂತಹುದೇ, ಸದೃಶ–**
**ದೊರೆಯೇ** – ಯೋಗ್ಯವೇ
**ದೊರೆವಡೆ** – ಪ್ರಸಿದ್ಧಿಗೊಳ್ಳು
**ದೊರೆವರ್** – ಸಮಾನವಾಗು
**ದೊರೆವೆಱು** – ದೊರಕು; ಸರಿಯಾಗು; ಶ್ರೇಷ್ಠವಾಗು;
ಶೋಭಿತವಾಗು
**ದೋಂಟಿ** – ದೋಟಿ, ತುದಿಯಲ್ಲಿ ಕೊಕ್ಕೆಯಿರುವ
**ಉದ್ದನೆಯ ಕೋಲು–**
**ದೋಃಕಂಡೂಯನ** – ತೋಳಿನ ತೀಟೆ
**ದೋಣಿ** – ನೀರಿನ ತೊಟ್ಟಿ; ತೇಲುವ ಸಾಧನ
**ದೋಣಿಕೊಂ(ಗೊಂ)ಡ** – (ದ್ರೋಣಿಕುಂಡ)
ದೋಣಿಯಾಕಾರದ ಹರವಿ
**ದೋಣಿಯೋ(ವೋ)ಗು** – ತಗ್ಗುಬೀಳು
**ದೋಣಿವೀೞ್** – ತಗ್ಗುಬೀಳು
**ದೋಧೂಯಮಾನ** – ಚಾಮರದಂತೆ ತೂಗಾಡುವ
**ದೋರ್** – ತೋಳು
**ದೋರಾಂದೋಳನ** – ತೋಳು ಬೀಸುವುದು
**ದೋರೆ(ಗಾಯ್)** – ಅರ್ಧ ಮಾಗಿದ ಕಾಯಿ
**ದೋರೆಗೆಂಬಿಸಿಲ್** – ದೋರೆಗಾಯಿಗಿರುವಂತಹ
ಕೆಂಬಿಸಿಲು
**ದೋರೆವಣ್** – ಅರ್ಧ ಮಾಗಿದ ಹಣ್ಣು
**ದೋರೆವಲ್** – ದೋರೆಹಣ್ಣಿನಂತೆ ನಸುಗೆಂಪಾದ
ಹಲ್ಲು
**ದೋರೆವಾಯ್ದೆಱೆ** – ದೋರೆಹಣ್ಣಿನಂತೆ
ನಸುಗೆಂಪಾದ ತುಟಿ
**ದೋರ್ಗರ್ವ** – ಬಾಹುಬಲದ ಬಗೆಗಿನ ಹೆಮ್ಮೆ
**ದೋರ್ದಂಡ** – ಭುಜದಂಡ; ಪರಾಕ್ರಮ
**ದೋರ್ದರ್ಪ** – ದೋರ್ಗರ್ವ
**ದೋರ್ಬಲ** – ಬಾಹುಬಲ
**ದೋರ್ಭಂಗ** – ತೋಳು ಮುರಿ; ಸೋಲು
**ದೋರ್ಮಂಡಲ** – ಬಾಹುಪ್ರದೇಶ
**ದೋರ್ಮೂಲ** – ಬಾಹುವಿನ ಮೂಲ, ಕಂಕುಳು
**ದೋರ್ಯುಗ** – ಎರಡು ತೋಳುಗಳು
**ದೋರ್ಲತೆ** – ಬಾಹುಲತೆ
**ದೋರ್ವಲ** – ಬಾಹುಬಲ
**ದೋರ್ವಲನ** – ಬಾಹುಚಲನೆ
**ದೋರ್ವಳಯ** – ತೋಳಬಂದಿ
**ದೋರ್ವಳಯುತ** – ಬಾಹುಬಲವುಳ್ಳವನು
**ದೋಲಗ** – ಸೇವಕ
**ದೋವತಿ** – ಧೋತ್ರ, ಪಂಚೆ
**ದೀಶ್ಚಕ್ರ** – ಕೈವಶವಾದ ಚಕ್ರ, ಚಕ್ರಾಯುಧ
**ದೋಶ್ಶಾಲಿ** – ಪರಾಕ್ರಮಿ
**ದೋಷ** – ಕುಂದು, ನ್ಯೂನತೆ; ಕತ್ತಲು
**ದೋಷಕರ** – ದೋಷವುಳ್ಳುದು; ದೋಷ
ಉಂಟುಮಾಡುವಂತಹುದು
**ದೋಷಗವೇಷಣ** – ತಪ್ಪು ಹುಡುಕುವವನು
**ದೋಷಗ್ರಾಹಿ** – ದೋಷವನ್ನು ಕಾಣುವವನು; ಕೆಟ್ಟ
ರಕ್ತ ಹೀರುವುದು
**ದೋಷದೂಷಿತೆ** – ಪಾಮಾಡಿದವಳು
**ದೋಷದೃಷ್ಟಿ** – ದೃಷ್ಟಿದೋಷವಿರುವವನು;
ನ್ಯೂನದೃಷ್ಟಿ

**ದೋಷಪ್ರತಿಕಾರ** – ಪಾಪವಿನಾಶ
**ದೊಷವರ್ಜಿತ** – ಪಾಪದೂರನಾದವನು
**ದೋಷಹರ** – ದೋಷವನ್ನು ಹೋಗಲಾಡಿಸುವ
**ದೋಷಾಂಧ** – ದೋಷದಿಂದ ಕುರುಡಾದವನು
**ದೋಷಾಕರ** – ದೋಷಗಳ ಆಗರ; ಹದಿನಾರು ಕಲೆಗಳಿಂದ ಕೂಡಿದ ಚಂದ್ರ
**ದೊಷಾಕರರಹಿತ** – ದೋಷಗಳಿಗೆ ನೆಲೆನೀಡದುದು; ಚಂದ್ರನಿಲ್ಲದುದು
**ದೋಷಾಗಮನ** – ದೋಷದ ಬರುವಿಕೆ, ಕತ್ತಲುಂಟಾಗುವಿಕೆ
**ದೋಷಾತಿರೇಕ** – ಅತಿಯದ ದೋಷ
**ದೋಷಾನುವರ್ತನೆ** – ದೋಷವನ್ನು ಅನುಸರಿಸುವುದು; ಕತ್ತಲಿಗೆ ಹೊಂದಿಕೊಳ್ಳುವುದು
**ದೋಷಾನುಸಂಗ** – ದೋಷದ ಸಹವಾಸ; ಕತ್ತಲ ಸಹವಾಸ
**ದೋಷಾನುಸಂಗೆ** – ಕಳಂಕಿತೆ; ಕತ್ತಲ ಸಹವಾಸ ಮಾಡುವವಳು
**ದೋಷಾನ್ವೇಷಣ** – ದೋಷ ಹುಡುಕುವುದು
**ದೋಷಾಪಚಯ** – ದೋಷದಿಂದಾಗುವ ಹಾನಿ
**ದೋಷಾಬಂಧು** – ಕತ್ತಲೆಯ ಬಂಧು, ಚಂದ್ರ
**ದೋಷಾಭಾಸ** – ಇಲ್ಲದಿರುವ ತಪ್ಪು **ಇರುವಂತೆ ಕಾಣುವುದು**–
**ದೋಷಾಭಿಸಂಧಿ** – ಕತ್ತಲ ಜೊತೆ ಸೇರುವುದು
**ದೋಷಾವಕಾಶ** – ದೋಷಮಾಡಲು ಇರುವ ಅವಕಾಶ
**ದೋಷಾವಸಥ** – ದೋಷದ ನೆಲೆ
**ದೋಷಾವಹ** – ಕೆಟ್ಟುದನ್ನುಂಟುಮಾಡುವುದು
**ದೋಷಾವಿಲ** – ಕೆಟ್ಟುದರಿಂದ ಕೂಡಿದ
**ದೋಷಿ(ಗ)** – ತಪ್ಪುಮಾಡಿದವನು
**ದೋಷೇತರ** – ದೋಷವಲ್ಲದ್ದು
**ದೋಷೋದ್ಗಮ** – ದೋಷದ ಹುಟ್ಟು
**ದೋಸ** – ದೋಷ
**ದೋಸ್ಸಾರ** – ಬಾಹುಬಲ
**ದೋಸ್ಸಾಹಸ** – ದೋಸ್ಸಾರ
**ದೋಹ** – ದ್ರೋಹ
**ದೋಹದ** – ಬಸಿರಿನ ಬಯಕೆ
**ದೋಹನ** – ಹಾಲು ಕರೆಯುವುದು
**ದೋಹಳ** – ಬಯಕೆ
**ದೌವಾರಿಕ** – ಪಡಿಹಾರಿ, ಬಾಗಿಲು ಕಾಯುವವನು
**ದೌವಾರಿಕೆ** – ಬಾಗಿಲು ಕಾಯುವವಳು
**ದೌಸ್ಯಂತಿ** – ದುಷ್ಯಂತನ ಮಗ
**ದೌಹಿತ್ರ** – ಮಗಳ ಮಗ
**ದೌಹೃದ** – ದೋಹದ
**ದ್ರಾಹ** – ನೀರಾನೆ
**ದ್ಯುಚರ** – ಆಕಾಶಗಾಮಿಯಾದವನು, ಗಂಧರ್ವ
**ದ್ಯುತಿ** – ಕಾಂತಿ
**ದ್ಯುತಿಮಾಲಿ** – ಕಿರಣಮಾಲೆಯುಳ್ಳವನು, ಸೂರ್ಯ
**ದ್ಯುತಿವೀಱು** –ಕಾಂತಿ ಬೀರು
**ದ್ಯುನದಿ** – ದೇವನದಿ, ಗಂಗೆ
**ದ್ಯುನದೀಜ** – ಗಂಗಾಪುತ್ರ, ಭೀಷ್ಮ
**ದ್ಯುಮಣಿ** – ಸೂರ್ಯ
**ದ್ಯುಮಣಿದ್ಯುತಿ** – ಸೂರ್ಯನ ಕಾಂತಿ, ಬಿಸಿಲು
**ದ್ಯುಮಣಿಪ್ರದ್ಯೋತ** – ಸೂರ್ಯನ ಕಾಂತಿ, ಬಿಸಿಲು
**ದ್ಯುಮಣಿಮಯೂಖ** – ಸೂರ್ಯನ ಕಾಂತಿ, ಬಿಸಿಲು
**ದ್ಯೂತ** – ಜೂಜು; ಜೂಜಿನ ಪಣ
**ದ್ಯೋತ** – ಪ್ರಕಾಶ
**ದ್ಯೋತಿ** – ಕಾಂತಿ; ಕಾಂತಿಯುಕ್ತವಾದ
**ದ್ಯೋತಿತ** – ಪ್ರಕಾಶಗೊಳಿಸಿದ
**ದ್ರಮ್ಮ** – ಒಂದು ನಾಣ್ಯ
**ದ್ರವಿಲ** – ದ್ರಾವಿಡ
**ದ್ರವ್ಯ** – ವಸ್ತು; (ಜೈನ) ಐದು ಬಗೆಯ ಸಂಸಾರಗಳಲ್ಲಿ ಒಂದು; (ಜೈನ) ಷಡ್ದ್ರವ್ಯಗಳಲ್ಲಿ ಒಂದು; ನೋಡಿ, 'ಸಂಸಾರ' ಮತ್ತು 'ಷಡ್ದ್ರವ್ಯ'
**ದ್ರವ್ಯತಪ** – ವಸ್ತುಗಳಿಗಾಗಿ ಮಾಡುವ ತಪಸ್ಸು
**ದ್ರವ್ಯತ್ವ** – (ಜೈನ) ವಸ್ತುವಿನ ಭಾವ
**ದ್ರವ್ಯಪರಾವರ್ತನ** – ಸಂಸಾರದಲ್ಲಿ ಪರಿಭ್ರಮಿಸುವ ಜೀವಕ್ಕಾಗುವ ಐದು ಬಗೆಯ ಪರಿವರ್ತನೆಗಳು, ನೋಡಿ, 'ಸಂಸಾರ'
**ದ್ರವ್ಯಪರಿವರ್ತನ** – ದ್ರವ್ಯಪರಾವರ್ತನ
**ದ್ರವ್ಯರ್ಷಿ** – (ಜೈನ) ಮಿಥ್ಯಾದೃಷ್ಟಿಯುಳ್ಳ ಮುನಿ, ವೇಷಧಾರಿ
**ದ್ರವ್ಯಲಿಂಗಿ** – ದ್ರವ್ಯರ್ಷಿ
**ದ್ರವ್ಯಶಕ್ತಿ** – ವಸ್ತುವಿನ ಮೂಲಸಾಮರ್ಥ್ಯ
**ದ್ರವ್ಯಸಂಸಾರ** – ಶರೀರವನ್ನು ಪಡೆದು ನಂತರ ತ್ಯಜಿಸುವುದು
**ದ್ರವ್ಯಾನುಯೋಗ** – (ಜೈನ) ಜೀವಾದಿ ಷಡ್ದ್ರವ್ಯಗಳನ್ನೂ ಏಳು ತತ್ವಗಳನ್ನೂ ನಿರೂಪಿಸುವ ಶಾಸ್ತ್ರಭಾಗ, ನಾಲ್ಕು ಅನುಯೋಗಗಳಲ್ಲಿ ಒಂದು, ನೋಡಿ 'ಅನುಯೋಗ'
**ದ್ರವ್ಯಾರ್ಥಿಕನಯ** – (ಜೈನ) ವಸ್ತುಗಳ ಒಟ್ಟು ಉದ್ದೇಶಗ್ರಹಣಕ್ಕೆ ಬೇಕಾದ ತಿಳಿವಳಿಕೆ; ಇದರಲ್ಲಿ ಮೂಱು ಬಗೆ: ನೈಗಮ, ಸಂಗ್ರಹ, ವ್ಯವಹಾರ
**ದ್ರಾಘಿಮ** – ದೀರ್ಘತೆ
**ದ್ರಾವಣಿ** – ಕರಗುವ ಸ್ವಭಾವವುಳ್ಳುದು
**ದ್ರಾವಣೀಯ** – ಕರಗುವದ್ರಾವಿತ – ಕರಗಿದ–
**ದ್ರು** – ಮರ
**ದ್ರುತ** – ತ್ವರಿತವಾಗಿ
**ದ್ರುತಗತಿ** – ವೇಗಗಮನ
**ದ್ರುತಯಾನ** – ವೇಗಗತಿ
**ದ್ರುತವಿಡು** – ದುಃಖಪಡು

**ದ್ರುಪದ** – ಮರದ ಕಂಬ; ಪಾಂಚಾಲ ದೇಶದ ರಾಜ
**ದ್ರುಪದಜೆ** – ದ್ರುಪದನ ಮಗಳು, ದ್ರೌಪದಿ
**ದ್ರುಪತನೂಭವ** – ದ್ರುಪದನ ಮಗ, ಧೃಷ್ಟದ್ಯುಮ್ನ
**ದ್ರುಪದನಂದನ** – ದ್ರುಪತನೂಭವ
**ದ್ರುಪದನಂದನೆ** – ದ್ರುಪದಜೆ
**ದ್ರುಮ** – ಮರ, ವೃಕ್ಷ
**ದ್ರುಮಪತ್ರಪಾತ್ರೆ** – ಎಲೆಯಿಂದ ಮಾಡಿದ ಪಾತ್ರೆ, ದೊನ್ನೆ
**ದ್ರುಮರಾಜಿ** – ಮರಗಳ ಸಾಲು
**ದ್ರುಮವಿತತಿ** – ಮರಗಳ ತೋಪು
**ದ್ರುಮಷಂಡ** – ದ್ರುಮವಿತತಿ
**ದ್ರೋಣ** – ದೊನ್ನೆ; ಗಡಿಗೆ; ದೋಣಿಯಾಕಾರದ ಪಾತ್ರೆ; ಬಿಲ್ಲು; ಪಾಂಡವಕೌರವರ ಧನುರ್ವಿದ್ಯಾಗುರು
**ದ್ರೋಣಜ** – ದ್ರೋಣನ ಮಗ, ಅಶ್ವತ್ಥಾಮ
**ದ್ರೋಣದುಘೆ** – ಗಡಿಗೆ ತುಂಬ ಅಂದರೆ ಹೆಚ್ಚು ಹಾಲು ಕರೆಯುವ ಹಸು
**ದ್ರೋಣಪುತ್ರ** – ದ್ರೋಣಜ
**ದ್ರೋಣಾಮುಖ** – ಜಲಸ್ಥಲಮಾರ್ಗಗಳುಳ್ಳ ಪಟ್ಟಣ
**ದ್ರೋಣಾಸ್ಯ** – ದ್ರೋಣಾಮುಖ
**ದ್ರೋಣಿ** – ದೋಣಿ; ದೊನ್ನೆ
**ದ್ರೋಣಿಕೆ** – ಸಣ್ಣ ದೋಣಿ
**ದ್ರೋಹ** – ವಮಚನೆ
**ದ್ರೋಹಿ** – ವಂಚಕ
**ದ್ರೌಣಿ** – (ದ್ರೋಣನ ಮಗ) ಅಶ್ವತ್ಥಾಮ್ನ
**ದ್ರೌಪದಿ** – ದ್ರುಪದನ ಮಗಳು
**ದ್ರುಮ** – ಗಿಡ
**ದ್ಯುನದೀಜ** – ದೇವನದಿಯ ಪುತ್ರ, ಭೀಷ್ಮ
**ದ್ಯೋತಿತ** – ಪ್ರಕಾಶಿಸಲ್ಪಟ್ಟ
**ದ್ವಂದ್ವಯುದ್ಧ**– ಇಬ್ಬರ ನಡುವಣ ಯುದ್ಧ; ಮಲ್ಲಯುದ್ಧ
**ದ್ವಯ** – ಜೊತೆ, ಯುಗಳ
**ದ್ವಯಭಾವ** – ದ್ವೈತ, ಎರಡು ಎಂಬ ಭಾವ
**ದ್ವಾತ್ರಿಂಶತ್** – ಮೂವತ್ತೆರಡು
**ದ್ವಾತ್ರಿಂಶತ್ರಿದಶಪತಿ** – (ಜೈನ) ಮೂವತ್ತೆರಡು ಮಂದಿ ವ್ಯಂತರರು
**ದ್ವಾತ್ರಿಂಶದಿಂದ್ರ** – ದ್ವಾತ್ರಿಂಶತ್ರಿದಶಪತಿ
**ದ್ವಾತ್ರಿಂಶದೇಶಕಲ್ಯಾಣ** – (ಜೈನ) ಒಂದು ವ್ರತ
**ದ್ವಾದಶ** – ಹನ್ನೆರಡು; ಹನ್ನೆರಡನೆಯ
**ದ್ವಾದಶಕಲ್ಪ** – (ಜೈನ) ಸೌಧರ್ಮ, ಈಶಾನ, ಸತತ್ಕುಮಾರ, ಮಾಹೇಂದ್ರ, ಬ್ರಹ್ಮ, ಲಾಂತವ, ಮಹಾಶುಕ್ರ, ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ
**ದ್ವಾದಶಗಣ** – (ಜೈನ) ಸಮವಸರಣಸಭೆಯಲ್ಲಿ ಸೇರುವ ಹನ್ನೆರಡು ವರ್ಗಗಳು: ಮುನಿ, ಕಲ್ಪಜಸ್ತ್ರೀ, ಆರ್ಯಕೀರ, ಜ್ಯೋತಿಷಸ್ತ್ರೀ, ವ್ಯಂತರಸ್ತ್ರೀ, ನಾಗಸ್ತ್ರೀ, ನಾಗದೇವತೆ, ವ್ಯಂತರದೇವತೆ, ಜ್ಯೋತಿಷ್ಯದೇವತೆ, ಕಲ್ಪವಾಸಿ, ಮನುಷ್ಯ, ತಿರ್ಯಕ್‌ಪ್ರಾಣಿ
**ದ್ವಾದಶಚಕ್ರವರ್ತಿ** – (ಜೈನ) ತ್ರಿಷಷ್ಟಿ ಶಲಾಕಾಪುರುಷರಲ್ಲಿ ಸೇರಿರುವ ಭಾರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ ಎಂಬ ಹನ್ನೆರಡು ಮಂದಿ
**ದ್ವಾದಶತಪ** – (ಜೈನ) ಸಂವರಮಾರ್ಗದ ಹನ್ನೆರಡು ಬಗೆಯ ತಪಸ್ಸುಗಳು: ಅನಶನ, ಅವಮೋದಾರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಾವಾಸ, ಕಾಯಕ್ಲೇಶ ಎಂಬ ಬಹಿರಂಗ ತಪಸ್ಸುಗಳು ಹಾಗೂ ಪ್ರಾಯಶ್ಚಿತ್ತ, ವಿನಯ, ವೈಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಅಂತರಂಗ ತಪಸ್ಸುಗಳು
**ದ್ವಾದಶನಾಮ** – ವಿಷ್ಣುವಿನ ಪ್ರಸಿದ್ಧವಾದ ಹನ್ನೆರಡು ಹೆಸರುಗಳು: ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ
**ದ್ವಾದಶಮಾರ್ತಂಡ** – ಹನ್ನೆರಡು ಮಂದಿ ಆದಿತ್ಯರು: ಧಾತಾ, ಮಿತ್ರ, ಆರ್ಯಮಾ, ಶಕ್ರ, ವರುಣ, ಅಂಶ, ಭಗ, ವಿವಸ್ವಾನ್, ಪೂಷಾ, ಸವಿತಾ, ತ್ವಷ್ಟಾ, ವಿಷ್ಣು
**ದ್ವಾದಶರವಿ** – ದ್ವಾದಶಮಾರ್ತಂಡ
**ದ್ವಾದಶರಾಜಕ** – ದಾದಶಚಕ್ರವರ್ತಿ
**ದ್ವಾದಶಸಂಗ್ರಹಕೃಷ್ಟಿ** – (ಜೈನ) ಕಷಾಯಗಳ ಫಲ ಕಡಿಮೆ ಮಾಡುವ ಅಪ್ರತ್ಯಾಖ್ಯಾನಕ್ರೋಧ, ಅಪ್ರತ್ಯಾಖ್ಯಾನಮಾನ, ಅಪ್ರತ್ಯಾಖ್ಯಾನಲೋಭ, ಅಪ್ರತ್ಯಾಖ್ಯಾನಮಾಯೆ, ಪ್ರತ್ಯಾಖ್ಯಾನಾವರಣಕ್ರೋಧ, ಪ್ರತ್ಯಾಖ್ಯಾನಾವರಣಮಾನ ಪ್ರತ್ಯಾಖ್ಯಾನಾವರಣಲೋಭ, ಪ್ರತ್ಯಾಖ್ಯಾನಾವರಣ, ಪ್ರತ್ಯಾಖ್ಯಾನಾವರಣಮಾಯೆ, ಸಂಜ್ವಲನಕ್ರೋಧ, ಸಂಜ್ವಲನಕ್ರೋಧ, ಸಂಜ್ವಲನಮಾಯೆ, ಸಂಜ್ವಲನ ಲೋಭ
**ದ್ವಾದಶಾಂಗ** – (ಜೈನ) ಜೈನಧರ್ಮಗ್ರಂಥಗಳ ಹನ್ನೆರಡು ಭಾಗಗಳು: ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತ್ಯಂಗ, ಉಪಾಸಕಾಧ್ಯಯನಾಂಗ, ಅಂತಕೃದ್ದಶಾಂಗ, ಅನುತ್ತರೋಪಪಾದಿಕದಶಾಂಗ,

ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿವಾದಾಂಗ
**ದ್ವಾದಶಾದಿತ್ಯ** – ದ್ವಾದಶಮಾರ್ತಂಡ
**ದ್ವಾದಶಾನುಪ್ರೇಕ್ಷೆ**– (ಜೈನ) ಜೈನಮುನಿಗಳ ಹನ್ನೆರಡು ಬಗೆಯ ಧ್ಯಾನಚಿಂತನೆ: ಅನಿತ್ಯ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ, ಲೋಕ, ಬೋಧಿದುರ್ಲಭ, ಧರ್ಮಸ್ವಾಖ್ಯಾತತ್ವ
**ದ್ವಾದಶಿ** – ಚಾಂದ್ರಮಾನದ ಹನ್ನೆರಡನೆಯ ದಿನ
**ದ್ವಾರ** – ಬಾಗಿಲು
**ದ್ವಾರನಿಯುಕ್ತ** – ಬಾಗಿಲು ಕಾಯುವವನು
**ದ್ವಾರಬಂಧ** – ಬಾಗಿಲ ಚೌಕಟ್ಟು
**ದ್ವಾರಾಪೇಕ್ಷೆ** – (ಜೈನ) ಅಡುಗೆ ಸಿದ್ಧಪಡಿಸಿ ಶ್ರಾವಕನು ಚರಿಗೆಗ ಬರುವ ಮುನಿಗಳನ್ನು ಎದುರುನೋಡುವುದು
**ದ್ವಾವಿಂಶತಿ** – ಇಪ್ಪತ್ತೆರಡು
**ದ್ವಾವಿಂಶತಿಜಲಧಿ** – (ಜೈನ) ಇಪ್ಪತ್ತೆರಡು ಸಾಗರದಷ್ಟು ಕಾಲಾವಧಿ
**ದ್ವಾವಿಂಶತಿಪರೀಷಹ** – (ಜೈನ) ಕ್ಷುತ್, ಪಿಪಾಸೆ, ಶೀತ, ಉಷ್ಣ, ದಂಶವಂಕ್ಷಿಕ, ನಗ್ನತೆ, ಆರತಿ, ಸ್ತ್ರೈಣ, ಚರ್ಯೆ, ಶಯ್ಯೆ, ನಿಷದ್ಯೆ, ಆಕ್ರೋಶ, ವಧೆ, ಯಾಚನೆ, ಅಲಾಭ, ಅದರ್ಶನ, ರೋಗ, ಸತೃಣಸ್ಪರ್ಶ, ಪ್ರಜ್ಞೆ, ಅಜ್ಞಾನ, ಮಲ, ಸಸತ್ಕಾರಪುರಸ್ಕಾರ ಎಂಬ ಇಪ್ಪತ್ತೆರಡು ಬಗೆಯ ಪರೀಷಹಗಳು
**ದ್ವಿ** –ಎರಡು
**ದ್ವಿಗುಣ** – ಎರಡು ಪಟ್ಟು
**ದ್ವಿಗುಣಿಸು** – ಎರಡರಷ್ಟಾಗು
**ದ್ವಿಗುಣೀಕೃತ** – ಎರಡರಷ್ಟಾದ
**ದ್ವಿಚರಮದೇಹ** – (ಜೈನ) ಎರಡು ಬಾರಿ ಮಾನವಜನ್ಮವನ್ನು ಪಡೆದು ಮುಕ್ತನಾಗುವವನು
**ದ್ವಿಚರಮಸಮಯ** – (ಜೈನ) ಎರಡನೆ ಬಾರಿಯ ಮಾನವಜನ್ಮದ ಅವಧಿ
**ದ್ವಿಜ** – ಎರಡು ಸಲ ಹುಟ್ಟಿದವನು, ಬ್ರಾಹ್ಮಣ; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಉಪನಯನಗೊಳ್ಳುವ ವರ್ಣಗಳಿಗೆ ಸೇರಿದವನು; ಎರಡು ಸಲ ಹುಟ್ಟುವುದು, ಹಲ್ಲು; ಮೊಟ್ಟೆಯಾಗಿ, ಆನಂತರ ಹೊರಬರುವ, ಹಕ್ಕಿ; ನಕ್ಷತ್ರ
**ದ್ವಿಜಕುಲ** – ಬ್ರಾಹ್ಮಣಜಾತಿ
**ದ್ವಿಜಗತಿ** – ಬ್ರಾಹ್ಮಣನ ನಡತೆ; ಹಕ್ಕಿಯ ಹಾರಾಟ
**ದ್ವಿಚಕ್ರ** – ಬ್ರಾಹ್ಮಣ ಸಮುದಾಯ
**ದ್ವಿಜತ್ವ** – ಬ್ರಾಹ್ಮಣತ್ವ
**ದ್ವಿಜನ್ಮ** – ಉಪನಯನಗೊಳ್ಳುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ
**ದ್ವಿಜನ್ಮದಾನ** – ಬ್ರಾಹಣರಿಗೆ ಕೊಡುವ ದಾನ
**ದ್ವಿಜನ್ಮವಂಶ** – ಬ್ರಾಹ್ಮಣವಂಶ
**ದ್ವಿಜನ್ಮವರ್ಣ** – ಬ್ರಾಹ್ಮಣಜಾತಿ
**ದ್ವಿಜನ್ಮಸಭೆ** – ಬ್ರಾಹ್ಮಣ ಸಮುದಾಯ
**ದ್ವಿಜರಾಜ** – ಬ್ರಾಹ್ಮಣಶ್ರೇಷ್ಠ; ಗಂಡಭೇರುಂಡ
ದ್ವಿಜವಂಶಜ – ಬ್ರಾಹ್ಮಣಕುಲದಲ್ಲಿ ಹುಟ್ಟಿದವನು–
**ದ್ವಿಜವರ** – ದ್ವಿಜರಾಜ
**ದ್ವಿಜಹತಿ** – ಬ್ರಾಹ್ಮಣನ ಕೊಲೆ; ಹಲ್ಲಿನಿಂದಾದ ಗಾಯ
**ದ್ವಿಜಾಂಗನೆ** – ಬ್ರಾಹ್ಮಣಿತಿ; ಹೆಣ್ಣು ಹಕ್ಕಿ
**ದ್ವಿಜಿಹ್ವ** – ಎರಡು ನಾಲಗೆಯುಳ್ಳ ಹಾವು; ಮಾತಿಗೆ ತಪ್ಪುವವನು
**ದ್ವಿಜೋತ್ತಮ** – ಬ್ರಾಹ್ಮಣಶ್ರೇಷ್ಠ
**ದ್ವಿಜೋತ್ತಮೆ** – ಶ್ರೇಷ್ಠ ಬ್ರಾಹ್ಮಣಸ್ತ್ರೀ
**ದ್ವಿಟ್ಚಕ್ರ** – ಶತ್ರುಸಮೂಹ
**ದ್ವಿಟ್ಕರಿ** – ಶತ್ರುವಿನ ಆನೆ
**ದ್ವಿಟ್ಪುರ** – ಶತ್ರುನಗರಿ
**ದ್ವಿತಯ** – ಎರಡು, ಯುಗಳ
**ದ್ವಿತೀಯ** – ಎರಡನೆಯ
**ದ್ವಿತೀಯಕಲ್ಯಾಣ** – (ಜೈನ) ಜಿನನ ಪಂಚಕಲ್ಯಾಣಗಳಲ್ಲಿ ಎರಡನೆಯದು, ಜನ್ಮಾಭಿಷೇಕ
**ದ್ವಿತೀಯದ್ವೀಪ** – (ಜೈನ) ಎರಡನೆಯ ದ್ವೀಪ, ಧಾತಕೀ
**ದ್ವಿತೀಯಪೀಠ** – (ಜೈನ) ಜಿನನ ಸಮವಸರಣದಲ್ಲಿನ ಮೂರು ಪೀಠಗಳಲ್ಲಿ ಎರಡನೆಯದು
**ದ್ವಿಪ** – ಎರಡು ಹಂತದಲ್ಲಿ ನೀರು ಕುಡಿಯುವುದು, ಆನೆ
**ದ್ವಿಪಘಟಾಳಿ** – ಆನೆಗಳ ಸಮೂಹ
**ದ್ವಿಪಘಟೆ** – ಆನೆಗಳ ಸಮೂಹ
**ದ್ವಿಪದ** – ಎರಡು ಕಾಲಗಳ ಪ್ರಾಣಿ
**ದ್ವಿಪದ್ವಿಷ್ಟ** – ಆನೆಯ ಶತ್ರು, ಸಿಂಹ
**ದ್ವಿಪಮಾರ್ಗ** – ಆನೆಯ ಹಾದಿ
**ದ್ವಿಪವೈರಿ** – ದ್ವಿಪದ್ವಿಷ್ಟ
**ದ್ವಿಪಸ್ಕಂಧ** – ಆನೆಯ ಹೆಗಲು
**ದ್ವಿಪಾದ** – ಎರಡು ಪಾದಗಳು
**ದ್ವಿಪಾರಿ** – ದ್ವಿಪದ್ವಿಷ್ಟ
**ದ್ವಿಪೇಂದ್ರ** – ಗಜರಾಜ
**ದ್ವಿಮಸ** – ಎರಡು ತಿಂಗಳು
**ದ್ವಿಮುಖ** – ಎರಡು ಮುಖ(ಗಳುಳ್ಳ)
**ದ್ವಿರದ(ನಿ)** – ಎರಡು ಕೋರೆಗಳನ್ನುಳ್ಳುದು, ಆನೆ
**ದ್ವಿಪದಘಟೆ** – ಆನೆಗಳ ಸಮೂಹ
**ದ್ವಿಪದಾನನ** – ಆನೆಯ ಮುಖ(ವುಳ್ಳವನು), ಗಣಪತಿ
**ದ್ವಿರದಾರೋಹಕ** – ಆನೆಸವಾರ, ಮಾವುತ
**ದ್ವಿಪದಾರೋಹಣ** – ಆನೆಸವಾರಿ

**ದ್ವಿರದಾಸ್ಯ** – ದ್ವಿರದಾನನ
**ದ್ವರದೇಂದ್ರ** – ಗಜಶ್ರೇಷ್ಠ
**ದ್ವಿರಸನ** – ಎರಡು ನಾಲಗೆಯುಳ್ಳ, ಹಾವು
**ದ್ವಿರಸನಬಾಣ** – ಸರ್ಪಾಸ್ತ್ರ
**ದ್ವಿರೂಪ** – ಎರಡು ರೂಪಗಳು
**ದ್ವಿರೇಫ** – 'ಭ್ರಮರ' ಎಂಬುದರಲ್ಲಿ ಎರಡು ಬಾರಿ 'ರ' ಕಾರ ಬಂದಿರುವುದರಿಂದ ಈ ಹೆಸರು, ದುಂಬಿ
**ದ್ವಿರೇಫಾಳಿ** – ದುಂಬಿಗಳ ಸಾಲು
**ದ್ವಿವಿಧ** – ಎರಡು ರೀತಿ
**ದ್ವಿಶಿರ** – ಎರಡು ತಲೆ(ಗಳುಳ್ಳ), ಗಂಡಭೇರುಂಡ
**ದ್ವಿಷ** – ಶತ್ರು
**ದ್ವಿಷಜ್ಜಾತ** – ಶತ್ರುವಿನಿಂದಾದುದು
**ದ್ವಿಷತ್ಸೇನೆ** – ಶತ್ರುಸೈನ್ಯ
**ದ್ವಿಷದ್ಬಳ** – ದ್ವಿಷತ್ಸೇನೆ
**ದ್ವಿಷನ್ನೃಪ** – ಶತ್ರುರಾಜ
**ದ್ವಿಸಪ್ತತಿಪ್ರಕೃತಿ** – (ಜೈನ) ಎಪ್ಪತ್ತೆರಡು ಬಗೆಯ ಪ್ರಕೃತಿಗಳು
**ದ್ವಿಸಹಸ್ರಜಿಹ್ವ** – ಎರಡು ಸಾವಿರ ನಾಲಗೆಗಳುಳ್ಳ, ಆದಿಶೇಷ
**ದ್ವಿಸಾಗರೋಪಮಾಯುಷ್ಯ** – (ಜೈನ) ಎರಡು ಸಾಗರ ಕಾಲಾವಧಿಯ ಆಯುಸ್ಸುಳ್ಳ ವ್ಯಕ್ತಿ
**ದ್ವೀಂದ್ರಿಯ** – (ಜೈನ) ಸ್ಪರ್ಶನ, ರಸನ ಎಂಬ ಎರಡು ಇಂದ್ರಿಯಗಳು ಮಾತ್ರ ಇರುವ ಜಂತು
**ದ್ವೀಪ** – ನಡುಗಡ್ಡೆ
**ದ್ವೀಪಾಂತರ** – ಬೇರೆಯ ದ್ವೀಪ
**ದ್ವೀಪಿ** – ಹುಲಿ, ಶಾರ್ದೂಲ
**ದ್ವೈತೀಯಕ** – ಎರಡನೆಯ
**ದ್ವೈಧ** – ಎರಡಾಗಿರುವುದು, ಭಿನ್ನವಾಗಿರುವುದು
**ದ್ವೈಧೀಭಾವ** – ಎರಡು ಭಾವನೆ, ಸಂಶಯ; ಆರು ಬಗೆಯ ಭೇದೋಪಾಯಗಳಲ್ಲಿ ಒಂದು, ನೋಡಿ, 'ಭೇದೋಪಾಯ'
**ದ್ವೈಧಿಕ** – ಎರಡರಷ್ಟು
**ದ್ವ್ಯರ್ಧಾಕ್ಷ(ಕ್ಷಿ)** – ಚಿತ್ರಗಳಲ್ಲಿ ಒಂದೂವರೆ ಕಣ್ಣು ಕಾಣುವ ಭಂಗಿ

## ಧ

**ಧಗಧಗ** – ಉರಿಯುವ ಬೆಂಕಿಯ ಅನುಕರಣ ಶಬ್ದ
**ಧಗದ್ಧಗಿತ** – ಧಗಧಗ ಎಂದು ಸದ್ದುಮಾಡುವ
**ಧಗಮನೆ** – ಧಗ್ ಎಂದು ಉರಿ
**ಧನ** – ಹಣ
**ಧನಂಜಯ** – ಅಗ್ನಿ; ಅರ್ಜುನ
**ಧನಮುಳ್ಳನ್** – ಹಣವಂತ
**ಧನಂಜಯ** – ಬೆಂಕಿ
**ಧನಂಜಯಾಂಬಕ** – ಉರಿಗಣ್ಣ, ಶಿವ
**ಧನಂಬಡೆ** – ಹಣವನ್ನು ಗಳಿಸು
**ಧನಕೋಶ** – ಕೋಶಾಗಾರ
**ಧನದ** – ಕುಬೇರ; ಹಣ ನೀಡುವವನು
**ಧನದನಿವಾಸ** – ಕುಬೇರನ ಆವಾಸ
**ಧನದಭವನ** – ಕುಬೇರನ ಅರಮನೆ
**ಧನದಮಿತ್ರ** – ಕುಬೇರನ ಸ್ನೇಹಿತ, ಶಿವ
**ಧನದಾಚಲ** – ಕುಬೇರನು ವಾಸಿಸುವ ಬೆಟ್ಟ, ಕೈಲಾಸಪರ್ವತ
**ಧನದಾದ್ರಿ** – ಧನದಾಚಲ
**ಧನದಾನ** – ಹಣರೂಪದ ದಾನ
**ಧನದಾಪ್ತ** – ಧನದನಿಗೆ ಆಪ್ತನಾದವನು, ಶಿವ
**ಧನನಾಥ** – ಕುಬೇರ
**ಧನಪತಿ** – ಧನನಾಥ
**ಧನಪತಿಮಿತ್ರ** – ಧನದಮಿತ್ರ
**ಧನರಕ್ಷಕ** – ಹಣವನ್ನು ಕಾಪಾಡುವವನು, ಕುಬೇರ
**ಧನರಕ್ಷೆ** – ಐಶ್ವರ್ಯದ ರಕ್ಷಣೆ
**ಧನಲಾಭ** – ಹಣಸಂಪಾದನೆ
**ಧನಹೀನ** – ಹಣವಿಲ್ಲದವನು
**ಧನಾಢ್ಯ** – ಶ್ರೀಮಂತ
**ಧನಾಧಿಪ** – ಶ್ರೀಮಂತ
**ಧನಾಧ್ಯಕ್ಷ** – ಕುಬೇರ
**ಧನಾರ್ಥಿ** – ಹಣವನ್ನು ಬೇಡುವವನು
**ಧನಿಕ** – ಶ್ರೀಮಂತ
**ಧನು** – ಬಿಲ್ಲು; ಉದ್ದದ ಒಂದು ಅಳತೆ
**ಧನುಗೊಳ್** – ಬಿಲ್ಲನ್ನು ಧರಿಸು
**ಧನುರಾಗಮ** – ಬಿಲ್ವಿದ್ಯೆ; ಅಸ್ತ್ರಶಾಸ್ತ್ರ
**ಧನುರಿ** – ಬಿಲ್ಲಿನಂತೆ ಬಾಗಿದ ರಚನೆ; ಒಂದು ಶಿಲ್ಪಪ್ರಬೇಧ
**ಧನುರ್ಗುಣ** – ಬಿಲ್ಲಿನ ಹೆದೆ
**ಧನುರ್ಗುಣಕ್ವಣಿತ** – ಬಿಲ್ಲಿನ ಹೆದೆಮಿಡಿತದ ಧ್ವನಿ
**ಧನುಜ್ರ್ಯಾರವ** – ಧನುರ್ಗುಣಕ್ವಣಿತ
**ಧನುರ್ದಂಡ** – ಬಿಲ್ಲು
**ಧನುರ್ಧರ** – ಬಿಲ್ಲನ್ನು ಹಿಡಿದವನು
**ಧನುರ್ಧರಪ್ರಾಯ** – ಅನೇಕ ಬಿಲ್ಗಾರರಿಂದ ಕೂಡಿದ
**ಧನುರ್ಬಲ** – ಬಿಲ್ಗಾರಪಡೆ
**ಧನುರ್ಲತೆ** – ಬಿಲ್ಲೆಂಬ ಬಳ್ಳಿ
**ಧನುರ್ವಂಶ** – ಬಿಲ್ಲಂತೆ ಬಾಗಿದ ಬೆನ್ನುಮೂಳೆಯುಳ್ಳದು
**ಧನುರ್ವಳ** – ಧನುರ್ಬಲ
**ಧನುರ್ವಿದ್ಯೆ** – ಬಿಲ್ವಿದ್ಯೆ
**ಧನುರ್ವೇದ** – ಅಸ್ತ್ರಶಾಸ್ತ್ರ; ಒಂದು ಉಪವೇದ, ನೋಡಿ 'ಉಪವೇದ'
**ದನುರ್ವೇದಿ** – ಧನುರ್ವೇದ ಪಾರಂಗತ
**ಧನುಶ್ಶಲಾಕೆ** – ಬಿಲ್ಲು
**ಧನುಷ್ಟಂಕೃತ** – ಬಿಲ್ಲಿನ ಹೆದೆಮಿಡಿತದ ಧ್ವನಿ
**ಧನೇಶ್ವರ** – ಕುಬೇರ
**ಧನ್ಯ** – ಧನವನ್ನು ಕೊಡುವ; ಅದೃಷ್ಟವಂತ

**ಧನ್ವಿ** – ಬಿಲ್ಲುಗಾರ
**ಧಮ್ಮ** – ಧರ್ಮ
**ಧಮ್ಮಿಲ್ಲ** – ತುರುಬು
**ಧಮ್ಮಿಲ್ಲದ್ಯುತಿ** – ತುರುಬಿನ ಹೊಳಪು
**ಧರಣಿ** – ಭೂಮಿ
**ಧರಣಿಜೆ** – ಭೂಮಿಯ ಮಗಳು, ಸೀತೆ
**ಧರಣಿಪ(ತಿ)** – ಭೂಮಿಯ ಒಡೆಯ, ರಾಜ
**ಧರಣಿಭೃತ್** –ಬೆಟ್ಟ
**ಧರಣಿಸುರ** – ಭೂಸುರ, ಬ್ರಾಹ್ಮಣ
**ಧರಣೀಂದ್ರ** – (ಜೈನ) ಪಾರ್ಶ್ವನಾತ ತೀರ್ಥಂಕರನ ಯಕ್ಷ
**ಧರಣೀಚಕ್ರ** – ಭೂಚಕ್ರ, ಭೂಮಂಡಲ
**ಧರಣೀಜ** – ಭೂಮಿಯಲ್ಲಿ ಹುಟ್ಟಿದ್ದು, ಮರಗಿಡ
**ಧರಣೀಜಾತ** – ಧರಣೀಜ
**ಧರಣೀತಲ** – ಭೂತಳ
**ಧರಣೀಧರ** – ಬೆಟ್ಟ
**ಧರಣೀಧವ** – ಧರಣಿಪ(ತಿ)
**ಧರಣೀಧ್ರ** – ಬೆಟ್ಟ
**ಧರಣೀನಾಥ** – ಧರಣೀಧವ
**ಧರಣೀಪತಿ** – ಧರಣೀಧವ
**ಧರಣೀಪಾಲ** – ಧರಣೀಧವ
**ಧರಣೀಪಾಳಕ** – ಧರಣೀಧವ
**ಧರಣೀಪೂಜ್ಯ** – ಲೋಕಪೂಜ್ಯ
**ಧರಣೀಭ(ಭಾ)ರ** – ಭೂಮಿಯ ಜವಾಬ್ದಾರಿ, ರಾಜ್ಯಭಾರ
**ಧರಣೀಭರ್ತೃ** – ಧರಣೀಧವ
**ಧರಣೀಭೃತ್ಪತಿ** – ರಾಜಶ್ರೇಷ್ಠ; ಪರ್ವತಶ್ರೇಷ್ಠ
**ಧರಣೀಮಂಡನ** – ಭೂಮಿಗೆ ಅಲಂಕಾರಪ್ರಾಯ
**ಧರಣೀಮಾರ್ಗ** – ಭೂತಳ
**ಧರಣೀರಕ್ಷಣ** – ಭೂಮಿಯ ರಕ್ಷಣೆ
**ಧರಣೀವಲ್ಲಭ** – ಧರಣೀಧವ
**ಧರಣೀವಲಯ** – ಭೂವಲಯ
**ಧರಣೀಶ** – ಧರಣೀಧವ
**ಧರಣೀಶಾವಾಸ** – ಧರಣೀಶ+ಆವಾಸ, ಅರಮನೆ
**ಧರಣೀಸುತ** – ಅಂಗಾರಕ; ಭಗದತ್ತ
**ಧರಣೀಸುರ** – ಭೂಸುರ
**ಧರಣೀಹಾರ** – ಭೂಮಿಗೆ ಹಾರದಂತೆ ಶೋಭೆ ತರುವಂಥದು
**ಧರಣೇಂದ್ರ** – (ಜೈನ) ಧರಣೀಂದ್ರ
**ಧರಾಗ್ರ** – ಧರಣೀತಳ
**ಧರಾಚಕ್ರ** – ಭೂಮಂಡಲ
**ಧರಾತಳ** – ಭೂತಳ
**ಧರಾಧರ** – ಪರ್ವತ
**ಧರಾಧರಧನ್ವ** – ಮೇರುವನ್ನು ಬಿಲ್ಲಾಗಿ ಪಡೆದವನು, ಶಿವ
**ಧರಾಧರಧರ** – ಬೆಟ್ಟವನ್ನು ಎತ್ತಿದವನು, ಕೃಷ್ಣ
**ಧರಾಧರಧೈರ್ಯ** – ಬೆಟ್ಟದಂತಹ ಧೈರ್ಯವುಳ್ಳವನು
**ಧರಾಧರಸುತ** – ರಾಜಪುತ್ರ
**ಧರಾಧಾರ** – ರಾಜ; ಬೆಟ್ಟ
**ಧರಾಧಾರಧರ್ಮ** – ಧರಾಧರಧನ್ವ
**ಧರಾಧಿಪ(ತಿ)** – ರಾಜ
**ಧರಾಧಿಪತ್ಯ** – ಭೂಮಿಯ ಆಳ್ವಿಕೆ
**ಧರಾಧೀಶ** – ರಾಜ
**ಧರಾಧೀಶ್ವರ** – ಧರಾಧೀಶ
**ಧರಾಭಾಗ** – ಭೂಭಾಗ
**ಧರಾಭಾರ** – ರಾಜ್ಯಭಾರ
**ಧರಾಮರ** – ಭೂಸುರ
**ಧರಾಮರತ್ವ** – ಬ್ರಾಹ್ಮಣಿಕೆ
**ಧರಾಮರಪತಿ** – ಭೂಮಿಗೆ ಇಂದ್ರನಂತಿರುವವನು, ಚಕ್ರವರ್ತಿ
**ಧರಾರುಹ** – ಮರಗಿಡ
**ಧರಾವರ** – ಧರಾಧೀಶ
**ಧರಾವಲ(ಳ)ಯ** – ಭೂಮಂಡಲ
**ಧರಾವಿಭಾಗ** – ಭೂಭಾಗ, ರಾಜ್ಯ
**ಧರಿತ್ರಿ** – ಭೂಮಿ
**ಧರಿತ್ರೀತಳ** – ಭೂತಳ
**ಧರಿತ್ರೀತಿಳಕ** – ಭೂಮಿಗೆ ತಿಲಕಪ್ರಾಯನಾದವನು
**ಧರಿತ್ರೀನಾಥ** – ಧರಾಧೀಶ
**ಧರಿತ್ರೀಪಾಳ** – ಭೂಮಿಯನ್ನು ರಕ್ಷಿಸುವವನು, ರಾಜ
**ಧರಿತ್ರೀಮಿತ್ರ** – ಇಡೀ ಭೂಮಿಯ ಸ್ನೇಹಿತ
**ಧರಿತ್ರೀವಲ್ಲಭ** – ಧರಾಧೀಶ
**ಧರಿತ್ರೀಸ್ತುತ್ಯ** – ಎಲ್ಲರ ಹೊಗಳಿಕೆಗೆ ಪಾತ್ರನಾದವನು
**ಧರಿಸು** – ತೊಟ್ಟುಕೊ; ಹಿಡಿ
**ಧರೆ** – ಭೂಮಿ
**ಧರ್ಮ** – ನಂಬಿಕೆ–ಆಚರಣೆಗಳ ಕಟ್ಟಳೆ; ಪುಣ್ಯ; ಕರ್ತವ್ಯ; ಯಮ; ಯುಧಿಷ್ಠಿರ; (ಜೈನ) ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು, ಧರ್ಮಚಿಂತನೆ; ಧನುಸ್ಸು–
**ಧರ್ಮಂಗೆಯ್** – ಪುಣ್ಯಕೆಲಸಮಾಡು
**ಧರ್ಮಂಬೆಱು** – ಧರ್ಮದೀಕ್ಷೆಯನ್ನು ಪಡೆ
**ಧರ್ಮಕಥನ** – ಧರ್ಮಬೋಧನೆ ಮಾಡುವುದು
**ಧರ್ಮಕಥೆ** – ಧರ್ಮದ ಬಗ್ಗೆ ಹೇಳುವ ಕತೆ; (ಜೈನ) ಇದರಲ್ಲಿ ಆಕ್ಷೇಪಣಿ, ವಿಕ್ಷೇಪಣಿ, ಸಂವೇದನಿ, ನಿರ್ವೇದನಿ ಎಂದು ನಾಲ್ಕು ಬಗೆ
**ಧರ್ಮಕರ** – ಧರ್ಮವನ್ನು ಮಾಡುವವನು; ಬಿಲ್ಲು ಹಿಡಿದವನು
**ಧರ್ಮಕಾರ್ಯ** – ಪುಣ್ಯದ ಕೆಲಸ
**ಧರ್ಮಕ್ಷೇತ್ರ** – ಪುಣ್ಯಕ್ಷೇತ್ರ
**ಧರ್ಮಗಳ್** – ಧರ್ಮ+ಕಳ್, ಪುಕ್ಕಟೆ ಕೊಡುವ ಕಳ್ಳು, ಹೆಂಡ

**ಧರ್ಮಗಳ್ಗುಡಿ** – ಧರ್ಮಗಳ್ಳನ್ನು ಕುಡಿಯುವುದು
**ಧರ್ಮಗೇಹ** – ಧರ್ಮಕ್ಕೆ ಮನೆಯಂತಿರುವುದು; ನಂದಿ
**ಧರ್ಮಚಕ್ರ** – ಧರ್ಮದ ರಾಜ್ಯ; ಧರ್ಮರಕ್ಷಣೆಗೆ ಚಕ್ರ ಹಿಡಿದವನು, ವಿಷ್ಣು
**ಧರ್ಮಚಿಂತಾಯಕ** – ಧರ್ಮಚಿಂತನೆ ನಡೆಸುವವನು
**ಧರ್ಮಚಿಂತೆ** – ಧರ್ಮದ ಬಗೆಗಿನ ಆಲೋಚನೆ
**ಧರ್ಮಚ್ಯುತಿ** – ಧರ್ಮವನ್ನು ಬಿಡುವುದು
**ಧರ್ಮಜ** – ಯಮನ ಮಗ; ಯುಧಿಷ್ಠಿರ; ಪಾಂಡವ, ಬಿಳಿ ಹಕ್ಕಿ
**ಧರ್ಮಜ್ಞ** – ಧರ್ಮವನ್ನು ತಿಳಿದವನು
**ಧರ್ಮತನಯ** – ಧರ್ಮಜ
**ಧರ್ಮದ** – ಧರ್ಮವಂತ
**ಧರ್ಮದ್ರವ್ಯ** – (ಜೈನ) ಷಡ್ದ್ರವ್ಯಗಳಲ್ಲಿ ಒಂದು
**ಧರ್ಮದ್ರೋಹ** – ಧರ್ಮದ ಉಲ್ಲಂಘನೆ
**ಧರ್ಮದ್ರೋಹಿ** – ಧರ್ಮದ ಉಲ್ಲಂಘನೆ ಮಾಡುವವನು
**ಧರ್ಮಧ್ಯಾನ** – (ಜೈನ) ಧರ್ಮದ ವಿಷಯಗಳನ್ನು ಕುರಿತು ಸದಾ ಚಿಂತಿಸುವುದು; ಧ್ಯಾನಚತುಷ್ಟಯಗಳಲ್ಲಿ ಒಂದು, ನೋಡಿ, 'ಧ್ಯಾನಚತುಷ್ಟಯ'
**ಧರ್ಮನಂದನ** – ಯುಮನ ಮಗ, ಯುಧಿಷ್ಠಿರ
**ಧರ್ಮಪತ್ನಿ** – ವಿಧಿವತ್ತಾಗಿ ಮದುವೆಯಾದ ಹೆಂಡತಿ
**ಧರ್ಮಪಥ** – ಧರ್ಮದ ಹಾದಿ
**ಧರ್ಮಪರ** – ಧರ್ಮನಿಷ್ಠ
**ಧರ್ಮಪರಾಯಣ** – ಧರ್ಮಪರ
**ಧರ್ಮಪಾನೀಯ** – ಹಾದಿಹೋಕರಿಗೆ ಉಚಿತವಾಗಿ ನೀಡುವ ನೀರು ಅಥರ್ವ ಪಾನೀಯ
**ಧರ್ಮಪುತ್ರ** – ಧರ್ಮನಂದನ
**ಧರ್ಮಪ್ರಭಾವನೆ** – (ಜೈನ) ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು; ಜೈನಧರ್ಮದ ಬಗ್ಗೆ ಇತರರಲ್ಲಿ ಪ್ರಚಾರ ಮಾಡುವುದು
**ಧರ್ಮಪ್ರವರ್ತನ** – ಧರ್ಮಕ್ಕೆ ನೀಡುವ ಪ್ರೋತ್ಸಾಹ
**ಧರ್ಮಪ್ರಿಯ** – ಧರ್ಮದ ಬಗ್ಗೆ ಪ್ರೀತಿಯಿಟ್ಟವನು
**ಧರ್ಮಬಹಿರ್ಮುಖ** – ಧರ್ಮದಿಂದ ದೂರಾದವನು
**ಧರ್ಮಮಾರ್ಗ** – ಧರ್ಮದ (ನ್ಯಾಯಸಮ್ಮತ)ಹಾದಿ
**ಧರ್ಮಯುದ್ಧ** – ನಿಯಮಾನುಸಾರ ಮಾಡುವ ಯುದ್ಧ
**ಧರ್ಮರತ** – ಧರ್ಮನಿಷ್ಠ
**ಧರ್ಮರತಿ** – ಧರ್ಮನಿಷ್ಠೆ
**ಧರ್ಮರಾಜ** – ಯಮ; ಯುಧಿಷ್ಠಿರ
**ಧರ್ಮರುಚಿ** – ಧರ್ಮದಲ್ಲಿ ಆಸಕ್ತಿಯುಳ್ಳವನು
**ಧರ್ಮವಿಚಾರ** – ಧರ್ಮಕ್ಕೆ ಸಂಬಂಧಿಸಿದ ವಿಷಯ
**ಧರ್ಮವಿಜಯ** – ಧರ್ಮದಿಂದ ಗೆಲ್ಲುವವನು
**ಧರ್ಮವಿಜಯಿ** – ಧರ್ಮದ ಮೂಲಕ ಗೆಲ್ಲಬಹುದಾದವನು
**ಧರ್ಮವಿರೋಧಿ** – ಧರ್ಮದ್ವೇಷಿ
**ಧರ್ಮವೃದ್ಧಿ** – ಧರ್ಮದ ಏಳಿಗೆ
**ಧರ್ಮವ್ಯಯ** – ಧರ್ಮಕಾರ್ಯಕ್ಕಾಗಿ ಮಾಡುವ ವೆಚ್ಚ
**ಧರ್ಮಶಾಸ್ತ್ರ** – ಸಾಮಾಜಿಕ ಕಟ್ಟುಪಾಡುಗಳ ಸಂಹಿತೆ
**ಧರ್ಮಶ್ರವಣ** – ಧರ್ಮೋಪದೇಶವನ್ನು ಕೇಳುವುದು
**ಧರ್ಮಶ್ರವಣಂಗೆಯ್** – ಧರ್ಮಶ್ರವಣ ಮಾಡು
**ಧರ್ಮಶ್ರವಣಂಗೆಯ್ಸು** – ಧರ್ಮಶ್ರವಣ ಮಾಡಿಸು
**ಧರ್ಮಸಂತತಿ** – ಧರ್ಮಪತ್ನಿಯಲ್ಲಿ ಹುಟ್ಟಿದ ಮಕ್ಕಳು
**ಧರ್ಮಸಭೆ** – (ಜೈನ) ಕೇವಲಜ್ಞಾನ ಪಡೆದ ಮೇಲೆ ತೀರ್ಥಂಕರರು ಧರ್ಮೋಪದೇಶ ಮಾಡುವ ಸಭೆ
**ಧರ್ಮಸಾಧನ** – ಧರ್ಮವನ್ನು ಆರ್ಜಿಸುವುದು
**ಧರ್ಮಸುತ** – ಧರ್ಮನಂದನ
**ಧರ್ಮಸ್ಥಿತಿ** – ಧರ್ಮದ ಸ್ವರೂಪ
**ಧರ್ಮಹಾನಿ** – ಧರ್ಮದ ನಾಶ
**ಧರ್ಮಾಧಿಕರಣ** – ನ್ಯಾಯನಿರ್ಣಾಯಕ ಮಂಡಲಿ; ನ್ಯಾಯಾಧಿಕಾರಿ
**ಧರ್ಮಾಧ್ಯಕ್ಷ** – ನ್ಯಾಯಾಧೀಶ
**ಧರ್ಮಾನುರಾಗ** – ಧರ್ಮದಲ್ಲಿನ ಆಸಕ್ತಿ
**ಧರ್ಮಾಯತ್ತ** – ಧರ್ಮದಿಂದ ಕೂಡಿದ್ದು
**ಧರ್ಮಾರ್ಥಿ** – ಧರ್ಮಸಂಪಾದನೆಯಲ್ಲಿ ಆಸಕ್ತ
**ಧರ್ಮಾಸ್ತಿಕಾಯ** – (ಜೈನ) ಪಂಚಾಸ್ತಿಕಾಯಗಳಲ್ಲಿ ಒಂದು; ಬಹುಪ್ರದೇಶದಲ್ಲಿ ವ್ಯಾಪಿಸಿರುವ ಧರ್ಮದ್ರವ್ಯ, ನೋಡಿ, 'ಪಂಚಾಸ್ತಿಕಾಯ'
**ಧರ್ಮಿ** – ಧರ್ಮಪರಾಯಣ
**ಧರ್ಮೋಪದೇಶ** – ಧರ್ಮತತ್ವಗಳ ಬೋಧನೆ; (ಜೈನ) ಸ್ವಾಧ್ಯಾಯದ ಐದು ಅಂಗಗಳಲ್ಲಿ ಒಂದು
**ಧರ್ಮೋಪದೇಶಂಗೆಯ್** – ಧರ್ಮೋಪದೇಶ ಮಾಡು
**ಧರ್ಮೋಪದೇಶಿ** – ಧರ್ಮೋಪದೇಶ ಮಾಡುವವನು
**ಧವಲ(ಳ)** – ಬಿಳಿಯ; ಒಂದು ಬಗೆಯ ಗಾನ
**ಧವಲ(ಳ)ಚಾಮರ** – ಬಿಳಿಯ ಚಾಮರ
**ಧವಲ(ಳ)ಛತ್ರ** – ಬೆಳ್ಗೊಡೆ
**ಧವಲ(ಳ)ಪಕ್ಷ** – ಹಂಸ
**ಧವಲಾ(ಳಾ)ಕ್ಷತ** – ಬಿಳಿಯ ಅಕ್ಷತೆ
**ಧವಲಾ(ಳಾ)ಗಾರ** – ಬಿಳಿಯ ಮನೆ, ದೊಡ್ಡ ಸೌಧ
**ಧವಲಾ(ಳಾ)ತಪತ್ರ** – ಬೆಳ್ಗೊಡೆ
**ಧವಲಿ(ಳಿ)ತ** – ಬಿಳಿದಾದ
**ಧವಲಿ(ಳಿ)ಮ** – ಬಿಳಿಯ ಬಣ್ಣದ
**ಧವಲೋತ್ಪಲ** – ಬಿಳಿಯ ನೈದಿಲೆ
**ಧವಳಗಜೇಂದ್ರ** – ಶ್ರೇಷ್ಠ ಬಿಳಿಯ ಆನೆ
**ಧವಳಗ್ರೀವ** – ಬಿಳಿಯ ಕತ್ತು
**ಧವಳಚಮರರುಹ** – ಬಿಳಿಯ ಚಾಮರ

**ಧವಳತಲ್ಪ** – ಬಿಳಿಯ ಹಾಸಿಗೆ
**ಧವಳದಂತ** – ಬಿಳಿಯ ಹಲ್ಲು
**ಧವಳದ್ಯುತಿ** – ಹೊಳೆಯುವ ಕಾಂತಿ
**ಧವಳಪ್ರಾಸಾದ** – ಬಿಳಿಯ ಮನೆ, ಸೌಧ
**ಧವಳರಥ** – ಬಿಳಿಯ ರಥ (ಹೊಂದಿರುವವನು)
**ಧವಳವಿಲೋಚನೆ** – ಹೊಳಪಿನ ಕಣ್ಣುಳ್ಳವಳು
**ಧವಳಸಭೇರಮ** – ಬಿಳಿಯ ಆನೆ
**ಧವಳಹಯ** – ಬೆಳ್ಗುದುರೆ
**ಧವಳಾಂಗಪ್ರಭೆ** – ಹೊಳೆಯುವ ದೇಹಕಾಂತಿ
**ಧವಳಾಂಬರ** – ಬಿಳಿ ಬಟ್ಟೆ
**ಧವಳಾಂಶು** – ಹೊಳೆಯುವ ಕಿರಣ
**ಧವಳಾಕ್ಷ** – ಹೊಳಪಿನ ಕಣ್ಣು
**ಧವಳಾಕ್ಷಿ** – ಧವಳವಿಲೋಚನೆ
**ಧವಳಾತಪವಾರಣ** – ಬೆಳ್ಗೊಡೆ
**ಧವಳಾಪಾಂಗ** – ಹೊಳೆಯುವ ಕುಡಿನೋಟ
**ಧವಳಾಬ್ಜ** – ಬಿಳಿಯ ಕಮಲ
**ಧವಳಾಭ್ರ** – ಬೆಳ್ಮುಗಿಲು
**ಧವಳಾರ** – ಧವಳಾಗಾರ, ಬಿಳಿಯ ಮನೆ
**ಧವಳಿಸು** – ಬಿಳುಪಾಗು; ಪ್ರಕಾಶಿಸು
**ಧವಳೇಕ್ಷಣೆ** – ಧವಳಾಕ್ಷಿ
**ಧವಳೇಕ್ಷು** – ಧವಳ+ಇಕ್ಷು, ಬಿಳಿ ಕಬ್ಬು
**ಧಾತಕೀ** – ಇಪ್ಪೆಯ ಹೂ
**ಧಾತಕೀಷಂಡ** – (ಜೈನ) ಪುಷ್ಕರದ್ವೀಪದ ಒಂದು ಭಾಗ; ಧಾತಕೀವೃಕ್ಷ ಹೇರಳವಾಗಿರುವ ಜಾಗ
**ಧಾತೃಪುತ್ರ** – ಬ್ರಹ್ಮಪುತ್ರ, ನಾರದ
**ಧಾತ್ರಿ** – ಸಾಕುತಾಯಿ, ದಾದಿ; ಭೂಮಿ; ನೆಲ್ಲಿ
**ಧಾತ್ರಿಕೆ** – ದಾದಿ
**ಧಾತ್ರಿಜೆ** – ದಾದಿಯ ಮಗಳು; ಭೂಮಿಯ ಮಗಳು, ಸೀತೆ
**ಧಾತ್ರಿಪ** – ಭೂಮಿಯ ಒಡೆಯ, ರಾಜ
**ಧಾತ್ರಿಪತಿ** – ಧಾತ್ರಿಪ
**ಧಾತ್ರಿವಲ್ಲಭ** – ಧಾತ್ರಿಪ
**ಧಾತ್ರೀಜನ** – ದಾದಿಯರು; ಭೂಲೋಕದ ಜನರು
**ಧಾತ್ರೀತಲ** – ಭೂಮಿ
**ಧಾತ್ರೀಧರ** – ಪರ್ವತ
**ಧಾತ್ರೀಪತಿ** – ಧಾತ್ರಿಪ
**ಧಾತ್ರೀಪುತ್ರಿ** – ಧಾತ್ರಿಜೆ
**ಧಾತ್ರೀಫಳ** – ನೆಲ್ಲಿಕಾಯಿ
**ಧಾತ್ರೀರಜ** – ಮಣ್ಣು
**ಧಾತ್ರೀರುಹ** – ಮರಗಿಡ
**ಧಾತ್ರೀಶ** – ಧಾತ್ರಿಪ
**ಧಾತ್ರೀಶಾಜ್ಞೆ** – ರಾಜಾಜ್ಞೆ
**ಧಾತ್ರೀಸುತೆ** – ಧಾತ್ರಿಜೆ
**ಧಾನುಷ್ಕ** – ಧನುಸ್ಸಿನಿಂದ ಯುದ್ಧಮಾಡುವವನು
**ಧಾನುಷ್ಕಬಲ(ಳ)** – ಬಿಲ್ಗಾರರ ಪಡೆ
**ಧಾನುಷ್ಕಾನೀಕ** – ಧಾನುಷ್ಕಬಲ(ಳ)
**ಧಾನ್ಯ** – ದವಸ; ಒಂದು ತೂಕದ ಪ್ರಮಾಣ
**ಧಾನ್ಯಕ** – ಕೊತ್ತುಂಬರಿ
**ಧಾನ್ಯಮಂಜರಿ** – ಕಾಳಿನ ತೆನೆ
**ಧಾನ್ಯಸಂಚಯ** – ದವಸದ ಸಂಗ್ರಹ
**ಧಾನ್ಯಸಮಿತಿ** – ಬಗೆಬಗೆಯ ದವಸ
**ಧಾನ್ವನದುರ್ಗ** – ಮರುಭೂಮಿಯ ನಡುವಣ ದುರ್ಗ
**ಧಾಮ** – ಮನೆ; ದೇಹ; ಕಾಂತಿ
**ಧಾರಣ** – ಆಧಾರ
**ಧಾರಾಗೃಹ** – ತಂಪಾಗಿರಲು ನೀರು ಎರಚುವ ಏರ್ಪಾಟಿರುವ ಮನೆ
**ಧಾರಾಧರ** – ಮೋಡ
**ಧಾರಾನಿಳಯ** – ಧಾರಾಗೃಹ
**ಧಾರಾಪಂಚಕ** – ಕುದುರೆಯ ಐದು ಬಗೆಯ ನಡಿಗೆಗಳು: ಆಸ್ಕಂದಿತ, ಧೌರಿತಕ, ರೇಚಿತ, ವಲ್ಗಿತ, ಪ್ಲುತ
**ಧಾರಾಭಿಷೇಕ** – ಧಾರೆ ಎರೆದು ಮಾಡುವ ಅಭಿಷೇಕ
**ಧಾರಾಲಯ** – ಧಾರಾಗೃಹ
**ಧಾರಾವರ್ತ** – ಸುರಿಮಳೆ
**ಧಾರಾಹತಿ** – ಅಲುಗಿನ ಏಟು
**ಧಾರಿಣಿ** – ದೇಶ
**ಧಾರಿಣಿಪತಿ** – ರಾಜ
**ಧಾರಿಣೀಶಯನ** – ನೆಲದ ಮೇಲೆ ಮಲಗುವುದು
**ಧಾರೆ** – ಪ್ರವಾಹ; ಹರಿತವಾದ ಅಲುಗು; ಕುದುರೆಯ ನಡಿಗೆ, ನೋಡಿ, 'ಧಾರಾಪಂಚಕ'
**ಧಾರೆಗೆದಱು** – ಪ್ರವಾಹದಂತೆ ಹರಡಿಕೊ
**ಧಾರ್ತರಾಷ್ಟ್ರ** – ಕೌರವ, ಧೃತರಾಷ್ಟ್ರನ ಮಗ, ದುರ್ಯೋಧನ; ಕೊಕ್ಕು-ಕಾಲುಗಳು ಕಪ್ಪಾಗಿರುವ ಒಂದು ಬಗೆಯ ಹಕ್ಕಿ-
**ಧಾರ್ಮಿಕವೃತ್ತಿ** – ಧರ್ಮಾನುಸಾರಿಯಾದ ನಡವಳಿಕೆ
**ಧಾವತಿ** – ದಾವತಿ, ಶ್ರಮ
**ಧಾರ್ಷ್ಟ್ಯ** – ಉದ್ಧಟತೆ
**ಧಿಕ್ಕರಿಸು** – ನಿಂದಿಸು
**ಧಿರು** – ಭಲೆ
**ಧಿಷಣ** – ಪ್ರತಿಭಾವಂತ
**ಧೀಂಕು** – ತುಳಿತ
**ಧೀಮಂತ** – ಮೇಧಾವಿ
**ಧೀರ** – ಧೈರ್ಯವಂತ
**ಧೀರತೆ** – ಧೈರ್ಯ
**ಧೀರತೆಗಿಡು** – ಧೈರ್ಯ ಕಳೆದುಕೊ
**ಧೀರನಿಧಿ** – ಮಹಾ ಧೈರ್ಯವಂತ
**ಧೀವರ** – ಬೇಟೆಗಾರ; ಬೆಸ್ತ
**ಧೀವರೆ** – ಬೇಟೆಗಾತಿ
**ಧೀಷಣ** – ಬುದ್ಧಿವಂತ
**ಧುರ** – ಯುದ್ಧ

**ಧುರಗಲಿ** – ರಣಧೀರ
**ಧುರಂಧರ** – ಮುಂದಾಳು
**ಧುರಂಧರತೆ** – ಮುಂದಾಳುತನ
**ಧುರಧರಣಿ** – ರಣಭೂಮಿ
**ಧುರಧರೆ** – ಧುರಧರಣಿ
**ಧುರಧಾರಿಣಿ** – ಧುರಧರಣಿ
**ಧುರಭರ** – ಯುದ್ಧತೀವ್ರತೆ
**ಧುರಾವನಿ** – ಧುರಧರಣಿ
**ಧೂಪಗುಂಡಿಗೆ** – ಧೂಪದ ಪಾತ್ರೆ
**ಧೂಪಘಟ** – ಧೂಪಗುಂಡಿಗೆ
**ಧೂಪಧೂಮ** – ಧೂಪದ ಹೊಗೆ
**ಧೂಪಧೂಮಘಟ** – ಧೂಪಘಟ
**ಧೂಪಭಾಜನ** – ಧೂಪಘಟ
**ಧೂಪವರ್ತಿ** – ಧೂಪ ಸೇರಿಸಿ ಮಾಡಿದ ಬತ್ತಿ
**ಧೂಪಾಮೋದ** – ಧೂಪದ ಆಹ್ಲಾದ
**ಧೂಪೋದ್ಧಾರ** – ಧೂಪ ಸಮರ್ಪಣೆ
**ಧೂಮ** – ಹೊಗೆ
**ಧೂಮಜ್ವಾಲೆ** – ಹೊಗೆಸಹಿತವಾದ ಬೆಂಕಿ
**ಧೂಮಧ್ವಜ** – ಹೊಗೆಯ ಬಾವುಟವುಳ್ಳವನು, ಅಗ್ನಿ
**ಧೂಮಪತಾಕ** – ಧೂಮಧ್ವಜ
**ಧೂಮಪ್ರಭೆ** – (ಜೈನ) ಒಂದು ನರಕ, ನೋಡಿ, 'ಸಪ್ತನರಕ'
**ಧೂಮಮಾಳೆ** – ಹೊಗೆಯ ಪಂಕ್ತಿ
**ಧೂಮಲೇಖೆ** – ಹೊಗೆಯ ಗೆರೆ
**ಧೂಮಸ್ತೋಮ** – ಹೊಗೆಯ ರಾಶಿ
**ಧೂಮಾಂಕ** – ಅಗ್ನಿ
**ಧೂಮಾಳ** – ಧೂಮಸ್ತೋಮ
**ಧೂಮ್ರಾವರ್ತ(ನ)** – ಚಿತ್ರಗಳಿಗೆ ಬಣ್ಣ ಹಾಕುವ ಒಂದು ಬಗೆ
**ಧೂರ್ಜಟಿ** – ಶಿವ
**ಧೂರ್ತ** – ದುಷ್ಟ
**ಧೂರ್ತಜನ** – ದುಷ್ಟಜನ
**ಧೂರ್ತತನ** – ದುಷ್ಟತನ
**ಧೂರ್ತಶಿಖಾಮಣಿ** – ಮಹಾ ಧೂರ್ತ
**ಧೂರ್ತೆ** – ದುಷ್ಟೆ
**ಧೂರ್ತೋಕ್ತಿ** – ದುಷ್ಟತನದ ಮಾತು
**ಧೂಳೀ(ಳೀ)ಪಟಲ** – ಧೂಳಿನ ತೆರೆ
**ಧೂಳೀ(ಳೀ)ಪ್ರತಾನ** – ಧೂಳಿನ ಆವರಣ
**ಧೂಸರ** – ಬೂದುಬಣ್ಣದ
**ಧೂಸರಿತ** – ಧೂಳಿನ ಬಣ್ಣದಿಂದ ಕೂಡಿದ
**ಧೂಳಗಾಲ್** – ಧೂಳುಗೊಂಡ ಕಾಲು
**ಧೂಳಪಟ** – ಧೂಳಾಗುವುದು, ಪುಡಿಗುಟ್ಟುವುದು
**ಧೂಳವಿಡು** – ಧೂಳುಂಟುಮಾಡು
**ಧೂಳೀಕೇಳ** – ಧೂಳಿನಲ್ಲಿ ಆಡುವ ಆಟ
**ಧೂಳೀಚಿತ್ರ** – ಪುಡಿಯಿಂದ ರಚಿಸಿದ ಚಿತ್ರ
**ಧೂಳೀಧೂಸರ** – ಧೂಳು ತುಂಬಿ ಬೂದುಬಣ್ಣವಾದ
**ಧೂಳೀಪ್ರಾಕಾರ** – (ಜೈನ) ಸಮವಸರಣ ಮಂಟಪದ ಮೊದಲನೆಯ ಪ್ರಾಕಾರ
**ಧೂಳ(ಿ)ಶಾಲ(ಳ)** – ಧೂಳೀಪ್ರಾಕಾರ
**ಧೃತ** – ತಳೆದ; ಹಿಡಿದ
**ಧೃತಕಂಟಕ** – ಮುಳ್ಳಿನಿಂದ ಕೂಡಿರುವುದು
**ಧೃತಕಂಬಲ** – ಕಂಬಲಸರ್ಪವನ್ನು ಧರಿಸಿದವನು, ಶಿವ
**ಧೃತಕಳಾಕಳಾಪ** – ಕಲೆಗಳ ಸಮೂಹವನ್ನು ಪಡೆದವನು
**ಧೃತಧೈರ್ಯ** – ಧೈರ್ಯತಾಳಿದವನು
**ಧೃತಮನೋರಥ** – ದೃಢವಾದ ಮನಸ್ಸುಳ್ಳವನು
**ಧೃತಮೋಹ** – ಮೋಹವುಳ್ಳವನು
**ಧೃತರಜ** – ಧೂಳಿನಿಂದ ಕೂಡಿದವನು
**ಧೃತರಾಷ್ಟ್ರ** – ರಾಷ್ಟ್ರದ ಭಾರವನ್ನು ಹೊತ್ತವನು; ಕೌರವರ ತಂದೆ
**ಧೃತವೇತ್ರ** – ಬೆತ್ತ ಹಿಡಿದವನು, ದಂಡಧಾರಿ
**ಧೃತಶಶಿಕಲ** – ಚಂದ್ರಕಲೆಯನ್ನು ಧರಿಸಿದವನು, ಶಿವ
**ಧೃತಶೈತ್ಯ** – ಶೈತ್ಯವನ್ನು ಹೊಂದಿರುವುದು
**ಧೃತಿ** – ಧೈರ್ಯ
**ಧೃತಿಗುಂದು** – ಧೈರ್ಯ ಕಳೆದುಕೊ
**ಧೃತಿಗೆಡು** – ಧೃತಿಗುಂದು
**ಧೃತಿಯುಕ್ತ** – ಧೈರ್ಯವಂತ
**ಧೃತಿವೆಱು** – ಧೈರ್ಯ ಹೊಂದು
**ಧೃಷ್ಟ** – ಧೈರ್ಯವುಳ್ಳವನು; ಉದ್ಧಟ
**ಧೇನುಕ** – ಕತ್ತೆಯಾಕೃತಿಯ ಒಬ್ಬ ರಾಕ್ಷಸ
**ಧೇನುಕುಚ** – ಹಸುವಿನ ಕೆಚ್ಚಲು
**ಧೈರ್ಯ** – ಕೆಚ್ಚು
**ಧೈರ್ಯಂಗೆ(ಗಿ)ಡು** – ಧೈರ್ಯ ಕಳೆದುಕೊ
**ಧೈರ್ಯಕ್ಷತಿ** – ಧೈರ್ಯನಾಶ
**ಧೈರ್ಯಗುಣ** – ನಿಶ್ಚಲತೆ
**ಧೈರ್ಯನಿಧಿ** – ಮಹಾ ಧೈರ್ಯವಂತ
**ಧೈರ್ಯಪರ** – ಧೈರ್ಯ ಹೊಂದಿದ
**ಧೈರ್ಯಯುತ** – ಧೈರ್ಯಪರ
**ಧೈರ್ಯವಂತ** – ಧೈರ್ಯಶಾಲಿ
**ಧೈವತ** – ಸಪ್ತಸ್ವರಗಳಲ್ಲಿ ಆರನೆಯದು; ನೋಡಿ, 'ಸಪ್ತಸ್ವರ'
**ಧೋತ್ರ** – ಉತ್ತರೀಯ
**ಧೌತ** – ತೊಳೆದ
**ಧೌತಕೀರ್ತಿ** – ಪರಿಶುಬ್ರ ಕೀರ್ತಿ
**ಧೌತವಲ್ಕಲ** – ಶುಚಿಯಾದ ಬಟ್ಟೆ
**ಧೌತವಸ್ತ್ರ** – ಧೌತವಲ್ಕಲ
**ಧೌತಾಂಬರ** – ಧೌತವಲ್ಕಲ
**ಧೌರೇಯ** – ಜವಾಬ್ದಾರಿ ಹೊತ್ತವನು
**ಧ್ಯಾತೃ** – ಧ್ಯಾನಮಾಡುವವನು
**ಧ್ಯಾನ** – ಚಿಂತನೆ
**ಧ್ಯಾನಂಬೆಱು** – ಧ್ಯಾನಮಾಡು

**ಧ್ಯಾನಚತುಷ್ಟಯ** – (ಜೈನ) ಆರ್ತ, ರೌದ್ರ, ಧರ್ಮ, ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳು

**ಧ್ಯಾನಾಧೀನ** – ಧ್ಯಾನದಲ್ಲಿ ಱುಮುಳುಗಿದ

**ಧ್ಯಾನಿಸು** – ಧ್ಯಾನಮಾಡು

**ಧ್ರುವ** – ಸ್ಥಿರ; ಒಂದು ನಕ್ಷತ್ರ; ಒಂದು ತಾಳದ ಹೆಸರು

**ಧ್ರುವಕ್ಷೇತ್ರ** – ಕುದುರೆಯ ದೇಹದ ಮೇಲಿನ ರೋಮದ ಹತ್ತು ಸುಳಿಗಳಿರುವ ಜಾಗ

**ಧ್ವಂಸ(ನ)** – ಬೀಳು, ನಾಶ (ಮಾಡುವುದು)

**ಧ್ವಜ** – ಪತಾಕೆ; ಗುರುತು

**ಧ್ವಜಪಟ** – ಧ್ವಜ

**ಧ್ವಜಮಯ** – ಬಾವುಟಗಳಿಂದ ಕೂಡಿದ

**ಧ್ವಜಿನಿ** – ಧ್ವಜವನ್ನು ಪಡೆದಿರುವಂಥದು, ಸೈನ್ಯ

**ಧ್ವಜಿನೀಪತಿ** – ಸೇನಾಧಿಪತಿ

**ಧ್ವಜಿನೀಮುಖ್ಯ** – ಧ್ವಜಿನೀಪತಿ

**ಧ್ವನಿಗೆಯ್** – ಶಬ್ದಮಾಡು

**ಧ್ವಸ್ತ** – ಕೆಳಗೆ ಬಿದ್ದ; ನಾಶಗೊಂಡ

**ಧ್ವಸ್ತದಿತಿಜ** – ರಾಕ್ಷಸನನ್ನು ನಾಶಗೈದವನು

**ಧ್ವಾಂಕ್ಷ** – ಕಾಗೆ

**ಧ್ವಾಂಕ್ಷಧ್ವಜ** – ಕಾಗೆಯ ಗುರುತುಳ್ಳವನು, ಕರ್ಣ

**ಧ್ವಾಂತ** – ಕತ್ತಲೆ

**ಧ್ವಾಂತಬಂಧ** – ಕತ್ತಲೆಯ ಕಟ್ಟು

**ಧ್ವಾಂತವಿಧ್ವಂಸನ** – ಕತ್ತಲೆಯನ್ನು ನಾಶಗೈಯುವವನು, ಸೂರ್ಯ; ಚಂದ್ರ

**ಧ್ವಾನ** – ಶಬ್ದ

**ಧ್ವಾನಿತ** – ಶಬ್ದಗೈದ

## ನ

**ನಂಜಿನುರುಳಿ** – ವಿಷದ ಉಂಡೆ

**ನಂಜು** – ವಿಷ

**ನಂಜುಗೊರಲ** – ಕೊರಳಲ್ಲಿ ನಂಜುಳ್ಳವನು, ಶಿವ

**ನಂಜುದಿನ್** – ನಂಜನ್ನು ತಿನ್ನು,

**ನಂಜುನೀರ್** – ವಿಷಯುಕ್ತ ನೀರು

**ನಂಜುರುಳಿ** – ನಂಜಿನ ಉಂಡೆ, ವಿಷದ ಗುಳಿಗೆ

**ನಂಜೂಡು** – ವಿಷ ಲೇಪಿಸು

**ನಂಜೂಱು** – ವಿಷ ಸೇರಿಕೊ

**ನಂಟ** – ಬಂಧು

**ನಂಟರ್ತನ** – ನಂಟಸ್ತಿಕೆ

**ನಂಟು** – ಬಾಂಧವ್ಯ; ಸೇರು

**ನಂದ** – ಸಂತೋಷ; ನಂದಗೋಪ; ನಂದ ಎಂಬ ರಾಜವಂಶ

**ನಂದಕ** – ಸಂತಸಗೊಳ್ಳುವಿಕೆ; ವಿಷ್ಣುವಿನ ಕತ್ತಿ

**ನಂದನ** – ಸಂತೋಷಕರ; ಉದ್ಯಾನವನ; ಇಂದ್ರನ ವನ

**ನಂದನಂದನ** – ನಂದಗೋಪನ ಮಗ, ಕೃಷ್ಣ

**ನಂದನಚರ** – (ಜೈನ) ಹಿಂದಿನ ಜನ್ಮದಲ್ಲಿ ಮಗನಾಗಿದ್ದು ಸಂಸಾರಚಕ್ರದಲ್ಲಿ ಸುತ್ತುತ್ತಿರುವವನು

**ನಂದನವನ** – ಇಂದ್ರನ ಉದ್ಯಾನ; ಚೆಲುವಾದ ಉದ್ಯಾನ

**ನಂದನವಿಮಾನ** – (ಜೈನ) ಸ್ವರ್ಗದಲ್ಲಿನ ಒಂದು ಸ್ಥಳದ ಹೆಸರು

**ನಂದನಾವಲಿ** – ವನಗಳ ಸಾಲು

**ನಂದನೋತ್ಕರ** – ನಂದನಾವಲಿ

**ನಂದಿದ್ರುಮ** – ನಂದಿ ಮರ

**ನಂದಿಸು** – ಆರಿಸು

**ನಂದು** – ಆರಿಹೋಗು

**ನಂದ್ಯಾವರ್ತ** – ನಂದಿಬಟ್ಟಲು ಹೂ

**ನಂದ್ಯಾವರ್ತವಿಮಾನ** – (ಜೈನ) ಒಂದು ಸ್ವರ್ಗದ ಹೆಸರು

**ನಂಬಿಸು** – ನಂಬಿಕೆಯುಂಟುಮಾಡು

**ನಂಬು** – ವಿಶ್ವಾಸವಿಡು

**ನಂಬೆನುಡಿ** – ನಂಬುವಂತೆ ಮಾತಾಡು

**ನಂಬುಗೆ** – ನಂಬಿಕೆ

**ನಂಬುಗೆಗೆಡು** – ನಂಬಿಕೆ ಕಳೆದುಕೊ

**ನಃ** – ನಮ್ಮನ್ನು

**ನಕುಲ** – ಮುಂಗುಸಿ; ಪಂಚಪಾಂಡವರಲ್ಲೊಬ್ಬ

**ನಕ್ಕು** – ಹೀರು, ಕುಡಿ

**ನಕ್ತಂಚರ(ರಿ)** – ರಾತ್ರಿಯಲ್ಲಿ ಚರಿಸುವುದು, ರಾಕ್ಷಸ(ಸಿ)

**ನಕ್ರ** – ಮೊಸಳೆ

**ನಕ್ಷತ್ರ**– ತಾರೆ

**ನಕ್ಷತ್ರಜ್ಯೋತಿ** – ನಕ್ಷತ್ರದ ಬೆಳಕು

**ನಕ್ಷತ್ರಪಾಠಕ** – ಜ್ಯೋತಿಷಿ

**ನಕ್ಷತ್ರಮಾಲೆ** – ನಕ್ಷತ್ರಸಮೂಹ; ಇಪ್ಪತ್ತೇಳು ಎಳೆಗಳ ಮುತ್ತಿನ ಕಂಠೀಹಾರ

**ನಕ್ಷತ್ರವೀಧಿ** – ಆಕಾಶ

**ನಕ್ಷತ್ರೋದಯ** – ನಕ್ಷತ್ರ ಕಾಣಿಸಿಕೊಳ್ಳುವುದು

**ನಖ** – ಉಗುರು

**ನಖಂಪಚ**– ಉಗುರು ಬೆಚ್ಚಗಿನ

**ನಖದೀಪ್ತಿ** – ಉಗುರಿನ ಕಾಂತಿ

**ನಖನಿಕಾಯ** – ಉಗುರುಗಳ ಪಂಕ್ತಿ

**ನಖಪುಟ** – ಗೊರಸು

**ನಖಪ್ರಹಾರ** – ಉಗುರು ಅಥವಾ ಪಂಜದಿಂದಾದ ಪೆಟ್ಟು

**ನಖಮಯೂಖ** – ನಖದೀಪ್ತಿ

**ನಖರ** – ಪ್ರಾಣಿಗಳ ಪಂಜ

**ನಖರಚ್ಛಾಯೆ** – ನಖದೀಧಿತಿ

**ನಖರಾಯುಧ** – ಪಂಜವೇ ಆಯುಧವಾಗಿರುವ, ಸಿಂಹ, ಹುಂಜ

**ನಖರುಚಿ** – ನಖರದೀಪ್ತಿ

**ನಖವ್ರಣ** – ಚಿವುಟುವುದರಿಂದಾದ ಗಾಯ

**ನಖಹತಿ** – ನಖವ್ರಣ
**ನಖಾಂಕ** – ಉಗುರಿನಿಂದಾದ ಗುರುತು
**ನಖಾಂಶು** – ನಖರದೀಪ್ತಿ
**ನಖಾಕ್ಷಿಪ್ತ** – ಉಗುರಿನಿಂದ ಮಿಡಿದ
**ನಖಾನಖಿ** – ಉಗುರುಗಳಿಂದ ಮಾಡುವ ಕಾದಾಟ
**ನಗ** – ಚಲಿಸದಿರುವುದು, ಬೆಟ್ಟ; ಮರ
**ನಗಕುಳ** – ಬೆಟ್ಟಗಳ ಗುಂಪು
**ನಗಚೂಳ** – ಬೆಟ್ಟದ ಶಿಖರ
**ನಗಜೆ** – ಪರ್ವತಪುತ್ರಿ, ಗಿರಿಜೆ
**ನಗಧರ** – ಬೆಟ್ಟವನ್ನು ಎತ್ತಿದವನು, ಕರಷ್ಣ
**ನಗದನಿ** – ಬೆಟ್ಟದ ಮಾರ್ದನಿ
**ನಗನಂದನ** – ಬೆಟ್ಟದ ಮೇಲಣ ಉದ್ಯಾನ
**ನಗಪ** – ಪರ್ವತರಾಜ, ಹಿಮವಂತ
**ನಗಪತಿ** – ನಗಪ
**ನಗಯಜ್ಞ** – ಪರ್ವತಪೂಜೆ
**ನಗರ** – ಪಟ್ಟಣ
**ನಗರಿಪು** – ಪರ್ವತಗಳ ಶತ್ರು, ಇಂದ್ರ
**ನಗವೃಂದಾಧಿಪ** – ನಗಪ
**ನಗವೈರಿ** – ನಗರಿಪು
**ನಗಶಿಖರ** – ಬೆಟ್ಟದ ತುದಿ
**ನಗಸಾನು** – ಬೆಟ್ಟದ ತಪ್ಪಲು
**ನಗಾಗ್ರ** – ಬೆಟ್ಟದ ತುದಿ
**ನಗಾಗ್ರಣಿ** – ಪರ್ವತಶ್ರೇಷ್ಠ
**ನಗಾತ್ಮಜೇಶ್ವರ** – ಶಿವ
**ನಗಾಧೀಶ್ವರ** – ಪರ್ವತರಾಜ
**ನಗಾರಿ** – ನಗ+ಅರಿ, ನಗವೈರಿ, ಇಂದ್ರ
**ನಗಾರ್ಚನೆ** – ನಗಯಜ್ಞ
**ನಗಾಹಿತ** – ನಗ+ಅಹಿತ, ಇಂದ್ರ
**ನಗಿಸು** – ನಗುವಂತೆ ಮಾಡು
**ನಗು** – ಪರಿಹಾಸ; ನಗುವಿಕೆ
**ನಗುಮೊಗ** – ನಗುವ ಮುಖ
**ನಗೆ** – ನಗುವಿಕೆ; ಪರಿಹಾಸ
**ನಗೆಗಡಲ್** – ನಗುವಿನ ಸಮುದ್ರ, ತುಂಬ ನಗೆ
**ನಗೆಗಣ್** – ನಗುವ ಕಣ್ಣು
**ನಗೆಗಣ್ನೋಟ** – ನಗೆಗಣ್ಣ ನೋಟ
**ನಗೆಗಾಱ** – ನಗಿಸುವವನು; ವಿದೂಷಕ
**ನಗೆಮಾಡು** – ಹಾಸ್ಯಮಾಡು
**ನಗೆಮೊಗ** – ನಗುಮೊಗ
**ನಗೆಯೊಡಲಾತ** – ಇಂದ್ರ
**ನಗೆವಡಿಕಾಱ** – ಹಾಸ್ಯಗಾರ
**ನಗೆವೀಱು** – ನಗುವನ್ನು ಸೂಸು
**ನಗೆವೆಳಗು** – ನಗೆಯ ಕಾಂತಿ
**ನಗೆವೆಳ್ಪು** – ನಗೆವೆಳಗು
**ನಗೇಂದ್ರ** – ಪರ್ವತರಾಜ
**ನಗೇಂದ್ರಧೈರ್ಯ** – ಬೆಟ್ಟದಂತಹ ಕೆಚ್ಚು
**ನಗೇಂದ್ರಮೂಲ** – ಬೆಟ್ಟದ ತಪ್ಪಲು
**ನಗೇಂದ್ರಯಜ್ಞ** – ನಗಯಜ್ಞ
**ನಗೋತ್ಸಂಗ** – ಬೆಟ್ಟದ ತಪ್ಪಲು
**ನಗೋಪಕಂಠ** – ಪರ್ವತದ ಸನಿಹ
**ನಗೋಪತ್ಯಕ** – ಬೆಟ್ಟದ ತಪ್ಪಲು
**ನಗೋಪರಿಮತಲ** – ನಗ+ಉಪರಿಮತಲ, ಪರ್ವತಶಿಖರ
**ನಚ್ಚಣಿ(ಗೆ)** – ನರ್ತಕಿ
**ನಚ್ಚಣಿಗ** – ನರ್ತಕ
**ನಚ್ಚು(ರ್ಚು)** – ನಂಬು; ನಂಬಿಕೆ, ನಚ್ಚಿಕೆ; ಮೋಹ
**ನಚ್ಚುಗಿಡಿಸು** – ನಂಬಿಕೆ ಕೆಡಿಸು
**ನಚ್ಚುಗೆಡು** – ನಚ್ಚಿಕೆ ಹಾಳಾಗು
**ನಚ್ಚುವೋಗು** – ನಂಬಿಕೆಗೆ ಪಾತ್ರವಾಗು
**ನಟ** – ನರ್ತಕ; ಅಭಿನಯಿಸುವವನು; ಈಶ್ವರ
**ನಟಣೆಗೊಳ್** – ನರ್ತಿಸತೊಡಗು
**ನಟರುದ್ರ** – ನಟರಾಜ
**ನಟಿಯಿಸು** – ನರ್ತಿಸು; ಅಭಿನಯಿಸು
**ನಟ್ಟ(ಟ್ಟೆ)ಗೊಂಬು** – ನಡುವಣ ಕೊಂಬೆ
**ನಟ್ಟಡವಿ** – ಅಡವಿಯ ಮಧ್ಯ
**ನಟ್ಟನಡು** – ಸರಿಯಾಗಿ ನಡುವೆ
**ನಟ್ಟನಡುವಗಲ್** – ಸರಿಯಾಗಿ ನಡುಹಗಲು
**ನಟ್ಟನಡುವಿರುಳ್** – ಸರಿಯಾಗಿ ನಡುರಾತ್ರಿ
**ನಟ್ಟನಡುವೆ** – ಸರಿಯಾಗಿ ನಡುವೆ
**ನಟ್ಟವಳ** – ನರ್ತಕ; ಅಭಿನಯಕಾರ
**ನಟ್ಟವಿಸಿಲ್** – ನಡುಹಗಲ ಬಿಸಿಲು
**ನಟ್ಟಾೞ** – ತೀರ ಆಳ
**ನಟ್ಟಿ** – (ನಷ್ಟಿ) ನಷ್ಟ ಹೊಂದಿದವನು
**ನಟ್ಟಿಗಂಪು** – ನಾಟಿ ಮಾಡಿದ ಸಸಿಯ ಕಂಪು
**ನಟ್ಟಿರುಳ್** – ಮಧ್ಯರಾತ್ರಿ
**ನಟ್ಟುವ** – ನರ್ತಕ
**ನಟ್ಟೆವಾನ್** – ಆಕಾಶದ ನಡುವೆ
**ನಡ(ಡೆ)ಪಾಡು** – ಓಡಾಡು
**ನಡ(ಡೆ)ಪು** – ಸಲಹು
**ನಡಿಸು** – ನಾಟಿಸು, ಹುಗಿಸು
**ನಡು** – ಸ್ಥಾಪಿಸು; ನಾಟಿಮಾಡು; ಚುಚ್ಚು; ಮಧ್ಯಭಾಗ; ಸೊಂಟ
**ನಡುಕ** – ಕಂಪನ
**ನಡುಕಂಗಿಡು** – ಕಂಪನ ನಿಲ್ಲು
**ನಡುಕಂಗೊಳ್** – ನಡುಗಲು ತೊಡಗು
**ನಡುಗಂಭ** – ಮಧ್ಯದ ಕಂಬ
**ನಡುಗಟ್ಟು** – ಸೊಂಟಕ್ಕೆ ಬಟ್ಟೆ ಕಟ್ಟು; ಸೊಂಟಪಟ್ಟಿ
**ನಡುಗಡಲ್** – ಕಡಲ ನಡುವೆ
**ನಡುಗು** – ಕಂಪಿಸು; ಹೆದರು
**ನಡುಗೇರಿ** – ಕೇರಿಯ ನಡುವೆ
**ನಡುಗೋಲ್** – ಬಾಣದ ಮಧ್ಯಭಾಗ
**ನಡುದಲೆ** – ನೆತ್ತಿ; ತಲೆಯ ನಡುಭಾಗ
**ನಡುನಾಡು** – ನಾಡ ನಡುಭಾಗ
**ನಡುನೀರ್** – ನೀರಿನ ನಡುವೆ
**ನಡುಬೆನ್** – ಬೆನ್ನ ನಡುವಣ ಭಾಗ

**ನಡುಮಾಳ** – ಮಾಳದ (ಮೈದಾನದ) ನಡುಭಾಗ
**ನಡುವಗಲ್** – ಹಗಲಿನ ನಡುವಣಭಾಗ
**ನಡುವಣ** – ಮಧ್ಯದ
**ನಡುವನೆ** – ನಡುಮನೆ, ಮನೆಯ ನಡುಭಾಗ
**ನಡುವಾಯ್** – ನಡುವೆ ಹೋಗು
**ನಡುವಿರುಳ್** – ಮಧ್ಯ ರಾತ್ರಿ
**ನಡುವೀದಿ** – ಬೀದಿಯ ಮಧ್ಯೆ
**ನಡುವು** – ಮಧ್ಯಭಾಗ
**ನಡುವೆ** – ಮಧ್ಯದಲ್ಲಿ
**ನಡುವೊಗು** – ಮಧ್ಯೆ ಹೋಗು
**ನಡುಸೂಲ್** – ಹೆರಿಗೆಯ ನಡುಸಮಯ
**ನಡುಸೆಱಂಗು** – ಸೆರಗಿನ ನಡುಭಾಗ; ಮಡಿಲು
**ನಡೆ** – ಹೆಜ್ಜೆ ಹಾಕಿ ಮುಂದುವರಿ; ಚಲಿಸು; ನಡಿಗೆ; ನಡತೆ; ಚೆನ್ನಾಗಿ
**ನಡೆಗಲ್** – ನಡೆಯುವುದನ್ನು ಕಲಿ
**ನಡೆಗಲಿ** – ನಡೆಯುವ (ನುಗ್ಗುವ) ಶೂರ
**ನಡೆಗಟ್ತಿ** – (ಭಾರ ಹೊತ್ತು) ನಡೆಯುವ ಕತ್ತೆ
**ನಡೆಗೆ(ಗಿ)ಡು** – ನಡೆಯಲಾಗದಂತಾಗು; ನಡಿಗೆಯ ಕ್ರಮತಪ್ಪು
**ನಡೆಗೊಳ್** – ಮುಂದುವರಿ; ಹೊರಡು
**ನಡೆಗೊಳಸು** – ನಡೆಯುವಂತೆ ಮಾಡು
**ನಡೆಗೋಂಟೆ** – ನಡೆಯುವ ಕೋಟೆ; ಒಂದು ಸೈನ್ಯವ್ಯೂಹ
**ನಡೆಜಂತ್ರ** – ನಡೆದಾಡುವ ಯಂತ್ರ
**ನಡೆತರ್** – ಬರು
**ನಡೆಪಾಡು** – ಸಂಚರಿಸು
**ನಡೆಮಾಡ** – ನಡೆಯುವ ಮಾಡ; ವಿಮಾನ
**ನಡೆವಳ** – ನಡವಳಿಕೆ
**ನಡೆವಳಕಾಱ** – ಮೇಲ್ವಿಚಾರಕ
**ನಡೆಸಾರ** – ಏರುವ ಸಾಧನ
**ನಣ್ಪು** – ಬಾಂಧವ್ಯ, ನಂಟಸ್ತಿಕೆ
**ನಣ್ಪುಗೆಯ್** – ಬಾಂಧವ್ಯ ಉಂಟುಮಾಡು
**ನಣ್ಪುವೆಱು** – ಸಂಬಂಧ ಹೊಂದು; ನಂಬಿಕೆ ಪಡೆ
**ನತ** – ಬಾಗಿದ; ಶರಣಾದ; ನಮಸ್ಕರಿಸಿದ
**ನತಚುಂಚು** – ಬಾಗಿದ ಕೊಕ್ಕು
**ನತರಕ್ಷಾಚತುರ** – ಶರಣಾದವರನ್ನು ರಕ್ಷಿಸುವುದರಲ್ಲಿ ಚತುರನಾದವನು
**ನತಾಸ್ಯ** – ಬಾಗಿದ ಮುಖವುಳ್ಳವನು
**ನತಿ** – ಬಾಗಿರುವಿಕೆ
**ನದ** – ಶಬ್ದ; (ರಭಸವಾಗಿ ಹರಿಯುವ) ಗಂಡುತೊರೆ
**ನದಿ** – ಹೊಳೆ
**ನದಿಪು** – ಆರಿಸು, ನಂದಿಸು
**ನದೀಚರ** – ನದಿಯಲ್ಲಿ ಚಲಿಸುವುದು
**ನದೀಜ** – ನದಿಯಲ್ಲಿ ಹುಟ್ಟಿದ; ಭೀಷ್ಮ
**ನದೀಜಾತ** – ನದೀಜ
**ನದೀತನೂಜ** – ನದೀಜ
**ನದೀತರಣ** – ನದಿಯನ್ನು ದಾಟುವುದು
**ನದೀತೀರ** – ಹೊಳೆಯ ದಡ
**ನದೀನಂದನ** – ನದೀಜ
**ನದೀನಾಥ** – ನದಿಗಳ ಒಡೆಯ, ಸಮುದ್ರ; (ಜೈನ) ಒಂದು ಕಾಲಪ್ರಮಾಣ
**ನದೀನಿಕಟ** – ನದಿಯ ಹತ್ತಿರದ
**ನದೀಪೂರ** – ನದಿಯ ಪ್ರವಾಹ
**ನದೀಮಾತೃಕ** – ನದಿ ನೀರಿನಿಂದ ಕೃಷಿಗೊಳ್ಳು ಭೂಮಿ
**ನದೀಸುತ** – ನದೀಜ
**ನದೀಸೂನು** – ನದೀಜ
**ನದೀಹ್ರದ** – ನದಿಯಲ್ಲಿನ ಮಡು
**ನದುಗು** – ವಿಮುಖನಾಗು
**ನದ್ಧ** – ಬದ್ಧನಾದ
**ನದ್ಯುತ್ತರಣ** – ನದಿ+ಉತ್ತರಣ, ನದಿಯ ದಾಟುವಿಕೆ
**ನನಸು** – ನೆನಸು, ದಿಟ
**ನನಾಂದೃ** – ನಾದಿನಿ
**ನನೆ** – ಒದ್ದೆಯಾಗು; ಮೊಗ್ಗು; ಹೂಬಿಡು
**ನನೆಕೇರ್** – ಮೊಗ್ಗಿನಿಂದಾದ ಗೋಡೆ
**ನನೆಕೊನೆ** – ಮೊಳಕೆ
**ನನೆಕೊನೆಯಾಗು** – ಅರಳು
**ನನೆಕೊನೆಯೇಱು** – ಚಿಗುರಿಡು
**ನನೆಕೊನೆವೋಗಿಸು** – ಅರಳುವಂತೆಮಾಡು; ಸಂತಸಗೊಳಿಸು
**ನನೆಕೊನೆವೋಗು** – ಚಿಗುರು; ಸಂತಸದಿಂದ ಉಬ್ಬು
**ನನೆಗಣೆ** – ಹೂವಿನ ಬಾಣ
**ನನೆಗಣೆಯ** – ಹೂವಿನ ಬಾಣದವನು, ಮನ್ಮಥ
**ನನೆಗುದಿಗೊ** – ತಳಮಳಿಸು
**ನನೆಗೊಂಬು** – ಹೂತುಂಬಿದ ಕೊಂಬೆ
**ನನೆಗೊಯ್** – ಹೂಬಿಡಿಸು
**ನನೆಗೋಲ್** – ನನೆಗಣೆ
**ನನೆಗೋಲ** – ನನೆಗಣೆಯ
**ನನೆದೊಡಿಗೆ** – ಹೂವಿನ ಆಭರಣ
**ನನೆದೋಱು** – ಹೂಬಿಡಲು ತೊಡಗು
**ನನೆಗಾಱು** – ಹೂವಿನ ಕಂಪಿನಿಂದ ತುಂಬು
**ನನೆಮುಗುಳ್** – ಕಾಯಿ ಮೊಗ್ಗು
**ನನೆಮೊನೆಯಾಗು** – ಚಿಗುರು
**ನನೆಯಂಬ** – ನನೆಗಣೆಯ
**ನನೆಯಂಬು** – ಹೂಬಾಣ
**ನನೆಯಕೋಲ್** – ಹೂಬಾಣ
**ನನೆಯ ಸರಲ್** – ಹೂಬಾಣ
**ನನೆಯೆಸಳ್** – ಹೂವಿನ ಪಕಳೆ
**ನನೆಯೇಱು** – ಹೂಗಳಿಂದ ಕೂಡು
**ನನೆಯೊತ್ತು** – ಅರಳು
**ನನೆಲತೆ** – ಹೂಬಿಟ್ಟ ಬಳ್ಳಿ
**ನನೆವಾಸು** – ಹೂವಿನ ಹಾಸಿಗೆ; ತೊಯ್ದ ಹಾಸಿಗೆ
**ನನೆವಿಲ್** – ಹೂವಿನ ಬಿಲ್ಲು

**ನನೆವಿಲ್ಲ** – ಹೂಬಾಣವುಳ್ಳವನು, ಕಾಮ
**ನನೆವಿಲ್ಲ ಬಲ್ಲಹ** – ಹೂಬಿಲ್ಲಿನ ಒಡೆಯ, ಮನ್ಮಥ
**ನನೆವೂ** – ಅರಳಿದ ಹೂ
**ನನೆವೂದುಱುಗಲ್** – ಅರಳಿದ ಹೂಗಳ ಗೊಂಚಲು
**ನನೆವೆರಸು** – ಹೂಗಳಿಂದ ತುಂಬಿರು
**ನನೆವೆಱು** – ಹೂಬಿಡು
**ನನೆವೊಯ್** – ಚಿಗುರು
**ನನೆವೊಱೆ** – ಹೂವಿನ ಹೊರೆ; ಹೂವಿನ ಭಾರ
**ನನೆವೋಗು** – ಮೊಗ್ಗು ಬಿಡು
**ನನ್ನಿ** – ಸತ್ಯ
**ನನ್ನಿಕಾಱ** – ಸತ್ಯವಂತ
**ನನ್ನಿಗ** – ನನ್ನಿಕಾಱ
**ನನ್ನಿಗೊಡು** – ಮಾತು ಕೊಡು
**ನನ್ನಿಗೊಳ್** – ಮಾತು ಪಡೆ
**ನನ್ನಿವಾತು** – ಸತ್ಯದ ನುಡಿ; ಪ್ರತಿಜ್ಞೆ
**ನಪುಂಸಕ** – ಷಂಡ
**ನಪುಂಸಕವೇದ** – (ಜೈನ) ಸ್ತ್ರೀ–ಪುರುಷ ಎರಡೂ ಭಾವನೆಗಳಿಲ್ಲದಂತಾಗುವ ಸ್ಥಿತಿ; ಒಂದು ಬಗೆಯ ನೋಕಷಾಯ; ಮೂರು ಬಗೆಯ ವೇದಗಳಲ್ಲಿ ಒಂದು–
**ನಪ್ತೃ** – ಮೊಮ್ಮಗ
**ನಭ** – ಆಕಾಶ
**ನಭಃಪಯೋಜ** – ಆಕಾಶದ ಕಮಲ; ಗಗನಕುಸುಮ
**ನಭಃಪ್ರಸೃತಿ** – ಮೋಡದ ರಾಶಿ
**ನಭಶ್ಚರ(ಪತಿ)** – ಗಗನಗಾಮಿ, ವಿದ್ಯಾಧರ(ರಾಜ)
**ನಭಶ್ಚರಾನ್ವಯ** – ಖೇಚರವಂಶ
**ನಭಶ್ಚರೇಂದ್ರ** – ಖೇಚರರಾಜ
**ನಭಸ್ಥಲ** – ಆಕಾಶ
**ನಭಸ್ಫಟಿಕ** – ಪಾರದರ್ಶಕ ಸ್ಫಟಿಕ
**ನಭೋಂಗಣ** – ನಭಃ+ಅಂಗಣ, ಗಗನತಳ
**ನಭೋಗಮನ** – ಆಕಾಶಗಮನ
**ನಭೋನಗರಹರಣ** – ಆಕಾಶದಲ್ಲಿನ (ತ್ರಿ)ಪುರಗಳನ್ನು ನಾಶಮಾಡಿದವನು, ಶಿವ
**ನಭೋಭಾಗ** – ನಭಸ್ಥಲ
**ನಭೋಮಂಡಲ** – ಗಗನಮಂಡಲ
**ನಭೋಮಣಿ** – ಸೂರ್ಯ
**ನಭೋಮಾರ್ಗ** – ಮೇಘಮಾರ್ಗ, ಆಕಾಶ
**ನಭೋಯಾನ** – ಗಗನಯಾನ
**ನಭೋವಳಯ** – ನಭಸ್ಥಲ
**ನಮತ** – ಒಡೆಯ
**ನಮನ** – ಬಾಗುವುದು; ನಮಸ್ಕಾರ
**ನಮಸ್ಕರಿಸು** – ನಮಸ್ಕಾರಮಾಡು
**ನಮಸ್ಕಾರಂಗೆಯ್** – ನಮಸ್ಕರಿಸು
**ನಮಸ್ಕೃತಿ** – ನಮಸ್ಕಾರ
**ನಮಸ್ಕ್ರಿಯಾವಿಧಿ** – ನಮಸ್ಕಾರನಿಯಮ
**ನಮಸ್ತೇ** – ನಮಃ+ತೇ, 'ನಿನಗೆ ನಮಸ್ಕಾರ'
**ನಮಸ್ಯ** – ನಮಸ್ಕಾರಾರ್ಹ
**ನಮಿ** – (ಜೈನ) ಇಪ್ಪತ್ತೊಂದನೆಯ ತೀರ್ಥಂಕರ
**ನಮಿತ** – ಬಾಗಿದ
**ನಮೀಕೃತ** – ಬಾಗಿಸಿದ; ಶರಣಾಗಿಸಿದ
**ನಮೆ** – ಬಡವಾಗು; ಕೊರಗು
**ನಮೆಯಿಸು** – ಕೃಶಪಡಿಸು, ಕೊರಗಿಸು
**ನಮೇರು** – ಸುರಗಿ ಮರ, ಹೂ
**ನಮೇರುಕುಜ** – ನಮೇರು
**ನಮೇರುಕುಸುಮ** – ಸುರಗಿಹೂ
**ನಮೇರುಭೂಜ** – ನಮೇರು
**ನಮೋಸ್ತು** – ನಮಸ್ಕಾರ; (ಜೈನ) ಸನ್ಯಾಸಿ
**ನಮೋಸ್ತುಗೆಯ್** – ನಮಸ್ಕರಿಸು
**ನಮ್ರ** – ಬಾಗಿದ
**ನಮ್ರತೆ** – ನಮಸ್ಕರಿಸುವುದು
**ನಮ್ರತ್ವ** – ಬಾಗುವಿಕೆ, ನಮಸ್ಕರಿಸುವುದು
**ನಮ್ರಮೂರ್ತಿ** – ವಿನಯವಂತ
**ನಮ್ರಶಿರೋಧರ(ರೆ)** – ಕತ್ತನ್ನು ಬಾಗಿಸಿದವನು(ಳು)
**ನಯ** – ನುಣುಪು; ಸೊಗಸು; ನಾಜೂಕು; ರಾಜನೀತಿ; ನ್ಯಾಯ
**ನಯಂಗುಂದು** – ಕಳೆಗುಂದು
**ನಯಂಗೆಡು** – ಕಳೆಗೆಡು
**ನಯಂವಡೆ** – ಕಳೆಯನ್ನು ಪಡೆ
**ನಯಂಬೆಱು** – ನಯಂವಡೆ
**ನಯಕಾರ** – ನಯಗೊಳಿಸುವವನು
**ನಯಕ್ರಮ** – ರಾಜನೀತಿ ಕ್ರಮ
**ನಯಚಿತ್ತೆ** – ವ್ಯವಹಾರ ಚತುರೆ
**ನಯಜ್ಞ** – ರಾಜನೀತಿನಿಪುಣ
**ನಯಣ** – (ಜೈನ) ಗಿರಿತಪ್ಪಲಿನ ವಿಶ್ರಾಂತಿಗೃಹ
**ನಯನತ್ರಿಭಾಗ** – ಕುಡಿನೋಟ
**ನಯದಾಳ್** – ನಯ+ತಾಳ್, ನಯವನ್ನು ಪಡೆ
**ನಯನ** – ಗಮನ; ಕಣ್ಣು
**ನಯನಜಲ** – ಕಣ್ಣೀರು
**ನಯನತ್ರಿಭಾಗ** – ಕಡೆಗಣ್ಣು
**ನಯನಪುತ್ರಿಕೆ** – ಕಣ್ಣ ಪಾಪೆ
**ನಯನಪ್ರಭೆ** – ಕಣ್ಣ ಕಾಂತಿ
**ನಯನಯುಗಳ** – ಕಣ್ಣ ಜೋಡಿ
**ನಯನವಾರಿ** – ಕಣ್ಣೀರು
**ನುನವಿಹ್ವಲ** – ಕಂಗೆಟ್ಟವನು
**ನಯನಸುಮದರತೆ** – ಕಣ್ಣಿಗೆ ಅಂದವಾಗಿರುವುದು
**ನಯನಾಂಚಲ** – ಕಡೆಗಣ್ಣು
**ನಯನಾಂಜನ** – ಕಾಡಿಗೆ
**ನಯನಾಂಬು** – ಕಣ್ಣೀರು
**ನಯನಾಂಶು** – ಕಣ್ಣ ಕಾಂತಿ
**ನಯನಾಕರ್ಷಣವಿದ್ಯೆ** – ನೋಟ ಸೆಳೆಯುವ ಕಲೆ
**ನಯನಾನಂದ(ಕರ)** – ಕಣ್ಣಿಗೆ ಸಂತೋಷ (ತರುವ)
**ನಯನಾನಂದನ** – ಕಣ್ಣಿಗೆ ಸುಂದರವಾದ
**ನಯನಾಭಿರಾಮ** – ಕಣ್ಣಿಗೆ ಆಹ್ಲಾದಕಾರಿಯಾದ
**ನಯನಾಮೃತ** – ಕಣ್ಣಿಗೆ ಅಮೃತದಂತಿರುವ

**ನಯನಾಶ್ರು** – ಕಣ್ಣೀರು
**ನಯನಿಪುಣ** – ರಾಜನೀತಿ ಪರಿಣತ
**ನಯನೋತ್ಸವ)ಕರಿ** – ಕಣ್ಣಿಗೆ ಸುಖ (ತರುವ)
**ನಯನೋತ್ಸಾಹ** – ನೋಡಬೇಕೆಂಬ ಕಾತರ
**ನಯನೋನ್ಮಾದ** – ನೋಟ ತರುವ ಆನಂದಾತಿಶಯ
**ನಯಮೂರ್ತಿ** – ರಾಜನೀತಿಯ ಸಾಕಾರರೂಪ
**ನಯಯುಕ್ತ** – ನಯವನ್ನು ಬಲ್ಲವ
**ನಯವಾದ** – (ಜೈನ) ಸಮ್ಯಜ್ಞಾನ ಪಡೆಯಲು ವಸ್ತುವಿನ ಪ್ರತಿ ಅಂಶವನ್ನೂ ಗ್ರಹಿಸುವುದು
**ನಯವಿದ** – ನಯವಂತ
**ನಯವಿದ್ಯಾವಿದ** – ನೀತಿಶಾಸ್ತ್ರ ನಿಪುಣ
**ನಯವಿನಿಮಯ** – ಪರಸ್ಪರ ನೀತಿ ಅರಿಯುವುದು
**ನಯಶಾಲಿ** – ನಯನಿಪುಣ
**ನಯಶಾಸ್ತ್ರ** – ರಾಜನೀತಿಶಾಸ್ತ್ರ
**ನಯಸಂಪನ್ನ** – ನಯದ ನಿಧಿಯಂತಿರುವವನು
**ನಯಹೀನ** – ಸೌಜನ್ಯರಹಿತನಾದವನು
**ನಯಾಂಕವಯಸ್ಕ** – ರಾಜನೀತಿ ಬಲ್ಲ ಮಾತುಗಾರ
**ನಯಾಗಮ** – ರಾಜನೀತಿಶಾಸ್ತ್ರ
**ನಯೋದಯ** – ರಾಜನೀತಿಯ ಏಳಿಗೆ
**ನರ** – ಮನುಷ್ಯ; ಅರ್ಜುನನ ಒಂದು ಹೆಸರು
**ನರಕ** – ಸಾವಿನನಂತರ ಪಾಪಗಳಿಗೆ ಶಿಕ್ಷೆ ಪಡೆಯುವ ಸ್ಥಳ; (ಜೈನ) ಏಳು ಬಗೆಯ ನರಕಗಳು: ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ, ಮಹಾತಮಪ್ರಭೆ
**ನರಕಂಬುಗು** – ನರಕಕ್ಕೆ ಹೋಗು
**ನರಕಗತಿ** – ನರಕವಾಸ; (ಜೈನ) ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು, ಇದರಿಂದ ನಾರಕೀಯ ಅವಸ್ಥೆ ಉಂಟಾಗುತ್ತದೆ
**ನರಕದುಃಖ** – ನರಕದ ಶಿಕ್ಷೆಯಿಂದಾಗುವ ಸಂಕಟ
**ನರಕನಿಳಯ** – ನರಕವೆಂಬ ಸ್ಥಳ
**ನರಕಬಿಲ** – (ಜೈನ) ನರಕ ಎಂಬ ಬಿಲ
**ನರಕಭೂಮಿ** – ನರಕಲೋಕ
**ನರಕಸ್ಥಾನ** – ನರಕಭೂಮಿ
**ನರಕಾಂತಕ** – ನರಕನೆಂಬ ರಾಕ್ಷಸನನ್ನು ಕೊಂದವನು, ಕೃಷ್ಣ; (ಜೈನ) ವಾಸುದೇವ
**ನರಕಾಗ್ನಿ** – ನರಕದಲ್ಲಿ ಶಿಕ್ಷಿಸಲು ಬಳಸುವ ಬೆಂಕಿ
**ನರಕಾಯುಷ್ಯ** – (ಜೈನ) ನರಕವಾಸದ ಅವಧಿ
**ನರಕಾರಿ** – ಕೃಷ್ಣ
**ನರಕಾವಸ್ಥೆ** – ನರಕವಾಸ
**ನರಕಾಸುರ** – ನರಕ ಎಂಬ ಹೆಸರಿನ ರಾಕ್ಷಸ
**ನರಕೀಟ** – ಕ್ಷುದ್ರ ಮನುಷ್ಯ
**ನರಡು** – ದನಗಳಿಗೆ ಬರುವ ಒಂದು ರೋಗ
**ನರತ್ವ** – ಮನುಷ್ಯನಾಗಿರುವಿಕೆ
**ನರನಂದನ** – ಅರ್ಜುನನ ಮಗ, ಅಭಿಮನ್ಯು
**ನರನಾಥ** – ರಾಜ
**ನರನಾಥಾಗ್ರಣಿ** – ರಾಜಶ್ರೇಷ್ಠ
**ನರನಾಯಕ** – ರಾಜ
**ನರಪ** – ದೊರೆ
**ನರಪತಿ** – ನರಪ
**ನರಪತಿತನಯ** – ರಾಜಕುಮಾರ
**ನರಪಾಲ** – ಜನರನ್ನು ರಕ್ಷಿಸುವವನು, ರಾಜ
**ನರಬಲ** – ಪದಾತಿಸೈನ್ಯ
**ನರಮಹಿತ** – ಜನರ ಗೌರವಕ್ಕೆ ಪಾತ್ರನಾದವನು
**ನರಲ್** – ವೇದನೆಯ ಧ್ವನಿ ಮಾಡು
**ನರಲೋಕ** – ಮನುಷ್ಯರ ಲೋಕ; ಭೂಲೋಕ
**ನರಲೋಕದಲ್ಲಟಿ** – ಭೂಲೋಕವನ್ನೇ ತಲ್ಲಣಗೊಳಿಸುವವನು
**ನರಲೋಕಚಂದ್ರ** – ಭೂಲೋಕಕ್ಕೆ ಚಂದ್ರನಂತಿರುವವನು
**ನರವಕ್ತ್ರ** – ಮನುಷ್ಯನ ಮುಖವುಳ್ಳ, ಪ್ರಮಥರಲ್ಲಿ ಒಬ್ಬ
**ನರವರ** – ನರಶ್ರೇಷ್ಠ
**ನರವಾಹ(ನ)** – ಮನುಷ್ಯನನ್ನು ವಾಹನವಾಗಿ ಪಡೆದವನು, ಕುಬೇರ
**ನರವು** – ಸ್ನಾಯುರಜ್ಜು; ಸ್ನಾಯುವನ್ನು ಮೂಳೆಗೆ ಸೇರಿಸುವ ಅಂಗಾಂಶ; ನರ
**ನರವೈದ್ಯ** – ಮಾನವವೈದ್ಯ
**ನರಶಾಸನ** – ಶಾಸನದ ಮನುಷ್ಯರೂಪ
**ನರಸಮಿತಿ** – ಜನಸಮೂಹ
**ನರಸಿಂಹ** – ವಿಷ್ಣುವಿನ ಮನುಷ್ಯ ದೇಹ ಹಾಗೂ ಸಿಂಹದ ಮುಖವುಳ್ಳ ನಾಲ್ಕನೆಯ ಅವತಾರ
**ನರಸಿಂಹಾಡಂಬರ** – ನರಸಿಂಹನ ಆಟೋಪ
**ನರಸುತ** – ಅರ್ಜುನನ ಮಗ, ಅಭಿಮನ್ಯು
**ನರಸೇವೆ** – ಮನುಷ್ಯಸೈನ್ಯ
**ನರಾಕೃತಿ** – ಮನುಷ್ಯ ರೂಪ
**ನರಾಧೀಶ** – ರಾಜ
**ನರಿ** – ಜಂಬುಕ
**ನರುವಾಯ** – ಒಂದು ಬಗೆಯ ಬಾಣ(?)
**ನರೆ** – ಬಿಳಿಗೂದಲು; ಮುಪ್ಪು
**ನರೆದಲೆ** – ನರೆತಕೂದಲಿರುವ ತಲೆ
**ನರೆಪ** – ಕೂದಲು ನರೆತವನು; ಮುದುಕ
**ನರೆಯೇಱು** – ಕೂದಲು ಬೆಳ್ಳಗಾಗು; ಮುಪ್ಪಾಗು
**ನರೇಂದ್ರ** – ರಾಜ
**ನರೇಂದ್ರಚಂದ** – ರಾಜರಲ್ಲಿ ಚಂದ್ರನಂತಿರುವವನು
**ನರ್ತಕ** – ನೃತ್ಯಗಾರ
**ನರ್ತಕಾಳ** – ನೃತ್ಯಗಾರರ ಸಮೂಹ
**ನರ್ತಕಿ** – ನೃತ್ಯಗಾತಿ; (ಜೈನ) ಸೌಧರ್ಮೇಂದ್ರನ ಏಳು ಸೇನಾಂಗಗಳಲ್ಲಿ ಒಂದು; ನೋಡಿ, 'ಸಪ್ತಾನೀಕ'
**ನರ್ತನ** – ನೃತ್ಯ, ಕುಣಿತ
**ನರ್ತನಗೃಹ** – ನಾಟ್ಯಶಾಲೆ
**ನರ್ತಿಸು** – ಕುಣಿ, ನೃತ್ಯಮಾಡು

**ನರ್ದನ** – ದನಗಳ ಗುಟುರು
**ನರ್ಮ** – ಆಟ; ವಿನೋದ
**ನರ್ಮಗೋಷ್ಠಿ** – ವಿನೋದಗೋಷ್ಠಿ
**ನರ್ಮಸಚಿವ** – ರಾಜನ ಆಪ್ತ, ಸಖ
**ನರ್ಮಸಹಾಯ** – ನರ್ಮಸಚಿವ
**ನರ್ಮಾಲಾಪ** – ವಿನೋದದ ಮಾತು, ಹರಟೆ
**ನಲವರಕೆ** – ಪ್ರೀತಿಯ ಆಶೀರ್ವಾದ
**ನಲವರಿ** – ಸಂತಸಗೊಳ್ಳು
**ನಲವು** – ಸಂತಸ; ಪ್ರಿತಿ
**ನಲವುಗೆಡು** – ಸಂತಸ ಕಳೆದುಕೊ
**ನಲವೇಱು** – ಸಂತಸ ಹೊಂದು
**ನಲಿ** – ಸಂತಸಗೊಳ್ಳು; ಕುಣಿ
**ನಲಿದಾಡು** – ಸಂತಸದಿಂದ ಕುಣಿದಾಡು
**ನಲಿಗರ್ಚು** – ಪ್ರೀತಿಯಿಂದ ಕಚ್ಚು; ದಂತಕ್ಷತ
**ನಲಿಗಱಿ** – ಪ್ರೀತಿಯಿಂದ ಕಚ್ಚಿದುದರ ಕಲೆ
**ನಲಿಗೆದಱು** – ಸಂತೋಷದಿಂದ ಬೆದಕು
**ನಲಿಯಿಸು** – ಸಂತಸಗೊಳಿಸು
**ನಲಿವರಿ** – ಸಂತಸದಿಂದ ಓಡಾಡು
**ನಲಿವಾಱಿಸು** – ಸಂತಸದಿಂದ ಕುಣಿದಾಡುವಂತೆ ಮಾಡು
**ನಲಿವಾಱು(ವಾಱು)** – ಹಿಗ್ಗಿನಿಂದ ಹಾರು
**ನಲಿವು** – ಸಂತೋಷ
**ನಲ್ಗಳಲ್** – ರುಚಿಯಾದ ಮಜ್ಜಿಗೆ
**ನಲ್ಗಳವು** – ಹೆಚ್ಚು ಸಂಪಾದನೆಯ ಕಳ್ಳತನ
**ನಲ್ಗಾಡಿ** – ಮೋಹಕ ಚೆಲುವು
**ನಲ್ಗುಟುಕು** – ಸವಿಯಾದ ಗುಟುಕು
**ನಲ್ಗುನಿಗುಂಜಿ** – ಒಳ್ಳೆಯ ಗುಲಗಂಜಿ
**ನಲ್ಗೆಳೆಯ** – ಪ್ರೀತಿಯ ಗೆಳೆಯ
**ನಲ್ಗೊಣಸು** – ಮೋಹಕ ಜಿಂಕೆಮರಿ
**ನಲ್ಜವ್ವನೆ** – ಯುವಸುಂದರಿ
**ನಲ್ದಂಬುಲ** – ರುಚಿಕರವಾದ ತಾಂಬೂಲ
**ನಲ್ನುಡಿ** – ಒಳ್ಳೆಯ ಮಾತು
**ನಲ್ನೋಟ** – ಪ್ರೀತಿಪೂರ್ವಕ ನೋಟ
**ನಲ್ಮಿಸುನಿ** – ಅಪರಂಜಿ
**ನಲ್ಮೆ** – ಪ್ರೀತಿ; ಒಳಿತು
**ನಲ್ಮೆಗಾರ್ತಿ** – ನಲ್ಲೆ
**ನಲ್ಲ** – ಪ್ರಿಯಕರ; ಒಳ್ಳೆಯ
**ನಲ್ಲರ್** – ಹಿತವರು
**ನಲ್ಲಂಬು** – ಮೋಹದ ಬಾಣ
**ನಲ್ಲಮನಂದೋಱು** – ಪ್ರೀತಿ ತೋರಿಸು
**ನಲ್ಲಲರ್** – ಸುಂದರ ಹೂ
**ನಲ್ಲವರಕೆ** – ಶುಭ ಹಾರೈಕೆ
**ನಲ್ಲವಳ್** – ಪ್ರಿಯೆ
**ನಲ್ಲವೂ** – ನಲ್ಲಲರ್
**ನಲ್ಲವೊಣರ್** – ನಲ್ಲ+ಪೊಣರ್, ಪ್ರಿಯರ ಜೋಡಿ
**ನಲ್ಲುಣಿಸು** – ಸವಿಯಾದ ಊಟ
**ನಲ್ಲುಲಿ** – ಸವಿನುಡಿ
**ನಲ್ಲಳ್** – ಪ್ರಿಯೆ
**ನಲ್ಲೆತ್ತು** – ಶ್ರೇಷ್ಠ ಎತ್ತು
**ನಲ್ವಗೆಗೊಳ್** – ನಲ್+ಬಗೆಗೊಳ್, ಒಳ್ಳೆಯ ಮನಸ್ಸನ್ನು ಹೊಂದು
**ನಲ್ವಚ್ಚ** – ಸುಂದರ ಆಭರಣ
**ನಲ್ವರಕೆ** – ಶುಭ ಹರಕೆ
**ನಲ್ಸೊಗ** – ಅತೀವ ಸಂತೋಷ
**ನವ** – ಹಿಸದಾದ
**ನವಕ** – ಒಂಬತ್ತರ ಗುಂಪು
**ನವಕಂಟಕ** – ಹೊಸ ಮುಳ್ಳು
**ನವಕಮಲ** – ಹೊಸತಾಗಿ ಅರಳಿದ ತಾವರೆ
**ನವಕವಿತ್ವ** – ಹೊಸ ಕವಿತೆ
**ನವಖಂಡ** – ಒಂಬತ್ತು ತುಂಡುಗಳು; (ಜೈನ) ಇಂದ್ರ, ಶ್ವೇತ, ತಾಮ್ರ, ಗಭಸ್ತಿ, ನಾಗ, ಸೌಮ್ಯ, ಗಂಧರ್ವ, ಚಾರಣ, ಭರತ ಎಂಬ ಭೂಮಿಯ ಒಂಬತ್ತು ಭಾಗಗಳು
**ನವಗ್ರೈವೇಯಕ** – (ಜೈನ) ಸ್ವರ್ಗಗಳ ಮೇಲಿರು ಒಂಬತ್ತು ಕಲಾತೀತ ಸ್ವರ್ಗಗಳು: ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿತಾಳ, ಸುಮನಸ, ಸೌಮನಸ, ಪ್ರೀತಿಕರ
**ನವನಾರಕ** – ನರಕವನ್ನು ಹೊಸತಾಗಿ ಪ್ರವೇಶಿಸಿದವನು
**ನವನಿಧಿ** – (ಜೈನ) ಚಕ್ರವರ್ತಿಯ ಬಳಿ ಇರುವ ಕಾಳ(ನೀಲ), ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಮಾಣವಕ, ಶಂಖ, ಸರ್ವರತ್ನ ಎಂಬ ಒಂಬತ್ತು ರತ್ನಗಳು
**ನವನಿಧಿವಲ್ಲಭ** – ನವನಿಧಿಗಳಿಗೆ ಒಡೆಯ, ಚಕ್ರವರ್ತಿ
**ನವನಿಧಿಸನಾಥ** – ನವನಿಧಿವಲ್ಲಭ
ನವನೀತಚೋರ(ಕ) – ಬೆಣ್ಣೆಯ ಕಳ್ಳ, ಕೃಷ್ಣ–
**ನವನೀಲೋತ್ಪಲ** – ಹೊಸತಾಗಿ ಅರಳಿದ ಕನ್ನೈದಿಲೆ
**ನವನೋಕಷಾಯ** – (ಜೈನ) ಸುಖದುಃಖಗಳಿಗೆ ಕಾರಣವಾದ ಒಂಬತ್ತು ಕಿಂಚಿತ್ ಕಷಾಯಗಳು: ಹಾಸ್ಯ, ರತಿ, ಆರತಿ, ಶೋಕ, ಭತಯ, ಜಿಗುಪ್ಸೆ. ಸ್ತ್ರೀವೇದ, ಪುಂವೇದ, ನಪುಂಸಕವೇದ
**ನವಪಟವಾಸ** – ಹೊಸ ಸುಗಂಧದ ಪುಡಿ
**ನವಪದಾರ್ಥ** – (ಜೈನ) ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ ಎಂಬ ಒಂಬತ್ತು ತತ್ವಗಳು
**ನವಪಯೋದ** – ಹೊಸ ಮೋಡ
**ನವಪಿಷ್ಟಚರ್ಚಿಕೆ** – ಹೊಸ ಹಿಟ್ಟಿನ ಲೇಪ
**ನವಪುಷ್ಪಿತೆ** – ಹೊಸತಾಗಿ ಹೂ ಬಿಟ್ಟುದು; ಹೊಸತಾಗಿ ಋತುಮತಿಯಾದ ಹುಡುಗಿ
**ನವಪೇಟಕ** – ಹೊಸ ಪರಿವಾರ

**ನವಬಂಧ** – ನವಮನೋಕಷಾಯ
**ನವಭೂತಭಾಷೆ** – ಹೊಸ ಪೈಶಾಚಿಕ ಭಾಷೆ; ಹೊಸ ಮರುಳುಗಳ ಭಾಷೆ
**ನವಮ** – ಒಂಬತ್ತನೆಯ
**ನವಮಂಡನ** – ಹೊಸ ಆಭರಣ
**ನವಮಣಿ** – ನವರತ್ನಗಳು: ವಜ್ರ, ವೈಡೂರ್ಯ, ಗೋಮೇಧಕ, ಪುಷ್ಯರಾಗ, ನೀಲ, ಮರಕತ, ಮಾಣಿಕ್ಯ, ಹವಳ, ಮುತ್ತು
**ನವಮತಿ** – ಹೊಸತಾದ ಪ್ರತಿಭೆ
**ನವಮಾಲಿಕಾಲತೆ** – ಹೊಸ ಮಲ್ಲಿಗೆಯ ಬಳ್ಳಿ
**ನವಮಾಸ** – ಒಂಬತ್ತು ತಿಂಗಳೂ; ಗರ್ಭಧಾರಣೆಯ ಅವಧಿ
**ನವಮೀವಾಸರ** – ನವಮಿಯ ದಿನ
**ನವಮೇಘ** – ಹೊಸ ಮೋಡ
**ನವಯವ್ವನ** – ಏರುಜವ್ವನ
**ನವಯುವ** – ಏರುಜವ್ವನದವನು
**ನವಯುವತಿ** – ಏರುಜವ್ವನದವಳು
**ನವಯೌವನ** – ಹೊಸ ಹರಯ
**ನವಯೌವನಾಂಕ** – ನವಯೌವನ
**ನವಯೌವನೆ** – ನವಯುವತಿ
**ನವರಂಗ** – ದೇವಸ್ಥಾನದ ರಂಗಮಂಟಪ
**ನವರಕ್ತ** – ಹೊಸ ರಕ್ತ
**ನವರಕ್ತತೆ** – ಹೊಸತಾಗಿ ಮೂಡಿದ ಕೆಂಬಣ್ಣ
**ನವರತ್ನ** – ನವಮಣಿ
**ನವರತ್ನಕೂಟ** – ಒಂಬತ್ತೂ ರತ್ನಗಳನ್ನು ಅಳವಡಿಸಿದ ಶಿಖರ
**ನವರತ್ನಮಾಲೆ** – ನವರತ್ನಗಳ ಹಾರ
**ನವರತ್ನವರ್ಣಪೂರ** – ಬಣ್ಣಬಣ್ಣದ ಹಾಸು
**ನವರತ್ನಾಭರಣ** – ಒಂಬತ್ತೂ ರತ್ನಗಳನ್ನು ಅಳವಡಿಸಿದ ಆಭರಣ
**ನವರತ್ನೋಜ್ಜ್ವಲ** – ನವರತ್ನಗಳಿಂದ ಕಾಂತಿಯುಕ್ತವಾದ
**ನವರಸ** – ಒಂಬತ್ತು ರಸಗಳು: ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ
**ನವಲೋಹಿತ** – ಹೊಸ ರಕ್ತ
**ನವವಧು** – ನವಯುವತಿ
**ನವವಯಸ** – ಹೊಸ ಹರಯ
**ನವವರ** – ಮದುವಣಿಗ
**ನವವಾರಿದ** – ಹೊಸ ಮೋಡ
**ನವವಾಸರ** – ಒಂಬತ್ತು ದಿನಗಳು
**ನವವಿಧ** – ಒಂಬತ್ತು ಬಗೆ; ಹೊಸ ಬಗೆ
**ನವವಿಧಪುಣ್ಯ** – (ಜೈನ) ಚರಿಗೆ ನೀಡುವಾಗ ಅನುಸರಿಸಬೇಕಾದ ಒಂಬತ್ತು ಕ್ರಮಗಳು: ತ್ರಿಪ್ರದಕ್ಷಿಣೆ, ಉಚ್ಚಾಸನ ಸಮರ್ಪಣೆ, ಪಾದಪೂಜೆ, ಅರ್ಚನೆ, ಪ್ರಣಾಮ, ವಚನಶುದ್ಧಿ, ಕಾಯಶುದ್ಧಿ, ಮನಶ್ಶುದ್ಧಿ, ಏಷಣಾಶುದ್ಧಿ
**ನವವಿಧಬ್ರಹ್ಮಚರ್ಯ** – (ಜೈನ) ಮನಸ್ಸು, ದೇಹ, ಮಾತುಗಳಲ್ಲಿಯೂ ಕೃತ, ಕಾರಿತ, ಅನುಮೋದನ ಎಂಬ ಬಗೆಗಳು
**ನವವಿಧಭಕ್ತಿ** – ಭಕ್ತಿಯ ಒಂಬತ್ತು ಬಗೆಗಳು – ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ–
**ನವವಿವರ** – ನವದ್ವಾರ: ಕಣ್ಣುಗಳು, ಕಿವಿಗಳು, ಮೂಗಿನ ಹೊಳ್ಳೆಗಳು, ಬಾಯಿ, ಮೂತ್ರದ್ವಾರ, ಗುದದ್ವಾರ
**ನವವೈಜಯಂತಿ** – ಹೊಸ ಧ್ವಜ
**ನವವೈಯಾಕರಣ** – ಹೊಸ ವ್ಯಾಕರಣಪಂಡಿತ; ಹೊಸ ನಿಯಮಗಳನ್ನು ಜೋಡಿಸುವ ವ್ಯಾಕರಣಪಂಡಿತ
**ನವಶಶಿಕಳೆ** – ಶುಕ್ಲಪಕ್ಷಾರಂಭದ ಚಂದ್ರಕಾಂತಿ
**ನವಶಶಿಲೇಖೆ** – ನವಶಶಿಕಳೆ
**ನವಸಂಗ** – ಹೊಸ ಕೂಟ
**ನವಸಂಧ್ಯಾರಾಗ** – ಹೊಸ ಸಂಜೆಗೆಂಪು ಬಣ್ಣ
**ನವಸಂಧ್ಯೆ** – ಹೊಸ ಸಂಜೆ
**ನವಸಹಕಾರ** – ಚಿಗುರಿನಿಂದ ಲಕಲಕಿಸುವ ಮಾವಿನ ಮರ
**ನವಸಂಧ್ಯಾಜಳದ** – ಹೊಸ ಸಂಜೆಗೆಂಪು ಬಣ್ಣದ ಮೋಡ
**ನವಸಂಧ್ಯಾರಾಗ** – ಹೊಸ ಸಂಜೆಗೆಂಪು ಬಣ್ಣ
**ನವಸಿಗ** – ಪರಪೀಡಕ
**ನವಸುಕುಮಾರತೆ** – ನವಲಾಲಿತ್ಯ
**ನವಸುಧೆ** – ಹೊಸ ಅಮೃತ
**ನವಸೌರಭ್ಯ** – ಹೊಸ ಪರಿಮಳ
**ನವಸ್ಥಾನಕ** – ಚಿತ್ರದ ಒಂಬತ್ತು ಬಗೆಯ ನೋಟಗಳು: ಋಜು, ಋಜುಪರಾವೃತ್ತಿ, ಅರ್ಧಋಜು, ಅರ್ಧಋಜುಪರಾವೃತ್ತಿ, ಸಾಚಿ, ಸಾಚಿಪರಾವೃತ್ತಿ, ದ್ವ್ಯರ್ಧಾಕ್ಷಂ, ತತ್ಪರಾವೃತ್ತಿ, ಪಾರ್ಶ್ವಗತ
**ನವಹಾಟಕ** – ಅಪರಂಜಿ
**ನವಹಾರಿದ್ರಕ** – ಹೊಸ ಅರಿಸಿನ
**ನವಾಂಕುರ** – ಹೊಸ ಚಿಗುರು
**ನವಾಯಿ** – ಠೀವಿ; ಅಪ್ರತಿಮ ಚೆಲುವು; ಹೊಸದು
**ನವಿರ್** – ಕೂದಲು; ತುಪ್ಪಳು
**ನವಿರೇಳು** – ಕೂದಲು ಮೇಲೇಳು, ಪುಲಕಗೊಳ್ಳು
**ನವಿರ್ಗೆದಱ್** – ಪುಳಕಗೊಳಿಸು
**ನವಿಲ್** – ಮಯೂರ
**ನವಿಲಾಟ** – ನವಿಲ ನರ್ತನ
**ನವಿಲುಯ್ಯಲ್** – ನವಿಲಿನಾಕಾರದ ಉಯ್ಯಾಲೆ
**ನವಿಲ್ವಾಣತಿ** – ನವಿಲ್+ಬಾಣತಿ, ಹೊಸತಾಗಿ ಮರಿಹಾಕಿದ ನವಿಲು

**ನವೀನ** – ಹೊಸತು
**ನವೀನಚೀನ** – ಹೊಸ ರೇಷ್ಮೆ ಬಟ್ಟೆ
**ನವೋತ್ಪಲದಲ** – ಹೊಸ ನೈದಿಲೆಯ ಪಕಳೆ
**ನವೋದಬಿಂದು** – ಹೊಸ ನೀರಿನ ಹನಿ, ಮಳೆ ಹನಿ
**ನವ್ಯ** – ಹೊಸತಾದ
**ನವ್ಯಾಮೋದ** – ಹೊಸ ಸುವಾಸನೆ
**ನಷ್ಟರಾಜ** – ರಾಜ ಇಲ್ಲವಾಗುವುದು
**ನಸಿ** – ಜೀರ್ಣವಾಗು
**ನಸಿಗುತ್ತ** – ಶರೀರ ನವೆಯುವ ರೋಗ
**ನಸು** – ಸ್ವಲ್ಪ
**ನಸುಗಂದು** – ಸ್ವಲ್ಪ ಕಪ್ಪು ಬಣ್ಣವಾಗು
**ನಸುಗರ್ಪು** – ನಸುಗಪ್ಪು, ತಿಳಿಯಾದ ಕಪ್ಪು
**ನಸುಗತ್ತಲೆ** – ಸ್ವಲ್ಪ ಕತ್ತಲೆ
**ನಸುಗಿಱಿದು** – ನಸು+ಕಿಱಿದು, ಸ್ವಲ್ಪ ಚಿಕ್ಕದು
**ನಸುಗುತ್ತು** – ಸ್ವಲ್ಪ ಕುಗ್ಗು
**ನಸುಗೆಂಪು** – ತಿಳಿಗೆಂಪು
**ನಸುಗೆತ್ತು** – ಸ್ವಲ್ಪ ಅದುರು
**ನಸುಗೇಳ್** – ಅಸ್ಪಷ್ಟವಾಗಿ ಕೇಲಿಸು
**ನಸು ಜೋಲ್** – ಸ್ವಲ್ಪ ಜಾರು
**ನಸುತೇಂಕುದೇಂಕು** – ಸ್ವಲ್ಪ ತೇಲಾಡು
**ನಸುದಗ್ಗು** – ಸ್ವಲ್ಪ ಜಾರು
**ನಸುದೆಱೆ** – ಕೊಂಚ ತೆರೆ
**ನಸುದೋರೆ** – ಹಣ್ಣಾಗಲು ತೊಡಗಿರುವ ಕಾಯಿ
**ನಸುದೋರೆವಣ್** – ಹೊಸ ದೋರೆಹಣ್ಣು
**ನಸುದೋಱು** – ಸ್ಲ್ವ ಕಾಣಿಸು
**ನಸುನಗೆ** – ಮುಗುಳಗನಗೆ
**ನಸುನಳ** – ಸ್ವಲ್ಪ ಬಾಗು
**ನಸುನಿದ್ದೆ** – ಗಾಢವಲ್ಲದ ನಿದ್ದೆ
**ನಸುನೀಡು** – ಸ್ವಲ್ಪ ಚಾಚು
**ನಸುನೆನೆ** – ಸ್ವಲ್ಪ ಒದ್ದೆಯಾಗು
**ನಸುನೋಟ** – ಕುಡಿನೋಟ
**ನಸುಬಳಲ್ಕೆ** – ಸ್ವಲ್ಪ ದಣಿವು
**ನಸುಬಿಸಿ** – ಬೆಚ್ಚನೆ
**ನಸುಬಿಸುಪೇಱು** – ಬೆಚ್ಚಗಾಗು
**ನಸುಬಿಳದು** – ಸ್ವಲ್ಪ ಬೆಳ್ಳಗಾಗು
**ನಸುಬೆಳರ್** – ಸ್ವಲ್ಪ ಬಿಳಿಚಿಕೊ
**ನಸುಮರ್ಬು** – ನಸುಗತ್ತಲೆ
**ನಸುಮಸುಳ್** – ಕೊಂಚ ಕಾಂತಿಗುಂದು
**ನಸುಮಾಸು** – ನಸುಮಸುಳ್
**ನಸುಮುಚ್ಚು** – ಕೊಂಚ ಮುಚ್ಚಿಕೊ
**ನಸುಮುಚ್ಚೆವೋಗು** – ಸ್ವಲ್ಪಕಾಲ ಮೂರ್ಛೆಹೋಗು
**ನಸುಮುಟ್ಟು** – ಸ್ವಲ್ಪ ತಾಗು
**ನಸುಮುರಿ** – ಕೊಂಚ ತಿರುಗು
**ನಸುಮುಸುಂಕು** – ತೆಳು ಪರದೆ
**ನಸುಮೆಲ್** – ಸ್ವಲ್ಪ ತಿನ್ನು
**ನಸುರೆಯ** – ದಿಟ
**ನಸುಬಾಗು** – ಕೊಂಚ ಬಗ್ಗು
**ನಸುವಾಡು** – ಕೊಂಚ ಬಾಡು
**ನಸುವಿರಿ** – ಕೊಂಚ ಅರಳು
**ನಸುವೆಸೆ** – ಕೊಂಚ ಬಿಗುಮಾನಪಡು
**ನಸುವೆಳಗು** – ನಸುಕಾಂತಿ
**ನಸುವೆಳ್ದಿಂಗಳ್** – ಮಬ್ಬು ಬೆಳದಿಂಗಳು
**ನಸುವೆಳ್ಪು** – ಕೊಂಚ ಬಿಳಿಪು
**ನಸುಸಂಜೆ** – ಸಂಜೆಯ ಆರಂಭ
**ನಸುಸುಯ್** – ಹಗುರಾಗಿ ನಿಟ್ಟುಸಿರುಬಿಡು
**ನಸುಸುರ್ಕು** – ಕೊಂಚ ಕುಗ್ಗು
**ನಸುಸೋಂಕು** – ಸ್ವಲ್ಪ ತಾಕು; ಮೃದುಸ್ಪರ್ಶ
**ನಸೆ** – ಬೆದೆ, ಕಾಮಾತುರ
**ನಸೆಗಾಱ** – ಕಾಮ
**ನಸೆಮಸಪು** – ಕಾಮಾತುರತೆ
**ನಸೆಯಳಪು** – ಕಾಮಾತುರ
**ನಸೆಯಿಚ್ಚೆ** – ನಸೆಯಳಿಪು
**ನಸೆವಣಕ** – ಬೆದೆಗೆ ಬಂದ ಪ್ರಾಣಿ
**ನ ಹನ್ಯಾತ್** – ಕೊಲ್ಲುವುದಿಲ್ಲವೋ
**ನಳಕೂಬರ** – ಕುಬೇರನ ಮಗ
**ನಳನಳಕೆವೆಱು** – ಲಾಲಿತ್ಯವನ್ನು ಪಡೆ
**ನಳನಳಸು** – ಕಾಂತಿಗೊಳ್ಳು
**ನಳ** – ಕೋಮಲವಾದ; ಬಾಗಿದ
**ನಳಗೊಂಬು** – ಎಳೆ ರೆಂಬೆ
**ನಳದೋಳ್** – ಕೋಮಲ ಬಾಹು
**ನಳನ** – ಕಮಲ
**ನಳನದಳ** – ತಾವರೆಯ ಪಕಳೆ
**ನಳನದಳನಯನೆ** – ತಾವರೆಯ ಪಕಳೆಯಕಾರದ ಕಣ್ಣುಳ್ಳವಳು
**ನಳನದಳಪುಟ** – ತಾವರೆಯೆಲೆಯ ದೊನ್ನೆ
**ನಳನದಳಾಯತಾಕ್ಷ(ಕ್ಷಿ)** – ಕಮಲದ ಎಸಳಿನಂತೆ ಅಗಲವಾದ ಕಣ್ಣುಗಳುಳ್ಳವನು(ಳು)
**ನಳನನಿಭ** – ತಾವರೆಯಂತಹ
**ನಳನಭವಾಂಗ** – ಬ್ರಹ್ಮನ ಶರೀರ
**ನಳನವನ** – ಕಮಲಗಳ ಗುಂಪು
**ನಳನಸಮಾಜ** – ನಳಿನವನ
**ನಳನಾಕರ** – ಕಮಲಗಳ ನೆಲೆ; ಕೊಳ
**ನಳನಾಕ್ಷ** – ಕಮಲದಂತೆ ಕಣ್ಣುಗಳುಳ್ಳವನು, ಕೃಷ್ಣ
**ನಳನಾನನೆ** – ಕಮಲಮುಖಿ
**ನಳನಾಭಿನಳನ** – ಕೋಮಲ ನಾಭಿಯ ಕಮಲ
**ನಳನಿ** – ತಾವರೆ; ತಾವರೆಯ ಕೊಳ
**ನಳನೀಗರ್ಭಾಂಡ** – ಬ್ರಹ್ಮಾಂಡ
**ನಳನೀತೀರ** – ಕೊಳದ ತೀರ
**ನಳನೀಪತ್ರ** – ತಾವರೆಯೆಲೆ
**ನಳನೀರೇಣು** – ತಾವರೆಯ ಪರಾಗ
**ನಳನೇಕ್ಷಣೆ** – ತಾವರೆಯಂತೆ ಕಣ್ಣುಳ್ಳವಳು
**ನಳಮೊಗ** – ನಳನಳಿಸುವ ಮುಖ(ವುಳ್ಳವನು)
**ನಱುಂಬು** – ಇರುಕು
**ನಱುಗಂಪು** – ಸುವಾಸನೆ

**ನಱುಗಂಪುವೊರೆ** – ಸುವಾಸನೆಯಿಂದ ಕೂಡಿರು
**ನಱುಜವ್ವ(ಜೌವ)ನ** – ತುಂಬು ಯೌವನ
**ನಱುದಂಬುಲ** – ಸುವಾಸಿತ ತಾಮಬೂಲ
**ನಱುನೆಯ್** – ಸುವಾಸಿತವಾದ ತುಪ್ಪ
**ನಱುವಂಡು** – ನಱು+ಬಂಡು, ಸುವಾಸಿತ ಮಧು
**ನಱುಸುಯ್** – ಪರಿಮಳಭರಿತ ಉಸಿರು
**ನಱುಸುಯ್ಯೆಲರ್** – ಪರಿಮಳಭರಿತ ಉಸಿರಿನ ಗಾಳಿ
**ನಾಂಟು** – ನಾಟು; ಚುಚ್ಚಿಕೊ
**ನಾಂದಿ** – ಶುಭಕಾರ್ಯದ ಆರಂಭ
**ನಾಂದಿಸು** – ಒದ್ದೆಮಾಡು
**ನಾಂದೀಪದ** – ಮಂಗಳಾಚರಣೆಯ ಹಾಡು
**ನಾಂದೀಮುಖ** – ಪಿತೃಗಳ ಆವಾಹನೆ; ಆರಂಭ
**ನಾಂದೀವಿಧಿ** – ನಾಂದಿ
**ನಾಂದು** – ನೆನೆಯಿಸು
**ನಾಂಬ** – ಸೋಮಾರಿ
**ನಾಂಬು** – ಆಲಸ್ಯಮಾಡು
**ನಾಕಚ್ಯುತ** – ಸ್ವರ್ಗದಿಂದ ಇಳಿದವನು
**ನಾಕಜ** – ದೇವತೆ
**ನಾಕಜನಾಥ** – ದೇವೇಂದ್ರ
**ನಾಕಜಮಂತ್ರಿ** – ಬೃಹಸ್ಪತಿ
**ನಾಕಜಾಪಗೆ** – ದೇವಗಂಗೆ
**ನಾಕತರಂಗಿಣಿ** – ನಾಕಜಾಪಗೆ
**ನಾಕನಾಯಕ** – ದೇವೇಂದ್ರ
**ನಾಕಪತಿ** – ನಾಕನಾಯಕ
**ನಾಕಪ್ರಭವ** – ಸ್ವರ್ಗದಲ್ಲಿ ಹುಟ್ಟಿದ
**ನಾಕಲೋಕ** – ಸ್ವರ್ಗಲೋಕ
**ನಾಕವಿಭವ** – ಸ್ವರ್ಗದ ವೈಭವ
**ನಾಕಸದ್ಮ** – ಸ್ವರ್ಗನಿವಾಸಿ, ದೇವತೆ
**ನಾಕಸುಖ** – ಸ್ವರ್ಗಸುಖ
**ನಾಕಸ್ತ್ರೀ** – ದೇವತಾಸ್ತ್ರೀ
**ನಾಕಾಧಿನಾಥ** – ನಾಕನಾಯಕ
**ನಾಕಾನೀಕ** – ದೇವತೆಗಳ ಸೈನ್ಯ
**ನಾಕಾನೋಕಹ** – ದೇವಲೋಕದ ವೃಕ್ಷ, ಕಲ್ಪವೃಕ್ಷ
**ನಾಕಿ(ನಿ)** – ದೇವತೆ
**ನಾಕಿನಾಯಕ** – ದೇವೇಂದ್ರ
**ನಾಕಿನಿಕರ** – ದೇವತೆಗಳ ಸಮೂಹ
**ನಾಕಿನಿಕಾಯ** – ನಾಕಿನಿಕರ
**ನಾಕಿನಿಳಯ** – ದೇವತೆಗಳ ನಿವಾಸ, ಸ್ವರ್ಗ
**ನಾಕಿವರ** – ದೇವತಾಶ್ರೇಷ್ಠ, ದೇವೇಂದ್ರ
**ನಾಕೇಂದ್ರ** – ನಾಕ+ಇಂದ್ರ, ದೇವೇಂದ್ರ
**ನಾಕೇಶ** – ನಾಕೇಂದ್ರ; ಲೋಚು ಮಾಡಿಸಿಕೊಂಡವನು, ಸನ್ಯಾಸಿ
**ನಾಕೌಕ** – ನಾಕ+ಓಕ, ದೇವತೆಗಳ ನಿಳಯ, ಸ್ವರ್ಗ
**ನಾಗ** – ಹಾವು; ನಾಗರ ಕುಲದವನು; ನಾಗಸಂಪಿಗೆ; ಆನೆ; ಮೋಡ
**ನಾಗಚಂಪಕ** – ಹೇಮಪುಷ್ಪ, ನಾಗಸಂಪಿಗೆ
**ನಾಗಠಾಣ** – (ನಾಗಸ್ಥಾನ) ನಾಗರಕಲ್ಲುಗಳಿರುವ ಜಾಗ
**ನಾಗತರ** – ಶ್ರೇಷ್ಠ ಆನೆ
**ನಾಗಧ್ವಜ** – ಸರ್ಪಧ್ವಜ; ದುರ್ಯೋಧನ
**ನಾಗನಿವಾಸ** – ನಾಗಠಾಣ; ಹುತ್ತ
**ನಾಗಪಾಶ** – ಎದುರಾಳಿಯನ್ನು ಕಟ್ಟಿಹಾಕುವ ಒಂದು ದಿವ್ಯಾಸ್ತ್ರ
**ನಾಗಪಾಶವಿದ್ಯೆ** – ನಾಗಪಾಶೊರಯೋಗದ ತಿಳಿವಳಿಕೆ
**ನಾಗಪುರ** – ನಾಗಲೋಕ
**ನಾಗಬಂಧ** – ಬಿಗಿಯಾದ ಅಪ್ಪುಗೆ
**ನಾಗರಕ** – ರಾಜನಿಗೆ ಶೃಂಗಾರಸಹಾಯಕರಾದ ನಾಲ್ವರಲ್ಲಿ ಒಬ್ಬ; ಉಳಿದವರು, ವಿಟ, ವಿದೂಷಕ, ಪೀಠಮರ್ದ
**ನಾಗರಖಂಡ** – ಹಸಿಶುಂಠಿ
**ನಾಗರಜ್ಜು** – ನಾಗಪಾಶ
**ನಾಗರಾಜ** – ಆದಿಶೇಷ
**ನಾಗರಿಕ** – ನಗರವಾಸಿ
**ನಾಗರು** – ನಾಗರಕಲ್ಲು
**ನಾಗಲೋಕ** – ಪಾತಾಳ
**ನಾಗವಟ್ಟಳಿಗೆ** – ಒಂದು ಬಗೆಯ ವಸ್ತ್ರ
**ನಾಗವಟ್ಟಿಗೆ** – (ನಾಗಪಟ್ಟಿಕಾ) ನಾಗಂದಿಗೆ
**ನಾಗವಲಿ** – ನಾಗೋಲಿ, ಮದುವೆಯ ಮುಕ್ತಾಯ
ನಾಗವಲ್ಲಿ – ವೀಳೆಯ ಬಳ್ಳಿ–
**ನಾಗವಿಭೂಷಣ** – ಸರ್ಪಾಕಾರದ ಒಂದು ಆಭರಣ; ಶಿವ
**ನಾಗವಿಮಾನ** – ನಾಗಕನ್ನಿಕೆಯರ ಉಪ್ಪರಿಗೆ
**ನಾಗವ್ರಜ** – ಸರ್ಪಸಮೂಹ; ಗಜಸಮೂಹ; ಕಪಿಸಮೂಹ
**ನಾಗಶಯನ** – ಹಾವಿನ ಮೇಲೆ ಮಲಗಿದವನು, ವಿಷ್ಣು
**ನಾಗಶಯ್ಯೆ** – ಹಾವಿನ ಹಾಸಿಗೆ
**ನಾಗಸಂಪಗೆ** – ನಾಗಕೇಸರ ಹೂ
**ನಾಗಹ್ರದ** – ಹಾವಿನ ಮಡು; ಯಮುನಾನದಿ
**ನಾಗಾಂಗನೆ** – ನಾಗಕನ್ನಿಕೆ; ಹೆಣ್ಣು ಆನೆ
**ನಾಗಾಂತಕ** – ಗರುಡ
**ನಾಗಾಧಿಪ** – ಆದಿಶೇಷ
**ನಾಗಾಧೀಶ** – ನಾಗಾಧಿಪ
**ನಾಗಾಭರಣ** – ಸರ್ಪಭೂಷಣ, ಶಿವ
**ನಾಗಾಯ್ತು** – ಮಾವತಿಗ
**ನಾಗಾರಿ** – ಗರುಡ
**ನಾಗಾರಿಕೇತು** – ಗರುಡಕೇತನ, ಕೃಷ್ಣ
**ನಾಗಾಲಯ** – ನಾಗಠಾಣ
**ನಾಗಿಣಿ** – ನಾಗಕನ್ಯೆ; ಹೆಣ್ಣು ಹಾವು
**ನಾಗೇಂದ್ರ** – ಆದಿಶೇಷ
**ನಾಟಕ** – ರೂಪಕ, ಅಭಿನಯ ಪ್ರದರ್ಶನ
**ನಾಟಕಶಾಲೆ** – ನಾಟಕವಾಡುವ ರಂಗಮಂದಿರ
**ನಾಟ್ಯವಿದ್ಯೆ** – ನೃತ್ಯಕಲೆ

**ನಾಟ್ಯವೇದ** – ನಾಟ್ಯವಿದ್ಯೆ
**ನಾಟ್ಯವೇದಮೂರ್ತಿ** – ನೃತ್ಯಕಲೆಯ ಸಾಕಾರದಂತಿರುವವನು
**ನಾಟ್ಯಶಾಲೆ** – ನೃತ್ಯಶಾಲೆ
**ನಾಟ್ಯಾಗಮ** – ನಾಟ್ಯವಿದ್ಯೆ
**ನಾಟ್ಯಾಲಯ** – ನಾಟ್ಯಗೃಹ
**ನಾಡರಸು** – ನಾಡಿನ ರಾಜ
**ನಾಡಾಡಿ** – ಸಾಮಾನ್ಯ (ಮನುಷ್ಯ)
**ನಾಡಿಕೆ** – ಒಂದು ಗಳಿಗೆ, ಇಪ್ಪತ್ತನಾಲ್ಕು ನಿಮಿಷ
**ನಾಡಿಗ** – ಪ್ರಜೆ
**ನಾಡು** – ಜನರಿರುವ ಪ್ರದೇಶ
**ನಾಡುವಿಡಿ** – ನಾಡನ್ನು ಹಿಡಿ, ಆಕ್ರಮಿಸು
**ನಾಡೆ** – ಅತಿಶಯವಾಗಿ
**ನಾಡೆಯುಂ** – ನಾಡೆ
**ನಾಡೆಱೆಯ** – ನಾಡ ಪ್ರಭು, ರಾಜ
**ನಾಡೊವಜ** – ನಾಡ ಗುರು
**ನಾಣ್** – ಲಜ್ಜೆ; ನಾಚಿಕೆಯ ಜಾಗ, ಗುಹ್ಯೇಂದ್ರಿಯ
**ನಾಣಳ್ಕು** – ನಾಚಿಕೆಯಿಂದಾದ ಭಯ
**ನಾಣಟೆ** – ನಾಚಿಕೆಬಿಡು
**ನಾಣಿಲಿ** – ನಾಚಿಕೆಯಿಲ್ಲದ ವ್ಯಕ್ತಿ
**ನಾಣೀಲಿಗ** – ನಾಣಿಲಿ
**ನಾಣಿಲಿವೆಣ್** – ನಾಚಿಕೆಯಿಲ್ಲದ ಹೆಣ್ಣು
**ನಾಣೆಱಕ** – ಲಜ್ಜೆ ತುಂಬಿದ ಪ್ರೀತಿ
**ನಾಣೊಡೆಯ** – ವಿಟ
**ನಾಣ್ಗರೆ** – ನಾಚಿಕೆಪಡು
**ನಾಣ್ಗಾಪು** – ಮಾನರಕ್ಷಣೆ
**ನಾಣ್ಗುಂದು** – ನಾಚಿಕೆಯಿಂದ ಕುಗ್ಗು
**ನಾಣ್ಗೆಡು** – ನಾಚಿಕೆಯನ್ನು ತೊರೆ
**ನಾಣ್ಗೊಳ್** – ನಾಚಿಕೆಪಡು
**ನಾಣ್ಚಿಸು** – ನಾಚಿಕೆಪಡಿಸು
**ನಾಣ್ಚು** – ನಾಚಿಕೆಪಡು; ಅವಮಾನಗೊಳ್ಳು
**ನಾಣ್ನುಡಿ** – ಲೋಕೋಕ್ತಿ, ಗಾದೆ
**ನಾಣ್ದಳೆ** – ನಾಚಿಕೆಪಡು
**ನಾಣ್ದಾಣ** – ನಾಚಿಕೆಯ ಜಾಗ, ಗುಹ್ಯೇಂದ್ರಿಯ
**ನಾಣ್ಪು** – ನಾಚಿಕೆ
**ನಾಣ್ಪೋಗು** – ಪ್ರಾಣಿಗಳ ಸಂಭೋಗಕ್ರಿಯೆ
**ನಾಣ್ಮಾತು** – ನಾಣ್ನುಡಿ
**ನಾಣ್ಬಟ್ಟೆ** – ನಾಡ ದಾರಿ
**ನಾಣ್ಬಟ್ಟೆವೆಣ್** – ನಾಡದಾರಿಯ ಹೆಣ್ಣು
**ನಾಣ್ಬದ** – ಯೋನಿದ್ರವ
**ನಾಣ್ಬಿಡು** – ನಾಚಿಕೆಯನ್ನು ಬಿಡು
**ನಾತ** – ದುರ್ವಾಸನೆ
**ನಾತಂಬಿಡಿ** – ವಾಸನೆಯನ್ನು ಅನುಸರಿಸು
**ನಾದ** – ಧ್ವನಿ
**ನಾದಿಪಂಚೆ** – ನಾದಿಪ+ಅಂಚೆ , ಧ್ವನಿಮಾಡುವ ಹಂಸ
**ನಾದಿಸು** – ಧ್ವನಿಮಾಡು
**ನಾದುನಿ** – ನಾದಿನಿ
**ನಾದೇಯ** – ನದಿಗೆ ಸಂಬಂಧಿಸಿದ
**ನಾದೇಯಾಂಬು** – ನದಿಯ ನೀರು
**ನಾನ್** – ಒದ್ದೆಯಾಗು; ನಾನು ಎಂಬ ಉತ್ತಮಪುರುಷ ಏಕವಚನ ಸರ್ವನಾಮ
**ನಾನಲ್** – ಜೊಂಡು
**ನಾನಲ್ವಳ್ಳ** – ಜೊಂಡಿರುವ ಹಳ್ಳ
**ನಾನಲ್ವಡಿ** – ಜೊಂಡಿರುವ ಜಾಗವನ್ನು ಹಿಡಿ
**ನಾನಾಜೀವ** – ವಿಧವಿಧ ಜಂತುಗಳು
**ನಾನಾಭವ** – ವಿವಿಧ ಜನ್ಮಗಳು
**ನಾನಾಯೋನಿ** – ನಾನಾ ಜನ್ಮಗಳು
**ನಾನಾರಶ್ಮಿ** – ನಾನಾ ಬಗೆಯ ಕಿರಣಗಳು
**ನಾನಾರ್ಥ** – ವಿಧವಿಧವಾದ ಅರ್ಥಗಳು
**ನಾನಾವಿಧ** – ವಿವಿಧ ಬಗೆ
**ನಾಭಸ** – ಮಳೆಗಾಲಕ್ಕೆ ಸಂಬಂಧಿಸಿದ
**ನಾಭಿ** – ಹೊಕ್ಕುಳು; ಕೇಂದ್ರ; (ಜೈನ) **ಆದಿತೀರ್ಥಂಕರನ ತಂದೆ ನಾಭಿರಾಜ**–
**ನಾಭಿ(ಽ)ಕೂಪ** – ಹೊಕ್ಕುಳಗುಂಡಿ
**ನಾಭಿಖಂಡನ** – ಹೊಕ್ಕುಳ ಬಳ್ಳಿ ಕತ್ತರಿಸುವುದು
**ನಾಭಿದಘ್ನ** – ಹೊಕ್ಕುಳು ಮುಳುಗುವಷ್ಟು ಆಳ
**ನಾಭಿನಗ** – (ಜೈನ) ಮೇರುಪರ್ವತ
**ನಾಭಿನಾಳ(ಳ)** – ಹೊಕ್ಕುಳ ಬಳ್ಳಿ
**ನಾಭೀನಿಕರ್ತನ** – ನಾಭಿಖಂಡ
**ನಾಭಿಮಂಡಲ** – ಹೊಕ್ಕುಳ ಸುತ್ತು
**ನಾಭಿಮೂಲ(ಳ)** – ಹೊಕ್ಕುಳ ಬುಡ
**ನಾಭಿರಾಜ** – (ಜೈನ) ಆದಿತೀರ್ಥಂಕರನ ತಂದೆ
**ನಾಭೀಸರೋಜ** – ನಾಭಿಕಮಲ
**ನಾಭಿಸ್ಥಾನ** – ಕೇಂದ್ರಸ್ಥಾನ
**ನಾಭೇಯ** – ಬ್ರಹ್ಮ
**ನಾಮ** – ಹೆಸರು
**ನಾಮಕರಣ** – ಹೆಸರಿಡುವ ಸಂಸ್ಕಾರ; ನೋಡಿ, 'ಷೋಡಶಸಂಸ್ಕಾರ'
**ನಾಮಕರ್ಮ** – ನಾಮಕರಣ
**ನಾಮಗ್ರಹ** – ಹೆಸರು ಹಿಡಿದು ಕರೆಯುವುದು
**ನಾಮಧಾರಕ** – ಹೆಸರು ಮಾತ್ರ ಹೊಂದಿರುವ
**ನಾಮಧೇಯ** – ಹೆಸರು
**ನಾಮಾಂಕಿತ** – ಹೆಸರಿನ ಗುರುತುಳ್ಳುದು
**ನಾಯ್** – ಶ್ವಾನ
**ನಾಯಕ** – ಸೇನಾಪತಿ
**ನಾಯಕತನಂಗೆಯ್** – ಮುಂದಾಳುತ್ವ ವಹಿಸು
**ನಾಯಕನರಕ** – ಘೋರ ನರಕ
**ನಾಯಕಮಣಿ** – ಹಾರದ ನಡುವಣ ಮುಖ್ಯಮಣಿ
**ನಾಯಕಸಾರ** – ಶ್ರೇಷ್ಠ ಪೇಯ
**ನಾಯಕಿ** – ಯಜಮಾನಿತಿ
**ನಾಯ್ತನ** – ನಾಯಿಸ್ವಭಾವ
**ನಾಯ್ಬಸನಿಗತನ** – ನಾಯಿಯ ನಡವಳಿಕೆ
**ನಾಯ್ವಾಲ** – ನಾಯ ಬಾಲ

**ನಾರ್** – ನೂಲು; ತೊಗಟೆ; ನಾರಿನಿಂದ ಮಾಡಿದ ಬಟ್ಟೆ
**ನಾರಸೀರೆ** – ನಾರಿನಿಂದ ಮಾಡಿದ ಸೀರೆ
**ನಾರಂಗ** – ಕಿತ್ತಳೆ (ಬಣ್ಣ)
**ನಾರಂಗವಟ್ಟೆ** – ಕಿತ್ತಳೆ ಬಣ್ಣದ ಬಟ್ಟೆ
**ನಾರಂಗಸಂಘ** – ಕಿತ್ತಿಳೆ ತೋಟ
**ನಾರಂದ** – ನಾರದ
**ನಾರಕ** – ನರಕಕ್ಕೆ ಸಂಬಂಧಿಸಿದ; ನರಕವಾಸಿ; (ಜೈನ) ಜನ್ಮರೀತಿಗಳಲ್ಲಿ ಒಂದು, ನರಲೋಕದ ಜನ್ಮ, ನೋಡಿ 'ಚತುರ್ಗತಿ'
**ನಾರಕದುಃಖ** – ನರಕದಲ್ಲಿ ಅನುಭವಿಸಬೇಕಾದ ನೋವು
**ನಾರಕಪಟಲ** – (ಜೈನ) ಏಳು ನರಕಗಳ ಒಟ್ಟು ನಲವತ್ತೊಂಬತ್ತು ಸ್ತರಗಳು
**ನಾರಕಶರೀರ** – ನರಲೋಕವಾಸಿಯ ಶರೀರ
**ನಾರಕಾವಾಸ** – ನರಕಲೋಕ
**ನಾರಾಚ** – ಬಾಣ; ತಕ್ಕಡಿ
**ನಾರಜ** – ಮಾನವ(ಪದಾತಿ)ನಿಂದಾದ
**ನಾರದ** – ಒಬ್ಬ ದೇವರ್ಷಿ
**ನಾರದತನಯೆ** – ನಾರದ ಋಷಿಯ ಸಾಕುಮಗಳಾದ ಭದ್ರೆ
**ನಾರಸಿಂಗ** – ನರಸಿಂಹಾವತಾರ
**ನಾರಾಚ** – ಕಬ್ಬಿಣದಿಂದ ಮಾಡಿದ; ಬಾಣ; ತಕ್ಕಡಿ
**ನಾರಾಯಣ** – ಕೃಷ್ಣ; (ಜೈನ) ಒಂಬತ್ತು ಮಂದಿ ವಾಸುದೇವರಲ್ಲಿ ಒಬ್ಬ
**ನಾರಿ** – ಬಿಲ್ಲಿಗೆ ಕಟ್ಟುವ ಹಗ್ಗ; ಸ್ತ್ರೀ
**ನಾರಿಕೇಳ** – ತೆಂಗು
**ನಾರುಗಿ** – ನಾರು ಬಿಡಿಸು
**ನಾರುಡು** – ನಾರುಮಡಿ ಉಟ್ಟುಕೊ
**ನಾರೆತ್ತು** – ನಾರು ತೆಗೆ, ಎಳೆ ಬಿಡಿಸು
**ನಾಲಗೆ** – ಜಿಹ್ವೆ
**ನಾಲಗೆಗಲಿ** – ಮಾತಿನಲ್ಲಿ ಶೂರ
**ನಾಲಗೆಗೀೞ್** – ನಾಲಗೆ ಕೀಳು
**ನಾಲಗೆದೀಂಟೆ** – ನಾಲಗೆಯ ಚಪಲ; ಮಾತು ಅಥವಾ ರುಚಿಯ ಚಾಪಲ್ಯ
**ನಾಲಗೆವೇೞವ** – ನಾಲಗೆಯ ಶಕ್ತಿಯನ್ನು ಕಳೆದುಕೊಂಡವನು
**ನಾಲಿಕೇರ** – ನಾರಿಕೇಳ
**ನಾಲ್ಟಾಸಿರ** – ನಾಲ್+ಸಾಸಿರ, ನಾಲ್ಕು ಸಾವಿರ
**ನಾಲ್ದಿಂಗಳ್** – ನಾಲ್ಕು ತಿಂಗಳು
**ನಾಲ್ದೆಸೆ** – ನಾಲ್ಕು ದಿಕ್ಕು
**ನಾಲ್ನೂಱು** – ನಾಲ್ಕು ನೂರು
**ನಾಲ್ನೂರ್ವರ್** – ನಾಲ್ಕು ನುರು ಮಂದಿ
**ನಾಲ್ಮೊಗ** – ನಾಲ್ಕು ಮುಖ
**ನಾಲ್ಬಟ್ಟೆ** – ನಾಲ್ಕು ದಾರಿಗಳು ಸೇರುವ ಜಾಗ
**ನಾಲ್ವಡಿ** – ನಾಲ್ಕರಷ್ಟು
**ನಾಲ್ವೆರಲ್** – ನಾಲ್ಕು ಬೆರಳು
**ನಾಲ್ಸರ** – ನಾಲ್ಕು ಬಾಣ
**ನಾವಿದ** – ನಾಯಿಂದ, ಕ್ಷೌರಿಕ
**ನಾವಿದವಾಳ್** – ನಾವಿದ(ನಾಯಿಂದ)ನ ಕತ್ತಿ
**ನಾವೆ** – ದೋಣಿ
**ನಾಸಕುಟ್ಮಳ** – ಮೊಗ್ಗಿನಂತಹ ಮೂಗು
**ನಾಸಾಗ್ರ** – ಮೂಗಿನ ತುದಿ
**ನಾಸಾಪುಟ** – ಮೂಗಿನ ಹೊಳ್ಳೆ
**ನಾಸಿಕೆ** – ಮೂಗು
**ನಾಳ(ಆ)** – ದಂಟು
**ನಾಳಕೆ** – ಇಪ್ಪತ್ತನಾಲ್ಕು ನಿಮಿಷಗಳ ಕಾಲ, ಒಂದು ಗಳಿಗೆ
**ನಾಳಕಾಪಾತ್ರೆ** – ಕೋಳವೆಯಾಕಾರದ ಪಾತ್ರೆ; ಗಳಿಗೆಯ ಪಾತ್ರೆ
**ನಾಳಕೇರತೋಯ** – ತೆಂಗಿನ ಕಾಯ ನೀರು
**ನಾಳಕೇರಪರ್ಣ** – ತೆಂಗಿನ ಗರಿ
**ನಾಳಕೇರಫಲ** – ತೆಂಗಿನ ಕಾಯಿ
**ನಾಳಕೇರರಸ** – ಎಳನೀರು
**ನಾಳದು** – ನಾಡಿದ್ದು, ಎರಡು ದಿನದನಂತರದ ದಿನ
**ನಾಳಬೀೞ್** – ಗುಳಿಯುಂಟಾಗು
**ನಾಳಪುಣ್** – ಬೆನ್ನೊಡೆದು ಆಗುವ ಹುಣ್ಣು
**ನಾಳೀವ್ರಣ** – ನಾಳಿಪುಣ್
**ನಾಳಕೆ** – ಒಂದು ಗಳಿಗೆ, ಇಪ್ಪತ್ತನಾಲ್ಕು ನಿಮಿಷ
**ನಾಳೀಜಂಘ** – ಹೆಣ್ಣು ಕೋತಿ
**ನಾಳೆ** – ಇಂದಿಗೆ ಮರುದಿನ
**ನಾಳ್ಗಡಿಗಳೆ** – ಗಡಿಪಾರುಮಾಡು
**ನಾಱು** – ಸುವಾಸನೆ ಬೀರು; ದುರ್ವಾಸನೆ ಬೀರು
**ನಾೞ್** – ಸಮಾಸವಾಗುವಾಗ 'ನಾಡು' ಪಡೆಯುವ ರೂಪ; ಉದಾ, ನಾಡ+ಗಾಮುಂಡ, ನಾೞ್ಗಾಮುಂಡ
**ನಾೞ** – ಕೃತಕವಾದ
**ನಾೞವಾಸಗೆ** – ಮೋಸದ ದಾಳ
**ನಾೞಿಕೆ** – (ನಾಡಿಕಾ) ಗಳಿಗೆ
**ನಾೞ್ಕಡೆ** – ನಾಡಿನ ಕಡೆ, ಎಂದರೆ ಗಡಿ
**ನಾೞ್ಕಡೆಗಟಿ(ೞೆ)** – ದೇಶಭ್ರಷ್ಟನಾಗಿಸು
**ನಾೞ್ಕಡೆವೋಗು** – ದೇಶಭ್ರಷ್ಟನಾಗು
**ನಾೞ್ಗಾದೆ** – ನಾಡ ಗಾದೆ, ನಾಣ್ನುಡಿ
**ನಾೞ್ತುಡುಗುಣಿ** – ನಾಡ ಕಳ್ಳ, ದೊಡ್ಡ ಕಳ್ಳ
**ನಾೞ್ನುಡಿ** – ನಾಣ್ನುಡಿ, ಗಾದೆ
**ನಾೞ್ಪ್ರಭು** – ನಾಡ ಪ್ರಭು, ರಾಜ
**ನಾೞ್ಬಟ್ಟೆ** – ನಾಡ ಹಾದಿ, ಕಚ್ಚಾ ರಸ್ತೆ
**ನಾೞ್ವರ್ತನ** – ನಾಡ ನಿಯಮ
**ನಾೞ್ವಿಳಾಸ** – ನಾಡ ವಿಲಾಸ, ನಾಡ ಸೊಬಗು
**ನಿಂದಣ(ಣೆ)** – ನಿಂದೆ, ಬೈಗುಳ
**ನಿಂದ್ಯ** – ನಿಂದನೀಯ
**ನಿಂಬಮಾಲೆ** – ಬೇವಿನ ಸೊಪ್ಪಿನ ಮಾಲೆ
**ನಿಂಬೆ** – ಲಿಂಬೆ, ಜಂಬೀರ
**ನಿಃಕರಿಸು** –

**ನಿಃಕರುಣ** – ನಿಷ್ಕರುಣ, ಕರುಣೆಯಿಲ್ಲದ
**ನಿಃಕಾಂಕ್ಷಿತ** – ಆಸೆಯಿಲ್ಲದ
**ನಿಃಪ್ರವೀಚಾರ** – ದೇಹಸಂಪರ್ಕವಿಲ್ಲದೆ ಸುಖವನ್ನನುಭವಿಸುವವನು
**ನಿಃಪ್ರಾದೇಶಿಕ** – ಪ್ರದೇಶಾತೀತ, ದೇವರು
**ನಿಃಶಂಕತೆ**– ನಿಶ್ಶಂಕತೆ, ಶಂಕೆಯಿಲ್ಲದ ಸ್ಥಿತಿ
**ನಿಃಶೀಲವ್ರತ** – (ಜೈನ) ಸಪ್ತಶೀಲವ್ರತಗಳನ್ನು ಆಚರಿಸದಿರುವುದು, ನೋಡಿ, 'ಸಪ್ತಶೀಲ'
**ನಿಃಶ್ರೇಯಸ** – ಮೋಕ್ಷ
**ನಿಕಟ** – ಸಮೀಪದಲ್ಲಿರುವ
**ನಿಕಟವರ್ತಿ** – ಹತ್ತಿರದಲ್ಲಿರುವುದು
**ನಿಕಟವರ್ತಿತ** – ಹತ್ತಿರದಲ್ಲಿರುವ
**ನಿಕಟೋದ್ದೇಶ** – ಸಮೀಪದ ಪ್ರದೇಶ
**ನಿಕರ** – ಸಮೂಹ
**ನಿಕರ್ತನ** – ಕತ್ತರಿಸುವುದು
**ನಿಕಷ** – ಒರೆಗಲ್ಲು
**ನಿಕಷಜ್ಞ** – ಪರೀಕ್ಷಿಸುವವನು
**ನಿಕಷಣ** – ಉಜ್ಜುವುದು
**ನಿಕಷದೃಷದ** – ನಿಕಷ
**ನಿಕಷೋಪಲ** – ನಿಕಷ
**ನಿಕಾಮ** – ಪರ್ಯಾಪ್ತ, ವಿಪುಲ
**ನಿಕಾಮಂ** – ವಿಪುಲವಾಗಿ; ಸ್ಪಷ್ಟವಾಗಿ
**ನಿಕಾಮಕೋಮಳೆ** – ಅತಿಶಯ ಕೋಮಲೆ
**ನಿಕಾಮಿನಿ** – ಅತೀಶಯ ಆಸೆಯುಳ್ಳವಳು
**ನಿಕಾಯ** – ಸಮೂಹ
**ನಿಕಾರ** – ತಿರಸ್ಕಾರ; ಧಾನ್ಯ ತುರುವುದು
**ನಿಕಾರವಟ್ಟೆ** – ಶುಭ್ರವಾದ ಬಟ್ಟೆ
**ನಿಕಾಶ(ಸ)** – ಸದೃಶ
**ನಿಕೀರ್ಣ** – ತುಂಬಿದ
**ನಿಕುಂಜ** – ಪೊದೆ; ಲತಾಗೃಹ; ಬಳ್ಳಿ ಮನೆ
**ನಿಕುಂಭ** – ಈ ಹೆಸರಿನ ಒಬ್ಬ ರಾಕ್ಷಸ
**ನಿಕುರುಂಬ(ಕ)** – ಗುಂಪು
**ನಿಕೃತಿವಿಚ್ಛೇದಿನಿ** – (ಜೈನ) ಮಾಯಾನಿವಾರಣ ವಿದ್ಯೆ
**ನಿಕೃತ್ತ** – ಕತ್ತರಿಸಿದ
**ನಿಕೃಷ್ಟಚೇಷ್ಟೆ** – ಕೀಳಾದ ನಡತೆ
**ನಿಕೇತನ** – ಮನೆ; ನೆಲೆ
**ನಿಕ್ಕರುಣ** – ನಿಷ್ಕರುಣ
**ನಿಕ್ಕುವ** – ನಿಶ್ಚಯ
**ನಿಕ್ಕುವಂ** – ನಿಜವಾಗಿಯೂ
**ನಿಕ್ಕುಳಸು** – ವಿಲಾಸದಿಂದ ಬಾಗು
**ನಿಕ್ವಣಿತ** – ಆಭರಣ ಮಾಡುವ ಧ್ವನಿ
**ನಿಕ್ವಾಣ** – ಶಬ್ದ
**ನಿಕ್ಷಿಪ್ತ** – ಇರಿಸಿದ
**ನಿಕ್ಷೇಪ** – (ಜೈನ) ಸಮಸ್ತ ವಸ್ತುಸ್ವರೂಪವನ್ನು ಅರಿಯುವ ಬಗೆ
**ನಿಖಿಲ** – ಎಲ್ಲ
**ನಿಖಿಲಸಮತೆ** – (ಜೈನ) ಶಿಕ್ಷಾವ್ರತಗಳಲ್ಲಿ ಒಂದು; ಭೇದವಿಲ್ಲದೆ ಎಲ್ಲ ಜೀವಗಳನ್ನೂ ಸಮಾನಭಾವನೆಯಿಂದ ಕಾಣುವುದು
**ನಿಗಡ** – ನಿಗಳ, ಸಂಕೋಲೆ
**ನಿಗಡನಿರುದ್ಧ** – ಸಂಕೋಲೆ ಹಾಕಿರುವ
**ನಿಗದಿಸು** – ನಿಗದಿಪಡಿಸು, ಹೇಳು
**ನಿಗಮ** – ವೇದ; ನಗರ
**ನಿಗಳ** – ಬೇಡಿ; ಬಂಧನ; ಕಾಲಂದುಗೆ
**ನಿಗಳನಿರೋಧ** – ಸಂಕೋಲೆ ಹಾಕುವುದು
**ನಿಗಳಬಂಧ** – ನಿಗಳನಿರೋಧ
**ನಿಗುಂಬಿಸು** – ರಾಶಿಮಾಡು
**ನಿಗುಂಬು** – ಒಟ್ಟುಗೂಡಿಸು
**ನಿಗುಣ** – ಉತ್ಕೃಷ್ಟ ಗುಣದವನು
**ನಿಗೂಢ** – ಅಡಗಿಸಿದ
**ನಿಗೂಹನ** – ಅಡಗಿಸುವಿಕೆ
**ನಿಗೋದ** – ನರಕ; (ಜೈನ) ಯಾತನೆಗಳಿಗೆ ಆಶ್ರಯವಾದ ಶರೀರ
**ನಿಗ್ಗ(ಗ್ಗೆ)ಡಿ** – ಬುದ್ಧಿಯಿಲ್ಲದವನು
**ನಿಗ್ಗವ** – ಆನೆಯ ದಂತ
**ನಿಗ್ಗೆಡಿತನ** – ಬುದ್ಧಿಗೇಡಿತನ
**ನಿಗ್ರಹ** – ದಂಡನೆ
**ನಿಗ್ರಹಂಗೆಯ್** – ಹಿಂಸೆ ಕೊಡು
**ನಿಗ್ರಹಶಂಕೆ** – ಹಿಂಸೆಯ ಭಯ
**ನಿಗ್ರಹಸ್ಥಾನ** – ಸೋಲಿಗೆ ಕಾರಣವಾದುದು
**ನಿಗ್ರಹಿಸು** – ಹತೋಟಿಯಲ್ಲಿಡು
**ನಿಘಂಟು** – ಶಬ್ದಕೋಶ
**ನಿಘಂಟುಸಮಯ** – ನಿಘಂಟುಶಾಸ್ತ್ರ
**ನಿಘರ್ಷಣ** – ಉಜ್ಜುವಿಕೆ
**ನಿಘರ್ಷಿಸು** – ಉಜ್ಜು
**ನಿಘಾತ** – ಹೊಡೆತ
**ನಿಘೃಷ್ಟ** – ಉಜ್ಜಿದ
**ನಿಚಯ** – ಸಮೂಹ
**ನಿಚಿತ** – ಒಳಗೊಂಡ
**ನಿಚಿತವಚನ** – ತಕ್ಕ ಮಾತು
**ನಿಚುಳ** – ತೊರೆ ಕಣಿಗಿಲೆ
**ನಿಚೋಳಕ** – ಕವಚ, ಹೊದಿಕೆ
**ನಿಚ್ಚ(ಂ)** – ನಿತ್ಯ; ಯಾವಾಗಲೂ
**ನಿಚ್ಚಕ್ಕಂ** – ಪ್ರತಿನಿತ್ಯದ ಭಿಕ್ಷೆ
**ನಿಚ್ಚಟ** – (ನಿಶ್ಚಲ) ದೃಢ
**ನಿಚ್ಚ(ಟ)ಗಲಿ** – ಕಡುಗಲಿ
**ನಿಚ್ಚಟಿಕ್ಕೆ()** – ನಿಶ್ಚಲತೆ
**ನಿಚ್ಚಣಿ(ಕೆ)(ಗೆ)** – (ನಿಃಶ್ರೇಣಿ) ಏಣಿ
**ನಿಚ್ಚಲ್(ಲುಂ)** – ನಿತ್ಯವೂ
**ನಿಚ್ಚಲವಕ್ಕಿ** – ಕಣ್ಣು ಮಿಟುಕಿಸದ ಹಕ್ಕಿ, ಶಕುನದ ಹಕ್ಕಿ, ಗೂಬೆ
**ನಿಚ್ಚವ(ಪ)ಯಣ** – ನಿತ್ಯಪ್ರಯಾಣ
**ನಿಚ್ಚಳಮನ** – ನಿಶ್ಚಲ ಮನಸ್ಸು

**ನಿಜ** – ತನ್ನ; ಸ್ವಂತ
**ನಿಜಕಾಯ** – ತನ್ನ ದೇಹ
**ನಿಜಕಲಿ** – ಸಹಜಶೂರ
**ನಿಜಗುರು** – ತನ್ನ ಗುರು
**ನಿಜಜನನಿ** – ತನ್ನ ತಾಯಿ
**ನಿಜಜೀವ** – ತನ್ನ ಜೀವ
**ನಿಜತನು** – ತನ್ನ ದೇಹ
**ನಿಜತನೂಭವ** – ತನ್ನ ಮಗ
**ನಿಜತೇಜ** – ತನ್ನ ಕಾಂತಿ
**ನಿಜನಾಥ** – ತನ್ನ ಒಡೆಯ
**ನಿಜನಾಮ** – ತನ್ನ ಹೆಸರು
**ನಿಜನಾಮ** – ತನ್ನ ಹೆಸರು
**ನಿಜನಿವಾಸ** – ತನ್ನ ಮನೆ
**ನಿಜಪತಿ** – ತನ್ನ ಒಡೆಯ; ತನ್ನ ಗಂಡ
**ನಿಜಪುತ್ರ** – ಸ್ವಂತ ಮಗ
**ನಿಜಭಗಿನಿ** – ಸ್ವಂತ ಸಹೋದರಿ
**ನಿಜಭುಜಗರ್ವ** – ತನ್ನ ತೋಳ್ಬಲದ ಬಗೆಗಿನ ಹೆಮ್ಮೆ
**ನಿಜಮಾರ್ಗ** – ಸತ್ಯದ ದಾರಿ
**ನಿಜರಕ್ತ** – ತನ್ನ ರಕ್ತ
**ನಿಜರಿಪು** – ತನ್ನ ಶತ್ರು
**ನಿಜಲಕ್ಷ್ಮಿ** – ತನ್ನ ಸಂಪತ್ತು
**ನಿಜವೃತ್ತಿ** – ತನ್ನ ಸ್ವಭಾವ
**ನಿಜಸಖಿ** – ತನ್ನ ಸಖಿ
**ನಿಜಸುತ** – ತನ್ನ ಮಗ
**ನಿಜಸ್ವರೂಪ** – ಸತ್ಯದ ಸ್ವರೂಪ
**ನಿಜಾಂಕ** – ತನ್ನ ತೊಡೆ
**ನಿಜಾಂಗನೆ** – ತನ್ನ ಪತ್ನಿ
**ನಿಜಾಂಗರುಚಿ** – ತನ್ ದೇಹದ ಕಾಂತಿ
**ನಿಜಾಂತರಂಗ** – ತನ್ನ ಮನಸ್ಸು
**ನಿಜಾಂಬಿಕೆ** – ತನ್ನ ತಾಯಿ
**ನಿಜಾಂಸ** – ತನ್ನ ಹೆಗಲು
**ನಿಜಾಕೃತಿ** – ಸತ್ಯಸ್ವರೂಪ
**ನಿಜಾಗ್ರಜ** – ತನ್ನ ಅಣ್ಣ
**ನಿಜಾತ್ಮಜ** – ತನ್ನ ಮಗ
**ನಿಜಾಧಿಪತಿ** – ತನ್ನ ಒಡೆಯ
**ನಿಜಾಪತ್ಯ** – ಸ್ವಂತ ಮಕ್ಕಳು
**ನಿಜಾಭ್ಯುದಯ** – ಸ್ವಂತದ ಏಳಿಗೆ
**ನಿಜಾಯತಿ** – ತನ್ನ ಹಿರಿಮೆ
**ನಿಜಾಯತ್ತ** – ತನ್ನ ಸೇರಿದ
**ನಿಜಾಯುಷ್ಯಾಂತ** – ತನ್ನ ಜೀವಿತದ ಕೊನೆ
**ನಿಜಾವಳಿ** – ತನ್ನ ಬಿರುದುಗಳ ಸಮೂಹ
**ನಿಜಾವಾಸ** – ತನ್ನ ಮನೆ, ಸ್ವಂತ ಸ್ಥಳ
**ನಿಜೇಶ್ವರ** – ತನ್ನ ಒಡೆಯ
**ನಿಜೇಷ್ಟಸಿದ್ಧಿ** – ತನ್ನ ಬಯಕೆಯ ಪೂರೈಕೆ
**ನಿಜೋಜ್ವಳ** – ಸಹಜ ಪ್ರಕಾಶ
**ನಿಜೋತ್ತಂಸ** – ತನ್ನ ಶಿರಾಭರಣ
**ನಿಜೋದಾರತೆ** – ತನ್ನ ಔದಾರ್ಯ, ಉದಾತ್ತತೆ
**ನಿಜ್ಜಾಡಿಸು** – ತಿರಸ್ಕರಿಸು
**ನಿಟಿಲ(ಳ)** – ಹಣೆ
**ನಿಟಿಲತಟ** – ಹಣೆಯ ಪ್ರದೇಶ
**ನಿಟಿಲನಿಹಿತಾಂಜಳಿ** – ಕೈಜೋಡಿಸಿ ಹಣೆಯ ಮೇಲೆ ಇರಿಸಿಕೊಂಡವನು, ಮುಗಿದ ಕೈಯವನು
**ನಿಟಿಲಲೋಚನೆ** – ಹಣೆಗಣ್ಣವಳು, ದುರ್ಗೆ
**ನಿಟಿಲಾಗ್ರ** – ಹಣೆಯ ತುದಿ
**ನಿಟಿಲೇಕ್ಷಣ** – ಹಣೆಗಣ್ಣು; ಹಣೆಗಣ್ಣ
**ನಿಟ್ಟಡಕಿಲ್** – ದೊಡ್ಡ ರಾಶಿ
**ನಿಟ್ಟಯಿಸು** – ನೋಡಿ, ಪರಿಶೀಲಿಸು
**ನಿಟ್ಟಯ್ದೆ** – ಮುತ್ತೈದೆ
**ನಿಟ್ಟಾಯ** – ಕಡುಗಲಿತನ
**ನಿಟ್ಟಾಯು** – ನಿಡಿದು ಆಯು, ದೀರ್ಘಾಯುಸ್ಸು
**ನಿಟ್ಟಾಲಿ** – ನಿಡಿದು ಆಲಿ, ಅಗಲ ಕಣ್ಣು; ಕಣ್ಣ ನೇರ
**ನಿಟ್ಟಾಲಿಗೊಳ್** – ಕಣ್ಣರಳಿಸು
**ನಿಟ್ಟಿಸು** – ದೃಷ್ಟಿಸಿ ನೋಡಿ
**ನಿಟ್ಟೆ** – (ನಿಷ್ಠಾ) ನಿಯಮ, ನಿಷ್ಠೆ; ಶಾಶ್ವತ
**ನಿಟ್ಟುರ** – (ನಿಷ್ಠುರ) ಕಠೋರ
**ನಿಟ್ಟುರಿಗೊಳ್** – ನಿಡಿದು ಉರಿಗೊಂಡು, ಬಹಳವಾಗಿ ಕೋಪಿಸಿಕೊಂಡು
**ನಿಟ್ಟುವಡು** – ಸಾಲಾಗಿ ನಿಲ್ಲು
**ನಿಟ್ಟುಸಿರ್** – ದೀರ್ಘ ನಿಶ್ವಾಸ
**ನಿಟ್ಟೆ** – (ನಿಷ್ಠೆ) ನಿಯಮ
**ನಿಟ್ಟೆಗೆವರ್** –ನಿಯಮಕ್ಕೊಳಪಡು
**ನಿಟ್ಟೆಗೊಳ್** – ನಿಷ್ಠೆಗೊಳ್ಳು
**ನಿಟ್ಟೆಗೊಳಿಸು** –ನಿಷ್ಠೆಗೊಳಿಸು, ನಿಷ್ಠನನ್ನಾಗಿಸು
**ನಿಟ್ಟೆಲ್ವು** – ನಿಡಿದು+ಎಲ್ವು, ಉದ್ದ ಮೂಳೆ; ಬೆನ್ನುಮೂಳೆ
**ನಿಟ್ಟೆವಡು** – ನಿಷ್ಠೆಪಡು, ನಿಷ್ಠೆಯನ್ನು ಹೊಂದು
**ನಿಟ್ಟೆಸರಿಡು** – ನಿಡಿದು+ಎಸರಿಡು, ಚೆನ್ನಾಗಿ ಕುದಿಯಲು ನೀರಿಡು
**ನಿಟ್ಟೆಸಳ್** – ನಿಡಿದು ಎಸಳ್, ನೀಳವಾದ ಪಕಳೆ
**ನಿಟ್ಟೆಸಳ್ಗಿವಳಗೆ** – ನೀಳ ಗರಿಗಳ ಓಲೆಯ ಕಟ್ಟು
**ನಿಟ್ಟೈದೆ** – ಸುಮಂಗಲಿ
**ನಿಟ್ಟೊಡಲ್** – ನೀಳ ದೇಹ
**ನಿಟ್ಟೊಡಲ** – ನೀಳ ದೇಹಿ
**ನಿಟ್ಟೋಟ** – ನಿಡಿದು ಓಟ, ದೊಡ್ಡ ಹೆಜ್ಜೆಯ ಓಟ
**ನಿಡಿದು** – ನೀಳವಾದುದು; ನೀಳವಾದ
**ನಿಡಿಯ** – ನೀಳವಾಗಿರುವವನು; ನೀಳವಾದ
**ನಿಡಿಯಲರ್ಗಣ್** – ಅಗಲವಾದ ಹೂವಿನಂತಹ ಕಣ್ಣು
**ನಿಡಿಯಸಿ** – (ನಿಡಿದು+ಅಸಿ) ಉದ್ದ ಕತ್ತಿ
**ನಿಡಿಯಸಿಯೊಱೆ** – ನೀಲ ಕತ್ತಿಯ ಒರೆ
**ನಿಡಿಯೆಸಳ್ಗಣ್** – ನೀಲ ಹೂಪಕಳೆಯಂತಹ ಕಣ್ಣು
**ನಿಡುಗಂಬ** – ನೀಳವಾದ ಕಂಬ
**ನಿಡುಗಡಿ** – ನೇರವಾಗಿ ಕತ್ತರಿಸು

**ನಿಡುಗಣ್** – ಅಗಲವಾದ ಕಣ್ಣು
**ನಿಡುಗಳಲೆ** – ನೀಳವಾದ ಬಿದಿರು
**ನಿಡುಗುಡಿ** – ನೀಲವಾದ ಚಿಗುರು
**ನಿಡುಗುರುಳ್** – ನೀಳ ಕೂದಲು
**ನಿಡುಗೊಂಬು** – ನೀಳವಾದ ಕೊಂಬೆ
**ನಿಡುಗೊರಲ್** – ನೀಳವಾದ ಕೊರಳು
**ನಿಡುಗೋಡು** – ಉದ್ದನಾದ ಕೊಂಬು
**ನಿಡುಜಡೆ** – ನೀಳ ಜಡೆ, ನೀಳ ಜಟೆ
**ನಿಡುಜಾಗರ** – ಹೆಚ್ಚು ಕಾಲ ಎಚ್ಚರವಾಗಿರುವುದು
**ನಿಡುದೆನೆ** – ನೀಳ ತೆನೆ; ನೀಳವಾದ ಬುರುಜು
**ನಿಡುದೋಳ್** – ನೀಳ ಬಾಹು
**ನಿಡುನನೆ** – ನೀಳವಾದ ಮೊಗ್ಗು
**ನಿಡುನೇಜೆಯ** – ನೀಳ ಈಟಿ
**ನಿಡುನೇಣ್** – ನೀಳವಾದ ಹಗ್ಗ
**ನಿಡುಪು** – ನೀಳತೆ
**ನಿಡುಬತ್ತಳಿಕೆ** – ನೀಳವಾದಬತ್ತಳಿಕೆ
**ನಿಡುಬಯ್ತಲೆ** – ದೀರ್ಘವಾದ ಬೈತಲೆ
**ನಿಡುಬೊಟ್ಟು** – ದೊಡ್ಡ ಕುಂಕುಮದ ಬೊಟ್ಟು
**ನಿಡುಮಾಳೆ** – ನೀಳ ಹಾರ
**ನಿಡುಮಾಳ** – ದೊಡ್ಡ ಬಯಲು
**ನಿಡುಮೀನ್** – ದೊಡ್ಡ ಮೀನು
**ನಿಡುಮೂಗ** – ನೀಳ ಮೂಗುಳ್ಳವನು
**ನಿಡುಮೆಯ್** – ನೀಲ ದೇಹ
**ನಿಡುವಗೆ** – ನಿಡಿದು ಪಗೆ, ಗಾಢ ಶತ್ರು
**ನಿಡುವಯಣ** – ದೀರ್ಘ ಪ್ರಯಾಣ
**ನಿಡುವಲೆ** – ದೊಡ್ಡ ಬಲೆ
**ನಿಡುವಾಳೆ** – ನೀಳವಾದ ಬಾಳೆಯ ಮೀನು
**ನಿಡುವುರ್ವು** – ನೀಳ ಹುಬ್ಬು
**ನಿಡುವೆರಲ್** – ನೀಳ ಬೆರಳು
**ನಿಡುವೊಡೆ** – ನಿಡಿದು ಪೊಡೆ, ನೀಳವಾದ ತೆನೆ
**ನಿಡುಸುಯ್** – ನೀಳವಾದ ಉಸಿರು
**ನಿಡುಸುಯ್ಯೆಲರ್** – ನೀಳವಾದ ಉಸಿರಿನ ಗಾಳಿ
**ನಿತಂಬ** – ಪಿರ್ರೆ; ಬೆಟ್ಟದ ತಪ್ಪಲು
**ನಿತಂಬದ್ವಯಸ** – ಪಿರ್ರೆಯವರೆಗಿನ ಆಳ
**ನಿತಂಬಬಿಂಬ** – ದೊಡ್ಡ ಪಿರ್ರೆ
**ನಿತಂಬಿನಿ** – ದೊಡ್ಡ ಪಿರ್ರೆಯವಳು, ಸುಂದರಿ
**ನಿತಂಬಿನೀಕದಂಬ** – ಚೆಲುವೆಯರ ಗುಂಪು
**ನಿತಂಬಿನೀಜನ** – ಚೆಲುವೆಯರು
**ನಿತಂಬಿನೀನಿವಹ** – ನಿತಂಬಿನೀಕದಂಬ
**ನಿತಪ್ತ** – ಕಾಂತಿ ಕಳೆದುಕೊಂಡ
**ನಿತಪ್ತಾಧರ** – ಒಣಗಿದ ತುಟಿ
**ನಿತಾಂತ** – ತುಂಬಿಕೊಂಡ; ಅಧಿಕವಾದ
**ನಿತಾಂತಂ** – ತುಂಬಿಕೊಂಡು; ಅಧಿಕವಾಗಿ
**ನಿತಾಂತಸಠ** – ಅಧಿಕ ಮೂರ್ಖ
**ನಿತ್ತರಿಸು** – ಸಹಿಸಿಕೊ; ನಿಭಾಯಿಸು; ದಾಟು
**ನಿತ್ಯನಿಗೋದ** – (ಜೈನ) ಶಾಶ್ವತನರಕಕ್ಕಿಂತ ಕೀಳಾದ ಜಾಗ
**ನಿತ್ಯನಿಯಮ** – ಅನುದಿನ ಅನುಸರಿಸಬೇಕಾದುದು
**ನಿತ್ಯಪರೀಕ್ಷಣ** – ಸದಾ ಮಾಡುವ ಪರೀಕ್ಷೆ
**ನಿತ್ಯಪೂಜೆ** – ಅನುದಿನದ ಪೂಜೆ
**ನಿತ್ಯಪ್ರಯಾಣ** – ಸದಾ ಮಾಡುವ ಪ್ರಯಾಣ
**ನಿತ್ಯಮಹ** – ಪ್ರತಿದಿನದ ಪೂಜೆ
**ನಿತ್ಯಯೌವನ** – ಚಿರ ತಾರುಣ್ಯ
**ನಿತ್ಯರೋಗ** – ಸದಾ ಇರುವ ರೋಗ
**ನಿತ್ಯಲಂಪಟ** – ಸದಾ ಬಯಕೆಯುಳ್ಳವನು
**ನಿತ್ಯವ್ರತ** – ನಿತ್ಯನಿಯಮ
**ನಿತ್ಯಸುಖ** – ಶಾಶ್ವತಸುಖ
**ನಿತ್ಯಾರ್ಥ** – ತಪ್ಪದ ಎಂಬ ಅರ್ಥ
**ನಿತ್ಯಾಲಂಬ** – ಸದಾ ಅವಲಂಬಿಸಿರುವ
**ನಿತ್ಯೋತ್ಸವ** – ಪ್ರತಿದಿನ ಮಾಡುವ ಉತ್ಸವ
**ನಿತ್ಯೋದಯ** – ಪ್ರತಿದಿನ ಉದಯಿಸುವವನು;, ಸೂರ್ಯ; ಸದಾ ಏಳಿಗೆ ಹೊಂದುವವನು
**ನಿದರ್ಶನ** – ದೃಷ್ಟಾಂತ
**ನಿದಾಘ** – ಬೆಂಕಿ; ಸುಡುವ; ಬೇಸಗೆ; ಕಡುಬಿಸಿಲು
**ನಿದಾಘಕಾಲ** – ಬೇಸಿಗೆ ಕಾಲ
**ನಿದಾಘತಪ್ತ** – ಬಿಸಿಲಿನಲ್ಲಿ ಬೆಂದ
**ನಿದಾಘತಾಪ** – ಬಿಸಿಲಿನ ಝಳ
**ನಿದಾಘಸಮಯ** – ಬೇಸಿಗೆ
**ನಿದಾಘಾಕ್ರಾಂತ** – ಬಿಸಿಲಿನ ಝಳಕ್ಕೆ ಸಿಲುಕಿದ
**ನಿದಾನ** – ನಿಧಿ; ವಿಳಂಬ; ರೋಗಪರೀಕ್ಷೆ (ಜೈನ) ಮುಂದಿನ ಜನ್ಮದಲ್ಲಿ ಇಂಥದೇ ಸುಖ ಪಡೆಯಬೇಕೆಂಬ ಆಸೆ
**ನಿದಾನಂಗೆಯ್** – (ಜೈನ) ಮುಂದಿನ ಜನ್ಮದಲ್ಲಿ ಇಂಥದೇ ಸುಖ ಪಡೆಯಬೇಕೆಂದು ಆಶಿಸು
**ನಿದಾನಂಬಡೆ** – ನಿಧಿಯನ್ನು ಪಡೆ
**ನಿದಾನಫಲ** – (ಜೈನ) ಹಿಂದಿನ ಜನ್ಮದ ಕೊನೆಯಲ್ಲಿ ಕೈಗೊಂಡ 'ನಿದಾನ'ದ ಪರಿಣಾಮ
**ನಿದಾನೆ** – (ಜೈನ) ಮುಂದಿನ ಜನ್ಮದಲ್ಲಿ ಇಂಥದೇ ಸುಖ ಪಡೆಯಬೇಕೆಂದು ಆಸೆ ಹೊಂದಿದವಳು
**ನಿದ್ದೆ** – ಸುಷುಪ್ತಿ, ಎಚ್ಚರವಿಲ್ಲದ ಸ್ಥಿತಿ
**ನಿದ್ದೆಗಣ್ಣು** – ನಿದ್ದೆಯ ಭಾರದಿಂದಾಗಿ ಮುಚ್ಚಿಕೊಳ್ಳುವ ಕಣ್ಣು
**ನಿದ್ದೆಗೆಡು** – ನಿದ್ದೆ ಇಲ್ಲದಿರು
**ನಿದ್ದೆಗೆಯ್** – ನಿದ್ದೆಮಾಡು
**ನಿದ್ರಾನಿದ್ರೆ** – (ಜೈನ) ದರ್ಶನಾವರಣೀಯಗಳಲ್ಲಿ ಒಂದು: ಮತ್ತೆ ಮತ್ತೆ ನಿದ್ದೆ ಬರುವುದು, ನೋಡಿ, 'ದರ್ಶನಾವರಣೀಯ' ಮತ್ತು 'ಘಾತಿಕರ್ಮ'
**ನಿದ್ರಾಪ್ರಬೋಧಿನಿ** – ನಿದ್ದೆಯಿಂದ ಎಚ್ಚರಗೊಳಿಸುವಂಥದು
**ನಿದ್ರಾಭಾರ** – ನಿದ್ದೆಯ ಗಾಢತೆ

**ನಿದ್ರಾಭಾವ** – ನಿದ್ರಾ+ಭಾವ, ನಿದ್ದೆಯ ಸ್ಥಿತಿ; ನಿದ್ರಾ+ಅಭಾವ, ನಿದ್ದೆ ಇಲ್ಲದಿರುವುದು
**ನಿದ್ರಾಮುದ್ರೆ** – ನಿದ್ದೆ ಕವಿದ ಸ್ಥಿತಿ
**ನಿದ್ರಾರಸ** – ನಿದ್ದೆಯ ಸಂತೋಷ
**ನಿದ್ರಾಲಸ್ಯ** – ನಿದ್ದೆಯಿಂದುಂಟಾಗುವ ಜಡತೆ
**ನಿದ್ರಾಲಿಂಗನವಿಮುಖ** – ನಿದ್ದೆಯಿಂದ ಎಚ್ಚರಗೊಂಡವನು
**ನಿದ್ರಾವಿದ್ರಾವಣ** – ನಿದ್ದೆಯನ್ನು ಹೋಗಿಸುವವನು
**ನಿದ್ರಿಸು** – ನಿದ್ದೆಮಾಡು
**ನಿದ್ರೆ** – ನಿದ್ದೆ; (ಜೈನ) ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಒಂದು, ನೋಡಿ 'ದರ್ಶನಾವರಣೀಯ'
**ನಿದ್ರೆಗೆಡು** – ನಿದ್ದೆಗೆಡು
**ನಿದ್ರೆಗೆಯ್** – ನಿದ್ದೆಮಾಡು
**ನಿದ್ರೆಗೆಯ್ಸು** – ನಿದ್ದೆ ಮಾಡಿಸು
**ನಿಧನ** – ಅಂತ್ಯ; ಸಾವು; ಹೂತಿಟ್ಟ ಹಣ
**ನಿಧನವೆತ್ತು** – ಬೈತಿಟ್ಟ ನಿಧಿಯನ್ನು ಮೇಲೆತ್ತು
**ನಿಧಾನ** – ಬೈತಿಟ್ಟ ಹಣ; ಐಶ್ವರ್ಯ; ನೆಲೆ
**ನಿಧಾನಿ** – ಆಶ್ರಯ
**ನಿಧಿ** – ಐಶ್ವರ್ಯ; ಹೂತಿಟ್ಟ ಹಣ; (ಜೈನ) ಚಕ್ರವರ್ತಿಗೆ ದೊರೆಯುವ ಒಂಬತ್ತು ನಿಧಿಗಳು, ನೋಡಿ 'ನವನಿಧಿ'
**ನಿಧಿಯೊಡೆಯ** – ಐಶ್ವರ್ಯದ ಒಡೆಯ
**ನಿಧಿಗಾಣ್** – ನಿಧಿಯನ್ನು ಕಾಣು
**ನಿಧಿದಾಣ** – ಹೂತಿಟ್ಟ ಹಣವಿರುವ ಜಾಗ
**ನಿಧಿಪತಿತ್ವ** – (ಜೈನ) ನವನಿಧಿಗಳ ಅಧಿಪತಿಯಾಗಿರುವುದು
**ನಿಧಿಪುರುಷ** – (ಜೈನ) ಚಕ್ರವರ್ತಿ
**ನಿಧಿಸಮಿತಿ** – (ಜೈನ) ನವನಿಧಿಗಳ ಗುಂಪು
**ನಿಧೀಶ** – ಕುಬೇರ; (ಜೈನ) ಚಕ್ರವರ್ತಿ
**ನಿಧೀಶ್ವರ** – ನಿಧೀಶ
**ನಿಧುವನ** – ಸಂಭೋಗ
**ನಿಧುವನನಿಕೇತನ** – ಸಂಭೋಗ ತಾಣ
**ನಿನತು(ತ್ತು)** – ನಿನ್ನದು
**ನಿನ(ನಾ)ದ** – ಶಬ್ದ
**ನಿನದಂಗೆಯ್** – ಶಬ್ದಮಾಡು
**ನಿನ್ನೆ** – ನೆನ್ನೆ, ಇವತ್ತಿಗೆ ಹಿಂದಿನ ದಿನ
**ನಿಪಾತ** – (ಬಾಣ)ಪ್ರಯೋಗ
**ನಿಪಾತಿಸು** – ನಾಶಮಾಡು; ಕೊಲ್ಲು
**ನಿಪಾನ** – ಚಿಕ್ಕ ಹೊಂಡ
**ನಿಪೀತ** – ಚೆನ್ನಾಗಿ ಕುಡಿದ
**ನಿಪುಣ** – ನಿಷ್ಣಾತ
**ನಿಪುಣತೆ** – ಪ್ರಾವೀಣ್ಯ
**ನಿಪುಣೆ** – ಪ್ರವೀಣೆ
**ನಿಪ್ಪಸರ** – ಹೆಚ್ಚಾದ
**ನಿಪ್ಪಸರಂಬೆಱು** – ಹೆಚ್ಚಾಗು
**ನಿಪ್ಪುಟಂ** – ಅಧಿಕವಾಗಿ
**ನಿಪ್ಪೊಸ(ತು)** – ಹೊಚ್ಚ ಹೊಸ(ತು)
**ನಿಬಂಧ** – ಕಾರಣ; ನಿಯಮ
**ನಿಬಂಧನ** – ಕಟ್ಟುವುದು
**ನಿಬಂಧನೆ** – ನಿಯಮ
**ನಿಬದ್ಧ** – ಅಂಟಿಕೊಂಡ
**ನಿಬದ್ಧಾಂಜಳಿ** – ಜೋಡಿಸಿದ ಕೈ, ಬೊಗಸೆ
**ನಿಬರ್ಹಣ** – ವಧೆ
**ನಿಬಿಡ** – ದಟ್ಟವಾದ
**ನಿಬಿಡಂಬೆಱು** – ದಟ್ಟಗೊಳ್ಳು
**ನಿಬಿಡತೆ** – ದಟ್ಟಣೆ
**ನಿಬಿಡಮತಿ** – ದಡ್ಡ(ತನ)
**ನಿಬಿಡಸ್ಯೂತ** – ಒತ್ತೊತ್ತಾಗಿ ಹೊಲಿದಿರುವುದು
**ನಿಬಿಡಿತ** – ಇಡಿಕಿರಿದ
**ನಿಬಿಡೋರು** – ನಿಬಿಡ+ಊರು, ತೋರ ತೊಡೆ
**ನಿಬುದ್ಧಿ** – (ನಿರ್ಬುದ್ಧಿ) ಬುದ್ಧಿಹೀನತೆ
**ನಿಬ್ಬಂದಿಗ** – (ನಿರ್ಬಂಧಿಕ) ಕಟ್ಟಿಗೊಳಗಾದವನು
**ನಿಬ್ಬಡವ** – ಕಡುಬಡವ
**ನಿಬ್ಬಣ** – ಮದುವೆಯ ಉತ್ಸವ
**ನಿಬ್ಬಣಿಗರ್** – ಮದುವೆಯ ದಿಬ್ಬಣದವರು
**ನಿಬ್ಬರ** – (ನಿರ್ಭರ) ತುಂಬಿದ; ಬತ್ತುವಿಕೆ
**ನಿಬ್ಬರಂಬಿರಿ** – ಚೆನ್ನಾಗಿ ಅರಳು
**ನಿಬ್ಬರಿಬಾಯ್** – ದೊಡ್ಡ ಬಾಯಿ
**ನಿಬ್ಬರಿಸು** – ತುಂಬಿಕೊ
**ನಿಬ್ಬೆಗ** – ಉದ್ವೇಗ
**ನಿಬ್ಬೆಱಗುವಡು** – ಅತ್ಯಾಶ್ಚರ್ಯ ಹೊಂದು
**ನಿಭ** – ಸಮಾನ
**ನಿಭೃತ** – ತುಂಬಿದ
**ನಿಭೃತೇಂಗಿತ** – ರಹಸ್ಯ ಅಭಿಪ್ರಾಯವುಳ್ಳವನು
**ನಿಮಗ್ನ** – ಮುಳುಗಿದ(ವನು)
**ನಿಮಿತ್ತ** – ಕಾರಣ; ಗುರಿ; (ಜೈನ) ಭವಿಷ್ಯ ಅರಿಯುವ ಎಂಟು ಬಗೆಯ ರೀತಿಗಳು: ಅಂತರಿಕ್ಷ (ನಭ), ಭೌಮ, ಅಂಗ, ಸವರ, ವ್ಯಂಜನ, ಲಕ್ಷಣ, ಭಿನ್ನ, ಸ್ವಪ್ನ
**ನಿಮಿತ್ತಜ್ಞ** – ಜ್ಯೋತಿಷಿ
**ನಿಮಿತ್ತಮಾತ್ರ** – ತೋರಿಕೆಯ ಕಾರಣ
**ನಿಮಿತ್ತವಿದ** – ನಿಮಿತ್ತಜ್ಞ
**ನಿಮಿತ್ತಾಂಗ** – (ಜೈನ) ನಿಮಿತ್ತಶಸ್ತ್ರ
**ನಿಮಿತ್ತಾಭ್ಯಾಸ** – (ಜೈನ) ನಿಮಿತ್ತದ ಅಭ್ಯಾಸ
**ನಿಮಿತ್ತಿಕ** – ಜ್ಯೋತಿಷಿ
**ನಿಮಿರ್** – ಹರಡು; ನೆಟ್ಟಗೆ ನಿಲ್ಲು
**ನಿಮಿರ್ಕೆ** – ನಿಮಿರುವಿಕೆ, ಹರಡುವಿಕೆ; ನೆಟ್ಟಗೆ ನಿಲ್ಲುವಿಕೆ; ಆಧಿಕ್ಯ
**ನಿಮಿರ್ಕೆಗುಂದು** – ಅತಿಶಯತೆ ಕುಂದು
**ನಿಮಿರ್ಕೆವಡೆ** – ಹಿರಿಮೆ ಪಡೆ
**ನಿಮಿರ್ಕೆವೆಱು** – ಹರಡು; ಚಾಚು
**ನಿಮಿರ್ಚು** – ಹರಡಿಕೊ; ನೇರಗೊಳ್ಳು; ಮಾಡು
**ನಿಮಿರ್ವೆಱು** – ಉದ್ದವಾಗು

**ನಿಮಿಷ** – ರೆಪ್ಪೆ ಮಿಟುಕಿಸುವುದು; ಒಮ್ಮೆ ರೆಪ್ಪೆ ಮಿಟುಕಿಸುವಷ್ಟು ಕಾಲ
**ನಿಮಿಷಾರ್ಧ** – ಅತ್ಯಲ್ಪಕಾಲ
**ನಿಮಿಸ** – ನಿಮಿಷ
**ನಿಮೀಲನ** – ಕಣ್ಣು ಮುಚ್ಚು
**ನಿಮೀಳಿತ** – ಮುಚ್ಚಿಕೊಂಡ
**ನಿಮೀಲಿತನಯನ** – ಮುಚ್ಚಿದ ಕಣ್ಣು(ಳ್ಳವನು)
**ನಿಮೀಲಿತಾಕ್ಷ** – ನಿಮೀಲಿತನಯನ
**ನಿಮೀಲಿಸು** – ಕಣ್ಣುಮುಚ್ಚು
**ನಿಮೇಷ** – ರೆಪ್ಪೆ ಮಿಟುಕಿಸು; ಅತ್ಯಲ್ಪ ಕಾಲ
**ನಿಮ್ನ** – ಆಳವಾದ (ಜಾಗ)
**ನಿಮ್ನಗಾತಟ** – ನದಿಯ ದಡ
**ನಿಮ್ನಗೆ** – (ನಿಮ್ನಗಾ) ನದಿ
**ನಿಮ್ನನಾಭಿ** – ಆಳವಾದ ಹೊಕ್ಕುಳು
**ನಿಮ್ನಪ್ರದೇಶ** – ತಗ್ಗಾದ ಜಾಗ
**ನಿಮ್ಮಳ** – (ನಿರ್ಮಲ) ಶುಭ್ರವಾದ
**ನಿಯಂತ್ರಿತ** – ಬಿಗಿದ
**ನಿಯತ** – ಹತೋಟಿಗೊಳಗಾದ; ದೃಢವಾದ; ಕ್ರಮಬದ್ಧ
**ನಿಯತಂ** – ತಪ್ಪದೆ
**ನಿಯತಪ್ರತೀತಿ** – ನಡೆಯಬೇಕಾದದ್ದು ನಡೆದೇ ತೀರುವುದೆಂಬ ತಿಳಿವಳಿಕೆ
**ನಿಯತವೃತ್ತಸ್ಥಿತ** – ಸ್ಥಿರ ನಡತೆಯುಳ್ಳವನು
**ನಿಯತಾಹಂಕೃತಿ** – ಅಹಂಕಾರವನ್ನು ನಿಯಂತ್ರಿಸಿದವನು
**ನಿಯತಿ** – ವಿಧಿ; ನಿಯಂತ್ರಣ
**ನಿಯತಿಕ್ರಮ** – ನಿಗದಿತ ರೀತಿ
**ನಿಯತೇಂದ್ರಿಯ** – ಇಂದ್ರಿಯನಿಗ್ರಹ ಮಾಡಿದವನು
**ನಿಯತ್ಯಂಗನೆ** – ಮೃತ್ಯುದೇವತೆ
**ನಿಯಮ** – ನಿಗ್ರಹ; ಕಟ್ಟಳೆ; ಕ್ರಮಬದ್ಧ ಆಚರಣೆ
**ನಿಯಮಜ್ಞ** – ನಿಯಮಗಳನ್ನು ತಿಳಿದವನು
**ನಿಯಮನಿಧಾನ** – ತಪವನ್ನೇ ನಿಧಿಯಾಗುಳ್ಳವನು, ತಪಸ್ವಿ
**ನಿಯಮಾಂತರಿತ** – ನಿಯಮಗಳಿಂದ ಕೂಡಿದ
**ನಿಯಮಿಸು** – ನಿರ್ಬಂಧಿಸು; ಅಪ್ಪಣೆಗೈ; ಗೊತ್ತುಮಾಡು
**ನಿಯಾಮಿಸು** – ನಿಯಮಿಸು
**ನಿಯುಕ್ತ** – ಸೇರಿಕೊಂಡಿರುವ
**ನಿಯುದ್ಧ** – ದ್ವಂದ್ವಗಾಳಗ
**ನಿಯುದ್ಧರಂಗ** – ಕುಸ್ತಿಯ ಕಣ
**ನಿಯೋಗ** – ಕಾರ್ಯ; ಸೇರುವುದು; ಸೇವೆ
**ನಿಯೋಗಿ** – ರಾಜಪ್ರತಿನಿಧಿ
**ನಿಯೋಜಿತ** – ಕೂಡಿಕೊಂಡಿರುವ
**ನಿಯೋಜಿಸು** – ಸೇರಿಸು; ನೇಮಿಸು
**ನಿರಂಕುಶೆ** – ಸ್ವೇಚ್ಛಾಚಾರಿಣಿ; ತಡೆಯಿಲ್ಲದವನು
**ನಿರಂಜನ** – ಕಣ್ಣ ಕಾಡಿಗೆಯಿಲ್ಲದ; ಅಂಟಿಕೊಳ್ಳದ(ವನು)
**ನಿರಂಜನಪದ** – ಪರಮಾತ್ಮಪದವಿ
**ನಿರಂತ** – ಅಂತವಿಲ್ಲದ
**ನಿರಂತರಂ ಮಾಡು** – ತೃಪ್ತಿಪಡಿಸು; ಸದಾ ಕಾಲ
**ನಿರಂತರಾಯ** – ಅಡಚಣೆಗಳಿಲ್ಲದಿರುವುದು
**ನಿರಂತರಿತ** – ನಡುವೆ ಎಡೆಯಿಲ್ಲದ, ಒತ್ತೊತ್ತಾದ
**ನಿರಂಬರ** – ಬತ್ತಲೆ
**ನಿರಂಶ** – ಅಂಶವಲ್ಲದ, ಅಖಂಡವಾದ
**ನಿರಕ್ಷೀಕೃತ** – ಕಣ್ಣಿಗೆ ಕಾಣದಂತೆ ಮಾಡಿದ
**ನಿರಘ** – ಪಾಪರಹಿತ
**ನಿರತ** – ತೊಡಗಿರುವ(ವನು)
**ನಿರತಿಕ್ರಮ** – ಅತಿಕ್ರಮ ಮಾಡದಿರುವುದು
**ನಿರತಿಶಯ** – ಬಹಳ ಅತಿಶಯವಾದ
**ನಿರತ್ಯಯಂ** – ನಾಶವಿಲ್ಲದುದು(ದವನು)
**ನಿರದ** – ಕೊಂದವನು
**ನಿರಧಿಷ್ಠಾನ** – ಆಧಾರರಹಿತವಾದುದು
**ನಿರನ್ನವಿಕಾರ** – ಆಹಾರವಿಲ್ಲದುದರಿಂದಾಗುವ ವಿಕಾರ
**ನಿರನ್ವಯ** – ಅನ್ವಯಗೊಳ್ಳದ
**ನಿರನ್ವೇಷ** – (ಜೈನ) ಸುಖಸಾಧನಗಳಿಗೆ ಹಾತೊರೆಯದಿರುವುದು; ಸತ್ಪ್ರಣೀತ, ಸಮಾನ, ನಿರುಪಾದಾನ, ನಿರನ್ವೇಷ, ದುಶ್ಚರ, ಪ್ರರೂಢ, ಅಹಿಂಸಾವ್ರತ, ಫಲವಂತ ಎಂಬ ಎಂಟು ಬಗೆಯ ಧರ್ಮಗಳಲ್ಲಿ ಒಂದು
**ನಿರಪರಾಧ** – ಅಪರಾದ ಮಾಡದಿರುವುದು
**ನಿರಪವಾದ** – ಅಪವಾದರಹಿತವಾದುದು
**ನಿರಪಾಯ** – ಸುರಕ್ಷಿತತೆ
**ನಿರಪೇಕ್ಷ** – ಯಾವುದಕ್ಕೂ ಆಸೆಪಡದವನು
**ನಿರಪೇಕ್ಷಕ** – ಅಪೇಕ್ಷೆಯಿಲ್ಲದ(ವನು)
**ನಿರಯ** – ನರಕ
**ನಿರಯಕ್ಷೇತ್ರ** – ನರಕಪ್ರದೇಶ
**ನಿರಯಜ** – ನರಕದಲ್ಲಿ ಹುಟ್ಟಿದವನು
**ನಿರಯನಿಳಯ** – ನಿರಯಕ್ಷೇತ್ರ
**ನಿರಯಭವ** – ನಿರಯಜ
**ನಿರಯವಾಸ** – ನರಕವಾಸ
**ನಿರರ್ಥ** – ನಿಷ್ಫಲ
**ನಿರರ್ಥಕ** – ವ್ಯರ್ಥವಾದುದು
**ನಿರರ್ಥಕಂ**– ವ್ಯರ್ಥವಾಗಿ
**ನಿರರ್ಥಕರ** – ಸಾರ್ಥಕ್ಯವಿಲ್ಲದ
**ನಿರಲ(ಳ)ಂಕಾರ** – ಅಲಂಕಾರವಿಲ್ಲದಿರುವಿಕೆ
**ನಿರವ** – ನಿರೂಪ
**ನಿರವದ್ಯ** – ಕಳಂಕರಹಿತ; ಉತ್ಕೃಷ್ಟವಾದುದು
**ನಿರವದ್ಯಚರಿತ್ರ** – ದೋಷರಹಿತ ನಡವಳಿಕೆಯವನು
**ನಿರವದ್ಯಮಾರ್ಗ** – ಶ್ರೇಷ್ಠವಾದ ಹಾದಿ
**ನಿರವದ್ಯವಿದ್ಯೆ** – ಉತ್ಕೃಷ್ಟ ವಿದ್ಯೆ
**ನಿರವದ್ಯವೃತ್ತ** – ನಿರವದ್ಯಚರಿತ್ರ
**ನಿರವದ್ಯಾಚಾರ** – ಉನ್ನತ ಆಚಾರ(ವುಳ್ಳವನು)
**ನಿರವದ್ಯಾನ್ವಯ** – ದೋಷವಿಲ್ಲದ ವಂಶ

**ನಿರವದ್ಯಾಹಾರ** – ಪರಿಶುದ್ಧ ಆಹಾರ
**ನಿರವಧಿ** – ಮಿತಿಯಿಲ್ಲದ
**ನಿರವಧಿಕ** – ಅತಿಶಯವಾದ
**ನಿರವಶೇಷ** – ಏನೂ ಉಳಿಯದ; ಪರಿಪೂರ್ಣತೆ
**ನಿರವಶೇಷಂ** – ಉಳಿಯದಂತೆ; ಪೂರ್ತಿಯಾಗಿ
**ನಿರವಸ್ಥ** – ಬದುಕಿನ ವಿವಿಧ ಘಟ್ಟಗಳಿಲ್ಲದವನು
**ನಿರವಿಸು** – ನಿರೂಪಿಸು; ಬಿನ್ನವಿಸಿಕೊ; ನಿಯಂತ್ರಿಸು
**ನಿರಸನ** – ಹೊರಹಾಕುವುದು; ಕೊನೆ
**ನಿರಸ್ತ** – ದೂರೀಕರಿಸಿದ; ಮೀರಿಸಿದ
**ನಿರಸ್ತಮಿತ** – ಹೊರಹಾಕಿದ
**ನಿರಳಂಕೃತಿ** – ಅಲಂಕಾರರಹಿತ
**ನಿರಾಕರಣಂಗೆಯ್** – ಅಲ್ಲಗಳೆ
**ನಿರಾಕರಿಸು** – ನಿರಾಕರಣಂಗೆಯ್
**ನಿರಾಕಾರ (ಅನಶನ)** – (ಜೈನ) ಯಾವುದೇ ಫಲಾಪೇಕ್ಷೆಯಿಲ್ಲದೆ ಮಾಡುವ ಉಪವಾಸ
**ನಿರಾಕುಲ(ಳ)** – ದುಃಖವಿಲ್ಲದ
**ನಿರಾಕುಲ(ಳ)ಂ** – ನಿರುಮ್ಮಳವಾಗಿ
**ನಿರಾಕುಳತೆ** – ನಿರುಮ್ಮಳ
**ನಿರಾಕೃತ** – ಹೋಗಲಾಡಿಸಿದ
**ನಿರಾತಂಕ** – ಅಡ್ಡಿಯಿಲ್ಲದ
**ನಿರಾದರ** – ಆದರವಿಲ್ಲದ
**ನಿರಾದಾನ** – ಪರಿಣಾಮರಹಿತ
**ನಿರಾನಂದ** – ಆನಂದವಿಲ್ಲದೆ
**ನಿರಾಪೇಕ್ಷ** – ನಿರಪೇಕ್ಷ, ಬಯಕೆಯಿಲ್ಲದ; ಸುಲಭ
**ನಿರಾಭರಣ** – ಆಭರಣವಿಲ್ಲದ, ಅಲಂಕಾರರಹಿತತೆ
**ನಿರಾಮಯ** – ರೋಗ ಚಿಂತೆಗಳಿಲ್ಲದ; ಮೋಕ್ಷ
**ನಿರಾಲಂಬನ** – ಆಧಾರರಹಿತ
**ನಿರಾಲಸ್ಯ** – ಆಲಸ್ಯವಿಲ್ಲದುದು
**ನಿರಾಲೋಚಂ** – ಯೋಚನೆಯಿಲ್ಲದೆ
**ನಿರಾಶ್ರಯ** – ಆಶ್ರಯವಿಲ್ಲದ
**ನಿರಾಸ್ರವ** – (ಜೈನ) ಕರ್ಮದಿಂದ ಬಿಡುಗಡೆಗೊಂಡವನು, ನೋಡಿ, 'ಆಸ್ರವ'
**ನಿರಾಳಂ** – ಚಿಂತೆಯಿಲ್ಲದೆ
**ನಿರಿ** – ಚುಚ್ಚು; ಹೋಗಲಾಡಿಸು
**ನಿರಿಂದ್ರಿಯ** – ಇಂದ್ರಿಯಗಳಿಗೆ ಹೊರತಾದ
**ನಿರಿಂದ್ರಿಯಸುಖ** – ಇಂದ್ರಿಯಗಳಿಗೆ ಹೊರತಾದ ಸುಖ
**ನಿರೀಕ್ಷಣ** – ದೃಷ್ಟಿ
**ನಿರೀಕ್ಷಿಸು** – ನೋಡಿ
**ನಿರೀಶ** – ಒಡೆಯನಿಲ್ಲದ(ವನು)
**ನಿರೀಹ** – ಬಯಕೆಗಳಿಲ್ಲದ(ವನು)
**ನಿರೀಹತಾವೃತ್ತಿ** – ಆಸೆಗಳಿಲ್ಲದ ಸ್ವಭಾವ
**ನಿರೀಹಿತ** – ಆಸೆಗಳಿಲ್ಲದವನು
**ನಿರುಜ** – ರೋಗಗಳಿಲ್ಲದ(ವನು)
**ನಿರುತಂ** – ನಿಶ್ಚಿತವಾಗಿ
**ನಿರುತ್ತರೆ** – ಉತ್ತರ ನೀಡಲು ಸಮರ್ಥಳಾಗದವಳು
**ನಿರುದ್ಧ** – ತಡೆಹಿಡಿಯಲ್ಪಟ್ಟ
**ನಿರುದ್ಧಕರ** – ತಡೆಯುವ ಕೈ
**ನಿರುದ್ಧಕರಣ** – ಇಂದ್ರಿಯಗಳನ್ನು ಪ್ರತಿಬಂಧಿಸುವಿಕೆ
**ನಿರುದ್ಧಯೋಗ** – ಎಲ್ಲವನ್ನೂ ಅಂಕೆಯಲ್ಲಿಡುವ ಯೋಗ
**ನಿರುದ್ಧೇಂದ್ರಿಯೆ** – ಇಂದ್ರಿಯನಿಗ್ರಹ ಮಾಡಿದವಳು
**ನಿರುಪಮ** – ಹೋಲಿಕೆಯಿಲ್ಲದ; ಹೋಲಿಸಲಾಗದ
**ನಿರುಪಮಚರಿತ್ರೆ** – ಹೋಲಿಕೆಗೆ ಮೀರಿದ ನಡತೆಯುಳ್ಳವಳು
**ನಿರುಪಮತೇಜ** – ಹೋಲಿಕೆಗೆ ಮೀರಿದ ತೇಜಸ್ಸು(ಳ್ಳವನು)
**ನಿರುಪಮಸುಖ** – ಹೋಲಿಕೆಗೆ ಮೀರಿದ ಸುಖ
**ನಿರುಪಮಾನ** – ಹೋಲಿಕೆಯಿಲ್ಲದ
**ನಿರುಪಮಿತ** – ಹೋಲಿಸಲಾಗದ
**ನಿರುಪಾದಾನ** – (ಜೈನ) ಭೋಗವಸ್ತುವನ್ನು ಬಯಸದ ಹಾಗೂ ಸ್ವೀಕರಿಸದ ಮನೋಭಾವ
**ನಿರುಪಾಧಿಕ** – ತೊಂದರೆಗಳಿಗೊಳಗಾಗದ
**ನಿರೂಪಕ್ರಿಯಾಪ್ರವೃತ್ತ** – ತತ್ವೋಪದೇಶಕ
**ನಿರೂಪಣ** – ವಿವರಿಸುವಿಕೆ
**ನಿರೂಪಿಸು** – ವಿವರಿಸು
**ನಿರ್ಕಱಸು** – ಬೆರೆತುಕೊ
**ನಿರ್ಗಡಿ** – ವಿಚಾರಹೀನ
**ನಿರ್ಗತ** – ಈಚೆಗೆ ಹೊರಟ
**ನಿರ್ಗಮ(ನ)** – ಹೊರಹೊರಡುವಿಕೆ
**ನಿರ್ಗಲಿ(ಳ)ತ**– ಸೋರಿಹೋದ
**ನಿರ್ಗಹನ** – ಆಳವಿಲ್ಲದ; ಸುಲಭವಾದ
**ನಿರ್ಗಹನವೃತ್ತಿ** – ಹಗುರ ರೀತಿ; ಸುಲಭ ರೀತಿ
**ನಿರ್ಗಾವಿಲ** – ದಡ್ಡನಲ್ಲದವನು
**ನಿರ್ಗುಂಡಿ** – ಲಕ್ಕಿ ಗಿಡ, ಸಿಂಧುವಾರ
**ನಿರ್ಗುಣ** – ಗುಣರಹಿತ; ನಿಷ್ಕರುಣಿ
**ನಿರ್ಗುಣತ್ವ** – ಗುಣಾತೀತ
**ನಿರ್ಗೇಡಿ** – ಬುದ್ಧಿಗೇಡಿ
**ನಿರ್ಗೋತ್ರ** – ದೇಶಬಂಧುಗಳನ್ನು ಕಳೆದುಕೊಂಡವನು
**ನಿರ್ಗ್ರಂಥ** – ಬತ್ತಲೆ; ನಿರ್ಮಲವಾದುದು; ಶ್ರವಣ
**ನಿರ್ಗ್ರಂಥಯತಿ** – ಜೈನಯತಿ
**ನಿರ್ಗ್ರಂಥರೂಪ(ಪು)** – ದಿಗಂಬರತ್ವ; ಬತ್ತಲೆ
**ನಿರ್ಘಾತ** – ಸಿಡಿಲು; ಬಲವಾದ ಪೆಟ್ಟು; ಕತ್ತಿಕಾಳಗದ ಒಂದು ವರಸೆ
**ನಿರ್ಘಾತವಾತ** – ಸಿಡಿಲು ಬಡಿಯುವುದು
**ನಿರ್ಘೃಣ** – ನಿಷ್ಕರುಣಿ
**ನಿರ್ಘೋಷ(ಣ)** – ಮೊರೆತ; ಜೋರಾದ ಧ್ವನಿ
**ನಿರ್ಜಂತುಕ** – ಜನರಿಲ್ಲದ
**ನಿರ್ಜಡ** – ಜಡತ್ವವಿಲ್ಲದ, ಹುರುಪಿನ
**ನಿರ್ಜರ** – ದೇವತೆ
**ನಿರ್ಜರಕರಣ** – (ಜೈನ) ಕರ್ಮಕ್ಷಯಗೊಳಿಸುವುದು
**ನಿರ್ಜರಪರ** – ರಾಕ್ಷಸ

**ನಿರ್ಜರಪರಭಂಗ** – ನಿರ್ಜರಪರ+ಭಂಗ, ರಾಕ್ಷಸಸಂಹಾರಿ
**ನಿರ್ಜರಾತತ್ವ** – (ಜೈನ) ಏಳು ತತ್ವಗಳಲ್ಲಿ ಒಂದು, ನೋಡಿ, 'ಸಪ್ತತತ್ವ'
**ನಿರ್ಜರಾರ್ಯ** – ಬೃಹಸ್ಪತಿ
**ನಿರ್ಜರಾವಿಧಿ** – (ಜೈನ) ನಿರ್ಜರಾತತ್ವ
**ನಿರ್ಜರಿಸು** – ಕರ್ಮಕ್ಷಯಮಾಡು
**ನಿರ್ಜರೆ** – ದೇವತಾಸ್ತ್ರೀ; (ಜೈನ) ನಿರ್ಜರಾತತ್ವ
**ನಿರ್ಜರಾನುಪ್ರೇಕ್ಷೆ** – (ಜೈನ) ಜೈನಮುನಿಗಳ ಹನ್ನೆರಡು ಬಗೆಯ ಧ್ಯಾನಚಿಂತನೆ: ನೋಡಿ, 'ಅನುಪ್ರೇಕ್ಷೆ' ಮತ್ತು ದ್ವಾದಶಾನುಪ್ರೇಕ್ಷೆ'
**ನಿರ್ಜಳ** – ಬತ್ತಿಹೋದ
**ನಿರ್ಜಿತ** – ಗೆದ್ದ
**ನಿರ್ಜೀವತೆ** – ಜೀವವಿಲ್ಲದ ಸ್ಥಿತಿ
**ನಿರ್ಝರ** – ಗಿರಿನದಿ
**ನಿರ್ಝರಜಲ** – ಗಿರಿನದಿಯ ನೀರು
**ನಿರ್ಝರಪ್ಲವ** – ಗಿರಿನದಿಯ ಪ್ರವಾಹ
**ನಿರ್ಣಯಾರ್ಥ** – ನಿರ್ದಿಷ್ಟ ಅರ್ಥ
**ನಿರ್ಣಯಿಸು** – ಆಚರಿಸು
**ನಿರ್ಣೀತ** – ನಿಶ್ಚಿತಗೊಂಡ
**ನಿರ್ದಯ** – ದಯಾರಹಿತ
**ನಿರ್ದಯೆ** – ದಯೆಯಿಲ್ಲದ(ವಳು)
**ನಿರ್ದಾ(ಧಾ)ಟಿಸು** – ಬಿಸುಡು, ತಿರಸ್ಕರಿಸು
**ನಿರ್ದಾಯಾದ್ಯ** – ದಾಯಾದಿಗಳಿಲ್ಲದ ಸ್ಥಿತಿ
**ನಿರ್ದಾರಕ** – ಸೀಳುವವನು
**ನಿರ್ದಾರಿಸು** – ಸೀಳು
**ನಿರ್ದೇಶ** – ದೇಶವಿಲ್ಲದ; ಆದೇಶ
**ನಿರ್ದೋಷ** – ದೋಷವಿಲ್ಲದ(ವನು)
**ನಿರ್ದೋಷತೆ** – ದೋಷರಹಿತತೆ
**ನಿರ್ದೋಷಿ** – ದೋವಿಲ್ಲದವನು
**ನಿರ್ದ್ವಂದ್ವ** – ಎರಡಿಲ್ಲದ; ಸಂಘರ್ಷವಿಲ್ಲದ
**ನಿರ್ದ್ವಂದ್ವಭಾವ** – ದ್ವಂದ್ವಗಳನ್ನು ಮೀರಿದ ಮನಸ್ಸು
**ನಿರ್ಧನ** – ಬಡವ, ಹಣವಿಲ್ಲದವನು
**ನಿರ್ಧರಂಗೈ** – ತೀರ್ಮಾನ ಕೈಗೊಳ್ಳು
**ನಿರ್ಧಾಮಧೂಮಂ** – ಹೊಗೆಯೂ ಉಳಿಯದಂತೆ
**ನಿರ್ಧಾರಣ** – ನಿಶ್ಚಯ
**ನಿರ್ಧೂತ** – ಹರಡಿಕೊಂಡ
**ನಿರ್ಧೌತ** – ತೊಳೆದ
**ನಿರ್ನವಿಸು** – ಬಾಗು
**ನಿರ್ನಾಮಿಕೆ** – ಹೆಸರಿಲ್ಲದವಳು
**ನಿರ್ನಿಕ್ತ** – ತೊಳೆದ
**ನಿರ್ನಿಮಿತ್ತ** – ಕಾರಣರಹಿತವಾಗಿ
**ನಿರ್ನಿಮೇಷ** – ರೆಪ್ಪೆ ಮಿಟುಕಿಸದ; ದೇವತೆ
**ನಿರ್ನಿಮೇಷದ್ವೇಷಿ** – ದೇವತೆಗಳ ದ್ವೇಷಿ, ರಾಕ್ಷಸ
**ನಿರ್ನಿಮೇಷಾಕ್ಷಿ** – ರೆಪ್ಪೆ ಮಿಟುಕಿಸದ ಕಣ್ಣು
**ನಿರ್ನೀತ** – ನಿರ್ಣೀತ, ತೀರ್ಮಾನಗೊಂಡ
**ನಿರ್ನೀರದ** – ಮೋಡವಿಲ್ಲದ
**ನಿರ್ನೇರ** – ಆಧಾರರಹಿತ
**ನಿರ್ನೇರಂ** – ನಿರ್ನಿಮಿತ್ತ, ಅಕಾರಣ
**ನಿರ್ಬಂಧ** – ದೃಢತೆ
**ನಿರ್ಬಂಧಿಕ** – ಒತ್ತಾಯಿಸುವವನು
**ನಿರ್ಬಾಧಂ** – ತಡೆಯಿಲ್ಲದೆ
**ನಿರ್ಬುದ್ಧಿತನ** – ಬುದ್ಧಿಗೇಡಿತನ
**ನಿರ್ಬೇಗ** – (ನಿರ್ವೇಗ) ವೈರಾಗ್ಯ
**ನಿರ್ಭಂಗ** – ನಾಶರಹಿತ
**ನಿರ್ಭರ** – ತುಂಬಿದ
**ನಿರ್ಭರಂ** – ತುಂಬಿದಂತೆ
**ನಿರ್ಭರಗರ್ಭ** – ತುಂಬು ಬಸಿರು
**ನಿರ್ಭರಭಕ್ತಿ** – ಗಾಢ ಭಕ್ತಿ
**ನಿರ್ಭರಯೌವನ** – ತುಂಬು ಹರಯ
**ನಿರ್ಭರರಾಗ** – ಅತಿಶಯ ಪ್ರೀತಿ
**ನಿರ್ಭರಸ್ವೇದ** – ತುಂಬ ಬೆವರು
**ನಿರ್ಭರಾನಂದ** – ಅತ್ಯಾನಂದ
**ನಿರ್ಭರಾನಂದೆ** – ತುಂಬು ಸಂತೋಷವುಳ್ಳವಳು
**ನಿರ್ಭರೋಕ್ತಿ** – ಬಿರುನುಡಿ
**ನಿರ್ಭರ್ತ್ಸಿತ** – ತಿರಸ್ಕೃತವಾದ
**ನಿರ್ಭವ** – ಹುಟ್ಟಿಲ್ಲದ(ವನು)
**ನಿರ್ಭಿನ್ನ** – ಭೇದಿಸಿಕೊಂಡು ಬಂದ
**ನಿರ್ಭೇದತೆ** – ಸೀಳಲಾರದುದು
**ನಿರ್ಭೇದಿ** – ಸೀಳುವವನು
**ನಿರ್ಭೇದಿಸು** – ಸೀಳು
**ನಿರ್ಮತ್ಸರ** – ಅಸೂಯೆಯಿಲ್ಲದ(ವನು)
**ನಿರ್ಮಥನ** – ಕಡೆಯು; ನಾಶಮಾಡು
**ನಿರ್ಮಲ** – ನಿಷ್ಕಲ್ಮಶ
**ನಿರ್ಮಲ(ಳ)ತೆ** – ಶುದ್ಧತೆ
**ನಿರ್ಮಲತೆವೆಱು** – ಪರಿಶುದ್ಧವಾಗು
**ನಿರ್ಮಲ(ಳ)ತ್ವ** – ಪರಿಶುದ್ಧತೆ
**ನಿರ್ಮಲಾಕ್ಷತೆ** – ಪವಿತ್ರಾಕ್ಷತೆ
**ನಿರ್ಮಳೀಕೃತ** – ಪರಿಶುದ್ಧಗೊಂಡ
**ನಿರ್ಮಳಮೌಕ್ತಿಕ** – ಅಸಲಿ ಮುತ್ತು
**ನಿರ್ಮಳಾಂಭ** – ಶುದ್ಧವಾದ ನೀರು
**ನಿರ್ಮಾಣ** – ರಚಿಸುವುದು
**ನಿರ್ಮಾಪಣ** – ಕಟ್ಟಿಸುವುದು
**ನಿರ್ಮಿತ** – ರಚಿತವಾದುದು
**ನಿರ್ಮಿಸು** – ರಚಿಸು
**ನಿರ್ಮುಕ್ತಿ** – ಬಿಡುಗಡೆ; ಮೋಕ್ಷ
**ನಿರ್ಮುಕ್ತೋಷ್ಮ** – ನಿರ್ಮುಕ್ತ+ಊಷ್ಮ, ಬಿಸಿಯಿಲ್ಲದ
**ನಿರ್ಮೂಲಂಮಾಡು** – ಬೇರುಸಮೇತ ಕಿತ್ತಸೆ
**ನಿರ್ಮೂಲನ** – ಬೇರುಸಹಿತ ಕೀಳುವುದು
**ನಿರ್ಮಲನಂಗೆಯ್** – ಬೇರುಸಮೇತ ಕಿತ್ತಸೆ
**ನಿರ್ಮೂಲನಕರ** – ಬೇರುಸಹಿತ ಕಿತ್ತೆಸೆಯುವವನು
**ನಿರ್ಮೂಲಿ(ಳಿ)ಸು** – ನಿರ್ಮಲನಂಗೆಯ್

**ನಿರ್ಮೋಕ** – ಹಾವಿನ ಪೊರೆ
**ನಿರ್ಮೋಹ** – ಮೋಹರಾಹಿತ್ಯ
**ನಿರ್ಮೋಹಿ** – ಮೋಹರಹಿತನಾದವನು
**ನಿರ್ಯದ್ದಾನಗಜ** – ನಿರ್ಯತ್+ದಾನಗಜ, ಸುರಿಸುವ ಮದೋದಕದ ಆನೆ, ಮದಿಸಿದ ಆನೆ
**ನಿರ್ಯಾಣ** – ಆನೆಯ ಕುಡಿನೋಟ
**ನಿರ್ಯಾತ** – ಹೊರಹೋದ
**ನಿರ್ಯಾಪಕಾಚಾರ್ಯ** – (ಜೈನ) ಸಲ್ಲೇಖನವ್ರತವನ್ನು ಉಪದೇಶಿಸುವವನು
**ನಿರ್ಯಾಸ** – ಮರದಿಂದ ಒಸರುವ ಅಂಟು
**ನಿರ್ಯೂಹ** – ಬಾಗಿಲು; ತಲೆಯ ಆಭರಣ
**ನಿರ್ಲಜ್ಜ** – ಲಜ್ಜೆಯಿಲ್ಲದ(ವನು)
**ನಿರ್ಲಜ್ಜಿಕೆ** – ಲಜ್ಜೆಯಿಲ್ಲದಿರುವಿಕೆ
**ನಿರ್ಲಯ** – ನಾಶರಹಿತನಾದವನು
**ನಿರ್ಲೋಟಿಸು** – ತುಳಿದುಹಾಕು
**ನಿರ್ವಂದ** – ನಿರ್ಬಂಧ, ಒತ್ತಾಯ
**ನಿರ್ವಚಿಸು** – ವಿವರಿಸು
**ನಿರ್ವರಂ** – ಬಿರುಸಾಗಿ
**ನಿರ್ವರಂಪೊಯ್** – ಬಿರುಸಾಗಿ ಅಪ್ಪಳಿಸು
**ನಿರ್ವರ್ತಕ** – ಕರ್ತವ್ಯವನ್ನು ಮಾಡಿ ಪೂರೈಸುವ
**ನಿರ್ವರ್ತಿತ** – ಮಾಡಿ ಮುಗಿಸಿದ
**ನಿರ್ವರ್ತಿಸು** – ಮಾಡಿ ಮುಗಿಸು
**ನಿರ್ವಹಣಲೇಖೆ** – ಚಿತ್ರರಚನೆಯ ಕೊನೆಯಲ್ಲಿ ಬರೆಯುವ ಮುಕ್ತಾಯರೇಖೆಗಳು
**ನಿರ್ವಹಣಸ್ಥಿತಿ** – ಮುಕ್ತಾಯದ ಹಂತ
**ನಿರ್ವಹಿಸು** – ಮುಂದುವರೆಸು; ಸಮರ್ಪಕವಾಗಿ ಮುಗಿಸು; ಧರಿಸು
**ನಿರ್ವಾಣ** – ಮುಗಿತಾಯ; ಬತ್ತಲೆತನ; ಮೋಕ್ಷ
**ನಿರ್ವಾಣಪದ** – ಮೋಕ್ಷಪದವಿ
**ನಿರ್ವಾಣಪೂಜೆ** – ಮೋಕ್ಷ ಗಳಿಸಿದವನ ಪೂಜೆ
**ನಿರ್ವಾಣಭೂಮಿ** – ನಿರ್ವಾಣ ಪಡೆಯುವ ಕ್ಷೇತ್ರ
**ನಿರ್ವಾಣರೇಖೆ** – ನಿರ್ವಹಣಲೇಖೆ; ಸೀಮಾರೇಖೆ
**ನಿರ್ವಾಣರೇಖೆಗೊಳ್** – (ಚಿತ್ರದ) ಕೊನೆಯ ಗೆರೆಗಳನ್ನು ರಚಿಸು
**ನಿರ್ವಾಣರೇಖೆವಡೆ** – ನಿರ್ವಾಣರೇಖೆಗೊಳ್
**ನಿರ್ವಾಣೋರ್ವಿ** – ನಿರ್ವಾಣ+ಉರ್ವಿ, ನಿರ್ವಾಣಭೂಮಿ
**ನಿರ್ವಾತ** –
**ನಿರ್ವಾಪಣ** – ನೀಗುವಿಕೆ
**ನಿರ್ವಾಯ** – ಒಂದು ಬಗೆಯ ಬಾಣ
**ನಿರ್ವಾಹ** – ಉಪಾಯ
**ನಿರ್ವಾಹರೇಖೆ** – ನಿರ್ವಹಣಲೇಖೆ
**ನಿರ್ವಿಕಲ್ಪ** – ವಿಕಲ್ಪಗೊಳ್ಳದ(ವನು), ಸ್ಥಿರವಾದ
**ನಿರ್ವಿಕಾರತೆ** – ಬದಲಾಗದ ಸ್ಥಿತಿ
**ನಿರ್ವಿಘ್ನ** – ತೊಡಕಿಲ್ಲದ
**ನಿರ್ವಿಚಾರ** – ಆಲೋಚಿಸದಿರುವುದು
**ನಿರ್ವಿಚಿಕಿತ್ಸೆ** – (ಜೈನ) ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಒಂದು; ದೇಹದ ಮೇಲೆ ಪ್ರೇಮ ಅಥವಾ ದ್ವೇಷವಿಲ್ಲದಿರುವುದು
**ನಿರ್ವಿದ್ಯ** – ವಿದ್ಯೆಯನ್ನು ಕಳೆದುಕೊಂಡವನು
**ನಿರ್ವಿಶೇಷ** – ವಿಶಿಷ್ಟತೆಯಿಲ್ಲದ; ಸಮಾನ; ನಿರ್ವಿಶೇಷಬ್ರಹ್ಮ
**ನಿರ್ವಿಷ** – ವಿಷ ಇಳಿಯುವುದು; ವಿಷವಿಲ್ಲದ
**ನಿರ್ವಿಷಯ** – ವಿಷಯಾಸಕ್ತಿಯಿಲ್ಲದುದು
**ನಿರ್ವಿಷೀಕರಣ** – ವಿಷ ಇಳಿಸುವುದು
**ನಿರ್ವಿಷೀಕರಣಂಗೆಯ್** – ವಿಷ ಇಳಿಯುವಂತೆ ಮಾಡುವುದು
**ನಿರ್ವೃತ** – ಸಮಾಧಾನ ಪಡೆದ(ವನು)
**ನಿರ್ವೃತಿ** – ಮುಕ್ತಿ
**ನಿರ್ವೃತಿಕರ** – ಸಂತಸದಾಯಕ – ಮುಕ್ತಿದಾಯಕ–
**ನಿರ್ವೃತಿಪದ** – ಮೋಕ್ಷಪದವಿ
**ನಿರ್ವೃತಿವಿದೂರ** – ಮೋಕ್ಷಕ್ಕೆ ದೂರನಾದವನು
**ನಿರ್ವೃತಿಸೌಖ್ಯ** – ಮುಕ್ತಿಯ ಸುಖ
**ನಿರ್ವೇಗ** – ಬೇಸರ; ವೈರಾಗ್ಯ
**ನಿರ್ವೇಗರಸ** – ವಿರಕ್ತಿಯ ಭಾವ(ವುಳ್ಳವನು)
**ನಿರ್ವೇದ** – ದುಃಖ
**ನಿರ್ವೇದಂಗೊಳ್** – ದುಃಖ ಅನುಭವಿಸು
**ನಿರ್ವೇದನಿ** – (ಜೈನ) ನಾಲ್ಕು ಬಗೆಯ ಧರ್ಮಕತೆಗಳಲ್ಲಿ ಒಂದು; ಪಾಪಫಲವನ್ನು ನಿರೂಪಿಸುವುದು, ನೋಡಿ, 'ಧರ್ಮಕಥೆ'
**ನಿರ್ವ್ಯಗ್ರ** – ಹೊಯ್ದಾಟವಿಲ್ಲದ
**ನಿರ್ವ್ಯಗ್ರತೆ** – ಹೊಯ್ದಾಟವಿಲ್ಲದುದು, ನಿಶ್ಚಿಂತೆ
**ನಿರ್ವ್ಯಭಿಚಾರ** – ಚಂಚಲತೆಯಿಲ್ಲದಿರುವುದು, ಸ್ಥಿರತೆ
**ನಿರ್ವ್ಯಯ** – ಕಡಿಮೆಯಾಗದ; ಮೋಕ್ಷಪದವಿ
**ನಿರ್ವ್ಯಾಕುಲ(ಳ)** – ಚಿಂತೆಯಿಲ್ಲದ
**ನಿರ್ವ್ಯಾಜ** – ಕಾರಣವಿಲ್ಲದ; ಕಪಟರಹಿತವಾದ
**ನಿರ್ವ್ಯಾಜಂ** – ಸುಮ್ಮನೆ
**ನಿರ್ವ್ಯಾಜಶೌರ್ಯ** – ಸಹಜಶೌರ್ಯ
**ನಿರ್ವ್ಯಾಧಿತ** – ರೋಗವಿಲ್ಲದ
**ನಿರ್ವ್ರಣ** – ದೋಷವಿಲ್ಲದ; ಗಾಯವಿಲ್ಲದ
**ನಿರ್ಹಾಸ** – ಅರಳದ; ಜೋಲುಬೀಳದ
**ನಿರ್ಹೇತುಕ** – ಕಾರಣವಿಲ್ಲದ್ದು
**ನಿಲ್** – ಗತಿಮುಕ್ತವಾಗು; ಚಲನೆಯನ್ನು ಸ್ಥಗಿತಗೊಳಿಸು; ಸ್ಥಿರವಾಗು
**ನಿಲ(ಳ)ಯ** – ಆವಾಸ, ಮನೆ
**ನಿಲವು** – ನೆಲಸುವಿಕೆ
**ನಿಱ(ಳ)ಂಪ** – ದೇವತೆ
**ನಿಱ(ಳ)ಂಪನಿಲ(ಳ)ಯ** – ದೇವತೆಗಳ ಆವಾಸ, ಸ್ವರ್ಗ
**ನಿಱಪು** – ನಿಲ್ಲಿಸು; ಪ್ರತಿಷ್ಠಾಪಿಸು
**ನಿಱಸು** – ನಿಲಿಪು
**ನಿಲುಂಬು** – ಒಟ್ಟುಗೂಡಿಸು; ಪುಂಜೀಕರಿಸು; ಗುಂಪಾಗು

**ನಿಲೆನುಡಿ** – ದೃಢವಾಗಿ ಹೇಳು; ಪ್ರತಿಜ್ಞೆಮಾಡು
**ನಿಲ್ಕಿಸು** – ತಲುಪು, ಎಟುಕು
**ನಿಲ್ಮಾನಸ** – ನಿಂತ ಮನುಷ್ಯ
**ನಿಲ್ಲದಿಕೆ** – ನಿಲ್ಲದಿರುವುದು
**ನಿವರ್ತನ** – ಮಲ್ಲಯುದ್ಧದ ಒಂದು ವರಸೆ
**ನಿವರ್ತನೆ** – ವಾಪಸಾಗುವುದು
**ನಿವರ್ತಿಸು** – ಮರೆಯಾಗು
**ನಿವಸನ** – ಉಡುಗೆ
**ನಿವಹ** – ಸಮೂಹ
**ನಿವ(ವಾ)ಳವಟ್ಟ** – ನಿವಾಳಿಗೊಳ್ಳು
**ನಿವ(ವಾ)ಳಸು** – ದೃಷ್ಟಿ ತೆಗೆ, ಸುತ್ತಿಸು
**ನಿವಾತ** – ಗಾಳಿಯಿಲ್ಲದ
**ನಿವಾರಿಸು** – ಹೋಗಿಸು
**ನಿವಾಸ** – ಮನೆ; ಆಶ್ರಯ
**ನಿವಾಸಿ(ನಿ)** – ವಾಸಿಸುವವನು(ಳು)
**ನಿವಾಳ** – ಆರತಿ; ದೃಷ್ಟಿಪರಿಹಾರಕ
**ನಿವಾಳವಟ್ಟಂ(ಟ್ಟು)ಮಾಡು** – ನಿವಾಳಿಸಿದಂತೆ ನಾಶವಾಗು
**ನಿವಾಳಸು** – ಆರತಿಯೆತ್ತು; ದೃಷ್ಟಿತೆಗೆ
**ನಿವಿಷ್ಟ** – ಕುಳಿತುಕೊಂಡ(ವನು); ನೆಲೆಗೊಂಡ
**ನಿವೃತ** – ಸುತ್ತುವರಿದ
**ನಿವೃತ್ತಿ** – ಬಿಡುಗಡೆ; ವೈರಾಗ್ಯ
**ನಿವೃತ್ತಿಧರ್ಮ** – ವೈರಾಗ್ಯಪರತೆ
**ನಿವೃತ್ತಿಪರಿಣತಿ** – ವೈರಾಗ್ಯಭಾವ
**ನಿವೇದಕ** – ಹೇಳುವ(ವನು)
**ನಿವೇದಿತ** – ನಿರೂಪಣೆಗೊಂಡ(ವನು)
**ನಿವೇದಿಸು** – ನಿರೂಪಿಸು; ಅರ್ಪಿಸು
**ನಿವೇಶ** – ಸ್ಥಳ
**ನಿವೇಶಿತ** – ಇರಿಸಲಾದ
**ನಿವೇಶ್ಯ** – ಇರಲು ಯೋಗ್ಯವಾದ(ದ್ದು)
**ನಿಶಟ** – ರಾಕ್ಷಸ
**ನಿಶತ** – ಹರಿತವಾದ
**ನಿಶಾಂತ** – ಆವಾಸ; ನಿಶಾ+ಅಂತ, ರಾತ್ರಿಯ ಕೊನೆ, ಬೆಳಗಿನ ಜಾವ
**ನಿಶಾಂತವಿರಕ್ತ** – ಶಾಂತಮನಸ್ಕನಾದ ವಿರಾಗಿ
**ನಿಶಾಕರ** – ರಾತ್ರಿಯನ್ನುಂಟುಮಾಡುವವನು, ಚಂದ್ರ
**ನಿಶಾಕರವಿಳಂಬಿ** – ಚಂದ್ರನವರೆಗೂ ಲಂಬಿಸಿದುದು
**ನಿಶಾಕರವೀಥಿ** – ಚಂದ್ರವೀಥಿ; ದಕ್ಷಿಣೋತ್ತರ ಬೀದಿ
**ನಿಶಾಕಾಂತ** – ಇರುಳಿನ ಒಡೆಯ, ಚಂದ್ರ
**ನಿಶಾಚರ** – ರಾತ್ರಿ ಸಂಚರಿಸುವ; ಪಿಶಾಚಿ; ರಾಕ್ಷಸ
**ನಿಶಾಚರಬಲ** – ಪಿಶಾಚಿಗಳ ಸಮೂಹ
**ನಿಶಾಚರಿ** – ರಾಕ್ಷಸಿ; ಪಿಶಾಚಿನಿ
**ನಿಶಾಚೂರ್ಣ** – ಅರಿಸಿನದ ಪುಡಿ
**ನಿಶಾಟ** – ರಾಕ್ಷಸ; ಪಿಶಾಚಿ
**ನಿಶಾಟಕೋಟಿ** – ಅಸಂಖ್ಯಾತ ರಾಕ್ಷಸರು
**ನಿಶಾತ** – ಹರಿತಗೊಂಡ
**ನಿಶಾನಾಥಾಂಶಕ** – ಚಂದ್ರನ ನವಾಂಶ
**ನಿಶಾನಿರಸನ** – ರಾತ್ರಿಯ ಕೊನೆ
**ನಿಶಾಪ್ರವೇಶ** – ರಾತ್ರಿಯ ಪ್ರಾರಂಭ
**ನಿಶಾಮಧ್ಯ** – ಮಧ್ಯರಾತ್ರಿ
**ನಿಶಾಮುಖ** – ನಿಶಾಪ್ರವೇಶ
**ನಿಶಾವಸಾನ** – ರಾತ್ರಿಯ ಕೊನೆ, ಬೆಳಗು
**ನಿಶಾಸ** – ಅನಿಯಂತ್ರಿತ
**ನಿಶಿತ** – ಹರಿತವಾದ
**ನಿಶಿತಮತಿ** – ಹರಿತವಾದ ಬುದ್ಧಿ(ಯವನು)(ಳು)
**ನಿಶಿತವಿಶಿಖ** – ಹರಿತವಾದ ಬಾಣ
**ನಿಶಿತಾಸ್ತ್ರ** – ನಿಶಿತವಿಶಿಖ
**ನಿಶೀಥ** – ಇರುಳು, ನಡುವಿರುಳು
**ನಿಶೆ** – ಇರುಳು
**ನಿಶ್ಚಂಡತೆ** – ಸಮಾಧಾನ, ನಿಶ್ಚಿಂತೆ
**ನಿಶ್ಚಯಂಗೆಯ್** – ನಿರ್ಧಾರಕ್ಕೆ ಬರು
**ನಿಶ್ಚಯಗುಣ** – ನಿಶ್ಚಲವಾದ ಸ್ವಭಾವ
**ನಿಶ್ಚಯಗುಣಿ** – ನಿಶ್ಚಲವಾದ ಸ್ವಭಾವವುಳ್ಳವನು
**ನಿಶ್ಚಯಿಸು** – ತೀರ್ಮಾನಮಾಡು
**ನಿಶ್ಚರಣ** – ಆಸರೆಯಿಲ್ಲದವನು
**ನಿಶ್ಚಲ(ಳ)** – ಅಲುಗದ್ದು; ಬೆಟ್ಟ; ದೃಢತೆಯ ವ್ಯಕ್ತಿ
**ನಿಶ್ಚಲ(ಳ)ತೆ** – ಸ್ಥಿರತೆ
**ನಿಶ್ಚಲಪ್ರದೀಪ** – ಅಲುಗಾಡದ ದೀಪ
**ನಿಶ್ಚಲಚಿತ್ತೆ** – ದೃಢಮನಸ್ಸಿನವಳು
**ನಿಶ್ಚಲೆ** – ದೃಢವಾದವಳು
**ನಿಶ್ಚಳಚಿತ್ತ** – ದೃಢ ಮನಸ್ಸು(ಳ್ಳವನು)
**ನಿಶ್ಚಳಪಕ್ಷ್ಮ** – ಅಲುಗದ ರೆಪ್ಪೆ(ಯವನು)
**ನಿಶ್ಚಿಂತಂ** – ಚಿಂತೆಯಿಲ್ಲದೆ
**ನಿಶ್ಚಿಂತತೆ** – ಚಿಂತೆಯಿಲ್ಲದ ಸ್ಥಿತಿ
**ನಿಶ್ಚಿತ** – ನಿರ್ಣಯಗೊಂಡ
**ನಿಶ್ಚಿತಮನ** – ಸ್ಥಿರ ಮನಸ್ಸು(ಳ್ಳವನು)
**ನಿಶ್ಚಿದ್ರ** – ಬಿರುಕಿಲ್ಲದ, ಸೀಳಕವಿಲ್ಲದ
**ನಿಶ್ರಾವ** – ಗಂಜಿ
**ನಿಶ್ರೇಣಿ** – ಏಣಿ
**ನಿಶ್ರೇಯಸ** – ಶ್ರೇಷ್ಠವಾದುದು
**ನಿಶ್ವಾಸ** – ಉಸಿರು ಹೊರ ಬಿಡುವುದು
**ನಿಶ್ಶಂಕ** – ಸಂಶಯರಹಿತ
**ನಿಶ್ಶಂಕತೆವೆಱು** – ಸಂಶಯರಾಹಿತ್ಯವನ್ನು ಹೊಂದು
**ನಿಶ್ಶಂಕಿತ** – ಶಂಕೆಯಿಲ್ಲ(ದವನು)
**ನಿಶ್ಶಂಕಿತ್ವ** – ನಿಶ್ಶಂಕಿತ
**ನಿಶ್ಶಂಕೆ** – ಶಂಕೆಯಿಲ್ಲದ್ದು; (ಜೈನ) ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಮೊದಲನೆಯದು; ಜಿನಮತದಲ್ಲಿ ಸಂಶಯವಿಲ್ಲದಿರುವುದು
**ನಿಶ್ಶಲ್ಯ** – ಬಾಣವಿಲ್ಲದ್ದು; (ಜೈನ) ವ್ರತಾಚರಣೆಯ ಅಡ್ಡಿಗಳು; ಇವು ಮಾಯಾ, ಮಿಥ್ಯಾತ್ವ, ನಿದಾನಗಳೆಂದು ಮೂರು ಬಗೆ
**ನಿಶ್ಶಲ್ಯಂ** – ಅಂಟಿಕೊಳ್ಳದವನು
**ನಿಶ್ಶಲ್ಯಂಗೆಯ್** – (ಜೈನ) ಶಲ್ಯಗಳನ್ನು ನಿವಾರಿಸು
**ನಿಶ್ಶೇಷ** – ಏನೂ ಉಳಿಯದ್ದು

**ನಿಶ್ಶೇಷಂ** – ಪೂರ್ತಿಯಾಗಿ
**ನಿಶ್ಶ್ರೇಣಿಕ** – ಏಣಿ
**ನಿಷಂಗ** – ಸಂಬಂಧ; ಬತ್ತಳಿಕೆ
**ನಿಷಣ್ಣ** – ಕುಳಿತವನು
**ನಿಷದ್ವರ** – ಕೊಳಕು
**ನಿಷದ್ಯಾಕ್ರಿಯೆ** – (ಜೈನ) ಐವತ್ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ತೀರ್ಥಂಕರ ಶಿಶುವಿಗೆ ವಿವಿಧ ಬಗೆಯ ಅರ್ಚನೆಗಳನ್ನು ಮಾಡುವುದು
**ನಿಷಿದ್ಯೆ** – ನಿಷಿದ್ಯಾಕ್ರಿಯೆ
**ನಿಷಧ** – ಒಂದು ಪರ್ವತದ ಹೆಸರು
**ನಿಷಾದ** – ಬೇಟೆಗಾರ; ಬೆಸ್ತ; ಸಂಗೀತದಲ್ಲಿನ ಸಪ್ತಸ್ವರಗಳಲ್ಲಿ ಕೊನೆಯದು
**ನಿಷಾದಿ** – ಮಾವತಿಗ
**ನಿಷಾದಿವ್ರಜ** – ಮಾವತಿಗರ ಗುಂಪು
**ನಿಷಿದ್ಧ** – ಅನುಸರಿಸಬಾರದ್ದು
**ನಿಷಿದ್ಧಿಸ್ಥಾನ** – (ಜೈನ) ಸಮಾಧಿಸ್ಥಳ
**ನಿಷೇಕ** – ಸಾವು; ಆಯುಸ್ಸು
**ನಿಷೇಧ** – ಇಲ್ಲವೆನ್ನುವುದು
**ನಿಷೇಧವಚನ** – ಇಲ್ಲ ಎಂಬ ನುಡಿ
**ನಿಷೇವಣ** – ಪೂಜೆ
**ನಿಷೇವಣೀಯ** – ಪೂಜೆಗೊಳ್ಳುವ(ವನು)
**ನಿಷೇವಿತ** – ಪೂಜೆಗೊಂಡ
**ನಿಷೇವ್ಯ** – ಪೂಜಾರ್ಹ; ಒಳಗೊಂಡುದು
**ನಿಷ್ಕ** – ಚಿನ್ನ
**ನಿಷ್ಕಂಟಕ** – ಮುಳ್ಳುಗಳಿಲ್ಲದಿರುವುದು; ಅಡ್ಡಿಯಿಲ್ಲದ್ದು
**ನಿಷ್ಕಂಟಕೀಕೃತ** – ಕಂಟಕರಹಿತಗೊಂಡ; ಶತ್ರುರಹಿತಗೊಂಡ
**ನಿಷ್ಕಂಪ** – ಅಲುಗಾಟವಿಲ್ಲದುದು; ಸ್ಥಿರವಾದ(ವನು)
**ನಿಷ್ಕಂಪಪಕ್ಷ್ಮ** – ಅಲುಗಾಡದ ರೆಪ್ಪೆ
**ನಿಷ್ಕಂಪಿತ** – ಅಚಲವಾದ
**ನಿಷ್ಕಂಪಿತಾಂಗ** – ಕಂಪನರಹಿತವಾದ ಅಂಗ(ದೇಹ)ವುಳ್ಳದ್ದು
**ನಿಷ್ಕವಚ** – ಕವಚರಹಿತ; ಒರೆಯಿಂದ ಹೊರಗೆಳೆದ
**ನಿಷ್ಕಶೃಂಖಲೆ** – ಚಿನ್ನದ ಸರ(ಪಳಿ)
**ನಿಷ್ಕಷಾಯ** – (ಜೈನ) ಕ್ರೋಧ, ಮಾನ, ಮಾಯೆ, ಲೋಭಗಳಿಲ್ಲದ ಮನಸ್ಸಿನವನು
**ನಿಷ್ಕಷಾಯಂ** – ನಿಷ್ಕಷಾಯದವನಾಗಿ
**ನಿಷ್ಕಷಾಯತ್ವ** – (ಜೈನ) ಕಷಾಯಮುಕ್ತನಾಗುವುದು
**ನಿಷ್ಕಾಂಕ್ಷಿತ** – ಅಪೇಕ್ಷಾರಹಿತವಾದ; (ಜೈನ) ಭೋಗಗಳನ್ನು ಬಯಸದಿರುವ
**ನಿಷ್ಕಾಂಕ್ಷೆ** – ಅಪೇಕ್ಷಾರಾಹಿತ್ಯ; (ಜೈನ) ಸಮ್ಯಗ್ದರ್ಶನದ ಒಂದು ಅಂಗ; ಭೋಗಗಳನ್ನು ಬಯಸದಿರುವುದು
**ನಿಷ್ಕಾಮ** – ಕಾಮರಹಿತ
**ನಿಷ್ಕಾರಣ** – ಕಾರಣವಿಲ್ಲದ(ದುದು)
**ನಿಷ್ಕಾರಣಂ** – ಕಾರಣವಿಲ್ಲದೆ
**ನಿಷ್ಕಾರುಣ್ಯ** – ಕರುಣಾರಾಹಿತ್ಯ; ಹೊಳಪು
**ನಿಷ್ಕಿಂಚನತ್ವ** – ಹಣವಿಲ್ಲದುದು; (ಜೈನ) ದಾನ ಸ್ವೀಕರಿಸದುದು
**ನಿಷ್ಕುಟ** – ಮನೆಯ ಕೈತೋಟ, ಉಪವನ
**ನಿಷ್ಕೃತ** – ಪಡೆದ(ವನಾದ)
**ನಿಷ್ಕೃತಿ** – ಪರಿಹಾರ
**ನಿಷ್ಕೃಪ** – ಕೃಪೆಯಿಲ್ಲದ(ವನು)
**ನಿಷ್ಕ್ರಯ** – ಬೆಲೆ; ಪ್ರತಿಫಲ
**ನಿಷ್ಕ್ರಾಂತ** – ಮೇಲಕ್ಕೇರಿ(ದವನು)
**ನಿಷ್ಕ್ರಾಂತಿ** – (ಜೈನ) ಒಂದು ಗರ್ಭಾನ್ವಯಕ್ರಿಯೆ; ಸಂಸಾರವನ್ನು ತ್ಯಜಿಸಿ ತಪಸ್ಸಿಗೆ ಹೋಗುವುದು
**ನಿಷ್ಕ್ರಿಯ** – ಕರ್ಮರಹಿತ
**ನಿಷ್ಟಪ್ತ** – ಕಾಯಿಸಿದ; ಪುಟಗೊಂಡ
**ನಿಷ್ಠ** – ಇಟ್ಟ
**ನಿಷ್ಠಾಪರ** – ನಿಷ್ಠೆಯುಳ್ಳವನು
**ನಿಷ್ಠಾಪರತ್ವ** – ನಿಷ್ಠೆ ಹೊಂದಿರುವುದು
**ನಿಷ್ಠಿತ** – ಕೂಡಿದ; ಗೊತ್ತಾದ; ತನ್ಮಯಗೊಂಡ(ವನು)
**ನಿಷ್ಠಿತಕಾರ್ಯ** – ನಿಗದಿತವಾದ ಕೆಲಸ
**ನಿಷ್ಠಿತಾತ್ಮ** – ನಿಷ್ಠೆಯಿಂದ ಕೂಡಿದ ಮನಸ್ಸುಳ್ಳವನು
**ನಿಷ್ಠುರ** – ಗಡುಸಾದ
**ನಿಷ್ಠುರಜಿಹ್ವ** – ಗಡುಸಾ ಮಾತನಾಡುವವನು; ಉರಿಯುವ ನಾಲಗೆಯುಳ್ಳ (ಬೆಂಕಿ)
**ನಿಷ್ಠುರತೆ** – ಗಡಸುತನ
**ನಿಷ್ಠುರವಚನ** – ಬಿರುನುಡಿ
**ನಿಷ್ಠುರವೃತ್ತಿ** – ಗಡಸು ಸ್ವಭಾವ
**ನಿಷ್ಠುರಾಲಾಪ** – ಬಿರುನುಡಿ
**ನಿಷ್ಣಾತತೆ** – ಪರಿಣತಿ
**ನಿಷ್ಪಂದ** – ಅಲುಗಾಡದ; ಪ್ರತಿಕ್ರಿಯಾರಹಿತ
**ನಿಷ್ಪಂದಕಾರಿತ್ವ** – ನಿಶ್ಚೇಷ್ಟತೆ
**ನಿಷ್ಪಂದದೃಷ್ಟಿ** – ನಟ್ಟ ನೋಟ
**ನಿಷ್ಪಂದಗಾತ್ರ** – ಪ್ರತಿಕ್ರಿಯಾರಹಿತ ದೇಹ
**ನಿಷ್ಪಂದಶರೀರ** – ನಿಷ್ಪಂದಗಾತ್ರ
**ನಿಷ್ಪಂದಾವಯವ** – ಪ್ರತಿಕ್ರಿಯಾರಹಿತ ಅವಯವ
**ನಿಷ್ಪಂದಿತೆ** – ಪ್ರತಿಕ್ರಿಯಾರಹಿತಳು
**ನಿಷ್ಪತಿತ** – ಬಿದ್ದ; ತಗುಲಿದ
**ನಿಷ್ಪನ್ನ** – ಉದ್ಭವಿಸಿದ(ವನು)
**ನಿಷ್ಪಾದನ** – ಉಂಟುಮಾಡುವುದು, ಸೃಷ್ಟಿ
**ನಿಷ್ಪಾದಿತ** – ಉಂಟಾದ
**ನಿಷ್ಪಾವ** – ಗಾಳಿಯಲ್ಲಿ ತೂರುವುದು; ಅವರೆ
**ನಿಷ್ಪಿಷ್ಟ** – ಪುಡಿಯಾದ; ನಜ್ಜುಗುಜ್ಜಾದ
**ನಿಷ್ಪೀಡಿತ** – ಹಿಂಡಲ್ಪಟ್ಟ
**ನಿಷ್ಪ್ರಕಂಪಸಲಿಲ** – ಅಲುಗಾಡದ ನೀರು
**ನಿಷ್ಪ್ರತ್ಯೂಹ** – ನಿರಾತಂಕ; ಅನಿರ್ಬಾಧಿತ
**ನಿಷ್ಪ್ರಪಂಚ** – ಪ್ರಪಂಚವನ್ನು ಬಿಟ್ಟವನು

**ನಿಷ್ಪ್ರಭತನು** – ಕಾಂತಿಗೆಟ್ಟ ದೇಹ(ದವನು)
**ನಿಷ್ಪ್ರಮಾಣ** – ಅಸಂಖ್ಯ; ಅಪರಿಮಿತ
**ನಿಷ್ಪ್ರಯೋಜನ** – ಉಪಯೋಗವಿಲ್ಲದ
**ನಿಷ್ಪ್ರವರ** – ಅಪೌರುಷೇಯ; ದೇವರು
**ನಿಷ್ಪ್ರವಾಳ** – ಚಿಗುರದ
**ನಿಷ್ಪ್ರವೀಚಾರ** – (ಜೈನ) ಸಂಭೋಗರಾಹಿತ್ಯ(ರಹಿತ)
**ನಿಷ್ಪ್ರವೀಚಾರತೆ** – ಸಂಭೋಗರಾಹಿತ್ಯ
**ನಿಷ್ಪ್ರಾಣ** – ಪ್ರಾಣವಿಲ್ಲದ
**ನಿಷ್ಫಲ** – ಹಣ್ಣಿಲ್ಲದ; ಪ್ರತಿಫಲವಿಲ್ಲದ
**ನಿಷ್ಫಲೋತ್ಪನ್ನೆ** – ನಿರುಪಯುಕ್ತ ಜೀವಿಯಾದವಳು
**ನಿಷ್ಫಲೋದ್ಯೋಗ** – ಪ್ರತಿಫಲರಹಿತ ಕಾರ್ಯ
**ನಿಷ್ಯಂದಿ** – ಸೂಸುವ
**ನಿಸದ** – ನಿಜ
**ನಿಸದಂ** – ನಿಶ್ಚಿತವಾಗಿ
**ನಿಸರ್ಗ** – ಸ್ವಾಭಾವಿಕವಾದ
**ನಿಸರ್ಗಂ** – ಸ್ವಾಭಾವಿಕವಾಗಿ
**ನಿಸರ್ಗಗುಣ** – ಸಹಜವಾದ ಗುಣ
**ನಿಸರ್ಗದುರ್ಗ** – ತಾನಾಗಿಯೇ ಇರುವ ಕೋಟೆ
**ನಿಸರ್ಗದುಷ್ಟ** – ಸ್ವಭಾವತಃ ಕೆಟ್ಟವನು
**ನಿಸರ್ಗಭೀರು** – ಸ್ವಭಾವತಃ ಪುಕ್ಕಲಾದವನು
**ನಿಸರ್ಗಮನೋಹರ** – ಸಹಜಸುಂದರವಾದುದು
**ನಿಸರ್ಗರಾಗಿ** – ಸ್ವಭಾವತಃ ಪ್ರೀತಿಪರನಾದವನು
**ನಿಸರ್ಗಶೂರ** – ಹುಟ್ಟಿನಿಂದ ಪರಾಕ್ರಮಿ
**ನಿಸರ್ಗಸುಂದರ** – ನಿಸರ್ಗಮನೋಹರ
**ನಿಸರ್ಗಸುಭಗಂ** – ಸಹಜಸುಂದರವಾದುದು
**ನಿಸರ್ಗಸ್ನೇಹಿತೆ** – ಹುಟ್ಟಿನ ಗೆಳತಿ
**ನಿಸಿದಿ(ಧಿ)** – (ಜೈನ) ಸನ್ಯಸನದಿಂದ ಮುಡಿಪಿದವರ ಸಮಾಧಿ
**ನಿಸಿದಿಗೆ** – ನಿಸಿದಿ
**ನಿಸು** – ಹೆಬ್ಬೆರಳು–ತೋರುಬೆರಳುಗಳಿಂದ ಅದುಮುವುದು–
**ನಿಸೃತ** – ಸುರಿದ
**ನಿಸೃಷ್ಟ** – ರಾಜನಿಯೋಗಿ
**ನಿಸೃಷ್ಟಾರ್ಥ** – ರಾಜನಿಯೋಗಿ; ನೆರವೇರಿದ ಉದ್ದೇಶ
**ನಿಸೇಕ** – ನಿಷೇಕ, ಸಾವು
**ನಿಸ್ತಂಭ** – ಕಂಬವಿಲ್ಲದ
**ನಿಸ್ತರಂಗ** – ಅಲೆಗಳಿಲ್ಲದ, ಪ್ರಶಾಂತವಾದ
**ನಿಸ್ತರಿಸು** – ತಾಳಿಕೊ
**ನಿಸ್ತಾರಕ** –ದಾಟಿಸುವವನು; ಉದ್ಧಾರಕ
**ನಿಸ್ತುಲ(ಳ)** – ಹೋಲಿಕೆಯಿಲ್ಲದ
**ನಿಸ್ತುಲಗಾಂಭೀರ್ಯ** – ಅನುಪಮ ಗಾಂಭೀರ್ಯವುಳ್ಳವನು
**ನಿಸ್ತೃಣ** – ಹುಲ್ಲಿಲ್ಲದ
**ನಿಸ್ತೇಜ** – ಕಾಂತಿರಹಿತವಾದ(ವನು)
**ನಿಸೇತಂಬೆಱು** – ಕಾಂತಿ ಕಳೆದುಕೊ
**ನಿಸ್ತ್ರಪಂ** – ನಾಚಿಕೆಯಿಲ್ಲದೆ
**ನಿಸ್ತ್ರಪೆ** – ಲಜ್ಜೆಯಿಲ್ಲದವಳು
**ನಿಸ್ತ್ರಿಂಶ** – ಕರುಣೆಯಿಲ್ಲದ(ವನು)
**ನಿಸ್ತ್ರಿಂಶಕರ್ಮ** – ಕ್ರೂರಕೃತ್ಯ
**ನಿಸ್ತ್ರಿಂಶಕತೆ** – ಕ್ರೌರ್ಯ
**ನಿಸ್ತ್ರಿಂಶಭಾವ** – ಕ್ರೂರಗುಣ
**ನಿಸ್ತ್ರಿಂಶೆ** – ಕ್ರೂರಿಯಾದವಳು
**ನಿಸ್ಪೃಹ** – ಬಯಕೆಗಳನ್ನು ತೊರೆದವನು
**ನಿಸ್ಪೃಹಾತ್ಮಕ** – ನಿರಾಸಕ್ತ
**ನಿಸ್ಪೃಹಸ್ವಾಂತ** – ಬಯಕೆಯಿಲ್ಲದ ಸ್ವಭಾವದವನು
**ನಿಸ್ವನ** – ಧ್ವನಿ
**ನಿಸ್ವೇದ(ತ್ವ)** – ಬೆವರಿಲ್ಲದ ಸ್ಥಿತಿ
**ನಿಸ್ಸಂಗತ್ವಾತ್ಮಭಾವನೆ** – (ಜೈನ) ಒಂದು ಗರ್ಭಾನ್ವಯಕ್ರಿಯೆ; ಎಲ್ಲ ಸಂಗದಿಂದ ತಾನು ಬಿಡುಗಡೆಗೊಂಡಿದ್ದೇನೆಂಬ ಭಾವನೆ ತಳೆಯುವುದು
**ನಿಸ್ಸಂಕೆ** – ಅವಜ್ಞೆ
**ನಿಸ್ಸಂಜ್ಞ** – ಪ್ರಜ್ಞಾಶೂನ್ಯ
**ನಿಸ್ಸಮ** – ಸಮನಿಲ್ಲದ
**ನಿಸ್ಸಹ** – ಸಹಿಸಲಾಗದ
**ನಿಸ್ಸಾಣ(ಳ)** – ಡಕ್ಕೆ
**ನಿಸ್ಸಾರ** – ಸಾರರಹಿತ(ವಾದುದು)
**ನಿಸ್ಸಾಳರವ** – ಡಕ್ಕೆಯ ಧ್ವನಿ
**ನಿಸ್ಸೀಮನಿರ್ವೇಗ** – ಎಣೆಯಿಲ್ಲದ (ಪರಮ) ವೈರಾಗ್ಯ
**ನಿಸ್ಸೀಮಶೋಕ** – ಕೊನೆಯಿಲ್ಲದ ದುಃಖ
**ನಿಹಟದಂಶು** – ಕೋರೈಸುವ ಕಾಂತಿ
**ನಿಹಿತ** – ಇರಿಸಿದ
**ನಿಳಿಂಪ** – ದೇವತೆ
**ನಿಳಿಂಪಗಣ** – ದೇವತೆಗಳ ಸಮೂಹ
**ನಿಳಿಂಪದಂಪತಿ** – ದೇವತಾದಂಪತಿ
**ನಿಳಿಂಪನಗ** – ಮೇರುಪರ್ವತ
**ನಿಳಿಂಪನಾಥ** – ದೇವೇಂದ್ರ
**ನಿಳಿಂಪನಾಯಕ** – ನಿಳಿಂಪನಾಥ
**ನಿಳಿಂಪನಿಳಯ** – ದೇವಲೋಕ, ಸ್ವರ್ಗ
**ನಿಳಿಂಪನಿವಹ** – ನಿಳಿಂಪಗಣ
**ನಿಳಿಂಪವಧು** – ದೇವತಾಸ್ತ್ರೀ
**ನಿಳ್ಕು** – ನೆಟ್ಟಗೆ ನಿಲ್ಲು, ಮಟ್ಟಂಗಾಲಲ್ಲಿ ನಿಲ್ಲು; ಎಟುಕಿಸಿಕೊ
**ನಿಱಿ** – ಜೋಡಿಸು; ನೆರಿಗೆಯಾಗು; ನೆರಿಗೆ
**ನಿಱಿಗ** – ಸಿಹಿಮಾವು
**ನಿಱಿಗಟ್ಟು** – ಸುಕ್ಕಾಗು
**ನಿಱಿಗೆ** – ನೆರಿಗೆ
**ನಿಱಿದಲೆ** – ಗುಂಗುರುಕೂದಲಿನ ತಲೆ
**ನಿಱಿದಳಿರ್** – ಹೊಳೆಯುವ ಚಿಗುರು
**ನಿಱಿದಳಿರ್ದೊಂಗಲೆ** – ಹೊಳೆಯುವ ಚಿಗುರಿನ ಗೊಂಚಲು
**ನಿಱಿದುಂಬಿ** – ಮಿರುಗುವ ದುಂಬಿ
**ನಿಱಿದುಱುಂಬು** – ಹೊಳೆಯುವ ಕೂದಲಿನ ತುರುಬು

**ನಿಱೆನಿಱೆಗ** – ರುಚಿಯಾದ ಸಿಹಿಮಾವು
**ನಿಱೆಮುಗಿಲ್** – ಪದರಪದರದ ಮೋಡ
**ನಿಱೆವಿಡಿ** – ನೆರಿಗೆ ಹಿಡಿ
**ನಿಱೆವಿಣಿಲ್** – ನಿಱೆ+ಪಿಣಿಲ್, ಹೊಳೆಯುವ ಜಡೆ
**ನಿಱೆಶ್ರಾವಕಿ** – (ಜೈನ) ಧರ್ಮಿಷ್ಠ ಜೈನಗೃಹಿಣಿ
**ನಿಱೆಸು** – ಸ್ಥಾಪಿಸು, ನಿಲ್ಲಿಸು
**ನಿಱೆಸುಗೆಯ್** – ಸ್ಥಾಪಿತವಾಗು, ತನ್ನ ಜಾಗದಲ್ಲಿ ನಿಲ್ಲು
**ನಿಱುಗೆ** – ಹೊಂದಿಕೆ
**ನೀಂಟಿಸು ಚಾಚು**–
**ನೀಕರ** – ನಿವಾರಿಸುವ
**ನೀಕಾಶ** – ಹೋಲಿಕೆಯ
**ನೀಗು** – ಕಳೆದುಕೊ
**ನೀಚ** – ಕುಳ್ಳಾದ; ಕ್ಷುಲ್ಲಕ ವ್ಯಕ್ತಿ
**ನೀಚಜಾತಿ** – ಕೀಳು ಜಾತಿ
**ನೀಚೈರ್ಗತ** – ಕೆಳಕ್ಕೆ ಹೋದ
**ನೀಚೈರ್ಗೋತ್ರ** – (ಜೈನ) ಜೀವನಿಗೆ ಅಂಟಿಕೊಳ್ಳುವ ಇಬ್ಬಗೆಯ ಗೋತ್ರಕರ್ಮಗಳಲ್ಲಿ ಒಂದು; ಹೀನಕುಲದಲ್ಲಿ ಹುಟ್ಟಲು ಕಾರಣವಾಗುವ ಕರ್ಮ
**ನೀರಿಕೆ** – ಪಾಚಿ. ಹಾವಸೆ
**ನೀಡ** – ಹಕ್ಕಿಯ ಗುಡು; ಆಶ್ರಯ
**ನೀಡಡಿ** – ಚಾಚಿದ ಕಾಲು
**ನೀಡಡಿಗೊಳ್** – ಕಾಲನ್ನು ಚಾಚು
**ನೀಡಱ್** – ಮೂರ್ಛೆ
**ನೀಡಾಗು** – ತಡವಾಗು
**ನೀಡಿರದೆ** – ದೀರ್ಘಕಾಲ ಮಾಡದೆ
**ನೀಡಿಲ್ಲದೆ** – ವಿಳಂಬಿಸದೆ
**ನೀಡು** – ಮುಂದೆ ಚಾಚು; ಕೊಡು; ನೀಳವಾದ
**ನೀಡುಂ** – ಹೆಚ್ಚಾಗಿ
**ನೀಡುಂಪೊೞ್ತು** – ಹೆಚ್ಚು ಹೊತ್ತು
**ನೀತಿ** – ಸನ್ನಡತೆ
**ನೀತಿಕಾಱ** – ಸನ್ನಡತೆಯವನು
**ನೀತಿಕ್ಷತಿ** – ನೀತಿಯ ವಿನಾಶ
**ನೀತಿಗೆಡು** – ಸನ್ನಡತೆಯನ್ನು ಬಿಡು
**ನೀತಿಜ್ಞ** – ರಾಜನೀತಿನಿಪುಣ
**ನೀತಿಬಾಹ್ಯ** – ಧರ್ಮಬಾಹಿರ
**ನೀತಿಮಾರ್ಗ** – ಸರಿಯಾದ ನಡವಳಿಕೆ
**ನೀತಿಯುತ** – ನೀತಿಯಿಂದ ಕೂಡಿದವನು
**ನೀತಿವರ್ಧನ** – ರಾಜನೀತಿಯ ಅನುಸರಣೆ
**ನೀತಿವಾಕ್ಯ** – ಉಪದೇಶ
**ನೀತಿವಿದ** – ನೀತಿಯುತ
**ನೀತಿವಿಭವ** – ನೀತಿಯೇ ವೈಭವವಾಗಿರುವವನು
**ನೀತಿವಿರುದ್ಧ** – ಧರ್ಮವಿರುದ್ಧ
**ನೀತಿವಿಳಾಸಿ** – ನೀತಿವಿಭವ
**ನೀಪ** – ಕದಂಬ ವೃಕ್ಷ
**ನೀಪಪ್ರಸವ** – ಕದಂಬದ ಹೂ
**ನೀಪವ್ರಜ** – ಕದಂಬವೃಕ್ಷಸಮೂಹ
**ನೀರ್** – ಜಲ; ಕಾಂತಿ
**ನೀರ** – ನೀರು
**ನೀರಂಜಿಸು** – ಹೊಳಪು ಕೊಡು
**ನೀರಂಧ್ರ** – ಒತ್ತಾಗಿರುವ; ಗಾಢವಾದ
**ನೀರಕ್ಷೀರಪರೀಕ್ಷೆ** – ಬೆರೆತಿರುವ ನೀರು ಹಾಲುಗಳನ್ನು ಬೇರ್ಪಡಿಸುವುದು
**ನೀರಜ** – ಧೂಳಿಲ್ಲದ; ರಜೋಗುಣರಹಿತ; ಕಮಲ
**ನೀರಜನೇತ್ರ(ತ್ರೆ)** – ಕಮಲದಂತೆ ಕಣ್ಣುಳ್ಳವನು(ಳು)
**ನೀರಜಭವ** – ತಾವರೆಯಲ್ಲಿ ಹುಟ್ಟಿದವನು, ಬ್ರಹ್ಮ
**ನೀರಜವನ** – ತಾವರೆಗಳ ಸಮೂಹ
**ನೀರಡ(ಡು)ಕು** – ನೀರು ತುಂಬು
**ನೀರಡಸು** – ಬಾಯಾರು
**ನೀರ ತೇರ್** – ಮೋಡ
**ನೀರದ** – ಮೋಡ; ನೀ+ರದ, ಹಲ್ಲಿಲ್ಲದುದು
**ನೀರದಮಾರ್ಗ** – ಮೋಡಗಳ ಹಾದಿ, ಆಕಾಶ
**ನೀರದಮಾಲಿಕೆ** – ಮೇಘಸಮೂಹ
**ನೀರದಸ್ಥಿತಿ** – ಮೋಡಗಳ ಇರುವಿಕೆ
**ನೀರದಾವಳಿ** – ನೀರದಮಾಲಿಕೆ
**ನೀರದೆಸೆ** – ನೀರಿರುವ ಕಡೆ
**ನೀರದೋತ್ಪಲವರ್ಣ** – ಮೋಡ–ನೈದಿಲೆಗಳ ಬಣ್ಣದವನು–
**ನೀರದೋಪಳ** – ನೀರದ+ಉಪಳ, ಆಲಿಕಲ್ಲು
**ನೀರಧೌಘ** – ನೀರದಮಾಲಿಕೆ
**ನೀರಧರ** – ನೀರನ್ನು ಪಡೆದಿರುವುದು, ಮೋಡ
**ನೀರಧಿ** – ಸಮುದ್ರ
**ನೀರನಿಲಯ** – ವರುಣ
**ನೀರಪೊಱಿ** – ನೀರಿನ ದಾರಿ
**ನೀರಬೇಂಟೆ** – ಮೀನು ಹಿಡಿಯುವುದು
**ನೀರರುಹ** – ನೀರಲ್ಲಿ ಹುಟ್ಟಿದುದು, ತಾವರೆ
**ನೀರಸ** – ರುಚಿಯಿಲ್ಲದ; ರಸಿಕನಲ್ಲದವನು
**ನೀರಸೋಕ್ತಿ** – ಸಾರವಿಲ್ಲದ ನುಡಿ
**ನೀರಱಿಕೆ** – ನೀರಡಿಕೆ
**ನೀರಱ್ಕೆ** – ನೀರಡಿಕೆ
**ನೀರಾಂಜನ** – ದೀಪ
**ನೀರಾಕರ** – ಸಮುದ್ರ
**ನೀರಾಗ** – ರಾಗರಹಿತ; ವಿರಕ್ತ
**ನೀರಾಜನ** – ಆರತಿ
**ನೀರಾಜನಂಗೆಯ್** – ಆರತಿಯೆತ್ತು
**ನೀರಾಜನವಿಧಿ** – ಆರತಿ ಎತ್ತುವುದು
**ನೀರಾಜಿತ** – ಮಂಗಳಾರತಿ ಎತ್ತಿದ
**ನೀರಾಜಿಸು** – ಆರತಿ ಬೆಳಗು
**ನೀರಾಟ** – ನೀರಿನಲ್ಲಿನ ಆಟ
**ನೀರಾಟವಾಡು** – ಜಲಕೇಳಿಯಾಡು
**ನೀರಾಡು** – ನೀರಾಟವಾಡು
**ನೀರಾನೆ** – ನೀರಿನಲ್ಲಿನ ಒಂದು ದೊಡ್ಡ ಪ್ರಾಣಿ
**ನೀರಿಱಿ** – (ಸೂತಕ) ಸ್ನಾನಮಾಡು

**ನೀರಿಳಿಪು** – (ಸೂತಕ) ಸ್ನಾನಮಾಡಿಸು
**ನೀರಿಳಿಯಿಸು** – ನೀರಿಳಿಪು
**ನೀರು** – ಗಂಗೆ
**ನೀರುಣ್** – ನೀರು ಕುಡಿ
**ನೀರೂಟ** – ನೀರು ಕುಡಿಯುವುದು
**ನಿರೂಡಿಸು** – ನೀರು ಕುಡಿಸು
**ನೀರೂಡು** – ನೀರು ಉಣಿಸು
**ನೀರೆತ್ತು** – ನೀರನ್ನು ಮೇಲೆತ್ತಿ ಹಾಯಿಸು
**ನೀರೆಱೆ** – ನೀರು ಸುರಿ
**ನೀರೇಜ** – ತಾವರೆ
**ನೀರೇಜಗರ್ಭ** – ಬ್ರಹ್ಮ
**ನೀರೇಜಚ್ಛದ** – ತಾವರೆಯ ಎಲೆ
**ನೀರೇಜಪರ್ಣ** – ನೀರೇಜಚ್ಛದ
**ನೀರೇಜವದನೆ** – ಕಮಲಮುಖಿ
**ನೀರೇಜವನ** – ತಾವರೆಗಳ ಸಮೂಹ
**ನೀರೇಜಾತ** – ತಾವರೆಯಲ್ಲಿ ಹುಟ್ಟಿದವನು, ಬ್ರಹ್ಮ
**ನೀರೇಜಾನನೆ** – ನೀರೇಜವದನೆ
**ನೀರೇಜಿನಿ** – ತಾವರೆ, ಕಮಲದ ದಂಟು
**ನೀರೇಜಿನೀಷಂಡ** – ತಾವರೆಗಳ ಸಮೂಹ
**ನೀರೇಭ** – ನೀರಾನೆ
**ನೀರೇರುಹ** – ತಾವರೆ
**ನೀರೇರುಹದಳ** – ತಾವರೆಯ ಎಸಳು
**ನೀರೇಱಿಸು** – ಸಂತೋಷಪಡಿಸು
**ನೀರೇಱು** – ನೀರು ತುಂಬಿಕೊ; ಶೋಭಿಸು; ಚಿಗುರು; ಸಂತಸಪಡು
**ನೀರೋಗ** – ರೋಗರಹಿತತೆ; ಆರೋಗ್ಯವಂತ
**ನೀರೋಡು** – ಬತ್ತಿಹೋಗು
**ನೀವಾರ** – ನವಣೆ
**ನೀರ್ಗಲ್** – ಹಿಮಮಣಿ
**ನೀರ್ಗಾದಿಗೆ** – ಕಂದಕ
**ನೀರ್ಗಾಯ್** – ಎಳನೀರು
**ನೀರ್ಗಿಚ್ಚು** – ಬಡಬಾನಲ
**ನೀರ್ಗುಂಕುಮ** – ನೀರಾದ ಕುಂಕುಮ
**ನೀರ್ಗುಡಿ** – ನೀರು ಕುಡಿ
**ನೀರ್ಗುಡಿಸು** – ತರ್ಪಣ ಕೊಡಿಸು
**ನೀರ್ಗುಡು** – ತರ್ಪಣ ನೀಡು
**ನೀರ್ಗೆತ್ತು** – ನೀರು ಎಂದು ತಪ್ಪು ತಿಳಿದು
**ನೀರ್ಗೊಡು** – ನೀರ್ಗುಡು
**ನೀರ್ಗೊಳ್** – ನೀರು ಕುಡಿ
**ನೀರ್ಗೋಡು** – ನೀರು ಹೋಗುವ ಕೋಡಿ
**ನೀರ್ಜೊಂಪ** – ಧಾರಾಗೃಹ; ನೀರು ಸುರಿಯುವ ಮನೆ
**ನೀರ್ದಂದಲ್** – ತುಂತುರು ಹನಿ
**ನೀರ್ದಳ** – ನೀರು ಎರಚು
**ನೀರ್ದಾಣ** – ನೀರಿರುವ ಜಾಗ
**ನೀರ್ದಿಗುರಿ** – ನೀರಿನ ಸುಳಿ
**ನೀರ್ದುಳುಕು** – ತರ್ಪಣ ನೀಡು
**ನೀರ್ದೆಗೆ** – ನೀರನ್ನು (ಜೀರ್ಕೊಳವಿಯಿಂದ) ಹೀರು; ಬತ್ತಿಹೋಗು
**ನೀರ್ದೊಱೆ** – ನೀರ ಪ್ರವಾಹ
**ನೀರ್ದೋಣಿ** – ನೀರು ತುಂಬುವ ದೋಣಿಯಾಕಾರದ ತೊಟ್ಟಿ
**ನೀರ್ಮಾಡು** – ನೀರು ತೆಗೆ
**ನೀರ್ಮುಳುಗು** – ನೀರಲ್ಲಿ ಮುಳುಗು ಹಾಕು
**ನೀರ್ಮೊಗೆ** – ನೀರು ತೆಗೆದು ಹಾಕು
**ನೀರ್ವಕ್ಕಿ** – ನೀರು ಹಕ್ಕಿ
**ನೀರ್ವಟ್ಟೆ** – ನೀರ ದಾರಿ, ಜಲಮಾರ್ಗ
**ನೀರ್ವನಿ** – ನೀರ ಹನಿ
**ನೀರ್ವರಿ** – ಕಾಲುವೆ
**ನೀರ್ವಾ(ರ್ಮಾ)ನ(ನಿ)ಸ** – ನೀರಲ್ಲಿ ವಾಸಿಸುವ ಮನುಷ್ಯ
**ನೀರ್ವಾನಸೆ** – ಲಕ್ಷ್ಮಿ
**ನೀರ್ವಾಯ್** – ನೀರು ಹರಿ
**ನೀರ್ವಾವು** – ನೀರ ಹಾವು
**ನೀರ್ವಿಜ್ಜಣಿಗೆ** – ನೀರು ಸಿಂಪಡಿಸಿದ ಬೀಸಣಿಗೆ
**ನೀರ್ವುಟ್ಟು** – ದೋಣಿ ನಡೆಸುವ ಹುಟ್ಟು
**ನೀರ್ವೂ** – ನೀರಲ್ಲಿನ ಹೂ
**ನೀರ್ವೆಣ್** – ಜಲಕನ್ಯೆ
**ನೀರ್ವೊನಲ್** – ನೀರ ಪ್ರವಾಹ
**ನೀರ್ವೊಯ್** – ನೀರು ಸುರಿ
**ನೀರ್ಸೆಱೆ** – ನೀರು ನಿಂತ ಜಾಗ
**ನೀಲ(ಳ)** – ಗಾಢ ನೀಲಿ ಅಥವಾ ಕಪ್ಪು ಬಣ್ಣ; ನವರತ್ನಗಳಲ್ಲಿ ಒಂದು; ಸುಗ್ರೀವನ ಒಬ್ಬ ಸೇನಾನಾಯಕ
**ನೀಲಕಂಠ** – ಶಿವ; ನವಿಲು
**ನೀಲಕಂಧರ** – ನೀಲಕಂಠ
**ನೀಲಕಾಂಡಪಟ** – ನೀಲಿ ಬಟ್ಟೆಯ ಪರದೆ
**ನೀಲ(ಳ)ಗಳ** – ಶಿವ; ನವಿಲು
**ನೀಲಗ್ರೀವ** – ನೀಲಕಂಠ
**ನೀಲಚೂಳಿಕೆ** – ನೀಲಿಯ ಶಿಖರ
**ನೀಲ(ಳ)ಚೇಳ** – ನೀಲಿ ಅಥವಾ ಕಪ್ಪು ಬಟ್ಟೆ
**ನೀಲನೀರಜ** – ಕನ್ನೈದಿಲೆ
**ನೀಲ(ಳ)ಪಟ** – ನೀಲ(ಳ)ಚೇಳ
**ನೀಲಪಟಕೇತು** – ನೀಲಿ ಅಥವಾ ಕಪ್ಪು ಬಣ್ಣದ ಬಾವುಟ
**ನೀಲಪಟಚ್ಛದೆ** – ಕಪ್ಪು ಬಟ್ಟೆಯನ್ನು ಹೊದ್ದಿರುವವಳು
**ನೀಲಪಟಾಸ್ತರಣ** – ನೀಲಿ ಬಣ್ಣದ ಹೊದಿಕೆ
**ನೀಲಪ್ರಸ್ತರ** – ಕರಿಕಲ್ಲು
**ನೀಲಮಣಿ** – ನವರತ್ನಗಳಲ್ಲಿ ಒಂದು
**ನೀಲಲೇಶ್ಯೆ** – (ಜೈನ) ಆರು ಬಗೆಯ ಲೇಶ್ಯೆಗಳಲ್ಲಿ ಒಂದು; ಆಲಸ್ಯಕ್ಕೆ ಕರಣವಾದ ಕರ್ಮ, ನೋಡಿ, 'ಲೇಶ್ಯೆ'

**ನೀಲಲೋಹಿತ** – ಕೆಂಪುರಕ್ತ; ಕೊರಳ ನೀಲ ಹಾಗೂ ಕೂದಲ ಕೆಂಬಣ್ಣಗಳುಳ್ಳವನು, ಶಿವ
**ನೀಲವಣ್ಣ** – ನೀಲಿ ಬಣ್ಣ(ದವನು), ಕೃಷ್ಣ
**ನೀಲವಸನ** – ನೀಲಿಯ ಬಣ್ಣ(ದವನು), ಬಲರಾಮ
**ನೀಲಶತಪತ್ರ** – ಕನ್ನೈದಿಲೆ
**ನೀಲಶೈಲ** – ನೀಲಪರ್ವತ
**ನೀಲ(ಳ)ಸರೋಜ** – ನೀಲಶತಪತ್ರ
**ನೀಲಸರೋರುಹ** – ನೀಲಶತಪತ್ರ
**ನೀಲಸರೋರುಹಾಕ್ಷಿ** – ಕನ್ನೈದಿಲೆಯಂತೆ ಕಣ್ಣುಳ್ಳವಳು
**ನೀಲಾಂಗ** – ನೀಲದೇಹಿ, ಕೃಷ್ಣ
**ನೀಲಾಂಬರ** – ಕಪ್ಪು ಬಟ್ಟೆ; ನೀಲವಸನ (ಬಲರಾಮ)
**ನೀಲಾಂಬುಜ** – ನೀಲಶತಪತ್ರ
**ನೀಲಾಂಬುಜನಾಳ** – ಕನ್ನೈದಿಲೆಯ ದಂಟು
**ನೀಲಾಂಬುದ** – ಕಪ್ಪು ಮೋಡ
**ನೀಲಾ(ಳಾ)ಚಲ(ಳ)** – ಕಪ್ಪು ಬೆಟ್ಟ
**ನೀಲಾದ್ರಿ** – ಕಪ್ಪು ಬೆಟ್ಟ
**ನೀಲಾಬ್ಜ** – ನೀಲಶತಪತ್ರ
**ನೀಲಾಬ್ದ** – ನೀಲಮೇಘ
**ನೀಲಾ(ಳಾ)ಲ(ಳ)ಕ** – ಕಪ್ಪು ಕೂದಲು
**ನೀಲೀರಾಗ** – ನೀಲಿಯ ಬಣ್ಣ; ನಿಶ್ಚಲ ಪ್ರೀತಿ
**ನೀಲೀರಾಗತೆ** – ನೀಲಿಬಣ್ಣವನ್ನು ಹೊಂದಿರುವುದು; ನಿಶ್ಚಲ ಪ್ರೀತಿಯನ್ನು ಪಡೆದಿರುವುದು
**ನೀಲೋ(ಳೋ)ತ್ಪಲ(ಳ)** – ಕನ್ನೈದಿಲೆ
**ನೀವಳವಟ್ಟಂಗೆಯ್** – ನೀವಾಳಿಸಿ ತೆಗೆದಂತೆ ಕಿತ್ತೆಸೆ
**ನೀವಾರ** – ನವಣೆ
**ನೀವಿ(ೞ)(ಬಂಧ)(ನ)** – ಸೀರೆಯ ಸೊಂಟದ ಗಂಟು
**ನೀವೀಭರ** – ಸೀರೆಯ ಸೊಂಟದ ಗಂಟು
**ನೀವು** – ಸವರು
**ನೀಸು** – ಈಜು
**ನೀಹಾರ** – ಹಿಮ; ಮಲವಿಸರ್ಜನೆ
**ನೀಹಾರಕರ** – ಹಿಮಕರ, ಚಂದ್ರ
**ನೀಹಾರಾಗ** – ಹಿಮಬೆಟ್ಟ
**ನೀಳ್** – ಉದ್ದವಾಗು; ಚಾಚು; ಹರಡು
**ನೀಳ** – ನಿಡಿದಾದ, ದೀರ್ಘ
**ನೀಳಗಳ** – ನವಿಲು
**ನೀಳಘನಾಘನ** – ಕಪ್ಪಾದ ಮೋಡ
**ನೀಳನಗ** – ಕಪ್ಪು ಬೆಟ್ಟ
**ನೀಳನೀರೇಜ** – ಕನ್ನೈದಿಲೆ
**ನೀಳಸರೀಜಮಾಳೆ** – ಕನ್ನೈದಿಲೆಯ ಮಾಲೆ
**ನೀಳಾಚಳಚೂಳಿಕೆ** – ಕಪ್ಪುಬೆಟ್ಟದ ಶಿಖರ
**ನೀಳಾಬ್ಜವನ** – ಕನ್ನೈದಿಲೆಗಳ ಸಮೂಹ
**ನೀಳಾಭ್ರಜಾಳ** – ಕಪ್ಪು ಮೋಡಗಳ ರಾಶಿ
**ನೀಳಾಶ್ಮ** – ನೀಲಮಣಿ
**ನೀಳಾಳಕೆ** – ಕಪ್ಪು ಕೂದಲುಳ್ಳವಳು
**ನೀಳೇಕ್ಷು** – ನೀಳ+ಇಕ್ಷು, ಕಪ್ಪು ಬಣ್ಣದ ಕಬ್ಬು
**ನೀಳೋರ್ಮಿ** – ಕಪ್ಪು ಬಣ್ಣದ ತೆರೆ
**ನೀಳ್ಕು** – ನಿಲುಕು, ಎಟುಕಿಸು
**ನೀಳ್ಕೆಯ್ಸು** – ಉದ್ದವಾಗಿಸು
**ನೀಳ್ಪು** – ಉದ್ದ; ವಿಸ್ತಾರ; ಎತ್ತರ
**ನೀಳ್ಪುವೆಱು** – ಉದ್ದಗೊಳ್ಳು
**ನೀಱ್** – ಅಗಿ, ಮೆಲ್ಲು
**ನೀಱ** – ಚೆಲುವ; ಪ್ರಿಯಕರ
**ನೀಱತನ** – ಸೌಂದರ್ಯ
**ನೀಱೆ** – ಚೆಲುವೆ; ಪ್ರಿಯತಮೆ
**ನೀೞ್ಕಿರಿಸು** – ಉದ್ದಮಾಡು; ನಿಧಾನಮಾಡು
**ನುಂಗು** – ಕಬಳಿಸು; ಅಗಿಯದೆ ತಿನ್ನು
**ನುಗುಳ್** – ಒಳಹೊಗು; ನುಸುಳು
**ನುಗುಳ್ಚು** – ನುಸುಳಿಸು
**ನುಗ್ಗಾಗು** – ಚೂರಾಗು
**ನುಚ್ಚುಗೂೞ್** – ನುಚ್ಚಿನಿಂದ ಮಾಡಿದ ಅನ್ನ
**ನುಚ್ಚುದಱಿ** – ಚೂರುಚೂರಾಗಿ ಕತ್ತರಿಸು
**ನುಚ್ಚುನುಱಿ** – ಚೂರುಚೂರು
**ನುಚ್ಚು(ರ್ಚು)ನೂಱು** – ನುಚ್ಚುನುಱಿ
**ನುಚ್ಚುವಣಲ್** – ಸಣ್ಣ ಮರಳು
**ನುಡಿ** – ಮಾತಾಡು; ಮಾತು
**ನುಡಿಕಾಱ** – ಮಾತುಗಾರ
**ನುಡಿಗಲ್** – ಮಾತು ಕಲಿ
**ನುಡಿಗಲಿಸು** – ಮಾತು ಕಲಿಸು
**ನುಡಿಗುಂದು** – ಮಾತು ನಿಲ್ಲು
**ನುಡಿಗುಡು** – ಮಾತು ಕೊಡು
**ನುಡಿಗೆಡಿಸು** – ಮಾತಿಗೆ ತಪ್ಪು
**ನುಡಿಗೇಳ್** – ಮಾತನ್ನು ಆಲಿಸು
**ನುಡಿಜಾಣೆ** – ಮಾಯಿನಲ್ಲಿ ನಿಪುಣೆ
**ನುಡಿಜಾಣ್ಮೆ** – ಮಾತಿನ ಚಾತುರ್ಯ
**ನುಡಿಯಿಸು** – ಮಾತಾಡುವಂತೆ ಮಾಡು
**ನುಡಿವಲ್ಮೆ** – ನುಡಿಯ ಬಲ್ಮೆ, ಮಾತಿನ ಚಾತುರ್ಯ
**ನುಡಿವಜೆಕಾಱ** – ಮಾತುಗಾರ
**ನುಡಿವಳ** – ಕೊಟ್ಟ ಮಾತು, ವಾಗ್ದಾನ, ಪ್ರತಿಜ್ಞೆ
**ನುಡಿವೆಣ್** – ನುಡಿಯ ಹೆಣ್ಣು, ಸರಸ್ವತಿ
**ನುಡಿವೆಣ್ಣೆಱೆಯ** – ಸರಸ್ವತಿಪತಿ, ಬ್ರಹ್ಮ
**ನುಡಿಸು** – ಮಾತಾಡಿಸು; ವಾದ್ಯ ಬಾರಿಸು
**ನುಣ್ಗಂಟು** – ಸೊಬಗಿನ ಸಿರಿ
**ನುಣ್ಗಟಕಿ** – ಹರಿತ ವ್ಯಂಗ್ಯ
**ನುಣ್ಗದಪು** – ಕೋಮಲ ಕೆನ್ನೆ
**ನುಣ್ಗದಿರ್** – ಹೊಳೆಯುವ ಕಿರಣ, ಕಾಂತಿ
**ನುಣ್ಗರೆ** – ನುಣುಪಾದ ಕರೆ
**ನುಣ್ಗಲ್ಗಟ್ಟು** – ನುಣುಪು ಕಲ್ಲಿನ ಕಟ್ಟು
**ನುಣ್ಗಱಿ** – ಕೋಮಲ ರೆಕ್ಕೆ
**ನುಣ್ಗೆಱೆ** – ಆಕರ್ಷಕ ಗೆರೆ
**ನುಣ್ಗುರುಳ್** – ಕೋಮಲ ಕೂದಲು
**ನುಣ್ಗೆಂಪು** – ಹೊಳಪಿನ ಕೆಂಪು

**ನುಣ್ಗೊನರ್** – ಕೋಮಲವಾದ ಚಿಗುರು
**ನುಣ್ಗೊನೆ** – ನವುರಾದ ತುದಿ
**ನುಣ್ಗೊರಲ್** – ನುಣುಪಾದ ಕೊರಳು
**ನುಣ್ಚರ** – ಇನಿದನಿ
**ನುಣ್ಚು** – ಜಾರಿಕೊ
**ನುಣ್ಣಗಲಿ** – ಚೆಂದವಾದ ಕಟ್ಟೆ
**ನುಣ್ಣನಪ್ಪ** – ನಯವಾದ; ಇಂಪಾದ
**ನುಣ್ಣನಿರ್** – ಸುಮ್ಮನಿರು
**ನುಣ್ಣನೆ** – ನಯವಾಗಿ; ಸುಂದರವಾಗಿ
**ನುಣ್ಣವಿರ್** – ನುಣ್+ನವಿರ್, ಮೃದುವಾದ ತುಪ್ಪುಳು
**ನುಣ್ಣಿತಂವೇಟಿ್** – ನಯವಾಗಿ ಮಾತಾಡು
**ನುಣ್ಣಿತು** – ಮೃದು (ಮಾತು)
**ನುಣ್ಣಿತು(ತ್ತು)** – ಕೋಮಲವಾದುದು
**ನುಣ್ಣಿಸು** – ನುಣುಪುಮಾಡು
**ನುಣ್ಣುಡಿ** – ನಯವಾದ ನುಡಿ
**ನುಣ್ಣೆಸಳ್** – ಕೋಮಲವಾದ ಪಕಳೆ
**ನುಣ್ಣೊಸಲ್** – ನುಣ್+ನೊಸಲ್, ಕೋಮಲ ಹಣೆ
**ನುಣ್ದನಿ** – ಇನಿದನಿ
**ನುಣ್ದನಿವಿಡು** – ಇನಿದನಿಯನ್ನುಂಟುಮಾಡು
**ನುಣ್ದಳಿರ್** – ಕೋಮಲವಾದ ಚಿಗುರು
**ನುಣ್ದುಟಿ** – ಕೋಮಲ ತುಟಿ
**ನುಣ್ದೊಡೆ** – ನುಣುಪಾದ ತೊಡೆ
**ನುಣ್ದೊದಳ್** – ಇನಿದಾದ ತೊದಲುಮಾತು
**ನುಣ್ಪಡರ್** – ನುಣುಪುಗೊಳ್ಳು
**ನುಣ್ಪಿಡು** – ಹೊಳಪು ನೀಡು
**ನುಣ್ಪು** – ನಯ; ನುಣುಪು; ಚೆಲುವು; ಕೋಮಲತೆ
**ನುಣ್ಪುವಡು** – ನಯಗೊಳ್ಳು
**ನುಣ್ಪುವಡೆ** – ನಯವನ್ನು ಹೊಂದು
**ನುಣ್ಪುವೆಱು** – ನಯವಾಗು
**ನುಣ್ಪೆಸೆ** – ನಯವಾಗು; ಕಂಗೊಳಿಸು
**ನುಣ್ಬನಿ** – ಕೋಮಲ ಹನಿ
**ನುಣ್ಬರಲ್** – ನಯವಾದ ಹರಳು
**ನುಣ್ಬಸಲೆ** – ನಯವಾದ ಹುಲ್ಲುಗಾವಲು
**ನುಣ್ಬಸೆ** – ಅಂದವಾದ ಹಸೆಮಣೆ; ನಯವಾದ ಮಜ್ಜೆ
**ನುಣ್ಬಳುಕು** – ನಯವಾದ ಹಳುಕು, ಹರಳು
**ನುಣ್ಬಳೆ** – ಚೆಲುವಾದ ಬಳೆ
**ನುಣ್ಬುರುಳ್** – ಸಮೃದ್ಧ ತಿರುಳು
**ನುಣ್ಬುಟಿಲ್** – ನುಣುಪಾದ ಮರಳು; ಸುಂದರ ತೋಟ
**ನುಣ್ಬೆರಲ್** – ನುಣುಪಾದ ಬೆರಳು
**ನುಣ್ಬೆಸ** – ನಯಗೆಲಸ
**ನುಣ್ಬೆಳಂತಿಗೆ** – ಕಾಂತಿಯುಕ್ತ ಬಿಳಿಪು
**ನುಣ್ಬೆಳಗು** – ಕಾಂತಿಮಯ ಬೆಳಗು, ಬೆಳಕು
**ನುಣ್ಬೊಗರ್** – ಹೊಳಪಿನ ಕಿರನ
**ನುಣ್ಬೊಗರಿ** – ಸುಂದರವಾದ ಬುಗುರಿ
**ನುಣ್ಮಡ** – ಕೋಮಲವಾದ ಕಾಲು, ಹಿಮ್ಮಡಿ
**ನುಣ್ಮಣಲ್** – ನುಣುಪಾದ ಮರಳು
**ನುಣ್ಮಣಿ** – ಹೊಳಪಿನ ರತ್ನ
**ನುಣ್ಮಸೆ** – ಹೊಳೆಯುವ ಅಲುಗು
**ನುಣ್ಮಾತು** – ನಯವಾದ ನುಡಿ
**ನುಣ್ಮೀಸೆ** – ಹೊಳಪಿನ ಮೀಡೆ
**ನುಣ್ಮುತ್ತು** – ನಯವಾದ ಮುತ್ತು
**ನುಣ್ಮೊಗ** – ಕೋಮಲವಾದ ಮುಖ
**ನುತ** – ಹೊಗಳಲ್ಪಟ್ಟ; ಪ್ರಸಿದ್ಧವಾದ
**ನುತಗುಣ** – ಶ್ರೇಷ್ಠ ಗುಣ
**ನುತಿ** – (ಸ್ತುತಿ) ಹೊಗಳಿಕೆ
**ನುತಿಗೆಯ್** – ಹೊಗಳು, ಸ್ತುತಿಸು
**ನುತಿವಡೆ** – ಪ್ರಸಿದ್ಧನಾಗು
**ನುತಿವೆಱು** – ಸ್ತುತಿಗೊಳ್ಳು; ಪ್ರಸಿದ್ಧಿ ಹೊಂದು
**ನುನ್ನಂ** – ನಿಶ್ಚಯವಾಗಿ
**ನುರ್ಗಾಡು** – ನುಗ್ಗಾಡು, ಚೂರುಮಾಡು
**ನುರ್ಗು** – ರಭಸದಿಂದ ಮುಂದುವರಿ; ಪುಡಿಗುಟ್ಟು
**ನುರ್ಗುಗುಟ್ಟು** – ಪುಡಿಗುಟ್ಟು
**ನುರ್ಗು(ಗ್ಗು)ನುಱೆ** – ಪುಡಿಪುಡಿ, ಚುರುಚೂರು
**ನುರ್ಗೊತ್ತು** – ಬಲವಾಗಿ ಒತ್ತು; ಸದೆಬಡಿ
**ನುಲಿ** – ತಿರಿಚು; ಹೊಟ್ಟೆ ತೊಳಸು; ಹಗ್ಗ
**ನುಸುಳ್** – ನುಣುಚಿಕೊಳ್ಳು
**ನುಱೆ** – ಪುಡಿಯಾಗು
**ನುಱ್ಗು** – ಪುಡಿಮಾಡು
**ನೂಂಕಿಸು** – ದಬ್ಬುವಂತೆ ಮಾಡು
**ನೂಂಕು** – ದಬ್ಬು
**ನೂಂಕುದಱಿ** – ನೂಕಲು ಬಳಸುವ ಮರದ ದಿಮ್ಮಿ
**ನೂತನ** – ಹೊಸ
**ನೂತನಂಬಡೆ** – ಹೊಸತನ ಹೊಂದು
**ನೂತನೆ** – ಹೊಸ ಹರೆಯದವಳು
**ನೂತೆ** – ಪೂಜ್ಯಳು
**ನೂತ್ನ** – ನೂತನ; ಸುಂದರವಾದ
**ನೂನ** – ಕೊರತೆ
**ನೂನಂ** – ನಿಶ್ಚಿತವಾಗಿ
**ನೂಪುರ** – ಕಾಲ್ಕಡಗ
**ನೂಪುರಕ್ವಣಿತ** – ಕಾಲ್ಕಡಗದ ಸದ್ದು
**ನೂಪುರರಣಿತ** – ನೂಪುರಕ್ವಣಿತ
**ನೂಪುರಾರಾವ** – ನೂಪುರಕ್ವಣಿತ
**ನೂಪುರೋಲ್ಲಪನ** – ನೂಪುರಕ್ವಣಿತ
**ನೂರ್ಛಾ(ರ್ಚ್ಛಾ)ಸಿರ** – ನೂರು ಸಾವಿರ, ಒಂದು ಲಕ್ಷ
**ನೂರ್ಮಡಿ** – ನೂರುಪಟ್ಟು
**ನೂರ್ಮಡಿಸು** – ನೂರರಷ್ಟಾಗು
**ನೂರ್ಮಾತು** – ನೂರು ಮಾತು; ಹೆಚ್ಚು ಮಾತು
**ನೂರ್ಮೆ** – ನೂರು ಬಾರಿ
**ನೂಲ್** – ದಾರ ತೆಗೆ; ದಾರ; ಬಡಗಿಗಳು ಮಾಡುವ ಗುರುತು

**ನೂಲತೊಂಗಲ್** – ನೂಲ್ತೊಂಗಲ್, ಗೆಜ್ಜೆಗಳಿರುವ ಕಟಿಸೂತ್ರ
**ನೂಲತೊಡವು** – ನೂಲಿನ ಆಭರಣ
**ನೂಲತೋಡಾಗು** – ಹಾಸುಹೊಕ್ಕುಗಳಂತೆ ಒಂದಾಗು; ಹರಿದ ನೂಲು ಸೇರಿಕೊಳ್ಳುವುದು
**ನೂಲ ರಕ್ಕೆವಣೆ** – ನೂಲಿನ ರಕ್ಷಾಮಣಿ
**ನೂಲಸೆಜ್ಜೆ** – ಹತ್ತಿಯ ಹಾಸಿಗೆ
**ನೂಲೆೞೆ** – ದಾರದ ಎಳೆ
**ನೂಲ್ದೆಗೆ** – ದಾರವನ್ನು ತೆಗೆ; ಗೆರೆಗಳನ್ನು ಬರೆ
**ನೂಲ್ವಾಸ** – ದಾರದ ಕಟ್ಟು
**ನೂಲ್ವೊಯ್** – ನೂಲ್ದೆಗೆ
**ನೂಸೆ ಪಾಸು** – 'ನೂಕಿದಲ್ಲಿ ಹಾಸಿಗೆ'
**ನೂಳದು** – ಅತಿಶಯವಾದುದು; ಹಿರಿದು
**ನೂಱು** – ಒಂದು ಸಂಖ್ಯೆ, ಹತ್ತರಷ್ಟು ಹತ್ತು
**ನೃಕ್ಷೇತ್ರ** – ಮಾನವರು ವಾಸಿಸುವ ಜಾಗ
**ನೃಗತಿ** – (ಜೈನ) ಮನುಷ್ಯಗತಿ; ಚತುರ್ಗತಿಗಳಲ್ಲಿ ಒಂದು
**ನೃತ್ತ** – ಗತಿಪ್ರಧಾನ ನೃತ್ಯ
**ನೃತ್ಯ** – ಅಭಿನಯಸಹಿತವಾದ ನರ್ತನ
**ನೃತ್ಯಗೃಹ** – ನರ್ತನಶಾಲೆ
**ನೃತ್ಯಲೀಲೆ** – ನರ್ತನವಿಲಾಸ
**ನೃತ್ಯವಿದ್ಯೆ** – ನರ್ತನಕಲೆ
**ನೃತ್ಯಾಂಗ** – ನಾಟ್ಯದ ಭಾಗ
**ನೃಪ** – ಪ್ರಜಾಪಾಲಕ, ರಾಜ
**ನೃಪಕಾಂತೆ** – ರಾಜಪತ್ನಿ
**ನೃಪಕುಮಾರ** – ರಾಜನ ಮಗ
**ನೃಪಕುಲ** – ರಾಜಸಮೂಹ; ರಾಜವಂಶ
**ನೃಪಗೃಹ** – ಅರಮನೆ
**ನೃಪತಿ** – ನೃಪ
**ನೃಪಸನಾಭಿ** – ರಾಜನ ಹತ್ತಿರದ ಸಂಬಂಧಿ
**ನೃಪತುಂಗ** – ರಾಜಶ್ರೇಷ್ಠ
**ನೃಪನಂದನ** – ನೃಪಕುಮಾರ
**ನೃಪನೀತಿವಿದ** – ರಾಜನೀತಿ ವಿಶಾರದ
**ನೃಪನೀತಿಶಾಸ್ತ್ರ** – ರಾಜನೀತಿ
**ನೃಪಪತಿ** – ರಾಜಾಧಿರಾಜ
**ನೃಪಪುತ್ರಿ** – ರಾಜಕುಮಾರಿ
**ನೃಪಬಾಧೆ** – ರಾಜನ ಹಿಂಸೆ
**ನೃಪಭವನ** – ಅರಮನೆ
**ನೃಪಮಂಡಲ(ಳ)** – ರಾಜಸಮೂಹ; ನೃಪಮಂಡಲದಲ್ಲಿ ನಾಲ್ಕು ಬಗೆ: ವಿಜಿಗೀಷು, ಅರಿ, ಮಧ್ಯಮ, ಉದಾಸೀನ; ಪ್ರತಿಯೊಬ್ಬರಿಗೂ ಮಿತ್ರ, ಮಿತ್ರಾಮಿತ್ರರು
**ನೃಪವಂದ್ಯ** – ರಾಜಪೂಜಿತ
**ನೃಪವಧು** – ರಾಜಪತ್ನಿ
**ನೃಪವರ** – ರಾಜಶ್ರೇಷ್ಠ
**ನೃಪವಿದ್ಯೆ** – ರಾಜವಿದ್ಯೆ; ಇದರಲ್ಲಿ ಅನ್ವೀಕ್ಷಕೀ, ತ್ರಯೀ, ವಾರ್ತಾ, ದಂಡನೀತಿ ಎಂಬ ನಾಲ್ಕು ಬಗೆ
**ನೃಪವೃಷಭ** – ರಾಜಶ್ರೇಷ್ಠ
**ನೃಪಶಾಸ್ತ್ರ** – ರಾಜನೀತಿ
**ನೃಪಶಾಸ್ತ್ರಜ್ಞತೆ** – ರಾಜನೀತಿಯ ತಿಳಿವಳಿಕೆ
**ನೃಪಸತಿ** – ರಾಜಪತ್ನಿ
**ನೃಪಸದನ** – ಅರಮನೆ
**ನೃಪಸಿಂಹ** – ರಾಜರಲ್ಲಿ ಸಿಂಹದಂತಿರುವವನು
**ನೃಪಸುತ** – ರಾಜಕುಮಾರ
**ನೃಪಸೇವೆ** – ರಾಜನ ಊಳಿಗ
**ನೃಪಾಗಮ** – ರಾಜನೀತಿ; ರಾಜಧರ್ಮ
**ನೃಪಾಲ(ಳ)** – ನೃಪ
**ನೃಪಾಲಲ(ಳ)ಕ** – ನೃಪ
**ನೃಪಾವಸಥ** – ನೃಪ+ಅವಸಥ, ಅರಮನೆ
**ನೃಪೇಂದ್ರ** – ರಾಜಶ್ರೇಷ್ಠ
**ನೃಶಂಸ** – ಕ್ರೂರಿ
**ನೆಕ್ಕನೆ** – ಥಟ್ಟನೆ
**ನೆಕ್ಕು** – ಮುಳುಗಿಹೋಗು
**ನೆಕ್ಕೊರ** – ಕುರುಚಲು ಗಿಡ
**ನೆಗಂ** – ದೊಡ್ಡದು
**ನೆಗಪು** – ಮೇಲೆತ್ತು; ಸುರಿಸು; ರಕ್ಷಿಸು; ಎತ್ತುವಿಕೆ
**ನೆಗರ್ತೆವೆಱು** – ಖ್ಯಾತಿ ಹೊಂದು
**ನೆಗೞ್** – ನೆಗೆ; ಕಾಣಿಸಿಕೊಳ್ಳು; ಕೈಗೊಳ್ಳು; ಮಾಡು; ಮೊಸಳೆ
**ನೆಗೞ್ನುಡಿ** – ಶಪಥಮಾಡು
**ನೆಗೞ್ಪಡು** – ಆಚರಣೆಗೊಳ್ಳು
**ನೆಗೞಿಸು** – ಮಾಡಿಸು
**ನೆಗೞ್ಚು** – ಕೈಗೊಳ್ಳು; ಮಾಡಿಸು; ಖ್ಯಾತಿಗೊಳ್ಳು
**ನೆಗೞ್ತೆ** – ಖ್ಯಾತಿ; ಕಾರ್ಯ; ಇರುವಿಕೆ
**ನೆಗೞ್ತೆಗಿಡಿಸು** – ಖ್ಯಾತಿ ಕುಂದಿಸು
**ನೆಗೞ್ತೆಗೆಯ್** – ರಚನೆ ಮಾಡು
**ನೆಗೞ್ತೆವಡೆ** – ಖ್ಯಾತಿ ಪಡೆ; ಪ್ರಕಟಗೊಳ್ಳು
**ನೆಗೞ್ತೆವೆಱು** – ಖ್ಯಾತಿ ಹೊಂದು
**ನೆಗೞ್ವು** – ನಡವಳಿಕೆ
**ನೆಗೆ** – ಮೇಲಕ್ಕೆ ಹಾರು; ಜಿಗಿತ; ನಿಮಿರಿ ನಿಲ್ಲು; ಉನ್ನತಿಗೇರು
**ನೆಗೆತರ್** – ಹಾರಿ ಬರು; ಉದ್ಭವಿಸು
**ನೆಗೆವಾವು** – ಹಾರುವ ಹಾವು
**ನೆಗ್ಗಿಲ್ಗಾಡು** – ನೆಗ್ಗಿಲಮುಳ್ಳುಗಿಡಗಳ ಕಾಡು
**ನೆಟ್ಟನೆ** – ನೇರವಾಗಿ
**ನೆಣ** – ಕೊಬ್ಬು
**ನೆತ್ತ** – ಲೆತ್ತ, ಪಗಡೆಯಾಟ
**ನೆತ್ತಗಾಱ** – ಪಗಡೆಯಟಗಾರ
**ನೆತ್ತರ್** – ರಕ್ತ
**ನೆತ್ತವಲಗೆ** – ಪಗಡೆಯ ಹಲಗೆ, ಹಾಸು
**ನೆತ್ತಿ** – ನಡುದಲೆ; ತಲೆ

**ನೆತ್ತಿಯೊಳಾನ್** – ಶಿರಸಾವಹಿಸು, ಶ್ರದ್ಧೆಯಿದ ಪಾಲಿಸು
**ನೆತ್ತಿಯೊಳ್ಪೊಱು** – ನೆತ್ತಿಯೊಳಾನ್
**ನೆತ್ತಿಗಣ್ಣವ** – ಹಣೆಗಣ್ಣ, ಶಿವ
**ನೆತ್ತಿಮುತ್ತು** – ಆನೆಯ ಕುಂಭದಲಿನ ಮುತ್ತು
**ನೆತ್ತಿಯೆಡೆ** – ತಲೆಯ ಭಾಗ
**ನೆತ್ತಿವಂದ** – ಹಣೆಯ ಪಟ್ಟಿ, ಒಂದು ಆಭರಣ
**ನೆತ್ತಿವಣಿ** – (ಹಾವಿನ) ಹೆಡೆಯ ಮಣಿ
**ನೆನಪು(ಹು)** – ಜ್ಞಾಪಕ
**ನೆನೆ** – ನೆನೆಸಿಕೊ; ಗಮನಿಸು
**ನೆನೆಯಿಸು** – ಜ್ಞಾಪಿಸು
**ನೆಪ್ಪು** – ನೇರ್ಪು, ನೇರವಗಿರುವುದು
**ನೆಪ್ಪುಗೊಳ್** – ಮುಯ್ಯಿ ತಿರಿಸಿಕೊ
**ನೆಪ್ಪುವಡೆ** – ಚೆನ್ನಾಗಿರು
**ನೆಮ್ಮಿಸು** – ಒರಗಿಸು, ಆನಿಸು
**ನೆಮ್ಮು** – ಒರಗು, ಆಶ್ರಯಿಸು
**ನೆಯ್** – ನೂಲನ್ನು ಬಟ್ಟೆಯಾಗಿ ಹೆಣೆ; ತುಪ್ಪ; ಎಣ್ಣೆ
**ನೆಯ್ದಿಲ್** – ನೈದಿಲೆ
**ನೆಯ್ಯೇಱಿಸು** – ಮದುಮಗಳಿಗೆ ಹಾಲುತುಪ್ಪದಲ್ಲಿ ಅದ್ದಿದ ಅಂಬುಗೋಲನ್ನು ಮುಟ್ಟಿಸುವ ಶಾಸ್ತ್ರ; ಅಭ್ಯಂಜನಸ್ನಾನ ಮಾಡಿಸು
**ನೆಯ್ವೊಯ್** – ತುಪ್ಪ ಸುರಿ
**ನೆರ(ವು)** – ಸಹಾಯ; ಆಧಾರ
**ನೆರಂ** – ಜೊತೆಗೆ; ಚೆನ್ನಾಗಿ
**ನೆರಂಬಡೆ** – ನೆರವು ಪಡೆ
**ನೆರಂಬರ್** – ನೆರವಿಗೆ ಬರು
**ನೆರಂಬಾರ್** – ನೆರಂ+ಪಾರ್, ನೆರವು ನಿರೀಕ್ಷಿಸು
**ನೆರಂಬಿಡಿ** – ಆಶ್ರಯ ಹೊಂದು
**ನೆರಂಬೇಱು** – ನೆರವು ಪಡೆ
**ನೆರಂಬೇೞ್** – ನೆರವು ಮಾಡಲು ಹೇಳು
**ನೆರ(ರೆ)ಪು** – ಒಟ್ಟಾಗಿಸು; ಕೂಡಿಸು
**ನೆರವಿ** – ಗುಂಪು; ರಾಶಿ
**ನೆರವಿವಡೆ** – ಜನರಿಗೆಲ್ಲ ತಿಳಿ; ಖ್ಯಾತಿಗೊಳ್ಳು
**ನೆರವುಟ್ಟು** – ನೆರವು ಹುಟ್ಟು, ಸಹಾಯ ದೊರೆ
**ನೆರೆ** – ಸೇರು; ಸಂಭೋಗಿಸು; ಗುಂಪಾಗು; ಸಿಗು; ಪಕ್ಕ
**ನೆರೆಗೆಯ್** – ಪಕ್ಕದ ಹೊಲ
**ನೆರೆತರ್** – ಗುಂಪುಗೂಡು
**ನೆರೆಪಳ್ಳಿ** – ಪಕ್ಕದ ಹಳ್ಳಿ
**ನೆರೆಯಂಗಡಿ** – ಪಕ್ಕದ ಅಂಗಡಿ
**ನೆರೆಯಿಸು** – ಕೂಡಿಸು
**ನೆರೆಯೂರ್** – ಪಕ್ಕದ ಊರು
**ನೆರೆವ(ಮ)ನೆ** – ಪಕ್ಕದ ಮನೆ
**ನೆರ್ಕೊಱೆ** – ನೆಕ್ಕೊರ
**ನೆರ್ಕೊಱ(ನೆಕ್ಕೊರ)ವಟ್ಟೆ – ಕುರುಚಲು ಬೆಳೆದ ದಾರಿ–**
**ನೆರ್ಗಿಲ್** – ನೆಗ್ಗಿಲು ಮುಳ್ಳು ಗಿಡ
**ನೆರ್ಗು** – ನೆಗ್ಗು
**ನೆರ್ಮ** – ಆಸರೆ, ಆಧಾರ
**ನೆರ್ಮಿಸು** – ನೆಮ್ಮಿಸು, ಒರಗಿಸು, ಆನಿಸು
**ನೆರ್ಮು** – ಒರಗು, ಆಶ್ರಯಿಸು; ಆಸರೆ
**ನೆಲ್** – ಬತ್ತ
**ನೆಲ** – ಭೂಮಿ
**ನೆಲಕಲ** – ಜಿಪುಣ
**ನೆಲಕಿಕ್ಕು** – ನೆಲಕ್ಕೆ ಬೀಳಿಸು; ನಾಶಮಾಡು
**ನೆಲದಱಿಕೆ** – ಭೂಮಿಯೆಲ್ಲ ಹರಡಿದ ಖ್ಯಾತಿ
**ನೆಲದೆಱೆಯ** – ಭೂಮಿಯ ಒಡೆಯ
**ನೆಲನ(ಂ)ಬರೆ** – ನಾಚಿಕೆ, ಬಯದಿಂದ ನೆಲದ ಮೇಲೆ ಕಾಲಿನಿಂದ ಗೀರು
**ನೆಲ(ನ)ನುಗ್ಗಡಿಸು** – ದಾರಿಬಿಡಿಸಿಕೊಂಡು ಹೋಗುತ್ತ ಕರೆದೊಯ್ಯಿ
**ನೆಲನುಂ ನೇಸಱುಂ ಕಾಣದಂತೆ** – ಯಾರಿಗೂ ತಿಳಿಯದಂತೆ
**ನೆಲಕಲ** – ಲೋಭಿ
**ನೆಲಗಟ್ಟಿಸು** – ನೆಲಗಟ್ಟು ರಚನೆಮಾಡು
**ನೆಲಗಟ್ಟು** – ಧಮ್ಮಸ್ಸುಮಾಡಿದ ಸಮತಟ್ಟಾದ ನೆಲ
**ನೆಲಗೆಡು** – ನೆಲೆಯನ್ನು ಕಳೆದುಕೊ
**ನೆಲಪು** – ನೆಲವು
**ನೆಲಮನೆ** – ನೆಲಮಟ್ಟಕ್ಕಿಂತ ಕೆಳಗಿರುವ ಮನೆ
**ನೆಲಮಾಡ** – ಮಹಡಿ
**ನೆಲಮುಕ್ಕ** – ಒಂದು ಜಾತಿಯ ಹಾವು
**ನೆಲವರ** – ಸಾಯುವ ಜಾಗ
**ನೆಲವಾಳಗೆ** – ನೆಲಮನೆ
**ನೆಲವುವಿಡಿ** – ನೆಲವಿನ ಮೇಲೆ ಜೋಡಿಸು
**ನೆಲವೆಣ್** – ಭೂದೇವಿ
**ನೆಲವೊಱೆ** – ಭೂಮಿಯ ಭಾರ, ಜವಾಬ್ದಾರಿ
**ನೆಲಸರಿ** – ಭೂಮಟ್ಟ; ಸರ್ವನಾಶ
**ನೆಲಸು** – ವಾಸಿಸು; ನೆಲೆನಿಲ್ಲು
**ನೆಲೆ** – ಆಶ್ರಯ; ಆವಾಸ; ಚೆನ್ನಾಗಿ
**ನೆಲೆಗೆಡಿಸು** – ಆಧಾರರಹಿತವಾಗಿಸು; ಆಶ್ರಯ ಕಳೆದುಕೊ
**ನೆಲೆಗೆ(ಗಿ)ಡು** – ಆಶ್ರಯರಹಿತನಾಗು
**ನೆಲೆಗೊಳ್** – ಸ್ಥಿರವಾಗಿ ನಿಲ್ಲು
**ನೆಲೆಗೊಳಿಸು** – ಸ್ಥಿರವಾಗಿ ನಿಲ್ಲಿಸು
**ನೆಲೆದೊಡಿಗೆ** – ಸದಾ ಇರುವ ತೊಡಿಗೆ
**ನೆಲೆದೊೞ್ತು** – ಜೀತದಾಳು
**ನೆಲೆಮೊಲೆ** – ತೋರ ಮೊಲೆ
**ನೆಲೆಯಱಿ** – ಆಂತರ್ಯವನ್ನು ತಿಳಿ
**ನೆಲೆಯಾಂದೆ** – ನೆಲೆ+ಆಂದೆ, ಒಂದೆಡೆಯೇ ನಿಂತ ಗೂಬೆ
**ನೆಲೆವಡಲ(ಅ)ಗೆ** – ನೆಲೆ+ಪಡಲ(ಲಿ)ಗೆ, ಅಗಲವಾದ ಬೋಗುಣಿ
**ನೆಲೆವ(ಮ)ನೆ** – ಕರುಮಾಡ, ಉಪ್ಪರಿಗೆ
**ನೆಲೆವಾ(ಮಾ)ಡ** – ನಾನಾ ಅಂತಸ್ತುಗಳಿರುವ ಮನೆ

**ನೆಲೆವಿಡಿ** – ಸ್ಥಿರಗೊಳ್ಳು
**ನೆಲೆವೀಡು** – ನೆಲಸಿರುವ ಬೀಡು
**ನೆಲೆವೆರ್ಚಿಸು** – ನೆಲೆ+ಪೆರ್ಚಿಸು, ಅಧಿಕವಾಗಿಸು
**ನೆಲೆವೆರ್ಚು** – ಅಧಿಕಗೊಳ್ಳು
**ನೆಲೆವೆಱು** – ಸ್ಥಿರಗೊಳ್ಳು
**ನೆಲೆವೊಟ್ಟು** – ನೆಲೆ+ಬೊಟ್ಟು, ಸುಂದರ ತಿಲಕ
**ನೆಲೆಸೊಡರ್** – ಕಾಂತಿಯುಕ್ತ ದೀಪ
**ನೆವ** – ನೆಪ, ಕಾರಣ; ರೀತಿ
**ನೆವಂಗೊಳ್** – ನೆಪವಾಗು
**ನೆವಮಿಕ್ಕು** – ಆರೋಪ ಹೊರಿಸು
**ನೆವವಿ(ಮಿ)ಡು** – ನೆಪವಾಗಿಸು
**ನೆಸೆ** – ಶುದ್ಧಿಗೊಳ್ಳು
**ನೆಱ** – ಜೀವಸ್ಥಾನ; ಮರ್ಮ
**ನೆಱನೆತ್ತು** – ಮರ್ಮವನ್ನು ತೋರಿಸು
**ನೆಱಗೊಳ್** – ಮರ್ಮವನ್ನು ತಿವಿ; ಮನಸ್ಸನ್ನು ಗೆಲ್ಲು
**ನೆಱನ್** – ಮರ್ಮಸ್ಥಾನ
**ನೆಱಪು** – ನೆರವೇರಿಸು
**ನೆಱಲ್** – ಆಧಾರ; ಆಧರಿಸು; ಜೋತುಬೀಳು
**ನೆಱವಿ** – ಕೊನೆ
**ನೆಱವು** – ಸಿದ್ಧತೆ; ಸಂಚಯನ
**ನೆಱೆ(ಯೆ)** – ಸಮಗ್ರಗೊಳ್ಳು; ಪುಷ್ಟಗೊಳ್ಳು; ತುಂಬು; ಪೂರ್ಣಗೊಳ್ಳು; ನೆರವೇರು; ಉಬ್ಬರ; ಚೆನ್ನಾಗಿ; ಪ್ರವಾಹ
**ನೆಱೆಕೊಳ್** – ಸರ್ವಸ್ವ ಹರಣಮಾಡು; ಚುಚ್ಚು
**ನೆಱೆಗಾಣ್** – ಮುಗಿ; ಕೊನೆಗೊಳ್ಳು
**ನೆಱೆಗಿವುಡ** – ನೆಱೆ+ಕಿವುಡ, ಪೂರ್ತಿ ಕಿವುಡ
**ನೆಱೆಗೆಲ್ಲ**– ಪೂರ್ಣ ಗೆಲವು
**ನೆಱೆಗೊಳ್** – ಮನಸೆಳೆ; ನಾಟು
**ನೆಱೆದಿಂಗಳ್** – ಪೂರ್ಣಚಂದ್ರ
**ನೆಱೆಯಱೆ** – ಚೆನ್ನಾಗಿ ತಿಳಿದುಕೊ
**ನೆೞಲ್** – ನೆರಳು; ಪ್ರತಿಬಿಂಬ
**ನೆೞಲಿಕ್ಕು** – ಪ್ರತಿಬಿಂಬಿಸು
**ನೆೞಲ್ದಾಣ** – ನೆರಳಿರುವ ಜಾಗ
**ನೆೞಲ್ವಿಡಿ** – ನೆರಳು ನೀಡು
**ನೇಗಿಲ್** – ನೇಗಿಲು, ಉಳುವ ಸಾಧನ
**ನೇಗಿಲ್ವಾಯ್** – ನೇಗಿಲಿನ ಬಾಯಿ, ಗುಳ
**ನೇಜೆಯ** – ಪತಾಕೆ; ಭಲ್ಲೆ
**ನೇಣ್** – ಹಗ್ಗ
**ನೇಣಜಂತ್ರ** – ಸೂತ್ರದ ಬೊಂಬೆ
**ನೇಣುಗ** – ಹಗ್ಗ ಮಾಡುವವನು
**ನೇಣ್ಬಲೆ** – ಕಣ್ಣಿ ಬಲೆ
**ನೇತಾರ** – ನಾಯಕ
**ನೇತೃ** – ನೇತಾರ
**ನೇತ್ರ** – ಕಣ್ಣು; ಒಂದು ಬಗೆಯ ಬಟ್ಟೆ
**ನೇತ್ರದುಕೂಲ** – ರೇಷ್ಮೆ ಬಟ್ಟೆ
**ನೇತ್ರಪಟ್ಟ**– ನೇತ್ರದುಕೂಲ
**ನೇತ್ರಪಟಿ** – ರೇಷ್ಮೆ ಬಟ್ಟೆ
**ನೇತ್ರಪುತ್ರಿಕೆ** – ಕಣ್ಣ ಪಾಪೆ
**ನೇತ್ರವಟ್ಟಣಿಗೆ** – ನೇತ್ರಪಟಿ
**ನೇತ್ರವಟ್ಟೆ** – ನೇತ್ರಪಟಿ
**ನೇತ್ರಸೂತ್ರ** – ಮಂಗಳಸೂತ್ರ
**ನೇತ್ರಾಂಚಲ** – ಕುಡಿಗಣ್ಣು
**ನೇತ್ರಾಂಬರ** – ನೇತ್ರಪಟಿ
**ನೇತ್ರಾಂಶುಕ** – ನೇತ್ರಪಟಿ
**ನೇತ್ರಾಕರ್ಷಣ** – ಕಣ್ಣು ಸೆಳೆಯುವುದು
**ನೇತ್ರಾಧ್ವ** – ಕಣ್ಣ (ದೃಷ್ಟಿಯ) ಮಾರ್ಗ
**ನೇತ್ರಾನಂದ** – ಕಣ್ಣಿಗಾಗುವ ಸಂತೋಷ
**ನೇತ್ರಾವಳ** – ನೇತ್ರಪಟಿ
**ನೇತ್ರೋನ್ಮೀಲನ** – ಕಣ್ಣು ತೆರೆಯುವಿಕೆ
**ನೇದಿಷ್ಠ** – ಹತ್ತಿರದಲ್ಲಿರುವ
**ನೇಪಥ್ಯ** – ಭೂಷಣ
**ನೇಪಥ್ಯಗೃಹ** – ನಟರು ಸಿಂಗರಗೊಳ್ಳುವ ಜಾಗ
**ನೇಮಿ** – ಚಕ್ರದ ಪಟ್ಟಿ; ರಾಟೆ; (ಜೈನ) ಇಪ್ಪತ್ತೆರಡನೆಯ ತೀರ್ಥಂಕರ
**ನೇಮಿಸು** – ನಿರೂಪಿಸು
**ನೇರ್** – ಕತ್ತರಿಸು; ಸಮ್ಮತಿಸು; ಒಪ್ಪಿಗೆ
**ನೇರಾಣಿ** – ಅಪರಂಜಿ
**ನೇರಾಣಿಯ ಪೊನ್** – ಅಪ್ಪಟ ಬಂಗಾರ
**ನೇರಿಡು** – ಜೋಡಿಸಿಡು
**ನೇರಿತು(ತ್ತು)** – ನೇರ(ವಾದುದು); ಸುಂದರವಾದುದು
**ನೇರಿದರ್** – ಕುಶಲರು
**ನೇರ್ಗಿಱಿದು** – ನೇಱ್+ಕಿಱಿದು, ಕೊಂಚ ಚಿಕ್ಕದು
**ನೇರ್ಗಿಱಿಯ(ಳ್,ರ್)** – ಕೊಂಚ ಚಿಕ್ಕವನು(ಳು, ರು)
**ನೇರ್ಗೋಲ್ವರಿ** – ನೇರವಾಗಿ ಬಾಣದಂತೆ ಸಾಗು
**ನೇರ್ಗೋಲ್ವೋಗು** – ನೇರ್ಗೋಲ್ವರಿ
**ನೇಪ(ರ್ವ)ಡಿಸು** – ಹೊಂದಿಸು; ಅಳವಡಿಸು
**ನೇಪ(ರ್ವ)ಡು** – ಹೊಂದು; ಅಳವಡು; ಸಾಮರಸ್ಯ; ಸನ್ನಡತೆ
**ನೇಪ(ರ್ವ)ಡೆ** – ನೇರ್ಪಡುವ ರೀತಿಯಲ್ಲಿ; ಚೆನ್ನಾಗಿ
**ನೇರ್ಪಡುಗಿಡು** – ಸಾಮರಸ್ಯ ಕಳೆದುಕೊ; ಸನ್ನಡತೆಯನ್ನು ತೊರೆ
**ನೇರ್ಪು** – ಕೊಲೆ; ನೇರತನ; ಯೋಗ್ಯತೆ
**ನೇರ್ಪುಗೊಳ್** – ನೆಪ್ಪುಗೊಳ್, ಮುಯ್ಯಿ ತಿರಿಸಿಕೊ
**ನೇರ್ಪುವಡೆ** – ಚೆನ್ನಾಗಿರು
**ನೇರ್ಪುವೆಱು** – ಯೋಗ್ಯವಾಗಿರು
**ನೇಲ್** – ಜೋಲಾಡು
**ನೇಲಿಸು** – ನೇತುಹಾಕು
**ನೇಲ್ಗಟ್ಟು** – ತೂಗಹಾಕು
**ನೇವಣೆ** – ನೈಪುಣ್ಯ
**ನೇವರಿಸು** – ಮೃದುವಾಗಿ ತೀಡು
**ನೇವಲೆ(ಳೆ)** – ಸೊಂಟಪಟ್ಟಿ, ನಡುಪಟ್ಟಿ
**ನೇವಾಳ** – ಸರ, ಹಾರ

**ನೇವುರ** – ಕಾಲಂದುಗೆ
**ನೇಸಱ್** – ಸೂರ್ಯ; ಹಗಲು
**ನೇಸಱಮಗ** – ಸೂರ್ಯನ ಮಗ, ಯಮ; ಕರ್ಣ
**ನೇಹ** – (ಸ್ನೇಹ) ಗೆಳೆತನ; ಎಣ್ಣೆ
**ನೇಱಿಡು** – ಜೋತುಹಾಕು
**ನೇಱಿಲ್** – ನೇರಿಳೆ ಹಣ್ಣು
**ನೇಱಿಸು** – ನೇಱಿಡು
**ನೇಱು** – ನೇಱಿಡು
**ನೈಗಮ** – (ಜೈನ) ದ್ರವ್ಯಾರ್ಥಕನಯದ ಒಂದು ಬಗೆ; ವಸ್ತುವಿನ ಉದ್ದೇಶ ಗ್ರಹಿಸುವ ತಿಳಿವಳಿಕೆ; ನೋಡಿ, 'ದ್ರವ್ಯಾರ್ಥಕನಯ'
**ನೈದಿಲ್** – ಉತ್ಪಲ
**ನೈದಿಲ್ಗೊಳ** – ನೈದಿಲೆಗಳಿಂದ ತುಂಬಿದ ಕೊಳ
**ನೈಪಥ್ಯ** – ಅಲಂಕಾರಸಾಮಗ್ರಿ
**ನೈಪಥ್ಯಂಗೆಯ್** – ಅಲಂಕರಿಸಿಕೊ
**ನೈಪಥ್ಯಂದಳೆ** – ನೈಪಥ್ಯಂಗೆಯ್
**ನೈಪಥ್ಯಗೃಹ** – ಅಲಂಕಾರಗೃಹ
**ನೈಪಥ್ಯನಿಳಯ** – ನೈಪಥ್ಯಗೃಹ
**ನೈಪುಣ್ಯ** – ನಿಪುಣತೆ, ಪರಿಣತಿ
**ನೈಮಿತ್ತಿಕ** – ನಿರ್ದಿಷ್ಟ ಕಾಲಕ್ಕೆ ಸಂಬಂಧಿಸಿದ; ಜ್ಯೋತಿಷಿ
**ನೈಮಿತ್ತಿಕವಚನ** – ಭವಿಷ್ಯದ ಬಗೆಗಿನ ಮಾತು
**ನೈಮಿತ್ತಿಕಾದೇಶ** – ಜ್ಯೋತಿಷಿಯ ಮಾತು
**ನೈಯಾಯಿಕ** – ನ್ಯಾಯದರ್ಶನಜ್ಞ; ತಾರ್ಕಿಕ
**ನೈರಂತರ್ಯ** – ನಿರಂತರತೆ; ತೃಪ್ತಿ
**ನೈಋತಿ** – ನೈಋತ್ಯದಿಕ್ಕು; ಆ ದಿಕ್ಕಿನ ಪಾಲಕ
**ನೈರ್ಗ್ರಂಥ್ಯ** – (ಜೈನ) ನಿರ್ಗ್ರಂಥತನ, ಸನ್ಯಾಸ
**ನೈಲಂಗಲ** – ಚೆಲ್ವಿಕೆ
**ನೈಷಂಗ** – ಬತ್ತಳಿಕೆ
**ನೈಷ್ಠಿಕ** – ನಿಷ್ಠಾವಂತ; ಒಂದು ಆಯುಧ
**ನೈಸರ್ಪ** – (ಜೈನ) ಚಕ್ರವರ್ತಿಯ ನವನಿಧಿಗಳಲ್ಲಿ ಒಂದು; ಭವನ, ಶಯ್ಯೆ, ಆಸನ ಮುಂತಾದವುಗಳನ್ನು ನೀಡುವಂಥದು, ನೋಡಿ, 'ನವನಿಧಿ'
**ನೊಗ** – ಯುಗ; ಎತ್ತಿನ ಜೋಡಿಯ ಮೇಲಿಡುವ ಮರ; ನಾಲ್ಕು ಹಸ್ತದ ಅಳತೆ
**ನೊಜ್ಜಗಾಗು** – ಹಿತಕರವಾಗು
**ನೊಜ್ಜಿತು** –ಹಗುರ; ಅಲ್ಪತೆ
**ನೊಜ್ಜಿದನ್(ಳ್)(ರ್)** – ಅಲ್ಪನಾದವನು(ಳು)(ರು)
**ನೊಣೆ** – ನುಂಗು; ನಾಶಗೈ
**ನೊರಜು** – ಸಣ್ಣ ಸೊಳ್ಳೆ
**ನೊರೆ** – ಡಿಂಡೀರ, ಫೇನ
**ನೊರೆನೆತ್ತರ** – ನೊರೆಗೂಡಿದ ರಕ್ತ
**ನೊರೆವನಿ** – ನೊರೆಯ ಹನಿ, ತುಂತುರು
**ನೊರೆವಾಲ್** – ನೊರೆಗೂಡಿದ ಹಾಲು
**ನೊರೆವಿಂಡು** – ನೊರೆಯ ರಾಶಿ
**ನೊರೆವುಲ್** – ಎಳೆಯ ಹುಲ್ಲು
**ನೊರೆವೆರೆ** – ನೊರೆಯಿಂದ ಕುಡು
**ನೊರೆವೇಱು** – ನೊರೆಯ ಒಟ್ಟಿಲಾಗು
**ನೊಸಲ್** – ಹಣೆ
**ನೊಸಲಕಣ್ಣದೇವ** – ಹಣೆಯಲ್ಲಿ ಕಣ್ಣುಳ್ಳವನು, ಶಿವ
**ನೊಸಲಕಣ್ಣಾತ** – ನೊಸಲಕಣ್ಣದೇವ
**ನೊಸಲಕಣ್ಣಾಯ್ದವ** – (ಶಿವನ) ಹಣೆಗಣ್ಣಿನಿಂದ ಹುಟ್ಟಿದವನು, ವೀರಭದ್ರ
**ನೊಸಲಗಣ್** – ಹಣೆಗಣ್ಣು
**ನೊಸಲಕ್ಕರ** – ಹಣೆಯ ಬರಹ
**ನೊಳ(ವು)** – ನೊಣ
**ನೋ** – ಯಾತನೆಪಡು
**ನೋಂನ್** – ವ್ರತ ಮಾಡು
**ನೋಂಪಿ** – ವ್ರತ
**ನೋಕಷಾಯ** – (ಜೈನ) ಚಾರಿತ್ರಮೋಹನೀಯದಲ್ಲಿ ಒಂದು ಬಗೆ, ಕಿಂಚಿತ್ ಕಷಾಯ
**ನೋಟ** – ನೋಡಿವಿಕೆ; ದೃಶ್ಯ
**ನೋಟಕ** – ನೋಡಿವವನು, ಪ್ರೇಕ್ಷಕ
**ನೋಡಿಸು** – ನೋಡಿವಂತೆ ಮಾಡು
**ನೋಡಿ** – ಕಾಣು; ಪರೀಕ್ಷೆಮಾಡು
**ನೋದುಃಖ** – ದುಃಖರಹಿತತೆ
**ನೋನ್** – ವ್ರತಹಿಡಿ
**ನೋನಿಸು** – ವ್ರತ ಕೈಗೊಳಿಸು
**ನೋಯಿಸು** – ನೋವುಂಟುಮಾಡು
**ನೋವು** – ಯಾತನೆ; ದುಃಖ
**ನೋಳ್** – ಮುಂದೆ ನುಗ್ಗು; ಸನಿಹ ಹೋಗು
**ನೋಳ್ದು** – ಎದುರಿಸು; ಅತಿಕ್ರಮಿಸು
**ನೌ** – ಹಡಗು
**ನೌಸಾಧನ** – ನೌಕಾಬಲ
**ನುಕ್ಕರಿಸು** – ಉಪೇಕ್ಷೆಮಾಡು
**ನ್ಯಗ್ಭೂತ** – ಕೀಳುಗೈದ
**ನ್ಯಗ್ರೋಧ** – ಆಲದ ಮರ
**ನ್ಯಗ್ರೋಧಪರಿಮಂಡಲ** – ದೇಹದ ಸುತ್ತಳತೆ
**ನ್ಯಗ್ರೋಧಪರಿಮಂಡಲೆ** – ಸುಂದರಿ
**ನ್ಯಸನ** – ಇಡುವುದು
**ನ್ಯಸ್ತ** – ಇಡಲಾದ
**ನ್ಯಾಯ** – ನಿಯಮ; ಲೋಕರೂಢಿಯಾದುದು
**ನ್ಯಾಯನಿಯುಕ್ತ** – ನ್ಯಾಯಯುತವಾದುದು
**ನ್ಯಾಯಪುರುಷ** – ನ್ಯಾಯ ನೀಡುವವನು
**ನ್ಯಾಯರಕ್ತ** – ನ್ಯಾಯಮಾರ್ಗದಲ್ಲಿ ಆಸಕ್ತನಾದವನು
**ನ್ಯಾಯಾನ್ವಿತ** – ನ್ಯಾಯದಿಂದ ಕೂಡಿದ(ವನು)
**ನ್ಯಾಯಾರ್ಜಿತ** – ನ್ಯಾಯಮಾರ್ಗದಲ್ಲಿ ಗಳಿಸಿದ
**ನ್ಯಾಯೋಪಾರ್ಜಿತ** – ನ್ಯಾಯಾರ್ಜಿತ
**ನ್ಯಾಸಕಾರ** – ವಿವರಣೆ ನೀಡುವವನು

## ಪ

**ಪಂಕ** – ಕೆಸರು; ಲೇಪನದ್ರವ್ಯ
**ಪಂಕಜ** – ಕೆಸರಿನಲ್ಲಿ ಹುಟ್ಟಿದುದು, ತಾವರೆ
**ಪಂಕಜನೇತ್ರೆ** – ಕಮಲದಂತೆ ಕಣ್ಣುಳ್ಳವಳು
**ಪಂಕಜವಿಷ್ಟರ** – ಕಮಲದ ಆಸನವುಳ್ಳವನು, ಬ್ರಹ್ಮ
**ಪಂಕಜಸಂಭವ** – ಕಮಲದಲ್ಲಿ ಹುಟ್ಟಿದವನು, ಬ್ರಹ್ಮ
**ಪಂಕಜಾಕರ** – ಕಮಲಗಳ ಆವಾಸ, ಕೊಳ
**ಪಂಕಜಾಕ್ಷ** – ಕಮಲಾಕ್ಷ, ವಿಷ್ಣು
**ಪಂಕಜಾತ** – ಪಂಕಜ
**ಪಂಕಜಾಸನ** – ಪಂಕಜವಿಷ್ಟರ
**ಪಂಕಜೇಕ್ಷಣ** – ಪಂಕಜಾಕ್ಷ
**ಪಂಕಪ್ರಭೆ** – (ಜೈನ) ಒಂದು ನರಕ, ನೋಡಿ, 'ಸಪ್ತನರಕ'
**ಪಂಕಭಾಗ** – (ಜೈನ) ರತ್ನಪ್ರಭೆ ಎಂಬ ನರಕದ ಮೂರು ಭಾಗಗಳಲ್ಲಿ ಒಂದು
**ಪಂಕರುಹ** – ಪಂಕಜ
**ಪಂಕರುಹವದನೆ** – ಕಮಲಮುಖಿ
**ಪಂಕಿಲ** – ಕೆಸರಿನಿಂದ ಕೂಡಿದ
**ಪಂಕಿಲತೆ** – ಕೊಳಕು
**ಪಂಕೇಜವಕ್ತ್ರೆ** – ಕಮಲಮುಖಿ
**ಪಂಕ್ತಿಭೋಜನ** – ಜೊತೆಯೂಟ
**ಪಂಗಿಗ** – ಹಂಗಿಗೊಳಗಾದವನು
**ಪಂಗು** – ಹಂಗು; ದಾಕ್ಷಿಣ್ಯ; ಕುಂಟ
**ಪಂಚ** – ಅಪೂರ್ವ
**ಪಂಚಕ** – ಐದರ ಗುಂಪು
**ಪಂಚಕಲ್ಯಾಣ** – (ಜೈನ) ಜಿನನಿಗೆ ಮಾಡುವ **ಐದು ಮಹೋತ್ಸವಗಳು**: **ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ ಮತ್ತು ಪರಿನಿರ್ವಾಣ**–
**ಪಂಚಕಲ್ಯಾಣಮಹೋತ್ಸವ** – ಪಂಚಕಲ್ಯಾಣ
**ಪಂಚಕಲ್ಯಾಣೋತ್ಸವ** – ಪಂಚಕಲ್ಯಾಣ
**ಪಂಚಕೋಶ** – ಅನ್ನಮಯ, ಪಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಆತ್ಮನ ಐದು ಆವೆರಣಗಳು
**ಪಂಚಗಾರ್ತಿ** – ಪಂಚಕಾರುಕವರ್ಗಕ್ಕೆ (ಬಡಗಿ, ಅಕ್ಕಸಾಲೆ, ಕಮ್ಮಾರ, ಕಲ್ಲುಕುಟಿಗ, ಕಂಚುಗಾರ; ಅಥವಾ ಬಡಗಿ, ನೇಕಾರ, ಕ್ಷೌರಿಕ, ಅಗಸ, ಚಮ್ಮಾರ) ಸೇರಿದ ಸ್ತ್ರೀ
**ಪಂಚಗುರು** – ಪಂಚಪರಮೇಷ್ಠಿಗಳು
**ಪಂಚಜಡೆ** – ಐದು ಕಾಲಿನ ಜಡೆ(?)
**ಪಂಚಜನ** – ಮನುಷ್ಯ; ಪಾಂಚಜನ್ಯವೆಂಬ ಶಂಖುವನ್ನು ಹೊಂದಿದ್ದ ಒಬ್ಬ ರಾಕ್ಷಸ
**ಪಂಚತಂತ್ರ** – ಮಿತ್ರಲಾಭ, ಮಿತ್ರಭೇದ, ಸಂಧಿವಿಗ್ರಹ, ಲಬ್ಧನಾಶ, ಅಸಂಪ್ರೇಕ್ಷ್ಯಕಾರಿತ್ವಗಳೆಂಬ ರಾಜನೀತಿಯಲ್ಲಿನ ಐದು ಕಾರ್ಯತಂತ್ರಗಳು
**ಪಂಚತೆ** – ಐದಾಗಿರುವಿಕೆ; ಮರಣ
**ಪಂಚತ್ವ** – ಪಂಚತೆ
**ಪಂಚದಶ** – ಹದಿನೈದನೆಯ
**ಪಂಚದಶಪ್ರಮಾದ** – (ಜೈನ) ಧಾರ್ಮಿಕತೆಯಲ್ಲಿ ಅನಾದರವುಂಟುಮಾಡುವ ಕ್ರೋಧ, ಮಾನ, ಮಾಯೆ, ಲೋಭ (ಎಂಬ ಕಷಾಯಗಳು); ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ, ರಾಜಕಥೆ (ಎಂಬ ನಾಲ್ಕು ವಿಕಥೆಗಳು); ಸ್ಪರ್ಶ, ರಸನ, ಘ್ರಾಣ, ಚಕ್ಷುಃ, ಕರ್ಣ (ಎಂಬ ಐದು ಇಂದ್ರಿಯಗಳು; ನಿದ್ರೆ, ಸ್ನೇಹ ಎಂಬ ಒಟ್ಟು ಹದಿನೈದು ಪ್ರಮಾದಗಳು
**ಪಂಚಧಾರೆ** – ಕುದುರೆಯ ಐದು ಬಗೆಯ ನಡಿಗೆಗಳು: ಧೋರಿತ, ವಲ್ಗಿತ, ಪ್ಲುತ, ಉತ್ತೇಜಿತ, ಉತ್ತೇರಿಕ
**ಪಂಚನಮಸ್ಕಾರ** – (ಜೈನ) ಪಂಚಪರಮೇಷ್ಠಿಗಳಿಗೆ ಮಾಡುವ ನಮಸ್ಕಾರ ಹಾಗೂ ಹೇಳುವ ಮಂತ್ರ
**ಪಂಚನಮಸ್ಕೃತಿ** – ಪಂಚನಮಸ್ಕಾರ
**ಪಂಚಪದ** – ಪಂಚನಮಸ್ಕಾರ
**ಪಂಚಪರಮೇಷ್ಠಿ** – (ಜೈನ) ಅರ್ಹತ್, ಸಿದ್ಧ, ಅಚಾರ್ಯ, ಉಪಾಧ್ಯಾಯ, ಸರ್ವಸಾಧುಗಳು
**ಪಂಚಪಲ್ಲವದ ವಾಜಿ** – ರಾಜನ ಸವಾರಿಯ ಕುದುರೆ; ರಾಜವಾಹನ
**ಪಂಚಪಾಂಡವರು** – ಯುಧಿಷ್ಠಿರ, ಭೀಮಸೇನ, ಅರ್ಜುನ, ನಕುಲ, ಸಹದೇವ; ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತವರ್ಮ ಎಂಬ ದ್ರೌಪದಿಯಲ್ಲಿ ಹುಟ್ಟಿದ ಐದುಮಂದಿ
**ಪಂಚಪ್ರಮೆ** – ಪಂಚೇಂದ್ರಿಯಗಳೆಂಬ ಐದು ಪ್ರತ್ಯಕ್ಷಜನಕ ಪ್ರಮಾಣಗಳು; ಪಿಪೀಲಿಕಾ, ವಿಹಂಗಮ, ಮರ್ಕಟ, ಗಜ, ಪೂರ್ಣ ಎಂಬ ಐದು ಪ್ರಮಾಜ್ಞಾನಗಳು
**ಪಂಚಬಾಣ** – ಕಮಲ, ಅಶೋಕ, ಮಾವು, ಮಲ್ಲಿಗೆ, ನೈದಿಲೆಗಳೆಂಬ ಕಾಮನ ಐದು ಬಾಣಗಳು; ಅಥವಾ, ಸಮ್ಮೋಹನ, ಸಂತಾಪನ, ಸಂದೀಪನ, ಸಂಶೋಷಣ, ದ್ರಾವಣ ಎಂಬ ಕಾಮನ ಐದು ಬಾಣಗಳು; ಅಥವಾ, ಮನೋಮಥನ, ಮದನ, ಮೋಹನ, ಸಂತಾಪನ, ವಶೀಕರಣ
**ಪಂಚಭೂತ** – ಪೃಥ್ವಿ, ಅಪ್ಪು, ತೇಜಸ್, ವಾಯು, ಆಕಾಶಗಳೆಂಬ ಪ್ರಕೃತಿಯ ಐದು ಮೂಲವಸ್ತುಗಳು
**ಪಂಚಮ** – ಐದನೆಯ
**ಪಂಚಮಂಬೊರೆ** – ಪಂಚಮಸ್ವರದಿಂದ ಕೂಡಿರು

**ಪಂಚಮಕಾಲ** – (ಜೈನ) ಅವಸರ್ಪಿಣಿಯ ಐದು ಕಾಲಭೇದಗಳಲ್ಲಿ ಐದನೆಯದು, ನೋಡಿ 'ಅವಸರ್ಪಿಣಿ'

**ಪಂಚಮಗತಿ** – ಐದನೆಯ ಅವಸ್ಥೆ; ಚತುರ್ಗತಿಗಳನ್ನು ಮೀರಿದುದು, ಮೋಕ್ಷ

**ಪಂಚಮಜಲ(ಳ)(ನಿ)ಧಿ** – ಸಪ್ತಜಲಧಿಗಳಲ್ಲಿ ಐದನೆಯದು, ಕ್ಷೀರಸಮುದ್ರ, ನೋಡಿ 'ಸಪ್ತಜಲಧಿ'

**ಪಂಚಮಶ್ರುತಿ** – ಮಹಾಭಾರತ

**ಪಂಚಮಸಮುದ್ರ** – ಪಂಚಮಜಲ(ಳ)(ನಿ)ಧಿ

**ಪಂಚಮಹಾಕಲ್ಯಾಣ** – ಪಂಚಕಲ್ಯಾಣ

**ಪಂಚಮಹಾಪಾತಕ** – ಐದು ಮಹಾಪಾತಕಗಳು; ವಿವಿಧ ಧರ್ಮಗಳಲ್ಲಿನ ಹಾಗೂ ಕಾಲಗಳಲ್ಲಿನ ಇವುಗಳ ವಿವರಗಳಲ್ಲಿ ವ್ಯತ್ಯಾಸವಿದೆ; ಸಾಮಾನ್ಯವಾಗಿ ಹೇಳುವುದೆಂದರೆ ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಗಮನ, ಇವುಗಳನ್ನು ಮಾಡಿದವನ ಜೊತೆಗಿನ ಸಂಪರ್ಕ; (ಜೈನ) ಬಾಲವಧೆ, ಸ್ತ್ರೀವಧೆ, ಗೋವಧೆ, ಬ್ರಾಹ್ಮಣವಧೆ, ಋಷಿವಧೆ

**ಪಂಚಮಹಾಪಾತಕಿ** – ಐದು ಮಹಾಪಾತಕಗಳನ್ನು ಮಾಡಿದವನು

**ಪಂಚಮಹಾಭೂತ** – ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ

**ಪಂಚಮಹಾವ್ರತ** – (ಜೈನ) ಶ್ರಾವಕರು ಆಚರಿಸಬೇಕಾದ ಪಂಚಾಣುವ್ರತಗಳನ್ನು ಮುನಿಗಳು ಮತ್ತಷ್ಟು ಗಾಢವಾಗಿ ಆಚರಿಸುವುದು

**ಪಂಚಮಹಾಶಬ್ದ** – ಐದು ವಾದ್ಯಗಳು; ಇವುಗಳ ವಿವರಗಳು ಕಾಲಕಾಲಕ್ಕೆ ಬದಲಾಗಿವೆ; ಸಾಮಾನ್ಯವಾದ ಪಟ್ಟಿಯೆಂದರೆ ಕೊಂಬು, ತಮಟೆ, ಶಂಖ, ಭೇರಿ, ವೀಣೆ, ಜಯಗಂಟೆ; ಐದು ವಾದ್ಯಗಳ ಬಾಜನೆಯ ಗೌರವ

**ಪಂಚಮಾಂಚಿತ** – ಪಂಚಮಸ್ವರದಿಂದ ಆಹ್ಲಾದಕರವಾದ

**ಪಂಚಮಾಬ್ಧಿ** – ಪಂಚಮಜಲಧಿ

**ಪಂಚಮಿ** – ಶುಕ್ಲ–ಕೃಷ್ಣಪಕ್ಷಗಳಲ್ಲಿನ ಐದನೆಯ ದಿನ–

**ಪಂಚಮಿಗಿತಿ** – ಪಂಚಮಸ್ತ್ರೀ

**ಪಂಚಮುಖ** – ಸಿಂಹ

**ಪಂಚಮುಷ್ಟಿ** – ಐದು ಹಿಡಿ; (ಜೈನ) ದೇಹದ ಐದು ಅಂಗಗಳಿಂದ ಕೂಡಿದ ನಮಸ್ಕಾರ; ಎರಡೂ ಮುಷ್ಟಿಗಳಿಂದ ತಲೆಗೂದಲು, ಮೀಸೆ, ಗಡ್ಡಗಳನ್ನು ಕಿತ್ತುಕೊಳ್ಳುವುದು

**ಪಂಚರತ್ನ** – ಐದು ರತ್ನಗಳು; ವಿವಿಧ ಆಕರಗಳಲ್ಲಿನ ವಿವರಗಳಲ್ಲಿ ವ್ಯತ್ಯಾಸಗಳಿವೆ; ಅವುಗಳಲ್ಲಿ ಒಂದು ಪಟ್ಟಿ: ಸುವರ್ಣ, ರಜತ, ಮುಕ್ತಾ, ಮಾಣಿಕ್ಯ, ಪ್ರವಾಳಕ

**ಪಂಚರಾಯುಧ** – ಪಂಚರ ಎಂಬ ಆಯುಧ

**ಪಂಚವಣ್ಣ** – ಐದು ಬಣ್ಣಗಳು: ಬಿಳಿಪು, ಹಳದಿ, ಕೆಂಪು, ಹಸುರು, ಕಪ್ಪು

**ಪಂಚವಣ್ಣಿಗೆ** – ಐದು ಬಣ್ಣಗಳು; ಅಲಂಕಾರದ ಒಂದು ಬಗೆ

**ಪಂಚವರ್ಣ** – ಪಂಚವಣ್ಣ; ಯದು ಅಕ್ಷರಗಳು

**ಪಂಚವರ್ಣೆ** – ಪಂಚವರ್ಣಗಳಿಂದ ಕೂಡಿದವಳು

**ಪಂಚವಿಂಶತಿ** – ಇಪ್ಪತ್ತೈದು

**ಪಂಚವಿಂಶತಿಮಳ** – (ಜೈನ_ ಇಪ್ಪತ್ತೈದು ಬಗೆಯ ದೋಷಗಳು: ಮಿಥ್ಯಾದರ್ಶನ, ಮಿಥ್ಯಾಜ್ಞಾನ, ಮಿಥ್ಯಾಚಾರಿತ್ರ, ಮಿಥ್ಯಾದೃಷ್ಟಿ, ಮಿಥ್ಯಾಜ್ಞಾನವುಳ್ಳವನು, ಮಿಥ್ಯಾಚಾರಿತ್ರವಂತ (ಈ ಆರು ಅನಾಯತನಗಳು), ದೇವಮೂಢ, ಗುರುಮೂಢ, ಸಮಯಮೂಢ (ಈ ಮೂರು ಮೂಢಗಳು), ಜ್ಞಾನ, ಕುಲ, ಬಲ, ಪೂಜೆ, ಜಾತಿ, ಐಶ್ವರ್ಯ, ತಪ, ಶರೀರ (ಈ ಎಂಟು ಮದಗಳು), ಶಂಕೆ, ಕಾಂಕ್ಷೆ, ವಿಚಿಕಿತ್ಸೆ, ಮೂಢದೃಷ್ಟಿ, ಅನುಪಗೂಹನ, ಅಸ್ಥಿತೀಕರಣ, ಅವಾತ್ಸಲ್ಯ, ಅಪ್ರಭಾವನೆ (ಈ ಎಂಟು ದೋಷಗಳು)

**ಪಂಚವಿಧಚಾರಿತ್ರ** – (ಜೈನ) ಸಮ್ಯಕ್‌ಜ್ಞಾನ ಸಾಧನೆಗೆ ಪೂರಕವಾದ ಐದು ಬಗೆಯ ನಡವಳಿಕೆಗಳು: ಸಾಮಯಿಕ, ಛೇದೋಪಸ್ಥಾನ, ಪರಿಹಾರವಿಶುದ್ಧಿ, ಸೂಕ್ಷ್ಮಸಾಂಪರಾಯ, ಯಥಾಖ್ಯಾತಚಾರಿತ್ರ

**ಪಂಚವಿಧಸ್ಥಾನ** – ಬಿಲ್ಲು ಗದೆ ಮುಂತಾದವನ್ನು ಹಿಡಿದು ಯುದ್ಧ ಮಾಡುವಾಗ ನಿಲ್ಲುವ ಆಲೀಢ, ಪ್ರತ್ಯಾಲೀಢ, ಸಮಪಾದ, ವಿಶಾಖ, ಮಂಡಲ ಎಂಬ ಐದು ಭಂಗಿಗಳು

**ಪಂಚವಿಧಸ್ವಾಧ್ಯಾಯ** – (ಜೈನ) ವಾಚನ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂಬ ಐದು ಬಗೆಯ ಸ್ವಾಧ್ಯಾಯ

**ಪಂಚಶತ** – ಐನೂರು

**ಪಂಚಶಯ್ಯೆ** – ಐದು ಬಗೆಯ ಮೆತ್ತನೆಯ ವಸ್ತುಗಳಿಂದ ಮಾಡಿದ ಹಾಸಿಗೆ

**ಪಂಚಶರ** – ಮನ್ಮಥ; ಮನ್ಮಥನ ಐದು ಬಾಣಗಳು, ನೋಡಿ 'ಪಂಚಬಾಣ'

**ಪಂಚಶಿಖ** – ಐದು ತುದಿಗಳು

**ಪಂಚಸಮಿತಿ** – (ಜೈನ) ಈರ್ಯಾ, ಭಾಷಾ, ಏಷಣಾ, ಆದಾನನಿಕ್ಷೇಪಣ, ಉತ್ಸರ್ಗ ಎಂಬ ಐದು ಬಗೆಯ ಧಾರ್ಮಿಕ ಪ್ರವೃತ್ತಿಗಳು

**ಪಂಚಸರ** – ಪಂಚಶರ

**ಪಂಚಸ್ಥಾನ** – ಯುದ್ಧಮಾಡುವಾಗ ನಿಂತುಕೊಳ್ಳುವ ಆಲೀಢ, ಪ್ರತ್ಯಾಲೀಢ, ಸಮಪಾದ, ವೈಷ್ಣವ, ಮಂಡಲಾಗ್ರ ಎಂಬ ಐದು ಸ್ಥಾನಗಳು

**ಪಂಚಾಂಗ** – ತಿಥಿ, ವಾರ, ನಕ್ಷತ್ರ, ಯೊಗ, ಕರಣಗಳೆಂಬ ದಿನದ ಐದು ಅಂಶಗಳು; ಔಷಧಿತಯಾರಿಕೆಯಲ್ಲಿ ಗಿಡಮರಗಳ ತೊಗಟೆ, ಎಲೆ, ಹೂವು, ಬೇರು, ಹಣ್ಣುಗಳೆಂಬ ಐದು ಅಂಶಗಳು

**ಪಂಚಾಂಗಮಂತ್ರ** – ಕರ್ಮಾರಂಭೋಪಾಯ, ಪುರುಷದ್ರವ್ಯಸಂಪತ್ತು, ದೇಶಕಾಲವಿಭಾಗ, ವಿನಿಪಾತಪ್ರತೀಕಾರ, ಕಾರ್ಯಸಿದ್ಧಿ ಎಂಬ ರಾಜನೀತಿಯ ಐದು ಅಂಶಗಳು

**ಪಂಚಾಂಗಶುದ್ಧಿ** – ದಿನದ ಐದು ಅಂಶಗಳಲ್ಲಿ ಯಾವುದೇ ದೋಷವಿಲ್ಲದಿರುವುದು; ಔಷಧಿತಯಾರಿಕೆಯಲ್ಲಿ ಗಿಡಮರಗಳ ಐದು ಅಂಶಗಳು ದೋಷರಹಿತವಾಗಿರುವುದು

**ಪಂಚಾಂಗಸನ್ಮಂತ್ರ** – ಐದು ಅಕ್ಷರಗಳ ಶ್ರೇಷ್ಠ ಮಂತ್ರ

**ಪಂಚಾಗ್ನಿ** – ಐದು ಬಗೆಯ ಅಗ್ನಿಗಳು: ಪವನ, ಪಾವನ, ತ್ರೇತಾ, ಗಾರ್ಹಪತ್ಯ, ಆಹವನೀಯ; ಋಷಿಗಳ ಬೇಸಿಗೆಯ ತಪಸಸ್ಸಿನ ಐದು ಅಗ್ನಿಗಳು: ನಾಲ್ಕು ಕಡೆಯ ಬೆಂಕಿ ಮತ್ತು ನೆತ್ತಿಯ ಮೇಲಿನ ಸೂರ್ಯ

**ಪಂಚಾಗ್ನಿಸಾಧಕ** – ನಾಲ್ಕು ಕಡೆಯ ಬೆಂಕಿ ಮತ್ತು ನೆತ್ತಿಯ ಮೇಲಿನ ಸೂರ್ಯ ಇವುಗಳ ನಡುವೆ ತಪಸ್ಸು ಮಾಡುವವನು

**ಪಂಚಾಚಾರ** – (ಜೈನ) ದರ್ಶನ, ಜ್ಞಾನ, ಚಾರಿತ್ರ, ತಪ, ವೀರ್ಯ ಎಂಬ ಐದು ಆಚಾರಗಳು

**ಪಂಚಾಣುವ್ರತಗಳು** – (ಜೈನ) ಶ್ರಾವಕರು ಆಚರಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ವ್ರತಗಳು

**ಪಂಚಾಣೂತ್ತರೆ** – (ಜೈನ) ಲೋಕಾಕಾಶದ ತುದಿಯ ನೆಲೆಯಲ್ಲಿರುವ ವಿಜಯ, ವೈಜಯಂತ, ಜಯಂತ, ಅಪರಾಜಿತ, ಸರ್ವಾರ್ಥಸಿದ್ಧಿ ಎಂಬ ಐದು "ವಿಮಾನ"ಗಳು

**ಪಂಚಾತಿಚಾರ** – (ಜೈನ) ಸಮ್ಯಗ್ದೃಷ್ಟಿಗೆ ಅಡ್ಡಿಯಾಗುವ ಶಂಕೆ, ಕಾಂಕ್ಷೆ, ನಿರ್ವಿಚಿಕಿತ್ಸೆ, ಅನ್ಯದೃಷ್ಟಿಪ್ರಶಂಸೆ, ಅನ್ಯದೃಷ್ಟಿಸಂಸ್ತವನ ಎಂಬ ಅತಿಚಾರಗಳು

**ಪಂಚಾನನ** – ಶಿವ, ಶಿವನ ಐದು ಮುಖಗಳು: ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ; ಸಿಂಹ

**ಪಂಚಾವಸ್ಥೆಗೆದಱು** – ಪಂಚತ್ವವನ್ನುಂಟುಮಾಡು, ಮರಣವುಂಟುಮಾಡು

**ಪಂಚಾಶ್ಚರ್ಯ** – (ಜೈನ) ಆಹಾರದಾನಸಮಯದಲ್ಲಿ ಆಗುವ ಐದು ಅತಿಮಾನುಷ ಸೋಜಿಗಗಳು: ದೇವದುಂದುಭಿಸ್ವನ, ಪುಷ್ಪವೃಷ್ಟಿ, ಸುವರ್ಣವೃಷ್ಟಿ, ಮೆಲುಗಾಳಿ, ದೇವಪ್ರಶಂಸೆ

**ಪಂಚಾಷ್ಟ** – ಐದೆಂಟಲ, ನಲವತ್ತು

**ಪಂಚಾಸ್ತಿಕಾಯ** – (ಜೈನ) ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಎಂಬ ಐದು ಅಸ್ತಿಕಾಯಗಳು

**ಪಂಚಾಸ್ತ್ರ** – ಐದು ಬಾಣಗಳನ್ನುಳ್ಳವನು, ಮನ್ಮಥ

**ಪಂಚಾಸ್ಯ** – ಸಿಂಹ

**ಪಂಚಾಸ್ರವ** – (ಜೈನ) ಸಪ್ತತತ್ವಗಳಲ್ಲಿ ಒಂದು; ಪುಣ್ಯಪಾಪರೂಪವಾದ ಕರ್ಮವು ಜೀವನಲ್ಲಿ ಹರಿಯುವುದು, ಇಂದ್ರಿಯಸಂಬಂಧವಾದ ಐದು ಬಗೆಯ ಆಸ್ರವಗಳು

**ಪಂಚಿ(ಜಿ)ಕೆ** – ವ್ಯಾಖ್ಯಾನ

**ಪಂಚುಪಱಿಮಾಡು** – ನುಚ್ಚುನೂರು ಮಾಡು; ನಾಶಗೊಳಿಸು

**ಪಂಚೇಂದ್ರಿಯ** – ಸ್ಪರ್ಶನ, ರಸನ, ಘ್ರಾಣ, ಚಕ್ಷು, ಶ್ರೋತ್ರ ಎಂಬ ಐದು ಇಂದ್ರಿಯಗಳು

**ಪಂಚೇಷು** – ಐದು ಹೂವಿನ ಬಾಣಗಳು, ನೋಡಿ, 'ಪಂಚಬಾಣ'

**ಪಂಜರ** – ಪ್ರಾಣಿಪಕ್ಷಿಗಳನ್ನು ಕೂಡಿಹಾಕುವ ಸಾಧನ

**ಪಂಜರಂಬಡೆ** – ಪಂಜರ ನಿರ್ಮಿಸು

**ಪಂಜರಿಸು** – ಪಂಜರದಂತೆ ಸುತ್ತಲೂ ಆವರಿಸು

**ಪಂಜಿ** – ಹಿಂಜಿದ ಹತ್ತಿಯ ಉಂಡೆ

**ಪಂಟಿಸು** – ಹೊದಿಸು

**ಪಂಡಕ** – ಪುರೋಹಿತ

**ಪಂಡಿತ(ಮಂಡಲಿ)** – ವಿದ್ವಾಂಸ (ಸಮೂಹ)

**ಪಂಡಿತಮರಣ** – (ಜೈನ) ಜ್ಞಾನಿಯಾಗಿ ಸಲ್ಲೇಖನದಿಂದ ಪಡೆಯುವ ಮರಣ

**ಪಂಡಿತವಕ್ಕಿ** – ಗಿಳಿ

**ಪಂಡಿತಿಕ್ಕೆ** – ಪಾಂಡಿತ್ಯ

**ಪಂಡಿತೋಕ್ತಿ** – ವಿದ್ವಾಂಸನ ನುಡಿ

**ಪಂತಿ** – ಸಾಲು; ಊಟದ ಪಂಕ್ತಿ

**ಪಂತಿಕಾಱ** – ಊಟದ ಪಂಕ್ತಿಯ ಮೇಲ್ವಿಚಾರಕ

**ಪಂತಿಗೊಳ್** – ಸಾಲುಗಟ್ಟು

**ಪಂತಿಗೊಳಿಸು** – ಸಾಲಾಗಿ ಮಾಡು

**ಪಂಥ** – ದಾರಿ; ಯೋಗ್ಯಕ್ರಮ

**ಪಂಥಾತಿಚಾರನಿಯಮ** – (ಜೈನ) ಗಮನ ಪ್ರಾಯಶ್ಚಿತ್ತ; ನಡೆಯುವಾಗ ಆಗಬಹುದಾದ ಹಿಂಸೆಗೆ ಶ್ರವಣರು ಮಾಡಿಕೊಳ್ಳುವ ಪ್ರಾಯಶ್ಚಿತ್ತ

**ಪಂಥಾತಿಚಾರನೇಮ** – ಪಂಥಾತಿಚಾರನಿಯಮ

**ಪಂದರ್(ರ)** – ಚಪ್ಪರ

**ಪಂದರಿಕ್ಕು** – ಚಪ್ಪರ ಹಾಕು

**ಪಂದಲೆ** – ಪಚ್ಚನೆಯ ತಲೆ, ಆಗ ತಾನೇ ಕತ್ತರಿಸಿದ ತಲೆ
**ಪಂದಲೆದರ್** – ಹಸಿತಲೆಯನ್ನು ತಾ
**ಪಂದಳಿರ್** – ಹಸಿರಾದ ಚಿಗುರು
**ಪಂದಿ** – ಹಂದಿ
**ಪಂದಿವೇಂಟೆ** – ಹಂದಿಯ ಬೇಟೆ
**ಪಂದೆ** – ಹೇಡಿ
**ಪಂದೆಗಜ್ಜ** – ಹೇಡಿಯ ಕೆಲಸ
**ಪಂದೆತನ** – ಹೇಡಿತನ
**ಪಂದೊವಲ್** – ಸುಲಿದ ಹಸಿಯ ಚರ್ಮ
**ಪಂದೋಲ್** – ಪಂದೊವಲ್
**ಪಂಪಕ** – ಒತ್ತಾದುದು, ದಟ್ಟವಾದುದು
**ಪಂಬಲ್** – ಹಂಬಲ
**ಪಂಬಲಿಸು** – ಹಂಬಲಿಸು, ಹಾತೊರೆ
**ಪಕ್ಕ** – (ಪಕ್ಷ) ಬದಿ, ಮಗ್ಗುಲು; ರೆಕ್ಕೆ
**ಪಕ್ಕಂಬಿಡಿ** – ಪಕ್ಕವನ್ನು ಹಿಡಿ
**ಪಕ್ಕಣ** – ಬೇಡರ ವಾಸಸ್ಥಳ; ಕೆಳವರ್ಗದವರ ವಾಸಸ್ಥಳ
**ಪಕ್ಕರಿಕೆ** – (ಪಕ್ಷರಕ್ಷಾ) ಕುದುರೆಯ ಮೇಳಣ ಕವಚ
**ಪಕ್ಕರಿಸು** – ಪಕ್ಕರಿಕೆ ಹಾಕು
**ಪಕ್ಕರೆ** – ಪಕ್ಕರಿಕೆ; ಪಾತ್ರೆ
**ಪಕ್ಕರೆಯಿಕ್ಕು** – ಪಕ್ಕರಿಸು
**ಪಕ್ಕವಾದಕ** – ಪಕ್ಕವಾದ್ಯ ನುಡಿಸುವವನು
**ಪಕ್ಕ(ಕ್ಕೆ)ಸಾರಿ** – ಪಟ್ಟದಾನೆಯ ಜೊತೆಗೆ ಬರುವ ಆನೆ
**ಪಕ್ಕಾಗಿಸು** – ಒಳಗಾಗಿಸು; ಆಸರೆಯಾಗಿಸು
**ಪಕ್ಕಾಗು** – ಯೋಗ್ಯವಾಗು; ಆಸರೆಯಾಗು
**ಪಕ್ಕಿ** – (ಪಕ್ಷಿ) ಹಕ್ಕಿ
**ಪಕ್ಕಿವಣೆ** – ಹಕ್ಕಿಯ ಗೂಡು
**ಪಕ್ಕು** – ಗುರಿ; ಆಸ್ಪದ
**ಪಕ್ಕುಗೊ(ಗು)ಡು** – ಆಸರೆ ಕೊಡು
**ಪಕ್ಕುವಾರು** – ಅವಕಾಶಕ್ಕಾಗಿ ಕಾಯಿ
**ಪಕ್ಕುವಿಡಿ** – ಪಕ್ಕು+ಪಿಡಿ, ಜೊತೆಯ ಹೆಣ್ಣಾನೆ
**ಪಕ್ಕವೆಱು** – ಅವಕಾಶ ಪಡೆ
**ಪಕ್ಕೆದಲೆ** – ಮಲಗುವ ಜಾಗ
**ಪಕ್ವಬಿಂಬ** – ಮಾಗಿದ ತೊಂಡೆಹಣ್ಣು
**ಪಕ್ವಶಾಳಿ** – ಮಾಗಿದ ಬತ್ತದ ಪೈರು
**ಪಕ್ಷ** – ಪಕ್ಕ; ರೆಕ್ಕೆ; ಹದಿನೈದು ದಿನಗಳ ಅವಧಿ; ಬಣ; (ಜೈನ) ಎಲ್ಲ ಬಗೆಯ ಹಿಂಸೆಯನ್ನು ತೊರೆಯುವುದು
**ಪಕ್ಷಂಗೆಡು** – ಆಸೆಯಿಲ್ಲದಂತಾಗು
**ಪಕ್ಷಕುಕ್ಷೀಳ** – ಗುಡ್ಡ
**ಪಕ್ಷತಿ** – ಪಕ್ಷಮೂಲ
**ಪಕ್ಷದ್ವಾರ** – ಪಕ್ಕದ ಬಾಗಿಲು
**ಪಕ್ಷಪರಿತ್ಯಾಗ** – ವಾದಿಸಲಾರದೆ ತನ್ನ ನಿಲವನ್ನು ಕೈಬಿಡುವುದು
**ಪಕ್ಷಪಾತ** – ಹಕ್ಕಿಗಳ ಬೀಳುವಿಕೆ; ಒಂದು ಕಡೆಗೆ ಹೆಚ್ಚು ಒಲವು ತೋರಿಸುವುದು
**ಪಕ್ಷಪ್ರತಿಷ್ಠಾಪನೆಗೆಯ್** – ತನ್ನ ನಿಲವನ್ನು ಮಂಡಿಸು
**ಪಕ್ಷಸಂಪುಟ** – ರೆಕೆಕಯ ಒಳಭಾಗ
**ಪಕ್ಷಸಿದ್ಧಿ** – ತನ್ನ ನಿಲವನ್ನು ಸಾಧಿಸುವುದು
**ಪಕ್ಷಿ** – ಪಕ್ಷಗಳನ್ನು ಹೊಂದಿರುವುದು, ಹಕ್ಕಿ
**ಪಕ್ಷ್ಮ** – ಕಣ್ಣಿನ ರೆಪ್ಪೆ
**ಪಕ್ಷ್ಮಪಾತನ** – ರೆಪ್ಪೆ ಮಿಟುಕಿಸುವುದು
**ಪಕ್ಷ್ಮಪಾಳಿ** – ರೆಪ್ಪೆ ಕೂದಲ ಸಾಲು
**ಪಕ್ಷ್ಮಮಾಲೆ** – ಪಕ್ಷ್ಮಪಾಳಿ
**ಪಕ್ಷ್ಮಸ್ಪಂದನ** – ರೆಪ್ಪೆ ಮಿಟುಕಿಸುವುದು
**ಪಕ್ಷ್ಮಾಳಿ** – ಪಕ್ಷ್ಮಪಾಳಿ
**ಪಗಂಡಿಱಿ** – ಚೆನ್ನಾಗಿ ಕಾಣಿಸು
**ಪಗಂಡುಗೊಳ್** – ಹಬ್ಬು
**ಪಗಂಡೇೞ್** – ಪಗಂಡುಗೊಳ್
**ಪಗರಣ** – (ಪ್ರಕರಣ) ಒಂದು ರೂಪಕಪ್ರಭೇದ
**ಪಗರಣದರಸ** – ನಾಟಕದ ರಾಜ; ವೇಷಧಾರಿ
**ಪಗರಣದಾಟ** – ಸೋಗು
**ಪಗರಣದಾನೆ** – ನಿಜವಲ್ಲದ ಆನೆ
**ಪಗರಣಿಗ** – ವೇಷಧಾರಿ; ಪಗರಣ ಎಂಬ ಆಟವಾಡುವವನು
**ಪಗಲ್** – ಹಗಲು
**ಪಗಲಿರುಳ್** – ಹಗಲು ಮತ್ತು ರಾತ್ರಿ; ಯಾವಾಗಲೂ
**ಪಗಲುಲ್ಕ** – ಉಲ್ಕೆ
**ಪಗಲೆಱೆಯ** – ಹಗಲ ಒಡೆಯ, ಸೂರ್ಯ
**ಪಗ(ಗೆ)ವು** – ಹಗೇವು, ಕಣಜ
**ಪಗಿನ್(ನ)** – ಮರದ ಅಂಟು
**ಪಗಿಲ್** – ಅಂಟಿಕೊ; ಸೇರು
**ಪಗೆ** – ದ್ವೇಷ; ಶತ್ರು
**ಪಗೆಕಾ(ಗಾ)ಱ** – ಶತ್ರು
**ಪಗೆಗೊಳ್** – ದ್ವೇಷ ತಾಳು
**ಪಗೆವ** – ಶತ್ರು
**ಪಗೆವಡೆ** – ಶತ್ರುಸೈನ್ಯ
**ಪಗೆವಾಡಿ** – ಶತ್ರು ಪಾಳೆಯ
**ಪಗೆವೊಯ್** – ದ್ವೇಷವುಂಟುಮಾಡು
**ಪಗ್ಗ** – ಹಗ್ಗ
**ಪಚನಧಾಮ** – ಅಡಿಗೆಯ ಮನೆ
**ಪಚಾರಿಸು** – ಹೀಯಾಳಿಸು
**ಪಚ್ಚಖ್ಖಾಣಂಗುಡು** – (ಜೈನ) ಪಚ್ಚಖ್ಖಾಣವ್ರತ (ಸೀಮಿತಕಾಲಕ್ಕೆ ಆಹಾರ ಬಿಡುವುದು) ದೀಕ್ಷೆ ಕೊಡು
**ಪಚ್ಚಖ್ಖಾಣಂಗೊಳ್** – ಪಚ್ಚಖ್ಖಾನವ್ರತ ತೊಡು
**ಪಚ್ಚಗಾಱ** – ಅಲಂಕಾರ ಮಾಡುವ ವೃತ್ತಿಯವನು
**ಪಚ್ಚಡ** – ಹಚ್ಚಡ, ಹೊದಿಕೆ
**ಪಚ್ಚಡಿಕೆ** – ಪಚ್ಚಡ
**ಪಚ್ಚಡಿಸು** – ಹೊದಿಸು

**ಪಚ್ಚಣ** – ಮುಚ್ಚುಮರೆ
**ಪಚ್ಚನೆ** – ಹಸುರಾದ
**ಪಚ್ಚಪಸಿ** – ಬಹಳ ಹಸಿ
**ಪಚ್ಚಪಸಿವರೆಯ** – ಹೊಚ್ಚ ಹೊಸ ಹರಯ
**ಪಚ್ಚಬಗೆ** – ಒಡೆದ ಮನಸ್ಸು
**ಪಚ್ಚಯಿಲ** – ಪಚ್ಚಗಾಱ
**ಪಚ್ಚವಡ** – ಬಚ್ಚಲು
**ಪಚ್ಚವಡಿಕೆ(ಗೆ)** – ಮಗ್ಗುಲುಹಾಸಿಗೆ
**ಪಚ್ಚವಡಿತಿ** – ಹಚ್ಚಡಿಸುವಾಕೆ; ಅಲಂಕರಿಸುವವಳು
**ಪಚ್ಚವಡಿಸು** – ಹೊದಿಸು
**ಪಚ್ಚವಾಗಲ್** – ಪಚ್ಚೆಯ ಪ್ರಾಕಾರ, ಸುತ್ತುಗೋಡೆ
**ಪಚ್ಚಟೆ** – ಪಚ್ಚು+ಅಟೆ, ಅನ್ಯೋನ್ಯತೆಯನ್ನು ತೊರೆ
**ಪಚ್ಚಾಯ್ಲ** – ಅಲಂಕರಿಸುವವನು
**ಪಚ್ಚಿಕೊಳ್** – ಹಂಚಿಕೊ
**ಪಚ್ಚು** – ಹೊಂದಿಕೆ, ಅನ್ಯೋನ್ಯತೆ
**ಪಚ್ಚುಕು(ಕೊ)ಡು** – ಹಂಚಿ ಕೊಡು
**ಪಚ್ಚುಗಂಟು** – ಹಂಚಿಕೆಯಾದ ಗಂಟು
**ಪಚ್ಚುಗೊಡು** – ಪಚ್ಚುಕುಡು
**ಪಚ್ಚು(ಚ್ಚು)ಗೊಳ್** – ಹಂಚಿಕೊ, ವಿಭಾಗಿಸಿಕೊ
**ಪಚ್ಚುಡಿ** – ಹಂಚಿಹೋಗು
**ಪಚ್ಚೆಗರ್ಬುನ** – ಅಶುದ್ಧ ಕಬ್ಬಿಣ
**ಪಚ್ಚೆಗೊಡೆ** – ಪಚ್ಚೆಯ ಕೊಡೆ, ಹಸಿರು ಕೊಡೆ
**ಪಚ್ಚೆದೋರಣ** – ಹಸಿರು ತೋರಣ
**ಪಚ್ಚೆಲೆ** – ಹಸಿರೆಲೆ
**ಪಚ್ಚೆಲೆದೊಂಗಲ್** – ಹಸಿರೆಲೆಯ ಗೊಂಚಲು
**ಪಚ್ಚೆವಟ್ಟು** – ಪಚ್ಚೆಯ ಬಟ್ಟು, ಗುಂಡು
**ಪಚ್ಚೆವಡಿಗ** – ಪಚ್ಚೆ+ಪಡಿಗ, ಪಚ್ಚೆಯ ಉಗುಳುಪಾತ್ರೆ
**ಪಚ್ಚೆವರಲ್** – ಪಚ್ಚೆಯ ಹರಳು, ಹಸಿರು ಮಣಿ
**ಪಚ್ಚೆವರಿಗೆ** – ಪಚ್ಚೆ+ಪರಿಗೆ, ಹಸಿರು ಗುರಾಣಿ
**ಪಚ್ಚೆವಾಕಲು** – ಹಸಿರುಮನೆ, ಬಳ್ಳಿಮಾಡ, ಮಲ್ಲಿಗೆ ಬಳ್ಳಿ
**ಪಚ್ಚೆವಿಲ್ಲ** – ಹಸಿರು ಬಿಲ್ಲನ್ನು (ಕಬ್ಬಿನ ಬಿಲ್ಲನ್ನು) ಪಡೆದವನು, ಮನ್ಮಥ
**ಪಚ್ಚೆಸಾರ** – ಪಚ್ಚೆಯ ಆಭರಣ
**ಪಚ್ಚೋ(ಂ)ತಿ** – ಊಸರವಳ್ಳಿ
**ಪಚ್ಚೋಲೆ** – ಹಸಿಯ ಓಲೆಗರಿ, ಬಿಚ್ಚೋಲೆ, ಪಚ್ಚೆಯ ಓಲೆ (ಕಿವಿಯ ಆಭರಣ)
**ಪಜ್ಜ** – ಮುತ್ತಾತ
**ಪಜ್ಜತಿ** – ಪದ್ಧತಿ
**ಪಜ್ಜಳ** – (ಪ್ರಜ್ವಲ) ಹೊಳಪು
**ಪಜ್ಜಳಕೆ** – ಕಾಂತಿ
**ಪಜ್ಜಳಸು** – ಹೊಳೆ, ಪ್ರಕಾಶಿಸು
**ಪಜ್ಜೆ** – (ಪದ್ಯಾ) ಹೆಜ್ಜೆ; ಅಡಿ; ದಾರಿ; ಗುರುತು
**ಪಜ್ಜೆಕಾಱ** – ಬೇಹುಗಾರ, ಗುರುತು ಹಿಡಿಯುವವನು
**ಪಜ್ಜೆವಟೆ** – ಪಜ್ಜೆ+ಬಟೆ, ಕಾಲು ಹಾದಿ
**ಪಜ್ಜೆವಿಡಿ** – ಹೆಜ್ಜೆಯ ಗುರುತು ಹಿಡಿದು ಹೋಗು
**ಪಟ** – ಬಟ್ಟೆ; ತೆರೆ
**ಪಟಂಗೊಳ್** – ಹಾರಾಡು, ಪ್ರಸಿದ್ಧಗೊಳ್ಳು
**ಪಟಕುಟಿ** – ಬಟ್ಟೆಯ ಗುಡಿಸಲು, ಡೇರೆ
**ಪಟಚ್ಚರ** – ಹಳೆಯ ಬಟ್ಟೆ
**ಪಟಮಂಡಪ** – ಪಟಕುಟಿ, ಡೇರೆ
**ಪಟಲ(ಳ)** – ಗುಂಪು; ಹೊದಿಕೆ
**ಪಟಲ(ಳ)ಕ** – ಪರದೆ
**ಪಟಲಿ(ಳಿ)(ಕೆ)** – ಸಮೂಹ
**ಪಟವಾಸ** – ಸುಗಂಧದ ಪುಡಿ
**ಪಟವಾಸಕ್ಷೋದ** – ಪಟವಾಸ
**ಪಟವಾಸಚೂರ್ಣ** – ಪಟವಾಸ
**ಪಟವಿದ್ದೆ** – (ಪಟವಿದ್ಧ) ಚಿತ್ರ ಬರೆಯುವುದು
**ಪಟಹ** – ಭೇರಿ
**ಪಟಹಡಕ್ಕೆ** – ಪಟಹ
**ಪಟಾಳ** – ಬಟ್ಟೆಗಳ ರಾಶಿ
**ಪಟಿಷ್ಠ** – ಹರಿತವಾದ; ಚುರುಕಾದ; ಸಮರ್ಥವಾದ
**ಪಟೀರ** – ಶ್ರೀಗಂಧ
**ಪಟು** – ಶಕ್ತಿಶಾಲಿ, ಉಗ್ರ; ಸಮರ್ಥ
**ಪಟುದೇಹ** – ಚಟುವಟಿಕೆಯ ದೇಹ
**ಪಟುಪಟಹ** – ಜೋರಾಗಿ ಸದ್ದುಮಾಡುವ ಭೇರಿ
**ಪಟುಪ್ರತಾಪ(ಪಿ)** – ಉಗ್ರಪ್ರತಾಪ (ಉಳ್ಳವನು)
**ಪಟುಪ್ರಧ್ವಾನ** – ಜೋರಾದ ಧ್ವನಿ
**ಪಟುಮತಿ** – ಹರಿತ ಬುದ್ಧಿ
**ಪಟುರವ** – ಪಟುಪ್ರಧ್ವಾನ
**ಪಟ್ಟ** – ಅಧಿಕಾರಸೂಚಕ ಬಾಸಿಂಗ; ಕಿರೀಟ
**ಪಟ್ಟಂಗಟ್ಟು** – ವಿಧ್ಯುಕ್ತವಾಗಿ ಅಧಿಕಾರ ವಹಿಸಿಕೊಡು
**ಪಟ್ಟಂಬಾಱಿಸು** – ನಿರ್ನಾಮಗೊಳಿಸು
**ಪಟ್ಟಣ** – ನಗರ
**ಪಟ್ಟಣಿಗ** – ನಗರವಾಸಿ
**ಪಟ್ಟಣಿಗೆ** – ಪಟ್ಟೆಯ ಸೀರೆ, ದುಕೂಲ
**ಪಟ್ಟದ ಮೊದಲಿಗ** – ಅಧಿಕಾರಕ್ಕೆ ಅತ್ಯಂತ ಹಿರಿಯ ಹಕ್ಕುದಾರ
**ಪಟ್ಟನೂಲ್** – ರೇಷ್ಮೆಯ ಎಳೆ
**ಪಟ್ಟಪಱಿ** – ಚೂರಾಗಿ ಹರಿದುಬಿಡು
**ಪಟ್ಟಬಂಧ(ನ)** – ಪಟ್ಟ ಕಟ್ಟುವುದು, ಪಟ್ಟಾಭಿಷೇಕ
**ಪಟ್ಟಬಂಧೋತ್ಸವ** – ಪಟ್ಟಾಭಿಷೇಕ ಸಮಾರಂಭ
**ಪಟ್ಟಮಹಿಷಿ** – ಪಟ್ಟ ಕಟ್ಟಿಸಿಕೊಂಡ ರಾಣಿ, ಹಿರಿಯ ರಾಣಿ
**ಪಟ್ಟಮಾರ್ಗ** – ರಾಜಮಾರ್ಗ
**ಪಟ್ಟಮಾರ್ಗಂಬಿಡಿ** – ರಾಜಮಾರ್ಗ (ನೇರಮಾರ್ಗ) ಹಿಡಿ
**ಪಟ್ಟವಣೆ** – ಸಿಂಹಾಸನ; ಹಸೆಮಣೆ
**ಪಟ್ಟವರ್ಧನ** – ಪಟ್ಟದ ಆನೆ
**ಪಟ್ಟವಟೆ** – ರೇಷ್ಮೆ ವಸ್ತ್ರ
**ಪಟ್ಟಶಿಲೆ** – ಹಾಸುಗಲ್ಲು
**ಪಟ್ಟಸ** – ಈಟಿ

**ಪಟ್ಟಸಾಲಿಗ** – ರೇಷ್ಮೆ ನೇಕಾರ
**ಪಟ್ಟಸಾಲೆ** – ಮೊಗಸಾಲೆ
**ಪಟ್ಟಸೂತ್ರ** – ರೇಷ್ಮೆ ಎಳೆ
**ಪಟ್ಟಳ(ಣಿ)ಗೆ** – ಪಟ್ಟವಟಿ
**ಪಟ್ಟಳೆ** – ತೊಲೆ
**ಪಟ್ಟಾಂಶುಕ** – ಪಟ್ಟವಟಿ
**ಪಟ್ಟಿಕ** – ಪೀಠ
**ಪಟ್ಟಿಗಾಳೆಗ** – ಹಳ್ಳಿ(ಕೇರಿ)ಗಳ ನಡುವಣ ಕಾಳಗ
**ಪಟ್ಟಿ** – ಹಟ್ಟಿ, ಹಳ್ಳಿ; ರೊಪ್ಪ
**ಪಟ್ಟಿರ್** – ಮಲಗಿರು
**ಪಟ್ಟಿರಿಸು** – ಮಲಗಿಸು
**ಪಟ್ಟಿಹೆ** – ಕೊರಳ ತೊಡುಗೆ; ಡಾಬು
**ಪಟ್ಟಿಸ** – ಕುಸ್ತಿಯ ಒಂದು ಪಟ್ಟು
**ಪಟ್ಟಿಸಭಂಡಾರ** – ರೇಷ್ಮೆ ಬಟ್ಟೆಗಳ ಸಂಗ್ರಹ
**ಪಟ್ಟಿವಣೆ** – ಹಸೆ ಮಣೆ
**ಪಟ್ಟುಕಾಱ** – ಪಟ್ಟಸಾಲಿಗ
**ಪಟ್ಟೆಯ** – ಒಂದು ಆಯುಧ
**ಪಠರೀ** – ಮಡಕೆ
**ಪಠಿಸು** – ಓದು; ಹೇಳು
**ಪಡಕೆ** – ಹಾಸಿಗೆ; ಒಂದು ಬಗೆಯ ಧರ್ಮವಾದ್ಯ
**ಪಡ(ಂ)ಗು** – ಹಡಗು
**ಪಡಣ** – ಅನಿಷ್ಟ, ಕೇಡು
**ಪಡಣಿಗೆ** – ಅಮಂಗಳಕರ ಹೆಂಗಸು
**ಪಡಪಡವಾಯ್** – ಎದೆ ಡವಗುಟ್ಟು
**ಪಡಪು** – ಪ್ರಯೋಜನ
**ಪಡಪುಗಾರ್ತಿ** – ಹಣಗಳಿಸುವ ಹೆಣ್ಣು; ಠೀವಿಯವಳು
**ಪಡಲ** – ಹರಿವಾಣ; ಬುಟ್ಟಿ
**ಪಡಲ(ಲಿ)ಗೆ** – (ಪಟಲಿಕಾ) ಪಡಲ
**ಪಡಲಿಡು** – ಚೆಲ್ಲಾಪಿಲ್ಲಿಯಾಗಿ ಬೀಳು; ಸಾಯು
**ಪಡಲ್ವಡು** – ಚೆಲ್ಲಾಪಿಲ್ಲಿಯಾಗು
**ಪಡಲ್ವಡಿಸು** – ಚೆಲ್ಲಾಪಿಲ್ಲಿಯಾಗಿಸು
**ಪಡವು** – ಸಂಪಾದನೆ; ಆಶ್ರಯ
**ಪಡಿ** – (ಪ್ರತಿ) ಕದ; ಸಮಾನ
**ಪಡಿಕಮಂಗೆಯ್** – (ಜೈನ) ಪ್ರಾಯಶ್ಚಿತ್ತಕ್ಕೋಸುಗ ತಪಸ್ಸು ಮಾಡು
**ಪಡಿಕಮಣಂಗೇಳ್** – (ಜೈನ) ಪ್ರಾಯಶ್ಚಿತ್ತಕ್ಕಾಗಿ ಧರ್ಮೋಪದೇಶವನ್ನು ಕೇಳು
**ಪಡಿಕಮಣಂಪೇೞ್** – (ಜೈನ) ಪ್ರಾಯಶ್ಚಿತ್ತಕ್ಕಾಗಿ ಧರ್ಮೋಪದೇಶಮಾಡು
**ಪಡಿಕೆ** – ಬಂಧನ
**ಪಡಿಗ** – (ಪತದ್ಗ್ರಹ) ಪೀಕದಾನಿ
**ಪಡಿಗಟ್ಟು** – ಹೋಲಿಕೆ ಮಾಡು
**ಪಡಿಗಹ** – (ಪ್ರತಿಗ್ರಹ) ಸ್ವೀಕರಿಸು
**ಪಡಿಗೋಂಟೆ** – ಪ್ರತಿ ಕೋಟೆ; ಕೃತಕ ಕೋಟೆ
**ಪಡಿಚಂದ** – (ಪ್ರತಿಚ್ಛಂದ) ಪ್ರತಿಕೃತಿ; ಸಮಾನ
**ಪಡಿದೆಱೆ** – ಕದ ತೆಗೆ
**ಪಡಿಪಾಸು** – ನಡೆಮಡಿ ಹಾಸು
**ಪಡಿಮೊಗ** – ಎದುರು, ಅಭಿಮುಖ
**ಪಡಿಯಱ(ತಿ)** – (ಪ್ರತೀಹಾರ) ಬಾಗಿಲು ಕಾಯುವವನು(ಳು)
**ಪಡಿಯಱಗಟ್ಟಿಗೆ** – ದ್ವಾರಪಾಲಕನ ಕೈಯ ಕೋಲು
**ಪಡಿಯಱವಕ್ಕಿ** – ಕೋಗಿಲೆ
**ಪಡಿಯಱವೆಸ** – ಬಾಗಿಲು ಕಾಯುವ ಕೆಲಸ
**ಪಡಿಯಱವೆಸಗೆಯ್** – ಬಾಗಿಲು ಕಾಯುವ ಕೆಲಸ ಮಾಡು
**ಪಡಿಯಱಿ** – ರೀತಿಯನ್ನು ತಿಳಿ
**ಪಡಿಯಱಿಕೆ** – ಪಡಿಯಱವೆಸ
**ಪಡಿಯಿಡು** – ಸಮಾನವಾಗು; ತಾಳೆ ನೋಡಿ
**ಪಡಿಲೇಖಿಸು** – ಪ್ರತಿಬಿಂಬವನ್ನು ರಚಿಸು
**ಪಡಿವಡೆ** – ಪ್ರತಿ ಸೈನ್ಯ, ಶತ್ರು ಸೈನ್ಯ
**ಪಡಿವರಿಜು** – ಪ್ರತಿರೂಪ
**ಪಡಿವಳಗಟ್ಟಿಗೆ** – ಪಡಿಯಱಗಟ್ಟಿಗೆ
**ಪಡಿವಾ(ಮಾ)ತು** – ಪ್ರತಿ ಮಾತು; ಪ್ರತ್ಯುತ್ತರ
**ಪಡಿವೆಸ** – ಸೇವೆಯ ಕೆಲಸ
**ಪಡಿಸಣ** – ಪರೀಕ್ಷೆ; ಆಹಾರ ಪರೀಕ್ಷೆ
**ಪಡಿಸು** – ಮಲಗಿಸು
**ಪಡು** – ಬೀಳು; ಮಲಗು; (ಸೂರ್ಯ) ಅಸ್ತಮಿಸು
**ಪಡು(ಡಿ)ಕೆ** – ಕೆಟ್ಟ ವಾಸನೆ; ಹೊಲಸು
**ಪಡು(ಡಿ)ಕೆನಾಱು** – ಕೆಟ್ಟ ವಾಸನೆ ಬೀರು
**ಪಡುತರ್** – ಸೂರ್ಯನು ಅಸ್ತವಾಗು
**ಪಡುನೇಸಱ್** – ಮುಳುಗುವ ಸೂರ್ಯ
**ಪಡುಮಿಗ** – ಬೇಟೆಗೆ ಬೀಳುವ ಪ್ರಾಣಿ
**ಪಡುವ(ಣ್)** – ಪಶ್ಚಿಮ
**ಪಡುವಣ** – ಪಶ್ಚಿಮದ; ಪಶ್ಚಿಮ ದಿಕ್ಕು
**ಪಡುವಣಂ** – ಪಶ್ಚಿಮದವನು
**ಪಡುಶಿಲೆ** – ಮಲಗುವ ಕಲ್ಲು
**ಪಡೆ** – ಹೊಂದು; ಉಂಟುಮಾಡು; ಸೈನ್ಯ
**ಪಡೆಪು** – ಇಷ್ಟಾರ್ಥ, ಪಡೆಯಬೇಕೆಂದಿರುವುದು; ಲಾಭ
**ಪಡೆಪುಗಿಡು** – ಧೈರ್ಯಗೆಡು
**ಪಡೆಪಾಳತನ** – ಸಂಪಾದನೆಗೈಯುವಿಕೆ
**ಪಡೆಮಾ(ವಾ)ತು** – ಸುದ್ದಿ; ವಿಷಯ; ಕೀರ್ತಿ; ವ್ಯರ್ಥ ಮಾತು
**ಪಡೆಮೆಚ್ಚೆಗಂಡಂ** – (ಎದುರು) ಸೈನ್ಯವೂ ಮೆಚ್ಚಿಕೊಳ್ಳುವ ಶೂರ
**ಪಡೆವಳ(ಳ್ಳ)** – ಸೇನಾನಿ
**ಪಡ್ಡಳ** – ಕಣಿಗಿಲೆ
**ಪಣ್** – ಹಣ್ಣು; ಹಣ್ಣು ಬಿಡು; ಮಾಗು; ರುಚಿಯಾಗು; ಮಾಡು
**ಪಣ** – ಜೂಜಿನ ಒತ್ತೆ; ಹಣ
**ಪಣಂಕು** – ಪಳುಂಕು, ಬಲವಾಗಿ ತಾಗು
**ಪಣಕಾಂತೆ** – ಸೂಳೆ
**ಪಣಗೊಳ್** – ಒತ್ತೆ ಹಣ ತೆಗೆದುಕೊ

**ಪಣವ** – ಮದ್ದಳೆ
**ಪಣವಧು** – ಪಣಕಾಂತೆ
**ಪಣವಧೂಗೇಹ** – ಸೂಳೆಯ ಮನೆ
**ಪಣವಧೂಟಿ** – ಪಣಕಾಂತೆ
**ಪಣವನಿತೆ** – ಪಣಕಾಂತೆ
**ಪಣವು** – ದುಡ್ಡು; ಒಂದು ನಿರ್ದಿಷ್ಟ ನಾಣ್ಯ
**ಪಣಾಂಗನೆ** – ಪಣಕಾಂತೆ
**ಪಣಿ** – ಘಟ್ಟಿಸು
**ಪಣಿಗೆ** – ಬಾಚಣಿಗೆ; ಬಾಳೆ ಹಣ್ಣಿನ ಚಿಪ್ಪು
**ಪಣಿತ** – ಪಂತ; ದ್ಯೂತ
**ಪಣಿದ** – ಪೈರು; ಕಾಳಗ; ಕತ್ತರಿಸುವಿಕೆ
**ಪಣಿದಂಬೊಯ್** – ಕತ್ತರಿಸಿ ಹಾಕು;
ಯುದ್ಧಮಾಡು; ಪಣವಾಗಿ ಕೊಡು
**ಪಣಿದಕಾಱ** – ಕತ್ತರಿಸುವವನು; ಕಟಾವುದಾರ
**ಪಣು(ಂ)ಕು** – ಕುಗ್ಗು; ಕುಸಿ
**ಪಣೆ** – ಹಣೆ; ಮರದ ಕಾಂಡದ ಕವಲೊಡೆವ
ಜಾಗ; ಕಾಡುಮೃಗಗಳ ವಾಸದ ನೆಲೆ
**ಪಣೆಕ(ಗ)ಟ್ಟು** – ಹಣೆಯ ಅಲಂಕಾರ ಪಟ್ಟಿ;
ತಲೆಯ ಪಾಗು
**ಪಣೆಗಣ್** – ಹಣೆಗಣ್ಣು; ಶಿವನ ಮೂರನೆಯ ಕಣ್ಣು
**ಪಣೆಯಿಕ್ಕು** – ಹಣೆ ಚಾಚು; ತಲೆಯೆತ್ತು
**ಪಣ್ಗೊ(ನೆ)ಲೆ** – ಹಣ್ಣಿನ ಗೊನೆ
**ಪಣ್ಣಪಣ್ಣನೆ** – ಮೆಲ್ಲಮೆಲ್ಲಗೆ
**ಪಣ್ಣಿಗೆವಿಡಿ** – ಪಣ್ಣಿಗೆ+ಪಿಡಿ, ಅಲಂಕೃತವಾದ
ಹೆಣ್ಣಾನೆ
**ಪಣ್ಣು** – ಸಜ್ಜುಮಾಡು; ಸಜ್ಜಾಗು; ಮಾಡು
**ಪಣ್ಣುಗೆ** – ಸಜ್ಜು; ಸಿದ್ಧತೆ; ಅಲಂಕಾರ
**ಪಣ್ಣೆಯ** – ಹವ್ಯಾಸ
**ಪಣ್ವಲ(ಳ)** – ಹಣ್ಣುಹಂಪಲು
**ಪಣ್ಯಕರ್ಮ** – ವ್ಯಾಪಾರ
**ಪಣ್ಯವಧು** – ಸೂಳೆ
**ಪಣ್ಯವನಿತೆ** – ಪಣ್ಯವಧು
**ಪಣ್ಯಾಂಗನಾಜನ** – ಸೂಳೆಯರ ಗುಂಪು
**ಪಣ್ಯಾಂಗನಾವೀಧಿ** – ಸೂಳೆಗೇರಿ
**ಪಣ್ಯಾಂಗನೆ** – ಪಣ್ಯವಧು
**ಪಣ್ಯಾಗಾರ** – ವ್ಯಾಪಾರದ ಸ್ಥಳ; ಅಂಗಡಿ
**ಪಣ್ಯಾಂಗನಾ** – ಸೂಳೆ, ವೇಶ್ಯೆ
**ಪತಂಗ** – ಸೂರ್ಯ; ಈಚಲು ಹುಳು; ದೀಪದ
ಹುಳು; ಹಕ್ಕಿ; ಬಾಣ
**ಪತಂಗಮಂಡಲ** – ಸೂರ್ಯಮಂಡಲ
**ಪತಂಗವೃತ್ತಿ** – ದೀಪದ ಹುಳುವಿನಂತೆ ನುಗ್ಗುವುದು
**ಪತತ್ರ** – ರೆಕ್ಕೆ
**ಪತತ್ರಿ** – ರೆಕ್ಕೆಯುಳ್ಳದು, ಹಕ್ಕಿ; ಬಾಣ
**ಪತಾಕಪಟ** – ಬಾವುಟದ ಬಟ್ಟೆ
**ಪತಾಕಿನಿ** – ಸೈನ್ಯ
**ಪತಾಕಿನೀಪತಿ** – ಸೇನಾಧಿಪತಿ
**ಪತಾಕೆ** – ಬಾವುಟ, ಧ್ವಜ
**ಪತತ್ರಿ** – ಪಕ್ಷಿ
**ಪತತ್ರಿಗೋತ್ರ** – ಪಕ್ಷಿಗಳ ಗುಂಪು
**ಪತಿ** – ಒಡೆಯ; ಗಂಡ
**ಪತಿಂವರೆ** – ಸ್ವಯಂವರದ ಅವಕಾಶವಿರುವ ಕನ್ಯೆ
**ಪತಿಕಾರ್ಯ** – ಯಜಮಾನನ ಕೆಲಸ
**ಪತಿತ್ವ** – ಒಡೆತನ
**ಪತಿವ್ರತಾಗುಣ** – ಪತಿನಿಷ್ಠೆಯ ನಡವಳಿಕೆ
**ಪತಿವ್ರತಾಚರಣ** – ಪಾತಿವ್ರತ್ಯದ ಅನುಸರಣೆ
**ಪತಿವ್ರತಾಲಿಂಗ** – (ಜೈನ) ಯೋಗಸಾಧನಯ
ಒಂದು ಬಗೆ
**ಪತಿವ್ರತಿಕೆ** – ಪಾತಿವ್ರತ್ಯದ ಗುಣ
**ಪತಿಹಿತವ** – ಒಡೆಯನ ಹಿತ ಬಯಸುವವನು
**ಪತ್ತನ** – ನಗರ; ಗಾಡಿ ಅಥವಾ ನಾವೆಯಲ್ಲಿ
ತಲುಪಬಹುದಾದ ದೊಡ್ಡ ಊರು
**ಪತ್ತಳೆ** – (ಪತ್ರಿಕಾ) ಓಲೆ, ಪತ್ರ, ಕಾಗದ
**ಪತ್ತಱು** – ಹತ್ತು+ಆರು, ಹದಿನಾರು
**ಪತ್ತಿ** – ಪದಾತಿ ಸೈನಿಕ; ಒಂದು ರಥ, ಎರಡು ಆನೆ,
ಮೂರು ಕುದುರೆ, ನಾಲ್ಕು ಕಾಲಾಳುಗಳ ಗುಂಪು;
ಬಾಣ
**ಪತ್ತಿಸು** – ಹತ್ತಿಸು; ಮನಸ್ಸನ್ನು ನಿಲ್ಲಿಸು
**ಪತ್ತೀಂದ್ರ** – ಪದಾತಿಯ ದಳಪತಿ
**ಪತ್ತು** – ಹತ್ತು; ಮೇಲೇರು; ಉರಿಗೊಳ್ಳು;
ಮೆತ್ತಿಕೊ; ಒಂದು ಸಂಖ್ಯೆ
**ಪತ್ತುಗೆ** – ಸಂಭವಿಸುವಿಕೆ; ಸಂಬಂಧ; ಸ್ನೇಹ;
ಆಶ್ರಯ; ರಥದ ಅಚ್ಚು
**ಪತ್ತುಗೆಗುಂದು** – ಸಂಬಂಧ ಕಳೆದುಹೋಗು
**ಪತ್ತುಗೆಗೆಡು** – ಸಂಬಂಧ ತಪ್ಪಿಹೋಗು
**ಪತ್ತುಗೆಗೊಳ್** – ಸಂಬಂಧವುಂಟಾಗು
**ಪತ್ತುಗೆವಿಡು** – ಸಂಬಂಧ ಕಳೆದುಕೊ
**ಪತ್ತುಗೆವೆಱು** – ಸಂಬಂಧ ಪಡೆದಿರು
**ಪತ್ತುವಿಡಿಸು** – ಪತ್ತು+ಬಿಡಿಸು, ಸಂಬಂಧ ತಪ್ಪಿಸು
**ಪತ್ತುವಿಡು** – ಸಂಬಂಧ ತಪ್ಪಿಹೋಗು;
ಬೇರೆಯಾಗು; ಮುಗಿದುಹೋಗು;
ದೂರಮಾಡು
**ಪತ್ತೆಪಾಯ್** – ಹತ್ತಿರ ಸೇರು, ಸಮೀಪಿಸು
**ಪತ್ತೆಸಾರ್** – ಪತ್ತೆಪಾಯ್
**ಪತ್ರಭಂಗ** – ಕೆನ್ನೆ ಮೊದಲಾದವುಗಳ ಮೇಲೆ
ಬರೆಯುವ ಚಿತ್ರ
**ಪತ್ತೆವೊಯ್** – ಒಂದಾಗಿ ಸೇರಿಸು; ಬೆಸೆ
**ಪತ್ತೆಸಾರ್** – ಹತ್ತಿರ ಹೋಗು
**ಪತ್ತೆಂಟು** – ಅನೇಕ
**ಪತ್ರ(ಕ)** – ಎಲೆ; ಹೂವಿನ ಎಸಳು
**ಪತ್ರಚ್ಛೇದ** – ಎಲೆಗಳ ಚಿತ್ರ
**ಪತ್ರಪುಟಿಕೆ** – ಎಲೆಯಿಂದ ಮಾಡಿದ ದೊನ್ನೆ
**ಪತ್ರಭಂಗ** – ದೇಹದ ಮೇಲೆ ಚಿತ್ರ ಬಿಡಿಸುವುದು;
ಮಕರಿಕೆ
**ಪತ್ರರೇ(ಲೇ)ಖೆ** – ಪತ್ರಭಂಗ

**ಪತ್ರಾಲಂಬನ** – ವಾದಕ್ಕೆ ನೀಡುವ ಆಹ್ವಾನ
**ಪತ್ರಾಲಿ** – ಎಲೆಗಳ ಸಮೂಹ
**ಪತ್ರಿಕುಲಚರಿತ್ರ** – ಎಲೆಗಳಿಂದ (ಬಾಣಗಳಿಂದ) ತುಂಬಿರುವುದು
**ಪತ್ಸನ್ನಿಧಿ** – ಪಾದಸನ್ನಿಧಿ
**ಪಥ(ಪರಿ)ಶ್ರಮ** – ಮಾರ್ಗಾಯಾಸ; ಪಯಣದ ದಣಿವು
**ಪಥಾರ್ತ** – ಪಯಣಿಸಿ ದಣಿದವನು
**ಪಥಿಕ(ಜನ)** – ಪ್ರಯಾಣಿಕ (ಜನರು)
**ಪಥಿಶ್ರಮ** – ಪಥ(ಪರಿ)ಶ್ರಮ
**ಪಥ್ಯ** – ತಕ್ಕುದಾದ
**ಪದ** – ಸ್ಥಾನ; ಹೆಜ್ಜೆ; ಹದ; ಸಂದರ್ಭ
**ಪದನ್(ನ)(ನು)** – ಸರಿಯಾದ ಸ್ಥಿತಿ
**ಪದಂಗಾಣ್** – ಹದಗೊಳ್ಳು
**ಪದಂಗಾಸು** – ಹದವಾಗಿ ಕಾಯಿಸು; ಪುಟವಿಟ್ಟುದು
**ಪದಂಗುಟ್ಟು** – ಉಚ್ಚರಿಸು
**ಪದಂಗೆಡು** – ಹದ ತಪ್ಪು; ದಾರಿ ತಪ್ಪು
**ಪದಂಗೊಳಸು** – ಹದಗೊಳಿಸು
**ಪದಂದಪ್ಪು** – ಹದ ತಪ್ಪು
**ಪದಂದಿರಿ** – ಹೆಜ್ಜೆ ತಿರುಗಿಸು
**ಪದಂಬಡಿಸು** – ನೆರವೇರಿಸು; ಹದಗೊಳಿಸು
**ಪದಂಬಡೆ** – ಹದಗೊಳ್ಳು
**ಪದಕ** – ಸರದ ನಡುವಿನ ಬಿಲ್ಲೆ
**ಪದಕಟಕ** – ಕಾಲುಕಡಗ
**ಪದಗತಿ** – ಹೆಜ್ಜೆಯಿಡುವ ರೀತಿ
**ಪದಗೆಂಪು** –ಹದವಾದ ಕೆಂಬಣ್ಣ
**ಪದಘಾತ** – ಕಾಲಿನ ಘಟ್ಟನೆ
**ಪದಚಾರಿ** – ಪದಗತಿ
**ಪದಡಕ್ಕೆ** – ಭೇರಿ
**ಪದದಪ್ಪು** – ಹದ ತಪ್ಪು; ದಾರಿ ತಪ್ಪು
**ಪದಧೂಲಿ(ಳಿ)** – ನಡೆಯುವಾಗ ಏಳುವ ಧೂಳು
**ಪದನ್** – ಹದ, ಸುಸ್ಥಿತಿ
**ಪದನಖ** – ಕಾಲುಗುರು
**ಪದನತ** – ಕಾಲಿಗೆ ಬಿದ್ದ, ನಮಸ್ಕರಿಸಿದ
**ಪದನಱಿ** – ಕ್ರಮವನ್ನು ತಿಳಿ
**ಪದನಿಸು** – ಆಕರ್ಷಿಸು
**ಪದನ್ಯಸನ** – ಹೆಜ್ಜೆಯಿಡುವಿಕೆ
**ಪದನ್ಯಾಸ** – ಪದನ್ಯಸನ
**ಪದಪದ್ಧತಿ** – ಹೆಜ್ಜೆಯ ಗುರುತು
**ಪದಪಾಂಸು** – ಪದಧೂಲಿ(ಳಿ)
**ಪದಪಾತ** – ಒದೆಯುವುದು
**ಪದಪೀಠ** – ಪಾದಗಳನ್ನಿಟ್ಟುಕೊಳ್ಳುವ ಪೀಠ
**ಪದ(ದೆ)ಪು** – ಮೋಹ; ಪ್ರೀತಿ; ಸಂಭ್ರಮ; ಅಂದ
**ಪದಮಿಕ್ಕು** – ಪದಗಳನ್ನು ಜೋಡಿಸು
**ಪದಯಿದ** – ಪ್ರಿಯನಾದ(ವನು)
**ಪದಯಿಸು** – ಹದಗೊಳಿಸು
**ಪದಯುಗ(ಳ)** – ಎರಡು ಪಾದಗಳು
**ಪದರಕ್ಷೆ** – ಪಾದರಕ್ಷೆ
**ಪದರಜ** – ಪದಧೂಲಿ(ಳಿ)
**ಪದರಾಗ** – ಅಂಗಾಲಿನ ಕೆಂಬಣ್ಣ
**ಪದವಡು** – ಹದವನ್ನು ಹೊಂದು; ಹಿತಕರವಾಗು
**ಪದವಣ್** – ಹವಾಗಿರುವ ಹಣ್ಣು
**ಪದವಱ** – ಹದವಾದ ಮಳೆ
**ಪದವಿದ್ಯೆ** – ವ್ಯಾಕರಣ
**ಪದವಿನ್ಯಾಸ** – ಹೆಜ್ಜೆಯಿಡುವ ರೀತಿ; ಪದಜೋಡಣೆ
**ಪದವಿಲ್** – ಸಿದ್ಧಪಡಿಸಿದ ಬಿಲ್ಲು
**ಪದವೆಂಕೆ** – ಪದ+ಬೆಂಕೆ, ಹದವಾದ ಉರಿ
**ಪದವೇಱು** – ಹದವನ್ನು ಹೊಂದು; ಪದವಿ ಪಡೆ
**ಪದಸಂಘಟ್ಟನ(ನೆ)** – ಒದೆತ
**ಪದಸಂಚಯ** – ಪದಗಳ ಸಮೂಹ
**ಪದಸ್ಖಳನ** – ಹೆಜ್ಜೆ ತಪ್ಪುವುದು
**ಪದಾಗಮಜ್ಞ** – ವ್ಯಾಕರಣವನ್ನು ಬಲ್ಲವನು
**ಪದಾಘಾತ** – ಒದೆತ
**ಪದಾತಿ(ನಿ)** – ಕಾಲಾಳು ದಳ
**ಪದಾನತ** – ಪದನತ
**ಪದಾರ್ಥ** – ವಸ್ತು; ಪದ+ಅರ್ಥ; (ಜೈನ) ತತ್ವಗಳು, ಇವು ಒಂಬತ್ತು ಬಗೆ: ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ, ಪಾಪ, ಪುಣ್ಯ
**ಪದಾವನತಿ** – ಕಾಲುಗಳಿಗೆ ಬೀಳುವುದು, ನಮಸ್ಕಾರ
**ಪದಿಟೆ** – (ಪ್ರತಿಷ್ಠೆ) ಸ್ಥಾಪನೆ
**ಪದಿಂಬರ್(ರು)** – ಹತ್ತು ಮಂದಿ
**ಪದಿರ್** – ದ್ವಂದ್ವಾರ್ಥದ ಮಾತು; ಚಮತ್ಕಾರೋಕ್ತಿ
**ಪದಿರಪಱ** – ಸಂಕೇತಸೂಚಕ ಹರೆ, ವಾದ್ಯ
**ಪದಿರಿಕ್ಕು** – ಶಬ್ದಮಾಡು; ಸಂಕೇತಧ್ವನಿಮಾಡು
**ಪದಿರ್ಮಡಿ** – ಹತ್ತು ಪಟ್ಟು
**ಪದಿರ್ಮಡಿಸು** – ಹತ್ತರಷ್ಟು ಮಾಡು
**ಪದುಮ** – ಪದ್ಮ
**ಪದುಳ** – ಕ್ಷೇಮ, ನೆಮ್ಮದಿ
**ಪದುಳಂ** – ಕ್ಷೇಮದಿಂದ; ನೆಮ್ಮದಿಯಿಂದ
**ಪದುಳಂಗೆಯ್** – ನೆಮ್ಮದಿಯುಂಟುಮಾಡು
**ಪದುಳಮಿರ್** – ಕ್ಷೇಮವಾಗಿರು
**ಪದುಳಿಕೆ** – ಕ್ಷೇಮ; ಸ್ಥಿರತೆ
**ಪದುಳಿಗ** – ಸುಖವಾಗಿರುವವನು; ಜಾಗರೂಕ
**ಪದುಳಸು** – ಸಮಾಧಾನ ಹೊಂದು
**ಪದೆ** – ಆಸೆಪಡು; ಪ್ರೀತಿಸು; ಸಂತೋಷಪಡು
**ಪದೆಪು** – ಪ್ರೀತಿ; ಸಂತೋಷ
**ಪದೆಪುಗೆಡು** – ಸಂತೋಷ ಹಾಳಾಗು
**ಪದೆಯಿಸು** – ಆಸೆಪಡುವಂತೆ ಮಾಡು
**ಪದ್ಧತಿ** – ಹೆಜ್ಜೆ; ವಿಧಾನ
**ಪದ್ಮಗರ್ಭ** – ಬ್ರಹ್ಮ
**ಪದ್ಮಜ** – ಬ್ರಹ್ಮ
**ಪದ್ಮಭವಾಂಡ** – ಬ್ರಹ್ಮಾಂಡ
**ಪದ್ಮಮಿತ್ರ** – ತಾವರೆಯ ಮಿತ್ರ, ಸೂರ್ಯ

**ಪದ್ಮಯೋನಿ** – ಪದ್ಮಗರ್ಭ
**ಪದ್ಮರಾಗ** – ತಾವರೆಯ ಬಣ್ಣ; ಕೆಂಪು ರತ್ನ
**ಮಾಣಿಕ್ಯ–**
**ಪದ್ಮವೇದಿಕೆ** – ತಾವರೆಯ ಆಕಾರದಲ್ಲಿ ನಿರ್ಮಿತವಾದ ವೇದಿಕೆ
**ಪದ್ಮಷಂಡ** – ತಾವರೆಯ ಗುಂಪು; ತಾವರೆಯ ಕೊಳ
**ಪದ್ಮಸದ್ಮ** – ತಾವರೆಗೊಳ; ಕಮಲದ ಮನೆಯವನು, ಬ್ರಹ್ಮ
**ಪದ್ಮಸದ್ಮೆ** – ಕಮಲದಲ್ಲಿ ನೆಲೆಸಿದವಳು, ಲಕ್ಷ್ಮೀ
**ಪದ್ಮಹ್ರದ** – ತಾವರೆಗಳ ನೆಲೆ, ಕೊಳ
**ಪದ್ಮಾಂಕಿತ** – ಕಮಲಲಾಂಛನ
**ಪದ್ಮಾಕರ** – ಪದ್ಮಹ್ರದ
**ಪದ್ಮಾನಂದಿ** – ಪದ್ಮಕ್ಕೆ ಸಂತಸ ನೀಡುವವನು, ಸೂರ್ಯ
**ಪದ್ಮಾಲಯೆ** – ಪದ್ಮಸದ್ಮೆ
**ಪದ್ಮಾಸನ** – ಕಮಲದ ಆಸನವುಳ್ಳವನು, ಬ್ರಹ್ಮ; ಒಂದು ಯೋಗಾಸನ
**ಪದ್ಮಿನೀ** – ಕಮಲಲತೆ; ಪದ್ಮಿನೀ ಎಂಬ ಸ್ತ್ರೀ ಜಾತಿ
**ಪದ್ಮಿನೀಷಂಡ** – ಪದ್ಮಷಂಡ; ಪದ್ಮಿನೀ ಜಾತಿಯ ಸ್ತ್ರೀಯರ ಸಮೂಹ
**ಪದ್ಮೇಶ** – ಕಮಲಕ್ಕೆ ಒಡೆಯ, ಸೂರ್ಯ
**ಪದ್ಯರಚನೆ** – ಪದ್ಯಗಳನ್ನು ಬರೆಯುವುದು
**ಪನ** – ಸಂಕೇತಸ್ಥಳ
**ಪನಿ** – ತೊಟ್ಟು; ತೊಟ್ಟಿಕ್ಕು; ಸತತವಾಗಿ ಸುರಿ
**ಪನಿಗೊಳ್** – ಕಂಬನಿ ಸುರಿಸು
**ಪನಿದಂದಲ್** – ತುಂತುರು ಮಳೆ
**ಪನಿನೀರ್** – ತಂಪಾದ ನೀರು, ಪನ್ನೀರು
**ಪನಿಪುಲ್** – ಇಬ್ಬನಿಯಿಂದ ಕೂಡಿದ ಹುಲ್ಲು
**ಪನೆ** – ತಾಳೆ ಮರ; ಹೊಸದಾಗಿ ಮೊಳೆತ ಹಲ್ಲು
**ಪನ್ನ(ನ್ನಿ)** – ಬಿಂಕ
**ಪನ್ನಗ**– ಹಾವು; ಕಶ್ಯಪ–ಕದ್ರು ಇವರ ಸಂತತಿ–
**ಪನ್ನಗಪತಾಕ** – ಸರ್ಪಧ್ವಜ, ದುರ್ಯೋಧನ
**ಪನ್ನಗರ್** – ನಾಗರು
**ಪನ್ನಗರಾಜ** – ಆದಿಶೇಷ
**ಪನ್ನಗವಿದ್ಯೆ** – ಹಾವಿನ ವಿಷ ಹೋಗಲಾಡಿಸುವ ವಿದ್ಯೆ; ಗಾರುಡವಿದ್ಯೆ
**ಪನ್ನಗವಿರೋಧಿ** – ಸರ್ಪವಿರೋಧಿ, ಗರುಡ
**ಪನ್ನಗಶಯನ** – ವಿಷ್ಣು
**ಪನ್ನತ** – ವೀರ, ಪರಾಕ್ರಮಿ
**ಪನ್ನತಿಕೆ** – ಶೌರ್ಯ
**ಪನ್ನಿರ್ಛಾಸಿರ** – ಹನ್ನೆರಡು ಸಾವಿರ
**ಪನ್ನಿರ್ತೆಱ** – ಹನ್ನೆರಡು ವಿಧ
**ಪನ್ನಿರ್ವರ್** – ಹನ್ನೆರಡು ಮಂದಿ
**ಪನ್ನೆರಟ್ತಪ** – ಹನ್ನೆರಡು ಬಗೆಯ ತಪಸ್ಸು
**ಪನ್ನೆರಟ್ಬರಿಸ** – ಹನ್ನೆರಡು ವರ್ಷ
**ಪನ್ನೊರ್ವರ್** – ಹನ್ನೊಂದು ಮಂದಿ
**ಪಪ್ಪ(ವರ್)** – ಸ್ತುತಿ(ಪಾಠಕರು)
**ಪಪ್ಪಕ** – ರಾಜನನ್ನು ಬೆಳಿಗ್ಗೆ ಎಚ್ಚರಿಸುವವನು; ಬೇಟೆಯಲ್ಲಿ ಸೋವುವುದು
**ಪಯ** – ನೀರು; ಹಾಲು
**ಪಯಃಕಣ(ಕಣಿಕೆ)** – ನೀರಿನ ಹನಿ
**ಪಯಃಕೇಲಿ(ಳಿ)** – ನಿರಿನಲ್ಲಿನ ಆಟ
**ಪಯಃಪತಿ** – ನೀರಿನ ಒಡೆಯ, ವರುನ
**ಪಯಃಪಯೋಧಿ**– ಕಾಲಿನ ಸಮುದ್ರ
**ಪಯಃಪೂರ** – ನೀರಿ(ಹಾಲಿ)ನಿಂದ ತುಂಬಿರುವುದು; ಹಾಲ ಹೊಳೆ
**ಪಯಃಪ್ರಸಾದ** – ಪಾದೋದಕ
**ಪರ್ಯಪ್ರವಾಹ** – ಪಯಃಪೂರ
**ಪಯಗತಿ** – ನಡೆಯುವ ರೀತಿ
**ಪಯಗರಡಿ** – ಮರಿ ಹಾಕಿದ ಕರಡಿ
**ಪಯಣ** – (ಪ್ರಯಾಣ) ಯಾತ್ರೆ; ಒಂದು ದಿನ ನಡೆಯುವ ದೂರ
**ಪಯಣಂಬರ್** – ಪಯಣಿಸಿ ಬಾ
**ಪಯಣಂಬೋಗು** – ಪ್ರವಾಸ ಹೋಗು
**ಪಯ(ಯಿ)ನ್** – ಹಯನು, ಈದ ಪ್ರಾಣಿ; ಕರಾವು
**ಪಯನಾವು** – ಕರೆಯುವ ಹಸು, ಕರಾವು
**ಪಯಶ್ಚರ** – ಮೀನು ಮುಂತಾದ ಜಲಚರ
**ಪಯಷ್ಕಣ** – ಪಯಃಕಣ(ಕಣಿಕೆ)
**ಪಯಸ್ವಿನಿ** – ಹಾಲು ಕೊಡುವ ಹಸು, ಕರಾವು
**ಪಯಸ್ಸದ್** – ನೀರಿನ ಆಶ್ರಯಸ್ಥಾನ, ಸಮುದ್ರ
**ಪಯಿಂಛಾಸಿರ(ರ್ವರ್)** – ಹತ್ತು ಸಾವಿರ (ಮಂದಿ)
**ಪಯೋಜ** – ನೀರಿನಲ್ಲಿ ಹುಟ್ಟಿದುದು, ತಾವರೆ
**ಪಯೋಜಜ** – ತಾವರೆಯಲ್ಲಿ ಹುಟ್ಟಿದವನು, ಬ್ರಹ್ಮ
**ಪಯೋಜಸೂತ್ರ** – ಕಮಲದ ದಂಟು
**ಪಯೋಜಿನಿ** – ಕಮಲ
**ಪಯೋದ** – ನೀರನ್ನು ಕೊಡುವುದು, ಮೋಡ
**ಪಯೋದಪಥ** – ಮೇಘಮಾರ್ಗ, ಆಕಾಶ
**ಪಯೋದಮಾರ್ಗ** – ಪಯೋದಪಥ
**ಪಯೋಧರ** – ಮೋಡ; ಮೊಲೆ
**ಪಯೋಧರಕಾಲ** – ಮೋಡಗಳ ಕಾಲ, ಮಳೆಗಾಲ
**ಪಯೋಧರಶರ** – ವಾರುಣಾಸ್ತ್ರ
**ಪಯೋಧರಶಿಲೀಮುಖ** – ಪಯೋಧರಶರ
**ಪಯೋಧಾರೆ** – ನೀರಿನ ಧಾರೆ
**ಪಯೋಧಿ** – ಸಮುದ್ರ; (ಜೈನ) ಒಂದು ಕಾಲಗಣನೆ, ಸಾಗರ
**ಪಯೋಧಿಕೇಳಿ** – ನೀರಾಟ
**ಪಯೋನಿಧಿ** – ಸಮುದ್ರ; ಹಾಲಿನ ಸಮುದ್ರ
**ಪಯೋಭೃತ್** – ಮೊಲೆ
**ಪಯೋರಸ** – ನೀರು
**ಪಯೋರಾಶಿ** – ಸಮುದ್ರ
**ಪಯೋರುಹ** – ನೀರಿನಲ್ಲಿ ಹುಟ್ಟಿದುದು, ಕಮಲ
**ಪಯೋವಾರ್ಧಿ** – ಪಯೋಧಿ
**ಪಯೋಷಿಣಿ** – ನದಿ; ಪಯೋಷ್ಣೀ

**ಪಯೋಷ್ಣೀ** – ಒಂದು ನದಿ
**ಪರ** – ಎದುರಿನಲ್ಲಿರುವ; ಬೇರೆಯ; ಪರಲೋಕ
**ಪರಂತಪ** – ಶತ್ರುಗಳನ್ನು ತಾಪಗೊಳಿಸುವವ, ಶೂರ
**ಪರಂತಪನ** – ತುಮಬ ತಾಪ ನೀಡುವ
**ಪರಂಪರೆ** – ಒಂದನ್ನೊಂದು ಹಿಂಬಾಲಿಸುವುದು, ಅಲೆ; ಸಾಲು
**ಪರಕ** – ಪರೋಕ್ಷ
**ಪರಕಲಿ(ರಿ)ಸು** – ವ್ಯಾಪಿಸು; ಗುಂಪುಗೂಡು; ಮೀರು
**ಪರಕಳತ್ರ** – ಪರನಾರಿ
**ಪರಕಾಯಪ್ರವೇಶ** – ತನ್ನ ಪ್ರಾಣ ಮತ್ತೊಬ್ಬನ ಶರೀರದಲ್ಲಿ ಸೇರುವಂತೆ ಮಾಡುವ ಸಾಧನೆ
**ಪರಕೆ** – ಹರಕೆ, ಆಶೀರ್ವಾದ
**ಪರಕೆಗು(ಗೊ)ಡು** – ಹರಕೆ ಒಪ್ಪಿಸು
**ಪರಕೆಗೊಳ್** – ಆಶೀರ್ವಾದವನ್ನು ಹೊಂದು
**ಪರಕ್ಷಿತೀಶ** – ಬೇರೆಯ ರಾಜ
**ಪರಕ್ಷ್ಮಾಪ** – ಪರಕ್ಷಿತೀಶ
**ಪರಗತಿ** – ಕೈವಲ್ಯ
**ಪರಗು** – ಭೂಮಿ ಶುದ್ಧಿಗೊಳಿಸು; ಕುಂಟೆ ಹೊಡೆ
**ಪರಚಕ್ರ** – ಶತ್ರು ಸಮೂಹ; ಶತ್ರುರಾಜ್ಯ
**ಪರಡು** – ಕೆದರು; ಕೆರೆ; ಹರಡು; ಹಿಮ್ಮಡಿ ಗಂಟು
**ಪರತಂತ್ರ** – ಬೇರೆಯವನ ಅಧೀನ
**ಪರತತ್ವ** – ಶ್ರೇಷ್ಠ ತತ್ವ; ಮೋಕ್ಷ ತತ್ವ
**ಪರತ್ರೆ** – ಮೋಕ್ಷ
**ಪರಡಿ** – ಸೇವಗೆ
**ಪರಡೆ** – ಹರಡೆ ಹಕ್ಕಿ
**ಪರದ** – ವ್ಯಾಪಾರಿ, ಹರದ
**ಪರದಾಡು** – ವ್ಯಾಪರ ಮಾಡು
**ಪರದಾರ** – ಬೇರೆಯವನ ಹೆಂಡತಿ
**ಪರದಾರಗಮನ** – ವ್ಯಭಿಚಾರ
**ಪರದಾರಪ್ರಿಯ** – ಹಾದರಿಗ
**ಪರದಾರವಿದೂರ** – ಅನ್ಯಸ್ತ್ರೀದೂರ
**ಪರದಾರಾತಿಕ್ರಮಣ** – ಅನ್ಯಸ್ತ್ರೀಯ ಮೇಲೆ ಎರಗುವುದು
**ಪರದಿ(ತಿ)** – ವ್ಯಾಪಾರಿಯ ಹೆಂಡತಿ
**ಪರದು** – ವ್ಯಾಪಾರ
**ಪರದುಗೆಯ್** – ವ್ಯಾಪಾರಮಾಡು
**ಪರದುವೋಗು** – ವ್ಯಾಪಾರಕ್ಕಾಗಿ ದೂರ ಹೋಗು
**ಪರದೇಸಿ** – ಅನ್ಯದೇಶದವನು; ಅನಾಥ
**ಪರದ್ರವ್ಯ** – ಅನ್ಯರ ಹಣ
**ಪರಧನ** – ಪರದ್ರವ್ಯ
**ಪರನೃಪ** – ಶತ್ರುರಾಜ
**ಪರನೃಪಮಂಡಳ** – ಶತ್ರುರಾಜನ ಪ್ರದೇಶ
**ಪರಪಕ್ಷ** – ಎದುರು ಪಕ್ಷ
**ಪರಪಾರ** – ಆಚೆಗಿನ ದಡ
**ಪರಪೀಡೆ** – ಇತರರಿಗೆ ತೊಂದರೆ ಕೊಡುವುದು
**ಪರ(ರೆ)ಪು** – ಹರಡು; ಆವರಿಸು; ಕೆದರು; ವಿಸ್ತಾರ
**ಪರಪುರುಷ** – ಪರಕೀಯ; ಗಂಡನಲ್ಲದವನು
**ಪರಪುಷ್ಟ(ಟ್ಟ)** – ಬೇರೆಯವರಿಂದ ಪೋಷಿಸಲ್ಪಟ್ಟ; ಕೋಗಿಲೆ
**ಪರಬಲ** – ಶತ್ರು ಸೈನ್ಯ
**ಪರಬಲಾಪಹ** – ಅನ್ಯಸೈನ್ಯವನ್ನು ವಿನಾಶಕ
**ಪರಭಾಗ** – ಶೋಭೆ; ಮೇಲ್ಮೆ; ಹಿಂಭಾಗ
**ಪರಭಾಗಂಬಡೆ** – ಶೋಭೆವಡೆ
**ಪರಭಾಗಂಬೇಱು** – ಪರಭಾಗಂಬಡೆ
**ಪರಭಾವ** – ಇತರರ ಆಲೋಚನೆ
**ಪರಭೂಪಾಲ** – ಶತ್ರುರಾಜ
**ಪರಭೃತ** – ಪರಪುಷ್ಟ(ಟ್ಟ)
**ಪರಮ** – ಉತ್ಕೃಷ್ಟ
**ಪರಮಕೋಟಿ** – ಪರಾಕಾಷ್ಠೆ; ಆಧಿಕ್ಯ
**ಪರಮಗುಣ** – ಶ್ರೇಷ್ಠ ಗುಣ
**ಪರಮಜಾತಿ** – (ಜೈನ) ನಾಲ್ಕು ಪರಿವ್ರಾಜಕ ವರ್ಗಗಳಲ್ಲಿ ಒಂದು
**ಪರಮಜಿನ** – ಶ್ರೇಷ್ಠನಾದ ಜಿನ
**ಪರಮಜಿನೇಂದ್ರ** – ಪರಮಜಿನ
**ಪರಮಜ್ಞಾನಿ** – ಶ್ರೇಷ್ಠವಾದುದರ ಜ್ಞಾನಪಡೆದವನು
**ಪರಮತ** – ಬೇರೆಯ ಮತಧರ್ಮ
**ಪರಮತಪೋಧನ** – ತಪಸ್ಸನ್ನೇ ಧನವಾಗುಳ್ಳವನು, ಮಹಾತಪಸ್ವಿ
**ಪರಮತಪೋನಿಧಿ** – ಪರಮತಪೋಧನ
**ಪರಮದರುಶನಿಕ** – ಶ್ರೇಷ್ಠ ದಾರ್ಶನಿಕ
**ಪರಮದೀಕ್ಷೆ** – ಶ್ರೇಷ್ಠ ವ್ರತ
**ಪರಮದ್ರೋಹ** – ಮಹಾ  ದ್ರೊಹಗೈಯುವವನು
**ಪರಮಪದ(ವಿ)** – ಶ್ರೇಷ್ಠ ಪದವಿ, ಸ್ಥಾನ
**ಪರಮಪುರುಷಾರ್ಥ** – ಅತ್ಯಂತ ದೊಡ್ಡ ಪರುರುಷಾರ್ಥ, ಮೋಕ್ಷ
**ಪರಮಪ್ರಮಾಣ** – ಅತ್ಯಂತ ಹೆಚ್ಚಿನ ಮಟ್ಟ
**ಪರಮಬ್ರಹ್ಮ** – ಅತ್ಯಂತ ಶ್ರೇಷ್ಠ ಬ್ರಹ್ಮ
**ಪರಮಯೋಗಿ** – ಮಹಾಯೋಗಿ
**ಪರಮಸುಖ** – ಅತ್ಯಂತ ಶ್ರೇಷ್ಠ ಸುಖ
**ಪರಮಸ್ಥಾನ** – (ಜೈನ) ಮೋಕ್ಷಸಂಬಂಧಿ ಉತ್ತಮ ಸ್ಥಿತಿಗಳು; ಒಳ್ಳೆಯ ಹುಟ್ಟು, ಉತ್ತಮ ಶ್ರಾವಕನಾಗುವುದು, ತಪಸ್ವಿಯಾಗುವುದು, ದೇವೇಂದ್ರಪದವಿ, ಚಕ್ರವರ್ತಿಪದವಿ, ಅರ್ಹತ್ವದವಿ, ಮೋಕ್ಷ ಎಂಬ ಏಳು
**ಪರಮಹಂಸ** – ಕುಟೀಚಕ, ಬಹೂದಕ, ಹಂಸ, ಪರಮಹಂಸ ಎಂಬ ನಾಲ್ಕು ಪ್ರಕಾರಗಳಲ್ಲಿ ಕೊನೆಯ ವರ್ಗದ ಸನ್ಯಾಸಿ
**ಪರಮಾಕೃತ** – ಶ್ರೇಷ್ಠವಾದ ರೂಪು
**ಪರಮಾಗಮ** – ಶ್ರೇಷ್ಠ ಶಾಸ್ತ್ರಗ್ರಂಥ; (ಜೈನ) ಜಿನಾಗಮ
**ಪರಮಾಚಾರ್ಯ** – ಶ್ರೇಷ್ಠ ಗುರು
**ಪರಮಾಣು** – ತುಂಬ ಸೂಕ್ಷ್ಮ ವಸ್ತು; (ಜೈನ) ಪುದ್ಗಲದ್ರವ್ಯದ ಸೂಕ್ಷ್ಮಾತಿಸೂಕ್ಷ್ಮ ಭಾಗ

**ಪರಮಾಣುಮಾರ್ಗ** – ಪರಮಾಣುಗಳ ಹಾದಿ, ಆಕಾಶ
**ಪರಮಾತ್ಮ** – ಶ್ರೇಷ್ಠ ಚೈತನ್ಯ; ದೇವರು; (ಜೈನ) ಜಿನ; ಕೇವಲಜ್ಞಾನಿ
**ಪರಮಾನಂದ** – ಮಹದಾನಂದ; ಅದನ್ನು ಪಡೆದವನು
**ಪರಮಾನುಗ್ರಹ** – ಅತ್ಯುತ್ಕೃಷ್ಠ ಅನುಗ್ರಹ
**ಪರಮಾಯು(ಷ್ಯ)** – (ಜೈನ) ಒಂದು ಪೂರ್ವಕೋಟಿ ಪ್ರಮಾಣದ ಜೀವಿತಾವಧಿ
**ಪರಮಾರಾಧ್ಯ** – ಪರಮ ಪೂಜ್ಯ ವ್ಯಕ್ತಿ
**ಪರಮಾರ್ಥ** – ಮೋಕ್ಷ
**ಪರಮಾರ್ಥಂ** – ನಿಶ್ಚಯವಾಗಿ
**ಪರಮಾರ್ಥಂಗೆಯ್** – ನಿರ್ಧಾರಗೊಳಿಸು
**ಪರಮಾರ್ಥತೆ** – ಮೋಕ್ಷಸಾಧನೆ
**ಪರಮಾಶೀರ್ವಾಧ** – ಅತ್ಯುತ್ಕೃಷ್ಟ ಆಶೀರ್ವಾದ
**ಪರಮಾಶ್ಚರ್ಯ** – ಭಾರಿ ಅಚ್ಚರಿ
**ಪರಮೆ** – ದುಂಬಿ
**ಪರಮೇಶ** – ಎಲ್ಲರಿಗಿಂತ ದೊಡ್ಡ ಒಡೆಯ
**ಪರಮೇಶ್ವರ** – ಪರಮೇಶ
**ಪರಮೇಶ್ವರಾವತಾರ** – ಶಿವನ ಅಂಶಸಂಜಾತ, ಅಶ್ವತ್ಥಾಮ
**ಪರಮೇಶ್ವರಿ** – ಎಲ್ಲರಿಗಿಂತ ದೊಡ್ಡ ಒಡತಿ
**ಪರಮೇಷ್ಠಿ** – ಬ್ರಹ್ಮ; (ಜೈನ) ತೀರ್ಥಂಕರ
**ಪರಮೋದಯ** – ಅತ್ಯುತ್ಕೃಷ್ಠವಾದ ಏಳಿಗೆ
**ಪರಮೌದಾರಿಕ** – (ಜೈನ) ಘಾತಿಕರ್ಮ ನಾಶವಾಗಿ ಅರ್ಹದವಸ್ಥೆಯಲ್ಲಿರುವ ಜೀವ
**ಪರಯ** – ಹರೆಯ, ಯೌವನ
**ಪರರಾಜ** – ಶತ್ರುರಾಜ
**ಪರರಾಜಕ** – ಶತ್ರುಸಮೂಹ
**ಪರಲ್** – ಕಲ್ಲಿನ ಹರಳು; ರತ್ನ
**ಪರಲೋಕಕ್ರಿಯೆ** – ಅಪರಕಾರ್ಯ
**ಪರಲೋಕಸುಖ** – ಸ್ವರ್ಗಸುಖ
**ಪರಲೋಕಿ** – ಬೇರೆಯ ಲೋಕದ ಜೀವಿ
**ಪರವಧು** – ಬೇರೆಯವನ ಹೆಂಡತಿ
**ಪರವರಿ** – ನೆಲೆವನೆ
**ಪರವಶ** – ಮೂರ್ಛೆ
**ಪರವಶತೆ** – ಪರಾಧೀನತೆ; ತಲ್ಲೀನನಾಗಿರುವುದು
**ಪರವಶೆ** – ಮೈಮರೆತವಳು
**ಪರವಸ** – (ಪರವಶ) ಮೈಮರೆವು
**ಪರವಸಂಗೊಳ್** – ಉದ್ವೇಗಕ್ಕೊಳಗಾಗು
**ಪರವಾದಿ** – ಮತ್ತೊಂದು ಮತದ ಪರವಾದವನು
**ಪರವಿದ್ಧ** – ಎದುರಿರದ ವಸ್ತುವನ್ನು ಚಿತ್ರಿಸುವುದು
**ಪರವೆಣ್** – ಪರವಧು
**ಪರವೋಗು** – ದೂರದೆಡೆಗೆ ಹೋಗು
**ಪರವ್ಯಪದೇಶ** – (ಜೈನ) ಶಿಕ್ಷಾವ್ರತದ ಒಂದು ಆಚಾರ; ಪಾತ್ರದಾನಕ್ಕೆ ಅತಿಥಿಯನ್ನು ಕರೆತರಲು ಸಂಬಂಧಿಕನಲ್ಲದವನಿಗೆ ಹೇಳುವುದು
**ಪರವ್ಯೂಹ** – ಶತ್ರುಸೈನ್ಯ
**ಪರಶು** – ಗಂಡುಗೊಡಲಿ
**ಪರಶುಧರ** – ಗಂಡುಗೊಡಲಿಯನ್ನು ಹಿಡಿದವನು, ಪರಶುರಾಮ
**ಪರಶುರಾಮ** – ಜಮದಗ್ನಿಯ ಮಗ
**ಪರಶುಶರ** – ಕೊಡಲಿಯಾಕಾರದ ಬಾಣ
**ಪರಸಮಯ** – ಅನ್ಯ ಮತಧರ್ಮ
**ಪರಸಮಯಿ** – ಅನ್ಯ ಮತಧರ್ಮಕ್ಕೆ ಸೇರಿದವನು
**ಪರಸು** – ಆಶೀರ್ವದಿಸು; ಹರಕೆ ಮಾಡಿಕೊ; ಪರಶು
**ಪರಸೇವೆ** – ಬೇರೆಯವರ ಊಳಿಗ
**ಪರಸ್ಪರೋದೀರೀತ** – (ಜೈನ) ನಾರಕರು ಪರಸ್ಪರರು ಕೊಡುವ ದುಃಖ
**ಪರಹಿತ** – ಅನ್ಯಹಿತ; ಉಪಕಾರಬುದ್ಧಿ(ಯುಳ್ಳವನು)
**ಪರಹಿತಚರಿತ** – ಪರೋಪಕಾರದ ಸ್ವಭಾವದವನು
**ಪರಹಿತವ್ಯಸನಿ** – ಪರೋಪಕಾರದಲ್ಲಿ ಅತ್ಯಾಸಕ್ತ
**ಪರಾಂಗಣ** – ಅಂಗಳದ ಹಿಂಭಾಗ
**ಪರಾಂಗನಾವಿರತಿವ್ರತ** – ಅನ್ಯಸ್ತ್ರೀಯಲ್ಲಿ ಮೋಹಗೊಳ್ಳದಿರುವ ವ್ರತ
**ಪರಾಂಗನಾಸ್ಪೃಹೆ** – ಅನ್ಯಸ್ತ್ರೀಯಲ್ಲಿನ ಆಸಕ್ತಿ
**ಪರಾಂಗನೆ** – ಅನ್ಯಸ್ತ್ರೀ
**ಪರಾಕ್ರಮ** – ಶೌರ್ಯ
**ಪರಾಗ** – ಹೂವಿನ ಧೂಳಿ
**ಪರಾಗಪಾಂಸು** – ಪರಾಗ
**ಪರಾಙ್ಮುಖ** – ಬೇರೆಡೆಗೆ ಮುಖ ತಿರುಗಿಸಿದವನು
**ಪರಾಜಿತ** – ಸೋತುಹೋದ
**ಪರಾಧೀನ** – ಬೇರೆಯವರ ಅಧೀನದಲ್ಲಿರುವ
**ಪರಾಭವ** – ಸೋಲು, ಅವಮಾನ
**ಪರಾಭವಿಸು** – ಸೋಲಿಸು; ಅವಮಾನಿಸು
**ಪರಾಭೂತ** – ಸೋತವನು
**ಪರಾಭೂತಿ** – ಸೋಲು, ಅವಮಾನ
**ಪರಾಭೂತಿವೆಱು** – ಅವಮಾನ ಹೊಂದು
**ಪರಾಮರ್ಶೆ** – ವಿವೇಚನೆ
**ಪರಾಮೃಷ್ಟ** – ನಾಶವಾದುದು
**ಪರಾಯಣ** – ತತ್ಪರ
**ಪರಾರ್ಜಿತ** – ಬೇರೆಯವರಿಗೆ ದೊರಕಿದ
**ಪರಾರ್ಥಚರಿತ** – ಅನ್ಯರ ಹಿತದಲ್ಲಿ ಆಸಕ್ತ
**ಪರಾರ್ಥಪರ** – ಪರಾರ್ಥಚರಿತ
**ಪರಾರ್ಥಸ್ಪೃಹೆ** – ಅನ್ಯರ ಹಿತದಲ್ಲಿ ಆಸಕ್ತಿ
**ಪರಾರ್ಥಹರ** – ಸತ್ರುಗಳ ಸಂಪತ್ತು ದೋಚುವವನು
**ಪರಾರ್ಥಾಪಹಾರ** – ಅನ್ಯರ ಸಂಪತ್ತು ಕದಿಯುವವನು
**ಪರಾರ್ಥ್ಯ** – ಅತ್ಯುತ್ಕೃಷ್ಟವಾದ
**ಪರಾರ್ಧ್ಯ** – ಅತ್ಯುತ್ಕೃಷ್ಟವಾದ
**ಪರಾವರ್ತನ** – ಸುತ್ತುಹಾಕುವುದು; ಬದಲಾವಣೆ

**ಪರಾವೃತ್ತವದನ** – ಮುಖ ತಿರುಗಿಸಿಕೊಂಡ(ವನು)
**ಪರಾಶರ** – ವ್ಯಾಸಮುನಿಯ ತಂದೆ, ಸ್ಮೃತಿಕಾರ
**ಪರಾಸು** – ಪರ+ಅಸು, ಪ್ರಾಣ ಹೋದ
**ಪರಿ** – ಹರಿ, ಮುಂದೆ ಸರಿ; ರೀತಿ
**ಪರಿಕಣಿ** – ಹರಿಯುವ ಜಾಡು, ಕಾಲುವೆ
**ಪರಿಕರ** – ಸಂಬಂಧಿಸಿದ ಸಾಮಗ್ರಿ; ಸಮೀಪ; **ಸಮೂಹ**–
**ಪರಿಕರಿತ** – ಒಡಗೂಡಿದ
**ಪರಿಕಲಿತ** – ಒಗ್ಗೂಡಿದ
**ಪರಿಕಲಿಸು** – ಕೂಡು, ಸೇರು
**ಪರಿಕಲ್ಪಂಗೆಯ್** – ನಿರ್ಧರಿಸು
**ಪರಿಕಲ್ಪಿತ** – ನಿರ್ಧಾರಗೊಂಡ
**ಪರಿಕಲ್ಪಿಸು** – ಪರಿಕಲ್ಪಂಗೆಯ್
**ಪರಿಕಾಲ್** – ಕಾಲುವೆ
**ಪರಿಕಾಱ** – ಓಡುವವನು; ದೂತ
**ಪರಿಕಿಸು** – (ಪರೀಕ್ಷಿಸು) ಪರಿಶೀಲಿಸು
**ಪರಿಕೃತ** – ಸುತ್ತುವರಿಯಲ್ಪಟ್ಟ
**ಪರಿಕ್ರಮ** – ಸುತ್ತುವುದು, ಸಂಚಾರ
**ಪರಿಕ್ರಮಸಂದಿ** – ಶತ್ರುವಿನೊಡನೆ ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಶತ್ರುವಿಗೆ ಅರ್ಧ ಸಂಪತ್ತಿತ್ತು ಮಾಡಿಕೊಳ್ಳುವ ಸಂಧಾನ
**ಪರಿಕ್ರುದ್ಧ** – ಬಹಳ ಕೋಪಗೊಂಡ
**ಪರಿಕ್ಷಯ** – ವಿನಾಶ
**ಪರಿಕ್ಷುಬ್ಧ** – ಅಲ್ಲೋಲಕಲ್ಲೋಲ
**ಪರಿಕ್ಷೇಪ** – ಸುತ್ತುಗಟ್ಟುವುದು
**ಪರಿಖಂಡಿತ** – ಸಂಪೂರ್ಣ ಹಾಳಾದ
**ಪರಿಖಚಿತ** – ಸೇರಿಸಿದ
**ಪರಿಖಾಚಕ್ರ** – ಕಂದಕದ ಸುತ್ತು
**ಪರಿಖಾತ** – ಕಂದಕ
**ಪರಿಖಾವಾರಿ** – ಕಂದಕದ ನೀರು
**ಪರಿಖೆ** – ಪರಿಖಾತ
**ಪರಿಗತ** – ಆವರಿಸಲ್ಪಟ್ಟ; ತುಂಬಿದ
**ಪರಿಗೃಹೀತ** – ಸ್ವೀಕರಿಸಲಾದ
**ಪರಿಗೆ** – ಗುರಾಣಿ, ಅಡ್ಡಣ
**ಪರಿಗೆಕಾಱ** – ಗುರಾಣಿಯೋಧ
**ಪರಿಗೆಡು** – ಹದಗೆಡು, ರೀತಿಗೆಡು
**ಪರಿಗೊಳ್** – ಪಲಾಯನ ಮಾಡು; ಹರಡು
**ಪರಿಗ್ರಹ** – ಸ್ವೀಕರಣ; ಸಂಸಾರ; (ಜೈನ) ಮಮತೆ
**ಪರಿಘ** – ಅಗುಳಿ; ಕಬ್ಬಿಣದ ಒಂದು ಆಯುಧ
**ಪರಿಘೂರ್ಣಿತ** – ಮೊರೆಯುತ್ತಿರುವ
**ಪರಿಘೋಷ** – ಮೊರೆತ
**ಪರಿಚಯ** – ಸಲಿಗೆ
**ಪರಿಚಯಂಬಡೆ** – ಸೇರು
**ಪರಿಚರ** – ತಿರುಗಾಟ
**ಪರಿಚರ್ಯ(ರ್ಯೆ)** – ಸೇವೆ
**ಪರಿಚಾರಕ** – ಸೇವೆ (ಮಾಡುವವನು)
**ಪರಿಚಾರಕತ್ವ** – ಊಳಿಗ
**ಪರಿಚಾರಕಿ** – ಸೇವಕಿ
**ಪರಿಚಾರಿಕೆ** – ಪರಿಚಾರಕಿ
**ಪರಿಚಿತ** – ತುಂಬಿದ; ತಿಳಿದ
**ಪರಿಚುಂಬಿಸು** – ಮುತ್ತಿಡು
**ಪರಿಚೆ(ಜೆ)** – ಸುಗಂಧ ದ್ರವ್ಯ; ಅನುಲೇಪನ
**ಪರಿಚೋದಿಸು** – ಮುನ್ನುಗ್ಗಿಸು
**ಪರಿಚ್ಛದ** – ಮುಸುಕು
**ಪರಿಚ್ಛೇದ** – ಕತ್ತರಿಸುವುದು; ನಿರ್ಣಯ, ನಿಷ್ಕರ್ಷೆ
**ಪರಿಚ್ಛೇದಂಗೆಯ್** – ತುಂಡರಿಸು; ನಿರ್ಧರಿಸು
**ಪರಿಚ್ಛೇದಿ** – ನಿರ್ಧರಿಸಿದವನು
**ಪರಿಚ್ಛೇದಿಸು** – ಪರಿಚ್ಛೇದಂಗೆಯ್
**ಪರಿಚ್ಯುತ** – ಬಿದ್ದ(ವನು); ಚೆಲ್ಲಿಹೋದ
**ಪರಿಜನ** – ಸೇವಕಜನ
**ಪರಿಜಪನಂಗೆಯ್** – ಜಪ ಮಾಡು
**ಪರಿಜು** – ಆಕಾರ; ಪ್ರತಿಮೆ; ರೀತಿ, ಬಗೆ; ಭಂಗಿ; ವೇಷ
**ಪರಿಠವಿಸು** – ನೇಮಿಸು
**ಪರಿಡೋಣಿ** – ನೀರು ಹರಿಯುವ ದೋಣಿ
**ಪರಿಣತ** – ಪಕ್ವವಾದ; ಸಮರ್ಥ; ನಿಪುಣ
**ಪರಿಣತಮತಿ** – ಪಕ್ವ ಬುದ್ಧಿ
**ಪರಿಣತವಯಸ** – ಮುದುಕ
**ಪರಿಣತಿ** – ಪಾಂಡಿತ್ಯ; ಬಗ್ಗುವಿಕೆ
**ಪರಿಣತಿವಡೆ** – ಪಕ್ವತೆಯನ್ನು ಪಡೆ
**ಪರಿಣತಿಸುಖ** – ಅಂತಿಮ ಸುಖ; ಗರಿಷ್ಠ ಸುಖ
**ಪರಿಣತೆ** – ಪಾಂಡಿತ್ಯ
**ಪರಿಣದ್ಧ** – ಬಿಕ್ಕಟ್ಟಾದ
**ಪರಿಣಯನ** – ಮದುವೆ
**ಪರಿಣಯನಗೃಹ** – ಮದುವೆ ಮಂಟಪ
**ಪರಿಣಯನೋತ್ಸವ** – ಮದುವೆಯ ಸಮಾರಂಭ
**ಪರಿಣಯೋತ್ಸವ** – ಪರಿಣಯನೋತ್ಸವ
**ಪರಿಣಾಮಪಥ್ಯ** – ಕೊನೆಗೆ ಮಂಗಳಕರವಾದ
**ಪರಿಣಾಮರಮಣೀಯ** – ಕೊನೆಗೆ ಚಂದವಾಗುವುದು
**ಪರಿಣಾಮಶುದ್ಧಿ** – (ಜೈನ) ಮನಃಪರಿಪಾಕ
**ಪರಿಣಾಹ** – ವೈಶಾಲ್ಯ, ಹರಹು
**ಪರಿಣಿಚಿತ** – ತುಂಬಿಕೊಂಡ
**ಪರಿಣೀತ** – ಸುತ್ತುವರಿದ; ಮದುವೆಯಾದ
**ಪರಿತಂ** – ಎದುರಾಗಿ
**ಪರಿತಪ್ತ** – ಚೆನ್ನಾಗಿ ಕಾದ; ದುಃಖಗೊಂಡ
**ಪರಿತರ್** – ಧಾವಿಸು; ಆಗಮಿಸು; ಹರಿದು ಬರು
**ಪರಿತಾಪ** – ಬೇಗುದಿ; ಕಾವು
**ಪರಿತಾಪಿತ** – ಬೇಗುದಿಗೊಂಡ
**ಪರಿತುಷ್ಟ** – ತೃಪ್ತಿವಡೆದ
**ಪರಿತುಷ್ಟಿ** – ಪೂರ್ಣ ತೃಪ್ತಿ
**ಪರಿತೃಪ್ತ** – ಸಂತೃಪ್ತ
**ಪರಿತುಷ್ಟಿವೆಱು** – ಸಂತೃಪ್ತಿಪಡೆ
**ಪರಿತೋಷ** – ಸಂತೃಪ್ತಿ

**ಪರಿತ್ಯಕ್ತ** – ತ್ಯಜಿಸಲ್ಪಟ್ಟ
**ಪರಿತ್ಯಜನ** – ಬಿಟ್ಟುಬಿಡುವುದು
**ಪರಿತ್ಯಾಗ** – ಪರಿತ್ಯಜನ
**ಪರಿತ್ರಾಸ** – ಭಯ
**ಪರಿದಿಟ್ಟಿ** – ಚಂಚಲ ದೃಷ್ಟಿ
**ಪರಿದೇವನ** – ಗೋಳಾಟ
**ಪರಿಧಾನ** – ಉಡುವ ಬಟ್ಟೆ
**ಪರಿಧಾವನ** – ಧಾವಿಸುವುದು
**ಪರಿಧಿ** – ಸುತ್ತುಗೋಡೆ; ಪ್ರಭಾಮಂಡಲ
**ಪರಿಧೂತ** – ತ್ಯಜಿಸಲ್ಪಟ್ಟ
**ಪರಿಧೌತ** – ಚೆನ್ನಾಗಿ ತೊಳೆದ
**ಪರಿನಾಳ** – ನೀರು ಹರಿಯುವ ಕಾಲುವೆ
**ಪರಿನಾಳಿಕೆ** – ಪರಿನಾಳ
**ಪರಿನಿರ್ಮಿತ** – ಚೆನ್ನಾಗಿ ರಚಿತವಾದ
**ಪರಿನಿರ್ವಾಣ** – (ಜೈನ) ಅರ್ಹಂತನ ದೇಹಾವಸಾನ
**ಪರಿನಿರ್ವಾಣಕಲ್ಯಾಣ** – (ಜೈನ) ಅರ್ಹಂತನ ದೇಹಸಂಸ್ಕಾರ; ಪಂಚಕಲ್ಯಾಣಗಳಲ್ಲಿ ಕೊನೆಯದು
**ಪರಿನಿರ್ವಾಣಕ್ರಿಯೆ** – (ಜೈನ) ಅರ್ಹಂತನ ದೇಹಾವಸಾನ ಸಮಯದಲ್ಲಿ ಮಾಡುವ ಉತ್ಸವ
**ಪರಿನಿರ್ವಾಣಕ್ಷೇತ್ರ** – (ಜೈನ) ಅರ್ಹಂತನ ದೇಹಾವಸಾನದ ಜಾಗ
**ಪರಿನಿರ್ವಾಣಪೂಜೆ** – (ಜೈನ) ಪರಿನಿರ್ವಾಣಕ್ರಿಯೆ
**ಪರಿನಿರ್ವಾಣಮಹೋತ್ಸವ** – (ಜೈನ) ಪರಿನಿರ್ವಾಣಕಲ್ಯಾಣ
**ಪರಿನಿರ್ವೃತಿ** – ಪರಿನಿರ್ವಾಣ
**ಪರಿನಿರ್ವೃತಿಭೂಮಿ** – ಪರಿನಿರ್ವಾಣಕ್ಷೇತ್ರ
**ಪರಿನಿರ್ವೇಗ** – ಪರಮ ವೈರಾಗ್ಯ
**ಪರಿನಿಷ್ಕ್ರಮಣ** – (ಜೈನ) ತೀರ್ಥಂಕರನು ಸಂಸಾರದಲ್ಲಿ ವಿರಕ್ತಿಯನ್ನು ಹೊಂದಿ ತಪಸ್ಸಿಗೆ ಹೋಗುವುದು
**ಪರಿನಿಷ್ಕ್ರಮಣಕಲ್ಯಾಣ** – (ಜೈನ) ಪಂಚಕಲ್ಯಾಣಗಳಲ್ಲಿ ಒಂದು; ತೀರ್ಥಂಕರನು ತಪಸ್ಸಿಗೆ ತೆರಳುವ ಸಂದರ್ಭದಲ್ಲಿ ನಡೆಸುವ ಉತ್ಸವ
**ಪರಿನಿಷ್ಕ್ರಾಂತಿಮಹೋತ್ಸವ** – ಪರಿನಿಷ್ಕ್ರಮಣಕಲ್ಯಾಣ
**ಪರಿನೀರ್** – ಹರಿಯುವ ನೀರು; ಕಾಲುವೆ
**ಪರಿನ್ಯಸ್ತ** – ಇಡಲ್ಪಟ್ಟ
**ಪರಿಪಂಥಿ** – ಶತ್ರು; ದ್ವೇಷಿಸುವ
**ಪರಪಂಥಿನಿ** – ಅಡ್ಡಿಯಾದವಳು
**ಪರಿಪಂಥಿಭಾವ** – ವಿರೋಧಿಭಾವ
**ಪರಿಪಕ್ವ** – ಚೆನ್ನಾಗಿ ಬೆಂದ; ಮಾಗಿದ
**ಪರಿಪಠನ** – ಚೆನ್ನಾಗಿ ಓದುವುದು
**ಪರಿಪಠಿತ** – ಚೆನ್ನಾಗಿ ಓದಿದ, ಹೇಳಿದ
**ಪರಿಪಡು** – ಧಾವಿಸು
**ಪರಿಪಥಿಕ** – ಸುತ್ತಾಡುವ, ತಿರುಗಾಡುವ
**ಪರಿಪಾಂಡು(ರ)** – ಅಚ್ಚ ಬಿಳುಪಾದ
**ಪರಿಪಾಂಸು** – ಆವರಿಸಿದ ಧೂಳು
**ಪರಿಪಾಕ** – ಕೊನೆಯ ಪರಿಣಾಮ
**ಪರಿಪಾಕಪಥ್ಯ** – ಹಿತಕರ ಪರಿಣಾಮವುಳ್ಳದು
**ಪರಿಪಾಟಿ** – ಅಚ್ಚುಕಟ್ಟು
**ಪರಿಪಾಟುದಪ್ಪು** – ಕ್ರಮವಿಹೀನವಾಗು
**ಪರಿಪಾತನ** – ಸಂಪೂರ್ಣ ವಿನಾಶ
**ಪರಿಪಾಲನ** – ಕಾಪಾಡುವುದು; ಕೊಟ್ಟ ಮಾತನ್ನು ನೆರವೇರಿಸುವುದು
**ಪರಿಪಾಲಿತ** – ಸಂರಕ್ಷಿತವಾದ
**ಪರಿಪಾಲಿಸು** – ಕಾಪಾಡು
**ಪರಿಪೀಡನ** – ಹಿಂಸಿಸುವುದು
**ಪರಿಪೀತ** – ಕಡು ಹಳದಿ
**ಪರಿಪೀತಾಸವ** – ಹೆಂಡ ಕುಡಿದವನು
**ಪರಿಪುಷ್ಟ** – ಚೆನ್ನಾಗಿ ಪೋಷಣೆಗೊಂಡ
**ಪರಿಪೂಜಿಸು** – ಚೆನ್ನಾಗಿ ಪೂಜಿಸು
**ಪರಿಪೂತ** – ತುಂಬ ಪವಿತ್ರವಾದ
**ಪರಿಪೂರಿತ** – ಆವರಿತವಾದ
**ಪರಿಪೂರಿಸು** – ಆವೃತಗೊಳ್ಳು
**ಪರಿಪೂರ್ಣ** – ಪೂರ್ತಿಯಾದ; ತುಂಬಿದ
**ಪರಿಪೂರ್ಣಚಂದ್ರ** – ಹುಣ್ಣಿಮೆ ಚಂದ್ರ
**ಪರಿಪೂರ್ಣಾಂಗಿ** – ದೋಷರಹಿತವಾದ ದೇಹವುಳ್ಳವಳು
**ಪರಿಪೂರ್ಣಾವಧಿ** – ಪೂರ್ತಿಯಾದ ಕಾಲ
**ಪರಿಪೂರ್ಣೇಂದು** – ಪರಿಪೂರ್ಣಚಂದ್ರ
**ಪರಿಪ್ರಮಾಣ** – ಅಳತೆ
**ಪರಿಪ್ಲವ** – ಚಂಚಲ
**ಪರಿಪ್ಲಾವಿತ** – ತೇಲಾಡುವ
**ಪರಿಬೃಢ** – ಮುಖ್ಯನಾದವನು
**ಪರಿಭವ** – ತಿರಸ್ಕಾರ; ಅವಮಾನ; ಸೋಲು
**ಪರಿಭವಂಬಡಿಸು** – ಅವಮಾನಿಸು
**ಪರಿಭವಂಬಡು** – ಅವಮಾನಗೊಳ್ಳು
**ಪರಿಭವಿಸು** – ತಿರಸ್ಕರಿಸು; ಅವಮಾನಿಸು; ಸೋಲಿಸು
**ಪರಿಭಾವಿಸು** – ಯೋಚಿಸು; ಸೂಕ್ಷ್ಮವಾಗಿ ನೋಡು
**ಪರಿಭಾಷಣ** – ಮಾತನಾಡುವುದು
**ಪರಿಭಾಷಿತ** – ಹೇಳಲ್ಪಟ್ಟ
**ಪರಿಭಾಷೆ** – ವಿವರಣೆ
**ಪರಿಭಾಸಿ** – ಕಾಂತಿಯುಕ್ತವಾದ
**ಪರಿಭೂತ** – ತಿರಸ್ಕೃತವಾದ
**ಪರಿಭೃತ** – ಸಂರಕ್ಷಿತ
**ಪರಿಭೋಗ** – ಸಂತೋಷ
**ಪರಿಭ್ರಮ(ಣ)** – ಸುತ್ತಾಡುವಿಕೆ; ತಿರುಗುವಿಕೆ
**ಪರಿಭ್ರಮಣಂಗೆಯ್** – ತಿರುಗು; ಅಲೆ
**ಪರಿಭ್ರಮಿಸು** – ಪರಿಭ್ರಮಣಂಗೆಯ್
**ಪರಿಮರ್ದಿಸು** – ಜಜ್ಜು
**ಪರಿಮಲಿ(ಳ)ತ** – ಒಳ್ಳೆಯ ವಾಸನೆಯುಳ್ಳ

**ಪರಿಮಳವಾರಿ** – ಸುವಾಸಿತ ನೀರು
**ಪರಿಮಳಶಾಳ** – ಸುಗಂಧಭರಿತ ಬತ್ತ; ಕಮ್ಮಗಡಲೆ ಬತ್ತ
**ಪರಿಮಳಾಂಬು** – ಪರಿಮಳವಾರಿ
**ಪರಿಮಳೆಯಾಡು** – ಹಾರಾಡು
**ಪರಿಮಾಣಪರಿಗ್ರಹವ್ರತ** – (ಜೈನ) ಆವಶ್ಯಕವಾದಷ್ಟು ಮಾತ್ರ ಹೊಂದಿರುವ ವ್ರತ
**ಪರಿಮಿತ** – ಮಿತಿಯಾದ
**ಪರಿಮಿತಪರಿಗ್ರಹ** – ಪರಿಮಾಣಪರಿಗ್ರಹವ್ರತ
ಪರಿಮಿಶ್ರಿತ – ಚೆನ್ನಾಗಿ ಬೆರಕೆಗೊಂಡ–
**ಪರಿಮಿಳತ್** – ಸಡಗರ
**ಪರಿಮುತ್ತುಗೊಳ್** – ಆವರಿಸು
**ಪರಿಮೃತ** – ಸತ್ತುಹೋದವನು
**ಪರಿಮ್ಲಾನ** – ಹೆಚ್ಚು ಕಳೆಗುಂದಿದ
**ಪರಿಮ್ಲಾನತೆ** – ಕಳೆಗುಂದುವಿಕೆ
**ಪರಿಯ(ಯಾ)ಣ** – ಹರಿವಾಣ, ತಟ್ಟೆ
**ಪರಿಯಷ್ಟಿ** – ಶುಶ್ರೂಷೆ
**ಪರಿಯಳ** – ಪರಿಯ(ಯಾ)ಣ
**ಪರಿಯಿಡು** – ರಭಸದಿಂದ ಮುನ್ನುಗ್ಗು
**ಪರಿಯಿಸು** – ಓಡಿಸು
**ಪರಿಯುಕ್ತ** – ಚೆನ್ನಾಗಿ ಸೇರಿದ
**ಪರಿರಂಜಿತ** – ಚೆನ್ನಾಗಿ ಹೊಳೆಯುವ
**ಪರಿರಂಭ(ಣ)** – ಆಲಿಂಗನ
**ಪರಿರಂಭಿಸು** – ಅಲಿಂಗಿಸಿಕೊ
**ಪರಿರಕ್ಷಣ** – ಸಂರಕ್ಷಣೆ
**ಪರಿರಕ್ಷಿಸು** – ಸಂರಕ್ಷಿಸು
**ಪರಿಲಂಬ** – ವಿಳಂಬ; ಸಲಕರಣೆ
**ಪರಿಲಂಬಿ** – ತೂಗಾಡುತ್ತಿರುವ
**ಪರಿಲಬ್ಧ** – ಸಂಪಾದಿಸಿದ
**ಪರಿಲಿಪ್ತ** – ಚೆನ್ನಾಗಿ ಬಳಿದ
**ಪರಿವಡಿಗೆಯ್** – ಅನುಕ್ರಮವಾಗಿ ಪಠಿಸು
**ಪರಿವರ್ಣನ** – ಒಳ್ಳೆಯ ಬಣ್ಣನೆ
**ಪರಿವರ್ತನ** – ಸುತ್ತುವಿಕೆ; ಬದಲಾವಣೆ
**ಪರಿವರ್ತಿತ** – ಬದಲಾವಣೆಗೊಂಡ
**ಪರಿವರ್ತಿಸು** – ಬದಲಾಯಿಸು
**ಪರಿವರ್ಧಕ** – ಅಭಿವೃದ್ಧಿಗೊಳ್ಳುವುದು; ಕುದುರೆಯನ್ನು ಸಾಕುವವನು
**ಪರಿವಳಿಯಾಗು** – ಚೂರುಚೂರಾಗು
**ಪರಿವಾದ** – ಅಪವಾದ; ನಿಂದೆ
**ಪರಿವಾದಕ** – ನಿಂದಕ; ವಾದ್ಯಗಾರ
**ಪರಿವಾದಿನಿ** – ಏಳು ತಂತಿಗಳ ವೀಣೆ
**ಪರಿವಾರ** – ಸುತ್ತಲಿನ ಜನ
**ಪರಿವಾರದೇವಿ** – (ಜೈನ) ಕಲ್ಪಾದಿಗಳ ಇಂದ್ರಸೇವೆ ಮಾಡುವ ಸ್ತ್ರೀ
**ಪರಿವಾರಾಂಗನೆ** – ಸೇವಕಿ
**ಪರಿವಾರಿಕೆ** – ಪರಿವಾರದೇವಿ
**ಪರಿವಾರಿಸು** – ಸೇವೆಗೈ
**ಪರಿವಾಸ** – ನೆಲೆ ನಿಲ್ಲುವಿಕೆ
**ಪರಿವಾಹ** – ಹರಿಯುವುದು
**ಪರಿವಿಡಿ** – ಅನುಕ್ರಮ, ಪರಂಪರೆ
**ಪರಿವಿ(ವ)ಡಿಗೆಯ್** – ಕ್ರಮವಾಗಿ ಹೇಳು, ಓದು; ಕ್ರಮಗೊಳಿಸು; ಉಪಕ್ರಮಿಸು
**ಪರಿವಿಷ್ಟ** – ಸುತ್ತುವರಿದ
**ಪರಿವೀಕ್ಷಿಸು** – ಚೆನ್ನಾಗಿ ನೋಡಿ
**ಪರಿವೀಜನ** – ಗಾಳಿ ಬೀಸುವಿಕೆ
**ಪರಿವೃಢ** – ಒಡೆಯ; ಶ್ರೇಷ್ಠವಾದ
**ಪರಿವೃತ** – ಆವೃತಗೊಂಡ
**ಪರಿವೃತ್ತ** – ದುಂಡಾದ
**ಪರಿವೃದ್ಧಿವೆಱು** – ಏಳಿಗೆ ಹೊಂದು
**ಪರಿವೆಸ** – ಪರಿಚಾರಿಕೆ
**ಪರಿವೆಸವೋಗು** – ಪರಿಚಾರಿಕೆ ಮಾಡು
**ಪರಿವೇದಿ** – ಜ್ಞಾನಿ
**ಪರಿವೇಷ** – ಸುತ್ತುವರಿಯುವಿಕೆ
**ಪರಿವೇಷಂಗೊಳ್** – (ಪ್ರಭಾಮಂಡಲದಿಂದ) ಸುತ್ತುವರಿ
**ಪರಿವೇಷ್ಟಿತ** – ಸುತ್ತಲ್ಪಟ್ಟ
**ಪರಿವೇಷ್ಟಿಸು** – ಬಳಸು, ಸುತ್ತುಗಟ್ಟು
**ಪರಿವೊಟ್ಟೆಯವರ್** – ಒಂಟೆಯ ಮೇಲೆ ಸಾಗುವ ದೂತರು
**ಪರಿವೊನಲ್** – ಹರಿಯುವ ಹೊಳೆ
**ಪರಿವ್ರಾಜಕ** – ಪರ್ಯಟನಕಾರ; ಸನ್ಯಾಸಿ
**ಪರಿವ್ರಾಜಿಕೆ** – ಸನ್ಯಾಸಿನಿ, ವಿರಕ್ತೆ
**ಪರಿಶಂಕೆ** – ಹೆದರಿಕೆ
**ಪರಿಶೇಷ** – ಉಳಿಕೆ
**ಪರಿಶ್ರಮ** – ದಣಿವು
**ಪರಿಶ್ರಾಂತ** – ದಣಿದ
**ಪರಿಶ್ರಾಂತೆ** – ಬಳಲಿದವಳು
**ಪರಿಷಜ್ಜನ** – ಪರಿಷತ್+ಜನ, ಸಭೆಯ ಜನ
**ಪರಿಷತ್** – ಆಸ್ಥಾನ
**ಪರಿಷದ್ವಲಯ** – ಸಭೆ
**ಪರಿಷನ್ಮಂಡಲ** – ಪರಿಷದ್ವಲಯ
**ಪರಿಷೇಕ** – ಸುತ್ತು ಕಟ್ಟುವಿಕೆ; ಸಿಂಪಡಿಸುವಿಕೆ
**ಪರಿಷ್ಕೃತಿ** – ಆಭರಣ
**ಪರಿಷ್ವಂಗ** – ಅಪ್ಪುಗೆ
**ಪರಿಸಂಖ್ಯೆ** – ಆವೃತ್ತಿ; ಎಣಿಕೆ; ಮೊತ್ತ
**ಪರಿಸಂಭ್ರಮ** – ಸಡಗರ
**ಪರಿಸಮಾಪ್ತ** – ಮುಗಿಸಿದ; ಕೊನೆಗಂಡ
**ಪರಿಸಮಾಪ್ತಿ** – ಮುಗಿವು
**ಪರಿಸರ** – ಸಮೀಪ; ಪ್ರದೇಶ
**ಪರಿಸೂತ್ರ** – ಮಧ್ಯಭಾಗ
**ಪರಿಸ್ಖಲನ** – ಹೊಡೆತ, ತಾಗುವಿಕೆ
**ಪರಿಸ್ಖಲಿತ** – ಜಾರಿ ಬಿದ್ದ
**ಪರಿಸ್ತರಣ** – ಸುತ್ತ ಹಾಸುವುದು
**ಪರಿಸ್ಪಂದ(ನ)** – ಅಲುಗಾಟ, ಕಂಪನ

**ಪರಿಸ್ಫುಟ(ಂ)** – ಸ್ಪಷ್ಟವಾದ(ಗಿ)
**ಪರಿಸ್ಫುರಿತ** – ಹೊಮ್ಮಿದ; ಹೊಳೆಯುವ
**ಪರಿಸ್ರವಣಿ** – ಮದ್ಯ
**ಪರಿಸ್ರುತಿ** – ಪರಿಸ್ರವಣಿ
**ಪರಿಹರಿಸು** – ಹೋಗಲಾಡಿಸು; ತ್ಯಜಿಸು
**ಪರಿಹರ್ತವ್ಯ** – ದೂರಸರಿಸಬೇಕಾದ; ತ್ಯಜಿಸಬೇಕಾದ
**ಪರಿಹಸಿತ** – ನಗುವಿಗೀಡಾದ
**ಪರಿಹಾರವಿಶುದ್ಧಿ(ಕ್ರಿಯೆ)** – (ಜೈನ) ಸಮ್ಯಗ್ದರ್ಶನದ ವಿಶುದ್ಧಿ
**ಪರಿಹಾರಶುದ್ಧಿ** – ಪರಿಹಾರವಿಶುದ್ಧಿ
**ಪರಿಹಾರ್ಯ** – ತೊರೆಯಬೇಕಾದ
**ಪರಿಹಾಸ** – ಹಾಸ್ಯ, ವಿನೋದ
**ಪರಿಹಾಸಕೇಳ** – ವಿನೋದದಾಟ
**ಪರಿಹೃತ** – ನಿವಾರಣೆಗೊಂಡ; ತ್ಯಜಿಸಲಾದ
**ಪರೀಕ್ಷಕ** – ಪರೀಕ್ಷೆ ಮಾಡುವವನು
**ಪರೀಕ್ಷಿಸು** – ಪರಿ+ಈಕ್ಷಿಸು, ಚೆನ್ನಾಗಿ ನೋಡಿ
**ಪರೀಕ್ಷೆ** – ಸೂಕ್ಷ್ಮ ಪರಿಶೀಲನೆ
**ಪರೀತ** – ಸುತ್ತಲ್ಪಟ್ಟ; ಒಳಗೊಂಡಿರುವ; ದೋಣಿ
**ಪರೀಷಹ** – (ಜೈನ) ತಪಶ್ಚರಣಕ್ಕೆ ಇರುವ ಇಪ್ಪತ್ತೆರಡು ಬಗೆಯ ಅಡ್ಡಿಗಳು: ಹಸಿವು, ಬಾಯಾರಿಕೆ, ಚಳಿ, ಉಷ್ಣ, ಸೊಳ್ಳೆ ಮುಂತಾದವುಗಳ ಕಚ್ಚುವಿಕೆ, ಬತ್ತಲೆಯಿರುವುದರಿಂದಾಗುವ ತೊಂದರೆಗಳು, ಅರತಿ, ಸ್ತ್ರೀವಿರಹ, ಸಂಚಾರಬಾಧೆ, ಶಯ್ಯಾಬಾಧೆ, ಆಸನಬಾಧೆ, ಬೈಗುಳ, ಯಾಚನೆಯಿಂದಾಗುವ ತೊಂದರೆಗಳು, ಹೊಡೆತ, ಭಿಕ್ಷೆ ದೊರೆಯದ ಖೇದ, ತಪಸ್ಸಿಗೆ ತಕ್ಕ ಫಲ ಸಿಕ್ಕದಿರುವುದು, ರೋಗ, ಮುಳ್ಳುಕಲ್ಲುಗಳಿಂದ ತೊಂದರೆ, ಅಹಂಕಾರ, ಅಜ್ಞಾನದ ಕೊರಗು, ಸ್ನಾನವಿರದ್ದರಿಂದಾಗುವ ಬಾಧೆ, ಜನರಿಂದ ಪುರಸ್ಕಾರ ದೊರೆಯದಿರುವುದು
**ಪರೀಷಹಜಯ** – (ಜೈನ) ಪರೀಷಹಗಳನ್ನು ಮೀರುವುದು
**ಪರುಷ** – ಕಠಿಣವಾದ; ನಿಷ್ಠುರವಾದ
**ಪರುಷಾಟವಿ** – ಘೋರ ಅರಣ್ಯ
**ಪರುಷೇಕ್ಷಣ** – ಭಯಂಕರ ನೋಟ
**ಪರುಸ(ನ)** – ಸ್ಪರ್ಶ(ನ), ಸೋಂಕು
**ಪರುಸ(ಷ)ವೇದಿ** – (ಸ್ಪರ್ಶವೇದಿ) ಲೋಹವನ್ನು ಚಿನ್ನವನ್ನಾಗಿಸುವ ಕಲ್ಲು; ಸ್ಪರ್ಶಶಿಲೆ
**ಪರೆ** – ಹರಡು, ವಿಸ್ತರಿಸು
**ಪರೆಯಿಸು** – ಹಬ್ಬಿಸು; ಹೋಗಲಾಡಿಸು
**ಪರೇಂಗಿತಜ್ಞ** – ಇತರರ ಅಭಿಪ್ರಾಯವನ್ನು ತಿಳಿಯಬಲ್ಲವನು
**ಪರೇತವನ** – (ಪ್ರೇತವನ) ಶ್ಮಶಾನ
**ಪರೋಕ್ಷ** – ಅಗೋಚರ; ದೃಷ್ಟಿದೂರ
**ಪರೋಪಕಾರ** – ಇತರರಿಗೆ ಮಾಡುವ ಸಹಾಯ
**ಪರ್ಚಿಪೇಟಿಲ್** – ಪಿಸುಗುಟ್ಟಿ ಹೇಳು
**ಪರ್ಚು** – ಪಿಸುಗುಡು; ಗುಟ್ಟು
**ಪರ್ಜನ್ಯ** – ಮಳೆ; ಮಳೆಯ ಒಡೆಯ, ಇಂದ್ರ
**ಪರ್ಜನ್ಯಗರ್ಜನ** – ಗುಡುಗು
**ಪರ್ಣ** – ಎಲೆ
**ಪರ್ಣಪುಟ(ಕೆ)** – ಎಲೆಯಿಂದ ಮಾಡಿದ ದೊನ್ನೆ
**ಪರ್ಣಲಘು(ವಿದ್ಯೆ)** – (ಜೈನ) ಶರೀರವನ್ನು ಎಲೆಯಂತೆ ಹಗುರಮಾಡಿಕೊಳ್ಳುವ ವಿದ್ಯೆ
**ಪರ್ದು** – ಹದ್ದು, ಗೃಧ್ರ
**ಪರ್ಪರಿಕೆ** – ಕರ್ಕಶತೆ; ದಿಟ್ಟತನ
**ಪರ್ಪರಿಕೆಗಿಡು** – ಕರ್ಕಶತೆ ಹೋಗು, ಮೃದುವಾಗು
**ಪರ್ಬ** – (ಪರ್ವ) ಉತ್ಸವ
**ಪರ್ಬು(ರ್ವು)** – ಹರಡು; ಕೆದರು
**ಪರ್ಯಂಕ** – ಮಂಚ; ಪಲ್ಲಕ್ಕಿ; ಒಂದು ಆಸನ
**ಪರ್ಯಂಕಾಸನ** – ಎಡಬಲತೊಡೆಗಳನ್ನು ಬಲ ಎಡ ಪಾದಗಳ ಮೇಲಿಟ್ಟು ಕೊಳ್ಳುವ ಆಸನ
**ಪರ್ಯಂಕಿಕೆ** – ಪರ್ಯಂಕ
**ಪರ್ಯಂತ(ಂ)** – ಎಲ್ಲ
**ಪರ್ಯಟನ** – ಸಂಚಾರ; (ಜೈನ) ಸನ್ಯಾಸಿಗಳು ಚರಿಗೆಗಾಗಿ ಮಾಡುವ ಸಂಚಾರ
**ಪರ್ಯವಲೋಕನ** – ಸೂಕ್ಷ್ಮವಾಗಿ ನೋಡುವುದು
**ಪರ್ಯವಸಾನ** – ಮುಕ್ತಾಯ, ಕೊನೆ
**ಪರ್ಯಷ್ಟಿ(ಗೆಯ್)** – ಪರಿಚರ್ಯೆ(ಮಾಡು)
**ಪರ್ಯಾಕುಲ** – ಕಳವಳ
**ಪರ್ಯಾಣ** – (ಪಲ್ಯಯನ) ಕುದುರೆಯ ಜೀನು
**ಪರ್ಯಾಣಕ** – ಹಲ್ಲಣ ಹಾಕಿ ಸಿದ್ಧಗೊಂಡುದು
**ಪರ್ಯಾತೀತ** – ಹೆಚ್ಚಳ
**ಪರ್ಯಾಪ್ತ** – ತುಂಬಿದ
**ಪರ್ಯಾಪ್ತಕ** – (ಜೈನ) ಪರ್ಯಾಪ್ತಿಯನ್ನು ಹೊಂದಿದ ಜೀವ, ನೋಡಿ, 'ಪರ್ಯಾಪ್ತಿ'
**ಪರ್ಯಾಪ್ತಯೋಗ** – ತಪಸ್ಸನ್ನು ಪೂರ್ಣಗೊಳಿಸಿದವನು
**ಪರ್ಯಾಪ್ತಿ** – ಪಡೆಯುವುದು; (ಜೈನ) ನಾಮಪ್ರಕೃತಿಗಳಲ್ಲಿ ಒಂದು; ಶರೀರದ ಪುದ್ಗಲರಚನೆ ಪೂರ್ಣಗೊಂಡಿರುವುದು; ಇದರಲ್ಲಿ ಆರು ಬಗೆ: ಆಹಾರ, ಶರೀರ, ಇಂದ್ರಿಯ, ಶ್ವಾಸೋಚ್ಛ್ವಾಸ, ಭಾಷಾ, ಮನಸ್
**ಪರ್ಯಾಯ** – ಸುತ್ತುವಿಕೆ; ರೀತಿ; ಕ್ರಮ
**ಪರ್ಯಾಯದಪ್ಪು** – ಕ್ರಮ ತಪ್ಪು
**ಪರ್ಯಾಲೋಚನ** – ಚೆನ್ನಾಗಿ ಆಲೋಚಿಸುವುದು
**ಪರ್ಯಾಲೋಚಿತ** – ಚೆನ್ನಾಗಿ ಆಲೋಚಿಸಲಾದ
**ಪರ್ಯುಷಿತ** – ಹಳೆಯ
**ಪರ್ವ** – ಜೋಡಣೆ; ಗೆಣ್ಣು; ಪುಣ್ಯಕಾಲ, ಹಬ್ಬ
**ಪರ್ವತ** – ದೊಡ್ಡ ಬೆಟ್ಟ
**ಪರ್ವತಬಾಣ** – ಬೆಟ್ಟಗಳನ್ನು ಸುರಿಸುವ ಬಾಣ

**ಪರ್ವತಾಧೀಶ್ವರ** – ಹಿಮವಂತ
**ಪರ್ವದಿನ** – (ಜೈನ) ಪೂಜೆಗೆ ಪ್ರಶಸ್ತವಾದ ದಿನ
**ಪರ್ವದಿವಸ** – ಪರ್ವದಿನ
**ಪರ್ವಿಸು** – ಹಬ್ಬಿಸು
**ಪರ್ವು(ರ್ಬು)ಗೆ** – ಹಬ್ಬುಗೆ, ಹರಡುವಿಕೆ
**ಪರ್ವುಗೆದೋಱು** – ಹರಡಿಕೊ
**ಪರ್ವುಗೆವೆಱು** – ಹಬ್ಬು
**ಪರ್ವುಗೊಳ್** – ವಿಸ್ತಾರಗೊಳ್ಳು
**ಪಲ್** – ಹಲ್ಲು
**ಪಲ್ವಱಿಗುಟ್ಟು** – ಹಲ್ಲು ಕಡಿ
**ಪಲ** – ಹಲವು, ಅನೇಕ
**ಪಲ(ಲ)** – ಮಾಂಸ
**ಪಲಂಬರ್** – ಹಲವು ಜನ
**ಪಲ(ವು)ಕಾಲಂ** – ಬಹಳ ಕಾಲದವರೆಗೆ
**ಪಲಗೆ** – (ಫಲಕ) ಹಲಗೆ, ಆಟದ ಹಾಸು; ಗುರಾಣಿ
**ಪಲಗೆಗಟ್ಟು** – ಹಲಗೆಗಳನ್ನು ಜೋಡಿಸಿ ಮಾಡಿದ ಕಟ್ಟು
**ಪಲಗೆಜೂಜು** – ಪಗಡೆ ಜೂಜು
**ಪಲಗೆವಿನ್ನಣ** – ಗುರಾಣಿ ಹಿಡಿಯುವ ಕೌಶಲ
**ಪಲತೆಱ** – ಹಲವು ಬಗೆ
**ಪಲದಿವಸ** – ಹಲವು ದಿನಗಳು
**ಪಲವಾಡು** – ನಾನಾ ಮಾತುಗಳನ್ನಾಡು
**ಪಲರ್** – ಪಲಂಬರ್
**ಪಲರ್ಮೆ** – ಹಲವು ಬಾರಿ
**ಪಲ(ನ)ಸು** – ಹಲಸಿನ ಮರ, ಹಣ್ಣು
**ಪಲಾಲ** – ಹುಲ್ಲು; ಜೊಂಡು; ಮೋಸ; ನಿಷ್ಫಲ
**ಪಲಾಶ** – ಮುತ್ತುಗ; ರಾಕ್ಷಸ
**ಪಲಾಶಪತ್ರ** – ಮುತ್ತುಗದೆಲೆ
**ಪಲಾಶವೃತ್ತಿ** – ರಾಕ್ಷಸ ನಡತೆ
**ಪಲಿತ** – ನರೆ, ನರೆಗೂದಲು
**ಪಲಿತಶ್ಮಶ್ರು** – ನರೆತ ಮೀಸೆ
**ಪಲಿತಾಂಕುರ** – ನರೆಗೂದಲು
**ಪಲಿತೌಷಧ** – ನರೆಗೂದಲನ್ನು ಕಪ್ಪಾಗಿಸುವ ಔಷಧಿ
**ಪಲುಂಬು** – ಹಲುಬು, ದುಃಖಪಡು
**ಪಲ್ಗರ್ಚಿ ಸೈರಿಸು** – ಹಲ್ಲು ಕಚ್ಚಿಕೊಂಡು ಸಹಿಸು
**ಪಲ್ಗರ್ಚು** – ಹಲ್ಲು ಕಚ್ಚು; ಔಡುಗಚ್ಚು
**ಪಲ್ಗಱಿ** – ಹಲ್ಲಿನ ಕರೆ, ಬಣ್ಣ
**ಪಲ್ದಿನ್** – ಪಲ್ಗಡಿ
**ಪಲ್ವಱಿಗುಟ್ಟು** – ಹಲ್ಲು ಮೊರೆ
**ಪಲ್ಮಿಗ** – ಕೋರೆಗಳುಳ್ಳ ಮೃಗ: ಹುಲಿ, ಸಿಂಹ, ಆನೆ ಇತ್ಯಾದಿ
**ಪಲ್ಮೃಗ** – ಪಲ್ಮಿಗ
**ಪಲ್ಮೊರೆ** – ಹಲ್ಲು ಕಡಿದು ಶಬ್ದಮಾಡು
**ಪಲ್ಮೊಳೆ** – ಚಿಗುರು ಹುಲ್ಲು
**ಪಲ್ಯ** – (ಜೈನ) ಒಂದು ದೊಡ್ಡ ಕಾಲಪ್ರಮಾಣ; ಇದರಲ್ಲಿ ಮೂರು ಬಗೆ; ವ್ಯವಹಾರಪಲ್ಯ, ಉದ್ಧಾರಪಲ್ಯ, ಅದ್ಧಾಪಲ್ಯ
**ಪಲ್ಯಂಕಾಸನ** – ಒಂದು ಯೋಗಾಸನ
**ಪಲ್ಯೋಪಮ** – ಪಲ್ಯ
**ಪಲ್ಲಟಂಬಾಯ್** – ಬದಲಾವಣೆಮಾಡು
**ಪಲ್ಲಟಂಬೀೞ್** – ಚೆಲ್ಲಾಪಿಲ್ಲಿಯಾಗಿ ಬೀಳು
**ಪಲ್ಲಟಿಸು** – ಬದಲಾಯಿಸು
**ಪಲ್ಲಣ** – ಕುದುರೆಯ ಜೀನು
**ಪಲ್ಲಣಂಗಟ್ಟಿಸು** – ಜೀನು ತೊಡಿಸು
**ಪಲ್ಲಟಂಗಟ್ಟು** – ಜೀನು ಹಾಕು
**ಪಲ್ಲಣಿಸು** – ಪಲ್ಲಟಂಗಟ್ಟು
**ಪಲ್ಲಮಱಿ** – ಆನೆಯ ಮರಿ
**ಪಲ್ಲವ** – ಚಿಗುರು; ಬಟ್ಟೆಯ ಸೆರಗು
**ಪಲ್ಲವಕ** – ವಿಟ
**ಪಲ್ಲವಗ್ರಾಹಿ** – ಆಳ ಪಾಂಡಿತ್ಯವಿಲ್ಲದವನು
**ಪಲ್ಲವನೇತ್ರೆ** – ಚಿಗುರಿನಂತೆ ಕೆಂಪಾದ ಕಣ್ಣುಳ್ಳವಳು
**ಪಲ್ಲವಿಕ** – ವಿಟ; ಮೀನು
**ಪಲ್ಲವಿಸು** – ಚಿಗುರು
**ಪಲ್ಲಾಱು** – ಹಲ್ಲಿನ ತೇವ ಒಣಗಿಹೋಗು
**ಪಲ್ಲಿ** – ಹಲ್ಲಿ; ಗ್ರಾಮ
**ಪಲ್ಲಿಲಿ(ವಾಯ್)** – ಹಲ್ಲಿಲ್ಲದ(ಬಾಯಿ)
**ಪಲ್ವಲ** – ಕೊಳ; ಹಳ್ಳ
**ಪವಡಿಸು** – ಮಲಗು
**ಪವಣ್** – ಪ್ರಮಾಣ; ಅಳತೆ; ಮಿತಿ
**ಪವಣಱಿ** – ಹವಣು ತಿಳಿ; ಸಾಮರ್ಥ್ಯ ಅರಿ
**ಪವಣಿಸು** – ಲೆಕ್ಕಹಾಕು; ಅಳತೆಮಾಡು
**ಪವಣ್ಗಟ್ಟು** – ಹೊಂದಿಸಿ ಕಟ್ಟು
**ಪವಣ್ಗಱಿ** – ಅಳತೆ ಮೀರು; ಲೆಕ್ಕ ಮೀರು
**ಪವಣ್ಗೆಡು** – ಲೆಕ್ಕ ತಪ್ಪು
**ಪವಣ್ಗೊಳ್** – ಲೆಕ್ಕ ಹಾಕು
**ಪವಣ್ದೋಱು** – ಹವಣು ತೋರು; ಅಳತೆಗೆ ಸಿಕ್ಕು
**ಪವಣ್ಬಡಿಸು** – ಹೋಲಿಸು
**ಪವಣ್ಬಡೆ** – ಹೊಂದಿಕೆಗೊಳ್ಳು
**ಪವಣ್ಬುಗಿಸು** – ಅಳತೆಗೆ ಅಳವಡಿಸು
**ಪವನ** – ವಾಯು
**ಪವನಜ** – ವಾಯುಪುತ್ರ
**ಪವನಜವ** – ಗಾಳಿಯಷ್ಟು ವೇಗ
**ಪವನತ್ರಯ** – ಭೂಲೋಕವನ್ನು ಆವರಿಸಿರುವ ಘನೋದಧಿ, ಗನವಾತ, ತನುವಾತಗಳೆಂಬ ಮೂರು ಬಗೆಯ ಗಾಳಿಗಳು
**ಪವನನಂದನ** – ವಾಯುಪುತ್ರ; ಆಂಜನೇಯ; ಭೀಮ
**ಪವನನಿರೋಧ** – ಉಸಿರು ಬಿಗಿಹಿಡಿಯುವುದು
**ಪವನಪಥ** – ಆಕಾಶ
**ಪವನವೇಗ** – ವಾಯವೇಗ (ಹೊಂದಿದ ವ್ಯಕ್ತಿ)
**ಪವನಸುತ** – ಪವನಜ

**ಪವನಾಧ್ವ** – ಪವನಪಥ
**ಪವಮಾನ** – ಪವನ
**ಪವಮಾನಸುತ** – ಪವನಜ
**ಪವಳ** – (ಪ್ರವಾಳ) ಹವಳ
**ಪವಳವಾಯ್** – ಹವಳದಂತೆ ಕೆಂಪಾದ ಬಾಯಿ
**ಪವಿ** – ವಜ್ರಾಯುಧ; ವಜ್ರ
**ಪವಿತ್ರ** – ಪಾವನಕರ; ಕಿವಿಯ ಒಂದು ಆಭರಣ
**ಪವಿತ್ರಗಾತ್ರ** – ಪಾವನಕರ ದೇಹದವನು
**ಪವಿತ್ರಗ್ರಾವ** – ಸ್ವಚ್ಛ ಕಲ್ಲು; ಪಾವನಕರವಾದ ಕಲ್ಲು
**ಪವಿತ್ರತೀರ್ಥ** – ಪಾವನ ತೀರ್ಥ
**ಪವಿತ್ರದಿನ** – ಪುಣ್ಯದಿನ
**ಪವಿತ್ರಿತ** – ಪಾವನಗೊಂಡ
**ಪವಿತ್ರೀಕರಣ** – ಪುಣ್ಯಕರವನ್ನಾಗಿಸುವುದು
**ಪವಿತ್ರೀಕರಿಸು** – ಪುಣ್ಯಮಯವಾಗಿ ಮಾಡು
**ಪವಿತ್ರೀಭೂತ** – ಪುಣ್ಯಕರವಾದ
**ಪವಿಧರ** – ಇಂದ್ರ
**ಪವಿಭೃನ್ಮಣಿ** – ಪವಿಭೃತ್+ಮಣಿ, ಇಂದ್ರನೀಲರತ್ನ
**ಪಶು** – ಹಸು; ಪ್ರಾಣಿ
**ಪಶುಪಾಲ** – ದನಗಾಹಿ
**ಪಶುವುಸನ** – ಗೋಹತ್ಯೆ
**ಪಶ್ಚಾತ್ಕಾಲ** – ಮುಪ್ಪು
**ಪಶ್ಚಾತ್ತಾಪ** – ತಪ್ಪುಮಡಿ ಆಮೇಲೆ ದುಃಖಿಸುವುದು
**ಪಶ್ಚಿಮಸಲ್ಲೇಖನ** – (ಜೈನ) ನಾಲ್ಕು ಶಿಕ್ಷಾವ್ರತಗಳಲ್ಲಿ ಒಂದು; ಜೀವಿತದ ಕೊನೆಗಾಲದಲ್ಲಿ ಸ್ವೀಕರಿಸುವ ವ್ರತ
**ಪಶ್ಚಿಮಾಭಿಮುಖ** – ಪಶ್ಚಿಮ ದಿಕ್ಕಿಗೆ ಎದುರು
**ಪಸ(ನು)** – ಹಸನು, ಅಂದವಾದುದು
**ಪಸ(ವು)** – ಕ್ಷಾಮ; ಬಯಕೆ
**ಪಸದನ** – (ಪ್ರಸಾಧನ) ಅಲಂಕಾರ, ಒಡವೆ
**ಪಸದನಂಗೆಯ್** – ಅಲಂಕರಿಸು
**ಪಸದನಂಗೊಳ್** – ಅಲಂಕಾರಗೊಳ್ಳು
**ಪಸದನಂಗೊಳಸು** – ಅಲಂಕಾರಗೊಳಿಸು
**ಪಸದನಂಬಡೆ** – ಅಲಂಕಾರಗೊಳ್ಳು
**ಪಸಯಿಸು** – ವಾಸಿಸು
**ಪಸರ** – ಅಂಗಡಿ; ಸರಕು; (ಪ್ರಸರ) ಪ್ರಚುರತೆ; ಸಲಿಗೆ
**ಪಸರಂಗೆಯ್** – ಹರಡು
**ಪಸರಂಗೊಡು** – ಸದರ ಕೊಡು
**ಪಸರಂಗೊಳ್** – ವಿಸ್ತಾರಗೊಳ್ಳು
**ಪಸರಂಬಡೆ** – ಪಸರಂಗೊಳ್
**ಪಸರಂಬೆಱು** – ಪಸರಂಗೊಳ್
**ಪಸರಿಸು** – ಹರಡು; ಹಬ್ಬಿಸು
**ಪಸಲೆ** – ಹಸುರು ಹುಲ್ಲು; ಹುಲ್ಲುಗಾವಲು
**ಪಸಲೆಗವಿ** – ಹಸುರು ಆವರಿಸು
**ಪಸವ** – ಕಾಮುಕ
**ಪಸವಡು** – ಬಯಕೆ ಹೊಂದು
**ಪಸಾದ** – ಹಸಾದ, ಅನುಗ್ರಹ
**ಪಸಾಯ(ನ)** – ಬಹುಮಾನ, ಉಡುಗೊರೆ
**ಪಸಾಯ(ನ)ಂಗೊಡು** – ಉಡುಗೊರೆ ನೀಡು
**ಪಸಾಯದಾನ** – ಮೆಚ್ಚು; ಭಕ್ಷೀಸು
**ಪಸಾಯ್ತ** – ರಾಜನ ಆಪ್ತ ವ್ಯಕ್ತಿ
**ಪಸ(ಸಾ)ಯಿತ** – (ಪ್ರಸಾದಿತ) ಪಸಾಯ್ತ; ಸಾಕುಪ್ರಾಣಿ
**ಪಸಾಯ್ತೆ** – ರಾಣಿಯ ಅಪ್ತೆ; ವಸ್ತ್ರಗಳ ಮೇಲ್ವಿಚಾರಕಿ
**ಪಸಿ** – ಹಸಿಯಾದ; ತೇವವಿರುವ; ಹಸಿವುಗೊಳ್ಳು
**ಪಸಿಯ ಬಣ್ಣ** – ಶ್ಯಾಲವರ್ಣ
**ಪಸಿ(ವು)** – ಹಸಿವು
**ಪಸು** – ಹಸು; ಹಂಚು; ಕತ್ತರಿಸು
**ಪಸುಂಗಱಿ** – ಹಸುರಾದ ಗರಿ
**ಪಸುಂಬ** – ಶಕುನದ ಹಕ್ಕಿ
**ಪಸುಂಬೆ** – ಹಸಿಬೆ ಚೀಲ; ಎರಡು ಒಡಲ ಚೀಲ
**ಪಸುಗೂಸು** – ಎಳೆಯ ಮಗು; ಹಸುಗೂಸು
**ಪಸುಗೆ** – ವಿವೇಕ; ಔಚಿತ್ಯ; ಔದಾರ್ಯ; ಶೋಭೆ; ಪಾಲು
**ಪಸುಗೆಗೆಡು** – ವಿವೇಕಶೂನ್ಯವಾಗು
**ಪಸುಗೆದಪ್ಪು** – ಪಸುಗೆಗೆಡು
**ಪಸುಗೆವಡೆ** – ವಿವೇಕದಿಂದ ಕೂಡು
**ಪಸುಗೆವೋಗು** – ಹಂಚಿಕೆಗೊಳ್ಳು, ಪಾಲಾಗು
**ಪಸುಮಗ** – ಎಳೆಯವನು
**ಪಸುಮಕ್ಕಳ್** – ಹಸುಗೂಸುಗಳು
**ಪಸುಮಱಿ** – ಎಳೆಯ ಮರಿ
**ಪಸುರ್** – ಹಸಿರು; ಹಸಿರಾಗು
**ಪಸುರೆಲೆ** – ಹಸುರೆಲೆ
**ಪಸುರೆಱಕೆ** – ಹಸಿರು ರೆಕ್ಕೆ
**ಪಸುರ್ಗಂಕಣ** – ಹಸಿರು ಬಳೆ, ಪಚ್ಚೆಯ ಬಳೆ
**ಪಸುರ್ಗಂಬ** – ಹಸಿರು ಕಂಬ
**ಪಸುರ್ಗಪ್ಪು** – ಕಡುಗಪ್ಪು
**ಪಸುರ್ಗಲ್** – ಹಸಿರು ಕಲ್ಲು, ಪಚ್ಚೆಯ ಮಣಿ
**ಪಸುರ್ಗವಿಲ** – ಹಸಿರ ಕಪಿಲಗಳ ಮಿಶ್ರವರ್ಣ
**ಪಸುರ್ಗೞಿ** – ಹಸುರುತನ ಹಾಳಾಗು
**ಪಸುರ್ದಳಿರ್** – ಹಸಿರಾದ ಚಿಗುರು
**ಪಸಿರ್ನನೆ** – ಹಸಿರು ಮೊಗ್ಗು, ಕಾಯಿಮೊಗ್ಗು
**ಪಸುರ್ನನೆದೋಱು** – ಕಾಯಿಮೊಗ್ಗು ಕಾಣಿಸಿಕೊ
**ಪಸುರ್ಪು** – ಹಸಿರು ಬಣ್ಣ
**ಪಸುರ್ಪುವಡೆ** – ಹಸುರು ಬಣ್ಣವನ್ನು ತಾಳು
**ಪಸುರ್ಮಿಡಿ** – ಹಸಿರು ಮಿಡಿಗಾಯಿ
**ಪಸುರ್ವಂದರ್(ಲ್)** – ಹಸಿರು ಚಪ್ಪರ
**ಪಸುರ್ವಟ್ಟೆ** – ಹಸಿರು ವಸ್ತ್ರ
**ಪಸುರ್ವಡೆ** – ಹಸುರು ಬಣ್ಣವನ್ನು ತಾಳು
**ಪಸುರ್ವ(ರ್ಮ)ಣಿ** – ಪಚ್ಚೆ ಮಣಿ
**ಪಸುರ್ವರಲ್** – ಹಸಿರು ಹರಳು, ಪಚ್ಚೆ
**ಪಸುರ್ವಾಸೆ** – ಹೊಟ್ಟೆಯ ಮೇಲಿನ ಕೂದಲಸಾಲು
**ಪಸುರ್ವುಲ್** – ಹಸುರು ಹುಲ್ಲು

**ಪಸುರ್ವೆಳಗು** – ಹಸಿರಿನ ಕಾಂತಿ
**ಪಸುರ್ವೆಳ್ಪು** – ಪಸುರ್ವೆಳಗು
**ಪಸುರ್ಪೊ(ಪೊ)ನ್** – ಹಳದಿ ಬಣ್ಣದ ಲೋಹ, ಚಿನ್ನ
**ಪಸುಳೆ** – ಹಸುಳೆ; ಎಳೆಯ ಮಗು
**ಪಸುಳೆಗೋಗಿಲೆ** – ಮರಿ ಕೋಗಿಲೆ
**ಪಸುಳೆವಿಸಿಲ್** – ಎಳೆಬಿಸಿಲು
**ಪಸೆ** – ಹಸೆ; ಹಾಸು; ಹಾಸಿಗೆ
**ಪಸೆನಿಲ್** – ಹಸೆಯ ಮೇಲೆ ನಿಲ್ಲು; ಮದುವೆ ನಿಲ್ಲು
**ಪಸೆವರಿಸು** – ಹಾಸನ್ನು ಹರಡು; ಹಸೆ ಹಾಸು
**ಪಸೆವಾಸು** – ಹಸೆಯ ಹಾಸು
**ಪಹರಣೆ** – ಮದ್ದಳೆ ಬಾಜನದ ಒಂದು ರೀತಿ
**ಪಳಂಚಲೆ** – ಅಪ್ಪಳಿಸು; ಸೋಕು; ಥಳಥಳಿಸು
**ಪಳಂಚಿನುಂಗುರ** – ಮುದ್ರೆಯುಂಗುರ
**ಪಳಂಚಿಸು** – ಕುಟ್ಟು
**ಪಳಂಚು** – ತಾಗು, ಸಂಘಟ್ಟಿಸು
**ಪಳಚ್ಚನಾಗು** – ಹೊಳಪಿನಿಂದ ಕೂಡು
**ಪಳಚ್ಚನೆ** – ಹೊಲಪಿನಿಂದ ಕೂಡಿ
**ಪಳಪಳಸು** – ಹಳಹಳಿಸು, ಗಾಬರಿಗೊಳ್ಳು
**ಪಳಬದ್ದ** – ಲಾಭ ಅಥವಾ ಪ್ರಯೋಜನ ಪಡೆಯುವುದು
**ಪಳಯಿ(ವಿ)ಸು** – (ಪ್ರಲಾಪಿಸು) ದುಃಖಿಸು, ಅಳು
**ಪಳವ** – ಚರ್ಮವಾದ್ಯ
**ಪಳಹರ** – ಬಟ್ಟೆ; ಧ್ವಜ
**ಪಳಾಳ** – ಪಲಾಲ; ನಿಷ್ಫಲ; ಠಕ್ಕು
**ಪಳಕುವಾಸಱೆ** – ಸ್ಫಟಿಕದ ಹಾಸುಗಲ್ಲು
**ಪಳಕುವೆಸ** – ಸ್ಫಟಿಕದ ರಚನೆ
**ಪಳತ** – ಲೆಕ್ಕಕ್ಕೆ ಸಿಕ್ಕದಷ್ಟು ದೀರ್ಘಕಾಲ
**ಪಳತ ಚಿಕುರ** – ನರೆತ ಕೂದಲು
**ಪಳುಂ(ಳಂ)ಕು** – ನೂಕು; ಒತ್ತು
**ಪಳು(ಳ)ಕು** – ಸ್ಫಟಿಕ
**ಪಳ್ಳ** – ನೀರು ಹರಿಯುವ ಹಳ್ಳ
**ಪಳ್ಳವರ್** – (ಹಳ್ಳಿಯಂತೆ) ಗುಂಪಾಗಿ ಬರು
**ಪಳ್ಳವೋಗು** – (ಹಳ್ಳಿಯಂತೆ) ಗುಂಪಾಗಿ ಹೋಗು
**ಪಱುಮೆ** – ದುಂಬಿ
**ಪಱುಮೆವಸುಳೆ** – ಮರಿದುಂಬಿ
**ಪಱುಮೆವಱಿ** – ಪಱುಮೆವಸುಳೆ
**ಪಱಿ** – ಕಿತ್ತು ಹೋಗು, ಕತ್ತರಿಸು; ಅಲಂಕರಿಸು
**ಪಱಿಗಡ್ಡ** – ಹರಕುಗಡ್ಡ
**ಪಱಿ(ಱು)ಗ(ಗೋ)ಲ್** – ಹರಿಗೋಲು, ದೋಣಿ
**ಪಱಿದಲೆ** – ಹರಕುತಲೆ
**ಪಱಿದೊವಲ್** – ಕತ್ತರಿಸಿದ ಚರ್ಮ
**ಪಱಿನಂಟರ್** – ಹರಿದುಹೋದ (ದೂರವಾದ) ನಂಟ
**ಪಱಿಪಡು** – ಕತ್ತರಿಸಿ ಹೋಗು; ನಿಂತು ಹೋಗು; ತೀರಿ ಹೋಗು; ನಾಶವಾಗು
**ಪಱಿಮಱಿ** – ಹಾರುಗಪ್ಪೆ ಆಟ; ಸಡಗರ

**ಪಱುಗೋಲ್** – ಹರಿಗೋಲು, ಚರ್ಮದ ತೆಪ್ಪ
**ಪಱಿಯಾಳ್ತನ** – ಹರಿದುಹೋದ (ಗತಿಸಿದ) ಕಲಿತನ
**ಪಱಿಯಿಸು** – ಕತ್ತರಿಸು; ಲೋಚು ಮಾಡು
**ಪಱಿವ(ಪ)ಡಿಸು** – ಕತ್ತರಿಸು
**ಪಱಿವ(ಪ)ಡು** – ತುಂಡರಿಸಿ ಹೋಗು
**ಪಱಿವಡೆ** – ಶೋಭಿಸು
**ಪಱಿವಱಿ** – ತುಂಡಾಗು, ಚೂರುಚೂರಾಗು
**ಪಱಿವಾಯ** – ಹರಕುಬಾಯಿಯವನು
**ಪಱಿವಾಯ್ತನ** – ಒಡಕುಬಾಯಿ (ಗುಟ್ಟನ್ನಿರಿಸಿಕೊಳ್ಳದ) ವ್ಯಕ್ತಿ
**ಪಱಿವೇಱು** – ಶೋಭಿಸು
**ಪಱಿವೊಱುಸು** – (ರೆಕ್ಕೆ) ಹರಿದ ಪಾರಿವಾಳ
**ಪಱಿಸೀರೆ** – ಹರಕು ಬಟ್ಟೆ
**ಪಱೆ** – ಹರೆ, ತಂಬಟೆ
**ಪಱೆಗುಟ್ಟು** – ತಮ್ಮಟೆ ಹೊಡಿ
**ಪಱೆವೊೞ್ತು** – ಹರೆ ಹೊಡೆಯುವ ಹೊತ್ತು, ಸಂಜೆ
**ಪೞಂಗಾಸು** – ಹಳೆಯ (ಚಿನ್ನದ) ನಾಣ್ಯ
**ಪೞಗ** – ಒಣ ಎಲೆ
**ಪೞಗನ್ನಡ** – ಹಳಗನ್ನಡ
**ಪೞಗಬ್ಬ** – ಪ್ರಾಚೀನ ಕಾವ್ಯ
**ಪೞಗಬ್ಬಿಗ** – ಹಿಂದಿನ ಕವಿ
**ಪೞಗಲಿ** – ಹಿರಿಯ ವೀರ
**ಪೞಗಳ್ಳು** – ಹಳೆಯ ಹೆಂಡ
**ಪಳಗುಂಟಣಿ** – ಮುದಿ ಕುಂಟಣಿ
**ಪೞದು** – ಹಳೆಯದು
**ಪೞನವಿರ್** – ಹಳೆಯ ಕೂದಲು
**ಪೞನೀರ್** – ಹಳೆಯ (ಶೇಖರಿಸಿಟ್ಟ) ನೀರು
**ಪೞಪೞನೆ** – ವಿರಳವಾಗಿ
**ಪೞಮಱೆವು** – ಹಿಂದೆಯೇ ಮರೆತುಹೋದದ್ದು
**ಪೞಯಿಗೆ** – ಧ್ವಜ, ಬಾವುಟ
**ಪೞವಂಡು** – ಪೞ+ಬಂಡು, ಹಿಂದಿನ ಮಕರಂದ
**ಪೞವಗೆ** – ಬಹಳ ಕಾಲದ ಶತ್ರು
**ಪೞವರ** – ಹಳೆಯ ಮರ
**ಪೞವಾಡ** – ಕುಗ್ರಾಮ
**ಪೞವಾತು** – ವೇದ
**ಪೞವಾನಿಸ** – ಹಿರಿಯ ವ್ಯಕ್ತಿ
**ಪೞವಾವಿ(ಗೆ)** – ಹಳೆಯ ಬಾವಿ
**ಪೞ(ವಿ)ಗೆ** – ಧ್ವಜ, ಬಾವುಟ
**ಪೞವೆ** – ಹಳೆಯ ಸಂಬಂಧ
**ಪೞವೇಟ** – ಹಳೆಯ ಪ್ರಣಯ
**ಪೞಸು** – ಹಳಸು, ನೀರಸವಾಗು
**ಪೞಹ** – ಪಟಹ, ಒಂದು ವಾದ್ಯ
**ಪೞಿ** – ವಸ್ತ್ರ; ದೂಷಿಸು; ದೂಷಣೆ; ನಾಯಿಯನ್ನು ಓಡಿಸುವುದು; ಲೋಹದ ಗಟ್ಟಿ
**ಪೞಿಕೆಯ್** – ನಿಂದನೆ ಮಾಡು; ಅವಮಾನಿಸು
**ಪೞಿಗಱಿ** – ಅಪಪೃಥೆಯನ್ನು ಕಳೆದುಕೊ

**ಪಡೆಗಾಳೆಗ** – ಹುಚ್ಚು ಯುದ್ಧ
**ಪಡೆವಾವುಗೆ** – (ಪ್ರತಿಪಾದುಕೆ) ಮಂಚವಿರಿಸುವ ವೇದಿಕೆ
**ಪಱು(ವ)** – ಕಾಡು
**ಪಱುಗಡೆ** – ಮಿತಿ ಮೀರು
**ಪಱುವಗೆ** – ಕಾಡು ಬುದ್ಧಿ, ದುಷ್ಟ ಸ್ವಭಾವ
**ಪಱುವಟೆ** – (ಪಱುವ+ಬಟೆ) ಕಾಡು ದಾರಿ
**ಪಱಿವುಣ್** – ಹಳೆಯ ಹುಣ್ಣು; ಹಿಂದಿನ ನೋವು
**ಪಱ್ಕಿ** – ಹಾಸಿಗೆ, ಶಯನಸ್ಥಾನ
**ಪಱ್ಕಿತಱ್ಕೈಸು** – ಗಾಢವಾಗಿ ಆಲಂಗಿಸು
**ಪಱ್ಕಿವನೆ** – ಮಲಗುವ ಮನೆ
**ಪಱ್ಕಿವೆಟ್ಟ** – (ಸೂರ್ಯ) ಮಲಗುವ ಬೆಟ್ಟ, ಪಶ್ಚಿಮ
**ಪೞ್ತಿ** – ಹತ್ತಿ
**ಪೞ್ವಱಿನೆ** – ಪಱಿಪಱಿನೆ, ವಿರಳವಾಗಿ
**ಪಾಂಗಱೆ** – ಹದ ತಿಳಿ
**ಪಾಂಗಱೆ** – ಹದ ತಪ್ಪು; ಕ್ರಮ ತಪ್ಪು
**ಪಾಂಗು** – ಆಕಾರ; ಕ್ರಮ; ತಲೆಯ ಪಾಗು
**ಪಾಂಗುವೆಱು** – ಕ್ರಮಬದ್ಧಗೊಳ್ಳು
**ಪಾಂಚಜನ್ಯ** – ಪಂಚಜನ ಎಬ ರಾಕ್ಷಸನ ಮೂಳೆಯಿಂದ ಮಾಡಿದ ಕೃಷ್ಣನ ಶಂಖ
**ಪಾಂಚಾಲಿ** – ಪಾಂಚಾಲದೇಶದವಳು; ದ್ರೌಪದಿ
**ಪಾಂಚಾಲಿಕಾ** – ಬೊಂಬೆ, ಪ್ರತಿಮೆ
**ಪಾಂಡವ** – ಪಾಂಡುವಿನ ಮಗ; ಅವನ ವಂಶ
**ಪಾಂಡಿತ್ಯ** – ಆಳವಾದ ಅರಿವು
**ಪಾಂಡಿಮ** – ಬಿಳುಪಾದ
**ಪಾಂಡು** – ಬಿಳಿಯ ಬಣ್ಣ; ಪಾಂಡವರ ತಂದೆ
**ಪಾಂಡುಕ** – (ಜೈನ) ಸುಮೇರು ಪರ್ವತದ ಮೇಲಿನ ನಾಲ್ಕು ವನಗಳಲ್ಲಿ ಒಂದು (ಉಳಿದವು: ಭದ್ರಪಾಲ, ನಂದನ, ಸೌಮನಸ); ಇದರಲ್ಲಿ ತೀರ್ಥಂಕರನ ಜನ್ಮಾಭಿಷೇಕಕಲ್ಯಾಣಕ್ಕಾಗಿ ಮೀಸಲಾದ ನಾಲ್ಕು ಪೀಠಗಳಿವೆ; ಅದರಲ್ಲಿನ ಮೊದಲನೆಯ ಪೀಠ; ಪಾಂಡುಕ ಎಂಬುದು ನವನಿಧಿಗಳಲ್ಲಿ ಒಂದು (ಹದಿನೆಂಟು ಪ್ರಕಾರದ ಧಾನ್ಯಗಳನ್ನು ಒದಗಿಸುವ ನಿಧಿ) **ನೋಡಿ, 'ನವನಿಧಿ'–**
**ಪಾಂಡುಕಂಬಲ** – ಬಿಳಿಯ ಕಂಬಳಿ; (ಜೈನ) ಪಾಂಡುಕವನದ ನಾಲ್ಕು ಪೀಠಗಳಲ್ಲಿ ಒಂದು
**ಪಾಂಡುಕವನ** – ಪಾಂಡುಕ
**ಪಾಂಡುಗಾತ್ರ** – ಬಿಳಿಯ ಮೈಬಣ್ಣದವನು; ನಾರದ
**ಪಾಂಡುಚ್ಛತ್ರ** – ಬೆಳ್ಗೊಡೆ
**ಪಾಂಡುದೇಹ** – ಬಿಳಿಯ ಮೈ
**ಪಾಂಡುರ** – ಬಿಳಿದಾದ; ತೊನ್ನು ರೋಗ
**ಪಾಂಡುರತೆ** – ಬಿಳಿಪು
**ಪಾಂಡುರಿತ** – ಬೆಳ್ಳಗಿರುವ
**ಪಾಂಥ** – ಹಾದಿಹೋಕ
**ಪಾಂಬ** – ಪಾಣ್ಬ, ಹಾದರಿಗ
**ಪಾಂಶು(ಸು)** – ಧೂಳು; ಹೂವಿನ ಪರಾಗ
**ಪಾಂಶು(ಸು)ಕೇಳಿ** – ಧೂಳಾಟ
**ಪಾಂಸುಳ** – ಧೂಳಿಯಿಂದ ಕೂಡಿದ
**ಪಾಂಸುಳೆ** – ಹಾದರಗಿತ್ತಿ
**ಪಾಕ** –ಎಳೆಯ
**ಪಾಕಕುಶ** – ಎಳೆಯ ಗರಿಕೆ
**ಪಾಕರಿಪು** – ಪಾಕನೆಂಬ ರಾಕ್ಷಸನನ್ನು ನಿಗ್ರಹಿಸಿದವನು, ಇಂದ್ರ
**ಪಾಕಶಾಸನ** – ಪಾಕರಿಪು
**ಪಾಕಾರಿ** – ಪಾಕರಿಪು
**ಪಾಗಡೆ** – ಪಾಡಗ, ಕಾಲುಕಡಗ
**ಪಾಗದ** – ಪ್ರಾಕೃತಭಾಷೆ
**ಪಾಗಲ್** – ಹಾಗಲ ಕಾಯಿ, ಬಳ್ಳಿ; ಪ್ರಾಕಾರ
**ಪಾಗು** – ಪೇಟ
**ಪಾಗುಡ** – ಪಾವುಡ, ಉಡುಗೊರೆ ವಸ್ತ್ರ
**ಪಾಗುಡಂಗಟ್ಟು** – ಉಡುಗೊರೆಯನ್ನು ಕಟ್ಟು
**ಪಾಗುಡಂತರ್** – ಉಡುಗೊರೆಯನ್ನು ತಾ
**ಪಾಟ** – ಹಾಡಿಕೆ; ಪಾಠ, ಪಠ್ಯವಿಷಯ
**ಪಾಟಕಾಱ**– ಹೊಗಳುಭಟ
**ಪಾಟನ** – ಸೀಳುವುದು
**ಪಾಟಲ(ಳ)** – ತಿಳಿಗೆಂಪು ಬಣ್ಣದ
**ಪಾಟಲದ್ಯುತಿ** – ಪಾಟಲ ವರ್ಣ
**ಪಾಟಳಾಧರ** – ತಿಳಿಗೆಂಪು ಬಣ್ಣದ ತುಟಿ
**ಪಾಟಲಿ(ಳಿ)** – ಪಾದರಿ ಗಿಡ, ಹೂ
**ಪಾಟಲಿ(ಳಿ)ತ** – ತಿಳಿಗೆಂಪು ಬಣ್ಣವಾದ
**ಪಾಟಲಿಮ** – ನಸುಗೆಂಪು ಬಣ್ಣದ
**ಪಾಟಳಕಾಂತಿ** – ತಿಳಿಗೆಂಪಿನ ಕಾಂತಿ
**ಪಾಟಿ** – ಬೀಡು
**ಪಾಟಿಗಾಣ್** – ಪಾಟಿ+ಕಾಣ್, ಸಮವೆಂದು ತಿಳಿ
**ಪಾಟಿತ** – ಬಿರುಕುಬಿಟ್ಟ
**ಪಾಟಿದಪ್ಪು** – ಸಮಾನವಾಗಿ ಭಾವಿಸು
**ಪಾಟಿಸು** – ನೀಡು; ಅಪೇಕ್ಷಿಸು; ಉಂಟುಮಾಡು; ಪಾಠ ಓದು; ಕಿತ್ತುಹಾಕು
**ಪಾಠಕಾಱ** – ಹೊಗಳುಭಟ
**ಪಾಠಿಸು** – ಅಧ್ಯಯನ ಮಾಡು
**ಪಾಠೀನ** – ಮೀನು
**ಪಾಠೀನಪತಾಕ** – ಮನ್ಮಥ
**ಪಾಡಗ** – ತೇಗದ ಮರ; ಕಾಲುಕಡಗ
**ಪಾಡಱೆ** – ನೆಲೆಗೆಡು; ಸತ್ವಗುಂದು; ಕಾಂತಿಗುಂದು
**ಪಾಡಿ** – ಸೈನ್ಯದ ಬೀಡು; ಹಳ್ಳಿ
**ಪಾಡಿವ** – ಪಾಡ್ಯ
**ಪಾಡಿಸು** – ಹಾಡುವಂತೆ ಮಾಡು; ಹೊಗಳಿಸು
**ಪಾಡು** – ಹಾಡು, ಗಾಯನ; ಸ್ಥಿತಿ
**ಪಾಡುಂಗಾಱ** – ಹಾಡುಗಾರ
**ಪಾಡುಕುಳಿ** – ಹಾಡುವ ಗೀಳಿನವನು

**ಪಾಡುಗಾ** – (ಪಾಡು+ಕಾ) ಪರಸ್ಪರರ ಕ್ಷೇಮವನ್ನು ರಕ್ಷಿಸು; ಸುಸ್ಥಿತಿಯನ್ನು ಕಾಪಾಡು
**ಪಾಡುಗೆಯ್** – ಸಂವರಿಸು, ಹದಗೊಳಿಸು
**ಪಾಣವಿಕ** – ಮದ್ದಳೆಗಾರ
**ಪಾಣಿ** – ಕೈ
**ಪಾಣಿಗ್ರಹಣಂಗೆಯ್** – ಕೈಹಿಡಿ; ಮದುವೆಯಾಗು
**ಪಾಣಿಗ್ರಹಣಂಗೆಯಿಸು** – ಮದುವೆ ಮಾಡಿಸು
**ಪಾಣಿಚಳನ** – ನಾಟ್ಯದಲ್ಲಿನ ಕೈಯ ಚಲನೆ
**ಪಾಣಿತಲ** – ಅಂಗೈ
**ಪಾಣಿತ್ರಯ** – ವಾದ್ಯವಾದನದಲ್ಲಿನ ಸಮಪಾಣಿ, ಅಧಃಪಾಣಿ, ಉಪರಿಪಾಣಿ ಎಂಬ ಮೂರು ಬಗೆಯ ಹಸ್ತವಿನ್ಯಾಸ
**ಪಾಣಿಪಾಡು** – ತೋಟ
**ಪಾಣಿಪಾತ್ರ** – ಬೊಗಸೆಗೈ; ಜೈನಮುನಿಗಳು ಆಹಾರ ತೆಗೆದುಕೊಳ್ಳುವಾಗ ಹಿಡಿಯುವ ಬೊಗಸೆ
**ಪಾಣಿಯವಾಸ** – ಒಂದು ಬಗೆಯ ಬಟ್ಟೆ
**ಪಾಣ್ಬ** – ಹಾದರಿಗ
**ಪಾಣ್ಬೆ** – ಹಾದರಗಿತ್ತಿ
**ಪಾತ** – ಬೀಳುವಿಕೆ; ಹೊಡೆತ
**ಪಾತಶ್ರವಣ** – ಮರಣವಾರ್ತೆ
**ಪಾತಕಿ** – ಪಾಪ ಮಾಡಿದವನು
**ಪಾತಾಲ(ಳ)** – ಕೆಳಗಿನ ಲೋಕ
**ಪಾತಾಳತಳ** – ಪಾತಾಳ
**ಪಾತು** – ರಕ್ಷಿಸಲಿ
**ಪಾತ್ರ** – ಪಾತ್ರೆ; ದೋಣಿ; ನಟಿಸುವವನು; ಯೋಗ್ಯತೆ
**ಪಾತ್ರಂಬಡೆ** – ಅರ್ಹತೆಯನ್ನು ಹೊಂದು
**ಪಾತ್ರತ್ರಿತಯ** – ದಾನಸ್ವೀಕರಿಸುವ ಉತ್ತಮ, ಮಧ್ಯ, ಅಧಮರೆಂಬ ಮೂರು ವರ್ಗ
**ಪಾತ್ರತ್ವ** – ಅರ್ಹತೆ ಹೊಂದುವುದು
**ಪಾತ್ರದತ್ತಿ** – (ಜೈನ) ತಪೋಧನರಿಗೆ ನೀಡುವ ಆಹಾರಾದಿಗಳು
**ಪಾತ್ರದಾನ** – ಪಾತ್ರದತ್ತಿ
**ಪಾತ್ರದಾನಿ** – ಪಾತ್ರದಾನ ಮಾಡುವವನು
**ಪಾತ್ರವಿಕೀರ್ಣ** – ನದಿಯ ಹರಿಯುವ ಜಾಗ
**ಪಾತ್ರಸಂಕ್ರಮಣ** – ಪಾತ್ರಗಳ ವಿನ್ಯಾಸ
**ಪಾತ್ರೀಭೂತ** – ಪಾತ್ರತ್ವವನ್ನು ಹೊಂದಿದ
**ಪಾಥ** – ನೀರು
**ಪಾಥೇಯ** – ಬುತ್ತಿ
**ಪಾಥೇಯಧನ** – ದಾರಿಖರ್ಚು
**ಪಾಥೋ(ನಿ)ಧಿ** – ಸಮುದ್ರ
**ಪಾದ** – ಕಾಲು; ಕಿರಣ; ಬೇರು
**ಪಾದಚ್ಛಾಯೆ** – ಹೆಜ್ಜೆಯ ಗುರುತು
**ಪಾದನ್ಯಾಸ** – ಹೆಜ್ಜೆಯಿಡುವ ರೀತಿ
**ಪಾದಜ** – ಶೂದ್ರ
**ಪಾದಪ** – ಬೇರಿನಿಂದ ನೀರು ಹೀರುವುದು, ಗಿಡಮರ
**ಪಾದಪಟ್ಟ** – ಪೆಂಡೆಯ
**ಪಾದಪಾತ** – ಕಾಲಿಂದ ಒದೆಯುವುದು; ಮಲ್ಲಯುದ್ಧದ ಒಂದು ದೋಷ
**ಪಾದಪಾಶ** – ದನಗಳನ್ನು ಕಟ್ಟುವ ಹಗ್ಗ
**ಪಾದಪೀಠ** – ಕಾಲಿಟ್ಟುಕೊಳ್ಳುವ ಪೀಠ
**ಪಾದಪ್ರಕ್ಷಾಲನ** – ಪಾದಗಳನ್ನು ತೊಳೆಯುವುದು
**ಪಾದಪ್ರಣತ** – ಪಾದಗಳಿಗೆ ಬಾಗಿದವನು
**ಪಾದಮಾರ್ಗ** – ಕಾಲುದಾರಿ
**ಪಾದರ** – ಹಾದರ
**ಪಾದರಜ** – ಪಾದಧೂಳಿ
**ಪಾದರಿ(ಗೆ)** – ಹಾದರಗಿತ್ತಿ; ಪಾಟಲಿ ಎಂಬ ಹೂ
**ಪಾದರಿಗ** – ಹಾದರಿಗ
**ಪಾದಲೇಪೌಷಧಿ** – ಕಾಲಿಗೆ ಹಚ್ಚುವ ಮುಲಾಮು
**ಪಾದವಾಸ** – ದನಗಳನ್ನು ಕಟ್ಟುವ ಹಗ್ಗ
**ಪಾದವಿನ್ಯಾಸ** – ಪದ್ಯದ ಸಾಲುಗಳ ಜೋಡಣೆ; ಕಿರಣಗಳ ಹರಡುವಿಕೆ
**ಪಾದವಿಷ್ಟರ** – ಪಾದಪೀಠ
**ಪಾದಶೃಂಖಲೆ** – ಕಾಲುಗಳನ್ನು ಬಂಧಿಸುವ ಸರಪಳಿ
**ಪಾದಸಂಕಲೆ** – ಪಾದಶೃಂಖಲೆ
**ಪಾದಾತ** – ಕಾಲಾಳು; ಪದಾತಿಸೈನ್ಯ
**ಪಾದಾಭಿಘಾತ** – ಒದೆತ
**ಪಾದಾಭಿಷೇಚನ** – ಪಾದಪ್ರಕ್ಷಾಲನ
**ಪಾದಾಹತಿ** – ಪಾದಾಭಿಘಾತ
**ಪಾದೂಯುಗ್ಮ** – ಹಾವುಗೆಗಳ ಜೋಡಿ
**ಪಾದ್ಯ** – ಕಾಲು ತೊಳೆಯುವ ನೀರು; ಪಾದ **ತೊಳೆಯುವುದು**–
**ಪಾದ್ಯವಿಧಿ** – ಕಾಲು ತೊಳೆಯುವ ವಿಧಿ
**ಪಾನಕ್ರೀಡೆ** – ಮದ್ಯಸೇವನೆಯ ಆಟ
**ಪಾನಿಗಟ್ಟು** – (ಜೈನ) ಚರಿಗೆಗೆ ಬಂದ ಸನ್ಯಾಸಿಗಳನ್ನು ಭಿಕ್ಷೆಗೆ ನಿಲ್ಲಿಸಿಕೊ
**ಪಾನೀಯ** – ಕುಡಿಯಲು ಯೋಗ್ಯವಾದ ದ್ರವ
**ಪಾನೀಯಖೇಯ** – ಕಂದಕ
**ಪಾನೀಯಮಂಡಪ** – ಅರವಟ್ಟಿಗೆ
**ಪಾನೀಯಶಾಲೆ** – ಪಾನೀಯಮಂಡಪ
**ಪಾನೆ** – ಪಾತ್ರೆ
**ಪಾಪಪದಾರ್ಥ** – (ಜೈನ) ನವಪದಾರ್ಥಗಳಲ್ಲಿ ಒಂದು, ನೋಡಿ 'ನವಪದಾರ್ಥ'
**ಪಾಪಭೀರು** – ಪಾಪಕ್ಕೆ ಹೆದರುವ ವ್ಯಕ್ತಿ
**ಪಾಪರ್ಧಿ** – ಬೇಟೆ
**ಪಾಪವಿನಾಶ** – ಪಾಪವನ್ನು ಹೋಗಲಾಡಿಸುವವನು
**ಪಾಪಸತ್ವ** – ದುಷ್ಟಸ್ವಭಾವದವನು
**ಪಾಪಹರ** – ಪಾಪವಿನಾಶ
**ಪಾಪಹೃತ್** – ಪಾಪವಿನಾಶ
**ಪಾಪಾಸ್ರವ** – (ಜೈನ) ಜೀವನದಲ್ಲಿ ಹರಿದು ಬರುವ ಪಾಪಕರ್ಮಗಳು
**ಪಾಪೆ** – ಬೊಂಬೆ; ಕಣ್ಣುಗುಡ್ಡೆ
**ಪಾಪೌಘ** – ಪಾಪ+ಓಘ, ಪಾಪರಾಶಿ
**ಪಾಮರಿ** – ಹಳ್ಳಿಯ ಹೆಂಗಸು

**ಪಾಯ್** – ಹಾರು; ಮಿಡುಕು; ಹೊರಸೂಸು; ದಾಟು; ಮೇಲೆರಗು; ನುಗ್ಗು
**ಪಾಯದಳಿ** – ಪದಾತಿ ಸೈನ್ಯ
**ಪಾಯವಟ್ಟ** – ಕಾಲಂದುಗೆ; ಪೆಂಡೆಯ
**ಪಾಯಸ** – ಪರಮಾನ್ನ
**ಪಾಯಾಳು** – ದೂತ
**ಪಾಯಿಸು** – ದಾಟಿಸು; ಮುನ್ನುಗ್ಗಿಸು
**ಪಾಯ್ತರ್** – ಚಿಮ್ಮು; ವೇಗವಾಗಿ ಬಾ; ಮುನ್ನುಗ್ಗು
**ಪಾರ್** – ನೋಡಿ; ನಿರೀಕ್ಷಿಸು; ಯೋಚಿಸು
**ಪಾರ** – ಗಡಿ; ದಡ
**ಪಾರಂ** – ಚೆನ್ನಾಗಿ
**ಪಾರಕು(ಕ್ಕು)** – ಹಾರಕ ಎಂಬ ಧಾನ್ಯ
**ಪಾರಗ** – ದಡ ಸೇರಿದವನು; ಪಾರಂಗತ
**ಪಾರಗತ್ವ** – ನೈಪುಣ್ಯ
**ಪಾರಣಕ್ಷಮ** – ಪಾರಣೆ ಮಾಡಿಸುವುದರಲ್ಲಿ ಬಲ್ಲಿದ
**ಪಾರಣಾವಾಸರ** – ಪಾರಣೆಯ ದಿನ
**ಪಾರಣಾವಿಧಿ** – ಪಾರಣೆಯ ಕ್ರಮ
**ಪಾರಣೆ** – ವ್ರತಸಂಬಂಧಿ ಉಪವಾಸದ ಮರುದಿನ ಮಾಡುವ ಊಟ
**ಪಾರತಂತ್ರತೆ** – ಮತ್ತೊಬ್ಬರ ಅಧೀನವಿರುವುದು
**ಪಾರದ** – ಪಾದರಸ
**ಪಾರದ(ದಾ)ರ** – ಅನ್ಯಸ್ತ್ರೀಗಮನ
**ಪಾರದಂದೊಡೆ** – ಪಾದರಸ ಲೇಪನಮಾಡು
**ಪಾರದೃಶ್ವ** – ಪೂರ್ತಿ ತಿಳಿದವನು
**ಪಾರಮಾರ್ಥಿಕ** – ಪರಮಾರ್ಥಕ್ಕೆ ಸಂಬಂಧಿಸಿದ
**ಪಾರಯಿಸು** – ಹಾರೈಸು; ಬಯಸು
**ಪಾರಲೌಕಕವಿಧಿ** – ಅಪರಕರ್ಮ
**ಪಾರಟಿ** – ಅಳತೆ ಮೀರು
**ಪಾರಾವತ** – ಪಾರಿವಾಳ; ಹಾಲುವಾಣದ ಮರ
**ಪಾರಾವಾರ** – ತೀರಗಳು; ಸಮುದ್ರ
**ಪಾರಾವಾರಗ** – ಪ್ರವೀಣ
**ಪಾರಾಶರ** – ವೇದವ್ಯಾಸ
**ಪಾರಸ್ಥಳ** – ತೀರ
**ಪಾರಿ** – ಸಾಲು; ಪಾನಪಾತ್ರೆ
**ಪಾರಿಜಾತ(ಕ)** – ಒಂದು ಗಿಡ ಮತ್ತದರ ಹೂ
**ಪಾರಿಣಾಮಕ** – (ಜೈನ) ಜೀವತ್ವ, ಭವ್ಯತ್ವ, ಅಭವ್ಯತ್ವ ಮೊದಲಾದ ಕರ್ಮಗಳು
**ಪಾರಿತೋಷ(ಷಿ)ಕ** – ಬಹುಮಾನ
**ಪಾರಿದಿವಮಂದಿರೆಯರ್** – ಅಪ್ಸರೆಯರು
**ಪಾರಿಪ್ಲವ** – ಚಂಚಲವಾದ; ಚಾಂಚಲ್ಯ
**ಪಾರಿಬ್ರಾ(ವ್ರಾ)ಜಕ** – ಸನ್ಯಾಸಿ
**ಪಾರಿವ** – ಪಾರಿವಾಳ; ಅದರ ಬಣ್ಣ
**ಪಾರಿವ್ರಾಜ್ಯ** – (ಜೈನ) ಶ್ರಾವಕನು ನಿರ್ವಾಣದೀಕ್ಷೆಯನ್ನು ಕೈಗೊಳ್ಳುವುದು
**ಪಾರಿಷದ** – (ಜೈನ) ಇಂದ್ರನ ಸಭೆಯ ಸದಸ್ಯರಾದ ದೇವತಾವರ್ಗ
**ಪಾರಿಸು** – ಪಾರಣೆ ಮಾಡು
**ಪಾರಿಹಾರ್ಯ** – ಬಳೆ, ಕಂಕಣ
**ಪಾರೀಣ** – ಪಾಂಡಿತ್ಯ; ಪಂಡಿತ
**ಪಾರುಂಬಳೆ** – ಪಾಱುಂಬಳೆ , ಚಕ್ರ, ಚಕ್ರಾಯುಧ
**ಪಾರೆ** – ಹಾರೆ; ಅಗೆಯುವ ಕಬ್ಬಿಣದ ಉಪಕರಣ
**ಪಾರೆಯಂಬು** – ಹಾರೆ ಆಕಾರದ ಬಾಣ
**ಪಾರೆವಾಯ್** – ಹಾರೆಯ ಮೊನೆ
**ಪಾರೈಸು** – ಪಾರಯಿಸು
**ಪಾರ್ಕು** – ಹೆಗಲು
**ಪಾರ್ಥ** – ರಾಜ; ಪೃಥೆಯ ಮಗ; ಅರ್ಜುನ
**ಪಾರ್ಥಿವ** – ರಾಜ; ರಾಜವಂಶದ
**ಪಾರ್ಥಿವಕುಲ** – ರಾಜವಂಶ
**ಪಾರ್ಥಿವಗುಣ** – ರಾಜಯೋಗ್ಯಗುಣ
**ಪಾರ್ಥಿವತ್ವ** – ಮರ್ತ್ಯದ ಗುಣ
**ಪಾರ್ಥಿವಪುತ್ರ** – ರಾಜಪುತ್ರ
**ಪಾರ್ವ(ರ್ಬ)** – ಹಾರುವ, ಬ್ರಾಹ್ಮಣ
**ಪಾರ್ವಂತಿ** – ಬ್ರಾಹ್ಮಣ ಸ್ತ್ರೀ
**ಪಾರ್ವಣ** – ಅಮಾವಾಸ್ಯೆ–ಹುಣ್ಣಿವೆಗಳಿಗೆ ಸಂಬಂಧಿಸಿದ–
**ಪಾರ್ವತಿ** – ಪರ್ವತರಾಜನ ಮಗಳು, ಗಿರಿಜೆ
**ಪಾರ್ವತಿಯೆಱೆಯ** – ಪಾರ್ವತೀಪತಿ, ಶಿವ
**ಪಾರ್ವತೇಯ** – ಪರ್ವತಪ್ರದೇಶವಾಸಿ
**ಪಾರ್ವಿತಿ** – ಪಾರ್ವಂತಿ
**ಪಾರ್ಶ್ವ** – ಮಗ್ಗುಲು; (ಜೈನ) ಪಾರ್ಶ್ವನಾಥ
**ಪಾರ್ಶ್ವ(ರ್ಶ್ವಾ)ಗತ** – ವಸ್ತುವಿನ ಮಗ್ಗುಲ ನೋಟ
**ಪಾರ್ಶ್ವಚರ** – ಪಕ್ಕದಲ್ಲಿ ನಡೆಯುವವನು
**ಪಾರ್ಶ್ವನಾಥ** – (ಜೈನ) ಇಪ್ಪತ್ತಮೂರನೆಯ ತೀರ್ಥಂಕರ
**ಪಾರ್ಷ್ಣಿ** – ಹಿಮ್ಮಡಿ
**ಪಾರ್ಷ್ಣಿಗ್ರಾಹಕ** – ಹಿಂದಿದ್ದು ದಾಳಿ ನಡೆಸುವವನು
**ಪಾಲ್** – ಹಾಲು; ಭಾಗ
**ಪಾಲಕಾಪ್ಯ** – ಗಜಶಾಸ್ತ್ರ ಅಶ್ವಶಾಸ್ತ್ರಗಳನ್ನು ಬರೆದ ಒಬ್ಬ ಮುನಿ
**ಪಾಲಡಕೆ** – ಹಸಿ ಅಡಕೆ
**ಪಾಲಿ(ಳ)ಸು** – ಕಾಪಾಡು
**ಪಾಲಾಶ** – ಮುತ್ತುಗ
**ಪಾಲಿಕೆ** – ಪಾತ್ರೆ
**ಪಾಲುಂಡೆ** – ಪೀಯೂಷಪಿಷ್ಟ; ಹಾಲಿನ ಸಿಹಿತಿಂಡಿ
**ಪಾಲೆ** – (ಕಿವಿಯ) ಹಾಲೆ, ಕೊಪ್ಪು; ಸೇತುವೆ
**ಪಾಲೆಱೆ** – ಹಾಲು ಹೊಯ್ಯಿ
**ಪಾಲ್ಗಡಲ್** – ಹಾಲಿನ ಸಮುದ್ರ, ಕ್ಷೀರಸಾಗರ
**ಪಾಲ್ಗೆನೆ** – ಹಾಲಿನ ಕೆನೆ
**ಪಾಲ್ದೆನೆ** – ಎಳೆಯ ತೆನೆ
**ಪಾಲ್ದೊಱೆ** – ಹಾಲಿನ ಹೊಳೆ
**ಪಾಲ್ಬತ್ತು** – (ಎದೆಯಲ್ಲಿ) ಹಾಲು ಇಂಗಿಹೋಗು
**ಪಾಲ್ಮರ** – ಗೀರಿದರೆ ಹಾಲು ಬರುವ ಮರ, ಆಲ, ಅರಳಿ, ಅತ್ತಿ ಇತ್ಯಾದಿ

**ಪಾಲ್ಮೞೆ** – ಹಾಲಿನ ಮಳೆ
**ಪಾಲ್ಯ** – ಪಾಲಿಸಬೇಕಾದುದು
**ಪಾಲ್ವರಿ** – ಹಾಲಿನ ಪ್ರವಾಹ
**ಪಾಲ್ವೊನಲ್** – ಪಾಲ್ದೊಱೆ
**ಪಾಲ್ಸೊದೆ** – ಬಿಳಿಯ ಸುಣ್ಣ
**ಪಾವಕ** – ಶುದ್ಧಿಗೊಳಿಸುವ; ಅಗ್ನಿ
**ಪಾವಕದಿಕ್ಕು** – ಆಗ್ನೇಯ
**ಪಾವಡಿಗ** – ಹಾವಾಡಿಗ
**ಪಾವನ** – ಪವಿತ್ರವಾದ
**ಪಾವನಚಾರಿತ್ರ** – ಸನ್ನಡತೆ
**ಪಾವನತೆ** – ಪಾವಿತ್ರ್ಯ
**ಪಾವನಿ** – ಹನುಮಂತ; ಭೀಮ
**ಪಾವಸೆ** – ಪಾಚಿ
**ಪಾವಸೆಗಲ್** – ಪಾಚಿ ಕಟ್ಟಿದ ಕಲ್ಲು
**ಪಾವಸೆಗಿಱು** – ಪಾಚಿಯೆಂದು ತಪ್ಪುತಿಳಿ
**ಪಾವಸೆಗೊಳ್** – ಪಾಚಿಗಟ್ಟು
**ಪಾವು** – ಹಾವು
**ಪಾವುಕೊಳ್** – ಹಾವು ಕಚ್ಚು
**ಪಾವುಗಿಱು** – ಹಾವೆಂದು ಭ್ರಮಿಸು
**ಪಾವುಗೆ** – (ಪಾದುಕಾ) ಪಾದರಕ್ಷೆ
**ಪಾವುಡ** – (ಪ್ರಾಭೃತ) ಕಾಣಿಕೆ
**ಪಾವುಮೆಕ್ಕೆ** – ಒಂದು ಕಹಿಕಾಯಿಯ ಗಿಡ
**ಪಾಶಪಾಣಿ** – ಕೈಯಲ್ಲಿ ಹಗ್ಗ ಹಿಡಿದವನು, **ಯಮ**–
**ಪಾಶಬಂಧ** – ಹಗ್ಗದಿಂದ ಕಟ್ಟುವುದು
**ಪಾಶಹಸ್ತ** – ಪಶ್ಚಿಮ ದಿಕ್ಕಿನ ಒಡೆಯ, ವರುಣ
**ಪಾಶುಪತ** – ಒಂದು ಶೈವಪಂಥ
**ಪಾಶುಪತಾಸ್ತ್ರ** – ಶಿವ ಅರ್ಜುನನಿಗಿತ್ತ ಅಸ್ತ್ರ
**ಪಾಷಾಣ** – ಕಲ್ಲು
**ಪಾಷಾಣಹೃದಯ** – ಕಲ್ಲಿನಂತೆ ಕಠಿಣ ಮನಸ್ಸಿನವನು
**ಪಾಸ(ಸು)** – ಹಗ್ಗ
**ಪಾಸ(ಂ)ಗೆ** – ಪಗಡೆಯ ದಾಳ
**ಪಾಸಗೆ** – ಮಲ್ಲಯುದ್ಧದ ಒಂದು ವರಸೆ
**ಪಾಸಟ** – ಸಮಾನ
**ಪಾಸಱೆ** – ಅಗಲವಾದ ಬಂಡೆ; ಹಾಸುಬಂಡೆ
**ಪಾಸಿಕೆ** – ಹಾಸಿಗೆ
**ಪಾಸಿಱೆ** – ಹರಡಿಕೊಂಡಿರು
**ಪಾಸು** – ಹರಡು; ಚಾಚು; ಹಾಸುಗೆ
**ಪಾಸುಂಪೊಕ್ಕುಂ** – ಹಾಸುಹೊಕ್ಕು; ಉದ್ದಗಲವಾಗಿ
**ಪಾಸು(ಗೆ)** – ಹಾಸಿಗೆ
**ಪಾಸುದಳಿರ್** – ಹಾಸಿದ ಚಿಗುರು
**ಪಾಳ್‌ಪಕ್ಕೆ** – ಹಾಳು ಮನೆ
**ಪಾಳಕಾಪ್ಯ** – ಗಜಶಾಸ್ತ್ರ
**ಪಾಳಾಸ** – ಕುದುರೆ ಕಟ್ಟುವ ಹಗ್ಗ
**ಪಾಳಿ** – ಚೂರ್ಣ; ಬಾವುಟ
**ಪಾಳಿಕೇತನ** – ಸಾಲು ಧ್ವಜ; ಏರಿ, ಸೇತುವೆ
**ಪಾಳಿಧ್ವಜ** – ಪಾಳಿಕೇತನ
**ಪಾಳಿಸು** – ರಕ್ಷಿಸು; ಮೀರಿಸು
**ಪಾಳೆ** – ಹಾಳೆ, ಅಡಕೆಪಟ್ಟೆ
**ಪಾಳೇಳ್** – ಹಾಳು ಬೀಳು
**ಪಾಱಿಣೆ** – ಚಾಂಚಲ್ಯವಿಲ್ಲದಂತಾಗು
**ಪಾಱೆ** – ಪಾಣ್ಬೆ, ಸಿತಗೆ, ಹಾದರಗಿತ್ತಿ
**ಪಾಱೆಕ್ಕು** – ಹಾದರ ಮಾಡು
**ಪಾಱೆಸು** – ಓಡಿಸು; ಲಪಟಾಯಿಸು; ಚಿಮ್ಮುವಂತೆ ಮಾಡು
**ಪಾಱು** – ಹಾರು; ಹರಿಗೋಲು; ಚಾಂಚಲ್ಯ
**ಪಾಱುಂಬಳೆ** – ಹಾರುವ ಬಳೆ; ಚಕ್ರಾಯುಧ
**ಪಾಱುಂಬಳೆದಿರುಪು** – ಚಕ್ರದಂತೆ ತಿರುಗಿಸು
**ಪಾಱುಗಂಡ** – ಚಂಚಲ ವ್ಯಕ್ತಿ
**ಪಾಱುಗೆಯ್ತ** – ಹಾರುವಿಕೆ; ಚಂಚಲವೃತ್ತಿ; ಹಾದರ
**ಪಾಱುತನ** – ಹಾರಾಟ
**ಪಾಱುನೀಱೆ** – ಹಾರಾಡುವ ಸುಮದರಿ, ಖೇಚರಸ್ತ್ರೀ
**ಪಾಱುಬೊಜಂಗ** – ಚಂಚಲ ವಿಟ
**ಪಾಱೇೞ್** – ಚಿಮ್ಮಿ ಹೋಗು; ಅವಮಾನಗೊಳ್ಳು
**ಪಾೞ್** – ಹಾಳು; ನಾಶವಾದದ್ದು
**ಪಾೞ** – ಹರಕೆ
**ಪಾೞಂಬಡು** – ಹರಕೆ ಹೊತ್ತುಕೊ
**ಪಾೞೆ** – ಕ್ರಮ, ಸರದಿ; ಪಂಕ್ತಿ, ಸಾಲು; ಕರ್ತವ್ಯ; ನ್ಯಾಯ; ಗದ್ದೆ
**ಪಾೞುನಾಡು** – ಹಾಳುಬಿದ್ದ ದೇಶ
**ಪಾೞ್ಗೆಱೆ** – ಹಾಳುಬಿದ್ದ ಕೆರೆ
**ಪಾೞ್ನೆಲ** – ಕೆಟ್ಟ ನೆಲ; ಹಾಳುಮಾಡುವ ನೆಲ
**ಪಾೞ್ಬಸದಿ** – ಹಾಳುಬಿದ್ದ ಬಸದಿ
**ಪಾೞ್ಮನ** – ಹಾಳು ಮನಸ್ಸು
**ಪಾೞ್ಮನೆ** – ಹಾಳುಬಿದ್ದ ಮನೆ
**ಪಾೞ್ಮಸಗು** – ಹಾಳುಹಾಳುಸುರಿ
**ಪಾೞ್ವಕ್ಕೆ** – ಪಾೞ್+ಪಕ್ಕೆ, ಹಾಳುಬಿದ್ದ ಮನೆ
**ಪಾೞ್ವಕ್ಕೆವಡು** – ಪಾೞ್ವಕ್ಕೆ+ಪಡು, ಹಾಳುಬಿದ್ದ ಮನೆಯಲ್ಲಿ ಮಲಗು, ಅಂದರೆ ವಾಸಿಸು
**ಪಾೞ್ವಸಿರ್** – ಹಾಳು ಹೊಟ್ಟೆ; ಹಸಿದ ಹೊಟ್ಟೆ
**ಪಾೞ್ವಾವಿ** – ಹಾಳುಬಿದ್ದ ಬಾವಿ
**ಪಿಂಗ(ಳ)** – ಕಂದು ಬಣ್ಣದ
**ಪಿಂಗಚಕ್ಷು** – ಏಡಿ; ಕೆಂಗಣ್ಣುಳ್ಳವನು, ದುರ್ಯೋಧನ
**ಪಿಂಗಳನೇತ್ರ** – ಕೆಂಗಣ್ಣು; ಶಿವ
**ಪಿಂಗಳಾಕ್ಷ** – ಪಿಂಗಳನೇತ್ರ
**ಪಿಂಗಳ** – ಸಿಂಹ
**ಪಿಂಗಾಕ್ಷ** – ಪಿಂಗಚಕ್ಷು
**ಪಿಂಗಾಲ್** – ಹಿಂಗಾಲು, ಹಿಮ್ಮಡಿ
**ಪಿಂಗಿಸು** – ಹಿಂಗಿಸು; ಹೋಗಲಾಡಿಸು
**ಪಿಂಗು** – ಹಿಂದಿರುಗು; ಕ್ಷಯಿಸು; ಹೊರಟುಹೋಗು
**ಪಿಂಗೂಳೆಯ** – ಹಿಂದಿರುವ ಗುಂಪು
**ಪಿಂಗೋಳ್** – ಹಿಂಭಾಗ

**ಪಿಂಚಕಚುಂಬಕ** – ಮೊದಲ ಬಾರಿ ಮುತ್ತಿಡುವವನು
**ಪಿಂಚು** – ಹಿಂದೆ ಬೀಳು
**ಪಿಂಚೆಯ** – ನವಿಲು ಗರಿ
**ಪಿಂಛಚ್ಛತ್ರ** – ನವಿಲುಗರಿಯ ಕೊಡೆ
**ಪಿಂಛಾತಪತ್ರ** – ಪಿಂಛಚ್ಛತ್ರ
**ಪಿಂಜರ** – ಹೊಂಬಣ್ಣ; ಕಂದುಬಣ್ಣ
**ಪಿಂಜರಿ** – ಒಂದು ಬಗೆಯ ಹಾವು; ಚಿನ್ನ; ಬೆಳ್ಳಿ
**ಪಿಂಜರಿತ** – ಕಂದುಬಣ್ಣದ; ಹೊಂಬಣ್ಣದ
**ಪಿಂಜರಿವಟ್ಟಲ್** – ಬೆಳ್ಳಿ ಬಟ್ಟಲು
**ಪಿಂಜರಿವೆಡಟ್ಟ** – ಬೆಳ್ಳಿ ಬೆಟ್ಟ
**ಪಿಂಜು** – ಹಿಂಜು, ಹತ್ತಿಯನ್ನು ಎಕ್ಕು
**ಪಿಂಡಚ್ಚನೆ** – ಪಿಂಡು+ಅಚ್ಚನೆ, ಸಮೂಹ ಪೂಜೆ
**ಪಿಂಡಚ್ಛೇದ** – ಪಿಂಡಪ್ರದಾನ ನಿಲ್ಲುವುದು
**ಪಿಂಡಲು** – ರಾಶಿ
**ಪಿಂಡಳಿ** – ಗುಂಪು ಒಡೆ, ಚೆದುರಿಹೋಗು
**ಪಿಂಡಾನೆ** – ಹಿಂಡಿನ ಆನೆ
**ಪಿಂಡಿ** – ಹಿಂಡಿ; ಎಣ್ಣೆ ತೆಗೆದ ಮೇಲೆ ಉಳಿಯುವ ಕಾಳು
**ಪಿಂಡಿಪಿಳಿ** – ಹಿಂಡಿ ತೆಗೆ, ಚೆನ್ನಾಗಿ ಹಿಂಡು
**ಪಿಂಡಿವಾಳ** – ಒಂದು ಆಯುಧ ವಿಶೇಷ
**ಪಿಂಡು** – ಹಿಂಡು; ಹಿಸುಕು; ಗುಂಪು
**ಪಿಂಡಿಗಂಕಣ** – ಒಂದು ಬಗೆಯ ಬಳೆ, ಆಭರಣ
**ಪಿಂಡುಗೂೞ್** – ಮುದ್ದೆಯಾದ ಅನ್ನ
**ಪಿಂಜರ** – ಕಂದುಬಣ್ಣದ; ಹೊಂಬಣ್ಣದ
**ಪಿಂತನೆ** – ಹಿಂದೆಯೆ; ತಕ್ಷಣವೇ
**ಪಿಂತಿಕ್ಕು** – ಹಿಂದಿರಿಸು, ಹಿಂದೆ ಹಾಕು; ಅಲಕ್ಷ್ಯಮಾಡು
**ಪಿಂತಿರಿಸು** – ಪಿಂತಿಕ್ಕು
**ಪಿಂತು** – ಹಿಂಭಾಗ
**ಪಿಂತೆ(ದೆ)** – ಹಿಂಬದಿಯಲ್ಲಿ
**ಪಿಂದಡಿಯಿಡು** – ಅಡಿ ಹಿಂದಿಡು, ಹಿಂಜರಿ
**ಪಿಂದಲೆ** – ಹಿಂದಲೆ, ತಲೆಯ ಹಿಂಭಾಗ
**ಪಿಂದುಗಳೆ** – ಹಿಂದೆ ಸರಿ, ಹಿಮ್ಮೆಟ್ಟು
**ಪಿಂದುಗೆಯ್** – ಹಿಂದೆ ಹಾಕು
**ಪಿಂದಿಗೊಳ್** – ಬೆನ್ನಟ್ಟು
**ಪಿಂದುಳಿ** – ಹಿಂದೆಯೆ ಉಳಿ
**ಪಿಂದೆಗೆ** – ಹಿಂದೆಗೆ, ಹಿಮ್ಮೆಟ್ಟು
**ಪಿಂದೊಡೆ** – ತೊಡೆಯ ಹಿಂಭಾಗ
**ಪಿಂಬಕ್ಕ** – ಹಿಂಭಾಗ
**ಪಿಂಬಗಲ್** – ಹಗಲಿನ ಹಿಂಭಾಗ, ಸಾಯಂಕಾಲ
**ಪಿಂಬ(ಬಿ)ಡು** – ಹಿಂದೆ, ತರುವಾಯ
**ಪಿಕನಿಸ್ವನೆ** – ಕೋಗಿಲೆಯಂತಹ ಧ್ವನಿಯವಳು
**ಪಿಕಳ** – ಕಾಗೆ
**ಪಿಕಾಳ** – ಪಿಕ+ಆಳಿ, ಕೋಗಿಲೆಗಳ ಗುಂಪು
**ಪಿಕ್ಕು** – ಹಿಕ್ಕು; ಬಿಡಿಸು; ಕೆದಕು
**ಪಿಚುಮಂದ** – ಬೇವಿನ ಮರ
**ಪಿಚುಸೋದ** – ಕುಡುಹು, ಹತ್ತಿ ಬಡಿಯುವ ಕೋಲು
**ಪಿಟ್ಟಾಗು** – ಹಿಟ್ಟಾಗು, ಪುಡಿಯಾಗು; ನಾಶವಾಗು
**ಪಿಟ್ಟು** – (ಪಿಷ್ಟ) ಹಿಟ್ಟು
**ಪಿಟ್ಟುಗುಟ್ಟು** – ಹಿಟ್ಟಾಗುವಂತೆ ಕುಟ್ಟು; ಪುಡಿಪುಡಿಮಾಡು
**ಪಿಟ್ಟುಗೆಯ್** – ಪುಡಿಮಾಡು
**ಪಿಟ್ಟಿನ್** – ಏನಾದರೂ ಮಾತಾಡು
**ಪಿಡಿ** – ಕೈಯಲ್ಲಿ ಹಿಡಿದುಕೊ; ತೆಗದುಕೊ; ಮುಷ್ಟಿ; ಮೊದಲುಮಾಡು; ಹೆಣ್ಣಾನೆ
**ಪಿಡಿಕೆಯ್** – ಮುಷ್ಟಿ
**ಪಿಡಿಕೆಯ್ಸು(ಕೈಸು)** – ಹಿಡಿಯುವಂತೆ ಮಾಡು
**ಪಿಡಿಕೆವೆಱು** – ಹಿಡಿತಕ್ಕೊಳಗಾಗು
**ಪಿಡಿಖಂಡಂಗೊಯ್** – ತುಂಡುಗಳಾಗಿ ಕತ್ತರಿಸು
**ಪಿಡಿಖಂಡಂಗೊಳ್** – ತುಂಡುಗಳಾಗಿ ಮಾಡು
**ಪಿಡಿಕ(ಗ)ಟ್ಟು** – ಹಿಡಿದು ಕಟ್ಟು, ಬಂಧಿಸು; ಬಂಧನ
**ಪಿಡಿಗುದುರೆ** – ಹೆಣ್ಣು ಕುದುರೆ
**ಪಿಡಿತರಿಸು** – ಹಿಡಿದು ತರಿಸು; ಸೆರೆಗೈಸು
**ಪಿಡಿಪೀ** – ವಶಕ್ಕೆ ಒಪ್ಪಿಸು
**ಪಿಡಿಪೆಱು** – ಸೆರೆಸಿಕ್ಕು
**ಪಿಡಿಯಚ್ಚು** – ಪಡಿಯಚ್ಚು
**ಪಿಡಿಯಚ್ಚುವಿಡಿ** – ಬಲವಾಗಿ ಹಿಡಿ; ದೃಢವಾಗಿ ನೆಚ್ಚು
**ಪಿಡಿಯಾನೆ** – ಹೆಣ್ಣಾನೆ
**ಪಿಡಿಯಿಸು** – ಹಿಡಿಸು, ಹಿಡಿಯುವಂತೆ ಮಾಡು
**ಪಿಡಿವಡು** – ಪಿಡಿ+ಪಡು, ಸೆರೆಗೊಳಗಾಗು
**ಪಿಡಿವಡೆ** – ಪಿಡಿವಡು
**ಪಿಡಿವೆ(ಪೆ)ಱು** – ಪಿಡಿವಡು
**ಪಿಡುಗು** – ಸಿಡಿ; ಸಿಡಿಲು; ಸೀಳು
**ಪಿಣಿ** – ಸೆರೆಹಿಡಿ
**ಪಿಣಿಲ್** – ಹಿಣಿಲು; ಹೆಣೆದುಕೊಂಡಿರುವುದು; ಜಡೆ; ಪ್ರಾಣಿಗಳ ಬೆನ್ನ ಮೇಲಿನ ಗುಬುಟು
**ಪಿಣಿಲಿಱಿ** – ಹೆಣೆದುಕೊ
**ಪಿಣಿಲೇಱು** – ಹೆಣೆದುಕೊ; ಬೆನ್ನ ಮೇಲ ಗುಬುಟಿನವರೆಗೂ ಹಬ್ಬು
**ಪಿಣಿಲ್ಗಂಡ** – ಹಿಣಿಲಿನ ಮಾಂಸಖಂಡ
**ಪಿಣ್ಣ** – ದಪ್ಪನಾದ
**ಪಿತರ** – ಪಿತೃ; ಸತ್ತಿರುವ ಹಿರಿಯ
**ಪಿತಾಮಹ** – ತಂದೆಯ ತಂದೆ, ತಾತ; ಬ್ರಹ್ಮ
**ಪಿತೃ** – ತಂದೆ; ಪೂರ್ವಿಕ
**ಪಿತೃದ್ವಂದ್ವ** – ತಾಯ್ತಂದೆಯರು
**ಪಿತೃಪತಿ** – ಪಿತೃಗಳ ಯಜಮಾನ, ಯಮ
**ಪಿತೃಭಕ್ತತೆ** – ಹಿರಿಯರ ಬಗೆಗಿನ ಗೌರವ
**ಪಿತೃಭಕ್ತಿ** – ಪಿತೃಭಕ್ತತೆ
**ಪಿತೃವನ** – ಶ್ಮಶಾನ
**ಪಿತೃವಿತ್ತ** – ಪಿತ್ರಾರ್ಜಿತ ಆಸ್ತಿ
**ಪಿತೃವಿಯೋಗ** – ತಂದೆಯ ವಿಯೋಗ, ಮರಣ

**ಪಿತೃವ್ಯ** – ತಂದೆಯ ಒಡಹುಟ್ಟಿದವನು
**ಪಿತ್ತಳೆ** – (ಪಿತ್ತಲ) ಹಿತ್ತಾಳೆ; ತಾಮ್ರ–ಸತುಗಳ ಮಿಶ್ರಲೋಹ–
**ಪಿತ್ತಾವಿಳ** – ಪಿತ್ತಸಂಬಂಧಿ ರೋಗವುಳ್ಳವನು
**ಪಿನದ್ಧ** – ಕಟ್ಟಿರುವ; ಸೇರಿಸಿರುವ
**ಪಿನಾಕಪಾಣಿ** – ಪಿನಾಕವನ್ನು ಧರಿಸಿದವನು, ಶಿವ
**ಪಿನ್ನೆ** – ಸೂಜಿಯ ಕಣ್ಣು
**ಪಿಪಾಸೆ** – ಬಾಯಾರಿಕೆ
**ಪಿಪೀಲಿಕ(ಕೆ)** – ಇರುವೆ
**ಪಿಪ್ಪಲ** – ಅರಳಿಯ ಮರ
**ಪಿಪ್ಪಲಿ** – ಒಂದು ಸಸ್ಯ, ಬಾಲಮೆಣಸು
**ಪಿಪ್ಪಲೀಪತ್ರ** – ಅರಳಿಯ ಎಲೆ
**ಪಿಮ್ಮೆಟ್ಟು** – ಹಿಮ್ಮೆಟ್ಟು, ಹಿಂದೆ ಸರಿ
**ಪಿರಿದು** – ದೊಡ್ಡದು; ಮಿಗಿಲಾದುದು
**ಪಿರಿದುಂ** – ಹೆಚ್ಚಾಗಿ
**ಪಿರಿಯಣ್ಣ** – ಹಿರಿಯ ಅಣ್ಣ
**ಪಿರಿಯರಸಿ** – ಹಿರಿಯ ರಾಣಿ, ಪಟ್ಟದ ರಾಣಿ
**ಪಿಲ್ಲಣಿ(ಗೆ)** – ಕಬ್ಬಿಣದ ಒಂದು ಆಯುಧ; ದೊಣ್ಣೆ
**ಪಿಶಂಗ(ತೆ)** – ನಸುಗೆಂಪು
**ಪಿಶಂಗತಲ** – ನಸುಗೆಂಪು ಅಂಗಾಲು
**ಪಿಶಂಗಿತ** – ನಸುಗೆಂಪು ಬಣ್ಣದಿಂದ ಕೂಡಿದ
**ಪಿಶಾಚ** – ದೆವ್ವ; ದೇಹವಿಲ್ಲದ ಪ್ರೇತಾತ್ಮ
**ಪಿಶಿತ** – ಮಾಂಸ; ಮಾಂಸದ ಅಡುಗೆ
**ಪಿಶಿತಖಂಡ** – ಮಾಂಸಖಂಡ; ಮಾಂಸದ ತುಂಡು
**ಪಿಶಿತಾಶಿ** – ರಾಕ್ಷಸ; ನೈಋತ್ಯಾಧಿಪತಿ, ನಿರುತಿ
**ಪಿಶಿತಾಹಾರ** – ಮಾಂಸದ ಊಟ
**ಪಿಶುನ** – ಚಾಡಿ ಹೇಳುವುದು; ಚಾಡಿಕೋರ
**ಪಿಷ್ಟ** – ಹಿಟ್ಟು; ಪುಡಿ
**ಪಿಷ್ಟಚರ್ಚೆ** – ರಂಗೋಲಿ
**ಪಿಷ್ಟಪೇಷಣ** – ಹಿಟ್ಟನ್ನೇ ಕುಟ್ಟುವುದು; ಹೇಳಿದ್ದನ್ನೇ ಹೇಳುವುದು; ಚರ್ವಿತಚರ್ವಣ
**ಪಿಷ್ಟಾತ(ಕ)** – ಬಟ್ಟೆಗಳಿಗೆ ಪರಿಮಳ ಕಟ್ಟುವ ಸುಗಂಧದ್ರವ್ಯ
**ಪಿಷ್ಟಾತಕೇಳಿ** – ಪರಸ್ಪರ ಸುಗಂಧದ್ರವ್ಯ ಎರಚುವ ಆಟ
**ಪಿಷ್ಟಾತಕಚೂರ್ಣ** – ಪಿಷ್ಟಾತ(ಕ)
**ಪಿಷ್ಟಿ** – ಹಿಟ್ಟು
**ಪಿಷ್ಟೋದಕ** – ಹಿಟ್ಟಿನೊಡನೆ ಬೆರೆಸಿದ ನೀರು
**ಪಿಸುಂಕು** – ಹಿಸುಕು, ಹಿಂಡು
**ಪಿಸುಗುಟ್ಟು** – ಕಿವಿಯಲ್ಲಿ ಮೆಲ್ಲಗೆ ಮಾತಾಡು
**ಪಿಸುಣ್** – ಕುತ್ಸಿತ, ಚಾಡಿ
**ಪಿಸುಣಾಡು** – ಚಾಡಿ ಹೇಳು
**ಪಿಸುಣ್ಗೆಡೆ** – ಅಪವಾದ ಹೊರಿಸು
**ಪಿಸುಣ್ಣೇೞ್** – ಚಾಡಿ ಹೇಳು
**ಪಿಸುವಾತು** – ಪಿಸುಗುಟ್ಟುವ ಮಾತು
**ಪಿಸಿಱ್** – ಸೀಳು; ಹರಿದು ಹೋಗು

**ಪಿಹಿತ** – ಮರೆಮಾಡಿದ
**ಪಿಳಿ** – ಹಿಳಿ; ಬಿರಿಯು
**ಪಿಳಿಗು** – ಸೀಳು
**ಪಿಳಿಲ್** – ಎಸೆ
**ಪಿಳುಕು** – ಮರಿ
**ಪಿಳ್ಕು** – ಹಿಳಿಕು, ಗರಿಯಿರುವ ಬಾಣದ ಹಿಂಭಾಗ
**ಪಿಳ್ಗಸು** – ಹಿಗ್ಗಿಸು, ದೊಡ್ಡದಾಗಿಸು
**ಪಿಳ್ಗು** – ಹಿಗ್ಗು, ದೊಡ್ಡದಾಗು; ಸಂತಸಪಡು
**ಪಿಳ್ಳೆ** – ಮಗು
**ಪಿಱಿತಿನಿ** – ಪಿಶಾಚ; ಮರುಳು
**ಪಿೞಿ** – ಹಿಂಡು; ಹಾಲು ಕರೆ
**ಪಿೞಿದು ಪಿಂಡು** – ತುಂಬ ಹಿಂಸೆ ಕೊಡು
**ಪಿೞಿನೀರು** – ಹಿಂಡಿದ ನೀರು
**ಪಿೞಿಯಿಸು** – ಹಿಂಡುವಂತೆ ಮಾಡು
**ಪಿೞಿಲ್** – ಎಸೆ, ಬಿಸಾಡು
**ಪೀಠಮರ್ದ(ಕ)** – ಶೃಂಗಾರ ವಿಷಯದಲ್ಲಿ ನಾಯಕನಿಗೆ ಸಹಾಯ ಮಾಡುವವನು
**ಪೀಠಿಕಾಪ್ರಕರಣ** – ಆರಂಭದ ಘಟನೆ
**ಪೀಠಿಕೆ** – ಪೀಠ, ಆಸನ
**ಪೀಡಿತ** – ಹಿಂಸೆಗೊಳಗಾದ
**ಪೀಡಿಸು** – ಹಿಂಸಿಸು, ಕಾಟಕೊಡು
**ಪೀಡೆ** – ದುಃಖ; ಅನಿಷ್ಟ; ಕಾಟಕೊಡುವ ವ್ಯಕ್ತಿ
**ಪೀತ** – ಹೀರಿಕೊಂಡ
**ಪೀತನ** – ಅಂಬಟೆ ಗಿಡ
**ಪೀತವಸನ** – ರೇಷ್ಮೆ ವಸ್ತ್ರ(ಧಾರಿ); ವಾಸುದೇವ
**ಪೀತಾಂಬರ(ಧರ)** – ಪೀತವಸನ
**ಪೀತಾಂಶುಕ** – ಹೊಂಬಣ್ಣದ ಕಾಂತಿಯವನು, ಅಗ್ನಿ
**ಪೀನ** – ದಪ್ಪವಾಗಿರುವ
**ಪೀನಂ** – ಹೆಚ್ಚಾಗಿ
**ಪೀನಸ** – ನೆಗಡಿ
**ಪೀನೋದರ** – ಡೊಳ್ಳು ಹೊಟ್ಟೆ(ಯುಳ್ಳವನು)
**ಪೀಯೂಷ** – ಅಮೃತ; ಹಾಲು
**ಪೀರ್** – ಹೀರು; ಚಪ್ಪರಿಸು
**ಪೀರ್ತರ್** – ಹೀರಲ್ಪಡು
**ಪೀಲಿ** – ನವಿಲುಗರಿ
**ಪೀಲಿಗಣ್** – ನವಿಲುಗರಿಯ ಕಣ್ಣು
**ಪೀಲಿಗರಗ** – ಪೀಲಿ+ಕರಗ, ನವಲುಗರಿಗಳಿಂದ ಅಲಂಕೃತಗೊಂಡ ಗಡಿಗೆ
**ಪೀಲಿದಟಿ** – ಪಿಂಛಾತಪತ್ರ
**ಪೀಲಿವಿಜ್ಜಣಿಗೆ** – ನವಿಲುಗರಿಯ ಬೀಸಣಿಗೆ
**ಪೀಲಿವೊಱೆ** – ನವಿಲುಗರಿಗಳ ಹೊರೆ
**ಪೀವರ** –ದೊಡ್ಡದಾದ
**ಪೀಱು** – ಕೆದರು; ಚೆದುರುವಿಕೆ; ಇರಿಚಲು
**ಪೀಠಿಗೆ** – (ಪೀಠಿಕಾ) ಪೀಠ; ಸಿಂಹಾಸನ
**ಪುಂಕಿ(ಱ)ಸು** – ಊದು; ಧ್ವನಿಗೈ
**ಪುಂಕೃತಿ** – ಹೂಂಕಾರ, ಶಬ್ದ
**ಪುಂಖ** – ಗರಿ; ಬಾಣದ ಹಿಳಿಕು

**ಪುಂಖಾನುಪುಂಖ** – ಬಾಣಪರಂಪರೆ
**ಪುಂಖಾನುಪುಂಖಂ** – ಬಾಣಗಳು ಒಂದನ್ನೊಂದು ಹಿಂಬಾಲಿಸುವಂತೆ
**ಪುಂಗವ** – ಹೋರಿ
**ಪುಂಗವಧ್ವಜ** – ವೃಷಧ್ವಜ, ಶಿವ
**ಪುಂಖ** – ಬಾಣದ ಹಿಂಭಾಗ
**ಪುಂಜ** – ಹುಂಜ; ಗುಂಪು
**ಪುಂಜಿ** – ಉಂಡೆ
**ಪುಂಜಿಕೆ(ಗೆ)** – ಗೊಂಚಲು; ರಾಶಿ
**ಪುಂಜಿಸು** – ಗುಡ್ಡೆ ಮಾಡು
**ಪುಂಡರೀಕ** – ಬಿಳಿಯ ತಾವರೆ; ಬೆಳ್ಗೊಡೆ; ಹುಲಿ; ಐರಾವತ
**ಪುಂಡ್ರಾಂಬುಜ** – ಬಿಳಿದಾವರೆ
**ಪುಂಡ್ರೇಕ್ಷುದಂಡೆ** – ಪಟ್ಟೆಕಬ್ಬು ಜಲ್ಲೆ
**ಪುಂಡ್ರೇಕ್ಷುವಾಟ** – ಕಬ್ಬಿನ ತೋಟ
**ಪುಂಭಾವ** – ಗಂಡಸಿನ ಮನೋಭಾವ
**ಪುಂವೇದ** – (ಜೈನ) ಗಂಡುಜೀವಕ್ಕೆ ಹೆಣ್ಣಿನ ಮೋಹವುಂಟುಮಾಡುವ ಕರ್ಮ
**ಪುಂಶ್ಚಲಿ(ಳಿ)** – ಹಾದರಗಿತ್ತಿ; ಗಂಡುಬೀರಿ
**ಪುಂಸವನ** – ಷೋಡಶಸಂಸ್ಕಾರಗಳಲಿ ಒಂದು; ಗರ್ಭಿಣಿಗೆ ಗಂಡುಮಗುವಾಗಲೆಂದು ಮಾಡುವ ಸೀಮಂತೋನ್ನಯನ
**ಪುಂಸ್ಕೇಸರಿ** – ಗಂಡು ಹುಲಿ
**ಪುಂಸ್ಕೋಕಿಲ(ಳ)** – ಗಂಡು ಕೋಗಿಲೆ
**ಪುಗ(ಗಿ)ಲ್** – ಪ್ರವೇಶ; ಬಾಗಿಲು; ಆರಂಭ; ಕತ್ತಿವರಸೆಯ ಒಂದು ಭಂಗಿ; ಕೋಗಿಲೆಯ ಕೂಜನ
**ಪುಗಿಲ್ಗರೆ** – ಕೂಜಿಸು, ಧ್ವನಿಗೈ
**ಪುಗಿ(ಯಿ)ಸು** – ಒಳಗೆ ಸೇರಿಸು
**ಪುಗುತರ್** – ಪ್ರವೇಶಿಸು
**ಪುಗುಲ್ವಿಡು** – ಎಡೆ ಕೊಡು
**ಪುಗುಳ್(ೞ್)** – ಬೊಕ್ಕೆ, ದದ್ದು
**ಪುಗುಳೇೞ್** – ಬೊಕ್ಕೆಯೇಳು
**ಪುಗುಳೊಡೆ** – ಪುಗುಳೇೞ್
**ಪುಗ್ಗಾಯಿಲ** – ಗರ್ವಿಷ್ಠ
**ಪುಗ್ಗಾಯ್ಲ** – ಪುಗ್ಗಾಯಿಲ
**ಪುಚ್ಚವಣಂ** – ಪರೀಕ್ಷೆ
**ಪುಚ್ಚೞಿ** – ನಾಶವಾಗು
**ಪುಚ್ಚೞಿಸು** – ನಾಶಗೊಳಿಸು
**ಪುಟ** – ನೆಗೆತ; ದೊನ್ನೆ; ಮೂಸೆ
**ಪುಟಂನೆಗೆ** – ಛಂಗನೆ ನೆಗೆ
**ಪುಟಪಾಕ** – ಶುದ್ಧಿಗೊಳಿಸಲು ಬೇಯಿಸುವುದು
**ಪುಟವಿಡು** – ಪುಟಕ್ಕೆ ಹಾಕು; ಶುದ್ಧಿಗೊಳಿಸು
**ಪುಟವೇೞು** – ಶೋಭೆಯನ್ನು ಪಡೆ
**ಪುಟವೇೞ್** – ನೆಗೆದಾಡು; ಉತ್ಸಾಹಗೊಳ್ಳು
**ಪುಟಿಕೆ** – ಭರಣಿ
**ಪುಟ್ಟಜ** – ಹುಟ್ಟಿದ ಜಾಗ; ತವರು
**ಪುಟ್ಟಿ** – ಬುಟ್ಟಿ; ಜೇನುಗೂಡು
**ಪುಟ್ಟಿಗೆ** – ಸೀರೆ; ಬುಟ್ಟಿ
**ಪುಟ್ಟಿಸು** – ಹುಟ್ಟಿಸು; ಸೃಷ್ಟಿ ಮಾಡು
**ಪುಟ್ಟು** – ಹುಟ್ಟು; ಜನ್ಮಿಸು; ಜನ್ಮ; ಮರದ ಸೌಟು; ದೋಣಿ ನಡೆಸುವ ಸಾಧನ
**ಪುಟ್ಟು(ಂ)ಗುರುಡ(ಡಿ)** – ಹುಟ್ಟು ಕುರುಡ(ಡಿ)
**ಪುಟ್ಟುವೆಟ್ಟು** – (ಸೂರ್ಯ) ಮೂಡುವ ಬೆಟ್ಟ
**ಪುಡಿ** – ಹಿಟ್ಟು
**ಪುಡಿ(ಡು)ಕೆ** – ಭರಣಿ; ಪೆಟ್ಟಿಗೆ
**ಪುಡಿಗುಟ್ಟಿಸು** – ಪುಡಿಪುಡಿಯಾಗಿಸು
**ಪುಡಿಗುಟ್ಟು** – ಪುಡಿಯಾಗುವಂತೆ ಕುಟ್ಟು
**ಪುಡಿಯಾಡು** – ಮಣ್ಣಲ್ಲಿ ಆಡು
**ಪುಡಿವಿಡು** – ನಾಶಗೊಳ್ಳು
**ಪುಡು(ಂ)ಕು** – ಹುಡುಕು, ಅರಸು
**ಪುಡು(ಂ)ಕುನೀರ್** – ಸುಡುವ ನೀರು
**ಪುಡುಕುನೀರಟ್ಟು(ರ್ದು)** – ಬಿಸಿನೀರಲ್ಲಿ ಅದ್ದು
**ಪುಣ್** – ಹುಣ್ಣು, ಗಾಯ
**ಪುಣಿಲ್** – ಮರಳುದಿಣ್ಣೆ
**ಪುಣುಂಬು** – ಬಾಣ
**ಪುಣ್ಗಲೆ** – ಗಾಯದ ಕಲೆ
**ಪುಣ್ಣ(ಣ್ಣಿ)ಮೆ(ಮಿ)(ವೆ)** – (ಪೂರ್ಣಿಮಾ)) ಹುಣ್ಣಿಮೆ; ಪೂರ್ಣ ಚಂದ್ರನಿರುವ ದಿನ
**ಪುಣ್ಬಡಿಸು** – ಹುಣ್ಣು ಮಾಡು, ಗಾಯಗೊಳಿಸು
**ಪುಣ್ಬಡು** – ಗಾಯಗೊಳ್ಳು
**ಪುಣ್ಬಡೆ** – ಪುಣ್ಬಡು
**ಪುಣ್ಬೆೞು** – ಪುಣ್ಬಡು
**ಪುಣ್ಬೊಲಸು** – ಹುಣ್ಣಿನ ಕೊಳೆ
**ಪುಣ್ಯ** – ಸುಂದರವಾದ; ಪವಿತ್ರವಾದ
**ಪುಣ್ಕರ್ಮ** – ಶ್ರೇಯಸ್ಕರವಾದ ಕೆಲಸ
**ಪುಣ್ಯಕ್ಷಯ** – ಪುಣ್ಯವು ಕಳೆದುಹೋಗುವುದು
**ಪುಣ್ಯಕ್ಷೇತ್ರ** – ಪವಿತ್ರವಾದ ಸ್ಥಳ
**ಪುಣ್ಯಜನ** – ಪುಣ್ಯವಂತರು; ರಾಕ್ಷಸರು
**ಪುಣ್ಯಪದಾರ್ಥ** – (ಜೈನ) ನವಪದಾರ್ಥಗಳಲ್ಲಿ ಒಂದು
**ಪುಣ್ಯಪಾಠಕ** – ಶುಭ ನುಡಿಯುವವನು
**ಪುಣ್ಯಜ್ಞ** – (ಜೈನ) ದೀಕ್ಷೆ ಪಡೆದವನು ಮಾಡುವ ಚತುರ್ದಶಪೂರ್ವಗಳ ಓದುವಿಕೆ ಮತ್ತು ಕೇಳುವಿಕೆ; ಆರನೆಯ ದೀಕ್ಷಾನ್ವಯಕ್ರಿಯೆ
**ಪುಣ್ಯವಂತ** – ಪುಣ್ಯ ಮಾಡಿದವನು
**ಪುಣ್ಯವತಿ** – ಪುಣ್ಯ ಮಾಡಿದವಳು
**ಪುಣ್ಯವಾಸರ** – ಶುಭದಿನ
**ಪುಣ್ಯಾಸ್ರವ** – (ಜೈನ) ಪುಣ್ಯವು ಜೀವನಲ್ಲಿ ಸೇರುವುದು; ಪುಣ್ಯಸಂಪಾದನೆ
**ಪುಣ್ಯಾಹ** – ಪುಣ್ಯದಿನ
**ಪುಣ್ಯೋದ** – ಪವಿತ್ರಜಲ
**ಪುತ್ತನೇ(ವೇ)ೞು** – ಯುದ್ಧದಲ್ಲಿ ಶರಣಾಗುವುದನ್ನು ಸೂಚಿಸಲು ಹುತ್ತದ ಮೇಲೆ ಹತ್ತು

**ಪುತ್ತಳಿಗೆ** – ಬೊಂಬೆ
**ಪುತ್ತಿಗೆ** – (ಪುತ್ರಿಕೆ) ಬೊಂಬೆ
**ಪುತ್ತಿಡು** – ಹುತ್ತಗಟ್ಟು
**ಪುತ್ತು** – ಹುತ್ತ; ಗೆದ್ದಲು ಕಟ್ಟು ಗೂಡು
**ಪುತ್ತುಂಗಾಲ್** – ಆನೆ ಕಾಲು ರೋಗ
**ಪುತ್ತೇಱು** – ಪುತ್ತನೇ(ವೇ)ಱು
**ಪುತ್ರ** – ಮಗ
**ಪುತ್ರದೋಹಳ** – ಗಂಡುಮಗುವನ್ನು ಪಡೆಯುವ ಬಯಕೆ
**ಪುತ್ರದೌಹೃದ** – ಪುತ್ರದೋಹಳ
**ಪುತ್ರಾಂತರಾಯ** – ಮಕ್ಕಳಾಗುವುದಕ್ಕಿರುವ ಅಡ್ಡಿ
**ಪುತ್ರಿಕೆ** – ಬೊಂಬೆ
**ಪುದಿ** – ತುಂಬು; ಸೇರು; ಪಡೆ; ಬಾಗಿಲಿನ ಪಕ್ಕ
**ಪುದಿವು** – ಸೇರುವಿಕೆ; ಗುಂಪು; ಆವರಣ
**ಪುದು(ವು)** – ಜೊತೆ, ಸೇರುವಿಕೆ; ಸಹವಾಸ; ಜಂಟಿ ಒಡೆತನ; ಸದೃಶವಾದ
**ಪುದು(ಂ)ಗೊಳ್** – ಬೆರೆತುಕೊ
**ಪುದು(ಂ)ಗೊಳಿಸು** – ಬೆರಸು; ಬೆರೆತುಹೋಗು; ಪಡೆ
**ಪುದುಗಳ್ಳ** – ಜೊತೆಗಿನ ಕಳ್ಳ
**ಪುದುಮಾಡ** – ಸಾಲು ಹರ್ಮ್ಯ
**ಪುದುವಾೞ್** – ಕೂಡಿಬಾಳು; ದಾಂಪತ್ಯ ನಡೆಸು
**ಪುದುವಾೞ್ಕೆ** – ಸಹಬಾಳುವೆ; ದಾಂಪತ್ಯ
**ಪುದುವೀ** – ಹಂಚಿ ಕೊಡು
**ಪುದುವುಗು** – ಹೊಂದಿಕೊ
**ಪುದುವೆನಿಸು** – ಸಮಾನವಾಗಿ ತೋರು
**ಪುದುವೆಱು** – ಸಮಾನವಾಗು
**ಪುದ್ಗಲ(ಳ)** – (ಜೈನ) ಪರಮಾಣುಗಳ ಸಂಯೋಗದಿಂದ ಉಂಟಾದ ಹಾಗೂ ಸ್ಪರ್ಶ, ಗಂಧ, ಬಣ್ಣಗಳನ್ನು ಹೊಂದಿದಿ ಅಜೀವಸತ್ವ
**ಪುದ್ಗಲದ್ರವ್ಯ** – (ಜೈನ) ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಷಡ್ದ್ರವ್ಯಗಳಲ್ಲಿ ಒಂದು, ನೋಡಿ, 'ಷಡ್ದ್ರವ್ಯ'
**ಪುದ್ಗಲಪುಂಜ** – (ಜೈನ) ಪುದ್ಗಲ ಪರಮಾಣುಗಳು ಸೇರಿ ಉಂಟಾಗುವ ದ್ರವ್ಯ
**ಪುದ್ಗಲಾಸ್ತಿಕಾಯ** – (ಜೈನ) ಅಸ್ತಿಕಾಯಗಳಲ್ಲಿ ಒಂದು, ನೋಡಿ, 'ಅಸ್ತಿಕಾಯ'
**ಪುನರುಕ್ತ** – ಮತ್ತೆ ಹೇಳಿದ
**ಪುನರ್ದರ್ಶನ** – ಮತ್ತೆ ಕಾಣುವಿಕೆ
**ಪುನರ್ನವ** – ಪುನಃ ಹೊಸದಾಗುವ
**ಪುನ್ನಾಗ** – ಗಂಡಾನೆ; ಹಾವು; ಸುರ ಹೊನ್ನೆ
**ಪುಪ್ಪಕ** – ಬಿಸಿ
**ಪುಬ್ಬೆ** – (ಪೂರ್ವೆ) ಒಂದು ನಕ್ಷತ್ರದ ಹೆಸರು; (ಜೈನ) ದೀರ್ಘ ಕಾಲಾವಧಿ, ಎಪ್ಪತ್ತುಲಕ್ಷ ಮೂವತ್ತು ಸಾವಿರ ಕೋಟಿ ವರ್ಷಗಳು
**ಪುಯ್ಯಲ್** – ಹುಯ್ಯಲು, ಗೋಳು; (ಪೊಯಲ್) ಯುದ್ಧ
**ಪುಯ್ಯಲಿಕ್ಕು** – ರಕ್ಷಣೆಗಾಗಿ ಕೂಗಿಕೊ
**ಪುಯ್ಯಲಿಡು** – ಪುಯ್ಯಲಿಕ್ಕು
**ಪುಯ್ಯಲಿಸು** – ಪುಯ್ಯಲಿಕ್ಕು
**ಪುಯ್ಯಲ್ಚು** – ಪುಯ್ಯಲಿಕ್ಕು
**ಪುಯ್ಯಲ್ವೋಗು** – ಕಾಳಗಕ್ಕೆ ಹೋಗು
**ಪುರ** – ನಗರ
**ಪುರಂದರ** – ಇಂದ್ರ
**ಪುರಂದರಚಾಪ** – ಇಂದ್ರಚಾಪ, ಕಾಮನ ಬಿಲ್ಲು
**ಪುರಂಧ್ರಿ** – ಹೆಂಗಸು; ಮುತ್ತೈದೆ
**ಪುರಃಪ್ರದರ್ಶಿತ** – ಮುಂಚೆಯೇ ತೋರಿಸಿದ
**ಪುರಜನ** – ನಾಗರಿಕರು
**ಪುರದೇವತೆ** – ಊರ ಅಧಿದೇವತೆ
**ಪುರಭೃತ್** – ಊರ ಒಡೆಯ, ರಾಜ
**ಪುರಮಥನ** – ತ್ರಿಪುರಗಳನ್ನು ಸುಟ್ಟವನು, ಶಿವ
**ಪುರಸ್ಸರ** – ಮುಂದೆ ಬರುವ; ಶ್ರೇಷ್ಠವಾದ
**ಪುರಸ್ಸರಂ** – ಪುರಸ್ಸರವಾಗಿ. ಜೊತೆಗೂಡಿ
**ಪುರಸ್ಸರತೆ** – ಕೂಡಿಕೊಂಡಿರುವಿಕೆ
**ಪುರಹರ** – ಪುರಮಥನ
**ಪುರಾಂಗನೆ** – ನಗರದಲ್ಲಿನ ಹೆಂಗಸು
**ಪುರಾಕೃತ** – ಹಿಂದೆ ಅಥವಾ ಹಿಂದಿನ ಜನ್ಮಗಳಲ್ಲಿ ಮಾಡಿದ
**ಪುರಾಣ** – ಹಳೆಯ
**ಪುರಾಣಕಮಠ** – ಪುರಾತನವಾದ ಆಮೆ, ವಿಷ್ಣುವಿನ ಕೂರ್ಮಾವತಾರ
**ಪುರಾಣಕವಿ** – ಹಿಂದಿನ ಕವಿ; ಪುರಾಣ ರಚಿಸಿದ ಕವಿ
**ಪುರಾಣಚೂಡಾಮಣಿ** – ಅತ್ಯುತ್ತಮ ಪುರಾಣ
**ಪುರಾಣಪುರುಷ** – ಮುದುಕ
**ಪುರಾಣವಾಕ್ಯ** – ಹಳೆಯ ಮಾತು, ಗಾದೆ
**ಪುರಾತನ** – ಪ್ರಾಚೀನ ಕಾಲದ
**ಪುರಾತನಮತ** – ಹಿಂದಿನವರ ಅಭಿಪ್ರಾಯ
**ಪುರಾಧೀಶ** – ನಗರದ ಒಡೆಯ, ರಾಜ
**ಪುರಿ** – ಹುರಿ, ಕಾಯಿಸು; ನಗರ
**ಪು(ಹು)ರಿಗಡಲೆ** – ಹುರಿದ ಕಡಲೆ
**ಪುರಿಗಣೆ** – ಹೆಚ್ಚಿನ ಶಕ್ತಿಯ ಬಾಣ
**ಪುರಿವರಲ್** – ಬಿಸಿಯಾದ ಕಲ್ಲು
**ಪುರೀಷ** – ಮಲ, ಅಮೇಧ್ಯ
**ಪುರು** – ವಿಪುಲವಾದ; ಹಿರಿದಾದ; (ಜೈನ) ಮೊದಲನೆಯ ತೀರ್ಥಂಕರನ ಹೆಸರುಗಳಲ್ಲಿ ಒಂದು
**ಪುರುಚರಿತ** – ತೀರ್ಥಂಕರಚರಿತೆ
**ಪುರುಡಿ** – ಹೊಟ್ಟೆಕಿಚ್ಚು ಪಡುವವಳು
**ಪುರುಡಿಗ** – ಹೊಟ್ಟೆಕಿಚ್ಚು ಪಡುವವನು
**ಪುರುಡಿಸು** – ಸ್ಪರ್ಧೆ ಮಾಡು; ಹೊಟ್ಟೆಕಿಚ್ಚುಪಡು
**ಪುರುಡು** – ಹುರುಡು, ಸ್ಪರ್ಧೆ

**ಪುರುಭೂತಿ** – ಅಧಿಕ ಲಾಭ; ಹೆಚ್ಚಿನ ಶ್ರೇಯಸ್ಸು
**ಪುರುಷ** – ಮನುಷ್ಯ; ಗಂಡತ್ರಿಮೂರ್ತಿಗಳಲ್ಲಿ ಪ್ರತಿಯೊಬ್ಬ
**ಪುರುಷಕಾರ** – ಮನುಷ್ಯ ಪ್ರಯತ್ನ
**ಪುರುಷಗುಣ** – ಗಂಡಸಿಗೆ ತಕ್ಕನಾದ ಲಕ್ಷಣ
**ಪುರುಷತ್ರಯ** – ಬ್ರಹ್ಮ ವಿಷ್ಣು ಮಹೇಶ್ವರರು
**ಪುರುಷಧರ್ಮ** – ಗಂಡ ಪಾಲಿಸಬೇಕಾದ ಧರ್ಮ
**ಪುರುಷಬ್ರ(ವ್ರ)ತ** – ಬ್ರಹ್ಮಚರ್ಯ
**ಪುರುಷಭಿಕ್ಷ** – ಗಂಡನಿಗೆ ಜೀವದಾನ ಮಾಡುವುದು
**ಪುರುಷಭೈಕ್ಷ(ಕ್ಷೆ)** – ಪುರುಷಭಿಕ್ಷ
**ಪರುಷರ್ ಮೂವರ್** – ತ್ರಿಮೂರ್ತಿಗಳು: ಬ್ರಹ್ಮ, ವಿಷ್ಣು, ಮಹೇಶ್ವರ
**ಪುರುಷರತುನ(ರತ್ನ)** – ಶ್ರೇಷ್ಠ ಪುರುಷ
**ಪುರುಷವೇದ** – (ಜೈನ) ಇಪ್ಪತ್ತೆಂಟು ಪ್ರಕಾರದ ಮೋಹನೀಯಕರ್ಮಗಳಲ್ಲಿ ಒಂದು; ಗಂಡಿಗೆ ಹೆಣ್ಣಿನ ಮೋಹವುಂಟುಮಾಡುವ ಕರ್ಮ
**ಪುರುಷಾಂತರಸಂಧಿ** – ರಾಜನು ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಇನ್ನೊಬ್ಬ ರಾಜನ ಸೇನಾಧಿಪತಿಯಿಂದ ತನ್ನ ಕಾರ್ಯ ಸಾಧಿಸಿಕೊಳ್ಳುವುದು, ನೋಡಿ 'ಷೋಡಶಸಂಧಿ'
**ಪುರುಷಾಕಾರ** – ಗಂಡಸಿನ ರೂಪು; ಪೌರುಷ
**ಪುರುಷಾಕೃತಿ** – ಪುರುಷಾಕಾರ
**ಪುರುಷಾಯಿತ** – ಸಂಭೋಗದ ಒಂದು ಆಸನ
**ಪುರುಷಾರ್ಥ** – ಮನುಷ್ಯನ ಪರಮಧ್ಯೇಯಗಳು: ಧರ್ಮ ಅರ್ಥ ಕಾಮ ಮೋಕ್ಷ; ಮೋಕ್ಷ
**ಪುರುಷೋತ್ತಮ** – ಮನುಷ್ಯಶ್ರೇಷ್ಠ
**ಪುರಹೂತ** – ಅನೇಕರಿಂದ ಪ್ರಾರ್ಥಿತನಾದವನು, ಇಂದ್ರ
**ಪುರುಳ್** – ವಸ್ತು; ಚೈತನ್ಯ; ಸತ್ವ; ಔಚಿತ್ಯ
**ಪುರುಳಿ** – ಹೆಣ್ಣು ಗಿಳಿ
**ಪುರೋಗಮ** – ಮುಂದಾಳು
**ಪುರೋಡಾಶ** – ಹವಿಸ್ಸಾಗಿ ಅರ್ಪಿಸುವ ಹುರಿದ ಹಿಟ್ಟು, ಹುತಶೇಷ
**ಪುರೋಧ(ಸ)** – ಪುರೋಹಿತ
**ಪುರೋಭಾಗ** – ಮುಂಭಾಗ
**ಪುರೋಹಿತ** – ಧಾರ್ಮಿಕವಿಧಿಗಳನ್ನು ನಡೆಸುವವನು
**ಪುರೋಹಿತರತ್ನ** – (ಜೈನ) ಚಕ್ರವರ್ತಿಗೆ ದೊರಕುವ ಏಳು ಜೀವರತ್ನಗಳಲ್ಲಿ ಒಂದು; ಉತ್ತಮ ಪುರೋಹಿತ
**ಪುರ್ವಿಕ್ಕು** – ಹುಬ್ಬು ಹಾರಿಸು
**ಪುರ್ವು(ರ್ಬು)** – ಹುಬ್ಬು
**ಪುಲ್** – ಹುಲ್ಲು
**ಪುಲ(ಳ)ಕ** – ರೋಮಾಂಚನ
**ಪುಲ(ಳ)ಕಾಂಕುರ** – ಪುಲ(ಳ)ಕ
**ಪುಲ(ಳ)ಕಿತ** – ರೋಮಾಂಚನಗೊಂಡ
**ಪುಲಿಂ(ಳಿಂ)ದ** – ಬೇಟೆಗಾರ, ಬೇಡ
**ಪುಲಿ(ಂ)ಗಿಲ್** – ಹೊಂಗೆಮರ
**ಪುಲಿಗೋಣ** – ಹುಲಿಯಂತೆ ಶಕ್ತಿಯುತವಾದ ಕೋಣ
**ಪುಲಿದೋ(ದೊವ)ಲ್** – ಹುಲಿಯ ಚರ್ಮ
ಪುಲಿ(ಳಿ)ನ – ಮರಳಿರುವ ದಡ; ಮರಳು–
**ಪುಲಿಯುಗುರ್** – ಹುಲಿಯ ಉಗುರು; ಮಕ್ಕಳಿಗೆ ಹಾಕುವ ಒಂದು ಆಭರಣ
**ಪುಲ್ಗರ್ಚು** – ಶರಣಾಗತಿಯನ್ನು ಸೂಚಿಸಲು ಬಾಯಲ್ಲಿ ಹುಲ್ಲನ್ನು ಕಚ್ಚಿ ಹಿಡಿ
**ಪುಲ್ಗಿಚ್ಚು** – (ಹುಲ್ಲಿನ ಬೆಂಕಿಯಂತೆ) ಬೇಗ ಆರುವ ಬೆಂಕಿ
**ಪುಲ್ಗುಡಿಸಿಲ್** – ಹುಲ್ಲಿನ ಗುಡಿಸಲು
**ಪುಲ್ಗೊನರ್** – ಹುಲ್ಲಿನ ಚಿಗುರು, ಮೊಳಕೆ
**ಪುಲ್ದಂಡೆ** – ಹುಲ್ಲಿನ ಹಗ್ಗ
**ಪುಲ್ಬಂಟ** – ಹುಲು ಬಂಟ, ಸಾಮಾನ್ಯ ವೀರ
**ಪುಲ್ಮರುಳ್** – ಕ್ಷುಲ್ಲಕ ಪಿಶಾಚಿ
**ಪುಲ್ಮಾನಸ** – ಹುಲುಮಾನವ
**ಪುಲ್ಮಾನಸಿಗ** – ಪುಲ್ಮಾನಸ
**ಪುಲ್ಮಿಗ** – ಹುಲ್ಲು ತಿನ್ನುವ ಪ್ರಾಣಿ
**ಪುಲ್ಮೃಗ** – ಪುಲ್ಮಿಗ
**ಪುಲ್ಲಂ ಕರ್ಚು** – ಶರಣಾಗತಿಯನ್ನು ಸೂಚಿಸಲು ಬಾಯಲ್ಲಿ ಹುಲ್ಲು ಕಚ್ಚಿಕೊ
**ಪುಲ್ಲಡಕಿ** – ಹುಲ್ಲು ಮಾರುವವನು
**ಪುಲ್ಲ ನೀರ್** – ಹುಲ್ಲ ಮೇಲಿನ ನೀರು; ಇಬ್ಬನಿ
**ಪುಲ್ಲ ಬೆಂಟೆ** – ಹುಲ್ಲಿನ ಹಗ್ಗ
**ಪುಲ್ಲವಡಿಗ** – ಹೂವಾಡಿಗ
**ಪುಲ್ಲವಡಿ(ಗಿ)ತಿ** – ಹೂವಾಡಗಿತ್ತಿ
**ಪುಲ್ಲಿ** – ಒಂದು ಬಗೆಯ ಬಟ್ಟೆ
**ಪುಲ್ಲಿಗೆ** – ಊಟದೆಲೆ
**ಪುಲ್ಲಿದೊಂಗಲ್** – ಪುಲ್ಲಿಯಿಂದ ಮಾಡಿದ ಛತ್ರಿ
**ಪುಲ್ಲುರಿ** – ಹುಲ್ಲಿನ ಬೆಂಕಿ
**ಪುಲ್ಲೆ** – ಹುಲ್ಲೆ, ಜಿಂಕೆ
**ಪುಲ್ಲೆವಱಿ** – ಜಿಂಕೆಯ ಮರಿ
**ಪುಲ್ವಗೆ** – ಪುಲು+ಬಗೆ, ಹೀನ ಯೋಚನೆ
**ಪುಲ್ವಟ್ಟೆ** – ಕಾಲುದಾರಿ
**ಪುಲ್ವಟ್ಟೆವಿಡಿ** – ಕಿರುದಾರಿಯಲ್ಲಿ ಹೋಗು
**ಪುಲ್ವನೆ** – ಹುಲ್ಲಿನ ಮನೆ
**ಪುಲ್ವಿಡಿ** – ಪುಲ್ಗರ್ಚು
**ಪುಷ್ಕರ** – ಸೊಂಡಿಲ ತುದಿ; ಡಮರುಗ; ಆಕಾಶ; ಜಾರ
**ಪುಷ್ಕರಿಣಿ** – ಹೊಕ್ಕರಣೆ, ಕೊಳ
**ಪುಷ್ಕಲಾ(ಳಾ)ವರ್ತ(ಕ)** – ಮೋಡದ ರಾಶಿ
**ಪುಷ್ಪ** – ಹೂ
**ಪುಷ್ಪಕವಿಮಾನ** – ಕುಬೇರನ ವಿಮಾನ; ಆನಂತರ ಇದು ರಾವಣನ ವಶಕ್ಕೆ ಬಂತು
**ಪುಷ್ಪಕಳಂಬ** – ಹೂಬಾಣ; ಮನ್ಮಥ

**ಪುಷ್ಪಚಾಪ** – ಪುಷ್ಪಕಳಂಬ
**ಪುಷ್ಪದಂತ** – ಸೂರ್ಯ; ಚಂದ್ರ; (ಜೈನ) ಒಂಬತ್ತನೆಯ ತೀರ್ಥಂಕರ
**ಪುಷ್ಪದರ್ಶನ** – ರಜಸ್ವಲೆಯಾಗುವಿಕೆ
**ಪುಷ್ಪದಾಮ** – ಹೂವಿನ ಮಾಲೆ
**ಪುಷ್ಪಧನ್ವ** – ಪುಷ್ಪಕಳಂಬ
**ಪುಷ್ಪಬಾಣ** – ಪುಷ್ಪಕಳಂಬ
**ಪುಷ್ಪಮಂಜರಿ** – ಹೂಗೊಂಚಲು
**ಪುಷ್ಪಮಾರ್ಗಣ** – ಪುಷ್ಪಕಳಂಬ
**ಪುಷ್ಪರಾಜ** – ನವರತ್ನಗಳಲ್ಲಿ ಒಂದು, ಪುಷ್ಯರಾಗ
**ಪುಷ್ಪಲತೆ** – ಹೂವಿನ ಬಳ್ಳಿ
**ಪುಷ್ಪಲಾವ(ಕ)** – ಹೂವಾಡಿಗ
**ಪುಷ್ಪಲಾವಿ(ಕೆ)** – ಹೂವಾಡಗಿತ್ತಿ
**ಪುಷ್ಪವತಿ** – ಹೂಬಿಟ್ಟ ಬಳ್ಳಿ; ರಜಸ್ವಲೆ
**ಪುಷ್ಪವರ್ಷ** – ಹೂಮಳೆ
**ಪುಷ್ಪವಾಟ(ಟಿ)** – ಹೂದೋಟ
**ಪುಷ್ಪವಾಸ(ಅಕ್ಕಿ)** – ವಾಸನೆ ಕಟ್ಟಿದ ಅಕ್ಕಿ
**ಪುಷ್ಪವೃಷ್ಟಿ** – ಪುಷ್ಪವರ್ಷ
**ಪುಷ್ಪಶರ** – ಹೂಬಾಣ; ಮನ್ಮಥ
**ಪುಷ್ಪಸಮಯ** – ಹೂಬಿಡುವ ಸಮಯ, ವಸಂತಮಾಸ; ಮುಟ್ಟಾಗುವ ಸಮಯ
**ಪುಷ್ಪಸಾಯಕ** – ಪುಷ್ಪಶರ
**ಪುಷ್ಪಸ್ರಜ** – ಹೂಮಾಲೆ
**ಪುಷ್ಪಾಂಜಲಿ** – ನಾಟಕ–ನಾಟ್ಯಗಳ ಆರಂಭದಲ್ಲಿ ಬೊಗಸೆಯಿಂದ ಹೂಗಳನ್ನೆರಚುವುದು–
**ಪುಷ್ಪಾಪಚಯ** – ಹೂ ತಿರಿಯುವುದು
**ಪುಷ್ಪಾಯುಧ** – ಪುಷ್ಪಶರ
**ಪುಷ್ಪಾಯುಧವೈರಿ** – ಮನ್ಮಥನ ಶತ್ರು, ಶಿವ
**ಪುಷ್ಪಾರ್ಘ್ಯ** – ಹೂಗಳ ಅರ್ಪಣೆ
**ಪುಷ್ಪಾಸವ** – ಹೂವಿನ ಮಕರಂದ
**ಪುಷ್ಪಸಾರ** – ಪುಷ್ಪವರ್ಷ
**ಪುಷ್ಪಾಸ್ತ್ರ** – ಪುಷ್ಪಶರ
**ಪುಷ್ಪೇಷು** – ಪುಷ್ಪಶರ
**ಪುಷ್ಯರಾಗ** – ನವರತ್ನಗಳಲ್ಲಿ ಒಂದು, ಹಳದಿಯ ಹರಳು; ಒಂದು ಕುಲಪರ್ವತ
**ಪುಸಿ** – ಹುಸಿ, ಸುಳ್ಳು; ವಚನಭಂಗ
**ಪುಸಿಕ(ಗ)** – ಪುಸಿಯುಳ್ಳಂ
**ಪುಸಿಗೆಯ್** – ಕಳೆ; ನಿವಾರಿಸು
**ಪುಸಿಮಾಡು** – ಸುಳ್ಳಾಗಿಸು; ಸುಳ್ಳಿಂದು ಸಾಧಿಸು
**ಪುಸಿಯುಳ್ಳಂ** – ಹುಸಿಗಾರ, ಸುಳ್ಳು ಹೇಳುವವನು
**ಪುಸಿಗೂರ್ಮೆ** – ಹುಸಿ ಪ್ರೇಮ
**ಪುಸಿಗೈ** – ದುರ್ಬಲ ಬಾಹು
**ಪುಸಿಗೆಳೆ** – ಹುಸಿ ಸ್ನೇಹ
**ಪುಸಿಚರಿತ್ರ** – ಕೃತ್ರಿಮ ನಡವಳಿಕೆ
**ಪುಸಿದೈವ** – ಕೀಳು ದೈವ
**ಪುಸಿಧರ್ಮ** – ಕ್ಷುಲ್ಲಕ ಧರ್ಮ
**ಪುಸಿನಲ್ಮೆ** – ಪುಸಿಗೂರ್ಮೆ
**ಪುಸಿನಿದ್ದೆ** – ನಿದ್ದೆಯ ನಟನೆ
**ಪುಸಿನುಡಿ** – ಸುಳ್ಳು ಮಾತು; ಸುಳ್ಳು ಹೇಳು
**ಪುಸಿಬಸನ** – ಹುಸಿಯಾಡುವ ಚಟ
**ಪುಸಿಮುಳಿಸು** – ಹುಸಿಗೋಪ, ನಟನೆಯ ಕೋಪ
**ಪುಸಿಯೊಲವು** – ಪುಸಿಗೂರ್ಮೆ
**ಪುಸಿವಡೆ** – ಹುಸಿ ಸೈನ್ಯ
**ಪುಸಿವಾತು** – ಸುಳ್ಳು ಮಾತು
**ಪುಸಿವಾತುಗ** – ಸುಳ್ಳುಗಾರ
**ಪುಸಿವಾರ್ತೆ** – ಸುಳ್ಳು ಸಮಾಚಾರ
**ಪುಸಿವೋಗು** – ವ್ಯರ್ಥವಾಗು
**ಪುಳಕಪ್ರಭೇದನ** – ಮೈನವಿರೇಳುವಿಕೆ
**ಪುಳಿ** – ಹುಳಿ; ಹುಳಿಯಾಗುವಿಕೆ
**ಪುಳಿಂಚು** – ಹುರುಪು; ಹುರುಪುಗೊಳ್ಳು
**ಪುಳಿಂದ** – ಬೇಡ
**ಪುಳಿಂದಿ** – ಬೇಡಿತಿ
**ಪುಳಿಗರ್ಚು** – ಹುಳಿ ಹಚ್ಚಿ ತೊಳೆ
**ಪುಳಿಗೂೞ್** – ಹುಳಿಯಾದ ಅನ್ನ
**ಪುಳಿ(ಣಿ)ಚೇೞ್** – ಹಪ್ಪಳಿಕೆ ಏಳು; ಬೊಬ್ಬೆ ಏಳು
**ಪುಳಿನ** – (ಪುಲಿನ) ಮಳಲು ದಿಣ್ಣೆ
**ಪುಳಿನತಳ** – ಪುಳಿನ
**ಪುಳಿನಸ್ಥಳ** – ಪುಳಿನತಳ
**ಪುಳಿಯಳೆ** – ಪುಳಿ+ಅಳೆ, ಹುಳಿ ಮಜ್ಜಿಗೆ
**ಪುಳುಂಗಾಱ** – ಹಕ್ಕಿ ಹಿಡಿಯುವವನು
**ಪುಳುಂ(ಣುಂ)ಬು** – ಬಾಣ
**ಪುಳ್ಳಳೆ** – ಹುಳಿಮಜ್ಜಿಗೆ
**ಪುಳ್ಳಿ** – ಪುರುಲೆ, ಚಿಕ್ಕ ಕಟ್ಟಿಗೆ
**ಪುೞಿ** – ಹುಳಿತುಹೋಗು
**ಪುೞಿಲ್** – ಮಳಲು ದಿಣ್ಣೆ; ತೋಪು, ಉದ್ಯಾನವನ
**ಪುೞಿಲ್ಗಟ್ಟು** – ಮರಳಿನ ಕಟ್ಟೆಯಂತಾಗು
**ಪುೞಿಲ್ದಾಣ** – ಉದ್ಯಾನ
**ಪುೞಿಲ್ವಜ್ಜೆ** – ಪುೞಿಲ್+ಪಜ್ಜೆ, ಮರಳ ಮೇಲಣ ಹೆಜ್ಜೆ
**ಪುೞು** – ಹುಳು, ತುಚ್ಛ
**ಪುೞುಕ** – ಕ್ಷುಲ್ಲಕ ವ್ಯಕ್ತಿ
**ಪುೞುಕು** – ಹುಳುಕು, ಹುಳು ಹಿಡಿದಿರುವ
**ಪುೞು ಪತ್ತು** – ಹುಳು ಹಿಡಿ
**ಪುೞುವಗೆ** – ಪುೞು+ಬಗೆ, ಕೆಟ್ಟ ಯೋಚನೆ
**ಪುೞುವಾನಸ** – ಕ್ಷುದ್ರ ವ್ಯಕ್ತಿ
**ಪುೞ್ಗಿ** – ಹುಗ್ಗಿ, ಪೊಂಗಲು
**ಪುೞ್ಗು** – ಸುಟ್ಟು ಹೋಗು
**ಪೂ** – ಹೂ; ಹೂ ಬಿಡು
**ಪೂಗ** – ಸಮೂಹ; ಅಡಕೆ
**ಪೂಗಂಪು** – ಹೂವಿನ ಪರಿಮಳ
**ಪೂಗಟ್ಟು** – ಹೂವಿನ ಕಟ್ಟು, ಕುಚ್ಚು
**ಪೂಗಣೆ** – ಹೂ ಬಾಣ
**ಪೂಗಣೆಯ** – ಹೂಬಾಣದವನು, ಮನ್ಮಥ
**ಪೂಗಣ್ಣ** – ಹೂವಿನಂತೆ ಕಣ್ಣುಳ್ಳವನು, ವಿಷ್ಣು

**ಪೂಗಫಲ** – ಅಡಕೆ (ಕಾಯಿ)
**ಪೂಗವನ** – ಅಡಕೆ ತೋಟ
**ಪೂಗವಸರ** – ಅಡಕೆ ಅಂಗಡಿ
**ಪೂಗಿಡು** – ಹೂವಿನ ಗಿಡ
**ಪೂಗೆಱು** – ಹೂವೆಂದು ಭಾವಿಸು
**ಪೂಗುಡಿ** – ಹೂವಿನ ಕೊನೆ; ಹೂಗೊಂಚಲು
**ಪೂಗೊಂಚಲ್** – ಹೂಗೊಂಚಲು, ಹೂಗುಚ್ಛ
**ಹೂಗೊಯ್** – ಹೂಗಳನ್ನು ತಿರಿ, ಬಿಡಿಸು
**ಪೂಗೊಳ** – (ತಾವರೆ) ಹೂಗಳಿರುವ ಕೊಳ
**ಪೂಗೋಲ್** – ಹೂ ಬಾಣ
**ಪೂಗಂಗು** – ಪೂ+ಕೌಂಗು, ಹೂ ಅಡಕೆ, ಮೃದುವಾದ ಅಡಕೆ
**ಪೂಜನ** – ಪೂಜೆ ಮಾಡುವುದು
**ಪೂಜಾಗಜ** – ಪಟ್ಟದಾನೆ
**ಪೂಜಾರಾಧನ** – (ಜೈನ) ನಲವತ್ತೆಂಟು ಬಗೆಯ ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಗುರುವಿನ ಮೂಲಕ ಧರ್ಮವನ್ನು ತಿಳಿಯುವುದು
**ಪೂಜಾವಾಜಿ** – ಪೂಜೆಗೊಳ್ಳುವ ಕುದುರೆ; ಪಟ್ಟದ ಕುದುರೆ
**ಪೂಜಾವಿಧಾನ** – ಪೂಜೆಯ ಕ್ರಮ
**ಪೂಜಾವಿಧಿ** – ಪೂಜೆಯ ಕಾರ್ಯ
**ಪೂಜಿತ** – ಪೂಜೆಗೊಂಡ
**ಪೂಜಿಸು** – ಪೂಜೆ ಮಾಡು
**ಪೂಜೆ** – ಆರಾಧನೆ
**ಪೂಜೆಗ** – ಸತ್ವಹೀನ
**ಪೂಜ್ಯತೆ** – ಗೌರವಭಾವ
**ಪೂಜ್ಯಪದ** – ಪೂಜಾರ್ಹ ಸ್ಥಾನ
**ಪೂಜ್ಯಪಾದ** – ಪೂಜ್ಯನಾದ ಗುರು
**ಪೂಜ್ಯಪಾದತೆ** – ಪೂಜ್ಯತೆಗೆ ಅರ್ಹತೆ ಪಡೆದಿರುವಿಕೆ
**ಪೂಜ್ಯೆ** – ಪೂಜಾರ್ಹಳು
**ಪೂಡು** – ಜೋಡಿಸು
**ಪೂಣ್** – ಪ್ರತಿಜ್ಞೆ ಮಾಡು; ಪ್ರತಿಜ್ಞೆ; ಹೂಳು
**ಪೂಣಿಗ** – ಶಪಥ ಮಾಡಿ ಬಾಣ ಬಿಡುವವನು; ಹಟಗಾರ
**ಪೂಣಿಗತನ** – ದೃಢ ಪ್ರತಾಪ
**ಪೂಣಿಸು** – ಬಿಲ್ಲಿಗೆ ಬಾಣ ಹೂಡು; ಆಜ್ಞೆಗೈ; ಶಪಥ ಮಾಡು
**ಪೂಣೆ ಪುಗು** – ನಿರ್ಧಾರದಿಂದ ನುಗ್ಗು
**ಪೂಣ್ಕೆ** – ಪ್ರತಿಜ್ಞೆ; ದೃಢತೆ
**ಪೂಣ್ಕೆಯಾಳ್** – ದೃಢನಾದ ಸೇವಕ; ನಂಬಿಕೆಯ ಆಳು
**ಪೂಣ್ಕೆಗೆಯ್** – ಶಪಥಗೈ
**ಪೂಣ್ಕೆವೆಱು** – ಹಟ ಹಿಡಿ, ನಿರ್ಧಾರ ಮಾಡು
**ಪೂತಕ್ರತಾಯಿ** – ಇಂದ್ರನ ಹೆಂಡತಿ, ಶಚೀದೇವಿ
**ಪೂತಿ** – ಕೆಟ್ಟ ವಾಸನೆಯುಳ್ಳ
**ಪೂತಿಗಂಧ** – ಕೆಟ್ಟ ವಾಸನೆ
**ಪೂತಿದ್ರವ** – ಕೆಟ್ಟ ವಾಸನೆಯ ದ್ರವ
**ಪೂತಿವೆಕ್ಕು** – ಪುನುಗು ಬೆಕ್ಕು
**ಪೂದಂದಲ್** – ಹೂ ಮಳೆ
**ಪೂದಳೆ** – ಹೂವನ್ನು ಮುಡಿ
**ಪೂದಿಱೆ** – ಹೂವನ್ನು ತಿರಿ, ಬಿಡಿಸು
**ಪೂದುಱುಂಬು** – ಹೂವಿರುವ ತುರುಬು, ಮುಡಿ
**ಪೂದುಱುಗಲ್** – ಹೂರಾಶಿ, ಹೂಗೊಂಚಲು
**ಪೂದೊಂಗಲ್** – ಹೂಗೊಂಚಲು
**ಪೂದೊಡಂಬೆ** – ಹೂಗೊಂಚಲು; ಹೂವಿನ ದಿಂಡು
**ಪೂದೊಡವು** – ಹೂವಿನ ತೊಡವು, ಒಡವೆ
**ಪೂದೊ(ದು)ಡಿಗೆ** – ಪೂದೊಡವು
**ಪೂದೋಣೆ** – ಹೂಬಾಣಗಳ ಬತ್ತಳಿಕೆ
**ಪೂದೋಂಟ** – ಹೂವಿನ ತೋಟ
**ಪೂನೀರ್** – ಹೂವಿನ ನೀರು, ಮಕರಂದ
**ಪೂಮುಣುಂಬ** – ಹೂಬಾಣದವನು, ಮನ್ಮಥ
**ಪೂಮುಣುಂಬು** – ಹೂಬಾಣ
**ಪೂಮಡಿ** – ಹೂವಿನ ದಂಡೆ
**ಪೂಮರ** – ಹೂಬಿಡುವ ಮರ
**ಪೂಮಾಲೆ** – ಹೂವಿನ ಹಾರ
**ಪೂಮಾಱು** – ಹೂವನ್ನು ಮಾರಾಟಮಾಡು
**ಪೂಮಿಡಿ** – ಎಳೆಯ ಮಿಡಿಗಾಯಿ, ಕಸಗಟ್ಟೆ ಕಾಯಿ
**ಪೂಮುಡಿ** – ಹುವಿನಿಂದ ಕೂಡಿದ ಮುಡಿ, ಜಡೆ
**ಪೂರ** – ಪ್ರವಾಹ
**ಪೂರಂಗವಿ** – ಪ್ರವಾಹ ಸುತ್ತುವರಿ
**ಪೂರಂಗೊಳ್** – ಪ್ರವಾಹದಂತೆ ಪ್ರವಹಿಸು
**ಪೂರಂಬರಿಸು** – ಪ್ರವಾಹವಾಗಿ ಹರಿಸು
**ಪೂರಕ** – ಪ್ರಾಣಾಯಾಮದ ಒಂದು ಅಂಗ
**ಪೂರವಾರ** – ಪೂರ+ಪಾರ, ದಡಹಾಯ್ದು ಹರಿವು
**ಪೂರಾಂಬು** – ಪ್ರವಾಹದ ನೀರು
**ಪೂರಿಗೆ** – ಒಂದು ಸಿಹಿ ಭಕ್ಷ್ಯ
**ಪೂರಿತ** – ತುಂಬಿದ
**ಪೂರಿಸು** – ತುಂಬು; ಆವರಿಸು; ಶಂಖ ಊದು
**ಪೂರ್ಣಚಂದ್ರ** – ಹುಣ್ಣಿಮೆಯ ಚಂದ್ರ
**ಪೂರ್ಣಪಾತ್ರ** – ಉಡುಗೊರೆ ತುಂಬಿದ ಪಾತ್ರೆ
**ಪೂರ್ವ** – (ಜೈನ) ಎಂಬತ್ತನಾಲ್ಕುಲಕ್ಷ ವರ್ಷಗಳ ಅವಧಿಯುಳ್ಳ ಎಂಬತ್ತನಾಲ್ಕು ಪೂರ್ವಾಂಗಗಳು ಸೇರಿದರೆ ಒಂದು ಪೂರ್ವ; ಹದಿನಾಲ್ಕು ಆಗಮ ಗ್ರಂಥಗಳು, ನೋಡಿ, 'ಚತುರ್ದಶಪೂರ್ವ'
**ಪೂರ್ವಕೋಟಿ** – (ಜೈನ) ಒಂದು ಕೋಟಿ 'ಪೂರ್ವ'ಗಳಷ್ಟು ಕಾಲಾವಧಿ
**ಪೂರ್ವಜ** – ಪೂರ್ವಿಕ, ವಂಶದ ಹಿಂದಿನವನು
**ಪೂರ್ವಧರ** – (ಜೈನ) 'ಚತುರ್ದಶಪೂರ್ವ'ಗಳನ್ನು ಚೆನ್ನಾಗಿ ಬಲ್ಲವನು
**ಪೂರ್ವಪಕ್ಷ** – ವಿರುದ್ಧವಾದ ಹೇಳಿಕೆ; ಪ್ರಮೇಯವನ್ನೆದುರಿಸಲು ಹೂಡುವ ಯುಕ್ತಿ

**ಪೂರ್ವಪರಾಮರ್ಶೆ** – ಹಿಂದಿನ ಸಂಗತಿಗಳ ಪುನರವಲೋಕನ
**ಪೂರ್ವಭವ** – ಹಿಂದಿನ ಜನ್ಮ
**ಪೂರ್ವರಂಗ** – ಪೂರ್ವಸಿದ್ಧತೆ
**ಪೂರ್ವವಿದೇಹ** – (ಜೈನ) ಜಂಬೂದ್ವೀಪದ ಸಪ್ತಕ್ಷೇತ್ರಗಳಲ್ಲಿ ಒಂದು; ಮಂದರದ ಪೂರ್ವದಿಕ್ಕಿನಲ್ಲಿರುವ ಪ್ರದೇಶ
**ಪೂರ್ವವಿರೋಧ** – ಹಿಂದಿನ ದ್ವೇಷ
**ಪೂರ್ವವೃತ್ತಿ** – ಹಿಂದಿನ ಉದ್ಯೋಗ
**ಪೂರ್ವವೈರ** – ಪೂರ್ವವಿರೋಧ
**ಪೂರ್ವಶಾಸ್ತ್ರ** – ಹಿಂದಿನಿಂದ ಬಂದ ಶಾಸ್ತ್ರ
**ಪೂರ್ವಸೂಚನೆಗೆಯ್** – ಮುನ್ಸೂಚನೆ ಕೊಡು
**ಪೂರ್ವಸ್ಮರಣ** – ಹಿಂದಿನದನ್ನು ನೆನಪು ಮಾಡಿಕೊಳ್ಳುವುದು
**ಪೂರ್ವಹಗೆ** – ಪೂರ್ವವಿರೋಧ
**ಪೂರ್ವಾಂಗ** – (ಜೈನ) ಎಂಬತ್ತನಾಲ್ಕು ಲಕ್ಷ ವರ್ಷಗಳ ಕಾಲಾವಧಿ; ನೋಡಿ, 'ಪೂರ್ವ'
**ಪೂರ್ವಾಚಾರ್ಯ** – ಹಿಂದಿನ ಕಾಲದ ವಿದ್ವಾಂಸ
**ಪೂರ್ವಾದ್ರಿ** – ಸೂರ್ಯ ಹುಟ್ಟುವ ದಿಕ್ಕಿನ ಬೆಟ್ಟ
**ಪೂರ್ವಾನುಭವ** – ಹಿಂದಿನ ಅನುಭವ
**ಪೂರ್ವಾಭಿಮುಖ** – ಪೂರ್ವದಿಕ್ಕಿಗೆ ಎದುರಾದವನು
**ಪೂರ್ವಾರ್ಜಿತ** – ಹಿಂದೆ ಗಳಿಸಿದ
**ಪೂರ್ವಾರ್ಣವ** – ಪೂರ್ವದಿಕ್ಕಿನ ಸಮುದ್ರ
**ಪೂರ್ವಾಸನ** – ಮುಂದಿನ ಪೀಠ
**ಪೂರ್ವೇತರ** – ಪೂರ್ವವಲ್ಲದ, ಪಶ್ಚಿಮ
**ಪೂರ್ವೋಕ್ತ** – ಹಿಂದೆ ಹೇಳಿದ
**ಪೂರ್ವೋಪಾರ್ಜಿತ** – ಹಿಂದೆ ಸಂಪಾದಿಸಿದ
**ಪೂಱ** – ಒಂದು ಗಿಡ
**ಪೂವಱ** – ಹೂಗಳಿಂದ ಮಾಡಿದ ಅಲಂಕಾರ; ರಂಗೋಲಿ
**ಪೂವಱಗೆದಱ್** – ಹೂಗಳನ್ನು ಎರಚು
**ಪೂವಱಗೆಯ್** – ಹೂಗಳಿಂದ ಅಲಂಕರಿಸು
**ಪೂವಸೆ** – ಹೂವಿನ ಹಾಸು
**ಪೂವ(ಮ)ೞೆ** – ಹೂಮಳೆ
**ಪೂವೞೆಗಱೆ** – ಹೂಮಳೆ ಸುರಿಸು
**ಪೂವಾಸು** – ಹೂವನ್ನು ಹಾಸು; ಹೂವಿನ ಹಾಸು
**ಪೂವಿನಂಬು** – ಹೂವಿನ ಬಾಣ
**ಪೂವಿಲ್ಲ** – ಮನ್ಮಥ
**ಪೂವೆಂಚೆ** – ಹೂಗೊಳ
**ಪೂವೆತ್ತು** – ಹೂವನ್ನು ಎತ್ತಿಹಿಡಿ
**ಪೂಸರಲ** – ಹೂಬಾಣಗಳವನು, ಮನ್ಮಥ
**ಪೂಸು** – ಸವರು, ಲೇಪಿಸು; ಲೇಪನ; ಹೂಸುಬಿಡು
**ಪೂಸಿಕೊಳ್** – ಲೇಪಿಸಿಕೊ
**ಪೂೞ್** – ಹೂಳು, ಹೂತುಬಿಡು; ಗುಂಡಿ ಮುಚ್ಚು; ಕವಿದುಕೊ

**ಪೃಚ್ಛನೆ** – (ಜೈನ) ಪಂಚವಿಧಸ್ವಾಧ್ಯಾಯಗಳಲ್ಲಿ ಒಂದು; ಶಬ್ದ–ಅರ್ಥಗಳ ಬಗ್ಗೆ ಪ್ರಶ್ನಿಸಿ ನಿರ್ಣಯ ಮಾಡಿಕೊಳ್ಳುವುದು–
**ಪೃಚ್ಛೆ** – ಪ್ರಶ್ನೆ
**ಪೃತನಾಜಾಳ** – ಸೇನಾಸಮೂಹ
**ಪೃತನಾಪತಿ** – ಸೇನಾಪತಿ
**ಪೃತನೆ** – ಸೇನೆ
**ಪೃಥಕ್ತ್ವವಿತರ್ಕವೀಚಾರ** – (ಜೈನ) ಎಂಟನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದ ಕೆಲವು ಭಾಗಗಳವರೆಗೆ ನಡೆಯುವ ಶುಕ್ಲಧ್ಯಾನ; ಪ್ರಥಮಶುಕ್ಲಧ್ಯಾನ
**ಪೃಥಗರ್ಥ** – ಬೇರೆಯ ಅರ್ಥ
**ಪೃಥಗ್ಜನ** – ಸಾಮಾನ್ಯ ಮನುಷ್ಯ; ಪಾಮರ
**ಪೃಥಗ್ಭಾವ** – ಬೇರೆ ಎಂಬ ಭಾವನೆ
**ಪೃಥಾಸುತ(ರ್)** – ಕುಂತಿಯ ಮಗ(ಮಕ್ಕಳು)
**ಪೃಥಿವಿ** – ಪೃಥ್ವಿ, ಭೂಮಿ
**ಪೃಥಿವೀಚಕ್ರ** – ಭೂಮಂಡಲ
**ಪೃಥಿವೀಪತಿ** – ಭೂಮಿಯೊಡೆಯ, ರಾಜ
**ಪೃಥಿವೀಪಾಲ** – ಭೂಮಿಯನ್ನು ರಕ್ಷಿಸುವವನು, ರಾಜ
**ಪೃಥಿವೀಶ್ವರ** – ಪೃಥಿವೀಪತಿ
**ಪೃಥು** – ವಿಶಾಲವಾದ, ದೊಡ್ಡದಾದ
**ಪೃಥುಕತ್ವ** – ಶೈಶವ
**ಪೃಥುಕುಂಭ** – (ಆನೆಯ) ವಿಶಾಲವಾದ ಕುಂಭಸ್ಥಳ
**ಪೃಥುನಿತಂಬಿನಿ** – ವಿಶಾಲ ಜಘನವುಳ್ಳವಳು
**ಪೃಥುನಿತಂಬೆ** – ಪೃಥುನಿತಂಬಿನಿ
**ಪೃಥುಯಶ** – ಅಪಾರ ಕೀರ್ತಿ (ಪಡೆದವನು)
**ಪೃಥುಲ(ಳ)** – ವಿಶಾಲವಾದ
**ಪೃಥುಲಯಶ** – ಹೆಚ್ಚಿನ ಯಶಸ್ಸು ಪಡೆದವನು
**ಪೃಥುಸತ್ವ** – ಅತಿಶಯ ಸಾಮರ್ಥ್ಯ(ವುಳ್ಳವನು)
**ಪೃಥುಸ್ಕಂಧ** – ಅಗಲವಾದ ಭುಜಗಳು(ಳ್ಳ); ದೊಡ್ಡ ಕೊಂಬೆಗಳನ್ನುಳ್ಳುದು
**ಪೃಥುಳಬಳ** – ಮಹಾ ಪರಾಕ್ರಮಿ
**ಪೃಥ್ವಿ** – ಭೂಮಿ
**ಪೃಥ್ವೀಧವ** – ಭೂಪತಿ, ರಾಜ
**ಪೃಥ್ವೀಶ** – ಪೃಥ್ವೀಧವ
**ಪೃಷಜ್ಜಲ** – ತುಂತುರು ಹನಿ
**ಪೃಷತ್ಕ** – ಬಾಣ
**ಪೃಷ್ಠದ್ವಾರ** – ಗುದದ್ವಾರ
**ಪೃಷ್ಠನಾಳ** – ಗುದನಾಳ
**ಪೃಷ್ಠಭಾಗ** – ಹಿಂಭಾಗ
**ಪೆಂಕುಳಿಗಲಿ** – ಆವೇಶಗೊಂಡ ಶೂರ
**ಪೆಂಕುಳಿಗೊಳ್** – ಆವೇಶಗೊಳ್ಳು
**ಪೆಂಕುಳಿನಾಯ್** – ಹುಚ್ಚು ನಾಯಿ
**ಪೆಂಗುರು** – ಕೊಕ್ಕರೆ
**ಪೆಂಟೆ** – ಮಣ್ಣು ರಾಶಿ; ಪ್ರಾಣಿಗಳಲ್ಲಿ ಹೆಣ್ಣು
**ಪೆಂಡತಿ** – ಹೆಂಡತಿ, ಪತ್ನಿ

**ಪೆಂಡವಾಸ** – ರಾಣಿವಾಸ; ಅಲ್ಲಿನ ಹೆಂಗಸರು
**ಪೆಂಡವಾಸಗೇರಿ** – ಸೂಳೆಗೇರಿ
**ಪೆಂಡಿರ್** – ಹೆಂಗಸರು
**ಪೆಂಡಿರ್ಗಾಳೆಗ** – ಹೆಂಗಸರ ಕದನ; ಮಾತಿನ ಜಗಳ
**ಪೆಂಡೆಯ** – ಕಾಲಂದುಗೆ
**ಪೆಂಪು** –ಹೆಚ್ಚಿಕೆ; ಕೀರ್ತಿ
**ಪೆಂಪುಗೆಡು** – ಅತಿಶಯತೆ ಹಾಳಾಗು
**ಪೆಂಪುವಡೆ** – ಹಿರಿಮೆಯನ್ನು ಪಡೆ; ವೈಭವ ಪಡೆ
**ಪೆಂಪುವೆಱು** – ಪೆಂಪುವಡೆ
**ಪೆಕ್ಕಣ** – (ಪ್ರೇಕ್ಷಣ) ನೋಟ; ನೃತ್ಯ
**ಪೆಕ್ಕಲವಂದಿ** – ಸೊಕ್ಕಿದ ಹಂದಿ
**ಪೆಗಲ್** – ಹೆಗಲು, ಭುಜ
**ಪೆಗಲೇಱು** – ಹೆಗಲೇರು
**ಪೆಗಲ್ಪೊಱ್** – ಭುಜದ ಮೇಲಿರಿಸಿಕೊಂಡ ಬುತ್ತಿ
**ಪೆಗಲ್ವೊಱೆ** – ಹೆಗಲ ಮೇಲಿನ ಹೊರೆ, ಭಾರ
**ಪೆಟ್ಟಮೆಱಿಸು** – ಮರದ ದಿಮ್ಮಿಗೆ ಕಟ್ಟಿ ಎಳೆಯಿಸು
**ಪೆಟ್ಟಮೆಱೆ** – ಮರದ ದಿಮ್ಮಿಗೆ ಕಟ್ಟಿ ಎಳೆಸುವ ಶಿಕ್ಷೆ
**ಪೆಟ್ಟು** – ಕೋಲಿನಿಂದ ಹೊಡಿ; ಪರಾಕ್ರಮ
**ಪೆಟ್ಟುವೆರ್ಚು** – ಗರ್ವದಿಂದ ಕೂಡು; ಉಬ್ಬು
**ಪೆಟ್ಟುವೇಱ್** – ಪರಾಕ್ರಮ ತೋರಿಸು
**ಪೆಟ್ಟೆ** – ಹೆಂಟೆ
**ಪೆಡಂಗಲಸು** – ಮುಗ್ಗರಿಸು
**ಪೆಡಂಗಾಲ್** – ಹಿಂಗಾಲು; ಪ್ರಾಣಿಗಳ ಹಿಂದಿನ ಕಾಲುಗಳು
**ಪೆಡ(ಂ)ಗೆಯ್** – ಹಿಂಗೈ; ಹಿಂಗಟ್ಟು ಕಟ್ಟು
**ಪೆಡ(ಂ)ದ(ತ)ಲೆ** – ಹೆಡದಲೆ, ತಲೆಯ ಹಿಂಭಾಗ
**ಪೆಡಂಮಗುಱ್** – ಹಿಂದಕ್ಕೆ ಹೋಗು
**ಪೆಡಂಮೆಟ್ಟು** – ಹಿಂಭಾಗ; ಹಿಮ್ಮೆಟ್ಟು
**ಪೆಡಗುಡಿಗಟ್ಟು** – ಹೆಡಮುರಿಗೆ ಕಟ್ಟು; ಕೈಗಳನ್ನು ಬೆನ್ನಲ್ಲಿ ಕಟ್ಟು
**ಪೆಡಗೆ** – ದೊಡ್ಡ ಬುಟ್ಟಿ
**ಪೆಡಗೆಯ್ಗಟ್ಟು** – ಪೆಡಗುಡಿಗಟ್ಟು
**ಪೆಡಗೈಗಟ್ಟು** – ಪೆಡಗುಡಿಗಟ್ಟು
**ಪೆಡೆ** – ಹಾವಿನ ಹೆಡೆ
**ಪೆಡೆವಣಿ** – ಹಾವಿನ ಹೆಡೆಯಲ್ಲಿದೆಯೆಂಬ ಮಣಿ
**ಪೆಡೆವರಲ್** – ಪೆಡೆವಣಿ
**ಪೆಣ್** – ಹೆಣ್ಣು, ಹೆಂಗಸು
**ಪೆಣ** – ಹೆಣ, ಶವ
**ಪೆಣದಿನಿ** – ಹೆಣಗಳನ್ನು ತಿನ್ನುವುದು, ಪಿಶಾಚಿ
**ಪೆಣಬಣಂಬೆ** – ಹೆಣಗಳ ರಾಶಿ
**ಪೆಣಮಯ** – ಹೆಣಗಳಿಂದ ತುಂಬಿದುದು
**ಪೆಣವೊಗೆ** – ಹೆಣಸುಡುವಾಗ ಬರುವ ಹೊಗೆ
**ಪೆಣೆ** – ಹೆಣೆ, ಸೇರಿಸು; ಹೆಣೆದುಕೊಳ್ಳು
**ಪೆಣೆವಾವು** – ತೆಕ್ಕೆ ಹಾಕಿಕೊಂಡಿರುವ ಹಾವು
**ಪೆಣ್ಗತ್ತೆ** – ಹೆಣ್ಣು ಕತ್ತೆ
**ಪೆಣ್ಗಾಡಿ** – ಹೆಣ್ಣಿನ ಚೆಲುವು
**ಪೆಣ್ಗೂಸು** – ಹೆಣ್ಣು ಮಗು; ಹೆಂಗಸು
**ಪೆಣ್ಗೂಳ** – ಹೆಣ್ಣಿಗ
**ಪೆಣ್ಣಂಚೆ** – ಹೆಣ್ಣು ಹಂಸ
**ಪೆಣ್ಣರಿ** – ಪೆಣ್+ನರಿ, ಹೆಣ್ಣು ನರಿ
**ಪೆಣ್ಣಾಯ್** – ಪೆಣ್+ನಾಯ್, ಹೆಣ್ಣು ನಾಯಿ
**ಪೆಣ್ಣಿಲಿ** – ಹೆಣ್ಣು ಇಲಿ
**ಪೆಣ್ಣುಡೆ** – ಹೆಣ್ಣಿನ ವೇಷ
**ಪೆಣ್ತನ** – ಹೆಣ್ಣುತನ, ಹೆಣ್ಣಿನ ಸ್ವಭಾವ
**ಪೆಣ್ದಂಡ** – ಪೆಣ್+ತಂಡ, ಹೆಂಗಸರ ಗುಂಪು
**ಪೆಣ್ದುಂಬಿ** – ಹೆಣ್ಣು ದುಂಬಿ
**ಪೆಣ್ಬಡೆ** – ಪೆಣ್+ಪಡೆ, ಹೆಂಗಸರ ಗುಂಪು
**ಪೆಣ್ಬರಿಜು** – ಹೆಣ್ಣ ರೂಪು
**ಪೆಣ್ಬಾವ** – ಹೆಣ್ಣಿನ ಸ್ವರೂಪ
**ಪೆಣ್ಬುಯ್ಯಲ್** – (ಹೊತ್ತೊಯ್ಯುವಾಗಿನ) ಹೆಣ್ಣ ಆಕ್ರಂದನ; ಅಂತಹ ಸಮಯದಲ್ಲಿ ನಡೆಯುವ ಹೋರಾಟ
**ಪೆಣ್ಬುರುಳ** – ಹೆಣ್ಣು ಗಿಳಿ
**ಪೆಣ್ಬುಲಿ** – ಹೆಣ್ಣು ಹುಲಿ
**ಪೆಣ್ಪರಿಜು** – ಹೆಣ್ಣಿನ ಆಕೃತಿ
**ಪೆಣ್ಮಣಿ** – ಸ್ತ್ರೀರತ್ನ
**ಪೆಣ್ಮೊಲ** – ಹೆಣ್ಣು ಮೊಲ
**ಪೆಪ್ಪಳಸು** – ಪೆಳ್ಪಳಿಸು, ಭಯಪಡು, ನಡುಗು
**ಪೆಪ್ಪು** – ಹೆಪ್ಪು, ಹಾಲನ್ನು ಮೊಸರು ಮಾಡಲು ಹಾಕುವ ಮಜ್ಜಿಗೆ
**ಪೆಮ್ಮರುಳ್** – ದೊಡ್ಡ ದೆವ್ವ
**ಪೆರೆಗಳೆ** – ಹಾವು ಪೊರೆ ಕಳಚು
**ಪೆರೆಯಿಕ್ಕು** – ಪೆರೆಗಳೆ
**ಪೆರ್ಕಣ** – ಪೆಕ್ಕಣ
**ಪೆರ್ಗಡಲ್** – ವಿಸ್ತಾರ ಸಮುದ್ರ
**ಪೆರ್ಗಡಿತ** – ದೊಡ್ಡ ಕಡಿತ, ಲೆಕ್ಕದ ಪುಸ್ತಕ
**ಪೆರ್ಗಡೆ** – ಹೆಗ್ಗಡೆ, ದೊಡ್ಡ ಅಧಿಕಾರಿ
**ಪೆರ್ಗಡೆತನ** – ಮುಖ್ಯಾಧಿಕಾರಿಯ ಹುದ್ದೆ
**ಪೆರ್ಗಣ** – ಹೆಗ್ಗಣ
**ಪೆರ್ಗಣಿ** – ಪಿರಿದು ಗಣಿ, ದೊಡ್ಡ ಗಣಿ
**ಪೆರ್ಗರಡಿ** – ಪಿರಿದು ಕರಡಿ, ದೊಡ್ಡ ಕರಡಿ
**ಪೆರ್ಗಲ್** – ಪಿರಿದು ಕಲ್, ದೊಡ್ಡ ಕಲ್ಲು
**ಪೆರ್ಗಳ** – ಪಿರಿದು ಕಳ, ವಿಶಾಲವಾದ ಕಣ
**ಪೆರ್ಗಾಡು** – ಪಿರಿದು+ಕಾಡು, ದಟ್ಟವಾದ ಕಾಡು
**ಪೆರ್ಗಾವಿಲ** – ಮಹಾ ಮೂರ್ಖ
**ಪೆರ್ಗಿಚ್ಚು** – ಭಾರಿ ಬೆಂಕಿ
**ಪೆರ್ಗುತ್ತ** – ಮಹಾ ರೋಗ
**ಪೆರ್ಗುಱಿ** – ದೊಡ್ಡ ಕುರಿ
**ಪೆರ್ಗುಱಿಪು** – ಮುಖ್ಯ ಕುರುಹು, –ಗುರುತು–
**ಪೆರ್ಗುಟಿ** – ದೊಡ್ಡ ಗುಂಡಿ
**ಪೆರ್ಗೂಳ** – ಮೀನು ಹಿಡಿಯುವ ದೊಡ್ಡ ಬುಟ್ಟಿ
**ಪೆರ್ಗಂಡ** – ದೊಡ್ಡ ಕೆಂಡ
**ಪೆರ್ಗೆಚ್ಚಲ್** – ದೊಡ್ಡ ಕೆಚ್ಚಲು

**ಪೆರ್ಗೆಸಱ್** – ಹೆಚ್ಚಾದ ಕೊಚ್ಚೆ
**ಪೆರ್ಗೊಂಬು** – ದೊಡ್ಡ ಕೊಂಬೆ
**ಪೆರ್ಗೊಡಲಿ** – ದೊಡ್ಡ ಕೊಡಲಿ
**ಪೆರ್ಚಾಳ್** – ಗೌರವಾನ್ವಿತ ವ್ಯಕ್ತಿ
**ಪೆರ್ಚಿಸು** – ಹೆಚ್ಚಿಸು
**ಪೆರ್ಚು** – ಹೆಚ್ಚಾಗು; ಆಧಿಕ್ಯ; ಕತ್ತರಿಸು
**ಪೆರ್ಚುಂಬುರುಳ್** – ಹೆಚ್ಚುವ ಬಂಗಾರ, ವೃದ್ಧಿಸುವ ಐಶ್ವರ್ಯ
**ಪೆರ್ಚುಗೆ** – ಹೆಚ್ಚಿಗೆ, ಅತಿಶಯ
**ಪೆರ್ಚುಗೆವಡೆ** – ಅಧಿಕಗೊಳ್ಳು
**ಪೆರ್ಜಸ** – ಪರಿದು+ಜಸ, ಹೆಚ್ಚಿನ ಯಶಸ್ಸು
**ಪೆರ್ಜೋಡೆ** – ಹಿರಿಯ ಸೂಳೆ
**ಪೆರ್ದಂಡೆ** – ವಿಶಾಲವಾದ ದಡ
**ಪೆರ್ದಲೆ** – ದೊಡ್ಡ ತಲೆ
**ಪೆರ್ದಸಿ** – ದೊಡ್ಡ ಶೂಲ, ಗೂಟ
**ಪೆರ್ದಾರಿ** – ಹೆದ್ದಾರಿ
**ಪೆರ್ದಿದಿ** – ಪಿರಿದು ತಿದಿ, ದೊಡ್ಡ ಚೀಲ
**ಪೆರ್ದುಡುಗೆ** – ಭಾರಿ ಒಡವೆ
**ಪೆರ್ದೆಪ್ಪ** – ಪರಿದು+ತೆಪ್ಪ, ದೊಡ್ಡ ಹರಿಗೋಲು
**ಪೆರ್ದೆರೆ** – ದೊಡ್ಡ ಅಲೆ
**ಪೆರ್ದೆವರ್** – ದೊಡ್ಡ ದಿಣ್ಣೆ
**ಪೆರ್ದೆಸೆ** – ಒಳ್ಳೆಯ ದೆಸೆ, ದೊಡ್ಡ ಅದೃಷ್ಟ
**ಪೆರ್ದೊಡವು** – ಪೆರ್ದುಡುಗೆ
**ಪೆರ್ದೊಡೆ** – ಭಾರಿ ತೊಡೆ
**ಪೆರ್ದೊಱೆ** – ಪಿರಿದು ತೊರೆ, ದೊಡ್ಡ ನದಿ
**ಪೆರ್ನೆಣ** – ಹೆಚ್ಚನ ಕೊಬ್ಬು
**ಪೆರ್ನೊರೆ** – ಹೆಚ್ಚಿ ನೊರೆ
**ಪೆರ್ಬಂಟು** – ದೊಡ್ಡ ಸೈನ್ಯ
**ಪೆರ್ಬರಿ** – ಪಕ್ಕೆಯ ಮೇಲ್ಭಾಗ
**ಪೆರ್ಬಟೆ** – ಪಿರಿದು ಪಟೆ, ದೊಡ್ಡ (ಬೆಲೆಬಾಳುವ) ಬಟ್ಟೆ
**ಪೆರ್ಬಿಲ** – ದೊಡ್ಡ ಬಿಲ
**ಪೆರ್ಬುಣ್** – ದೊಡ್ಡ ಗಾಯ
**ಪೆರ್ಬುಲಿ** – ಹೆಬ್ಬುಲಿ, ದೊಡ್ಡ ಹುಲಿ
**ಪೆರ್ಬುಸಿ** – ಪಿರಿದು ಪುಸಿ, ದೊಡ್ಡ ಸುಳ್ಳು
**ಪೆರ್ಬೆ(ರ್ವೆ)ಡೆ** – ದೊಡ್ಡ ಹೆಡೆ
**ಪೆರ್ಮಗ)ಳ್)** – ಹಿರಿಯ ಮಗ(ಳು)
**ಪೆರ್ಮಡು** – ದೊಡ್ಡ ಮಡು
**ಪೆರ್ಮನೆ** – ವಿಶಾಲವಾದ ಮನೆ
**ಪೆರ್ಮರ** – ದೊಡ್ಡ ಮರ, ಹೆಮ್ಮರ
**ಪೆರ್ಮರುಳ್** – ದೊಡ್ಡ ಪಿಶಾಚಿ
**ಪೆರ್ಮರುಳ** – ದೊಡ್ಡ ಮೂರ್ಖ
**ಪೆರ್ಮರೆ** – ದೊಡ್ಡ ಜಿಂಕೆ
**ಪೆರ್ಮಲೆ** – ದೊಡ್ಡ ಬೆಟ್ಟ
**ಪೆರ್ಮಱವೆ** – ಮಹಾ ಮರೆವು; ಮೂರ್ಛೆ
**ಪೆರ್ಮೞೆ** – ಭಾರಿ ಮಳೆ
**ಪೆರ್ಮಾತು** – ದೊಡ್ಡ ಮಾತು; ಗಂಭೀರ ನುಡಿ
**ಪೆರ್ಮಾರಿ** – ಹೆಮ್ಮಾರಿ
**ಪೆರ್ಮುಗಿಲ್** – ದಟ್ಟವಾದ ಮೋಡ
**ಪೆರ್ಮೆ** – ಹಿರಿಮೆ
**ಪೆರ್ಮೆಗಿಡು** – ಅಗ್ಗಳಿಕೆಯನ್ನು ಕಳೆದುಕೊ
**ಪೆರ್ಮೆಯೊಡೆಯ** – ಅಗ್ಗಳನಾದವನು
**ಪೆರ್ಮೆವೆಱು** – ಪೆರ್ಮೆವಡೆ
**ಪೆರ್ಮೊಲೆ** – ದೊಡ್ಡ ಸ್ತನ
**ಪೆರ್ಮೊೞಗು** – ಭಾರಿ ಗುಡುಗು
**ಪೆರ್ಮೋಡ** – ಪೆರ್ಮುಗಿಲ್
**ಪೆರ್ವಂದಿ ದೊಡ್ಡ ಹಂದಿ–**
**ಪೆರ್ವ(ರ್ಬ)ಟ್ಟೆ** – ಹೆದ್ದಾರಿ
**ಪೆರ್ವಡಹ** – ಜಡಿಮಳೆ
**ಪೆರ್ವಡಿಯಱ** – ಬಾಗಿಲು ಕಾಯುವವರಲ್ಲಿ ಮುಖ್ಯ
**ಪೆರ್ವಡುಲಕೆ** – ಗಬ್ಬುನಾತ
**ಪೆರ್ವಡೆ** – ಪಿರಿದು+ಪಡೆ, ಭಾರಿ ಸೈನ್ಯ
**ಪೆರ್ವಣ್** – ದೆಪ್ಪನಾದ ಹಣ್ಣು
**ಪೆರ್ವಯ್ತಂಗೊಳ್** – ಹೆಚ್ಚಾಗಿ ಮಂಕುಗೊಳ್ಳು
**ಪೆರ್ವಲ** – ಪಿರಿದು+ಬಲ, ದೊಡ್ಡ ಸೈನ್ಯ
**ಪೆರ್ವಲೆ** – ದೊಡ್ಡ ಬಲೆ
**ಪೆರ್ವಱೆ** – ದೊಡ್ಡ ಹರೆ (ವಾದ್ಯ)
**ಪೆರ್ವೞು** – ಪಿರಿದು ಪೞು, ದಟ್ಟ ಕಾಡು
**ಪೆರ್ಬಾವು** – ಹೆಬ್ಬಾವು, ದೊಡ್ಡ ಸರ್ಪ
**ಪೆರ್ವಿಡಿ** – ಪಿರಿದು ಪಿಡಿ, ದೊಡ್ಡ ಹೆಣ್ಣಾನೆ
**ಪೆರ್ವಿದಿರ್** – ಹೆಬ್ಬಿದಿರು, ದಟ್ಟ ಬಿದಿರ ಮೆಳೆ
**ಪೆರ್ವೀದಿ** – ರಾಜಬೀದಿ
**ಪೆರ್ವೆಳಸು** – ಒಳ್ಳೆಯ ಬೆಳೆ, –ಫಸಲು–
**ಪೆರ್ವೆಂಟೆ** – ದೊಡ್ಡ ಬೇಟೆ
**ಪೆರ್ವೈತ್ತಿಕ** – ದೊಡ್ಡ ಪಿತ್ತವ್ಯಾಧಿ
**ಪೆರ್ವೊದಱ್** – ದಟ್ಟವಾಗಿ ಬೆಳೆದ ಪೊದೆ
**ಪೆರ್ವೊನಲ್** – ದೊಡ್ಡ ನದಿ
**ಪೆರ್ವೊಳೆ** – ಪಿರಿದು+ಪೊಳೆ, ದೊಡ್ಡ ನದಿ
**ಪೆಲ್ಲಯಿಸು** – ತುಂಬು, ಆವರಿಸು
**ಪೆಸರ್** – ಹೆಸರು; ಪ್ರಸಿದ್ಧಿ
**ಪೆಸರಕ್ಕರ** – ಹೆಸರಿನ ಅಕ್ಷರಗಳು
**ಪೆಸರಾಳ್** – ಹೆಸರುವಾಸಿಯಾದ ಯೋಧ
**ಪೆಸರಿಡು** – ಹೆಸರಿಡು; ನಾಮಕರಣಮಾಡು
**ಪೆಸರ್ಗಿಡು** – ಹೆಸರು ಕೆಡು, ಖ್ಯಾತಿ ಕುಂದು
**ಪೆಸರ್ಗೇಳ್** – ಹೆಸರನ್ನು ಕೇಳು
**ಪೆಸರ್ಗೊಳ್** – ಹೆಸರು ಪಡೆ; ಖ್ಯಾತಿಗೊಳ್ಳು
**ಪೆಸರ್ಚು** – ಆಕ್ಷೇಪಣೆ ಮಾಡು
**ಪೆಸರ್ವಡೆ** – ಹೆಸರು ಪಡೆ; ಖ್ಯಾತಿಯನ್ನು ಹೊಂದು
**ಪೆಸರ್ವೆಱು** – ಪೆಸರ್ವಡೆ
**ಪೆಸಱ್** – ಹೆಸರು ಕಾಳು
**ಪೆಸಱುಗೆ** – ಹೆಸರುಕಾಳಿನ ಮೊಳಕೆ
**ಪೆಳರ್ವಡು** – ಭಯಪಡು
**ಪೆಳವಳಿಸು** – ಪೆಳ್ಪಳಿಸು, ಭಯಪಡು, ನಡುಗು
**ಪೆಳಱಿಸು** – ಹೆದರಿಸು

**ಪೆಳಱು** – ಭಯಪಡು; ಭಯ
**ಪೆಳ್ಚನೆ** – ತಟಕ್ಕನೆ
**ಪೆಳ್ಪ(ಳ್ವ)ಳಸು** – ಪೆಪ್ಪಳಿಸು, ಭಯಪಡು, ನಡುಗು
**ಪೆಱಂಟೆ** – ನೇಗಿಲ ಗುಳ
**ಪೆಱಕಣ್ದೆಱವು** – ಹಿಂದಿನದಕ್ಕೆ ಕಣ್ಣು ತೆರೆಯುವುದು; ಹಿಂದಿನ ಜನ್ಮದ ನೆನಪು
**ಪೆಱಗನೆ** – ಹಿಂದೆಯೇ
**ಪೆಱಗಂ ತಗುಳ್** – ಬೆನ್ನಟ್ಟು
**ಪೆಱಗಣ್** – ಹಿಂಬದಿ
**ಪೆಱಗಣ** – ಹಿಂಬದಿಯ; ಹಿಂದೆ ಸಂಭವಿಸಿದ
**ಪೆಱಗನೇಱಿಸು** – ಹಿಂಬದಿಗೆ ಹತ್ತಿಸು
**ಪೆಱಗಾಗಿಸು** – ಹಿಂದೆ ಬೀಳಿಸು
**ಪೆಱಗಾಗು** – ಹಿಂದಾಗು, ಹಿಂದೆ ಬೀಳು
**ಪೆಱಗಾಲ್** – ಹಿಂಗಾಲು, ಪ್ರಾಣಿಯ ಹಿಂದಿನ ಕಾಲು
**ಪೆಱಗಿಕ್ಕು** – ಹಿಂದಕ್ಕೆ ಸರಿಸು. ಹಿಂದಿಡು; ಹಿಮ್ಮೆಟ್ಟಿಸು
**ಪೆಱಗಿಡು** – ಹಿಮ್ಮೆಟ್ಟು; ಹಿಂದೆ ಇಡು
**ಪೆಱಗು** – ಹಿಂಭಾಗ; ಹಿಂದಿನ ಸಂಗತಿ
**ಪೆಱಗುಗುಡು** – ಬೆನ್ನು ತೋರಿಸು, ಹಿಂದಿರುಗು
**ಪೆಱಗುಗೆಯ್** – ಹಿಂದಿರುಗು; ಕಡೆಗಣಿಸು
**ಪೆಱಗೆ** – ಹಿಂಬದಿಗೆ; ಹೊರಗೆ; ಆನಂತರ; ಹಿಂದೆ
**ಪೆಱಗೆಡೆ** – ಹಿಂದೆ ಬೀಳು, ಹಿಮ್ಮೆಟ್ಟು
**ಪೆಱಗೇರಿಸು** – ಪೆಱಗನೇಱಿಸು
**ಪೆಱಗೇಱು** – ಹಿಂಬದಿಗೆ ಹತ್ತು; ಹಿಂಬದಿಯಲ್ಲಿ ಕುಳಿತುಕೊ
**ಪೆಱತು** – ಮತ್ತೊಂದು; ಬೇರೆ
**ಪೆಱತೆ(ದೆ)ಗೆ** – ಹಿಂದೆಗೆ, ಹಿಮ್ಮೆಟ್ಟು
**ಪೆಱತೊರ್ವ** – ಬೇರೊಬ್ಬ
**ಪೆಱನ್** – ಬೇರೆಯವನು, ಅನ್ಯ
**ಪೆಱನಡು** – ಹಿಂದೆ ಸರಿ
**ಪೆಱನಾಡು** – ಬೇರೆಯ ದೇಶ
**ಪೆಱಪಿಂಗಿಸು** – ಹಿಂದೆ ಬೀಳುವಂತೆ ಮಾಡು
**ಪೆಱಪಿಂಗು** – ಹಿಂದೆ ಸರಿ; ನಿವಾರಿಸು; ಪರಿಹಾರಗೊಳ್ಳು
**ಪೆಱಪೆಱಗಂ** – ಹಿಂದೆ ಹಿಂದೆಯೇ
**ಪೆಱಮೆಟ್ಟು** – ಹಿಂದಕ್ಕೆ ಹೋಗು
**ಪೆಱರ್** – ಬೇರೆಯವರು, ಅನ್ಯರು
**ಪೆಱವಕ್ಕ** – ಹಿಂಭಾಗ
**ಪೆಱವು** – ಬೇರೆಯವು
**ಪೆಱವುಳ** – ಬೇರೆಯಾಗಿಯೇ ಉಳಿದುಕೊ; ಬೇರೆಯ ಜಾಗ(ದಲ್ಲಿ)
**ಪೆಱವೆಣ್** – ಪರಸ್ತ್ರೀ
**ಪೆಱವೋಗು** – ಹಿಂದೆ ಹೋಗು
**ಪೆಱಸಾರ್** – ಹಿಂದೆ ಸಾರು, –ಹೋಗು–
**ಪೆಱಸಾರ್ಚು** – ಹಿಂಜರಿಯಿಸು
**ಪೆಱಿಸು** – ಹೆರಿಸು, ಹೆರಿಗೆಯಾಗುವಂತೆ ಮಾಡು
**ಪೆಱು** – ಹೆರು; ಹಡೆ; ನಿರ್ಮಿಸು; ಹೊರಸೂಸು; ಹೆಪ್ಪುಗಟ್ಟು
**ಪೆಱುಕು** – ಹೆಕ್ಕು
**ಪೆಱೆ** – ಚಂದ್ರ
**ಪೆಱೆದಲೆಯ** – ಚಂದ್ರನನ್ನು ತಲೆಯಲ್ಲಿ ಉಳ್ಳವನು, ಶಿವ
**ಪೆಱೆನೊಸಲ್** – ಚಂದ್ರನಂತಹ ಹಣೆ
**ಪೆಱೆಮುಖಿ** – ಚಂದ್ರನಂತಹ ಮುಖವುಳ್ಳವಳು
**ಪೆಱೆಯಂಬು** – ಚಂದ್ರಾಕಾರದ ಬಾಣ
**ಪೆಱೆವಣೆ** – ಪೆಱೆ+ಪಣೆ, ಪೆಱೆನೊಸಲ್
**ಪೆೞಕು** – ಜಗಳ
**ಪೆೞವ** – ಹೆಳವ, ಊನಗಾಲಿನವನು
**ಪೆೞವಿ** – ಹೆಳವಿ, ಊನಗಾಲಿನವಳು
**ಪೆೞವು** – ಊನಗಾಲು
**ಪೆೞವುಗೊಳ್** – ಕಾಲು ಊನಗೊಳ್ಳು
**ಪೆೞವೆ** – ಪೆೞವಿ
**ಪೇಕುಳಗೊಳ್** – ಪೆಂಕುಳಿಗೊಳ್
**ಪೇಚಕ** – ಗೂಬೆ
**ಪೇಜವಿತಿ** – ಒಂದು ಬಗೆಯ ನಡಿಗೆ
**ಪೇಟಿ** – ಪೆಟ್ಟಿಗೆ
**ಪೇಟಕ** – ಸಮೂಹ
**ಪೇಡಿ** – ಹೇಡಿ
**ಪೇನ್** – ಹೇನು, ಕೂದಲಲ್ಲಿ ಸೇರುವ ಹುಳು
**ಪೇಪಂದಿ** – ಹೆಣ್ಣು ಹಂದಿ; ಹೇಲು ತಿನ್ನುವ ಹಂದಿ
**ಪೇರಡಗು** – ಹೆಚ್ಚಾದ ಮಾಂಸ
**ಪೇರಡವಿ** – ದಟ್ಟ ಕಾಡು
**ಪೇರಡಿ** – ದೊಡ್ಡ ಪಾದ; ನಾಯಿ
**ಪೇರಡ್ಡ** – ತಿರಸ್ಕಾರ ಮಾಡುವಿಕೆ
**ಪೇರಣಿ** – ದೊಡ್ಡ ಸೈನ್ಯ
**ಪೇರರ್ವಿ** – ಪಿರಿದು+ಅರ್ವಿ, ದೊಡ್ಡ ತಡಸಲು
**ಪೇರಱಿಕೆ** – ಅತಿಶಯ ಖ್ಯಾತಿ
**ಪೇರಾನೆ** – ಭರಿಯಾದ ಆನೆ
**ಪೇರಾವೆ** – ದೊಡ್ಡ ಆಮೆ
**ಪೇರಾಲ** – ದೊಡ್ಡ ಆಲದ ಮರ
**ಪೇರಾಳ್** – ದೊಡ್ಡ ಶೂರ
**ಪೇರೀಳೆ** – ಹೇರಿಳೆ
**ಪೇರುರ** – ವಿಶಾಲವಾದ ವಕ್ಷಸ್ಥಳ
**ಪೇರುರಿ** – ದೊಡ್ಡ ಉರಿ
**ಪೇರೆತ್ತು** – ದೊಡ್ಡ ಎತ್ತು
**ಪೇರೊಕ್ಕಲ್** – ಹಿರಿಯ ವಂಶ
**ಪೇರೊಡಲ್** – ದೊಡ್ಡ ಹೊಟ್ಟೆ, –ದೇಹ–
**ಪೇರೊಟ್ಟೆ** – (ಪಿರಿದು+ಒಟ್ಟೆ) ದೊಡ್ಡ ಒಂಟೆ
**ಪೇಲ್** – ಮಲ, ಅಮೇಧ್ಯ
**ಪೇಶಲ** – ಸುಂದರವಾದ
**ಪೇಶಿ** –ಮಾಂಸ
**ಪೇಸಿಕೆ** – ಹೇಸಿಕೆ; ಅಸಹ್ಯ
**ಪೇಸು** – ಜುಗುಪ್ಸೆಪಡು

**ಪೇಸುಗೆ** – ಜಿಗುಪ್ಸೆ
**ಪೇಸುತಪ** – ಜಿಗುಪ್ಸೆ ತರುವ ತಪಸ್ಸು
**ಪೇಸುಪತ** – ಹೊಲಸು
**ಪೇಸೇೞ್** – ಜಿಗುಪ್ಸೆಯುಂಟಾಗು
**ಪೇಳಗೆ** – (ಪೇಟಿಕಾ) ಪೆಟ್ಟಿಗೆ; ಬುಟ್ಟಿ
**ಪೇಱು** – ಹೇರು; ಹೊರೆ
**ಪೇೞ್** – ಹೇಳು; ನಿರೂಪಿಸು; ಆಜ್ಞೆಮಾಡು
**ಪೇೞ್ಪಡು** – ಹೇಳಲ್ಪಡು
**ಪೇೞೆ** – ಬುಟ್ಟಿ, ಹೆಡಿಗೆ
**ಪೇೞೆಸು** – ಹೇಳಿಸು, ಹೇಳುವಂತೆ ಮಾಡು
**ಪೇೞ್ಕೆ** – ಹೇಳಿಕೆ; ಅಪ್ಪಣೆ
**ಪೇೞ್ಕೆಗೇಳ್** – ಆಜ್ಞೆಯಂತೆ ನಡೆದುಕೊ
**ಪೈತಿ(ತ್ರಿ)ಕ** – ಪಿತ್ತಸಂಬಂಧಿ
**ಪೈಶಂಗಿತ** – ನಸುಹಳದಿ
**ಪೈಶಾಚ(ಚಿ)ಕ** – ಪಿಶಾಚಿಗೆ ಸಂಬಂಧಿಸಿದ, ದೆವ್ವಬಡಿದವನು
**ಪೈಶೂನ್ಯ** – ಚಾಡಿಮಾತು
**ಪೊಂಕ** – ಗರ್ವ; ಉತ್ಸಾಹ; ವಿಕಾಸ
**ಪೊಂಕಂಗಿಡಿಸು** – ಅಹಂಕಾರಮರ್ದನಮಾಡು
**ಪೊಂಕಮಗೆಡು** – ಅಹಂಕಾರಭಂಗವಾಗು
**ಪೊಂಗಡಗ** – ಚಿನ್ನದ ಕಡಗ
**ಪೊಂಗವಚ** – ಚಿನ್ನದ ಕವಚ
**ಪೊಂಗವಡಿಕೆ** – ಚಿನ್ನದ ಕವಡಿಕೆ, ಒಂದು ಆಭರಣ
**ಪೊಂಗವಳಗೆ** – ಚಿನ್ನದ ಕವಳಿಗೆ, ಚಿನ್ನದ ಸಣ್ಣ ಅಡಕೆಲೆ ಪೆಟ್ಟಿಗೆ
**ಪೊಂಗಳಂತಿಗೆ** – ಚಿನ್ನದ ಗಳಂತಿಗೆ, ನೀರಿನ ಪಾತ್ರೆ
**ಪೊಂಗಳಶ(ಸ)** – ಚಿನ್ನದ ಕಳಶ
**ಪೊಂಗಱಿ** – ಚಿನ್ನದ ಗರಿ, ಬಾಣಕ್ಕೆ ಕಟ್ಟುವ ಗರಿ
**ಪೊಂಗಾಲ** – ಚಿನ್ನದ ಗಾಲಿ
**ಪೊಂಗಿಂಡಿ** – ಹೊನ್ನಿನ ಗಿಂಡಿ
**ಪೊಂಗಿಸು** – ಹಿಗ್ಗುವಂತೆ ಮಾಡು
**ಪೊಂಗು** – ಉಬ್ಬು; ಉತ್ಸಾಹಗೊಳ್ಳು; ಸೊಕ್ಕು
**ಪೊಂಗುನೂಲ್** – ಅರಿಸಿನದ ದಾರ
**ಪೊಂಗುಪ್ಪಸ** – ಜರಿಯ ರೇಷ್ಮೆ ಕುಪ್ಪಸ
**ಪೊಂಗುಱಿವ** – ಚಿನ್ನದ ದ್ವೀಪ
**ಪೊಂಗೆಜ್ಜೆ** – ಚಿನ್ನದ ಗೆಜ್ಜೆ
**ಪೊಂಗೇದಗೆ** – ಚಿನ್ನದ ಬಣ್ಣದ ಕೇದಗೆ
**ಪೊಂಗೊಡ** – ಚಿನ್ನದ ಬಿಂದಿಗೆ
**ಪೊಂಗೊಡೆ** – ಚಿನ್ನದ ಕೊಡೆ
**ಪೊಂಗೋಂಟೆ** – ಚಿನ್ನದ ಕೋಟೆ
**ಪೊಂಗೋಲ್** – ಚಿನ್ನದ ಕೋಲು
**ಪೊಂಚು** – ಹೊಂಚುಹಾಕು
**ಪೊಂಜಗಲ** – ಚಿನ್ನದ ಜಗಲಿ
**ಪೊಂಜಲಗೆ** – ಪೊನ್+ಸಲಗೆ, ಚಿನ್ನದ ಸಲಾಕೆ
**ಪೊಂಜಾಮರ** – ಚಿನ್ನದ (ಹಿಡಿಯುಳ್ಳ) ಚಾಮರ
**ಪೊಂಜಾಳಗೆ** – ಚಿನ್ನದ ನಾಣ್ಯಚೀಲ
**ಪೊಂಜುರಿಗೆ** – ಚಿನ್ನದ ಕಠಾರಿ
**ಪೊಂಜೂಜಿ** – ಹೊನ್ನಿನ ಸೂಜಿ
**ಪೊಂಜೊನ್ನಲಗೆ** – ಚಿನ್ನದ ಬಿಂದಿಗೆ
**ಪೊಂದಗಡು** – ಚಿನ್ನದ ತಗಡು
**ಪೊಂದಳರ್** – ಹೊಂಬಣ್ಣದ ಚಿಗುರು
**ಪೊಂದಾಮ(ವ)ರೆ** – ಹೊಂಬಣ್ಣದ ತಾವರೆ
**ಪೊಂದು** – ಸೇರು; ಪ್ರಾಪ್ತವಾಗು; ಮರಣಹೊಂದು
**ಪೊಂದೆರೆ** – ಜರತಾರಿಯ ತೆರೆ
**ಪೊಂದೊಡರ್** – ಹೊನ್ನಿನ ಕಾಲಂದುಗೆ
**ಪೊಂದೊಡವು** – ಚಿನ್ನದ ಆಭರಣ
**ಪೊಂದುಡಿಗೆ** – ಪೊಂದೊಡವು
**ಪೊಂಪುೞೆ** – ಹೆಚ್ಚಿಕೆ; ರೋಮಾಂಚ; ಉತ್ಸಾಹ
**ಪೊಂಪುೞೆಗೊಳ್** – ಸಂತಸಗೊಳ್ಳು
**ಪೊಂಪುೞೆವಡೆ** – ಪೊಂಪುೞೆಗೊಳ್
**ಪೊಂಪುೞೆವೆಱು** – ಪೊಂಪುೞೆಗೊಳ್
**ಪೊಂಪುೞೆವೋಗು** – ಅಧಿಕವಾಗು; ಚೆನ್ನಾಗು; ವ್ಯಾಪಿಸು
**ಪೊಂಪುೞೆಸು** – ಅಧಿಕಗೊಳ್ಳು
**ಪೊಂಬಕ್ಕರಿ(ರ)ಕೆ(ಗೆ)** – ಚಿನ್ನದ ರಕ್ಷಾಕವಚ
**ಪೊಂಬಟ್ಟ** – ಚಿನ್ನದ ಪಟ್ಟ (ಬಾಸಿಗ)
**ಪೊಂಬಟ್ಟು** – ಚಿನ್ನದ ಬಣ್ಣದ ವರ್ತುಲ
**ಪೊಂಬಟ್ಟೆ** – ಪೀತಾಂಬರ
**ಪೊಂಬಡಲಗೆ** – ಚಿನ್ನದ ತಟ್ಟೆ
**ಪೊಂಬಡೆ** – ಚಿನ್ನವನ್ನು ಗಳಿಸು
**ಪೊಂಬಣ್ಣ** – ಚಿನ್ನದ ಬಣ್ಣ
**ಪೊಣಬರದ** – ಚಿನ್ನದ ವ್ಯಾಪಾರಿ
**ಪೊಂಬರಿಯಾಣ** – ಚಿನ್ನದ ಹರಿವಾಣ
**ಪೊಂಬಸದಿ** – ಚಿನ್ನದ ಬಸದಿ
**ಪೊಂಬಱುಗಲ್** – ಚಿನ್ನದ ದೋಣಿ
**ಪೊಂಬೞಿದೊಂಗಲ್** – ಹೊಂಬಾಳೆಯ ಗೊಂಚಲು
**ಪೊಂಬಾದರಿ** – ಚಿನ್ನದ (ಬಣ್ಣದ) ಪಾದರಿ ಹೂ
**ಪೊಂಬಾಳೆ** – ಹೊಂಬಾಳೆ, ಅಡಕೆತೆಂಗುಗಳ ಹೂಗೊಂಚಲು
**ಪೊಂಬಾೞಿ** – ಒಂದು ಬಗೆಯ ಬಾಳೆಗಿಡ, ಹಣ್ಣು
**ಪೊಂಬಿಸಿಲ್** – ಹೊಂಬಣ್ಣದ ಬಿಸಿಲು
**ಪೊಂಬುಲ** – ಹಳದಿ ಪಟ್ಟೆಯ ಹುಲಿ
**ಪೊಂಬುಲಸಮ್ಮ** – ಪೊಂಬುಲಿಯ ಚರ್ಮ
**ಪೊಂಬೆಟ್ಟ** – ಚಿನ್ನದ ಬೆಟ್ಟ, ಮೇರು
**ಪೊಂಬೆತ್ತ** – ಹೊನ್ನಿನ ಬೆತ್ತ
**ಪೊಂಬೆಸ** – ಚಿನ್ನದ ಕೆಲಸ
**ಪೊಂಬೆಸಱ್** – ಹೊಂಬಣ್ಣದ ಹೆಸರಬೇಳೆ
**ಪೊಂಬೆಳಗು** – ಹೊಂಬಣ್ಣದ ಕಾಂತಿ
**ಪೊಂಬೊಡೆಯ** – ಪೊನ್+ಪೊಡೆಯ, ಚಿನ್ನದ ಬಸಿರಿನವನು, ಹಿರಣ್ಯಗರ್ಭ, ಬ್ರಹ್ಮ
**ಪೊಕ್ಕರಣೆ** – ಹೊಕ್ಕರಣೆ, ಪುಷ್ಕರಿಣಿ, ಕೊಳ
**ಪೊಕ್ಕಿಱಿ** – (ಶತ್ರುಸೈನ್ಯದೊಳಕ್ಕೆ) ನುಗ್ಗಿ ಹೋರಾಡು
**ಪೊಕ್ಕು** – ಹೊಕ್ಕು, ನೆಯ್ಗೆಯ ಅಡ್ಡ ಎಳೆ
**ಪೊಕ್ಕು(ರ್ಕು)ೞ್** – ಹೊಕ್ಕಳು

**ಪೊಕ್ಕುೞ ಪೂ** – (ವಿಷ್ಣುವಿನ) ಹೊಕ್ಕುಳಿನ ಹೂ
**ಪೊಗಡ** – ಪಗಡೆ ಮರ
**ಪೊಗರ್** – ಕಾಂತಿ; ಉತ್ಸಾಹ; ಕೊಬ್ಬು
**ಪೊಗರಲಗು** – (ಸಾಣೆಯಿಂದ) ಹೊಳೆಯುವ ಅಲಗು
**ಪೊಗರಿೞಿಸು** – ಗರ್ವವನ್ನು ಕಡಿಮೆಮಾಡು
**ಪೊಗರೆ** – ಪೊಟರೆ; ಡೊಗರು
**ಪೊಗರೇೞ್** – ಕಾಂತಿಯನ್ನು ಚೆಲ್ಲು
**ಪೊಗರೊಗು** – ಪೊಗರೇೞ್
**ಪೊಗರ್ವಟ್ಟು** – ಪ್ರಭಾಮಂಡಲ
**ಪೊಗರ್ವಟ್ಟೆ** – ಹೊಳೆಯುವ ವಸ್ತ್ರ
**ಪೊಗರ್ವಡು** – ಹೊಳಪು ಪಡೆ
**ಪೊಗರ್ವಡೆ** – ಪೊಗರ್ವಡು
**ಪೊಗಸು** – ಬೆಳಗುಜಾವ
**ಪೊಗೞ್** – ಹೊಗಳು, ಸ್ತುತಿಮಾಡು
**ಪೊಗೞಿಸು** – ಸ್ತುತಿಗೈಸು
**ಪೊಗೞುಲಿ** – ಹೊಗಳಿಕೆಯ ನುಡಿ
**ಪೊಗೞ್ತೆ** – ಹೊಗಳಿಕೆ
**ಪೊಗೞ್ತೆವಡೆ** – ಪೊಗೞ್ತೆವೆಱು
**ಪೊಗೞ್ತೆವೆಱು** – ಹೊಗಳಿಕೆಯನ್ನು ಹೊಂದು
**ಪೊಗು** – ಒಳ ಸೇರು
**ಪೊಗೆ** – ಹೊಗೆ, ಧೂಮ
**ಪೊಗೆಗುಡಿ** – ಹೊಗೆಯುಗುಳುವ (ದೀಪದ) ಕುಡಿ
**ಪೊಗೆಗೊಳ್** – ಹೊಗೆ ಆವರಿಸು
**ಪೊಗೆಗೊಳಸು** – ಧೂಪ ಹಾಕು
**ಪೊಗೆಮೊಗ** – ಹೊಗೆಯುಗುವ ಮುಖ
**ಪೊಚ್ಚ** – ಹೊಚ್ಚ, ತೀರ ಹೊಸದಾದ; ತಪ್ಪು; ಪ್ರವಾಹ
**ಪೊಚ್ಚಂಬೋಗು** – ಕಳಂಕ ಹೊಂದು; ಹುಸಿಯಾಗು
**ಪೊಚ್ಚ ಪೊಸ** – ತೀರ ಹೊಸತಾದ
**ಪೊಚ್ಚೞ(ಱು)** – ಗೋಚರಿಸು; ಅಹಂಕಾರ
**ಪೊಚ್ಚೞತನ** – ಗರ್ವ; ಹೆಮ್ಮೆ
**ಪೊಚ್ಚೞಿಸು** – ಗೋಚರಿಸು; ಹೆಮ್ಮೆ ತೋರಿಸು
**ಪೊಚ್ಚೞು** – ತೋರ್ಪಡು; ಸ್ಫುರಿಸು
**ಪೊಚ್ಚೞುಗಿ(ಗೆ)ಡಿಸು** – ತೀವ್ರತೆಯನ್ನು ಕುಂದಿಸು; ಶೌರ್ಯಗುಂದಿಸು
**ಪೊಚ್ಚೞುಗಿ(ಗೆ)ಡು** – ಶೌರ್ಯಗುಂದು
**ಪೊಟ್ಟಣವಾರಿ** – ಪೊಟ್ಟಣದ (ದೊನ್ನೆಯ) ನೀರು
**ಪೊಟ್ಟಮುಡುಹ** – ಕುಸ್ತಿಯ ಒಂದು ವರಸೆ
**ಪೊಟ್ಟಳ** – ಪೊಟ್ಟಣ, ದೊನ್ನೆ ಮುಂತಾದವು
**ಪೊಟ್ಟಳಗೆ** – ಪೊಟ್ಟಣ; ಗಂಟು
**ಪೊಟ್ಟಳಸು** – ಉಬ್ಬು; ಗರ್ವಿಸು
**ಪೊಟ್ಟುವಡೆ** – ಹೊಟ್ಟಿನಂತಾಗು; ವ್ಯರ್ಥವಾಗು
**ಪೊಟ್ಟೆ** – ಹೊಟ್ಟೆ; ಕಣ್ಣಿನ ರೆಪ್ಪೆ
**ಪೊಟ್ಟೆಗವಡಿಕೆ** – ದೊಡ್ಡ ಕವಡೆ
**ಪೊಟ್ಟೆವಾಯ್** – ಹೊಟ್ಟೆಯುಬ್ಬರಿಸು; ರೆಪ್ಪೆ ಅದುರುವಿಕೆ
**ಪೊಟ್ಟೆವೋಗು** – ಟೊಳ್ಳಾಗು
**ಪೊಡಕರಿಸು** – ಕಾಣಿಸಿಕೊ; ಹೊರಹೊಮ್ಮು
**ಪೊಡರ್** – ಅಲುಗಾಡು; ಪ್ರಕಟಗೊಳ್ಳು; ಪ್ರಕಾಶಿಸು; ಪ್ರತಿಭಟಿಸು
**ಪೊಡರ್ಕೆ** – ಚಲನೆ
**ಪೊಡರ್ಪು(ೞ)** – ಚಲನೆ; ಅತಿಶಯತೆ; ಪ್ರತಾಪ; ಉಬ್ಬುವಿಕೆ; ಆವೇಶ
**ಪೊಡರ್ಪುಗುಂದಿಸು** – ಶೌರ್ಯವನ್ನು ಕುಂದಿಸು
**ಪೊಡರ್ಪುಗುಂದು** – ಶೌರ್ಯಗುಂದು
**ಪೊಡರ್ಪುಗಿಡು** – ಪೊಡರ್ಪುಗುಂದಿಸು
**ಪೊಡರ್ಪುಗೆಯ್** – ಶೌರ್ಯ ಪ್ರದರ್ಶಿಸು
**ಪೊಡರ್ಪುಡುಗು** – ಶಕ್ತಿಗುಂದು
**ಪೊಡರ್ಪುದೋೞ್(ಱು)** – ಶಕ್ತಿ ಪ್ರದರ್ಶಿಸು
**ಪೊಡರ್ಪುವೆಱು** – ಆಧಿಕ್ಯ ಹೊಂದು
**ಪೊಡವಡು** – ನಮಸ್ಕಾರಮಾಡು
**ಪೊಡವಡಿಕೆ** – ನಮಸ್ಕಾರ
**ಪೊಡವಿ** –(ಪೃಥುವಿ) ಭೂಮಿ
**ಪೊಡವಿಪತಿ** – ಭುಮಿಯ ಒಡೆಯ, ರಾಜ
**ಪೊಡವೀಶ** – ಪೊಡವಿಪತಿ
**ಪೊಡೆ** – ಏಟುಕೊಡು; ಹೊಟ್ಟೆ; ತೆನೆ
**ಪೊಡೆಗಿಚ್ಚು** – ಹೊಟ್ಟೆಯ ಬೆಂಕಿ, ಜಠರಾಗ್ನಿ
**ಪೊಡೆದುಂಬು** – ತೆನೆ ತುಂಬಿಕೊ
**ಪೊಡೆಯಲರ** – ಹೊಕ್ಕುಳಲ್ಲಿ ಹೂವಿರುವವನು, ವಿಷ್ಣು
**ಪೊಡೆಯಿಸು** – ಹೊಡೆಯಿಸು, ಹೊಡೆಯುವಂತೆ ಮಾಡು
**ಪೊಡೆವ(ಮ)ಡಿಸು** – ನಮಸ್ಕರಿಸುವಂತೆ ಮಾಡು
**ಪೊಡೆವ(ಮ)ಡು** – ನಮಸ್ಕರಿಸು; ಹೊಡೆಯಲ್ಪಡು
**ಪೊಡೆವೆಱು** – ಹೊಡೆತವನ್ನು ಪಡೆ
**ಪೊಡೆಸೆಂಡಾಡು** – ಹೊಡೆಯುವ ಚೆಂಡಾಟವಾಡು
**ಪೊಡೆಸೆಂಡು** – ಹೊಡೆಯುವ ಚೆಂಡು
**ಪೊಣರ್** – ಸೇರಿಕೊ, ಒಂದಾಗು; ವೃದ್ಧಿಗೊಳ್ಳು; ಪೈಪೋಟಿಮಾಡು; ಪ್ರಕಾಶಿಸು
**ಪೊಣರಳ** – ಬೇರೆಬೇರೆಯಾಗು
**ಪೊಣರ್ಕೆ** – ಹೋರಾಟ
**ಪೊಣರ್ಗಳಸ** – ಹೊಳೆಯುವ ಕಳಶ
**ಪೊಣರ್ಚು** – ಸೇರಿಸು, ಜೊತೆಗೂಡಿಸು
**ಪೊಣರ್ವಕ್ಕಿ** – ಜೋಡಿಯಾಗಿರುವ ಹಕ್ಕಿ, ಚಕ್ರವಾಕ
**ಪೊಣ್ಮಿಸು** – ಹೊಮ್ಮಿಸು, ಉಂಟುಮಾಡು
**ಪೊಣ್ಮು** – ಹೊಮ್ಮು, ಹೊರಸೂಸು; ಸ<ಭ್ರಮಿಸು
**ಪೊತ್ತಗೆ** – ಪುಸ್ತಕ
**ಪೊತ್ತಡಿ** – ಹಣದ ಚೀಲ
**ಪೊತ್ತೞ್** – ಹೊತ್ತಾರೆ, ಬೆಳಿಗ್ಗೆ
**ಪೊತ್ತಾೞ** – ಹೊತ್ತಾರೆ, ಬೆಳಿಗ್ಗೆ
**ಪೊತ್ತಿಸು** – ಉರಿಯಿಸು
**ಪೊತ್ತು** – ಹತ್ತಿ ಉರಿ; ಸೀದು ಹೋದುದು
**ಪೊದೞ್(ಱು)** – ಪೊದರು, ದಟ್ಟ ಪೊದೆ

**ಪೊದಱುಗಟ್ಟು** – ದಟ್ಟೈಸು
**ಪೊದಱುಗೊಳ್** – ದಟ್ಟವಾಗು
**ಪೊದಱ್** – ಹೊಮ್ಮು, ಪ್ರಕಟವಾಗು
**ಪೊದಱ್ಕೆ** – ಮೂಡುವಿಕೆ; ಅತಿಶಯತೆ; ತೇಜಸ್ಸು
**ಪೊದಱ್ಕೆಗುಂದು** – ಅತಿಶಯತೆ ಕುಂದು
**ಪೊದಱ್ಕೆವಡೆ** – ಅತಿಶಯತೆಯನ್ನು ಹೊಂದು
**ಪೊದಱ್ಕೆವೆಱು** – ಪೊದಱ್ಕೆವಡೆ
**ಪೊದಱ್ಚು** – ಉಂಟುಮಾಡು
**ಪೊದೆ** – ಹೊದೆದುಕೊ; ಬತ್ತಳಿಕೆ; ಪೊದರು
**ಪೊದೆಗೆದಱು** – ಹರಡು
**ಪೊದೆಯಿಸು** – ಹೊದಿಸುವಂತೆ ಮಾಡು; ವ್ಯಾಪಿಸಿಕೊಳ್ಳುವಂತೆ ಮಾಡು
**ಪೊನ್** – ಲೋಹ; ಚಿನ್ನ; ಒಂದು ಚಿನ್ನದ ನಾಣ್ಯ
**ಪೊನಲ್** – ಹೊನಲು, ಪ್ರವಾಹ
**ಪೊನಲ್ವರಿ** – ಪ್ರವಾಹದಂತೆ ಹರಿ; ನೀರಿನ ರಭಸದ ಹರಿವು
**ಪೊನಲ್ವರಿಯಿಸು** – ಪ್ರವಾಹವನ್ನುಂಟುಮಾಡು
**ಪೊನ್ನ ಬೆಟ್ಟು** – ಚಿನ್ನದ ಬೆಟ್ಟ, ಮೇರುಪರ್ವತ
**ಪೊನ್ನಲರ್** – ಬಂಗಾರದ ಹೂ
**ಪೊನ್ನಾಣ್ಮ** – ಹಣದ ಒಡೆಯ, ಕುಬೇರ
**ಪೊನ್ನಾಯುಗ** – ಚಿನ್ನದ ಹಿಡಿಕೆ
**ಪೊನ್ನಾಯೋಗ** – ಚಿನ್ನದಿಂದ ಮಾಡಿದ ಆಭರಣ
**ಪೊನ್ನೀರ್** – ಹೊಂಬಣ್ಣದ ಕಾಂತಿ
**ಪೊನ್ನುಗ** – ಅಕ್ಕಸಾಲಿಗ
**ಪೊನ್ನುಯ್ಯಲ್** – ಚಿನ್ನದ ಉಯ್ಯಾಲೆ
**ಪೊನ್ನುಳ್ಳವಂ** – ಹಣವಂತ
**ಪೊನ್ನೆ** – ಹೊನ್ನೆ ಮರ, ಪುನ್ನಾಗ
**ಪೊನ್ನೆಱೆಯ** – ಪೊನ್ನಾಣ್ಮ
**ಪೊನ್ನೊಡೆಯ** – ಪೊನ್ನಾಣ್ಮ
**ಪೊನ್ನೊರೆ** – ಹೊಂಬಣ್ಣ
**ಪೊನ್ನೊಱೆ** – ಚಿನ್ನದ ಒರೆ
**ಪೊನ್ನೋಲೆ** – ಚಿನ್ನದ ಓಲೆ
**ಪೊಪ್ಪುಕ** – (ಬೇಟೆಯಲ್ಲಿ) ಪೊದೆಯನ್ನು ಬಡಿಯುವುದು
**ಪೊಮ್ಮಗಿ(ದಿ)ಲ್** – ಚಿನ್ನದ ಗೋಡೆ
**ಪೊಮ್ಮತ್ತಿ** – ಚಿನ್ನದ ಮಚ್ಚೆ
**ಪೊಮ್ಮರೆ** – ಚಿನ್ನದ ಜಿಂಕೆ, ಕಾಂಚನಮೃಗ
**ಪೊಮ್ಮಱೆ** – ಚಿನ್ನದ ಮಳೆ
**ಪೊಮ್ಮಾಡ** – ಚಿನ್ನದ ಉಪ್ಪರಿಗೆ
**ಪೊಮ್ಮೀನ್** – ಹೊಳೆಯುವ ತಾರಗೆ
**ಪೊಯ್** – ಹೊಡೆ; ಸುರಿ; ಎರಕ ಹಾಕು; ಹೊಡೆತ
**ಪೊಯ(ಯಿ)ಲ್** – ಹೊಡೆತ; ಹುಯ್ಯಲು
**ಪೊಯ್ಲು** – ಪೊಯಿಲ್
**ಪೊಯ್ನೀರ್** – ಸುರಿಯುವ ನೀರು
**ಪೊಯ್ವಡೆ** – ಪೆಟ್ಟು ತಿನ್ನು
**ಪೊಯಲ್ವೆಱು** – ಪೊಯ್ವಡೆ
**ಪೊಯ್ಸು** – ವಾದ್ಯ ನುಡಿಸುವಂತೆ ಮಾಡು; ಸುರಿಯುವಂತೆ ಮಾಡು
**ಪೊರ(ಜ)ಜೆ** – ದಪ್ಪವಾದ ಹಗ್ಗ
**ಪೊರಪಾಯ್** – ಹೊರಹೊರಡು
**ಪೊರಸು** – ಹಗ್ಗದ ಮಂಚ
**ಪೊರಳ್** – ಹೊರಳು; ಉರುಳು; ಜಾರು
**ಪೊರಳ್ಚು** – ಹೊರಳಿಸು
**ಪೊರೆ** – ಪದರ; ಕೂಡಿರು; ರಕ್ಕಿಸು; ರಕ್ಷಣೆ; ಹತ್ತಿರ; ಉತ್ಸಾಹ; ಕಿವಿಯ ತಮಟೆ
**ಪೊರೆದೋಱು** – ಪೊರೆ ಅಥವಾ ಪದರು ಕಾಣಿಸಿಕೊ
**ಪೊರೆಪು** – ಸಂಪರ್ಕ
**ಪೊರೆಪುದೋಱು** – ಸಂಭ್ರಮಗೊಳ್ಳು
**ಪೊರೆಯೆತ್ತು** – ಪದರ ಬಿಡಿಸು
**ಪೊರೆಯೇಱಿಸು** – ಚಿಗುರಿಸು; ಉತ್ಸಾಹಗೊಳಿಸು
**ಪೊರೆಯೇಱು** – ಉತ್ಸಾಹಿಸು; ತೀಕ್ಷ್ಣಗೊಳ್ಳು
**ಪೊರೆವಿಡು** – ಪೊರೆಯನ್ನು ಕಳಚಿಕೊ
**ಪೊರೆವೋಗು** – ಉತ್ಸಾಹ ಕುಂದು
**ಪೊರ್ಕುಳ** – ಹೋರಾಟ
**ಪೊರ್ದಿಸು** – ಹೊದ್ದಿಸು, ಸೇರಿಸು, ಲೇಪಿಸು
**ಪೊರ್ದು** – ಸೇರು, ಹೊಂದಿಕೊ; ಸಮೀಪ ಹೋಗು; ಪಡೆದುಕೊ
**ಪೊರ್ದುಗೆ** – ಸೇರುವಿಕೆ; ಸಾಮೀಪ್ಯ
**ಪೊರ್ದುಗೆವಡೆ** – ಸೇರಿಕೊ
**ಪೊರ್ದುಗೆವೆಱು** – ಹತ್ತಿರ ಸಾರು
**ಪೊಲ್** – ಹೊಲಿಗೆ ಹಾಕು
**ಪೊಲ** – ಹೊಲ, ಭೂಮಿ; ಕ್ಷೇತ್ರ; ಆಶ್ರಯ
**ಪೊಲಂಬಿಗ** – ಹೊಲಬಿಗ, ದಾರಿ ತೋರಿಸುವವನು
**ಪೊಲಂಬು** – ಹೊಲಬು, ದಾರಿ; ರೀತಿ
**ಪೊಲಂಬುಗಿಡಿಸು** – ದಾರಿ ತಪ್ಪಿಸು;
**ಪೊಲಂಬುಗೆಡು** – ದಾರಿ ತಪ್ಪು; ದಿಕ್ಕು ತೋಚದಾಗು
**ಪೊಲಂಬುದಪ್ಪು** – ಪೊಲಂಬುಗೆಡು
**ಪೊಲಗಿಡಿಸು** – ಪೊಲಂಬುಗಿಡಿಸು
**ಪೊಲಗಿ(ಗೆ)ಡು** – ಪೊಲಂಬುಗೆಡು
**ಪೊಲತಿ** – ಹೊಲೆಯ ಹೆಂಗಸು
**ಪೊಲನಾಗು** – ದೃಷ್ಟಿಗೆ ಬೀಳು
**ಪೊಲಮ(ಮೆ)ಚ್ಚು** – ತನ್ನ ಸ್ಥಳದ ಬಗೆಗಿನ ಅಭಿಮಾನ
**ಪೊಲನಾಗು** – ಆಶ್ರಯವಾಗು
**ಪೊಲವಟ್ಟು** – ಹೊಲಗೇರಿ
**ಪೊಲವಾನಸೆ** – ಪೊಲತಿ
**ಪೊಲಸಟ್ಟ ನಾಱು** – ಹೊಲಸಿನಿಂದಾಗಿ ಕೆಟ್ಟ ವಾಸನೆ ಸೂಸು
**ಪೊಲಸು** – ಹೊಲಸು; ಅಮೇಧ್ಯ; ದೋಷ
**ಪೊಲಸುನಾಱು** – ಪೊಲಸಟ್ಟ ನಾಱು
**ಪೊಲಿ** – ಪೊಲ್

**ಪೊಅಸು** – ಹರಿದುದನ್ನು ಹೊಲಿಗೆ ಹಾಕಿ ಸೇರಿಸು
**ಪೊಲೆ** – ಹೊಲಸಾದುದು; ಕೆಟ್ಟುದು; ಕಳಂಕ
**ಪೊಲೆಗಲಸು** – ಮೈಲಿಗೆ ಮಾಡು
**ಪೊಲೆಗೆಡು** – ಹೊಲಸಾಗು
**ಪೊಲಗೇರಿ** – ಹೊಲೆಯರು ವಾಸಿಸುವ ಜಾಗ
**ಪೊಲೆಬೂತು** – ಕ್ಷುದ್ರ ವ್ಯಕ್ತಿ
**ಪೊಲೆಯ** – ಹೊಲೆಯ; ನೀಚ
**ಪೊಲೆವಟ್ಟು** – ಪೊಲೆ+ಪಟ್ಟು, ಹೊಲೆಗೇರಿ
**ಪೊಲೆವೆಣ್** – ನೀಚ ಹೆಂಗಸು
**ಪೊಲೆಸೂರುಳ್** – ಕೆಟ್ಟ ಪ್ರತಿಜ್ಞೆ
**ಪೊಲ್ಲ** – ಕೆಟ್ಟುದು; ಕೇಡು; ಹೀನವಾದುಸು
**ಪೊಲ್ಲಾಗು** – ಕೆಡುಕಾಗು
**ಪೊಲ್ಲಗೆಯ್** – ಕೇಡು ಮಾಡು; ಕೆಟ್ಟುದು ಮಾಡು
**ಪೊಲ್ಲದು** – ಅಯೋಗ್ಯವಾದುದು, ಕೆಟ್ಟುದು
**ಪೊಲ್ಲದುಗೆಯ್** – ಪೊಲ್ಲಗೆಯ್
**ಪೊಲ್ಲನುಡಿ** – ಕೆಟ್ಟ ಮಾತು
**ಪೊಲ್ಲಮಾತು** – ಕೆಟ್ಟ ಮಾತು
**ಪೊಲ್ಲಮಾನಸ(ಸಿ)** – ದುಷ್ಟ ವ್ಯಕ್ತಿ
**ಪೊಲ್ಲಮೆ** – ಹೊಲಸು; ಕೆಟ್ಟತನ; ಕಳಂಕ
**ಪೊಲ್ಲಮೆಗಾಣ್** – ಕೆಟ್ಟುದನ್ನು ಕಾಣು
**ಪೊಲ್ಲಮೆಗೆಯ್** – ಕೆಟ್ಟುದನ್ನು ಮಾಡು
**ಪೊಲ್ಲಿಂಗಿ** – ಕೆಟ್ಟ ಸನ್ಯಾಸಿ
**ಪೊಸ** – ಹೊಸ, ನೂತನ
**ಪೊಸಂತಿಲ್** – ಹೊಸಿಲು
**ಪೊಸಂಬ** – ಹೊಸಬ, ಅಪರಿಚಿತ
**ಪೊಸಕಿಟ್ಟಳ** – ಹೊಸ (ಯೌವನದ) ಸೊಕ್ಕು
**ಪೊಸಗಂಪು** – ಹೊಸ ಸುವಾಸನೆ
**ಪೊಸಗನ್ನಡ** – ಹೊಸ ಕನ್ನಡ
**ಪೊಸಗಬ್ಬ** – ಹೊಸ ಕಾವ್ಯ
**ಪೊಸಕ(ಗ)ತ್ತಲೆ** – ಹೊಸದಾಗಿ ಆವರಿಸುವ ಕತ್ತಲೆ
**ಪೊಸಗಳಮೆ** – ಪೊಸ+ಕಳಮೆ, ಹೊಸ ಬತ್ತ
**ಪೊಸಗಾಡಿ** – ತಾಜಾ ಚೆಲುವು
**ಪೊಸಗಾರ್** – ಆರಂಭದ ಮಳೆಗಾಲ, ಮುಂಗಾರು
**ಪೊಸಗಾವರ** – ಹೊಸ ಸ್ವರ
**ಪೊಸಗೆ(ಕೆ)ಂದಳಿರ್** – ಹೊಸ ಚಿಗುರು
**ಪೊಸಗೆಂಪು** – ತಾಜಾ ಕೆಂಪು
**ಪೊಸಗೆಲ್ಲ** – ಹೊಸ ಗೆಲವು
**ಪೊಸಜವ್ವನ** – ಹೊಸ ಹರಯ, ಏರುಜವ್ವನ
**ಪೊಸಜವ್ವನೆ** – ಹೊಸ ಹರಯದವಳು
**ಪೊಸಜಾಗ** – ಪೊಸ+ಚಾಗ, ಹೊಸ ಪಚ್ಚೆ
**ಪೊಸಜಾದಿ** – ಅದೇ ಅರಳಿದ ಜಾಜಿ
**ಪೊಸತಿಕ್ಕು** – ಪೊಸತಂ+ಇಕ್ಕು, ಹೊಸದಕ್ಕೆಂದು
ಬಲಿಕೊಡು
**ಪೊಸತು** – ಹೊಸತು, ನವೀನವಾದುದು
**ಪೊಸತೇರ್** – ಹೊಸ ರಥ
**ಪೊಸದಳಿಂಬ** – ಹೊಸ ವಸ್ತ್ರ
**ಪೊಸದಳಿರ್** – ಹೊಸ ಚಗುರು
**ಪೊಸದಾಂಗುಡಿ** – ಪೊಸದಳಿರ್
**ಪೊಸದಾವರೆ** – ಹೊಸದಾಗಿ ಅರಳಿರುವ ತಾವರೆ
**ಪೊಸದುಗುಲ** – ಹೊಸ ಬಟ್ಟೆ
**ಪೊಸದೇಸಿ(ಶಿ)** – ಹೊಸ ಬೆಡಗು
**ಪೊಸದೇಸೆಕಾರ್ತಿ** – ಏರುಜವ್ವನದ ಚೆಲುವೆ
**ಪೊಸನನೆ** – ಹೊಸದಾದ ಮೊಗ್ಗು
**ಪೊಸನವಿಲ್** – ನವಿಲ ಮರಿ
**ಪೊಸನಸೆ** – ಹೊಸದಾಗಿ ಉಂಟಾಗುವ ಬೆದೆ
**ಪೊಸನೀರ್** – ಹೊಸದಾಗಿ ಹರಿದು ಬಂದ ನೀರು
**ಪೊಸನುಡಿ** – ಹೊಸ ಮಾತು, ಅಪೂರ್ವ ನುಡಿ
**ಪೊಸನೂಲ್** – ಹೊಸದಾದ ದಾರ
**ಪೊಸನೆತ್ತರ್** – ಹೊಸ ರಕ್ತ, ಬಿಸಿ ರಕ್ತ
**ಪೊಸನೆಲ್** – ಹೊಸ ಬತ್ತ
**ಪೊಸನೇಣ್** – ಹೊಸ ಹಗ್ಗ
**ಪೊಸನೇರಾಣಿ** – ಹೊಳೆಯುವ ಚಿನ್ನ
**ಪೊಸಪಚ್ಚ** – ಹೊಳಪಿನ ಒಡವೆ
**ಪೊಸಪಜ್ಜೆ** – ಹೊಸ ಹೆಜ್ಜೆ; ಹೊಸ ಹೆಜ್ಜೆಯ
ಗುರುತು
**ಪೊಸಪಸಲೆ** – ಹಸಿ ಹುಲ್ಲು
**ಪೊಸಪೊಡೆ** – ಹೊಸದಾಗಿ ಮೂಡಿದ ತೆನೆ
**ಪೊಸಪೊಟ್ಟಿರ್** – ಹೊಸ ಬೆಳಗು; ನವಯೌವನ
**ಪೊಸಬಣ್ಣ** – ಹೊಳೆಯುವ ಬಣ್ಣ
**ಪೊಸಬಿಜ್ಜಣಿಗೆ** – ಹೊಸ ಬೀಸಣಿಗೆ
**ಪೊಸಬೇಸಗೆ** – ಆರಂಭಗೊಂಡ ಬೇಸಗೆ
**ಪೊಸಮಕರಂದ** – ಹೊಸದಗಿ ಅರಳಿದ ಹೂವಿನ
ಮಕರಂದ
**ಪೊಸಮದ** – ಏರುಂಜವ್ವವನದ ಸೊಕ್ಕು
**ಪೊಸಮದವಣಿಗ** – ಹೊಸದಾಗಿ
ಮದುವೆಯಾದವನು
**ಪೊಸಮದವಳಿಗೆ** – ಹೊಸದಾಗಿ
ಮದುವೆಯಾದವಳು
**ಪೊಸಮಸೆ** – ಹೊಸತಾಗಿ ಮಸೆದಿರುವುದು
**ಪೊಸಮಿಸುನಿ** – ಹೊಳೆಯುವ ಚಿನ್ನ
**ಪೊಸಮೀನ್** – ಹೊಸ ಮೀನು
**ಪೊಸಮುತ್ತು** – ಹೊಸತಾದ ಮುತ್ತು
**ಪೊಸಯಿಸು** – ಹೊಸತಾಗಿ ಮಾಡು; ದಚನೆ
ಮಾಡು
**ಪೊಸರೂಪು** – ಹೊಸ ಚೆಲುವು
**ಪೊಸವಂದರ್** – ಪೊಸ+ಪಂದರ್, ಹೊಸ ಚಪ್ಪರ
**ಪೊಸವಗೆ** – ಪೊಸ+ಬಗೆ, ಹೊಸ ರೀತಿ
**ಪೊಸವಟ್ಟ** – ಪೊಸ+ಪಟ್ಟ, ಹೊಸ ಪೀಠ,
ಹೊಸತಾದ ಬಾಸಿಂಗ
**ಪೊಸವಣ್** – ಪೊಸ+ಪಣ್, ತಾಜಾ ಹಣ್ಣು
**ಪೊಸವಸೆ** – ಪೊಸ+ಪಸೆ, ಹೊಸತಾದ ಹಸೆ
**ಪೊಸವಳಿಕು** – ಪೊಸ+ಪಳಿಕು, ಹೊಸ ಸ್ಫಟಿಕ
**ಪೊಸವಾಣತಿ** – ಹಸಿ ಬಾಣಂತಿ

**ಪೊಸಪಾವುಗೆ** – ಪೊಸ+ಪಾವುಗೆ, ಹೊಸ ಪಾದರಕ್ಷೆ
**ಪೊಸವಾಸಣಿಗೆ** – ಪೊಸ+ಬಾಸಣಿಗೆ, ಹೊಸತಾದ ಮುಸುಕು
**ಪೊಸವಾಸಿಗ** – ಪೊಸ+ಬಾಸಿಗ, ಹೊಸ ಹೂಮಾಲೆ
**ಪೊಸವಿಲ್** – ಹೊಳೆಯುವ ಬಿಲ್ಲು
**ಪೊಸವಿಸಿಲ್** – ಎಳೆ ಬಿಸಿಲು
**ಪೊಸವೆಣ್** – ಹೊಸ ಹರೆಯದ ಹೆಣ್ಣು
**ಪೊಸವೆಳ್ಪು** – ಪೊಸ+ಬೆಳ್ಪು, ಅಚ್ಚ ಬಿಳಿ ಬಣ್ಣ
**ಪೊಸವೇಟ** – ಪೊಸ+ಬೇಟ, ಹೊಸ ಪ್ರಣಯ
**ಪೊಸವೇಟಕಾಱ(ರ್ತಿ)** – ಹೊಸ ಪ್ರೇಮಿ
**ಪೊಸವೊಗರ್** – ಪೊಸ+ಪೊಗರ್, ಹೊಸ ಕಾಂತಿ
**ಪೊಸವೊನ್** – ಮಿರುಗುವ ಚಿನ್ನ
**ಪೊಸವೊನಲ್** – ಪೊಸ+ಪೊನಲ್, ಹೊಸತಾಗಿ ಹರಿದು ಬರುವ ಪ್ರವಾಹ
**ಪೊಸವೋರ್ತೆ** – ಪೊಸ+ಪೋರ್ತೆ, ಹೊಸ ಯುದ್ಧ
**ಪೊಸೆ** – ಹಗ್ಗ ಹೊಸೆ; ಕಿವಿಚು, ಹೊಸಕು; ಕಡೆಗೋಲು; ಕಡೆ
**ಪೊಸೆ(ಸ)ಯಿಸು** – ಹೊಸೆ, ಹೆಣೆ, ಸೇರಿಸು; ಮೊಸರಿನಂತೆ ಕಡೆ
**ಪೊಳ(ಂ)ಕು** – ಮಿರುಗು; ಅಗಿದು ತಿನ್ನು; ಮೆಲುಕು ಹಾಕು
**ಪೊಳಕಿಸು** – ಮೆಲುಕು ಹಾಕು
**ಪೊಳ(ಳೆ)ಪು** – ಹೊಳಪು, ಕಾಂತಿ
**ಪೊಳಪೇಱು** – ಹೆಚ್ಚು ಕಾಂತಿಯುಕ್ತವಾಗು
**ಪೊಳೆ** – ಹೊಳೆ, ಮಿರುಗು; ಹೊಯ್ದಾಡು
**ಪೊಳೆಪಿಡು** – ಮಿರುಗುವಂತೆ ಮಾಡು
**ಪೊಳೆಪುವಡೆ** – ಕಾಂತಿಯನ್ನು ಪಡೆ
**ಪೊಳೆವಾಳ್** – ಪೊಳೆ+ಬಾಳ್, ಹೊಳೆಯುವ ಕತ್ತಿ
**ಪೊಳ್ನುಡಿ** – ತಿರುಳಿಲ್ಲದ ಮಾತು
**ಪೊಳ್ಮರ** – ತೊಸಕಲು ಮರ
**ಪೊಳ್ಳು** – ಒಳಗು ಗಟ್ಟಿಯಲ್ಲದುದು, ತೊಸಕಲು
**ಪೊಳ್ಳುಮರ** – ಪೊಳ್ಮರ
**ಪೊಳ್ಳೆವಂದಿ** – ಓಡುವ ಹಂದಿ
**ಪೊಱಅಡಿ** – ಅಡಿಯ (ಹೆಜ್ಜೆಯ) ಮೇಲುಭಾಗ
**ಪೊಱಂಡಿ** – ಗೂನು ಹೆಂಗಸು
**ಪೊಱಕಣ್** – ಹೊರಗಿನ ಕಣ್ಣು
**ಪೊಱಕುಳ** – ಆಶ್ರಿತನಾದವನು
**ಪೊಱಕೆ(ಗ)ಯ್** – ಕೈಯ ಹೊರಭಾಗ
**ಪೊಱಗಣ್** – ಹೊರಭಾಗ
**ಪೊಱಗಣಂ** – ಹೊರಗಿನವನು
**ಪೊಱಗು** – ಹೊರಭಾಗ; ಹೊರತಾದುದು
**ಪೊಱಗಿಕ್ಕು** – ಹೊರಗಿಡು, ಹೊರತುಗೊಳಿಸು; ತ್ಯಜಿಸು
**ಪೊಱಗೆ** – ಹೊರಗೆ
**ಪೊಱತು** – ಹೊರತಾದುದು, ಬೇರೆಯಾದುದು
**ಪೊಱತೆಗೆ** – ಹೊರಕ್ಕೆ ತೆಗೆ
**ಪೊಱದಡಿ** – ಪೊಱ+ತಡಿ, ಆಚೆಯ ದಡ
**ಪೊಱಪಚ್ಚ** – ಮೇಲುಹೊದಿಕೆ; ಹೊರ ವೇಷ
**ಪೊಱಪೊಣ್ಮು** – ಹೊರಹೊಮ್ಮು, ಹೊರಕ್ಕೆ ಚಿಮ್ಮು
**ಪೊಱಮಡಿಸು** – ಹೊರಕ್ಕೆ ಬರುವಂತೆ ಮಾಡು
**ಪೊಱಮಡು** – ಹೊರಬರು; ಜಾಗ ಬಿಟ್ಟು ಹೋಗು
**ಪೊಱಮಾಱು** – ಪಲಾಯನಮಾಡು; ನಿತಂಬ
**ಪೊಱಮುಯ್ವು** – ಭುಜದ ಹೊರಭಾಗ
**ಪೊಱವಾ(ಪಾ)ಯ್** – ಹೊರಚಾಚು
**ಪೊಱವೀಡು** – ಊರ ಹೊರವಲಯದಲ್ಲಿನ ಬೀಡು
**ಪೊಱವೊಱಸು** – ಪೊಱ+ಪೊಱಸು, (ಮನೆಯೊಳಗೆ ಬರಬಾರದ ಪಕ್ಷಿ) ಪಾರಿವಾಳ; ತಿರಸ್ಕಾರಯೋಗ್ಯವಾದುದು
**ಪೊಱವೊೞಲ್** – ಊರ ಹೊರವಲಯ
**ಪೊಱಸು** – ಪಾರಿವಾಳ
**ಪೊಱು** – ಹೊರು, ಭಾರ ತೆಗೆದುಕೊ; ಜವಾಬ್ದಾರಿ ಹೊಂದು
**ಪೊಱೆ** – ಹೊರೆ; ಭಾರ; ಜವಾಬ್ದಾರಿ
**ಪೊಱೆಕಾಱ** – ಹೊರೆ ಹೊತ್ತವನು
**ಪೊಱೆಗಟ್ಟು** – ಹೊರೆಯಾಗಿ ಕಟ್ಟು
**ಪೊಱೆವೊರಕ** – ಭಾರ ವಹಿಸುವುದು; ಭಾರದ ವ್ಯಾಪ್ತಿ
**ಪೊೞಕು** – ಸಹಜ ಆಕಾರ
**ಪೊೞಲ್** – ಪಟ್ಟಣ
**ಪೊೞಲಱ** – ನಗರವಾಸಿ
**ಪೊೞಲೊಡೆಯ** – ಊರಿನ ಯಜಮಾನ
**ಪೊೞಲ್ವೀದಿ** – ನಗರದ ಬೀದಿ
**ಪೊೞೆ** – ನದಿ
**ಪೊೞೆಗಟ್ಟು** – ನದಿಯಾಗಿಸು
**ಪೊೞೆಮೆಟ್ಟು** – ಪೂಜೆಗಾಗಿ ನೀರಿಗೆ ಇಳಿ
**ಪೊೞ್ತಿ** – ಚಿನ್ನದ ಪಾತ್ರೆ
**ಪೊೞ್ತಿಡು(ಡೆ)** – ಹೊತ್ತಾರೆ, ಬೆಳಗು
**ಪೊೞ್ತಿಱ್(ಱೆ)** – ಹೊತ್ತಾರೆ, ಬೆಳಿಗ್ಗೆ
**ಪೊೞ್ತು** – ಹೊತ್ತು, ಸಮಯ; ಸೂರ್ಯ
**ಪೊೞ್ತುಗಳೆ** – ಕಾಲಹರಣ ಮಾಡು
**ಪೊೞ್ತುಪೋಗು** – ಕಾಲ ಮುಂದೆ ಸಾಗು
**ಪೋ** – ಹೋಗು, ಮುಂದೆ ಸಾಗು; ನಿವಾರಣೆಗೊಳ್ಳು; ಸಾಯು
**ಪೋಂತು** – ಹೋತ
**ಪೋಗಾಡು** – ನೀಗಿಕೊ
**ಪೋಗು** – ಹೋಗು; ಹೋಗುವಿಕೆ
**ಪೋಗೊದೆ** – ದೂರ ಹೋಗುವಂತೆ ಒದೆ
**ಪೋಡು(ಂ)ಗಾಱ** – ಸೌದೆ ಕತ್ತರಿಸುವವನು
**ಪೋತ** – ಹಡಗು; ಮರಿ
**ಪೋತ(ಕ)** – ಮರಿ
**ಪೋತರ್** – ಹೋಗು; ಹೊರಬರು
**ಪೋತ್ರ** – ಹಂದಿ; ನೇಗಿಲು; ಮೂತಿ
**ಪೋಪು** – ಹತ್ತಿರ ಹೋಗುವುದು

**ಪೋಬರವು** – ಹೋಗಿಬರುವುದು
**ಪೋಬಟೆ** – ಹೋದ ದಾರಿ
**ಪೋರ್** – ಕಾದು; ಸ್ಪರ್ಧಿಸು; ಹೋರಾಟ; ತೂತು
**ಪೋರಗ** – ಒಂದು ಆಯುಧ
**ಪೋರಟೆ** – ಕಾಳಗ
**ಪೋರಿಸು** – ಹೋರಾಡಿಸು
**ಪೋರ್ಕುಳ** – ಹೋರಾಟಗಾರ; ಪ್ರಣಯಕಲಹ; ಜಗಳಗಂಟ; ಹೋರಾಟ
**ಪೋರ್ಕುಳಯಾಗು** – ಕಲಹವುಂಟಾಗು
**ಪೋರ್ಕುಳಯಾಡು** – ಹೋರಾಟ ನಡೆಸು
**ಪೋರ್ಕುಳಯಿಕ್ಕು** – ಸ್ಪರ್ಧೆ ನಡೆಸು
**ಪೋರ್ಕುಳವಕ್ಕಿ** – ಜಗಳಗಂಟ ಹಕ್ಕಿ, ಕೋಗಿಲೆ
**ಪೋರ್ತೆ** – ಯುದ್ಧ, ಕಲಹ
**ಪೋರ್ತಂಗೊಳ್** – ಹೋರಾಟ ಮಾಡು
**ಪೋರ್ಮೆ** – ಪ್ರೇಮ ಕಲಹ
**ಪೋಲ್** – ಸಾದೃಶ್ಯ ಹೊಂದಿರು
**ಪೋಲಿಸು** – ಹೋಲಿಕೆ ಮಾಡು
**ಪೋಲ್ಕೆ** – ಹೋಲಿಕೆ, ಸಾದೃಶ್ಯ
**ಪೋಲ್ವೆ** – ಪೋಲ್ಕೆ
**ಪೋಲ್ವೆವೆಱು** – ಹೋಲಿಕೆ ಹೊಂದಿರು
**ಪೋಳಗೆ** – ಹೋಳಿಗೆ, (ಸ್ಫೋಟಕ) ಬೊಕ್ಕೆ
**ಪೋೞ್** – ಸೀಳು; ಬಿರುಕುಬಿಡು; ತುಂಡು ಮಾಡು; ತುಂಡು; ಮರದ ಪೊಟರೆ
**ಪೋೞಲ್** – ಮರದ ಪೊಟರೆ
**ಪೋೞ್ಮರ** – ಟೊಳ್ಳು ಮರ
**ಪೌರಂದರ** – ಇಂದ್ರನಿಗೆ ಸಂಬಂಧಿಸಿದ
**ಪೌರಲೋಕ** – ಪುರಜನರು
**ಪೌರವ** – ಪುರುವಿಗೆ ಸಂಬಂಧಿಸಿದ; ಒಂದು ದೇಶ
**ಪೌರವಧು** – ಪಟ್ಟಣದ ಹೆಣ್ಣು
**ಪೌರಸ್ತ್ಯ** – ಪೂರ್ವದಿಕ್ಕಿನ
**ಪೌರಸ್ತ್ರೀ** – ಪೌರವಧು
**ಪೌರುಷ** – ಪುರುಷಸಂಬಂಧೀ; ಗಂಡಸುತನ
**ಪವರೋಹಿತ್ಯ** – ಪುರೋಹಿತನ ಕೆಲಸ
**ಪೌರ್ಣಮಾಸಿ** – ಹುಣ್ಣಿಮೆ
**ಪೌರ್ಣಮೀದಿನ** – ಹುಣ್ಣಿಮೆಯ ದಿನ
**ಪೌಲಸ್ತ್ಯ** – ರಾವಣ
**ಪೌಲೋಮ** – ಪುಲೋಮೆಯ ಮಕ್ಕಳು
**ಪೌಲೋಮಿ** – ಪುಲೋಮನ ಮಗಳು; ಶಚೀದೇವಿ
**ಪೌಲೋ(ೞೋ)ಮೀಪತಿ** – ಶಚೀದೇವಿಯ ಗಂಡ, ಇಂದ್ರ
**ಪೌಷ್ಟಿಕಕ್ರಿಯಾ** – ಇಷ್ಟಪ್ರಾಪ್ತಿಗಾಗಿ ಮಾಡುವ ಕರ್ಮ
**ಪೌೞೋ(ಲೋ)ಮಿ** – ಶಚೀದೇವಿ (ಪುಲೋಮನ ಮಗಳು)
**ಪೌಷ್ಯಮಾಸ** – ಪುಷ್ಯಮಾಸ
**ಪ್ರಕಂಪನ** – ನಡುಗಿಸುವವನು; ಗಾಳಿ
**ಪ್ರಕಟ** – ಹೊರಹೊಮ್ಮಿದ
**ಪ್ರಕಟಂಮಾಡು** – ವ್ಯಕ್ತಗೊಳಿಸು
**ಪ್ರಕಟಂಬೆಱು** – ಪ್ರಸಿದ್ಧಗೊಳ್ಳು
**ಪ್ರಕಟಿತ** – ಕಾಣಿಸಿದ; ಪ್ರಸಿದ್ಧವಾದ
**ಪ್ರಕಟಿಸು** – ತೋರ್ಪಡಿಸು
**ಪ್ರಕಟೀಕರಣ** – ವ್ಯಕ್ತಪಡಿಸುವುದು
**ಪ್ರಕಟೀಕೃತ** – ಸುವ್ಯಕ್ತವಾದ
**ಪ್ರಕರ** – ನಿಕರ, ಗುಂಪು
**ಪ್ರಕರ್ಷ** – ಶ್ರೇಷ್ಠವಾದ; ಶ್ರೇಷ್ಠತೆ
**ಪ್ರಕಾಂಡಕ** – ತುದಿಯಿಂದ ಬರಬರುತ್ತ ದಪ್ಪಗೊಳ್ಳುವ ಹಾರ
**ಪ್ರಕಾರ** – ರೀತಿ
**ಪ್ರಕಾಶ** – ಕಾಂತಿ, ಹೊಳಪು
**ಪ್ರಕೀರ್ಣ** – ತುಂಬಿದ
**ಪ್ರಕೀರ್ಣಕ** – (ಜೈನ) ಒಂದು ನರಕದ ಹೆಸರು; (ಜೈನ) ಮೂರು ಬಗೆಯ ವಿಮಾನಗಳಲ್ಲಿ ಒಂದು; (ಜೈನ) ಜ್ಯೋತಿರ್ಲೋಕದ ಜ್ಯೋತಿಗಳಲ್ಲಿ ಒಂದು
**ಪ್ರಕಂಪಿತ** – ಕೆರಳಿದ
**ಪ್ರಕೃತ** – ಪ್ರಸ್ತುತ
**ಪ್ರಕೃತಿ** – ವಸ್ತುವಿನ ಮೂಲರೂಪ; ಸಹಜಸ್ವಭಾವ; ಮಂತ್ರಿ; ಪ್ರಜೆಗಳು; (ಜೈನ) ಜೀವನಿಗೆ ಫಲಗಳನ್ನು ನೀಡುವ ಕರ್ಮ
**ಪ್ರಕೃತಿಬಂಧ** – (ಜೈನ) ಅಷ್ಟವಿಧಕರ್ಮಗಳು ತಮಗೆ ಅನುಗುಣವಾದ ಕರ್ಮಸಂಬಂಧವನ್ನು ಹೊಂದುವುದು
**ಪ್ರಕೃಷ್ಟ** – ಉತ್ಕೃಷ್ಟ; ಮುಖ್ಯವಾದ
**ಪ್ರಕೋಪ** – ರೋಷಾವೇಶ
**ಪ್ರಕೋಷ್ಠ** – ಮೊಳಕೈಯಿಂದ ಮಣಿಕಟ್ಟಿನವರೆಗಿನ ಭಾಗ; ಮುಂಗೈ
**ಪ್ರಕ್ರಮ** – ಕೆಲಸದ ಆರಂಭ
**ಪ್ರಕ್ಷಾಲ(ಳ)ನ** – ತೊಳೆಯುವುದು
**ಪ್ರಕ್ಷಾಲ(ಳ)ನಂಗೆಯ್** – ತೊಳೆದು ಶುದ್ಧಿಮಾಡು
**ಪ್ರಕ್ಷಾಲಿ(ಳಿ)ತ** – ತೊಳೆದ; ಶುದ್ಧಿಗೊಂಡ
**ಪ್ರಕ್ಷಾಲಿ(ಳಿ)ಸು** – ಪ್ರಕ್ಷಾಲ(ಳ)ನಂಗೆಯ್
**ಪ್ರಕ್ಷೇಪಣ** – ದೂರ ಸರಿಸುವುದು
**ಪ್ರಕ್ಷೋಭ** – ಅಲ್ಲೋಲಕಲ್ಲೋಲ; ಗೊಂದಲ
**ಪ್ರಕ್ಷೋಭಿಸು** – ಅಲ್ಲೋಲಕಲ್ಲೋಲವುಂಟಾಗು
**ಪ್ರಖ್ಯಾತಿವೆಱು** – ಪ್ರಸಿದ್ಧಿ ಹೊಂದು
**ಪ್ರಗಣಿತ** – ಋಣಿಸಿದ, ಗುಣಿಸಿದ; ಅತಿಶಯತೆ
**ಪ್ರಗತ** – ಗಮನಿಸಿದ; ಅತಿಶಯವೆನಿಸಿದ
**ಪ್ರಗಲ್ಭ** – ಪ್ರೌಢ; ಪ್ರತಿಭಾವಂತ
**ಪ್ರಗಲ್ಭತೆ** – ನೈಪುಣ್ಯ
**ಪ್ರಗೀತ** – ಹಾಡಲಾದ; ಗೀತೆ; ಪ್ರಸಿದ್ಧ
**ಪ್ರಗೀತಿ** – ಪ್ರಶಂಸೆ
**ಪ್ರಗುಣ** – ಶ್ರೇಷ್ಠ ಗುಣ
**ಪ್ರಗ್ರಹ** – ಬಿಗಿಯಾಗಿ ಹಿಡಿಯಲ್ಪಟ್ಟ; ಹಗ್ಗ
**ಪ್ರಘಟ್ಟ(ನ)** – ಸಮಾರಂಭ, ಸನ್ನಿವೇಶ; ವಿಷಯ
**ಪ್ರಘಣ** – ಮೊಗಸಾಲೆ, ಅಂಗಳ

**ಪ್ರಘಾತ** – ಕತ್ತರಿಸುವಿಕೆ
**ಪ್ರಚಂಡ** – ತೀಕ್ಷ್ಣವಾದ; ಪರಾಕ್ರಮಿ
**ಪ್ರಚಂಡೆ** – ಹಟಮಾರಿ ಹೆಣ್ಣು
**ಪ್ರಚಯ** – ಸಮೂಹ; ಏಳಿಗೆ
**ಪ್ರಚಲಾಪ್ರಚಲಾ** – (ಜೈನ) ನಿದ್ರೆಯ ಒಂದು ಪ್ರಭೇದ; ಪದೇ ಪದೇ ತೂಕಡಿಸುವುದು, ಜೊಲ್ಲು ಸುರಿಸುವುದು ಮುಂತಾದ ಲಕ್ಷಣಗಳುಳ್ಳ ನಿದ್ರೆ
**ಪ್ರಚಲೆ** – (ಜೈನ) ದರ್ಶನಾವರಣೀಯ ಕರ್ಮಗಳಲ್ಲಿ ಒಂದು; ಒಂದು ಬಗೆಯ ನಿದ್ರೆ, ನೋಡಿ 'ದರ್ಶನಾವರಣೀಯ'
**ಪ್ರಚಳಿತ** – ನಡೆಯುತ್ತಿರುವ
**ಪ್ರಚುರ** – ಅತಿಶಯವಾದ; ಗಾಢವಾದ
**ಪ್ರಚುರತೆ** – ಆಧಿಕ್ಯ
**ಪ್ರಚ್ಛದ** – ಹಚ್ಚಡ; ಹೊದಿಕೆ; ಮಗ್ಗುಲು ಹಾಸಿಗೆ
**ಪ್ರಚ್ಛನ್ನ** – ಹೊದಿಸಿರುವ; ವೇಷ ಮರೆಸಿಕೊಂಡ; ರಹಸ್ಯ
**ಪ್ರಚ್ಛಾದನ** – ಮರೆಸಿರುವುದು
**ಪ್ರಜಾನುರಾಗ** – ಪ್ರಜೆಗಳ ಪ್ರೀತಿಗೆ ಪಾತ್ರನಾದವನು
**ಪ್ರಜಾಪತಿ** – ಬ್ರಹ್ಮ
**ಪ್ರಜಾಪಾಲನ** – ಪ್ರಜೆಗಳನ್ನು ರಕ್ಷಿಸುವಿಕೆ
**ಪ್ರಜಾಸಂಬಂಧಾಂತರ** – (ಜೈನ) ಅತಿಬಾಲವಿದ್ಯಾ, ಕುಲಾವಧಿ, ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರ, ವ್ಯವಹಾರೇಶಿತ್ವ, ಅವಧ್ಯತ್ವ, ಅದಂಡ್ಯತ್ವ, ಮಾನಾರ್ಹತ್ವ, ಪ್ರಜಾಸಂಬಂಧಾಂತರ ಎಂಬ ಜೈನಬ್ರಾಹ್ಮಣನ ಹತ್ತು ಅಧಿಕಾರಗಳು
**ಪ್ರಜೆ** – ಒಂದು ದೇಶದ ಜನ
**ಪ್ರಜ್ಞ** – ಪಂಡಿತ
**ಪ್ರಜ್ಞಪ್ತಿವಿದ್ಯೆ** – (ಜೈನ) ಒಂದು ಬಗೆಯ ವಿದ್ಯೆ
**ಪ್ರಜ್ವಲ(ಳ)** – ಚೆನ್ನಾಗಿ ಉರಿಯುವ
**ಪ್ರಣತ** – ಬಾಗಿದ; ವಿಧೇಯವಾದ
**ಪ್ರಣತಾರಾತಿ** – ಶತ್ರುಗಳಿಂದ ನಮಸ್ಕರಿಸಿಕೊಳ್ಳುವವನು
**ಪ್ರಣತಿ** – ಬಾಗುವಿಕೆ; ನಮಸ್ಕಾರ
**ಪ್ರಣಮ** – ಪ್ರಣವ, ಬೀಜಾಕ್ಷರ, ಓಂಕಾರ
**ಪ್ರಣಯ** – ಹೆಣ್ಣು-ಗಂಡಿನ ಪ್ರೀತಿ; ವಿನಯ; ಆತ್ಮೀಯತೆ; ಗೌರವ–
**ಪ್ರಣಯಕೇಲಿ(ಳಿ)** – ಸಂಭೋಗಕ್ರಿಯೆ
**ಪ್ರಣಯಾಲಂಬಿನಿ** – ಪ್ರೀತಿಯನ್ನು ಪಡೆದಿರುವವಳು
**ಪ್ರಣಯಿನಿ** – ಪ್ರೇಯಸಿ
**ಪ್ರಣವ** – ಪ್ರಣಮ, ಓಂಕಾರ
**ಪ್ರಣವೋತ್ಥ** – ಪ್ರಣವಾಕ್ಷರದಿಂದ ಹೊರಟ; **ಹೊಸತನದಿಂದಾದ–**
**ಪ್ರಣಾದ** – ದೊಡ್ಡ ಶಬ್ದ, ಕೂಗು
**ಪ್ರಣಾಲ(ಳ)(ಳಿ)** – ನೀರು ಹರಿಯುವ ಕಾಲುವೆ; **ನೀರು ಹರಿದುಹೋಗುವ ದೋಣಿ–**
**ಪ್ರಣಿಧಿ** – ಬೇಹುಗಾರ, ಬೇಹುಗಾರಿಕೆ; ಎಚ್ಚರಿಕೆ; ಆನೆಯನ್ನು ಪಳಗಿಸುವ ಮಾವುತ
**ಪ್ರಣಿಪಾತ** – ನಮಸ್ಕಾರ; ಶರಣಾಗುವುದು
**ಪ್ರಣಿಹಿತ** – ಸ್ಥಾಪಿಸಿದ; ಸೇರಿಸಿದ
**ಪ್ರಣೀತ** – ನಿರ್ದೇಶಿಸಿದ; ನೆರವೇರಿಸಿದ; ರಚಿತವಾದ
**ಪ್ರ(ಣು)ಣೂತ** – ಪ್ರಸಿದ್ಧವಾದ; ಹೊಗಳಿದ
**ಪ್ರತತಿ** – ಸಮೂಹ
**ಪ್ರತರ** – ಗಾಢವಾದ; ವಿಸ್ತಾರವಾದ
**ಪ್ರತರಕ್ರಿಯೆ** – (ಜೈನ) ಪರಿನಿರ್ವಾಣ ಸಮಯದಲ್ಲಿ ಆತ್ಮನು ವಿಸ್ತಾರಗೊಳ್ಳುವ ಸ್ಥಿತಿ
**ಪ್ರತಾನ** – ಗುಂಪು; ಕವಲುಗೊಂಡ ರೆಂಬೆಗಳು
**ಪ್ರತಾಪ** – ಉಷ್ಣತೆ; ತೇಜಸ್ಸು; ಶೌರ್ಯ
**ಪ್ರತಾಪೋದಯ** – ಶೌರ್ಯದ ಏಳಿಗೆ
**ಪ್ರತಾಪೋಷ್ಮ** – ಪ್ರತಾಪ+ಊಷ್ಮ, ಶೌರ್ಯಪ್ರಖರತೆ
**ಪ್ರತಾರಣ** – ಮೋಸಗೊಳಿಸುವುದು; ವಂಚನೆ
**ಪ್ರತಾರಿಸು** – ವಂಚಿಸು
**ಪ್ರತಿ** – ಸಮಾನ; ಪರ್ಯಾಯವಾದ
**ಪ್ರತಿಕಾರ** – ಪ್ರತಿಯಾದ ಕ್ರಿಯೆ
**ಪ್ರತಿಕೂಲ** – ಎದುರು ದಡ; ವಿರುದ್ಧವಾದ
**ಪ್ರತಿಕೂಲದೈವ** – ಅನುಕೂಲಕರವಲ್ಲದ ಅದೃಷ್ಟ
**ಪ್ರತಿಕೂಲೋಕ್ತಿ** – ಅನುಕೂಲಕರವಲ್ಲದ ಮಾತು
**ಪ್ರತಿಕೃತಿ** – ಪ್ರತಿಬಿಂಬ; ಪ್ರತಿಮೆ
**ಪ್ರತಿಕ್ರಮಣ** – (ಜೈನ) ಸಾಧುಗಳ ಇಪ್ಪತ್ತೆಂಟು ಮೂಲಗುಣಗಳಲ್ಲಿ ಒಂದು; ಗುರುವಿನಲ್ಲಿ ಪಶ್ಚಾತ್ತಾಪಪೂರ್ವಕ ನಿವೇದನ
**ಪ್ರತಿಕ್ಷಣಂ** – ಒಂದೊಂದು ಕ್ಷಣದಲ್ಲೂ; ಸತತವಾಗಿ
**ಪ್ರತಿಗ್ರಹ** – ದಾನ ಸ್ವೀಕರಿಸುವುದು; ಬ್ರಾಹ್ಮಣನ ಆರು ಕೆಲಸಗಳಲ್ಲಿ ಒಂದು, ನೋಡಿ 'ಷಟ್ಕರ್ಮ'
**ಪ್ರತಿಘಾತ** – ಎದುರು ಹೊಡೆತ
**ಪ್ರತಿಘೋಷ** – ಪ್ರತಿಧ್ವನಿ
**ಪ್ರತಿಚ್ಛಂದ** – ಮತ್ತೊಂದರಂತೆಯೇ ಇರುವುದು
**ಪ್ರತಿಚ್ಛಂದನೆ** – ಮತ್ತೊಂದರಂತಿರುವಿಕೆ
**ಪ್ರತಿಜ್ಞಾಜಯ** – ಪ್ರತಿಜ್ಞೆ ನೆರವೇರಿಸಿಕೊಳ್ಳುವುದು
**ಪ್ರತಿಜ್ಞಾಭಾರ** – ಪ್ರತಿಜ್ಞೆಯ ಹೊರೆ ಹೊತ್ತವನು
**ಪ್ರತಿಜ್ಞಾರೂಢ** – ಪ್ರತಿಜ್ಞೆ ಕೈಗೊಂಡವನು
**ಪ್ರತಿಜ್ಞೆ** – ಶಪಥ
**ಪ್ರತಿಜ್ಞೆಗೆಯ್** – ಶಪಥವನ್ನು ಕೈಗೊಳ್ಳು
**ಪ್ರತಿದಿನಂ** – ನಿತ್ಯವೂ. ಅನುದಿನವೂ
**ಪ್ರತಿದಿವಸಂ** – ಪ್ರತಿದಿನಂ
**ಪ್ರತಿಧ್ವನಿ** – ಮಾರ್ದನಿ, ಶಬ್ದ ಪ್ರತಿಫಲನ
**ಪ್ರತಿಧ್ವಾನ** – ಪ್ರತಿಧ್ವನಿ
**ಪ್ರತಿನಾದ** – ಪ್ರತಿಧ್ವನಿ
**ಪ್ರತಿನಿಧಾನ** – ಒಂದರ ಬದಲು ಮತ್ತೊಂದನ್ನಿರಿಸುವುದು
**ಪ್ರತಿಪಕ್ಷ** – ವೈರಿಗಳ ಕಡೆ
**ಪ್ರತಿಪತ್ತಿ** – ಗೌರವ
**ಪ್ರತಿಪತ್ತಿಮೂಢೆ** – ದಿಕ್ಕು ತೋಚದಾದವಳು

**ಪ್ರತಿಪತ್ನಿ** – ಸವತಿ
**ಪ್ರತಿಪದ್ದಿನ** – ಪ್ರತಿಪತ್+ದಿನ, ಪಾಡ್ಯಮಿ
**ಪ್ರತಿಪನ್ನ** – ಸ್ವೀಕೃತವಾದುದು
**ಪ್ರತಿಪನ್ನಿಕೆ** – ವಿವೇಕ
**ಪ್ರತಿಪನ್ನಿಕೆಗಿಡು** – ವಿವೇಚನೆ ಕಳೆದುಕೊ
**ಪ್ರತಿಪಾದುಕ** – ಸಣ್ಣ ಪೀಠ
**ಪ್ರತಿಪಾದ್ಯ** – ಸಮರ್ಥನಯೋಗ್ಯ; ವಿವರಿಸುವ
**ಪ್ರತಿಪಾಪ** – ಒಂದು ಪಾಪದ ಬದಲು ಮಾಡುವ ಮತ್ತೊಂದು ಪಾಪ
**ಪ್ರತಿಪಾಲಿತ** – ಸಂರಕ್ಷಿಸಲ್ಪಟ್ಟ
**ಪ್ರತಿಪಾಲಿ(ಳ)ಸು** – ಸಂರಕ್ಷಿಸು; ಆಳು, ದೊರೆತನ ಮಾಡು
**ಪ್ರತಿಬಂಧಕ** – ಅಡ್ಡಿ; ಅಡ್ಡಿಯಾಗುವಿಕೆ
**ಪ್ರತಿಬಂಧಿನಿ** – ಪ್ರತಿಸ್ಪರ್ಧಿಯಾದುದು
**ಪ್ರತಿಬದ್ಧ** – ಸೇರಿರುವ, ಕೂಡಿರುವ
**ಪ್ರತಿಬಲ** – ಸಮಾನ ಬಲವುಳ್ಳವನು
**ಪ್ರತಿಬಿಂಬ** – ಪ್ರತಿರೂಪ
**ಪ್ರತಿಬಿಂಬಿತ** – ಪ್ರತಿಫಲಿಸಲ್ಪಟ್ಟ
**ಪ್ರತಿಬಿಂಬಿಸು** – ಪ್ರತಿಫಲಿಸು
**ಪ್ರತಿಬುದ್ಧ** – ಅರಳಿದ; ಎಚ್ಚರಗೊಂಡ
**ಪ್ರತಿಬೋಧನ** – ಉಪದೇಶ ಮಾಡುವಿಕೆ
**ಪ್ರತಿಬೋಧಿಸು** – ಉಪದೇಶ ಮಾಡು
**ಪ್ರತಿಭಾವತ್ವ** – ಪ್ರತಿಭೆಯನ್ನು ಹೊಂದಿರುವುದು
**ಪ್ರತಿಭೆ** – ಹೊಳಪು; ತಿಳಿವಳಿಕೆ; ಜ್ಞಾನ; ನವೋನವೋನ್ಮೇಷಶಾಲಿನಿಯಾದ ಪ್ರಜ್ಞೆ
**ಪ್ರತಿಮ** – ಸಮಾನ(ನಾದವನು)
**ಪ್ರತಿಮಲ್ಲ** – ಎದುರಾಳಿ ಮಲ್ಲ
**ಪ್ರತಿಮಾನ** – ಹೋಲಿಕೆ; ಆನೆಯ ಎರಡು ದಂತಗಳ ನಡುವಣ ಭಾಗ
**ಪ್ರತಿಮಾ(ನಿ)ಯೋಗ** – (ಜೈನ) ಪ್ರತಿಮೆಯಂತೆ ನಿಂತು ಮಾಡುವ ತಪಸ್ಸು
**ಪ್ರತಿಮಾರೂಪ** – ಪ್ರತಿಮಾಯೋಗ
**ಪ್ರತಿಮುಖ** – ಎದುರುಗಡೆ
**ಪ್ರತಿಮುಖರ** – ಮುಖಂಡ
**ಪ್ರತಿಮೆ** – ಪುತ್ಥಳಿ; (ಜೈನ) ಶ್ರಾವಕನು ಸಾಧಿಸಬೇಕಾದ ದರ್ಶನ, ವ್ರತ, ಸಾಮಯಿಕ, ಪ್ರೋಷಧೋಪವಾಸ, ಸಚಿತ್ತ, ರಾತ್ರಿಭೋಜನತ್ಯಾಗ, ಬ್ರಹ್ಮಚರ್ಯ, ಆರಂಭತ್ಯಾಗ ಪರಿಗ್ರಹತ್ಯಾಗ, ಅನುಮತಿತ್ಯಾಗ, ಉದ್ದಿಷ್ಟಾಹಾರತ್ಯಾಗ ಎಂಬ ಹನ್ನೊಂದು ನೆಲೆಗಳಲ್ಲಿ ಒಂದು
**ಪ್ರತಿರವ** – ಮಾರ್ದನಿ
**ಪ್ರತಿರೂಪ** – ಪ್ರತಿಬಿಂಬ; ತದ್ರೂಪ
**ಪ್ರತಿರೋಧಿಸು** – ತಡೆಯೊಡ್ಡು
**ಪ್ರತಿಲೇಖನ(ನೆ)** – (ಜೈನ) ನಿತ್ಯವೂ ಭೂಮಿ, ಉಪಕರಣ ಮುಂತಾದುವನ್ನು ಶುದ್ಧಿಗೊಳಿಸುವುದು
**ಪ್ರತಿಲೇಖಿಸು** – ಪ್ರತಿಲೇಖನ ಮಾಡು
**ಪ್ರತಿವಾದಿ** – ವಾದಿಗೆ ಎದುರಾದವನು
**ಪ್ರತಿವಿತರ್ಕಿತ** – ಚೆನ್ನಾಗಿ ವಿವೇಚನೆ ಮಾಡಿದ
**ಪ್ರತಿವಿದ್ಯೆ** – (ಜೈನ) ಮಾಯಾಸೃಷ್ಟಿಯನ್ನು ಹೋಗಲಾಡಿಸುವ ವಿದ್ಯೆ
**ಪ್ರತಿವಿಷ** – ವಿಷನಿವಾರಕ
**ಪ್ರತಿಷೇಧ** – ತಡೆ; ನಿವಾರಣೆ
**ಪ್ರತಿಷ್ಠಿತ** – ಸ್ಥಾಪನೆಗೊಂಡ
**ಪ್ರತಿಷ್ಠಿಸು** – ಸ್ಥಾಪನೆಗೊಳಿಸು; ದಕ್ಕಿಸಿಕೊ
**ಪ್ರತಿಷ್ಠೆ** – ಉನ್ನತಸ್ಥಾನ
**ಪ್ರತಿಸಮಯಂ** – ಸದಾ ಕಾಲವೂ
**ಪ್ರತಿಸರ** – ಕಂಕಣ
**ಪ್ರತಿಹತ** – ಮರು ಏಟು ತಿಂದ; ಸೋತ
**ಪ್ರತಿ(ೀ)ಹಾರ(ಕ)(ರಿ)** – ಪಡಿಯಱ, ಬಾಗಿಲು ಕಾಯುವವನು
**ಪ್ರತೀಂದ್ರ** – (ಜೈನ) ದೇವವರ್ಗ, ಭವನಿವಾಸಿ, ವ್ಯಂತರದೇವ, ಜ್ಯೋತಿದೇವ, ಕಲ್ಪವಾಸಿ ಇಂದ್ರರುಗಳಲ್ಲಿ ಪ್ರತಿಯೊಬ್ಬನಿಗೂ ಇರುವ ಕೆಳಗಿನವನು
**ಪ್ರತೀಕಾರ** – ನಿವಾರಣೆ; ಸೇಡು
**ಪ್ರತೀಕಾರಸಂಧಿ** – ರಾಜನು ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಉಪಕಾರಕ್ಕೆ ಪ್ರತ್ಯುಪಕಾರ ಮಾಡುವ ಒಪ್ಪಂದ; ನೋಡಿ 'ಷೋಡಶಸಂಧಿ'
**ಪ್ರತೀಕ್ಷಣ** – ಎದುರು ನೋಡುವುದು
**ಪ್ರತೀಚಿ** – ಪಶ್ಚಿಮ, ಪಡುವಣದಿಕ್ಕು
**ಪ್ರತೀತ** – ಪ್ರಸಿದ್ಧವಾದ; ಸಂತುಷ್ಟ
**ಪ್ರತೀತಿ** – ಪ್ರಖ್ಯಾತಿ; ಸಂತೋಷ
**ಪ್ರತೀಯಮಾನ** – ಕಾಣುವ, ತೋರುವ
**ಪ್ರತೀಹಾರಿ(ಕೆ)** – ಬಾಗಿಲು ಕಾಯುವವಳು
**ಪ್ರತೋಲಿ(ಳ)(ಕೆ)** – ರಾಜಬೀದಿ
**ಪ್ರತ್ನ** – ಪ್ರಾಚೀನ
**ಪ್ರತ್ಯಂತ** – ಸಮೀಪ; ಪಾರ್ಶ್ವ
**ಪ್ರತ್ಯಂತಭೂಪಾಲಕ** – ನೆರೆರಾಜ್ಯದ ರಾಜ
**ಪ್ರತ್ಯಂತವಾಸ** – ಗಡಿನಾಡು
**ಪ್ರತ್ಯಕ್ಷ** – ಕಣ್ಣಿಗೆ ಕಾಣುವ
**ಪ್ರತ್ಯಕ್ಷಪ್ರಮಾಣ** – ಕಣ್ಣೆದುರಿಗಿನ ಪುರಾವೆ
**ಪ್ರತ್ಯಕ್ಷಫಲ** – ಕಣ್ಣಿಗೆ ಕಾಣುವ ಪ್ರಯೋಜನ
**ಪ್ರತ್ಯಗ್ಭೂಧ** – ಪ್ರತ್ಯಕ್+ಭೂಧ, ಪಶ್ಚಿಮಾದ್ರಿ
**ಪ್ರತ್ಯಗ್ರ** – ನವೀನವಾದ
**ಪ್ರತ್ಯನೀಕ** – ನಿವಾರಣೆ; ಶತ್ರು
**ಪ್ರತ್ಯಭಿಜ್ಞಾನ** – ಗುರುತಿಸುವುದು
**ಪ್ರತ್ಯಭಿಜ್ಞೆ** – ಮತ್ತೆ ಗುರುತಿಸುವುದು
**ಪ್ರತ್ಯಯ** – ನಂಬಿಕೆ, ನಂಬಿಕೆಯುಂಟುಮಾಡುವ ಕಾರ್ಯ; ಪ್ರತಿಜ್ಞೆ; ಅರಿವು
**ಪ್ರತ್ಯಯಂಗೆಯ್** – ಪ್ರತಿಜ್ಞೆಮಾಡು
**ಪ್ರತ್ಯರ್ಥಿ** – ಪ್ರತಿವಾದಿ

**ಪ್ರತ್ಯವಾಯ** – ಕೇಡು, ತೊಂದರೆ
**ಪ್ರತ್ಯಹಂ** – ಪ್ರತಿ+ಅಹಂ, ಪ್ರತಿನಿತ್ಯವೂ
**ಪ್ರತ್ಯಾಖ್ಯಾನ** – ತಿರಸ್ಕಾರ; (ಜೈನ) ಮುಂದೆ ಪಾಪ ಮಾಡದಿರುವ ಪ್ರತಿಜ್ಞೆ, ಇಪ್ಪತ್ತೆಂಟು ಬಗೆಯ ಮೋಹನೀಯಗಳಲ್ಲಿ ಒಂದು, ನೋಡಿ 'ಮೋಹನೀಯ'
**ಪ್ರತ್ಯಾಗಮನ** – ಹಿಂತಿರುಗುವುದು
**ಪ್ರತ್ಯಾನಯನ** – ಕರೆತರುವುದು
**ಪ್ರತ್ಯಾಲೀಢ** – ಯುದ್ಧಮಾಡುವಾಗ ನಿಲ್ಲುವ ಒಂದು ಭಂಗಿ; ನೋಡಿ, 'ಪಂಚವಿಧಸ್ಥಾನ'
**ಪ್ರತ್ಯಾಶೆ** – ಪಡೆಯುವ ಭರವಸೆ
**ಪ್ರತ್ಯಾಸನ್ನ** – ಸಮೀಪ
**ಪ್ರತ್ಯಾಸನ್ನಭವ್ಯ** – (ಜೈನ) ಬೇಗ ಮೋಕ್ಷ ಪಡೆಯುವ ಜೀವ
**ಪ್ರತ್ಯಾಸನ್ನಮೃತ್ಯು** – ಸಮೀಪಿಸಿರುವ ಸಾವು
**ಪ್ರತ್ಯುತ್ಥಾನ** – ಅತಿಥಿ ಬಂದಾಗ ಗೌರವಸೂಚಕವಾಗಿ ಎದ್ದು ನಿಲ್ಲುವುದು
**ಪ್ರತ್ಯುತ್ಪನ್ನಪ್ರತಿಭ** – ಕಾಲಕ್ಕನುಗುಣವಾಗಿ ಪ್ರತಿಕ್ರಿಯೆ ತೋರಿಸುವ ಬುದ್ಧಿಯುಳ್ಳವನು
**ಪ್ರತ್ಯುತ್ಪನ್ನಬುದ್ಧಿ** – ಕಾಲಕ್ಕನುಗುಣವಾಗಿ ಪ್ರತಿಕ್ರಿಯೆ ತೋರಿಸುವ ಬುದ್ಧಿ
**ಪ್ರತ್ಯುತ್ಪನ್ನಮತಿ** – ಪ್ರತ್ಯುತ್ಪನ್ನಬುದ್ಧಿ
**ಪ್ರತ್ಯುದ್ಗಮ(ನ)** – ಅತಿಥಿ ಬಂದಾಗ ಗೌರವಸೂಚಕವಾಗಿ ಎದುರುಗೊಳ್ಳುವುದು
**ಪ್ರತ್ಯುದ್ಭವ** – ಮತ್ತೆ ಹುಟ್ಟುವುದು
**ಪ್ರತ್ಯುಪಕೃತಿ(ವಡೆ)** – ಪ್ರತ್ಯುಪಕಾರ (ಹೊಂದು)
**ಪ್ರತ್ಯುಪಾಯನ** – ಪ್ರತಿ ಕಾಣಿಕೆ
**ಪ್ರತ್ಯೂರ್ಜಿತ** – ಪ್ರತಿ+ಊರ್ಜಿತ, ಮತ್ತೆ ಏಳಿಗೆ ಹೊಂದಿದವನು
**ಪ್ರತ್ಯೂಷ** – ಬೆಳಗು ಜಾವ
**ಪ್ರತ್ಯೂಷಕೃತ್ಯ** – ಬೆಳಗಿನ ಜಾವ ಮಾಡಬೇಕಾದ ಕಾರ್ಯ
**ಪ್ರತ್ಯೇಕಂ** – ಭಿನ್ನವಾಗಿ
**ಪ್ರಥಮ** – ಮೊದಲನೆಯ(ದು)
**ಪ್ರಥಮಕಲ್ಪ** – ಮೊದಲ ವಿಧಿ; (ಜೈನ) ಮೊದಲ ಸ್ವರ್ಗ, ಸೌಧರ್ಮ
**ಪ್ರಥಮಕಲ್ಯಾಣ** – (ಜೈನ) ತೀರ್ಥಂಕರನಿಗೆ ಮಾಡುವ ಪಂಚಕಲ್ಯಾಣಗಳಲ್ಲಿ ಮೊದಲನೆಯದು, ಗರ್ಭಾವತರಣ
**ಪ್ರಥಮತ್ವ** – ಮೊದಲನೆಯದಾಗಿರುವಿಕೆ
**ಪ್ರಥಮದ್ವೀಪ** – (ಜೈನ) ಎಂಟು ಮುಖ್ಯ ದ್ವೀಪಗಳಲ್ಲಿ ಮೊದಲನೆಯದು, ಜಂಬೂದ್ವೀಪ
**ಪ್ರಥಮಮಂಗಳ** – ಅತ್ಯಂತ ಶುಭಕರವಾದುದು
**ಪ್ರಥಮಸಂಗಮ** – ಮೊದಲ ಸಂಭೋಗ
**ಪ್ರಥಮಾನುಯೋಗ** – (ಜೈನ) ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮುದಾಯದಲ್ಲಿ ಮೊದಲನೆಯದು, ನೋಡಿ 'ಅನುಯೋಗ'
**ಪ್ರಥಿತ** – ಪ್ರಖ್ಯಾತವಾದ; ಪ್ರಖ್ಯಾತವಾದುದು
**ಪ್ರದಕ್ಷಿಣ** – ಎಡಗಡೆಯಿಂದ ಬಲಗಡೆಯೆಡೆ ಸುತ್ತು ಹಾಕುವುದು
**ಪ್ರದರ** – ಬಾಣ
**ಪ್ರದರ್ಶಿತ** – ತೋರಿಸಲಾದ
**ಪ್ರದಾರಿತ** – ಸೀಳಿದ
**ಪ್ರದೀಪ** – ದೀಪ; ಬೆಳಗುವಿಕೆ
**ಪ್ರದೀಪಕ** – ಬೆಳಕನ್ನೀಯುವ
**ಪ್ರದೀಪಕತೆ** – ಬೆಳಗುವಿಕೆ
**ಪ್ರದೀಪಕಲಿಕೆ** – ಬೆಳಕಿನ ಕುಡಿ
**ಪ್ರದುಷ್ಟ** – ತುಂಬ ಕೆಟ್ಟುದಾದ
**ಪ್ರದೇಶ** – ಜಾಗ; (ಜೈನ) ಒಂದು ಪರಮಾಣು ಹಿಡಿಸುವಷ್ಟು ಸ್ಥಳ
**ಪ್ರದೇಶಬಂಧ** – (ಜೈನ) ಬಂಧನವನ್ನು ಹೊಂದಿರುವ ಕರ್ಮಗಳ ಸಂಖ್ಯೆಯ ನಿರ್ಣಯ
**ಪ್ರದೇಶಸೌಷ್ಠವ** – ಒಂದು ಕಲಾಕೃತಿಯ ವಿವಿಧಾಂಶಗಳ ಚೆಲುವು
**ಪ್ರದೋಷಕಾಲ** – ಸಾಯಂಕಾಲ
**ಪ್ರದ್ಯುತಿ** – ಹೆಚ್ಚಿನ ಪ್ರಕಾಶ
**ಪ್ರದ್ಯೋತ** – ಕಿರಣ; ಕಾಂತಿ
**ಪ್ರದ್ಯೋತಿ** – ಕಾಂತಿ
**ಪ್ರಧನ** – ಯುದ್ಧ
**ಪ್ರಧಾನ** – ಮುಖ್ಯ; ರಾಜನ ಪ್ರಮುಖ ಅಧಿಕಾರಿ
**ಪ್ರಧಾನಮಂತ್ರಿ** – ಮುಖ್ಯ ಅಮಾತ್ಯ
**ಪ್ರಧಾನಶ್ರೇಷ್ಠಿ** – ಮುಖ್ಯ ವರ್ತಕ
**ಪ್ರಧ್ವಂಸ** – ಸರ್ವನಾಶ
**ಪ್ರಧ್ವಾನ** – ದೊಡ್ಡ ಶಬ್ದ
**ಪ್ರಪಂಚ** – ಸಂಗತಿ, ವಿಚಾರ
**ಪ್ರಪತ್ತಿ** – ಶರಣಾಗತಿ
**ಪ್ರಪನ್ನ** – ಶರಣಾಗತನಾದವನು
**ಪ್ರಪನ್ನೆ** – ಹೊಂದಿರುವವಳು
**ಪ್ರಪಾ** – ಅರವಟ್ಟಿಗೆ
**ಪ್ರಪಾಂಗನೆ** – ಅರವಟ್ಟಿಗೆಯಲ್ಲಿ ನೀರು ಕೊಡುವ ಹೆಂಗಸು; ಅರವಟ್ಟಿಗೆಯ ಸೇವಕಿ
**ಪ್ರಪಾಂಥ** – ಪ್ರಯಾಣಿಕ
**ಪ್ರಪಾಕಾಂತೆ** – ಪ್ರಪಾಂಗನೆ
**ಪ್ರಪಾತ** – ಕೊರಕಲು
**ಪ್ರಪಾಪಾಲಿಕೆ** – ಪ್ರಪಾಂಗನೆ
**ಪ್ರಪಾಪ್ರಣಯಿನಿ** – ಪ್ರಪಾಂಗನೆ
**ಪ್ರಪಾಪ್ರಮದೆ** – ಪ್ರಪಾಂಗನೆ
**ಪ್ರಪಾಮಂಟಪ** – ಅರವಟ್ಟಿಗೆ
**ಪ್ರಪಾಸದನ** – ಪ್ರಪಾಮಂಟಪ
**ಪ್ರಪೂರ್ಣ** – ತುಂಬಿದ

**ಪ್ರಪೆ** – ಪ್ರಪಾ, ಅರವಟ್ಟಿಗೆ
**ಪ್ರಬಂಧ** – ಪರಂಪರೆ; ಕಾವ್ಯ
**ಪ್ರಬೋಧ(ನ)** – ಎಚ್ಚರಗೊಳ್ಳುವುದು; ತಿಳಿವಳಿಕೆ
**ಪ್ರಬೋಧಿತ** – ಎಚ್ಚರಗೊಂಡ
**ಪ್ರಭಂಜನ** – ವಾಯು; ಬಿರುಗಾಳಿ; ವಿಧ್ವಂಸಕ
**ಪ್ರಭಂಜನಪ್ರವರ** – ವಾಯವ್ಯಾಸ್ತ್ರ
**ಪ್ರಭಂಜನಪ್ರಿಯ** – ಗಾಳಿಯ ಗೆಳೆಯ, ಅಗ್ನಿ
**ಪ್ರಭಂಜನಸಖ** – ಪ್ರಭಂಜನಪ್ರಿಯ
**ಪ್ರಭಂಜನಸುತ** – ವಾಯುಪುತ್ರ; ಭೀಮ
**ಪ್ರಭಗ್ನ** – ಮುರಿದುಹೋದ
**ಪ್ರಭವ** – ಹುಟ್ಟಿದ; ಪ್ರಭೆ
**ಪ್ರಭವಿಷ್ಣು** – ಅತ್ಯುತ್ತಮ
**ಪ್ರಭಾಕರ** – ಸೂರ್ಯ
**ಪ್ರಭಾಕರ ನಿಶಾಕರ ಬೀದಿ** – ಸೂರ್ಯಚಂದ್ರ ಬೀದಿ
**ಪ್ರಭಾಗ** – ಭಾಗ
**ಪ್ರಭಾಚಕ್ರ** – ಬೆಳಕಿನ ಮಂಡಲ
**ಪ್ರಭಾತ** – ಬೆಳಿಗ್ಗೆ
**ಪ್ರಭಾಮಂಡಲ(ಳ)** – ತೇಜೋವಲಯ; (ಜೈನ) ಜನಕನ ಮಗ, ಸೀತೆಯ ಅಣ್ಣ
**ಪ್ರಭಾವ** – ವರ್ಚಸ್ಸು
**ಪ್ರಭಾವನೆ** – ಹಿರಿಮೆ
**ಪ್ರಭಾವಲ್ಲಭ** – ಸೂರ್ಯ
**ಪ್ರಭಿನ್ನ** – ಒಡೆದುಹೋದ; ಅರಳಿದ
**ಪ್ರಭುತೆ** – ಒಡೆಯನಾಗಿರುವಿಕೆ; ರಾಜಾಧಿಕಾರ
**ಪ್ರಭುಶಕ್ತಿ** – ರಾಜನ ಮೂರು ಶಕ್ತಿಗಳಲ್ಲಿ ಒಂದು, ನೋಡಿ, 'ಶಕ್ತಿತ್ರಯ'
**ಪ್ರಭೂತ** – ಹೆಚ್ಚಾದ; ಆಧಿಕ್ಯ
**ಪ್ರಭೃತಿ** – ತೂಕವುಳ್ಳುದು; ಶ್ರೇಷ್ಠ; ಮೊದಲಾದ
**ಪ್ರಭೆ** – ಕಾಂತಿ
**ಪ್ರಮತ್ತ** – (ಜೈನ) ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು; ಇನ್ನೊಂದು 'ಅಪ್ರಮತ್ತ'
**ಪ್ರಮದ** – ಆನಂದ
**ಪ್ರಮದಂಬೆಱು** – ಆನಂದ ಹೊಂದು
**ಪ್ರಮದವನ** – ಅಂತಃಪುರಸ್ತ್ರೀಯರ ಉದ್ಯಾನವನ
**ಪ್ರಮದಾ(ದೆ)** – ಹೆಂಗಸು, ಸುಂದರಿ
**ಪ್ರಮದಾಳಿ** – ಪ್ರಮದಾ+ಆಳಿ, ಮದಿಸಿದ ದುಂಬಿ; ಸ್ತ್ರೀಸಮೂಹ
**ಪ್ರಮದೋದ್ಯಾನ** – ಪ್ರಮದವನ
**ಪ್ರಮಾಣ** – ಗಡುವು
**ಪ್ರಮಾಣತೆ** – ಪ್ರಭುತ್ವ
**ಪ್ರಮಾಣಸಿದ್ಧ** – ದೃಢೀಕರಣಗೊಂಡುದು
**ಪ್ರಮಾದ** – (ಜೈನ) ಬಂಧಹೇತುವಾದುದು
**ಪ್ರಮಾದಫಲಕ** – ಆಕಸ್ಮಿಕದ ಸಂದರ್ಭದಲ್ಲಿ ಪಾರಾಗಲು ಹಡಗಿನಲ್ಲಿ ಬಳಸುವ ಹಲಗೆ
**ಪ್ರಮಾದವಲಗೆ** – ಪ್ರಮಾದಫಲಕ
**ಪ್ರಮಾದಿ** – ಹುಚ್ಚ
**ಪ್ರಮಿತ** – ಪ್ರಸಿದ್ಧವಾದ; ಅಳತೆಯುಳ್ಳ
**ಪ್ರಮಿತಿ** – ಅಳತೆ
**ಪ್ರಮುದಿತ** – ಆನಂದಕರವಾದ; ಅರಳಿದ
**ಪ್ರಮೃಷ್ಟ** – ಲೇಪಿಸಿದ
**ಪ್ರಮೋದ** – ಸಂತೋಷ
**ಪ್ರಯತ** – ಶುದ್ಧ
**ಪ್ರಯಾಣ** – ಯಾತ್ರೆ
**ಪ್ರಯಾತ** – ಹೋಗುವ
**ಪ್ರಯೋಗ** – ನಿದರ್ಶನ; ಪರೀಕ್ಷೆ ಮಾಡುವುದು; ಪರಿಶೀಲನೆ
**ಪ್ರಯೋಗಿಸು** – ಉಪಯೋಗಿಸು; ಬಾಣ ಮುಂತಾದವನ್ನು ಬಿಡು
**ಪ್ರಯೋಜನ** – ಉಪಯೋಗ
**ಪ್ರಯೋಜ್ಯ** – ಬಳಸಲು ತಕ್ಕುದಾದ
**ಪ್ರರತ್ನ** – ಶ್ರೇಷ್ಠವಾದ ಮಣಿ
**ಪ್ರರೂಢ** – ಚೆನ್ನಾಗಿ ಬೆಳೆದ; ಹೆಚ್ಚಾದ
**ಪ್ರರೋಚನ(ನೆ)** – ಅಭಿರುಚಿಯನ್ನುಂಟುಮಾಡುವುದು
**ಪ್ರರೋಹ** – ಮೊಳಕೆ ಒಡೆಯುವುದು; ಮೊಳಕೆ
**ಪ್ರಲಂಬ** – ಜೋತುಬಿದ್ದ
**ಪ್ರಲ(ಳ)ಯ** – ವಿನಾಶ; ಕಲ್ಪದ ಕೊನೆಯಲ್ಲಿನ ವಿನಾಶ
**ಪ್ರಲಾಪಂಗೆಯ್** – ರೋದಿಸು
**ಪ್ರವಕ್ತೃ**– ವಾಗ್ಮಿ; ಉಪದೇಶಕ; ವಿವರಿಸುವವನು
**ಪ್ರವಗ** – ಕೋತಿ
**ಪ್ರವಚನ** – (ಜೈನ) ಜಿನವಾಣಿಯ ವ್ಯಾಖ್ಯಾನ
**ಪ್ರವಚನವತ್ಸಲತ್ವ** – (ಜೈನ) ಪ್ರವಚನಭಕ್ತಿ, ಅರ್ಹಂತರ ಅಥವಾ ಜಿನಾಗಮಗಳ ಮೇಲಿನ ಭಕ್ತಿ
**ಪ್ರವಣ** – ತಲ್ಲೀನವಾದ; ಆಸಕ್ತ; ಪ್ರಸಿದ್ಧವಾದವನು
**ಪ್ರವಯಸ್ಕ** – ಹಣ್ಣು ಹಣ್ಣು ಮುದುಕ
**ಪ್ರವರ** – ಶ್ರೇಷ್ಠವಾದ; ಅಗ್ರ ವ್ಯಕ್ತಿ
**ಪ್ರವರ್ತಕ** – ಮೂಲಪುರುಷ
**ಪ್ರವರ್ತನ** – ಮುಂದುವರಿಯುವುದು; ತೊಡಗುವಿಕೆ
**ಪ್ರವರ್ತಿತ** – ಮುಂದೆ ಸಾಗಿದ
**ಪ್ರವರ್ತಿಸು** – ಕಾರ್ಯಶೀಲವಾಗು; ಕಾಲ ಮುಂದುವರಿ; ಅನುಸರಿಸು
**ಪ್ರವರ್ಧ(ಮಾ)ನ** – ವೃದ್ಧಿಗೊಳ್ಳುವ; ವೃದ್ಧಿ
**ಪ್ರವಳ** – ರಭಸವಾಗಿ ಚಲಿಸುವ
**ಪ್ರವಾಲ(ಳ)** – ಚಿಗುರು; ಹವಳ
**ಪ್ರವಾಸ** – ಪರಸ್ಥಳ ಯಾತ್ರೆ
**ಪ್ರವಾಹಿನಿ** – ನದಿ
**ಪ್ರವಿಕಸಿತ** – ಚೆನ್ನಾಗಿ ಅರಳಿದ
**ಪ್ರವಿತತ** – ಹರಡಿಕೊಂಡ
**ಪ್ರವಿದಿತ** – ಚೆನ್ನಾಗಿ ತಿಳಿದ
**ಪ್ರವಿನಾಶನ** – ಪೂರ್ತಿ ನಾಶಗೊಳ್ಳುವುದು
**ಪ್ರವಿಪುಳ** – ಬಹು ಅಧಿಕವಾದ
**ಪ್ರವಿಭಕ್ತ** – ಪ್ರತ್ಯೇಕವಾದ
**ಪ್ರವಿಭಗ್ನ** – ಚೆನ್ನಾಗಿ ಮುರಿದ

**ಪ್ರವಿಭಾಸಿ** – ಕಾಂತಿಯುಕ್ತನಾದ ವ್ಯಕ್ತಿ
**ಪ್ರವಿಮಲ** – ಪರಿಶುದ್ಧವಾದ
**ಪ್ರವಿರಳಮಣಿ** – ತುಂಬ ಅಪರೂಪವಾದ ಮಣಿ
**ಪ್ರವಿಲಿಪ್ತ** – ಬಲವಾಗಿ ಅಂಟಿಕೊಂಡ
**ಪ್ರವಿಲೀನ** – ಲೀನಗೊಳಿಸುವುದು, ಸೇರಿಸುವುದು
**ಪ್ರವಿಷ್ಟ** – ಒಳಸೇರಿದ
**ಪ್ರವೀಚರಣ** – (ಜೈನ) ಇಂದ್ರಿಯ ಸುಖಾನುಭವ
**ಪ್ರವೀಚಾರ** – ಪ್ರವೀಚರಣ
**ಪ್ರವೀರ(ಪುರುಷ)** – ಮಹಾ ಪರಾಕ್ರಮಿ
**ಪ್ರವೃತ್ತ** – ಪ್ರವರ್ತಿತವಾದ; ಆರಂಭಿಸಿದ
**ಪ್ರವೃತ್ತಿ** – ವೃತ್ತಾಂತ
**ಪ್ರವೃದ್ಧ** – ಬೆಳೆದಂತಹ; ಅಧಿಕವಾದ
**ಪ್ರವೇಕ** – ಶ್ರೇಷ್ಠ ವ್ಯಕ್ತಿ
**ಪ್ರವ್ಯಕ್ತ** – ವೇದ್ಯವಾದ
**ಪ್ರವ್ರಜಿತ** – ಸಂಚರಿಸುವವನು; ಸನ್ಯಾಸಿ
**ಪ್ರವ್ರಜ್ಯ** – (ಸಂಚಾರ ಮಾಡುವ) ಸನ್ಯಾಸದೀಕ್ಷೆ
**ಪ್ರಶಮ(ನ)** – ಸಮಾಧಾನ; ನಿವಾರಣೆ
**ಪ್ರಶಮಿತ** – ಶಾಂತಗೊಂಡ; ಉಪಶಮನಗೊಂಡ
**ಪ್ರಶಮಿಸು** – ಉಪಶಮನಗೊಳ್ಳು
**ಪ್ರಶಮೆ** – ಪ್ರಶಮ(ನ)
**ಪ್ರಶಸ್ತ** – ಉತ್ತಮವಾದ; ಮಂಗಳಕರವಾದ
**ಪ್ರಶಸ್ತಮುಹೂರ್ತ** – ಮಂಗಳಕರ ಸಮಯ
**ಪ್ರಶಸ್ತಿ** – ಹೊಗಳಿಕೆ; ಬಿರುದು
**ಪ್ರಶಸ್ತಿಲೇಖನ** – ಹೊಗಳಿಕೆಯ ಬರಹ
**ಪ್ರಶಾಂತಿ** – ಶಾಂತವಾದ ಸ್ಥಿತಿ; (ಜೈನ) ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ವೈರಾಗ್ಯ ವೃತ್ತಿ; ನೋಡಿ, 'ಗರ್ಭಾನ್ವಯಕ್ರಿಯೆ'
**ಪ್ರಶ್ರಯ** – ನಮ್ರತೆ, ವಿನಯ; ಗೌರವ, ಆದರ
**ಪ್ರಷ್ಠೌಹಿ** – ಮೊದಲ ಸಲ ಗಬ್ಬವಾದ ಹಸು
**ಪ್ರಸಂಗ** – ಸಂಬಂಧ; ಸನ್ನಿವೇಶ
**ಪ್ರಸನ್ನ** – ಸ್ವಚ್ಛವಾದ
**ಪ್ರಸನ್ನತೆ** – ಸ್ವಚ್ಛತೆ
**ಪ್ರಸನ್ನಮನ** – ಸಂತುಷ್ಟ ಮನಸ್ಸಿನವನು
**ಪ್ರಸನ್ನವದನ** – ಪ್ರಸನ್ನತೆಯ ಮುಖ
**ಪ್ರಸರ** – ವಿಸ್ತಾರ; ಗುಂಪು
**ಪ್ರಸವ** – ಹೆರಿಗೆ; ಹುಟ್ಟು; ಹೂವು
**ಪ್ರಸವಸಮಯ** – ಹೆರಿಗೆಯ ಕಾಲ
**ಪ್ರಸವಾಂಗ** – (ಜೈನ) ಮಾಲ್ಯಾಂಗ ಎಂಬ ಒಂದು ಕಲ್ಪಕುಜ; ಹೂಮಾಲೆಗಳನ್ನು ಒದಗಿಸುವ ಕಲ್ಪಕುಜ; ನೋಡಿ, 'ಅಂಗಕಲ್ಪಕುಜ'
**ಪ್ರಸವಾಗಾರ** – ಹೆರಿಗೆ ಕೋಣೆ
**ಪ್ರಸವಾಲಯ** – ಪ್ರಸವಾಗಾರ
**ಪ್ರಸವೋತ್ಸವ** – ಜನ್ಮೋತ್ಸವ
**ಪ್ರಸಹ** – ಶಾಶ್ವತವಾದ
**ಪ್ರಸಾಧನ** – ಅಲಂಕಾರ; ಆಭರಣ
**ಪ್ರಸಾದನಕರಣ** – ಅಲಂಕಾರ ಮಾಡುವ ಕೆಲಸ
**ಪ್ರಸಾಧಿತ** – ಅಲಂಕಾರಗೊಂಡ
**ಪ್ರಸಾರಿತ** – ಹಬ್ಬಿದ
**ಪ್ರಸಾರಿಸು** – ಹರಡು
**ಪ್ರಸಿದ್ಧಾನ** – ಪ್ರಖ್ಯಾತಿ
**ಪ್ರಸುಪ್ತ** – ನಿದ್ದೆಯಲ್ಲಿರುವ; ನಿದ್ದೆ ಮಾಡುತ್ತಿರುವವನು
**ಪ್ರಸೂಚಕ** – ಸೂಚಿಸುವಂತಹದು
**ಪ್ರಸೂತ** – ಹುಟ್ಟಿದ; ಹೆರಿಗೆ; ಹೂವು
**ಪ್ರಸೂತಿ** – ಹೆರಿಗೆ
**ಪ್ರಸೂತಿ(ಕಾ)ಗೃಹ** – ಪ್ರಸವಾಗಾರ
**ಪ್ರಸೂನ** – ಹುಟ್ಟು; ಹುಟ್ಟಿದ; ಹೂವು; ಮೊಗ್ಗು
**ಪ್ರಸೂನವಿಶಿಖ** – ಪುಷ್ಪಾಯುಧ, ಮನ್ಮಥ
**ಪ್ರಸೂನಾಯುಧ** – ಪ್ರಸೂನವಿಶಿಖ
**ಪ್ರಸ್ಖಲಿತ** – ಮುಗ್ಗರಿಸಿದ
**ಪ್ರಸ್ತರ** – ಬಂಡೆಗಲ್ಲು
**ಪ್ರಸ್ತರಣ** – ಹಾಸಿಗೆ
**ಪ್ರಸ್ತರಭವನ** – ಕಲ್ಲಿನ ಮನೆ
**ಪ್ರಸ್ತಾರ** – ಹರಡುವುದು; ಹಾಸಿಗೆ
**ಪ್ರಸ್ತಾವ** – ಆರಂಭ; ವಿಷಯ; ಸಂದರ್ಭ
**ಪ್ರಸ್ತಾವಿತ** – ಸೂಸಿದ
**ಪ್ರಸ್ತುತ** – ಸಿದ್ಧಗೊಂಡ; ಸಂದರ್ಭ; ಸನ್ನಿವೇಶಕ್ಕೆ ತಕ್ಕನಾದ
**ಪ್ರಸ್ತುತ್ಯ** – ಸ್ತುತಿಸಲ್ಪಟ್ಟ
**ಪ್ರಸ್ಥ** – ಬೆಟ್ಟದ ತಪ್ಪಲು; ಪ್ರದೇಶ
**ಪ್ರಸ್ಥಾನ** – ಪ್ರಯಾಣ; ಜೈತ್ರಯಾತ್ರೆ
**ಪ್ರಸ್ಥಾನಂಗೆಯ್** – ಪ್ರಯಾಣ ಮಾಡು
**ಪ್ರಸ್ಥಾನತೂರ್ಯ** – ಪ್ರಯಾಣಕ್ಕೆ ಮುನ್ನ ಅಥವಾ ಜೈತ್ರಯಾತ್ರೆ ಹೊರಡುವಾಗ ಮಾಡುವ ವಾದ್ಯರವ
**ಪ್ರಸ್ಥಾನಪಾಂಶು** – ಪ್ರಯಾಣಕಾಲದಲ್ಲಿ ಏಳುವ ಧೂಳು
**ಪ್ರಸ್ಥಾನಭೇರಿ** – ಪ್ರಸ್ಥಾನತೂರ್ಯ
**ಪ್ರಸ್ಥಾನಶಿಬಿರ** – ಪ್ರಯಾಣಕಾಲದಲ್ಲಿನ ಬಿಡಾರ
**ಪ್ರಸ್ಪರ್ಧಿ** – ಪೈಪೋಟಿ ಮಾಡುವ(ವನು)
**ಪ್ರಸ್ಫಾರ** – ಹೊಳೆಯುವ
**ಪ್ರಸ್ಫುಟ** – ಸ್ಪಷ್ಟವಾದ; ಕಾಂತಿಯುಕ್ತವಾದ
**ಪ್ರಸ್ಫುರಿತ** – ಹೊರಸೂಸಿದ; ಹೊಳೆಯುವ
**ಪ್ರಸ್ಯಂದಿ** – ಸುರಿಯುವ
**ಪ್ರಹತ** – ಶಬ್ದಮಾಡಿದ; ಹೊಡೆಯಲ್ಪಟ್ಟ
**ಪ್ರಹತಿ** – ಹೊಡೆತ
**ಪ್ರಹರಣ** – ಏಟು; ಆಯುಧ; ಗದೆಯ ಹೊಡೆತದ ವಿಳಂಬಿತ, ಆಕುಂಚಿತ, ಆಸ್ಫೋಟಿತ, ಆಕ್ಷಿಪ್ತ, ಉದ್ಭ್ರಾಮಿತ, ದಿಗ್ಭ್ರಾಮಿತ, ಉಚಿತ, ವಿರುದ್ಧ, ಅಚಿಂತ್ಯ ಎಂಬ ಎಂಟು ಬಗೆಗಳಲ್ಲಿ ಒಂದು
**ಪ್ರಹರಣಶ್ರಮ** – ಹೊಡೆತದಿಂದಾಗುವ ಆಯಾಸ; ಶಸ್ತ್ರಾಭ್ಯಾಸ

**ಪ್ರಹರಿಣಿ** – (ಜೈನ) ಮಂತ್ರದ ನೆರವಿನಿಂದ ಕೊಡುವ ಪೆಟ್ಟು; ಅಂತಹ ವಿದ್ಯೆ
**ಪ್ರಹಸ್ತ** – ಚಾಚಿದ ಹಸ್ತ; ರಾವಣನ ಒಬ್ಬ ಮಂತ್ರಿ
**ಪ್ರಹಾರ** – ಹೊಡೆತ
**ಪ್ರಹಾರತ್ರಯ** – ವಾದ್ಯ ನುಡಿಸುವ ಮೂರು ನಲೆಗಳು; ಸಮ, ವಿಷಮ, ಸಮವಿಷಮ
**ಪ್ರಹಿತ** – ಕಳುಹಿಸಲಾದ; ಹೊಡೆದ
**ಪ್ರಹೃಷ್ಟ** – ಸಂತುಷ್ಟ
**ಪ್ರಹೇಲಿ(ಳ)ಕೆ** – ಒಗಟು
**ಪ್ರಹ್ಲಾದ** – ಅತೀವ ಸಂತೋಷ
**ಪ್ರಲಯಕರ** – ನಾಶಮಾಡುವಂತಹ
**ಪ್ರಳಯಪಯೋಧಿ** – ಉಕ್ಕಿ ಹರಿದು ವಿನಾಶಮಾಡುವ ಸಮುದ್ರ
**ಪ್ರಳಯಾನಿಲ(ಳ)** – ಪ್ರಳಯ ಕಾಲದಲ್ಲಿ ಬೀಸುವ ಬಿರುಗಾಳಿ
**ಪ್ರಾಂಗಣ** – ಅಂಗಳ
**ಪ್ರಾಂಚತ್** – ಶೋಭಿಸುವ
**ಪ್ರಾಂಚಿತ** – ಸುಂದರವಾದ
**ಪ್ರಾಂಜಲಿ** – ಮುಗಿದ ಕೈಗಳು
**ಪ್ರಾಂಶು** – ಉನ್ನತ, ಎತ್ತರವಾದ
**ಪ್ರಾಕ್** – ಪೂರ್ವ
**ಪ್ರಾಕಟ** – ಪ್ರಕಟಗೊಂಡ
**ಪ್ರಾಕೃತ** – ಸಾಮಾನ್ಯ ವ್ಯಕ್ತಿ; ಒರಟು ಮನುಷ್ಯ; ಒಂದು ಭಾಷೆ
**ಪ್ರಾಕೃತಜನ** – ನಾಡಾಡಿಗಳು
**ಪ್ರಾಕೃತಪುರುಷ** – ನಾಡಾಡಿ
**ಪ್ರಾಕೃತಾಸ್ತ್ರ** – ಸಾಮಾನ್ಯ ಬಾಣ
**ಪ್ರಾಕ್ತನ** – ಹಿಂದಿನ
**ಪ್ರಾಗಲ್ಭ್ಯ** – ಪ್ರೌಢಿಮೆ; ಧೈರ್ಯ
**ಪ್ರಾಗೇಯ** – ಸ್ತೋತ್ರಾರ್ಹವಾದ
**ಪ್ರಾಗ್ಜನ್ಮ** – ಹಿಂದಿನ ಜನ್ಮ
**ಪ್ರಾಗ್ಭಾಗ** – ಮೊದಲ ಭಾಗ
**ಪ್ರಾಗ್ರ** – ತುತ್ತ ತುದಿ; ಮುಖ್ಯನಾದವನು
**ಪ್ರಾಙ್ಮುಖ** – ಪ್ರಾಕ್+ಮುಖ, ಪೂರ್ವಾಭಿಮುಖವಾದ
**ಪ್ರಾಚೀ** – ಪೂರ್ವ
**ಪ್ರಾಚೀನಬರ್ಹಿ** – ಇಂದ್ರ
**ಪ್ರಾಚುರ್ಯ** – ಅಧಿಕವಾಗಿರುವುದು
**ಪ್ರಾಚ್ಯಶೈಲ** – ಪೂರ್ವದ ಬೆಟ್ಟ
**ಪ್ರಾಜ್ಞ(ಕ)** – ಕಾರಣ ಶರೀರದಲ್ಲಿದ್ದು ಸುಷುಪ್ತಾವಸ್ಥೆ ಅನುಭವಿಸುವ ಅನುಭವಿಸುವ ಆತ್ಮ
**ಪ್ರಾಜ್ಯ** – ವಿಸ್ತಾರವಾದ; ಉತ್ತಮವಾದ
**ಪ್ರಾಣ** – ಜೀವಿಯಲ್ಲಿನ ಚೈತನ್ಯ
**ಪ್ರಾಣತ(ಕಲ್ಪ)** – (ಜೈನ) ಊರ್ಧ್ವಲೋಕದಲ್ಲಿನ ಹದಿನಾರು ಸ್ವರ್ಗ ಅಥವಾ ಕಲ್ಪಗಳಲ್ಲಿ ಒಂದು, ನೋಡಿ 'ಕಲ್ಪ'
**ಪ್ರಾಣಘಾತಿ** – ಜೀವಹಿಂಸೆ
**ಪ್ರಾಣನ** – ಬದುಕಿಸುವುದು
**ಪ್ರಾಣಪ್ರಿಯ(ಯೆ)** – ಗಾಢಪ್ರೀತಿಗೆ ಪಾತ್ರನಾದವನು(ಳು)
**ಪ್ರಾಣಭಯ** – ಸಾವು ಬಂದೀತೆಂಬ ಹೆದರಿಕೆ
**ಪ್ರಾಣರಕ್ಷಣೆ** – ಜೀವವನ್ನುಳಿಸಿಕೊಳ್ಳುವುದು
**ಪ್ರಾಣವಧೆ** – ಕೊಲ್ಲುವುದು
**ಪ್ರಾಣವಲ್ಲಭ(ಭೆ)** – ಪ್ರೀತಿಪಾತ್ರ ವ್ಯಕ್ತಿ
**ಪ್ರಾಣವಿಯೋಗ** – ದೇಹದಿಂದ ಜೀವ ಹೋಗುವುದು; ಸಾವು
**ಪ್ರಾಣಸಮೆ** – ಪ್ರಾಣಕ್ಕೆ ಸಮನಾದಷ್ಟು ಪ್ರೀತಿಪಾತ್ರಳು
**ಪ್ರಾಣಹತಿ** – ಸಾವು
**ಪ್ರಾಣಿವಧೆ** – ಜೀವಿಗಳನ್ನು ಕೊಲ್ಲುವುದು
**ಪ್ರಾಣಿವಧೆಗೆಯ್** – ಪ್ರಾಣಿಗಳನ್ನು ಕೊಲ್ಲು
**ಪ್ರಾಣೇಶ್ವರ(ರಿ)** – ಪ್ರಾಣವಲ್ಲಭ(ಭೆ)
**ಪ್ರಾಣೋಪಕಾರ** – ಜೀವವನ್ನುಳಿಸುವುದು
**ಪ್ರಾತಿಹಾರ್ಯ** – ಪವಾಡ; (ಜೈನ) ಕೇವಲಜ್ಞಾನ ಪಡೆದ ತೀರ್ಥಂಕರನಿಗೆ ಒದಗುವ ಅಶೋಕವೃಕ್ಷ, ದಿವ್ಯಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದೇವದುಂದುಭಿ, ಛತ್ರಗಳೆಂಬ ಎಂಟು ಸವಲತ್ತುಗಳು
**ಪ್ರಾದುರ್ಭಾವ** – ಹುಟ್ಟುವಿಕೆ
**ಪ್ರಾದೇಶ** – ಚೋಟು (ಒಂದು ಉದ್ದಳತೆ)
**ಪ್ರಾಪಣ** – ಸ್ವೀಕರಿಸುವುದು
**ಪ್ರಾಪ್ತ** – ದೊರೆತ
**ಪ್ರಾಪ್ತಿ** – ಲಾಭ; ಅಷ್ಟಸಿದ್ಧಿಗಳಲ್ಲಿ ಒಂದು, ಏನನ್ನು ಬೇಕಾದರೂ ಹೊಂದುವ ಶಕ್ತಿ, ನೋಡಿ 'ಅಷ್ಟಸಿದ್ಧಿ'
**ಪ್ರಾಪ್ಯ** – ಹೊಂದಬಹುದಾದ
**ಪ್ರಾಭವ** – ಮೇಲ್ಮೆ
**ಪ್ರಾಭಾತಿಕ** – ಬೆಳಗಿನ ಸಮಯದ
**ಪ್ರಾಭೃತ** – ಹಿರಿಯರಿಗೆ ಸಲ್ಲಿಸುವ ಕಾಣಿಕೆ
**ಪ್ರಾಯ** – ಹರೆಯ; ವಯಸ್ಸು
**ಪ್ರಾಯಶ್ಚಿತ್ತ** – ನಡೆದ ತಪ್ಪಿಗೆ ಮಾಡಿಕೊಳ್ಳುವ ಪರಿಹಾರವಿಧಿ; (ಜೈನ) ಅಭ್ಯಂತರತಪಗಳಲ್ಲಿ ಒಂದು; ತಿಳಿಯದೆ ನಡೆದಿರಬಹುದಾದ ತಪ್ಪಿನ ಪರಿಹಾರಕ್ಕೆ ನಡೆಸುವ ಚಿತ್ತಶೋಧನೆ, ನೋಡಿ 'ಅಭ್ಯಂತರತಪಸ್ಸು'
**ಪ್ರಾಯೋಗ್ಯತಾಲಬ್ಧಿ** – (ಜೈನ) ಒಂದು ಲಬ್ಧಿ, ಕ್ರಮವಾಗಿ ಕರ್ಮಕ್ಷಯವಾಗುವುದು, ನೋಡಿ 'ಲಬ್ಧಿಪಂಚಕ'
**ಪ್ರಾಯೋಪಗಮನ** – (ಜೈನ) ನಿರಾಹಾರಿಯಾಗಿ ಮರಣವನ್ನು ಹೊಂದುವ ವ್ರತ
**ಪ್ರಾಯೋಪವೇಶ** – ಪ್ರಾಯೋಪಗಮನ
**ಪ್ರಾರಂಭ** – ಉದ್ಯಮ, ಕಾರ್ಯ
**ಪ್ರಾರಂಭಿಗ** – ಆರಂಭ ಮಾಡುವವನು

**ಪ್ರಾರ್ಥಿಸು** – ಬೇಡಿಕೊ
**ಪ್ರಾಲಂಬ** – ಜೋತಾಡುವ
**ಪ್ರಾಲೇ(ಳೇ)ಯ** – ಮಂಜು
**ಪ್ರಾಲೇಯಕರ** – ಚಂದ್ರ; ಕರ್ಪೂರ
**ಪ್ರಾಲೇಯಾಂಶು** – ಪ್ರಾಲೇಯಕರ
**ಪ್ರಾವರಣ** – ಉತ್ತರೀಯ
**ಪ್ರಾವಿರ್ಭೂತ** – ಕಾಣಿಸಿಕೊಂಡ ವ್ಯಕ್ತಿ
**ಪ್ರಾವೃಟ್ಕಾಲ** – ಮಳೆಗಾಲ
**ಪ್ರಾವೃತ** – ಸುತ್ತುವರಿದ
**ಪ್ರಾವೃಷ** – ಪ್ರಾವೃಟ್ಕಾಲ
**ಪ್ರಾವೃಷೇಣ್ಯ** – ಮಳೆಗಾಲದ
**ಪ್ರಾಶ್ನಿಕ** – ಪ್ರಶ್ನೆ ಮಾಡುವವನು
**ಪ್ರಾಸ(ಕ)** – ಒಂದು ಆಯುಧ, ಕೊಂತ
**ಪ್ರಾಸಾದ** – ಉಪ್ಪರಿಗೆ; (ಜೈನ) ಬಸದಿ; ಸ್ವರ್ಗದಲ್ಲಿನ ವೈರಾಜ, ಪುಷ್ಪಕ, ಕೈಲಾಸ, ಮಣಿಕ, ತ್ರಿವಿಷ್ಟಪ ಎಂಬ ಐದು ಹಾಗೂ ಭೂಮಿಯ ಮೇಲಿನ ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸರ್ವತೋಭದ್ರ, ವಲಚ್ಛಂಬಿಕ ಎಂಬ ಐದು ಪ್ರಾಸಾದಗಳು
**ಪ್ರಾಸುಕ** – ಶುದ್ಧವಾದ, ಹುಳ ಬೀಳದ
**ಪ್ರಾಳೇಯ** – ಹಿಮ
**ಪ್ರಾಳೇಯಾಚಲ(ಳ)** – ಹಿಮವತ್ಪರ್ವತ
**ಪ್ರಿಯಂಗು** – ನವಣೆ
**ಪ್ರಿಯಕ** – ಜಿಂಕೆ, ಕಡವೆ; ಹೊನ್ನೆಮರ(?)
**ಪ್ರಿಯಕರ** – ಪ್ರೀತಿಯುಳ್ಳವನು
**ಪ್ರಿಯಕಾರಿಣಿ** – ಪ್ರಿಯೆ
**ಪ್ರಿಯಗಳ್ಳ** – ಪ್ರೀತಿಯನ್ನು ಕದ್ದವನು
**ಪ್ರಿಯಜನ** – ಪ್ರೀತಿಪಾತ್ರರಾದ ಜನ
**ಪ್ರಿಯತಮ(ಮೆ)** – ಅತ್ಯಂತ ಪ್ರಿಯವಾದುದು; ನಲ್ಲ(ಲ್ಲೆ)
**ಪ್ರಿಯಮಿತ್ರ** – ಆಪ್ತ ಗೆಳೆಯ
**ಪ್ರಿಯವಚ(ನ)** – ಪ್ರೀತಿಯ ಮಾತು
**ಪ್ರಿಯವನಿತೆ** – ನಲ್ಲೆ
**ಪ್ರಿಯವಾದಿನಿ** – ಹೆಣ್ಣು ಗಿಳಿ
**ಪ್ರಿಯಸಂಭಾಷಣ** – ಸರಸ ಸಲ್ಲಾಪ
**ಪ್ರಿಯಸಖ(ಖಿ)** ಪ್ರೀತಿಪಾತ್ರ ಗೆಳೆಯ(ತಿ)–
**ಪ್ರಿಯೆ** – ನಲ್ಲೆ
**ಪ್ರಿಯೋದ್ಭವ** – (ಜೈನ) ಒಂದು ಗರ್ಭಾನ್ವಯಕ್ರಿಯೆ; ಜಾತಕರ್ಮ, ನೋಡಿ 'ಗರ್ಭಾನ್ವಯಕ್ರಿಯೆ'
**ಪ್ರೀಣನ** – ತೃಪ್ತಿಪಡಿಸುವಿಕೆ; ತೃಪ್ತಿಕರವಾದುದು
**ಪ್ರೀಣನಕರ** – ತೃಪ್ತಿಯುಂಟುಮಾಡುವಂತಹ
**ಪ್ರೀಣಿತ** – ಸಂತೋಷಗೊಳಿಸಿದ
**ಪ್ರೀತ** – ಹರ್ಷಗೊಂಡವನು
**ಪ್ರೀತಿ** – ಸಂತಸ; ಸ್ನೇಹ; (ಜೈನ) ಒಂದು ಗರ್ಭಾನ್ವಯಕ್ರಿಯೆ; ಗರ್ಭವತಿಯು ಮೂರನೇ ತಿಂಗಳಲ್ಲಿ ಮಾಡುವ ಜಿನಪೂಜೆ
**ಪ್ರಿಯಂಕರವಿಮಾನ** – (ಜೈನ) ಒಂದು ಸ್ವರ್ಗದ ಹೆಸರು
**ಪ್ರೀತಿಭೂಮಿ** – ಪ್ರೇಮಪಾತ್ರ ಸ್ತ್ರೀ; ಹೆಂಡತಿ
**ಪ್ರೀತಿವ(ಬ)ಡು** – ಪ್ರೀತಿ ಹೊಂದು
**ಪ್ರೀಯ** – ಪ್ರೀತಿ
**ಪ್ರೇಂಖಿತ** – ತೂಗಾಡುವ
**ಪ್ರೇಂಖೋಲ** – ತೂಗಾಟ
**ಪ್ರೇಂಖೋಲ(ಳ)ನ** – ತೂಗಾಟ; ಉಯ್ಯಾಲೆ
**ಪ್ರೇಂಖೋಲಿ(ಳಿ)ತ** – ತೂಗಾಡುವ
**ಪ್ರೇಕ್ಷಣ** – ನೋಟ; (ಜೈನ) ಒಂದು ದೇಶವ್ರತಾತಿಚಾರ
**ಪ್ರೇಕ್ಷಾಗೃಹ** – ಪ್ರದರ್ಶನಶಾಲೆ
**ಪ್ರೇಕ್ಷಾಸದನ** – ಪ್ರೇಕ್ಷಾಗೃಹ
**ಪ್ರೇತ** – ಶರೀರ ಬಿಟ್ಟ ಜೀವ; ಹೆಣ
**ಪ್ರೇಮ** – ಪ್ರೀತಿ
**ಪ್ರೇಮಾನುಬಂದ** – ಪ್ರೀತಿಯ ಕಟ್ಟು
**ಪ್ರೇಮಾಲೋಕನ** – ಪ್ರೀತಿಪೂರ್ಣ ನೋಟ
**ಪ್ರೇಯಸಿ** – ನಲ್ಲೆ
**ಪ್ರೇರಣ(ಣೆ)** – ಪ್ರಚೋದನೆ
**ಪ್ರೇರಿತ** – ಪ್ರಚೋದನೆಗೊಂಡ (ವ್ಯಕ್ತಿ)
**ಪ್ರೇರಿಸು** – ಪ್ರಚೋದಿಸು
**ಪ್ರೇಷಣ** – (ಜೈನ) ಒಂದು ದೇಶವ್ರತಾತಿಚಾರ; ದೂತರನ್ನು ಕಳಿಸಿ ಕೆಲಸ ಮಾಡಿಸುವುದು, ನೋಡಿ, 'ದೇಶವ್ರತಾತಿಚಾರ'
**ಪ್ರೇಷಿತ** – ಕಳಿಸಿದ
**ಪ್ರೇಷ್ಯ** – ಕಳಿಸಲ್ಪಟ್ಟವನು, ದೂತ
**ಪ್ರೋಕ್ತ** – ಹೇಳಲಾದ
**ಪ್ರೋಚ್ಚಂಡ** – ತುಂಬ ಭಯಂಕರವಾದ
**ಪ್ರೋಚ್ಚಳಿತ** – ಮೇಲಕ್ಕೆ ಹಾರಿದ
**ಪ್ರೋಜ್ಝಿತಚಾಪ** – ಬಿಲ್ಲು ಹಿಡಿಯುವುದನ್ನು ಬಿಟ್ಟವನು
**ಪ್ರೋಡ್ಡೀನ** – ಮೇಲೆ ಹಾರಿದ
**ಪ್ರೋತ್ಕರ** – ಗುಂಪು
**ಪ್ರೋತ್ಕಲಿತ** – ಮೇಲಕ್ಕೆ ಹಾರಿದ
**ಪ್ರೋತ್ತುಂಗ** – ತುಂಬ ಎತ್ತರವಾದಪ್ರೋತ್ಪಿಹಿತ – ಚೆನ್ನಾಗಿ ಮುಚ್ಚಿದ–
**ಪ್ರೋತ್ಫುಲ್ಲ** – ಚೆನ್ನಾಗಿ ಅರಳಿದ
**ಪ್ರೋಥ** – ಕುದುರೆಯ ಮೂಗಿನ ಹೊಳ್ಳೆ
**ಪ್ರೋದ್ಗತ** – ಚಾಚಿಕೊಂಡಿರುವ; ಹೊಮ್ಮಿದ
**ಪ್ರೋದ್ಗಮ** – ಉಂಟುಮಾಡುವಂತಹ(ದು)
**ಪ್ರೋದ್ಯತ್** – ಮೇಲಕ್ಕೆದ್ದಿರುವ; ಉಬ್ಬಿಕೊಂಡ
**ಪ್ರೋದ್ದಾನ** – ಸುರಿಯುವ ಆನೆಯ ಮದಜಲ
**ಪ್ರೋದ್ದಾಮ** – ಅತಿಶಯವಾದ; ಶ್ರೇಷ್ಠವಾದ
**ಪ್ರೋದ್ಧೂತ** – ಮೇಲೇಳುತ್ತಿರುವ
**ಪ್ರೋದ್ಭಾಸಿ** – ಚೆನ್ನಾಗಿ ಹೊಳೆಯುವ
**ಪ್ರೋದ್ಭೂತ** – ಆವಿರ್ಭವಿಸಿದ
**ಪ್ರೋದ್ಭೇದ** – ಮುರಿದುಹೋದ ; ಮುರಿಯುವಿಕೆ

**ಪ್ರೋದ್ವೃತ್ತ** – ಸೊಕ್ಕಿದ(ವನು)
**ಪ್ರೋನ್ನತ** – ಉನ್ನತವಾದ
**ಪ್ರೋನ್ಮತ್ತ** – ತುಂಬ ಸೊಕ್ಕಿದ
**ಪ್ರೋನ್ಮಿಳಿತ** – ಚೆನ್ನಾಗಿ ಮಿಲನಗೊಂಡ
**ಪ್ರೋಷಧ** – (ಜೈನ) ಉಪವಾಸದ ಹಿಂದಿನ ಮತ್ತು ಮುಂದಿನ ದಿನ ಒಂದೇ ಹೊತ್ತು ಊಟಮಾಡುವ ವ್ರತ
**ಪ್ರೋಷಧೋಪವಾಸ** – ಪ್ರೋಷಧ
**ಪ್ರೋಷಧೋಪವಾಸಿ** – ಪ್ರೋಷಧೋಪವಾಸ ಮಾಡುವ ವ್ರತಿ
**ಪ್ರೋಹ** – ಆನೆಯ ಕಾಲು
**ಪ್ಲೋಷ** – ಸುಡುವ
**ಪ್ರೌಢತೆ** – ನೈಪುಣ್ಯ
**ಪ್ರೌಢಿ** – ಜಾಣತನ
**ಪ್ರೌಢಿವೆಱು** – ಜಾಣತನ ಹೊಂದು
**ಪ್ರೌಢೆ** – ನಿಪುಣೆ
**ಪ್ಲಕ್ಷ್ಯ** – ಅತ್ತಿಮರ; ಆಲದ ಮರ
**ಪ್ಲವ** – ತೇಲುವ; ಪ್ರವಾಹ; ತೆಪ್ಪ; ಅರವತ್ತು ಸಂವತ್ಸರಗಳಲ್ಲಿ ಒಂದು
**ಪ್ಲವಂಗವಿದ್ಯೆ** – (ಜೈನ) ಕೋತಿಯ ವೇಷ ತಾಳುವ ಒಂದು ವಿದ್ಯೆ
**ಪ್ಲವ(ಂ)ಗ** – ಕಪ್ಪೆ; ಕೋತಿ
**ಪ್ಲವಗಕೇತು** – ಕಪಿಧ್ವಜ
**ಪ್ಲವಗಪ್ಲುತ** – ಕುಪ್ಪಳಿಸು
**ಪ್ಲವನ** – ತೇಲುವುದು; ಪ್ರವಾಹ
**ಪ್ಲುತ** – ಹಾರುವ
**ಪ್ಲುಷ್ಟ** – ಸುಟ್ಟ
**ಪ್ಲೋಷ** – ಸುಡುವ

## ಫ

**ಫಣ** – ಹಾವಿನ ಹೆಡೆ
**ಫಣಮಣಿ** – ಹಾವಿನ ಹೆಡೆಯ ಮಣಿ
**ಫಣಾಪತಿ** – ಆದಿಶೇಷ
**ಫಣಾಮಣಿ** – ಫಣಮಣಿ
**ಫಣಾರತ್ನ** – ಫಣಮಣಿ
**ಫಣಿ** – ಹೆಡಯುಳ್ಳದು, ಹಾವು
**ಫಣಿಗೃಹ** – ಹುತ್ತ
**ಫಣಿಗೇಹ** – ಫಣಿಗೃಹ
**ಫಣಿಧರ** – ಹಾವನ್ನು ಧರಿಸಿದವನು, ಶಿವ
**ಫಣಿನಾಯಕ** – ಸರ್ಪರಾಜ
**ಫಣಿನಿಲಯ** – ಫಣಿಗೃಹ
**ಫಣಿಪ(ತಿ)** – ಆದಿಶೇಷ
**ಫಣಿಪತಿಕೇತನ** – ಧ್ವಜದಲ್ಲಿ ಹಾವಿನ ಚಿಹ್ನೆಯುಳ್ಳವನು, ದುರ್ಯೋಧನ
**ಫಣಿರಾಜಕೇತನ** – ಫಣಿಪತಿಕೇತನ
**ಫಣಿಲೋಕ** – ನಾಗಲೋಕ
**ಫಣಿವೇಣಿ** – ಹಾವಿನಂತೆ ಜಡೆಯುಳ್ಳವಳು
**ಫಣಿಶಯನ** – ಹಾವನ್ನೇ ಹಾಸಿಗೆಯಾಗುಳ್ಳವನು, ವಿಷ್ಣು
**ಫಣೀಂದ್ರ** – ಆದಿಶೇಷ
**ಫಣೀಶ** – ಫಣೀಂದ್ರ
**ಫಣ್ಯಾಕಲ್ಪ** – ಹಾವಿನ ಆಭರಣವುಳ್ಳವನು, ಶಿವ
**ಫಣೀಂದ್ರಾಲಯ** – ಪಾತಾಳಲೋಕ
**ಫಲ(ಳ)** – ಹಣ್ಣು; ಪ್ರಯೋಜನ; ಫಲಿತಾಂಶ
**ಫಲ(ಳ)ಕ** – ಹಲಗೆ; ಗುರಾಣಿ
**ಫಲ(ಳ)ದಾನ** – ಹಣ್ಣುಗಳನ್ನು ದಾನ ಕೊಡುವುದು
**ಫಲಪೂರ** – ಮಾದಳ
**ಫಲಪ್ರಾಪ್ತಿ** – ಫಲ ದೊರೆಯುವುದು
**ಫಲ(ಳ)ಭರ** – ಹಣ್ಣುಗಳ ಭಾರ; ಹಣ್ಣುಗಳಿಂದ ತುಂಬಿರುವುದು
**ಫಲಭರಿತ** – ಹಣ್ಣುಗಳಿಂದ ತುಂಬಿರುವ
**ಫಲ(ಳ)ಭಾರ** – ಫಲ(ಳ)ಭರ
**ಫಲ(ಳ)ಮಂಜರಿ** – ಹಣ್ಣುಗಳ ಗೊಂಚಲು
**ಫಲವಂತ** – ಹಣ್ಣುಗಳಿಂದ ಕೂಡಿದ; ಫಲವತ್ತಾದ; (ಜೈನ) ಕರ್ಮನಾಶಕವಾದ ಒಂದು ಧರ್ಮ
**ಫಲ(ಳ)ವತಿ** – ಗರ್ಭಿಣಿ; ಹಣ್ಣು ಬಿಡುವ ಮರಗಿಡ
**ಫಲಾಖ್ಯಾನ** – ಶಲಾಕಾಪುರುಷನಿಗೆ ಮುಮದೆ ಬರಲಿರುವ ಸುಖವನ್ನು ತಿಳಿಸುವುದು
**ಫಲಿ(ಳಿ)ತ** – ಹಣ್ಣುಗಳನ್ನು ಬಿಟ್ಟಿರುವ
**ಫಲಿನೀಫಲ** – ಪ್ರಿಯಂಗು ಬಳ್ಳಿಯ ಹಣ್ಣು
**ಫಲಿಯಿಸು** – ದೊರಕಿಸಿಕೊಡು
**ಫಲೋತ್ಸುಕ** – ಫಲವನ್ನು ಪಡೆಯಲು ಉತ್ಸುಕನಾದವನು
**ಫಲ್ಗು** – ಚಿಕ್ಕದು
**ಫಳಕಾರ** – ಉಪಕಾರ ಮಾಡುವವನು
**ಫಳಪಕಾಂತತೆ** – ಫಲ ಬಿಟ್ಟ ತಕ್ಷಣ ನಾಶವಾಗುವುದು
**ಫಳರಸ** – ಹಣ್ಣಿನ ರಸ
**ಫಳಹೀನತೆ** – ನಿಷ್ಫಲತೆ
**ಫಳೆಯಕಾಱ** – ಗುರಾಣಿ ಹಿಡಿದ ಸೈನಿಕ
**ಫಾಲ** – ಹಣೆ
**ಫಾಲ್ಗುನ** – ಚಾಂದ್ರಮಾನದ ಹನ್ನೆರಡನೆಯ ತಿಂಗಳು
**ಫಾಳ್ಗುನನಂದೀಶ್ವರ** – (ಜೈನ) ಫಾಲ್ಗುಣದಲ್ಲಿ ಆಚರಿಸುವ ಒಂದು ವ್ರತ
**ಫುಲ್ಲ** – ಅರಳಿದ
**ಫುಲ್ಲವಟುಕ** – ಹೂವಾಡಿಗರ ಹುಡುಗ
**ಫುಲ್ಲಶರ** – ಹೂಬಾಣ; ಮನ್ಮಥ
**ಫುಲ್ಲೋತ್ಪಲ** – ಅರಳಿದ ತಾವರೆ
**ಫೂತ್ಕರಿಸು** – ಶಬ್ದಸಹಿತ ಉಸಿರು ಬಿಡುವುದು
**ಫೂತ್ಕಾರ** – ಶಬ್ದಸಹಿತ ಉಸಿರು ಬಿಡುವಿಕೆ
**ಫೂತ್ಕೃತಿ** – ಫೂತ್ಕಾರ
**ಫೇನ** – ನೊರೆ
**ಫೇರವ** – ನರಿ

## ಬ

**ಬಂಕ** – ಮೂಲೆ
**ಬಂಕು** – ಬಾಗು, ವಕ್ರವಾಗು
**ಬಂಗು** – ಬೂಜು
**ಬಂಚ** – (ವಂಶ) ಕೊಳಲು; ಪೀಳಿಗೆ
**ಬಂಚನೆ** – ವಂಚನೆ, ಮೋಸ
**ಬಂಚರ** – ವೀಣೆ, ತಂಬೂರಿ
**ಬಂಚಿಸು** – ವಂಚಿಸು; ತಪ್ಪಿಸು
**ಬಂಜ** – (ವಂಧ್ಯ) ನಿರ್ವೀರ್ಯ
**ಬಂಜಿಸು** – ದಾಟು
**ಬಂಜೆ** – (ವಂಧ್ಯಾ); ಗೊಡ್ಡು; ನಿಷ್ಫಲ
**ಬಂಜೆತನ** – ಗೊಡ್ಡುತನ
**ಬಂಜೆ ಮಾಡು** – ಹಾಳುಮಾಡು
**ಬಂಜೆಯಾಗು** – ಗೊಡ್ಡಾಗು; ನಿಷ್ಫಲವಾಗು
**ಬಂಜೆವೊಟ್ತು** – ವ್ಯರ್ಥವಾದ ಸಮಯ
**ಬಂಟು** – ಸೈನ್ಯ; ಶೌರ್ಯ
**ಬಂಟುಗೆಡು** – ಪರಾಕ್ರಮ ಕುಂದು
**ಬಂಟುತನ** – ಶೌರ್ಯ
**ಬಂಡ** – ಸರಕು; ನಿರ್ಲಜ್ಜ; ಹಾಸ್ಯಗಾರ
**ಬಂ(ಭಂ)ಡಣ** – ಯುದ್ಧ
**ಬಂಡಳಸು** – ಮಾತಾಡು
**ಬಂ(ಭಂ)ಡಿ** – ಗಾಡಿ
**ಬಂಡಾಡು** – ಬಂಡು+ಆಡು, ಮಕರಂದ ಹೊಮ್ಮು
**ಬಂಡು** – ಹೂವಿನ ಮಕರಂದ
**ಬಂಡುಣ್** – ಮಕರಂದ ಹೀರು
**ಬಂಡುವೋಗು** – ಲಜ್ಜೆಗೊಳ್ಳು
**ಬಂದಂಬಿಡು** – ಆಸೆಯನ್ನು ಬಿಡು
**ಬಂದ ಮಾವು** – ಫಲ ಬಿಟ್ಟ ಮಾವು
**ಬಂದಿ** – ಸೆರೆ; ಸೆರೆಯಾಳು
**ಬಂದಿಕಾಱ** – ಸೆರೆ ಹಿಡಿಯುವವನು
**ಬಂದಿಗೆ** – ಕತ್ತಿಯ ಹಿಡಿಕೆ
**ಬಂದಿಗ್ರಹಣ** – ಸೆರೆಹಿಡಿಯುವುದು
**ಬಂದಿಸು** – ವಂದಿಸು, ನಮಸ್ಕರಿಸು
**ಬಂದುಗೆಯಲರ್** – ಬಂಧೂಕ ಮರದ ಕೆಂಪು ಹೂ
**ಬಂದುಗೆಯರಲ್** – ಬಂದುಗೆಯಲರ್
**ಬಂಧ(ನ)** – ಕಟ್ಟು
**ಬಂಧಕಿ** – ಜಾರೆ
**ಬಂಧಗೌರವ** – ಕಾವ್ಯದ ರಚನಾಕೌಶಲ
**ಬಂಧಮೋಚನ(ನಿ)** – (ಜೈನ) ಸೆರೆಯಿಂದ ತಪ್ಪಿಸಿಕೊಳ್ಳುವ ವಿದ್ಯೆ
**ಬಂಧವಿದ** – ಕುಶಲ ಕೆಲಸಗಾರ
**ಬಂಧಿಸು** – ಕಟ್ಟಿಹಾಕು
**ಬಂಧು** – ಆತ್ಮೀಯ; ನಂಟ
**ಬಂಧುಜನ** – ನಂಟರು
**ಬಂಧುರ** – ಸುಂದರ, ಮನೋಹರ
**ಬಂಧುರತೆ** – ಚೆಲುವು
**ಬಂಧುವಿಯೋಗ** – ನಂಟರ ಅಗಲಿಕೆ
**ಬಂಧೂಕ** – ಬಂದುಗೆ, ಕೆಂಪು ಹೂ ಬಿಡುವ ಒಂದು ಮರ
**ಬಂಬಣಂಬಾಡು** – ಅಧಿಕವಾಗಿ ಸೊರಗು
**ಬಂಬಲ್** – ಗುಂಪು; ಗೊಂಚಲು
**ಬಂಬಲ್ಮಾಡು** – ಬಂಬಣಂಬಾಡು
**ಬಂಬಲಂಬಾಡು** – ಬಂಬಣಂಬಾಡು
**ಬಂಬಲ್ಗರುಳ್** – ಜೊಂಪೆಯಾದ ಕರುಳು
**ಬಂಬಲ್ಗುರುಳ್** – ಒತ್ತಾದ ಕೂದಲು
**ಬಂಬಲ್ಗೊಂಬು** – ದಟ್ಟವಾಗಿ ಎಲೆಗಳಿರುವ ಕೊಂಬೆ
**ಬಂಬಲ್ದಂಬುಲ** – ತಾಂಬೂಲದ ಕಟ್ಟು
**ಬಂಬಲ್ದಗುಳ್** – ದಟ್ಟವಾಗು
**ಬಂಬಲ್ದೆರೆ** – ನಿರಂತರವಾದ ಅಲೆಗಳು
**ಬಂಬಲ್ನಿಱಿ** – ಒತ್ತಾದ ನಿರಿಗೆ
**ಬಂಬಲ್ಮುಡಿ** – ಬಂಬಲ್ಗುರುಳ್
**ಬಂಬಲ್ವನಿ** – ಸೋನೆ, ಒಂದೇ ಸಮನೆ ಸುರಿಯುವ ಹನಿ
**ಬಂಬಲ್ವರಿ** – ಬಂಬಲ್+ಪರಿ, ಧಾವಿಸು
**ಬಂಬಲ್ವರಿಗೊಳ್** – ದಟ್ಟವಾಗಿ ಹರಡಿಕೊ
**ಬಂಬಲ್ವರಿಯಿಸು** – ಧಾವಿಸುವಂತೆ ಮಾಡು
**ಬೆಂಬಲ್ಸರಿ** – ಜಡಿಮಳೆ
**ಬಂಬಳ** – ತುಂಬ
**ಬಂಬಳ(ಂ) ಬಾಡು** – ತುಂಬ ಒಣಗಿಹೋಗು
**ಬಂಭರ** – ದುಂಬಿ
**ಬಂಹಿಮ** – ಅತಿಶಯ
**ಬಕ** – ಬಕಪಕ್ಷಿ; ಕಪಟ; ಒಬ್ಬ ರಾಕ್ಷಸ
**ಬಕವೇಸಿತನ** – ಮೋಸದ ಹಾದರ
**ಬಕಾರಿ** – ಬಕನನ್ನು ಕೊಂದವನು, ಭೀಮ
**ಬಕುಳ** – ನಾಗಕೇಸರ ಎಂಬ ಮರ
**ಬಕೋಟ** – ಬಕಪಕ್ಷಿ
**ಬಕ್ಕ(ಂ)ಬಯಲ್** – ಪೂರ್ತಿ ತೆರಪಾದ ಬಯಲು
**ಬಕ್ಕಣ** – (ಭಕ್ಷಣ) ತಿನಿಸು
**ಬಕ್ಕಳೆ** – ಮರದ ತೊಗಟೆ
**ಬಕ್ಕು** – ಒಂದು ನೀರ ಹಕ್ಕಿ
**ಬಕ್ಕು(ರ್ಕು)(ಳ್ಕು)ಡಿ** – ತಲ್ಲಣ
**ಬಕ್ಕು(ರ್ಕು)(ಳ್ಕು)ಡಿಗೆಯ್** – ವಾದಿಸು; ಆಶ್ಚರ್ಯಪಡು
**ಬಕ್ಕೆ(ರ್ಕೆ)** – ಒಂದು ವಿಧದ ಹಲಸಿನ ಹಣ್ಣು
**ಬಕ್ಕೆ(ರ್ಕೆ)ವಲಸು** – ಬಕ್ಕೆ(ರ್ಕೆ)
**ಬಗಟು** – ಅಗಲಿಸು; ಭಾಗ ಮಾಡು
**ಬಗರಗೆ** – ತೋಡಿದ ಗುಂಡಿ; ಚಿಲುಮೆ; ಬೋಕಿ ಬಿಂಚು
**ಬಗಸಿಗೆ** – ಬೊಗಸೆ
**ಬಗಸು** – ಬಯಸು, ಆಸೆಪಡು
**ಬಗಿ** – ತೋಡು; ಸೀಳು

**ಬಗಿಯೇಱು** – ಪರಚಿ ಮಾಡಿದ ಗಾಯ
**ಬಗುಳ್** – ಬೊಗಳು
**ಬಗೆ** – ಯೋಚನೆ ಮಾಡು; ಪರಿಗಣಿಸು; ರೀತಿ
**ಬಗೆಗಲ್** – ಬಗೆ+ಕಲ್, ಮನಸ್ಸನ್ನು ತಿಳಿದುಕೊ
**ಬಗೆಗಾಣ್** – ಬಗೆ+ಕಾಣ್ – ಮನಸ್ಸನ್ನು ಅರಿತುಕೊ–
**ಬಗೆಗುಂದು** – ನಿರಾಶೆಗೊಳ್ಳು
**ಬಗೆಗುಡು** – ಮನಸ್ಸನ್ನು ಕೊಡು, ಗಮನ ಹರಿಸು
**ಬಗೆಗಿಡಿಸು** – ದಾರಿ ತಪ್ಪಿಸು, ಮನಸ್ಸನ್ನು ಕೆಡಿಸು
**ಬಗೆಗೆಡು** – ವಿವೇಕ ಕಳೆದುಕೊ
**ಬಗೆಗೆಲ್** – ಮನಸ್ಸನ್ನು ಗೆಲ್ಲು
**ಬಗೆಗೊಳ್** – ಲಕ್ಷ್ಯಕ್ಕೆ ತಂದುಕೊ
**ಬಗೆಗೊಳಿಸು** – ಮನಸ್ಸನ್ನು ಗೆಲ್ಲು, ಆಕರ್ಷಿಸು
**ಬಗೆದರ್** – ಬಗೆ+ತರ್, ನಿಶ್ಚಯ ಮಾಡು
**ಬಗೆದೀರ್** – ಬಗೆ+ತೀರ್, ತೃಪ್ತಿಹೊಂದು
**ಬಗೆದೋಱು** – ಇಂಗಿತವನ್ನು ತೋರಿಸಿಕೊ
**ಬಗೆಪೋಗು** – ಮನದಟ್ಟಾಗು
**ಬಗೆಮುಟ್ಟು** – ಮನಸ್ಸನ್ನು ತಾಕು, ಮನಂಬುಗು
**ಬಗೆಯಱಿ** – ಇಂಗಿತವನ್ನು ತಿಳಿದುಕೊ
**ಬಗೆಯಱಲ್** – ಮನೋವ್ಯಥೆ
**ಬಗೆಯೊಡೆಯ** – ಮನದಾಣ್ಮ, ಮನಸ್ಸಿನ ಒಡೆಯ
**ಬಗೆವ(ಬ)ರ್** – ಮನಸ್ಸಿಗೆ ಬರು, ತೋಚು
**ಬಗೆವೇೞ್** – ಮನಸ್ಸಿನಲ್ಲಿದ್ದುದನ್ನು ತಿಳಿಸು
**ಬಗೆವೊ(ವು)ಗು** – ಮನಂಬುಗು, ಮನಸ್ಸನ್ನು ಸೇರು
**ಬಗ್ಗ** – (ವ್ಯಾಘ್ರ) ಹುಲಿ; (ವರ್ಗ) ಗುಂಪು; (ಭರ್ಗ) ಶಿವ
**ಬಗ್ಗ(ಂ)ದೊವಲ್** – ಹುಲಿಯ ಧರ್ಮ
**ಬಗ್ಗಣೆ** – ಗದರಿಕೆ; ಹಕ್ಕಿಗಳ ಕೂಜನ
**ಬಗ್ಗಿಸು** – (ಕೋಗಿಲೆಯಂತಹ ಹಕ್ಕಿ) ಧ್ವನಿಮಾಡು; ಗದರಿಸು, ಗರ್ಜಿಸು; ಮೂದಲಿಸು
**ಬಗೆ** – ರೀತಿ; ಮನಸ್ಸು; ಚಿಂತಿಸು
**ಬಚ್ಚ** – (ವೈಶ್ಯ) ವ್ಯಾಪಾರಿ
**ಬಚ್ಚಣೆ** – ವೇಷ; ಸೋಗು
**ಬಚ್ಚಣೆವೆಱು** – ಬಣ್ಣ ಹಚ್ಚಿರುವ
**ಬಚ್ಚಲ್** – ನಾಲೆ; ಮೋರಿ
**ಬಚ್ಚವಸರ** – ಬಚ್ಚ+ಪಸರ, ವ್ಯಾಪಾರಿಗಳ ಅಂಗಡಿಗಳ ಸಾಲು
**ಬಚ್ಚಿ(ರ್ಚಿ)ಸು** – ಬಣ್ಣ ಹಾಕು; ಲೇಪಿಸು
**ಬಜಾವಣ್** – ಬಾಜನೆ, ವಾದ್ಯ ಬಾರಿಸುವಿಕೆ
**ಬಜ್ಜರ** – (ವಜ್ರ) ನವರತ್ನಗಳಲ್ಲಿ ಒಂದು
**ಬಜ್ಜರವಸರ** – ವಜ್ರದ ಅಂಗಡಿ
**ಬಜ್ಜರಿಗಱ್ತಿ** – ಹೇಸರಗತ್ತೆ
**ಬಜ್ಜೆ** – ಧೂರ್ತೆ
**ಬಜ್ಜೆಗುಂಟಣಿ** – ಧೂರ್ತೆಯಾದ ಕುಂಟಲಗಿತ್ತಿ
**ಬಟ್ಟಗೊಡೆ** – ದುಂಡನೆಯ ಛತ್ರಿ
**ಬಟ್ಟನೆ** – ದುಂಡಗೆ
**ಬಟ್ಟನೆ ಬ(ವ)ರ್** – ಸುತ್ತುತ್ತ ಬರು
**ಬಟ್ಟಮೊಲೆ** – ದುಂಡಾದ ಮೊಲೆ
**ಬಟ್ಟಲ್(ಲು)** – ದುಂಡಾದ ಪಾತ್ರೆ
**ಬಟ್ಟವಂಜರ** – ದುಮಡನೆಯ ಪಂಜರ
**ಬಟ್ಟಸರಿ** – ಸುತ್ತಾಡು
**ಬಟ್ಟಾಡು** – (ಗೋಲಿ, ಚೆಂಡು ಮೊದಲಾದ) ದುಂಡಾದವಸ್ತುಗಳೊಡನೆ ಆಟವಾಡು
**ಬಟ್ಟಿಗೆ** – ಬಣ್ಣ ಬಳಿಯುವ ಕುಂಚ
**ಬಟ್ಟಿಗೆವಲಗೆ** – (ಮೃತ್ತಿಕಾಫಲಕ) ಬರೆಯುವ (ಮಣ್ಣಿನ) ಹಲಗೆ
**ಬಟ್ಟಿತು(ತ್ತು)** – ದುಂಡಾದ
**ಬಟ್ಟು** – (ವೃತ್ತ) ದುಂಡು; ದುಂಡಾದ ಬಿಲ್ಲೆ; ಬಿಲ್ಲೆಯಾಟ
**ಬಟ್ಟುಗೆಯ್** – ಉಂಡೆಮಾಡು
**ಬಟ್ಟೆ** – (ವರ್ತ್ಯ) ದಾರಿ; ವಸ್ತ್ರ
**ಬಟ್ಟೆಯ ಕಣ್** – ದಾರಿಯ ಮುಂಭಾಗ
**ಬಟ್ಟೆಯರ್** – ದಾರಿಹೋಕರು
**ಬಟ್ಟೆಗ** – ದಾರಿಹೋಕ
**ಬಟ್ಟೆಗಟ್ಟು** – ದಾರಿಗೆ ಅಡ್ಡಕಟ್ಟು; ದರೋಡೆಮಾಡು
**ಬಟ್ಟೆಗಾಣ್** – ದಾರ ಕಾಣ್; ಉಪಾಯ ಹೊಳೆ
**ಬಟ್ಟೆದಪ್ಪು** – ದಾರಿ ತಪ್ಪು
**ಬಟ್ಟೆದೋಱು** – ದಾರಿ ತೋರಿಸು
**ಬಟ್ಟೆ ನಡೆ** – ದಾರಿಯಲ್ಲಿ ಹೋಗು; ಪ್ರಯಾಣಿಸು
**ಬಟ್ಟೆವರ್** – ದಾರಿಯಲ್ಲಿ ನಡೆ; ಪ್ರಯಾಣಿಸು
**ಬಟ್ಟೆವಿಡಿ** – ದಾರಿಯನ್ನು ಅನುಸರಿಸು
**ಬಟ್ಟೆವೋಗು** – ಬಟ್ಟೆವಿಡಿ
**ಬಡಬಡಾಗು** – ತುಂಬ ಸೊರಗಿಹೋಗು
**ಬಡಮಾಡು** – ಸೊರಗಿಸು
**ಬಡಕ** – ಬಡಕಲು ವ್ಯಕ್ತಿ
**ಬಡಗಣ್(ಣ)** – ಉತ್ತರದಿಕ್ಕು
**ಬಡಗಣಂ** – ಉತ್ತರದಿಕ್ಕಿನಿಂದ ಬಂದವನು
**ಬಡಗದೆಸೆ** – ಉತ್ತರದಿಕ್ಕು
**ಬಡಗನಾಡು** – ಉತ್ತರದೇಶ
**ಬಡಗಮುಖ** – ಬಡಗದೆಸೆ
**ಬಡಗಮೊಗ** – ಬಡಗದೆಸೆ
**ಬಡಗಲ್(ಲು)** – ಉತ್ತರದಿಕ್ಕು
**ಬಡಗಿ** – ಮರಗೆಲಸದವನು
**ಬಡಗು** – ಉತ್ತರದಿಕ್ಕು
**ಬಡಗೊಂಡಿ** – ಸವೆದುಹೋದ ಕೊಂಡಿ
**ಬಡತನ** – ಕೃಶತೆ; ದಾರಿದ್ರ್ಯ
**ಬಡನಡು** – ತೆಳುವಾದ ಸೊಂಟ
**ಬಡಪ** – ಜಡಿಮಳೆ
**ಬಡಪಾರ್ವ** – ಬಡ ಬ್ರಾಹ್ಮಣ
**ಬಡಬ(ಜ್ವಾಲೆ)** – ಸಮುದ್ರದೊಳಗಣ ಬೆಂಕಿ
**ಬಡಬಶಿಖಿ** – ಬಡಬ(ಜ್ವಾಲೆ)
**ಬಡಬಾಗ್ನಿ** – ಬಡಬಶಿಖಿ
**ಬಡಬಾನಲ(ಳ)** – ಬಡಬಶಿಖಿ
**ಬಡಮನ** – ಸಣ್ಣ ಬುದ್ಧಿ

**ಬಡಮಲ್ಲ** – ಅಸಮರ್ಥನಾದ ಜಟ್ಟಿ
**ಬಡವ** – ದರಿದ್ರ; ಕೃಶವಾದವನು
**ಬಡವ(ಪ)ಡು** – ಬಡವಾಗು, ಕೃಶವಾಗು
**ಬಡವಾ** – ಬಡಬಾಗ್ನಿ
**ಬಡವು** – ಬಡವಾಗಿರುವುದು; ಕೃಶವಾಗಿರುವುದು
**ಬಡಿ** – ದೊಣ್ಣೆ; ಏಟು ಕೊಡು
**ಬಡಿಗೆ** – ಕೋಲು, ದೊಣ್ಣೆ
**ಬಡಿಗೆಕಾಱ** – ದಂಡಧಾರಿ
**ಬಡಿಗೆಕೊ(ಗೊ)ಳ್** – ದೊಣ್ಣೆಯನ್ನು ಹಿಡಿ; ಕೋಲಿನಿಂದ ಹೊಡೆ
**ಬಡಿಗೊಳ್** – ಬಡಿಗೆಕೊ(ಗೊ)ಳ್
**ಬಡಿಗೋಲ್** – ಹೊಡೆಯಲು ಬಳಸುವ ಕೋಲು
**ಬಡಿತಂಗಾಸು** – ಬಡಿಯಲು ಬೇಕಾದಂತೆ ಹದವಾಗಿ ಕಾಯಿಸು
**ಬಡಿತಂಗೊಳ್** – ಏಟು ಕೊಡು
**ಬಡಿವೆಱು** – ಏಟು ತಿನ್ನು
**ಬಡಿಸು** – ಊಟಕ್ಕಿಡು
**ಬಡಿಹ** – ಪೆಟ್ಟು
**ಬಡ್ಡಿ** – (ವೃದ್ಧಿ)  ಏಳಿಗೆ; ಸಾಲದ ಹಣದ ಮೇಲಿನ ಹೊರೆ
**ಬಡ್ಡಿಗೊಳ್** – ಬಡ್ಡಿಯನ್ನು ಪಡೆ
**ಬಡ್ಡಿಯಿಕ್ಕು** – ಬಡ್ಡಿ ಕೊಡು
**ಬಡ್ಡಿವೇಡು** – ಬಡ್ಡಿಯನ್ನು ಬೇಡು
**ಬಡ್ಡಿಸು** – ಬಡಿಸು, ಊಟಕ್ಕೆ ನೀಡು
**ಬಣಂ(ಳಂ)ಬೆ** – ಬಣಬೆ, ಮೆದೆ
**ಬಣಗು** – ಕ್ಷುದ್ರ; ಪಿಶಾಚಿ
**ಬಣ್ಣ** – ರಂಗು; ಚಿತ್ರ ರಚನೆಗೆ ಬೇಕಾದ ವರ್ಣ
**ಬಣ್ಣಂಬಡೆ** – ಆಕರ್ಷಕತೆಯನ್ನು ಹೊಂದು
**ಬಣ್ಣವಣ್ಣಿಗೆ** – ನಾನಾ ಬಣ್ಣಗಳಿಂದ ಕೂಡಿದುದು; ಬಣ್ಣ ಹಚ್ಚುವುದು
**ಬಣ್ಣವಳ** – ಬಣ್ಣ+ಅಳಿ, ಕಳೆಗುಂದು
**ಬಣ್ಣವಾಸಿಗ** – ಬಣ್ಣದ ಹೂಗಳ ಬಾಸಿಗ, ಮಾಲೆ
**ಬಣ್ಣವಿಡು** – ಬಣ್ಣ ಹಚ್ಚು
**ಬಣ್ಣವುರ** – (ವರ್ಣಪೂರ) ಬಣ್ಣದ ರಂಗೋಲಿ, ಬಣ್ಣಬಣ್ಣದ ಬಟ್ಟೆ
**ಬಣ್ಣಸರ** – ಬಣ್ಣಬಣ್ಣದ ಹೂಮಾಲೆ
**ಬಣ್ಣಸರಂಗೊಳ್** – ಬಣ್ಣಬಣ್ಣದ ಸರವನ್ನು ತೆಗೆದುಕೊ
**ಬಣ್ಣಿಕೆ(ಗೆ)** – (ವರ್ಣಿಕಾ) ಬಣ್ಣ; ಅಂದವಾದ
**ಬಣ್ಣಿಸು** – ವರ್ಣನೆ ಮಾಡು; ಮೆರುಗನ್ನು ನೀಡು
**ಬತ್ತ** – ನೆಲ್ಲು
**ಬತ್ತಂಗುಟ್ಟು** –  ಹೊಟ್ಟು ತೆಗೆಯಲು ಬತ್ತ ಕಟ್ಟು
**ಬತ್ತಲ(ಲೆ)ಗ** – ಬಟ್ಟೆಯಿಲ್ಲದವನು; ದಿಗಂಬರ ಸನ್ಯಾಸಿ
**ಬತ್ತಲೆಯಿರ್** – ನಗ್ನವಾಗಿರು
**ಬತ್ತಲೆ** – ನಗ್ನತೆ; ನಗ್ನವಾಗಿ; ನಗ್ನವಾದ

**ಬತ್ತಿ** _ **(ವರ್ತಿ) ದೀಪದ ಉರಿಯುವ ಹತ್ತಿಯ ಎಳೆ**–
**ಬತ್ತು** – ಒಣಗು, ಇಂಗಿ ಹೋಗು
**ಬತ್ತುಬಯ(ನ್)** – ಹಾಲು ಬತ್ತಿಹೋದ ಹಸು
**ಬತ್ತುಂಬಟೆ** – ಒಣಗಿದ ವಸ್ತ್ರ
**ಬತ್ತುಗೆ** – ಬತ್ತುವಿಕೆ; ಒಣಗುವಿಕೆ
**ಬದ(ಂ)ಗ** – ಜಾರ; ಸೇವಕ
**ಬದಗು** – ಹಾದರ; ಕುಟಿಲತೆ; ಮೂರ್ಖತನ
**ಬದಗುಗೆಯ್** – ಊಳಿಗತನವನ್ನು ಮಾಡು
**ಬದಗುಳಗ** – ಸೇವಕ; ಗುಲಾಮ
**ಬದರ(ರಿ)** – ಬೋರೆ ಅಥವಾ ಎಲಚಿ ಮರ, ಹಣ್ಣು
**ಬದಸು** – ಕುಟಿಲತೆ
**ಬದ್ದ** – ಗಾಢ
**ಬದ್ದರ** – ಬಾಣಗಳ ಏಟಿನಿಂದ ರಕ್ಷಿಸಿಕೊಳ್ಳುವ ಸಾಧನ
**ಬದ್ದವಣ** – (ವರ್ಧಮಾನ) ಬೆಳೆಯುವಿಕೆ; ಮಂಗಳ ವಾದ್ಯ
**ಬದ್ದವಣಂಬೊಯ್** – ಮಂಗಳವಾದ್ಯವನ್ನು ಬಾರಿಸು
**ಬದ್ದವಣಂಬೊಯಿಸು** – ಮಂಗಳವಾದ್ಯವನ್ನು ಬಾರಿಸುವಂತೆ ಮಾಡು
**ಬದ್ದಿ(ಡ್ಡಿ)ಸ**– ಅವುಕುವುದು
**ಬದ್ದೆ** – ಪ್ರೌಢೆ; ಪತಿವ್ರತೆ
**ಬದ್ದೆದಲ್ಲಣ** – ಬದ್ದೆ+ತಲ್ಲಣ, ಪ್ರೌಢೆಯರಿಗೆ ತಲ್ಲಣ ಉಂಟುಮಾಡುವವನು
**ಬದ್ದೆ(ರ್ದೆ)** – ಪ್ರೌಢೆ, ಜಾಣೆ
**ಬದ್ದೆವಜ್ಜೆ** – ಬದ್ದೆ+ಪಜ್ಜೆ, ಪ್ರೌಡಿಮೆಯ ಹೆಜ್ಜೆಗುರುತು
**ಬದ್ಧ** – ಸುತ್ತುವರಿದ; ಧರಿಸಿದ
**ಬದ್ಧಭೂಮಿ** – ನೆಲಗಟ್ಟು
**ಬದ್ಧಭ್ರುಕುಟಿ** – ಕೋಪದಿಂದ ಗಂಟಿಕ್ಕಿದ ಹುಬ್ಬುಗಳುಳ್ಳವನು
**ಬದ್ಧರಸ** – ಸ್ನೇಹದಿಂದ ಕೂಡಿದವನು
**ಬದ್ಧವಿರೋಧ** – ಆಳವಾದ ಶತ್ರುತ್ವ
**ಬದ್ಧವೈರ** – ಬದ್ಧವಿರೋಧ
**ಬದ್ಧಾಂಜಲಿ** – ನಮಸ್ಕಾರಪೂರ್ವಕವಾಗಿ ಮುಗಿದ ಕೈಗಳು
**ಬದ್ಧೋರ್ವಿ** – ಬದ್ಧಭೂಮಿ
**ಬಧಿರ** – ಕಿವುಡ
**ಬಧಿರತೆ** – ಕಿವುಡು
**ಬಧಿರಿತ** – ಕಿವುಡುಂಟುಮಾಡಿದ
**ಬನ** – ಕಾಡು; ತೋಪು; ಉದ್ಯಾನ; ಒಳ್ಳೆಯ ಬಟ್ಟೆ
**ಬನವಂದಿ** – ಕಾಡುಹಂದಿ
**ಬನವಟ್ಟೆ** – ಕಾಡುದಾರಿ
**ಬನಸಿರಿ** – ವನದೇವತೆ
**ಬನ್ನ** – (ಭಗ್ನ) ಅವಮಾನ; ಸೋಲು; ಕಷ್ಟ
**ಬನ್ನದ ಕೂೞ್** – ಕಷ್ಟದಿಂದ ಸಂಪಾದಿಸಿದ ಅನ್ನ
**ಬನ್ನಂಬಡಿಸು** – ಅವಮಾನಿಸು; ಸೋಲಿಸು; ಹಿಂಸಿಸು

**ಬನ್ನಂಬಡು** – ಅವಮಾನಗೊಳ್ಳು; ಸೋಲು; ಕಷ್ಟಕ್ಕೊಳಗಾಗು
**ಬನ್ನಂಬೆಱು** – ಅವಮಾನಗೊಳ್ಳು; ದುಃಖ ಹೊಂದು
**ಬಪ್ಪ** – ಬೊಪ್ಪ, ತಂದೆ
**ಬಬ್ಬುಲಿ** – ಮುಳ್ಳುಗಿಡ, ಬೊಬ್ಬುಳಿ ಮುಳ್ಳು
**ಬಭ್ರು** – ಕಂದು ಬಣ್ಣ
**ಬಮ್ಮೇತಿ** – (ಬ್ರಹ್ಮೇತಿ) ಬ್ರಾಹ್ಮಣ ಹತ್ಯೆ
**ಬಯ್** – ಮುಚ್ಚಿಡು; ತೆಗಳು
**ಬಯಕೆ** – ಆಸೆ
**ಬಯಕೆಗವಿ** – ಬಯಕೆ ಹೊಂದಿದ ಕವಿ; ಬಯಕೆ ಆವರಿಸು
**ಬಯಕೆವೆಣ್** – ಬಯಕೆಯುಂಟಾದ ಹೆಣ್ಣು, ಬಸಿರಿ
**ಬಯಲ್ದಾವರೆ** – ನೆಲದಾವರೆ
**ಬಯಲ್ದೊಱೆ** – ವಿಶಾಲವಾಗಿ ಬಯಲಲ್ಲಿ ಹರಿಯುವ ನದಿ; ಮರೀಚಿಕೆ
**ಬಯಲ್ತೋಱು** – ನೆಲ ಕಾಣಿಸು
**ಬಯಲ್ಪೊನಲ್** – ಬಯಲ್ದೊಱೆ
**ಬಯಸು** – ಇಚ್ಛೆಪಡು
**ಬಯ್ಕೆ** – ನಿಧಿ; ಗುಟ್ಟು
**ಬಯ್ಗಿರುಳ್** – ಬಯ್ಗು+ಇರುಳ್, ರಾತ್ರಿಯ ಸಂಜೆ, ಬೆಳಗಿನ ಜಾವ
**ಬಯ್ಗು** – ಸಾಯಂಕಾಲ
**ಬಯ್ಗುಂಬೊಟ್ತು** – ಸಂಜೆಯ ಹೊತ್ತು
**ಬಯ್ಗುಳ್** – ತೆಗಳಿಕೆ
**ಬಯ್ತ ಬಯ್ಕೆ** – ಬಯಸಿದ ಮನೋರಥ
**ಬಯ್ತಲೆ** – ಸೀಮಂತ; ಬಾಚಿದ ತಲೆಗೂದಲ ಮಧ್ಯದ ಸೀಳುಗೆರೆ
**ಬಯ್ಸು** – ಬಯ್ಯುವಂತೆ ಮಾಡು
**ಬರ** – (ವರ) ಅನುಗ್ರಹ
**ಬರಂಬಡೆ** – ವರವನ್ನು ಪಡೆ
**ಬರಗಲೆ** – ಆಭರಣವಿಶೇಷ
**ಬರವಿಗ** – ಬರುವವನು; ಅತಿಥಿ
**ಬರಿ** – ಮಗ್ಗುಲು; ಪಕ್ಕೆ
**ಬರಿಗಂಡ** – ಪಕ್ಕೆಯ ಮಾಂಸಖಂಡ
**ಬರಿಯೆಲ್ವು** – ಪಕ್ಕೆಲುಬು
**ಬರಿವೊನಲ್** – ದಡ ಮೀರಿ ಹರಿಯುವ ನದಿ
**ಬ(ವ)ರಿಸ** – ವರ್ಷ
**ಬರುಂಟು** – ಬೆರಳಿನಿಂದ ಚುಚ್ಚು
**ಬರುಹ** – ಬರುವಿಕೆ; ನವಿಲುಗರಿ
**ಬರೆ** – ತಿದ್ದು; ರೇಖಿಸು; ಗೆರೆ ಎಳೆ; ಗೆರೆ
**ಬರೆಗೊಳ್** – ಬರೆ ಹಾಕಿಸಿಕೊ
**ಬರೆಪಂಬೊಗು** – ಬರಹಕ್ಕೆ ಸಿಕ್ಕು
**ಬರೆಪಕಾಱ** – ಬರೆಯುವವನು
**ಬರೆಯಿಸು** – ಬರೆಯುವಂತೆ ಮಾಡು
**ಬರ್ಕಟಬಯಲ್** – ಬಟಾ ಬಯಲು, ಏನೂ ಇಲ್ಲದ ಬಯಲು
**ಬರ್ಕುಡಿ** – ಜಗಳ, ವಿವಾದ; ದೈನ್ಯ
**ಬರ್ಕೆವಲಸು** – ನೆಲಹಲಸು
**ಬರ್ಚು** – ಬತ್ತಿಹೋಗು
**ಬರ್ದಿಲ** – ಸ್ವರ್ಗ
**ಬರ್ದಿಸು** – ಎಣ್ಣೆಯಲ್ಲಿ ಕರಿ
**ಬರ್ದು** – ಮರಣ ಹೊಂದು; ಸಾವು; ಕೃಶವಾಗು; ಜಾಣ್ಮೆ; ಪ್ರೌಢಿಮೆ
**ಬರ್ದುಂಕಿಸು** – ಪ್ರಾಣ ಉಳಿಸು; ಕಾಪಾಡು
**ಬರ್ದು(ಂ)ಕು** – ಬದುಕು; ಜೀವಿಸು; ಹೊಟ್ಟೆ ಹೊರೆ
**ಬರ್ದುಕಾಡು** – ಪಾರಾಗು
**ಬರ್ದುಗಾರ್ತಿ** – ಪ್ರೌಢೆ; ಜಾಣೆ
**ಬರ್ದುಗೆ** – ಮರಣ
**ಬರ್ದುಗೆಡು** – ನೈಪುಣ್ಯವನ್ನು ಕಳೆದುಕೊ
**ಬರ್ದುನುಡಿ** – ಜಾಣ್ಮೆಯ ನುಡಿ
**ಬರ್ದುವೆಣ್** – ಪ್ರೌಢೆ
**ಬರ್ದೆ(ದ್ದೆ)** – ಬರ್ದುವೆಣ್; ವೇಶ್ಯೆ
**ಬರ್ದೆಗೆಯ್ತ** – ಪ್ರೌಢಕಾರ್ಯ
**ಬರ್ಬೂರ** – ಬೊಬ್ಬುಳಿ, ಜಾಲಿಮರ
**ಬರ್ಮನ್** – ಬ್ರಹ್ಮ
**ಬರ್ಹ** – ಎಲೆ; ಸೋಗೆ; ಗರಿ
**ಬರ್ಹಿ** – ನವಿಲು; ಕುಶ
**ಬರ್ಹಿಣ** – ನವಿಲು
**ಬಲ್** – ತಿಳಿ; ದೃಢವಾಗು; ಗಟ್ಟಿಗೊಳ್ಳು
**ಬಲ** – ಬಲಭಾಗ; ಶಕ್ತಿ; (ಬಳ) ಸೈನ್ಯ
**ಬಲದಂ** – ಬಲಬದಿಯಲ್ಲಿರುವ ವ್ಯಕ್ತಿ
**ಬಲಂಗೆಡು** – ಶಕ್ತಿಗುಂದು
**ಬಲಂಗೊಳ್** – ಪ್ರದಕ್ಷಿಣೆ ಹಾಕು
**ಬಲಂಬೆರಸು** – ಸೈನ್ಯಸಮೇತ
**ಬಲಂಬೆಱು** – ಶಕ್ತಿ ಹೊಂದು
**ಬಲಂಬೊಯ್** – ಬಲಂ+ಪೊಯ್, ಶಕ್ತಿ ನೀಡು
**ಬಲಕರ್ವೀಕೃತ** – ಶಕ್ತಿಗುಂದಿದವನು
**ಬಲಗಡೆ** – ಬಲದ ಕಡೆ, ಬಲಭಾಗ
**ಬಲಗೆಲ** – ಬಲ+ಕೆಲ, ಬಲಬದಿ
**ಬಲ(ಳ)ಜ** – ಬಾಗಿಲು
**ಬಲದಲನ** – ಬಲವನ್ನು ಕುಂದಿಸುವವನು, ಬಲನೆಂಬ ರಕ್ಕಸನನ್ನು ಕೊಂದವನು, ಇಂದ್ರ
**ಬಲ(ಳ)ದೇವ** – ಬಲರಾಮ; (ಜೈನ) ಅರವತ್ತು ಮೂವರು ಶಲಾಕಾಪುರುಷರಲ್ಲಿನ ಒಂಬತ್ತು ಮಂದಿಯ ಒಂದು ಗುಂಪು; ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ ಎಂಬುವವರು
**ಬಲದೋಳ್ದಲೆ** – ಬಲದ ಭುಜ
**ಬಲಭರ** – ಸೈನ್ಯದ ಆಧಿಕ್ಯ
**ಬಲಭಿತ್** – ಇಂದ್ರ
**ಬಲಭಿಚ್ಚಾಪ** – ಬಲಭಿತ್+ಚಾಪ, ಕಾಮನ ಬಿಲ್ಲು
**ಬಲ(ಳ)ಮರ್ದು(ದ್ದು)** – ಪರಿಣಾಮಕಾರಿ ಔಷಧ
**ಬಲಯ** – ತಲೆವಾಗಿಲು

**ಬಲಯುತ** – ಶಕ್ತಿಯಿಂದ ಕೂಡಿದ(ವನು)
**ಬಲವಂಕ** – ಬಲಬದಿ
**ಬಲ(ಳ)ವಂತ** – ಶಕ್ತಿಶಾಲಿ
**ಬಲವಕ್ಕ** – ಬಲವಂಕ
**ಬಲವತ್ಸೈನ್ಯ** – ಶಕ್ತಿಶಾಲಿ ಸೈನ್ಯ
**ಬಲವದ್ವೈರಿ** – ಬಲಿಷ್ಠ ಹಗೆ
**ಬಲವರ್** – ಪ್ರದಕ್ಷಿಣೆ ಹಾಕು
**ಬಲವಿರೋಧಿ** – ಬಲನೆಂಬ ರಕ್ಕಸನನ್ನು ಕೊಂದವನು, ಇಂದ್ರ
**ಬಲವು** – ಶಕ್ತಿ
**ಬಲವೈರಿ** – ಬಲವಿರೋಧಿ
**ಬಲಸಂಘಟ್ಟನ** – ಸೈನ್ಯದ ತುಳಿತ
**ಬಲಸ್ಥ** – ಶಕ್ತಿಶಾಲಿ
**ಬಲಾಂತಕ** – ಬಲವಿರೋಧಿ
**ಬಲಾ(ಳಾ)ಕ(ಕೆ)** – ಬೆಳ್ಳಕ್ಕಿ
**ಬಲಾಢ್ಯ** – ಬಲಿಷ್ಠ(ನಾದವನು)
**ಬಲಾಧಿಕ** – ಅಧಿಕ ಬಲಶಾಲಿ
**ಬಲಾಧಿಕೃತ** – ಸೇನಾಧಿಪತಿ
**ಬಲಾ(ಳಾ)ಧ್ಯಕ್ಷ** – ಬಲಾಧಿಕೃತ
**ಬಲಾವಲೇಪ** – ಬಲದ ಕಾರಣದಿಂದಾದ ದರ್ಪ
**ಬಲಾ(ಳಾ)ಹಕ** – (ಪ್ರಳಯಕಾಲದ) ಮೋಡ
**ಬಲಿ** – ಬಲಿಷ್ಠ (ವ್ಯಕ್ತಿ); ಬಲಿ ಚಕ್ರವರ್ತಿ; ದೇವತೆಗೆ ನೀಡುವ ಆಹುತಿ; (ಜೈನ) ಪ್ರತಿವಾಸುದೇವರಲ್ಲಿ ಒಬ್ಬ
**ಬಲಿಂದಮ** – ಬಲಿಯನ್ನು ದಮನಮಾಡಿದವನು, ವಾಮನ, ವಿಷ್ಣು
**ಬಲಿಕೆಯ್** – ಬಲಿಷ್ಠವಾಗಿ ಮಾಡು
**ಬಲಿಗೆದಱ್(ಱು)** – ಆಹುತಿ ನೀಡು
**ಬಲಿಗೆಯ್** – ಆಹುತಿ ಅರ್ಪಿಸು
**ಬಲಿಪುಷ್ಟ** – ಕಾಗೆ
**ಬಲಿಭುಕ್** – ಬಲಿಪುಷ್ಟ
**ಬಲಿಬಂಧನ** – ಬಲಿಂದಮ
**ಬಲಿ(ಳಿ)ಭುಕ್ಕು** – ಆಹುತಿಯಿತ್ತುದನ್ನು ತಿನ್ನುವುದು, ಕಾಗೆ
**ಬಲಿಭೋಜನ** – ಬಲಿ(ಳಿ)ಭುಕ್ಕು
**ಬಲಿಭೋಜಿ** – ಬಲಿ(ಳಿ)ಭುಕ್ಕು
**ಬಲಿ(ಳಿ)(ೞ)ಮುಖ** – ಕೋತಿ
**ಬಲಿಮುಖಕೇತನ** – ಶ್ರೇಷ್ಠ ಕಪಿ, ಸುಗ್ರೀವ
**ಬಲಿರಿಪು** – ಬಲಿಂದಮ
**ಬಲಿಸುತ** – ಬಲಿಯ ಮಗ, ಬಾಣಾಸುರ
**ಬಲಿಸ್ನಪನ** – (ಜೈನ) ಜಿನನಿಗೆ ಮೂರೂ ಸಂಜೆಗಳಲ್ಲಿ ಮಾಡುವ ಅಭಿಷೇಕ
**ಬಲಿಹರ** – ಬಲಿಂದಮ
**ಬಲಿಹರಣಂಗೆಯ್** – ಬಲಿಯನ್ನು ಅರ್ಪಿಸು
**ಬಲೀಮುಖ(ಖಿ)** – ಕೋತಿ, (ಹೆಣ್ಣು)
**ಬಲೀವರ್ದ** – ಎತ್ತು
**ಬಲೆ** – ದಾರದಿಂದ ಹೆಣೆದ ಬೇಟೆಯಾಡುವ ಸಾಧನ, ಜಾಲ
**ಬಲೆಗಣ್** – ಬಲೆಯ ತೂತು
**ಬಲೆವಱೆ** – ಬಲೆಯನ್ನು ಹರಿದುಹಾಕು
**ಬಲೋ(ಳೋ)ನ್ಮತ್ತ** – ತನ್ನ ಶಕ್ತಿಯ ಬಗ್ಗೆ ಗರ್ವ ಪಡುವವನು
**ಬಲ್ಕಣಿ** – ಮಹಾ ಶೂರ; ಪರಿಣತ
**ಬಲ್ಕಣಿತನ** – ಶೌರ್ಯ
**ಬಲ್ಗಂಡು** – ಮಹಾ ಶೌರ್ಯ
**ಬಲ್ಗಣೆ** – ಶಕ್ತಿಶಾಲಿ ಅಸ್ತ್ರ
**ಬಲ್ಗಣ್ಣೆ** – ಬಲವಾದ ಹಗ್ಗ
**ಬಲ್ಗರ** – ಬಲಿಷ್ಠ ಗ್ರಹ
**ಬಲ್ಗರುಳ್** – ದೀರ್ಘವಾದ ಕರುಳು
**ಬಲ್ಗಲಿ** – ಮಹಾ ಶೂರ
**ಬಲ್ಗಱೆ** – ದೊಡ್ಡ ರೆಕ್ಕೆ
**ಬಲ್ಗಾಪು** – ಬಲವಾದ ಕಾವಲು
**ಬಲ್ಗಾಳೆಗ** – ಘೋರ ಯುದ್ಧ
**ಬಲ್ಗುದುರೆ** – ಬಲಿಷ್ಠ ಕುದುರೆ
**ಬಲ್ಗೂಳಿ** – ಬಲಿಷ್ಠ ಗೂಳಿ
**ಬಲ್ಗೆಯ್ತ** – ದೊಡ್ಡ ಕೆಲಸ
**ಬಲ್ಗೋಂಟೆ** – ಬಲಿಷ್ಠ ಕೋಟೆ
**ಬಲ್ದಗರ** – ಬಲ್+ತಗರ್, ಬಲಿಷ್ಠ ಟಗರು
**ಬಲ್ದಡಿ(ಗ)** – ಮಹಾ ಬಲಶಾಲಿ
**ಬಲ್ದೆರೆ** – ದೊಡ್ಡ ಅಲೆ
**ಬಲ್ದೊಱೆ** – ದೊಡ್ಡ ನದಿ
**ಬಲ್ನನೆ** – ದೊಡ್ಡ ಮೊಗ್ಗು
**ಬಲ್ನಿಡಿದು** – ತುಂಬ ನೀಳವಾದ(ದ್ದು)
**ಬಲ್ನೆಣ** – ಅಧಿಕ ಕೊಬ್ಬು
**ಬಲ್ನೆಲೆ** – ಬಲವಾಸ ಆಸರೆ
**ಬಲ್ಪಳಿ** – ಬಲ್ಪು+ಅಳಿ, ಶಕ್ತಿಗುಂದು
**ಬಲ್ಪು** – ಬಲಾತ್ಕಾರ; ದೃಢತೆ
**ಬಲ್ಪುಗಿ(ಗೆ)ಡು** – ಶಕ್ತಿಗುಂದು
**ಬಲ್ಪುದೋಱಿಸು** – ಬಲಪ್ರದರ್ಶನ ಮಾಡು
**ಬಲ್ಪುದೋಱು** – ಬಲ್ಪುದೋಱಿಸು
**ಬಲ್ಪೊಂಬಳೆ** – ದೊಡ್ಡ ಹೊಂಬಾಳೆ
**ಬಲ್ಬಂಟ** – ದೊಡ್ಡ ಶೂರ
**ಬಲ್ಬಱ** – ಭೀಕರ ಕ್ಷಾಮ
**ಬಲ್ಮಂತ್ರಿ** – ಸಮರ್ಥ ಸಚಿವ
**ಬಲ್ಮಿಡಿ** – ದೊಡ್ಡ, ಬಲಿತ ಕಾಯಿ
**ಬಲ್ಮಿಳಿ** – ದೊಡ್ಡ, ಬಲವಾದ ಹಗ್ಗ
**ಬಲ್ಮುಗುಳ್** – ದೊಡ್ಡ ಮೊಗ್ಗು
**ಬಲ್ಮುಡಿ** – ಹೇರಳ ಕೂದಲ ಗಂಟು
**ಬಲ್ಮುತ್ತು** – ದಪ್ಪನಾದ ಮುತ್ತು
**ಬಲ್ಮುನಿ(ಳಿ)ಸು** – ಭರಿ ಕೋಪ
**ಬಲ್ಮುಱಿ** – ಬಹಳ ಚೂರುಗಳು
**ಬಲ್ಮೆ** – ಶಕ್ತಿ; ಶ್ರೇಷ್ಠತೆ; ಬಲಾತ್ಕಾರ
**ಬಲ್ಮೊಗ** – ಗಂಭೀರ ಮುಖಮುದ್ರೆ

**ಬಲ್ಮೊರೆ** – ಹೆಚ್ಚಿನ ಮೊರೆತ
**ಬಲ್ಮೊಸರ್** – ಥೈಂಡಿ ಮೊಸರು
**ಬಲ್ಲಡಗು** – ಒಳ್ಳೆಯ ಮಾಂಸ
**ಬಲ್ಲಡವಿ** – ದಟ್ಟ ಕಾಡು
**ಬಲ್ಲಣೆ** – ದೊಡ್ಡ ದಂಡು
**ಬಲ್ಲಹ** – ಯಜಮಾನ; ಶೂರ
**ಬಲ್ಲಾಯ** – ಹೆಚ್ಚಿನ ಶೌರ್ಯ
**ಬಲ್ಲಾಳ್** – ಬಲವಾದ ಆಳು, ಶೂರ
**ಬಲ್ಲಾಳ್ತನ** – ಶೌರ್ಯ; ಬಲಾತ್ಕಾರ
**ಬಲ್ಲಾಳ್ತನಂಗೆಯ್** – ಒತ್ತಾಯಪಡಿಸು
**ಬಲ್ಲಿತ್ತು** – ಶ್ರೇಷ್ಠವಾದ(ದ್ದು); ಬಲಿಷ್ಠವಾದ(ದ್ದು)
**ಬಲ್ಲಿತಱ ಕೋಡು(ಂ) ಕೂರಿತು** – ಬಲಿಷ್ಠವಾದುದರ ಕೊಂಬು ಚೂಪಾದುದು; ಅಧಿಕಾರವುಳ್ಳವರ ದರ್ಪ ದೊಡ್ಡದು
**ಬಲ್ಲಿತ್ತು** – ಬಿಗಿಯಾಗಿ, ಬಲವಾಗಿ
**ಬಲ್ಲಿತ್ತು ಮಾಡು** – ಬಲಪಡಿಸು; ದೃಢಗೊಳಿಸು
**ಬಲ್ಲಿದ** – ಶೂರ
**ಬಲ್ಲುಲಿ** – ಜೋರಾದ ಧ್ವನಿ; ಹೊಗಳಿಕೆಯ ನುಡಿ
**ಬಲ್ಲೆ** – ಪೊದೆ; ಬಳಿಕ
**ಬ(ಭ)ಲ್ಲೆಯ** – ಈಟಿ
**ಬಲ್ಲೇಱ್** – ಬಲವಾದ ಹೊಡೆತ
**ಬಲ್ಬಂದಿಕಾಱ** – ಬಲವಾಗಿ ಸೆರೆಹಿಡಿಯುವವನು
**ಬಲ್ವಗೆ** – ಬಲಿಷ್ಠ ಶತ್ರು
**ಬಲ್ವಡಿ** – ಬಲ್+ಪಡಿ, ಬಲಿಷ್ಠ ಬಾಗಿಲು
**ಬಲ್ವರವಿ** – ದೊಡ್ಡ ಹರವಿ, ಮಡಕೆ
**ಬಲ್ವರಿಕೆ** – ಬಲ್+ಪರಿಕೆ, ದೊಡ್ಡ ದಾಳಿ
**ಬಲ್ವಲ** – ದೊಟ್ಟ ಸೈನ್ಯ; ಶ್ರೇಷ್ಠವಾದ(ದ್ದು)
**ಬಲ್ವಲಾಗು** – ಹೆಚ್ಚಾಗು
**ಬಲ್ವಲಿಕೆ** – ಬಲ್+ಬಲಿಕೆ, ಹೆಚ್ಚಿನ ಶಕ್ತಿ
**ಬಲ್ವ(ಲ್ಪ)ಡಿ** – ಗಟ್ಟಿಯಾಗಿ ಹಿಡಿ; ಬಲವಾದ ಹಿಡಿತ
**ಬಲ್ವಿಣಿಲ್** – ಬಲ್+ಪಿಣಿಲ್, ಹೇರಳ ಕೇಶರಾಶಿ
**ಬಲ್ವೆಣ** – ದೊಡ್ಡ ಹೆಣ
**ಬಲ್ವೆಣಸು** – ಬಲ್+ಪೆಣಸು, ಹೆಚ್ಚಿನ ರಭಸ
**ಬಲ್ವೊಯಿಲ್** – ಬಲ್+ಪೊಯಿಲ್, ರಭಸದ ಏಟು
**ಬಲ್ಸರಿ** – ಜೋರಾದ ಮಳೆ
**ಬಲ್ಸಿಡಿಲ್** – ಬಲವಾದ ಸಿಡಿಲು
**ಬಲ್ಸೆಱೆ** – ಬಿಗಿಯಾದ ಸೆರೆ
**ಬಲ್ಸೆಱೆಗೆಯ್** – ತೀವ್ರವಾಗಿ ಆಕರ್ಷಿಸು
**ಬಲ್ಸೆಱೆವಿಡಿ** – ಬಲ್ಸೆಱೆಗೆಯ್
**ಬವಣಿಗೆ** – ಪ್ರದಕ್ಷಿಣೆ; ಸುತ್ತಾಟ
**ಬವನ** – (ವಮನ) ವಾಂತಿ
**ಬವರ** – ಕಾಳಗ; ಪೈಪೋಟಿ; ಜಗಳ; (ಭ್ರಮರ) ದುಂಬಿ
**ಬವರಂಗೆಯ್** – ಹೋರಾಡು
**ಬವರಿ** – (ಭ್ರಮರಕ) ಬುಗುರಿ
**ಬವರಿಗೊಡು** – ವೇಗವಾಗಿ ತಿರುಗು
**ಬವರಿಗೊಳು** – ತಿರುಗಿಸು
**ಬವರಿವರಿ** – ಸುತ್ತುವರಿ
**ಬವರಿಸು** – ಅಲೆದಾಡು; ಆವರಿಸು; ಉಂಟಾಗು
**ಬವಸು(ಸೆ)** – ಆಸೆ; (ವ್ಯವಸಾಯ) ಪ್ರಯತ್ನ
**ಬವಸೆಗಾಣ್** – ಆಸೆಪಡು
**ಬವಳಿವರಿ** – ತಿರುಗು, ಸುತ್ತುಹಾಕು
**ಬಸ(ದು)** – (ವಶ) ಅಂಕೆ; ಬಲ
**ಬಸಂ ಮಾಡು** – ಅಧೀನಪಡಿಸಿಕೊ
**ಬಸಂತ** – (ವಸಂತ) ಚೈತ್ರ–ವೈಶಾಖ ತಿಂಗಳುಗಳು; ಸಂತೋಷದಾಯಕ(ವಾದ)–
**ಬಸಂತಮಾಸ** – ವಸಂತಋತು
**ಬಸಂತಸಮಯ** – ಬಸಂತಮಾಸ
**ಬಸದನ** – ಸಿಂಗಾರ
**ಬಸದಿ** – (ವಸತಿ) (ಜೈನ) ಜಿನಗೃಹ
**ಬಸದು** – ಶುದ್ಧ
**ಬಸನ** – (ವ್ಯಸನ) ಅತ್ಯಾಸಕ್ತಿ
**ಬಸನಿ(ಗ)** – (ವ್ಯಸನಿ) ಬಸನವುಳ್ಳವನು
**ಬಸನಿಗತನ** – ಕೆಟ್ಟ ಸ್ವಭಾವ
**ಬಸನಿಗೆ** – ಪ್ರಣಯಕಾತರೆ
**ಬಸಮ(ವ)ೞೆ** – ಶಕ್ತಿಗುಂದು; ಮೂರ್ಛೆ ಹೋಗು
**ಬಸಮುಱು** – ಸ್ವಾಧೀನ ತಪ್ಪು
**ಬಸಯಿಸು** – ಸ್ವಾಧೀನಪಡಿಸಿಕೊ
**ಬಸಿ** – ಒಸರು; ಸುರಿ; ಹರಿತ(ಚೂಪು)ಗೊಳಿಸು; ಮೊಳೆ
**ಬಸಿದು ಬೀೞ್** – (ರಕ್ತ) ಸುರಿದು ಬೀಳು
**ಬಸಿರ್ಪೊಸು** – ಬಸಿರಿನಲ್ಲೇ ಓಲೈಸು
**ಬಸಿರ್ಪೆಂಡತಿ** – ಬಸಿರಿ ಹೆಂಗಸು
**ಬಸಿ(ಸು)ಱ್(ಱು)** – ಹೊಟ್ಟೆ; ಭ್ರೂಣಕೋಶ
**ಬಸಿ(ಸು)ಱಂಪೊಸೆ** – ಹೊಟ್ಟೆ ಹೊಸೆ; ಹೊಟ್ಟೆಕಿಚ್ಚು ಪಡು
**ಬಸಿಱ ಕುತ್ತ** – ಹೊಟ್ಟೆಯ ಬೇನೆ
**ಬಸಿ(ಸು)ಱೊಡೆ** – ಗರ್ಭಪಾತವಾಗು
**ಬಸಿಱೞೆ** – ಬಸಿ(ಸು)ಱೊಡೆ
**ಬಸೆ** – ಹೆಣ್ಣು ಆನೆ; ಗೊಡ್ಡು ಹಸು; ಕೊಬ್ಬು
**ಬಸ್ತ(ಕ)** – ಹೋತ
**ಬಸ್ತಪಾಲ** – ಆಡು ಮೇಯಿಸುವವನು
**ಬಹಲ(ಳ)** – ಅಧಿಕ
**ಬಹಿಃಕರಿಸು** – ಹೊರಹಾಕು
**ಬಹಿಃಪುರ** – ಊರ ಹೊರವಲಯ
**ಬಹಿಃಪುಷ್ಕರ** – ಚಾಚಿರುವ ಸೊಮಡಿಲು
**ಬಹಿತ್ರ** – (ಭೈತ್ರ) ಹಡಗು
**ಬಹಿರಂಗ** – ಹೊರಗಿನದು; ಹೊರಭಾಗ
**ಬಹಿರುದ್ಯಾನ** – ಊರ ಹೊರಗಿನ ಉದ್ಯಾನವನ
**ಬಹಿರ್ದೇಶ** – ಹೊರ ಪ್ರದೇಶ
**ಬಹಿರ್ದ್ವಾರ** – ಹೊರಗಿನ ಬಾಗಿಲು
**ಬಹಿರ್ಭಾಗ** – ಹೊರಗಿನ ಭಾಗ
**ಬಹಿರ್ಮಂಡಲ** – ಶತ್ರುರಾಜ್ಯ

**ಬಹಿರ್ಯಾನ** – (ಜೈನ) ಒಂದು ಗರ್ಭಾನ್ವಯಕ್ರಿಯೆ; ಮಗುವನ್ನು ಬಾಣಂತಿಮನೆಯಿಂದ ಹೊರಗೆ ಒಯ್ಯುವುದು; ನೋಡಿ, 'ಗರ್ಭಾನ್ವಯಕ್ರಿಯೆ'
**ಬಹಿರ್ಲಾಪಿ** – ಒಂದು ಬಗೆಯ ಪದ್ಯರಚನೆ
**ಬಹಿರ್ವನ** – ಬಹಿರುದ್ಯಾನ
**ಬಹಿಸ್ತಟ** – ಹೊರದಂಡೆ
**ಬಹುದ್ವಿಷ** – ಹೆಚ್ಚು ಮಂದಿ ಶತ್ರುಗಳುಳ್ಳವನು
**ಬಹುನೂತ್ನ** – ತೀರ ಹೊಸತಾದ
**ಬಹುರೂಪ** – ಅನೇಕ ಆಕೃತಿಗಳುಳ್ಳ
**ಬಹುರೂಪಿಣಿ** – (ಜೈನ) ಬಯಸಿದ ರೂಪ ಧರಿಸುವ ಒಂದು ಮಾಯಾವಿದ್ಯೆ
**ಬಹುಲ(ಳ)** – ತಿಂಗಳಿನ ಎರಡನೆಯ ಅರ್ಧಭಾಗ; ಕೃತ್ತಿಕಾ ನಕ್ಷತ್ರ
**ಬಹುಲತೆ** – ಹೆಚ್ಚಾಗಿರುವುದು
**ಬಹುಲತ್ವ** – ಬಹುಲತೆ
**ಬಹುಲಿಮ** – ಸಮೃದ್ಧವಾದ
**ಬಹುಶ್ರುತ** – ನಾನಾ ಶಾಸ್ತ್ರಗಳನ್ನು ತಿಳಿದ ಪಂಡಿತ
**ಬಹುಳಗ್ರಹಣ** – ವಿಸ್ತಾರವಾದ ಅರ್ಥ ತಿಳಿದುಕೊಳ್ಳುವುದು
**ಬಹುಳವೃತ್ತಿ** – ಬಹುಲತೆ
**ಬಹುಳಸ್ಥಿತಿ** – ಬಹುಲತೆ
**ಬಹ್ವಾರಂಭಪ(ಪಾ)ರಿಗ್ರಹ** – (ಜೈನ) ಪಂಚಮಹಾಪಾತಕಗಳಲ್ಲಿ ಒಂದು, ತುಂಬ ಪ್ರಯತ್ನದಿಂದ ಹಣ ಸಂಪಾದಿಸುವುದು
**ಬಳಕೆವಾತು** – ಆಡುಮಾತು
**ಬಳಗ** – ಗುಂಪು; ದಟ್ಟಣೆ; ನೆಂಟರು
**ಬಳಗಜವಳ** – ನಂಟರಿಗೆ ಕೊಡುವ ವಸ್ತ್ರ
**ಬಳಪ** – ಬರೆಯುವ ಮೃದುವಾದ ಕಲ್ಲು
**ಬಳಪದೋಲೆ** – ಬಳಪದ ಕಲ್ಲಿನಿಂದ ಮಾಡಿದ ಕಿವಿಯ ಓಲೆ
**ಬಳಪಂಗೊಳ್** – ಬರೆಯಲು ತೊಡಗು
**ಬಳಪಂದೊಡೆ** – ಬಳಪದ ಕಲ್ಲಿನಿಂದ ಬಿಳಿ ಬಣ್ಣ ಹಾಕು
**ಬಳಬಳಕ್ಕೆ** – ಒಂದು ನೃತ್ಯಭಂಗಿ
**ಬಳಭಿಚ್ಚಾಪ** – ಬಳಭಿತ್+ಚಾಪ, ಇಂದ್ರಚಾಪ
**ಬಳಮರ್ದಿಕ್ಕು** – ಉಗ್ರ ಮಾದಕದ್ರವ್ಯ ಕುಡಿಸು
**ಬಳಮರ್ದುಕಾಱ** – ಉಗ್ರ ಮಾದಕವಸ್ತು ತಯಾರಕ
**ಬಳ(ಳಾ)ರಿ** – (ಭಟ್ಟಾರಿಕಾ) ಮಹಾಕಾಳಿ
**ಬಳಲ್ಮುಡಿ** – ಸೋರ್ಮುಡಿ, ಬಿಚ್ಚಿದ ಮುಡಿ
**ಬಳಲ್ಮೊಗ** – ದಣಿದ(ವನ) ಮುಖ
**ಬಳವಳ** – ಹೆಚ್ಚಾಗಿ
**ಬಳವಳಿಸು** – ಕಳವಳಿಸು
**ಬಳವಿ** – ಬೆಳವಣಿಗೆ; ವಿಸ್ತಾರ
**ಬಳವಿವಡೆ** – ಬೆಳವಣಿಗೆ ಹೊಂದು, ಹೆಚ್ಚು
**ಬಳಸಿಗ** – ಕುಪ್ಪಸಿಗ, ಯುದ್ಧಕವಚ ತೊಟ್ಟವನು
**ಬಳಸು** – ಸುತ್ತುಗಟ್ಟು; ಸುತ್ತುಮುತ್ತು; ಯುದ್ಧಕವಚ
**ಬಳಾರಿ** – ಮಹಾಕಾಳಿ
**ಬಳವಳ** – ಗಂಡನ ಮನೆಗೆ ಕಳಿಸುವಾಗ ತಂದೆ ಮಗಳಿಗೆ ಕೊಡುವ ಉಡುಗೊರೆ
**ಬಳೆ** – ವೃದ್ಧಿಗೊಳ್ಳು; ದೊಡ್ಡದಾಗು; (ವಲಯ) ಕಂಕಣ, ಕಡಗ
**ಬಳೆಗಾಱ** – ಬಳೆ ಮಾರುವವನು
**ಬಳೆಗೊಯ್** – ಕೊರಳು ಕತ್ತರಿಸು
**ಬಳೆಗೋ** – ಹತೋಟಿಗೆ ತರು
**ಬಳೆದೊಡು** – ಹೆಣ್ಣಿಗನಾಗು
**ಬಳೆಯಿಸು** – ವೃದ್ಧಿಗೊಳಿಸು
**ಬಳೆವೋಗು** – ಕೋಡಣಸು ಕಳಚಿ ಬೀಳು
**ಬಳ್ಕಸು** – ನಡುಗಿಸು
**ಬಳ್ಕು** – ತೊನೆದಾಡು; ನಡುಗು
**ಬಳ್ಕುವೋಗು** – ನಡುಗು
**ಬಳ್ವಳ** – ದೊಡ್ಡದಾಗುವುದು; ವಿಸ್ತಾರಗೊಳ್ಳುವುದು
**ಬಳ್ವಳಂ** – ಅತಿಶಯವಾಗಿ
**ಬಳ್ವಳನೆ** – ಅತಿಶಯತೆಯಿಂದ
**ಬಳ್ವಳಿಕೆ** – ಹೊಯ್ದಾಟ; ವಿಸ್ತಾರ; ಬೆಳವಣಿಗೆ
**ಬಳ್ವಳಿಕೆವಡು** – ವಿಸ್ತೃತಗೊಳ್ಳು
**ಬಳ್ವಳಿಸು** – ಬಳ್ವಳಿಕೆವಡು
**ಬಳ್ಳ** – ಧಾನ್ಯದ ಒಂದು ಅಳತೆ
**ಬಳ್ಳಂಗೊಱೆ** – ಬಳ್ಳದಂತೆ ಅಗಲವಾಗಿ ತೂತುಮಾಡು
**ಬಳ್ಳಿ** – ಲತೆ, ಹಬ್ಬುವ ಸಸ್ಯ
**ಬಳ್ಳಿವಳ್ಳಿ** – ಬಳ್ಳಿಯಂತೆ ಹಬ್ಬಿಕೊಂಡಿರುವುದು
**ಬಳ್ಳಿಕವುಂಗು** – ಬಳ್ಳಿಗಳು ಹಬ್ಬಿರುದ ಅಡಕೆಮರ
**ಬಳ್ಳಿಗಾವಣ** – ಬಳ್ಳಿಮಾಡ, ಲತಾಮಂಟಪ
**ಬಳ್ಳಿಮಾ(ವಾ)ಡ** – ಬಳ್ಳಿಯಿಂದ ರಚಿತವಾದ ಮಂಟಪ
**ಬಳ್ಳಿಮಾವು** – ಬಳ್ಳಿಗಳು ಹಬ್ಬಿರುದ ಮಾವಿನಮರ
**ಬಳ್ಳಿಮಿಂಚು** – ಬಳ್ಳಿಯಂತೆ ಹಬ್ಬುವ ಮಿಂಚು
**ಬಳ್ಳಿವರಿ** – ಬಳ್ಳಿಯ ರೀತಿ ಹಬ್ಬು
**ಬಳ್ಳಿವಾಯ್** – ಬಳ್ಳಿಯಂತೆ ಸಾಲಾಗಿ ಹೋಗು
**ಬಳ್ಳಿವೆರ್ಚು** – ಬಳ್ಳಿವರಿ
**ಬಳ್ಳಿವೆಳಗು** – ಬಳ್ಳಿಯಂತೆ ಹಬ್ಬಿದ ಕಾಂತಿ
**ಬಳ್ಳಿವೆಳ್ಪು** – ಬಳ್ಳಿವೆಳಗು
**ಬಳ್ಳು** – ನರಿ; ನರಿನಾಯಿಗಳ ಬಗುಳು
**ಬಳ್ಳುಗೆಡೆ** – ಬೊಗಳು
**ಬಱ(ಹು)**– ಕ್ಷಾಮ; ಕೊರತೆ
**ಬಱಬಱ** – ಪೂರ್ತಿ (ಬತ್ತಿಹೋಗು)
**ಬಱಗಾಲ** – ಕ್ಷಾಮಕಾಲ
**ಬಱಟಿ** – ಬೆರಣಿ; ಸಗಣಿ
**ಬಱಡಿ** – ಗೊಡ್ಡು ಹೆಂಗಸು
**ಬಱಡು** – ನಿಸ್ಸತ್ವವಾದದ್ದು; ಗೊಡ್ಡಾಕಳು
**ಬಱತ** – ಒಣಗಿದ

**ಬಱಪ** – ಬಯಕೆ
**ಬಱಸಿಡಿಲ್** – ಮೋಡವಿಲ್ಲದೆ ಹೊಡೆಯುವ ಸಿಡಿಲು; ಅನಿರೀಕ್ಷಿತ ಆಘಾತ
**ಬಱಿಕೆ(ಗೆ)ಯ್** – ಬರಿದುಮಾಡು, ನಾಶಗೊಳಿಸು
**ಬಱಿದು** – ಏನೂ ಇಲ್ಲದ್ದು; ಖಾಲಿಯಾದುದು
**ಬಱಿದೆ** – ಸುಮ್ಮನೆ; ವ್ಯರ್ಥವಾಗಿ
**ಬಱಿಮೆಯ್** – ನಗ್ನದೇಹ, ಬತ್ತಲೆ
**ಬಱಿಯೆಲ್** – ಪಕ್ಕೆಯ ಮೂಳೆ
**ಬಱಿವಾತುಗಾಱ** – ಪೊಳ್ಳು ಮಾತಾಡುವವನು
**ಬಱುಂಟು** – ಗೀಚು, ಕೆದಕು
**ಬಱುಗೆಯ್** – ಏನೂ ಇಲ್ಲದ ಕೈ
**ಬಱುದಲೆ** – ಬೋಳುತಲೆ
**ಬಱುದೊಡಂಬೆ** – ಬರಿಯ (ಹೂವಿನ) ತೊಟ್ಟು
**ಬಱುನುಡಿ** – ಬರಡು ಮಾತು
**ಬಱುಬ(ವ)** – ಏನೂ ಇಲ್ಲದವನು; ನಿರಾಯುಧ; ಬಡವ
**ಬಱುವಾತು** – ಬಱುನುಡಿ
**ಬಱುವಾತುಗುಟ್ಟು** – ಬರಡು ಮಾತಾಡು
**ಬಱೆ** – ಬತ್ತಿಹೋಗು
**ಬೞಕೆ** – ಉಪಯೋಗ; ನಿಕಟ ಪರಿಚಯ
**ಬೞಲ್** – ಒಣಗಿಹೋಗು; ದಣಿವುಗೊಳ್ಳು; ಜೋಲು
**ಬೞಲಿಸು** – ದಣಿಯಿಸು
**ಬೞಲ್ಕೆ** – ಆಯಾಸ
**ಬೞಲ್ಕೆಗಳೆ** – ದಣಿವು ಪರಿಹರಿಸು
**ಬೞಲ್ಕೆವೋಗು** – ದಣಿವುಗೊಳ್ಳು
**ಬೞಲ್ಚು** – ಬೞಲಿಸು
**ಬೞಲ್ಮುಡಿ** – ಇಳಿಬಿದ್ದ ಕೇಶರಾಶಿ
**ಬೞಸು** – ಉಪಯೋಗಿಸು; ಭೋಗಿಸು; ಭೋಗ
**ಬೞಿ** – ಒರೆಸು; ಗುಡಿಸು; ಲೇಪನಮಾಡು; ಜಾಗ; ಸಮೀಪ; ಹಿಂದುಗಡೆ; ಪೀಳಿಗೆ; ಆಹ್ವಾನ; ಸಂದೇಶವಾಹಕ
**ಬೞಿಕ(ಕ್ಕ)(ಂ)** – ಆನಂತರ
**ಬೞಿಕೆ(ಕ್ಕೆ)** – ಬೞಿಕ(ಕ್ಕ)(ಂ)
**ಬೞಿಗಳಪು** – ಹಿಂದೆಯೇ ಕಳುಹಿಸು
**ಬೞಿಗೊರಲ್** – ಹಕ್ಕಿಗಳ ಗಂಟಲ ಇಳಿಜಾರು ಭಾಗ
**ಬೞಿಗೊಳ್** – ಹಿಂದೆ ಹೋಗು
**ಬೞಿದಪ್ಪು** – ದಾರಿ ತಪ್ಪು; ದೂರಗೊಳ್ಳು
**ಬೞಿನೀರ್** – ಅಭಿಷೇಕ ಮಾಡಿದ ನೀರು; ಸೂಳೆ ಕುಡಿಯುವ ವಿಟನ ಎಂಜಲು ನೀರು
**ಬೞಿನೀರ್ಗುಡಿ** – ವಿಟನ ಎಂಜಲು ನೀರು (ಸೂಳೆ) ಕುಡಿ
**ಬೞಿಯ** – ವಿಧೇಯ
**ಬೞಿಯಂ** – ಬೞಿಕ(ಕ್ಕ)(ಂ)
**ಬೞಿಯಟ್ಟು** – ಸಂದೇಶವಾಹಕನನ್ನು ಕಳಿಸು
**ಬೞಿವರ್** – ಸಮೀಪ ಸಾರು
**ಬೞಿವೞಿ** – ಹಿಂದುಹಿಂದೆಯೇ; ಹೆಣ್ಣುಮಕ್ಕಳಿಗೆ ಕೊಡುವ ಉಡುಗೊರೆ

**ಬೞಿವೞಿಗೊಡು** – (ತವರಿನವರು) ಹೆಣ್ಣುಮಗಳಿಗೆ ಉಡುಗೊರೆ ನೀಡು
**ಬೞಿವೞಿಗೊಳ್** – ಬೞಿವೞಿಯನ್ನು ಪಡೆ
**ಬೞಿವಿಡಿ** – ಹಿಂಬಾಲಿಸು
**ಬೞಿವಿಡು** – ದಾರಿ ಬಿಡು; ಅವಕಾಶ ಮಾಡಿಕೊಡು
**ಬೞಿವೋಗು** – ಮಾರ್ಗಾನುಸರಣೆ ಮಾಡು
**ಬೞಿಸಲ್** – ಅನುಗಮನ; ಸಮೀಪ ಹೋಗು
**ಬೞ್ಚು** – ಜಾರು
**ಬೞ್ದಿ** – ಜೀವಿಸಿದವನು; ಒಕ್ಕಲಾದವನು
**ಬೞ್ದು** – ಬರ್ದು, ಸಾಯಿ
**ಬೞ್ದುಂಕು** – ಬದುಕು; ಪಾರಾದವನು
**ಬಾ** – ಊದಿಕೊ; ಹೆಮ್ಮೆಸಂತೋಷಗಳಿಂದ ಉಬ್ಬು
**ಬಾಂಗಡಲ್** – ಆಕಾಶದ ನದಿ
**ಬಾಂಜಗುನೆ** – ಆಕಾಶದ ಯಮುನಾ ನದಿ
**ಬಾಂದೊಱೆ** – ಆಕಾಶದ ನದಿ
**ಬಾಂದೊಱೆದಲೆಯ** – ತಲೆಯಲ್ಲಿ ಗಂಗೆಯನ್ನು ಧರಿಸಿದವನು, ಶಿವ
**ಬಾಂದೊಱೆಯ ಮಗ** – ಭೀಷ್ಮ
**ಬಾಂದೊಱೆಯ ಸುತ** – ಬಾಂದೊಱೆಯ ಮಗ
**ಬಾಂಧವ** – ನಂಟ
**ಬಾಂಬ** – ಕುಂಬಾರ
**ಬಾಂಬಟ್ಟೆ** – ಬಾನ್+ಬಟ್ಟೆ, ಆಕಾಶ ಮಾರ್ಗ
**ಬಾಂಬರಿ** – ಬಾನ್+ಪರಿ, ಗಗನ ಸಂಚಾರ
**ಬಾಂಬಾವು** – ಬಾನ್+ಪಾವು, ಆಕಾಶದ ಹಾವು, ರಾಹು
**ಬಾಂಬೊೞಲ್** – ಆಕಾಶದ ಪಟ್ಟಣ
**ಬಾಂಬೊೞಲುರಿಕ** – ಆಕಾಶದ ಪಟ್ಟಣವನ್ನು ಸುಟ್ಟವನು, ಶಿವ
**ಬಾಂಬೊೞೆ** – ಬಾನ್+ಪೊೞೆ, ದೇವಗಂಗೆ
**ಬಾಗರಣಿಗ** – ವೈಯಾಕರಣಿ
**ಬಾಗಿಲ್** – ಬಾಗಿಲು, ದ್ವಾರ
**ಬಾಗಿಲ್ವಾಡ** – ಬಾಗಿಲ ಚೌಕಟ್ಟು; ಹೆಬ್ಬಾಗಿಲು
**ಬಾಗು** – ಡೊಂಕಾಗು; ಬಗ್ಗು; ಗದ್ದೆ; ಧ್ವನಿಯ ಬಳುಕು; ಬೇಯಿಸು
**ಬಾಗು(ಕು)ಳ(ಳ್)** – (ವ್ಯಾಕುಲ) ಚಿಂತೆ
**ಬಾಗು(ಕು)ಳ** – ಅತಿಯಾದ ಆಸೆ
**ಬಾಗೊತ್ತು** – ಬಾಗುವಂತೆ ಒತ್ತಿಹಿಡಿ
**ಬಾಚಿ** – ಮರ ಕೆತ್ತುವ ಸಾಧನ
**ಬಾಚಿಷು** – ಪಠಿಸು, ಓದು
**ಬಾಜನೆ** – (ವಾಚನ) ಪಠನ, ಓದುವಿಕೆ; ವಾದ್ಯ ನುಡಿಸುವಿಕೆ
**ಬಾಜಿಸು** – ವಾದ್ಯ ನುಡಿಸು
**ಬಾಡ** – (ವಾಟ) ಹಳ್ಳಿ
**ಬಾಡಗ** – (ವಾಟಕ) ತೋಟ
**ಬಾಡಗೆ** – (ಭಾಡಕ) ವಸ್ತುವಿನ ಉಪಯೋಗಕ್ಕೆ ಕೊಡುವ ಶುಲ್ಕ
**ಬಾಡವ** – ಕುದುರೆ; ಬಾಡಬಾಗ್ನಿ; ಬ್ರಾಹ್ಮಣ

**ಬಾಡವಾಗ್ನಿ** – ಸಮುದ್ರದೊಳಗಣ ಕಿಚ್ಚು
**ಬಾಡವಾನಳ** – ಬಾಡವಾಗ್ನಿ
**ಬಾಡಿಸು** – ಬಾಣಲಿಯಲ್ಲಿ ಹುರಿ; ಒಣಗಿಸು; ನಂಜಿಕೊ
**ಬಾಡು** – ಮಾಂಸ; ಕಾಂತಿಗುಂದು
**ಬಾಡುಂದಳರ್** – ಬಾಡಿಹೋದ ಚಿಗುರು
**ಬಾಣ** – ಶರ, ಅಸ್ತ್ರ; ನೀಲಿ ಗೋರಟೆ
**ಬಾಣತಿಸೂಳೆ** – ಚಿಕ್ಕ ಕೂಸಿರುವ ಸೂಳೆ
**ಬಾಣಧಿ** – ಬತ್ತಳಿಕೆ
**ಬಾಣಸ(ಸು)** – ಅಡಿಗೆ ಮನೆ
**ಬಾಣಸಿನ ಮನೆ** – ಬಾಣಸ(ಸು
**ಬಾಣಸುಗೆಯ್** – ಅಡಿಗೆ ಮಾಡು
**ಬಾಣಸಿಗ** – ಅಡಿಗೆಯವನು
**ಬಾಣಸಿಗಿತ್ತಿ** – ಅಡಿಗೆಯವಳು
**ಬಾಣಸಿಗೆ** – ಬಾಣಸಿಗಿತ್ತಿ
**ಬಾಣಹತಿ** – ಬಾಣದ ಏಟು
**ಬಾಣಾಸನ** – ಬಿಲ್ಲು
**ಬಾಣಿ** – (ವಾಣಿ) ಸರಸ್ವತಿ
**ಬಾತುಕೊಳ್** – ಸಂತೋಷದಿಂದ ಉಬ್ಬಿಹೋಗು
**ಬಾದಣ** – (ವಾತಾಯನ) ಗವಾಕ್ಷಿ
**ಬಾದರ** – ಸ್ಥೂಲ; (ಜೈನ) ಜೀವಗಳ ಹದಿಮೂರು ಪ್ರಕೃತಿಗಳಲ್ಲಿ ಒಂದು
**ಬಾದರಕೃಷ್ಟಿ** – (ಜೈನ) ಕ್ರೋಧ ಮಾನ ಮಾಯಾ ಲೋಭಗಳನ್ನು ಕಡಿಮೆ ಮಾಡುವುದು
**ಬಾದರ(ಸ್ವ)ರೂಪ** – (ಜೈನ) ಸ್ಥೂಲ ರೂಪ
**ಬಾದ(ವ)ಣ** – ಗವಾಕ್ಷಿ; ತೂತು
**ಬಾದವಣಂಬೋಗು** – ತೂತಾಗು
**ಬಾದು** – (ವಾದ) ಮಾತು
**ಬಾದುಗುಟ್ಟು** – ತರ್ಕಮಾಡು
**ಬಾದುಗೆಯ್** – ಬಾದುಗುಟ್ಟು
**ಬಾದುಂಬೆ** – ಬಾದುಬ್ಬೆ, ಒಂದು ದೇವತೆಯ ಹೆಸರು
**ಬಾಧೆ** – ನೋವು
**ಬಾನ್** – ಆಕಾಶ; ಮಣ್ಣಿನ ಪಾತ್ರೆ; ಕುಂಬಾರಿಕೆ; ಸಗಣಿಯ ಉಂಡೆ
**ಬಾನಂಗುಳ(ಗೆ)** – ಬೆರಣಿ; ನಕ್ಷತ್ರ
**ಬಾನಲ್** – ಧಾರೆ; ನೀರು ನಿಂತ ಗುಂಡಿ; ಮಸುಕು
**ಬಾನಲ್ಗೊಳ್** – ಕಾಂತಿಹೀನಗೊಳ್ಳು
**ಬಾನಲ್ವೊರೆ** – ನೀರ ಧಾರೆಯಿಂದ ಕೂಡಿರು
**ಬಾನಲ್ವರಿ** – ಧಾರೆಯಾಗಿ ಸುರಿ
**ಬಾನಾಡಿ** – ಟಿಟ್ಟಿಭ ಎಂಬ ಹಕ್ಕಿ
**ಬಾನುದ್ದಂ** – ಆಕಾಶದಷ್ಟು ಎತ್ತರ
**ಬಾನೆಡೆ** – ಆಕಾಶ
**ಬಾನ್ನವಿರ** – ಆಗಸದಲ್ಲೆಲ್ಲ ಕೂದಲಿರುವವನು, ಶಿವ
**ಬಾಪು(ಪ್ಪು)** – ಮೆಚ್ಚಿಗೆಯ ಉದ್ಗಾರ
**ಬಾಯ್** – ಬಾಯಿ; ಬಿರುಕು
**ಬಾಯಂಬಡಿ** – ದಬಾಯಿಸು
**ಬಾಯಂ ಬಿಡು** – ಹಲುಬು
**ಬಾಯ(ಯಿ)(ಗಿ)ನ** – ಕಾಣಿಕೆ
**ಬಾಯ ಬಿಯಗ** – ಮಾತಾಡುವ ನಿರ್ಬಂಧ
**ಬಾಯಟೆ** – ಬಾಯಿ ಸೋಲು; ಪ್ರಲಾಪಿಸು
**ಬಾಯಾರ್** – ಕೂಗಾಡು
**ಬಾಯಿನಂಗೊಡು** – ಕಾಣಿಕೆ ನೀಡು
**ಬಾಯಿನಂದೀವು** – ಕಾಣಿಕೆಯನ್ನು ತುಂಬು
**ಬಾಯೊಱೆ** – ಬಾಯಲ್ಲಿ ನೀರು ಒಸರು
**ಬಾಯ್ಕುಟ್ಟು** – ಹರಟೆ ಹೊಡೆ
**ಬಾಯ್ಕೇಳ್** – ವಿಧೇಯನಾಗಿರು
**ಬಾಯ್ಕೇಳಿಸು** – ವಶಪಡಿಸಿಕೊ
**ಬಾಯ್ಗಾಳೆಗ** – ಮಾತಿನ ಕಾಳಗ
**ಬಾಯ್ಗೂಟ** – ಚುಂಬನ
**ಬಾಯ್ಗೂಡು** – ಹರಿತಗೊಳಿಸು; ಚುಂಬಿಸು
**ಬಾಯ್ಗೆಡು** – ರುಚಿ ಕೆಡು
**ಬಾಯ್ಗೆಯ್** – ಬಾಯಿ ಮಾಡು, ಕೂಗಾಡು
**ಬಾಯ್ದಾರೆ** – ಹರಿತವಾದ ಅಲಗು
**ಬಾಯ್ಗೆವರ್** – ಮನಸ್ಸಿಗೆ ತೋಚು
**ಬಾಯ್ದೆಱೆ** – ಮಾತಾಡು; ಹಂಬಲಿಸು; ತುಟಿ
**ಬಾಯ್ಮೆಚ್ಚುಕ** – ಪ್ರೀತಿಭರದ ಉದ್ಗಾರ
**ಬಾಯ್ಮಾಡು** – ಕೂಗು; ಗದರು; ಪ್ರತಿಜ್ಞೆಮಾಡು
**ಬಾಯ್ವಸ** – ಉತ್ಕಟ ಆಸೆ
**ಬಾಯ್ವಾತು** – ಬಾಯಿ ಮಾತು, ಬರಿಯ ಮಾತು
**ಬಾಯ್ವಾಯ್** – ಚುಂಬನ
**ಬಾಯ್ವಿಡು** – ಬಾಯಿ ತೆಗೆ; ಮಾತನಾಡು; ಬೆರಗುಪಡು; ದೈನ್ಯದಿಂದಿರು
**ಬಾಯ್ವೂಸು** – – ಬಾಯ್+ಪೂಸು, ಬಾಯಿಗೆ ಸವರು–
**ಬಾಯ್ಸವಿ** – ರುಚಿಕರವಾದ(ದ್ದು)
**ಬಾರ್** – ಚರ್ಮ; ಚಾವಟಿ; ಚರ್ಮಸುಲಿ
**ಬಾರ** – (ದ್ವಾರ) ಬಾಗಿಲು
**ಬಾರವಟ್ಟಿಗೆ** – (ದ್ವಾರಪಟ್ಟಿಕಾ) ಬಾಗಿಲ ಚೌಕಟ್ಟು
**ಬಾರಸಿ** – ದ್ವಾದಶಿ
**ಬಾರಿ** – ಸರದಿ; ಕಾಮೋದ್ರೇಕ; ದವಡೆ; ಆಹುತಿ; ಖೆಡ್ಡಾ
**ಬಾರಿಕ** – ಸರದಿಯನ್ನು ತಿಳಿಸುವವನು
**ಬಾರಿಸು** – ತಪ್ಪಿಸು, ತಡೆ; ಪರಿಹರಿಸು; ಹೊಡೆ
**ಬಾರೆತ್ತು** – ಚರ್ಮ ಸುಲಿ
**ಬಾರೇಱ್** – ಬಾಸುಂಡೆ ಏಳು
**ಬಾರ್ಗುತ್ತ** – ಜೂಜಾಟ
**ಬಾರ್ಚು** – ತಲೆಗೂದಲು ತಿದ್ದು; ಒಟ್ಟುಗೂಡಿಸು
**ಬಾರ್ತೆ** – ಪ್ರಯೋಜನ
**ಬಾರ್ತೆಗೆ(ಗಿ)ಡು** – ಉಪಯುಕ್ತತೆಯನ್ನು ಕಳೆದುಕೊ
**ಬಾರ್ತೆಗೆಯ್** – ಗಮನಿಸು; ಲಕ್ಷಿಸು
**ಬಾಲ** – ಪ್ರಾಣಿಗಳ ಪುಚ್ಛ; ಎಳೆಯದಾದ; ಮರಿ
**ಬಾಲಕ(ಕಿ)** – ಹುಡುಗ(ಗಿ)
**ಬಾಲಕಾಲ** – ಎಳವೆಯ ಕಾಲ

**ಬಾಲ(ಳ)ಕೇಲಿ(ಳಿ)** – ಚಿಕ್ಕವರ ಆಟ
**ಬಾಲಗಚ್ಚೆ** – ಹಿಂದುಗಡೆಯ ಕಚ್ಚೆ
**ಬಾಲತನ** – ಬಾಲಕಾಲ
**ಬಾಲ(ಳ)ತೆ(ತ್ವ)** – ಬಾಲತನ
**ಬಾಲದುಡಿ(ಡು)ಗೆ** – ಮಕ್ಕಳ ಒಡವೆ
**ಬಾಲ(ಳ)ವಂದ** – (ಬಾಲಬಂಧ) ಮಕ್ಕಳ ಉಡುಪು
**ಬಾಲ(ಳ)ವತಿ** – ಬಾಣಂತಿ
**ಬಾಲವದ್ದೆ** – ಬಾಣಂತಿ(?)
**ಬಾಲವಧ** – ಮಕ್ಕಳ ಕೊಲೆ
**ಬಾಲಾ(ಳಾ)ತಪ** – ಬಾಲ +ಆತಪ, ಎಳೆ ಬಿಸಿಲು
**ಬಾಲಾ(ಳಾ)ರ್ಕ** – ಆಗ ತಾನೇ ಹುಟ್ಟಿದ ಸೂರ್ಯ
**ಬಾಲಾಶೋಕ** – ಎಳೆಯ ಅಶೋಕ
**ಬಾಲಿಕೆ** – ಬಾಲಕಿ, ಹುಡುಗಿ
**ಬಾಲೆ(ಳೆ)** – ಹುಡುಗಿ; ಯುವತಿ
**ಬಾವರಿ** – (ಜೈನ) ಮಧುಕರಯಾತ್ರೆ, ಚರಿಗೆಗೆ ಹೋಗುವುದು
**ಬಾವರಿವುಗು** – (ಜೈನ) ಚರಿಗೆಗೆ ಹೋಗು
**ಬಾವಿ** – (ವಾಪಿ) ನೀರಿಗಾಗಿ ತೋಡಿದ ಗುಂಡಿ
**ಬಾವಿದೋಡು** – ಬಾವಿಗಾಗಿ ಗುಂಡಿ ತೋಡು
**ಬಾಸಂತಿ** – (ವಾಸಂತಿ) ಒಂದು ಬಗೆಯ ಮಲ್ಲಿಗೆ
**ಬಾಸಣಿಗೆ** – ಮುಚ್ಚಳ
**ಬಾಸಣಿಸು** – ಮುಚ್ಚು
**ಬಾಸರ** – ಮೆರುಗು; ಆಕರ್ಷಕ ವಸ್ತ್ರ
**ಬಾಸಿಗ** – ಹೂ ಮಾಲೆ, ದಂಡೆ
**ಬಾಸಿಗಂಗಟ್ಟು** – ಹೂಮಾಲೆ ಕಟ್ಟು
**ಬಾಸು** – ಮಲವಿಸರ್ಜಿಸು
**ಬಾಸುಱ್** – ಬಾಸುಂಡೆ
**ಬಾಸೆ** – ರೋಮರಾಜಿ; (ಭಾಷಾ) ಮಾತು
**ಬಾಸೆಗೊಡು** – ಮಾತುಕೊಡು; ಆಶ್ವಾಸನೆ ನೀಡು
**ಬಾಹಟ** – ವೈದ್ಯವಿದ್ಯೆ; ಒಂದು ವೈದ್ಯಗ್ರಂಥ;
**ಬಾಹತ್ತರನಿಯೋಗ** – ರಾಜಸೇವೆಯ ಎಪ್ಪತ್ತೆರಡು ಮಂದಿ ಅಧಿಕಾರಿಗಳ ಗುಂಪು
**ಬಾಹಲ್ಯ** – ಹರಹು, ವಿಸ್ತಾರ
**ಬಾಹಾ** – ತೋಳು
**ಬಾಹಾಸ್ಫಾಲನ** – ತೋಳುಗಳನ್ನು ಚಪ್ಪರಿಸುವುದು
**ಬಾಹಾಸ್ಫಾಲನಂಗೆಯ್** – ತೋಳುಗಳನ್ನು ಚಪ್ಪರಿಸು
**ಬಾಹಿಗೆ** – ಹೊರಭಾಗ
**ಬಾಹಿತ್ಥ** – ಆನೆಯ ಹಣೆ
**ಬಾಹು** – ತೋಳು; ಬಾವು
**ಬಾಹುಗತ್ತರಿ** – ಕುಸ್ತಿಯ ಒಂದು ಪಟ್ಟು
**ಬಾಹುದಣೆ** – ಕುಸ್ತಿಯ ಒಂದು ಪಟ್ಟು
**ಬಾಹುಪೂರ(ಕ)(ಯ)** – ತೋಳಿನ ಆಭರಣ
**ಬಾಹುಬಲ** – ತೋಳ ಬಲ
**ಬಾಹುಬಲಿ** – ತೋಳ್ಬಲವುಳ್ಳವನು; ಗೊಮ್ಮಟದೇವ
**ಬಾಹುಮೂಲ** – ಕಂಕುಳು
**ಬಾಹುರಕ್ಕೆ** – ತೋಳ ಕವಚ, ಭುಜತ್ರಾಣ
**ಬಾಹುಲ್ಯ** – ಹರಹು, ಬಹುಳತೆ
**ಬಾಹುವಳನ** – ತೋಳುಗಳ ಚಲನೆ
**ಬಾಹುವಳಯ** – ಬಾಹುಪೂರ(ಕ)
**ಬಾಹುವಿಕ್ಷೇಪ** – ಬಾಹುವಳನ
**ಬಾಹ್ಯ** – ಹೊರಗಿನ
**ಬಾಹ್ಯತಪ** – (ಜೈನ) ದೇಹದದಂಡನೆಯ ತಪಸ್ಸು
**ಬಾಹ್ಯದರ್ಶನ** – ಹೊರಗಿನ ನೋಟ
**ಬಾಹ್ಯಪ್ರಪಂಚ** – ಹೊರ ಜಗತ್ತು; ಭೌತ ಜಗತ್ತು
**ಬಾಹ್ಯಾರ್ಥಸಿದ್ಧಿ** – ಬೇರೆಯ ಅರ್ಥವನ್ನು ಉಂಟುಮಾಡುವುದು
**ಬಹ್ಯಾಳಿ** – ವೈಹಾಳಿ, ಕುದುರೆ ಸವಾರಿಯ ಬಯಲು
**ಬಾಳ್** – ಕತ್ತಿ
**ಬಾಳ ನೀರ್** – ಕತ್ತಿಯ ಕೊಳಪು
**ಬಾಳ (ವ)ಬಣ್ಣ** – ಕತ್ತಿಯ ಬಣ್ಣ; ನೀಲಿ
**ಬಾಳ(ವೇರ್)** – ಬಾಳದ ಬೇರು, ಲಾಮಂಚ
**ಬಾಳಂತಿ** – ಬಾಣಂತಿ
**ಬಾಳಮತಿ** – ಹುಡುಗುಬುದ್ಧಿ(ಯವನು)
**ಬಾಳರ** – ಕತ್ತಿ ಮಸೆಯುವ ಅರ
**ಬಾಳವಚ್ಚ** – ಮಕ್ಕಳ ಉಡುಪು
**ಬಾಳವಿದ್ಯೆ** – ಎಳವೆಯಲ್ಲಿ ಕಲಿತ ವಿದ್ಯೆ
**ಬಾಳಾಗಮ** – ಕತ್ತಿಯ ವಿದ್ಯೆ
**ಬಾಳಿ** – ವಾಲಿ (ಇಂದ್ರನ ಮಗ)
**ಬಾಳುಡಿ** – ಕತ್ತಿಯ ತುಂಡು
**ಬಾಳೆ(ಮೀನ್)** – ಒಂದು ಬಗೆಯ ಮೀನು
**ಬಾಳೆಗಣ್** – ಮೀನಿನಾಕಾರದ ಕಣ್ಣು
**ಬಾಳ್ದುದಿ** – ಕತ್ತಿಯ ಮೊನೆ
**ಬಾಳ್ವಲ** – ಕತ್ತಿಯ ಬಲ
**ಬಾಳ್ವಿಡಿ** – ಕತ್ತಿ ಹಿಡಿ; ಯುದ್ಧಕ್ಕೆ ತೊಡಗು
**ಬಾಳ್ವೊಗರ್** – ಕತ್ತಿಯ ಕಾಂತಿ
**ಬಾಳ್ವೊಗೆ** – ಕತ್ತಿಗಳ ಘಟ್ಟನೆಯಿಂದ ಹೊಮ್ಮುವ ಹೊಗೆ
**ಬಾೞ್** – ಬದುಕು; ಜೀವಿಸು; ಸೀಳು
**ಬಾೞಿಸು** – ಬದುಕಿಸು; ಪೋಷಣೆ ಮಾಡು
**ಬಾೞುಕ** – ಸೀಳಿ ಒಣಗಿಸಿದ ತರಕಾರಿ
**ಬಾೞುಕಮಾಗು** – ಒಣಗಿಹೋಗು; ಸತ್ವಗುಂದು
**ಬಾೞೆ** – ಬಾಳೆಯ ಮರ
**ಬಾೞೆವಾೞೆ** – ಬದುಕಿರುವಾಗಲೇ
**ಬಾೞ್ಕೆ** – ಬದುಕು; ಆಯುಸ್ಸು
**ಬಾೞ್ಕೆಗೊಡು** – ಬದುಕಿಗೆಂದು ಉಂಬಳಿ ಕೊಡು
**ಬಾೞ್ಗಂಬ** – ಆನೆ ಕಟ್ಟುವ ಕಂಬ
**ಬಾೞ್ಗುದಿ** – ಪ್ರಾಣಸಂಕಟ
**ಬಾೞ್ಗೊಂಪ** – ಬಳ್ಳಿಮಾಡ
**ಬಾೞ್ತೆ** – ಬಾಳುವಿಕೆ, ಪ್ರಯೋಜನ; ಕೆಲಸ
**ಬಾೞ್ತೆಗೆಯ್** – ಆಸೆಪಡು; ಲೆಕ್ಕಿಸು
**ಬಾೞ್ದಲೆ** – ಜೀವಂತ ಸೆರೆಯಾಳು
**ಬಾೞ್ದಲೆಗೊಳ್** – ಜೀವಂತವಾಗಿ ಸೆರೆಹಿಡಿ
**ಬಾೞ್ದಲೆದರ್** – ಜೀವಂತ ಸೆರೆಯನ್ನು ಹಿಡಿದು ತಾ
**ಬಾೞ್ದಲೆವಿಡಿ** – ಬಾೞ್ದಲೆಗೊಳ್

**ಬಾೞ್ಕಿಣ** – ದೇಹದಿಂದ ಆಗ ತಾನೇ ಹೊಮ್ಮಿದ ಕೊಬ್ಬು
**ಬಾೞ್ಕಿಲ** – ಫಲವತ್ತಾದ ಭೂಮಿ
**ಬಾೞ್ಕೆಮ್ಮೆದಲ್** – ಬದುಕಿನ ಬಂಡವಾಳ; ಜೀವನಸರ್ವಸ್ವ; ತವರು
**ಬಾೞ್ಕೆಮ್ಮೆಸರ್** – ಗಟ್ಟಿ ಮೊಸರು
**ಬಾೞ್ವಂದರ್** – ಬಾೞ್+ಪಂದರ್, ಬಳ್ಳಿಮಾಡ
**ಬಾೞ್ವನೆ** – ತವರುಮನೆ
**ಬಾೞ್ವೂ** – ಹೊಸ ಹೂ
**ಬಾೞ್ವೆ** – ಬಾಳುವೆ, ಬದುಕು
**ಬಾೞ್ವೆಣ** – ಜೀವಂತ ಹೆಣ; ವ್ಯರ್ಥ ಜೀವ
**ಬಾೞ್ವೇಲಿ** – ಗಿಡಪೊದೆಗಳ ಬೇಲಿ
**ಬಿಂಕ** –ಆಡಂಬರ; ವಿಲಾಸ
**ಬಿಂಕಂಬೆಱು** – ವಿಲಾಸದಿಂದ ಕೂಡು
**ಬಿಂಗ** – ದುಂಬಿ
**ಬಿಂಗಾರ** – (ಭೃಂಗಾರ) ಕಾಗೆ ಬಂಗಾರ
**ಬಿಂಜ** – ವಿಂಧ್ಯಪರ್ವತ
**ಬಿಂಡಿವಾಳ** – ಈಟಿ
**ಬಿಂದ** – ಗುಂಪು
**ಬಿಂದು** – ಆನೆಯ ಹಣೆಯ ಮೇಲಣ ಮಚ್ಚೆ; ಅನುಸ್ವಾರ ಚಿಹ್ನೆ; ಚುಕ್ಕಿ; ತೊಟ್ಟು
**ಬಿಂದುಕ** – ಚಿತ್ರಗಳಿಗೆ ಬಣ್ಣ ಹಾಕುವ ಒಂದು ಕ್ರಮ
**ಬಿಂದುವಿಡು** – ತೊಟ್ಟಿಡು
**ಬಿಂಬ** – ಮಂಡಲ; ಗುಂಡಗಿರುವ; ತೊಂಡೆಯ ಹಣ್ಣು
**ಬಿಂಬಫಲ** – ತೊಂಡೆಯ ಹಣ್ಣು
**ಬಿಂಬಾಧರ(ರೆ)** – ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿ(ಯುಳ್ಳವಳು)
**ಬಿಂಬಿಸು** – ಪ್ರತಿರೂಪ ಉಂಟುಮಾಡು
**ಬಿಂಬೋಷ್ಠ(ಷ್ಠೆ)** – ಬಿಂಬಾಧರ(ರೆ)
**ಬಿಕ್ಕ** – ಆನೆಯ ಮರಿ
**ಬಿಕ್ಕಬಿಕ್ಕನೆ** – ಸರಕ್ಕನೆ
**ಬಿಕ್ಕಿರು(ರಿ)** – ಸೊಳ್ಳೆ
**ಬಿಕ್ಕು** – ಗಂಟಲು ಕಟ್ಟು; ಬಿಕ್ಕಳಿಸು; ಮಾಂಸ
**ಬಿಕ್ಕುಳಸು** – ಬಿಕ್ಕಳಿಸು; ಕಕ್ಕು, ವಾಂತಿಮಾಡು
**ಬಿಕ್ಕೆ** – ಭಿಕ್ಷೆ
**ಬಿಗಿ** – ಕಟ್ಟಿಹಾಕು; ಅಳವಡಿಸು; ಗಾಢವಾಗು; ಭದ್ರತೆ
**ಬಿಗಿಪು** – ಬಿಗಿತ; ಬಂಧನ
**ಬಿಗಿಮೊಗ** – ಬಿಗಿತುಕೊಂಡ ಮುಖ
**ಬಿಗಿಯಪ್ಪು** – ಗಾಢಾಲಿಂಗನ ಮಾಡು
**ಬಿಗುರ್** – ಹೆದರು, ಹೆದರಿಕೆ; ವಿರೋಧಿಸು
**ಬಿಚ್ಚಂದ(ಡ)** – ಹರ್ಮ್ಯ
**ಬಿಚ್ಚತ** – (ವಿಸ್ತೃತ) ವಿಸ್ತಾರ
**ಬಿಚ್ಚತಂ** – ನಿರ್ಬಂಧವಿಲ್ಲದೆ; ಅಧಿಕವಾಗಿ
**ಬಿಚ್ಚತಿಕೆ(ಕ್ಕೆ)** – ವಿಸ್ತಾರ; ಅತಿಶಯತೆ; ಧಾರಾಳತನ
**ಬಿಚ್ಚತಿಗ** – ಅತಿಶಯ ವ್ಯಕ್ತಿ
**ಬಿಚ್ಚನೆ** – ಅಗಲವಾಗಿ; ಥಟ್ಟನೆ
**ಬಿಚ್ಚನೆ ಬಿಡು** – ಅಗಲವಾಗಿ ತೆರೆದುಕೊ
**ಬಿಚ್ಚಳಸು** – ಹರಡು, ವಿಸ್ತರಿಸು; ಹೊಗಳು
**ಬಿಚ್ಚುವ** –ಸನ್ಯಾಸಿ
**ಬಿಜಯಂಗೆಯ್** – ಆಗಮಿಸು; ತೆರಳು
**ಬಿಜ್ಜಣಿಗೆ** – ಬೀಸಣಿಗೆ, ತಾಳವೃಂತ
**ಬಿಜ್ಜಲಬಿಟ್ಟೇಱು** – ದೊಡ್ಡ ಈಟಿ
**ಬಿಜ್ಜೆ** – (ವಿದ್ಯಾ) ಜ್ಞಾನ; (ಜೈನ) ದೇಹವನ್ನು ಬದಲುಮಾಡುವ ಶಕ್ತಿ, ವೈಕುರ್ವಣಶಕ್ತಿ
**ಬಿಜ್ಜೆಗ** – ವಿದ್ವಾಂಸ
**ಬಿಜ್ಜೆವಳ** – ಬಿಜ್ಜೆಗ
**ಬಿಜ್ಜೋದರಿ** – ವಿದ್ಯಾಧರಿ
**ಬಿಟ್ಟಿ** – (ವಿಷ್ಟಿ) ಪುಕ್ಕಟೆ ಕೆಲಸ; ಯುದ್ಧಕಾಲದಲ್ಲಿ ಮಾಡಬೇಕಾಗಿದ್ದ ಶೋಧನ, ವಹನ, ಅಪನಯನ ಎಂಬ ಮೂರು ಬಗೆಯ ಕೆಲಸಗಳು – ಇವು 'ಮೂವಿಟ್ಟಿ'ಗಳು–
**ಬಿಟ್ಟಿಬೆಸಕೆಯ್** – ಬಿಟ್ಟಿ ಕೆಲಸ ಮಾಡು
**ಬಿಟ್ಟಿವೊಱು** – ಬಿಟ್ಟಿಯಾಗಿ ಹೊರೆ ಹೊರು
**ಬಿಟ್ಟೇಱು** – ಈಟಿ
**ಬಿಟ್ಟೇಱುಕಾಱ** – ಈಟಿ ಹಿಡಿದವನು
**ಬಿಡಾಲ** – ಬೆಕ್ಕು
**ಬಿಡಿಸು** – ಬೇರೆ ಮಾಡು; ಬಿಡುಗಡೆಗೊಳಿಸು
**ಬಿಡು** – ಬಿಚ್ಚು; ತ್ಯಜಿಸು; ಹೂಹಣ್ಣು ಮುಂತಾದವು ಹುಟ್ಟಿಕೊ
**ಬಿಡುನುಡಿ** – ಬಿಚ್ಚುಮಾತು
**ಬಿಡುಮುಡಿ** – ಬಿಚ್ಚಿದ ತುರುಬು
**ಬಿಡುಮುತ್ತು** – ಒಂಟಿಯಾದ ಮುತ್ತು
**ಬಿಡುವಾಯ್** – ತೆರೆದ ಬಾಯಿ
**ಬಿಡುವು** – ಅಂತರ
**ಬಿಡುವೆಣ್** – ಸಖಿ
**ಬಿಡುವೊನ್** – ಬಿಡಿಯಾದ ಚಿನ್ನ(ದ) ನಾಣ್ಯ
**ಬಿಡೆ** – ಅತಿಶಯವಾಗಿ
**ಬಿಡೌಜ** – ಇಂದ್ರ
**ಬಿಣ್ಗುಂಡು** – ಲಂಗರು ಗುಂಡು
**ಬಿಣ್ಗೊಂಚಲ್** – ದೊಡ್ಡ ಗೊಂಚಲು
**ಬಿಣ್ಗೊಲೆ** – ದೊಡ್ಡ ಗೊನೆ
**ಬಿಣ್ಣಿತು(ತ್ತು)** – ಭಾರ(ವಾದುದು)
**ಬಿಣ್ಪರಿ** – ಬೇಟೆಯ ಜಾಗ
**ಬಿಣ್ಪು** – ಭಾರ; ಅತಿಶಯತೆ; ಹಿರಿಮೆ
**ಬಿಣ್ಪುಗೊಳ್** – ಅಧಿಕವಾಗು
**ಬಿಣ್ಪುವೆಱು** – ಭಾರವಾಗು
**ಬಿಣ್ಪೇಱು** – ತೋಕವಾಗಿರು
**ಬಿಣ್ಪೊಱೆ** – ತೂಕದ ಹೊರೆ
**ಬಿಣ್ಮಾಣಿಕ** – ದೊಡ್ಡ ಮಾಣಿಕ್ಯ
**ಬಿತ್ತರ** – (ವಿಸ್ತಾರ) ಹರಹು
**ಬಿತ್ತರಂಗೆಯ್** – ನಿರೂಪಿಸು; ಪೀಠವಾಗು

**ಬಿತ್ತರಂಬಡೆ** – ವಿಸ್ತಾರಗೊಳ್ಳು
**ಬಿತ್ತರಂಬೆಱು** – ಬಿತ್ತರಂಬಡೆ
**ಬಿತ್ತರಿ(ಗೆ)** – ಸಿಂಹಾಸನ
**ಬಿತ್ತರಿಕೆ** – ವಿಸ್ತಾರಿಕೆ
**ಬಿತ್ತರಿಸು** – ವಿಸ್ತರಿಸು
**ಬಿತ್ತು** – ಬೀಜ; ಬೀಜ ನೆಡು
**ಬಿತ್ತೆ(ತ್ತಿ)ಗ** – ಪ್ರೌಢ, ಪಂಡಿತ
**ಬಿದಿ** – (ವಿಧಿ) ದೈವ; ಸೃಷ್ಟಿಕರ್ತ; ಅದೃಷ್ಟ; ಆಹಾರ
**ಬಿದಿಗೆ** – (ದ್ವಿತೀಯೆ) ಚಾಂದ್ರಮಾನ ಪಕ್ಷದ ಎರಡನೆಯ ದಿನ
**ಬಿದಿಗೆಯ ಚಂದ್ರ** – ಬೆಳೆಯುವ ಚಂದ್ರ
**ಬಿದಿರ್** – ಕೊಡವು; ಚದುರಿಸು; ಬಿದಿರ ಗಳೆ
**ಬಿದಿರ್ಚು** – ಹರಡು; ಕಳಚು
**ಬಿದಿರ್ಮುತ್ತು** – ಬಿದಿರಿನಲ್ಲಿ ಸಿಕ್ಕುತ್ತದೆ ಎಂದು ನಂಬಲಾದ ಮುತ್ತು
**ಬಿದಿವಸ** – ವಿಧಿವಶ
**ಬಿದು** – (ವಿಧು) ಚಂದ್ರ; ಆನೆಯ ಕುಂಭಸ್ಥಳ
**ಬಿದುಗದಿರ್** – ಬೆಳುದಿಂಗಳು
**ಬಿದುಗಲ್** – ಚಂದ್ರಕಾಂತಶಿಲೆ
**ಬಿದುತಟ** – ಗಂಡಸ್ಥಳ
**ಬಿದ್ದಂಬರಿ** – ಬೀಳುವಂತೆ ಓಡು
**ಬಿದ್ದಂಬೀಱ್** – ಜೋರಾಗಿ ಬೀಳು
**ಬಿನದ** – ವಿನೋದ
**ಬಿನುಗು** – ಬಡವ; ಕ್ಷುದ್ರ
**ಬಿನ್ನ** – ಬಿನ್ನಹ
**ಬಿನ್ನಗೆ(ನೆ)** – ಸುಮ್ಮನೆ
**ಬಿನ್ನಣ** – (ವಿಜ್ಞಾನ) ಚಾತುರ್ಯ
**ಬಿನ್ನನೆ** – ವ್ಯಥೆಯಿಂದ, ಮೌನವಾಗಿ
**ಬಿನ್ನವಿರ್** – ಸುಮ್ಮನಿರು; ಖಿನ್ನವಾಗಿರು
**ಬಿನ್ನಪ** – (ವಿಜ್ಞಾಪನ) ಅರಿಕೆ
**ಬಿನ್ನಪಂಗೆಯ್** – ಅರಿಕೆ ಮಾಡು
**ಬಿನ್ನವಿಸು** – ಬಿನ್ನಪಂಗೆಯ್
**ಬಿನ್ನಾಣ** – ಬಿನ್ನಣ
**ಬಿಪ್ಪಂಡ** – ವ್ಯರ್ಥ
**ಬಿಪ್ಪಂಡಿಸು** – ದ್ವೇಷಿಸು
**ಬಿಬ್ಬೋಕ** – ಹುಸಿಮುನಿಸು
**ಬಿಭೀಷಿಕೆ** – ಅಂಜಿಕೆ
**ಬಿಮ್ಮುಗರೆ** – ಬಿಕೋ ಎನ್ನು
**ಬಿಯ** – (ವ್ಯಯ) ವೆಚ್ಚ; ದಾನ
**ಬಿಯಂಗೆಯ್** – ವ್ಯಯಮಾಡು; ದಾನಮಾಡು
**ಬಿಯಕಾರ್ತಿ** – ಬೆಲೆವೆಣ್ಣು
**ಬಿಯಕಾಱ** – ದುಂದುಗಾರ
**ಬಿಯಗ** – ಮದುವೆಯಿಂದಾದ ಸಂಬಂಧಿ; ಬೀಗ
**ಬಿಯದ** – (ವ್ಯಾಧ) ಬೇಟೆಗಾರ
**ಬಿಯಳ** – (ವ್ಯಾಳ) ಕಾಡಾನೆ
**ಬಿರಯಿ** – (ವಿರಹಿ) ಅಗಲಿದವ
**ಬಿರಯಿ** – ವಿರಹಿ
**ಬಿರಿ** – ಸೀಳು; ಅರಳು
**ಬಿರಿಕು** – ಬಿರುಕು, ಒಡಕು
**ಬಿರಿಗಳಿಕೆ** – ಬಿರಿ+ಕಳಿಕೆ, ಅರಳುವ ಮೊಗ್ಗು
**ಬಿರಿಮುಗುಳ್** – ಬಿರಿಗಳಿಕೆ
**ಬಿರಿಯಿಸು** – ಸೀಳುವಂತೆ ಮಾಡು; ಅರಳಿಸು
**ಬಿರಿವೂ** – ಅರಳಿದ ಹೂ
**ಬಿರುದ** – ಬಿರುದನ್ನು ಪಡೆದವನು; ಗೌರವಾನ್ವಿತ
**ಬಿರುದನಿಗಡ** – ಬಿರುದಿನ ಬಳೆ; ಪೆಂಡೆಯ
**ಬಿರುದಂಕ** – ಬಿರುದ
**ಬಿರುದು** – ಪ್ರಶಸ್ತಿ
**ಬಿರ್ಚು** – ಬಿಚ್ಚು, ಬೇರ್ಪಡಿಸು; ಬಿಡಿಸು; ಹರಡು
**ಬಿರ್ದ** – (ವೃದ್ಧಾ) ಮುದುಕಿ
**ಬಿರ್ದಿಕ್ಕು** – ಔತಣವಿಡು
**ಬಿರ್ದಿನ** – ಅತಿಥಿ
**ಬಿರ್ದು** – ಔತಣ
**ಬಿರ್ದುವರ್** – ಔತಣಕ್ಕೆ ಆಗಮಿಸು
**ಬಿರ್ದೂಟ** – ಔತಣದೂಟ
**ಬಿಲ್** – ವಿಕ್ರಯಮಾಡು; ಧನುಸ್ಸು; ಬಿಲ್ಗಾರರ ಸೈನ್ಯ
**ಬಿಲ** – ಡೊಗರು; ಗವಿ
**ಬಿಲಂಬುಗು** – ಡೊಗರನ್ನು ಪ್ರವೇಶಿಸು
**ಬಿಲ್ಗಾಳೆಗ** – ಬಿಲ್ಲುಗಳಿಂದ ಮಾಡುವ ಯುದ್ಧ
**ಬಿಲ್ಗಾಱ** – ಬಿಲ್ವಿದ್ಯಾ ನಿಪುಣ
**ಬಿಲ್ಗೊಳ್** – ಬಿಲ್ಲನ್ನು ಹಿಡಿ; ಯುದ್ಧಸನ್ನದ್ಧನಾಗು
**ಬಿಲ್ಜಾಣಿಕೆ** – ಬಿಲ್ವಿದ್ಯಾ ನೈಪುಣ್ಯ
**ಬಿಲ್ಬ(ಲ್ವ)ಲ್ಮೆ** – ಬಿಲ್ಜಾಣಿಕೆ
**ಬಿಲ್ಬಿನ್ನಣ** – ಬಿಲ್ಜಾಣಿಕೆ
**ಬಿಲ್ಲ** – (ಭಿಲ್ಲ) ಬೇಡ
**ಬಿಲ್ಲಜಾಣ** – ಬಿಲ್ವಿದ್ಯಾ ನಿಪುಣ
**ಬಿಲ್ಲಣಿ** – ಬಿಲ್ಗಾರ (ಸೈನ್ಯ)
**ಬಿಲ್ಲ ನಾರಿ** – ಬಿಲ್ಲಿನ ಹೆದೆ
**ಬಿಲ್ಲ ಬಲ್ಮೆ** – ಬಿಲ್ಜಾಣಿಕೆ
**ಬಿಲ್ಲ ಬಲ್ಲಹ** – ಬಿಲ್ಲಜಾಣ
**ಬಿಲ್ಲ ಬಿತ್ತೆಗ** – ಬಿಲ್ಲಜಾಣ
**ಬಿಲ್ಲ ಬಿನ್ನಣಿ** – ಬಿಲ್ಲಜಾಣ
**ಬಿಲ್ಲವ** – ಬಿಲ್ಲಜಾಣ
**ಬಿಲ್ಲಾಳ್** – ಬಿಲ್ಗಾರ
**ಬಿಲ್ಲುಂ ಬೆಱಗು** – ಕಕ್ಕಾವಿಕ್ಕಿ; ತಳಮಳ
**ಬಿಲ್ಲೆಱೆಯ** – ಬಿಲ್ವಿದ್ಯೆಯ ಗುರು; ದ್ರೋಣ
**ಬಿಲ್ಲೊವಜ** – ಬಿಲ್ಲೆಱೆಯ
**ಬಿಲ್ವಡೆ** – ಬಿಲ್ಲಣಿ
**ಬಿಲ್ವಿಡಿ** – ಬಿಲ್ಗೊಳ್
**ಬಿಲ್ವಿಡಿಯಿಸು** – ಬಿಲ್ಲು ಹಿಡಿಯುವಂತೆ ಮಾಡು
**ಬಿಲ್ವಿದ್ದೆ** – ಧನುರ್ವಿದ್ಯೆ
**ಬಿಲ್ವೀಸು** – ಬಿಲ್ಲನ್ನು ಬೀಸು
**ಬಿಲ್ವೊಯ್** – ಬಿಲ್ಲ ಹೆದೆ ಮಿಡಿದು ಠೇಂಕಾರಗೈ

**ಬಿಸ** – ವಿಷ
**ಬಿಸ(ಕಾಂಡ)** – ಕಮಲದ ದಂಟು, ನಾಳ
**ಬಿಸಜ** – ತಾವರೆ
**ಬಿಸಜಭವ** – ಕಮಲಸಂಭವ, ಬ್ರಹ್ಮ
**ಬಿಸನಾಳ** – ಬಿಸ(ಕಾಂಡ)
**ಬಿಸಪ್ರಸೂನ** – ತಾವರೆ
**ಬಿಸರುಹ** – ತಾವರೆ
**ಬಿಸಲತೆ** – ತಾವರೆಯ ಬಳ್ಳಿ
**ಬಿಸವಂದ** – ಆಶ್ಚರ್ಯ
**ಬಿಸವಲ್ಲರಿ** – ಬಿಸಲತೆ
**ಬಿಸಸನ (ವಿಶಸನ)** – ಕತ್ತಿ; ಕೊಲ್ಲುವುದು
**ಬಿಸಸಿತ** – ಕಮಲದ ದಂಟಿನಂತೆ ಬೆಳ್ಳಗಿರುವುದು
**ಬಿಸಸೂತ್ರ** – ತಾವರೆಯ ದಂಟಿನ ನಾರು
**ಬಿಸಿ** – ಶಾಖವುಳ್ಳದ್ದು
**ಬಿಸಿದು** – ಬಿಸಿಯಾದ(ದ್ದು)
**ಬಿಸಿಲ್** – ಸೂರ್ಯಕಿರಣ
**ಬಿಸಿಲುಗೊಳ್** – ಬಿಸಿಲಿನಂತೆ ಹೊಳೆ
**ಬಿಸಿಲ್ಗುದುರೆ** – ಮರೀಚಿಕೆ
**ಬಿಸು** – ಬೆಸುಗೆ ಹಾಕು
**ಬಿಸುಗಣ್ಗೊರವ** – ಉರಿಯುವ ಕಣ್ಣಿನ ಯತಿ, ಶಿವ
**ಬಿಸುಗಣ್ಣ** – ಹಣೆಗಣ್ಣ, ಶಿವ
**ಬಿಸುಗದಿರ** – ಬಿಸಿಯಾದ ಕಿರಣಗಳವನು, ಸೂರ್ಯ
**ಬಿಸುಗೆ** – ಬೆಸುಗೆ, ಸೇರಿಕೆ; ಅಂಬಾರಿ
**ಬಿಸುಡು** – ಬಿಸಾಕು, ಎಸೆ
**ಬಿಸುನೀರ್** – ಬಿಸಿನೀರು, ಬೆನ್ನೀರ್
**ಬಿಸುನೆತ್ತರ್** – ಬಿಸಿ ರಕ್ತ
**ಬಿಸುಪು(ೞ)** –ತಾಪ
**ಬಿಸುಪುಗಿಡಿಸು** – ಪ್ರಖರತೆಯನ್ನು ಕುಗ್ಗಿಸು
**ಬಿಸುಪೇಱು** – ಶಾಖ ಹೆಚ್ಚಿಸು
**ಬಿಸುವಳ** – ಒಟ್ಟಾಗುವಿಕೆ
**ಬಿಸುವಿಸಿಲ್** – ಪ್ರಖರ ಬಿಸಿಲು
**ಬಿಸುವುಡಿ** – ಬಿಸು(ಪು)+ಪುಡಿ, ಕಾದ ಮಣ್ಣು
**ಬಿಸುಉಸುರ್** – ಬಿಸಿಯುಸಿರು (ನಿಟ್ಟುಸಿರು) ಬಿಡು
**ಬಿಳ(ದು)** – ಬಿಳುಪು (ಬಣ್ಣದ)
**ಬಿಳಯರಳೆ** – ಬೆಳ್ಳನೆಯ ಹತ್ತಿ
**ಬಿಳಯಾಲಿ** – ಕಣ್ಣಗುಡ್ಡೆಯ ಬಿಳಿಪು ಭಾಗ
**ಬಿಱು** – ಬಿರುಸಾದ
**ಬಿಱುಗಾಳಿ** – ಚಂಡಮಾರುತ
**ಬಿಱುತು** – ಭಯಪಟ್ಟು
**ಬಿಱುಬಿದ್ದ** – ಏಟು ಬಿದ್ದು ಆದ ಗಾಯ
**ಬಿಱುಬಿದ್ದಂಬೋಗು** – ಏಟಿನಿಂದ ಗಾಯ ಹೊಂದು
**ಬಿಱುಬು** – ರಭಸ
**ಬಿಱುವರಿ** – ರಭಸವಾಗಿ ಓಡು
**ಬಿಱುವಳೆ** – ಜೋರಾಗಿ ಸುರಿಯುವ ಮಳೆ
**ಬಿಱುವಿಸಿಲ್** – ಪ್ರಖರ ಬಿಸಿಲು
**ಬಿಱುವೊಯಲ್** – ಬಲವಾದ ಹೊಡೆತ
**ಬಿಱುಸರಿ** – ಬಿಱುವಳೆ
**ಬಿೞ್ಕಿ** – ಬಿಕ್ಕೆ, ಒಂದು ಕಾಡುಮರದ ಕಾಯಿ
**ಬಿೞ್ತು** – ಬಿತ್ತು, ಬೀಜ
**ಬೀ** – ನಾಶವಾಗು
**ಬೀ(ಗು)(ಯು)** – ಮರಣಿಸು; ಕೊನೆಗೊಳ್ಳು; ಒಣಗಿಹೋಗು
**ಬೀ(ಯ)ಗಿತ್ತಿ** – ಬೀಗಿತಿ
**ಬೀಗು** – ಉಬ್ಬು; ಗರ್ವಿಸು
**ಬೀಗಿಬೆಳೆ** – ಸೊಂಪಾಗಿ ಬೆಳೆ
**ಬೀಜ** – ದಾಳಿಂಬೆ ಹಣ್ಣಿನ ಕಾಳು
**ಬೀಜನ** – ವೀಜನ, ಬಿಸಣಿಗೆ
**ಬೀಜಪೂರ** – ಈಳೆ ಜಾತಿಯ ಮರ, ಹಣ್ಣು
**ಬೀಜಭೋಜಿ** – ಬಿತ್ತನೆ ಕಾಳು ತಿನ್ನುವವನು
**ಬೀಜಾವಾಪ** – ಬಿತ್ತನೆ
**ಬೀಟೆ(ಡೆ)ಗಾಲ್** – ಬಿರಿದ ಕಾಲು
**ಬೀಟೆ(ಡೆ)ವರಿ** – ಬಿರುಕು ಬಿಡು
**ಬೀಡಂಬಿಡಿಸು** – ಬಿಡಾರ ಹೂಡುವಂತೆ ಮಾಡು
**ಬೀಡು** – ಬಿಡಾರ, ವಾಸಸ್ಥಾನ; ಬಿಡುವಿಕೆ
**ಬೀಡು(ಂ)ದಾಣ** – ಬಿಡಾರದ ಜಾಗ
**ಬೀಡುವಿಡು** – ಬಿಡಾರ ಮಾಡು; ಶಿಬಿರ ಹಾಕು
**ಬೀಡುವೇೞ್** – ಬಿಡಾರವನ್ನು ಸೂಚಿಸು
**ಬೀಡೆ** – ಬಿರುಕು; ಸೀಳಕ
**ಬೀಡೆತ್ತು** – ಶಿಬಿರವನ್ನು ತೆಗೆ
**ಬೀಡೆಯೊಡೆ** – ಬಿರುಕು ಬಿಡು
**ಬೀಡೆವಡು** – ಬಿರುಕುಂಟಾಗು
**ಬೀಡೆವಣ್** – ಬಿರಿದ ಹಣ್ಣು
**ಬೀಡೆವರಿ** – ಬಿರುಕುಂಟಾಗು
**ಬೀಡೆವೆಱು** – ಬೀಡೆಯೊಡೆ
**ಬೀಡೆವೋಗು** – ಬೀಡೆಯೊಡೆ
**ಬೀಣೆ** – ವೀಣೆ
**ಬೀಣೆಗಾಱ** – ವೀಣೆ ನುಡಿಸುವವನು
**ಬೀಣೆವಾಜಿಸು** – ವೀಣೆಯನ್ನು ನುಡಿಸು
**ಬೀತುದು** – ಮುಗಿದುಹೋದುದು
**ಬೀದಿ** – (ವೀಥೀ) ದಾರಿ
**ಬೀದಿಗೊಳ್** – ದಾರಿ ಹಿಡಿದು ಹೋಗು
**ಬೀದಿವರಿಯಿಸು** – ಹಬ್ಬುವಂತೆ ಮಾಡು
**ಬೀದಿವಾಡ** – ಬೀದಿಬದಿಯ ಹರ್ಮ್ಯ
**ಬೀದಿವಡು** – ಬೀದಿಯ ಹಾಡು
**ಬೀಭತ್ಸ** – ಜಿಗುಪ್ಸೆ ತರುವ
**ಬೀಭತ್ಸು** – ಭಯಂಕರವಾದ; ಅಸಹ್ಯಕರವಾದ(ದ್ದು)
**ಬೀಯ** – (ವ್ಯಯ) ವೆಚ್ಚ
**ಬೀರ** – ಶೂರ; ಶೌರ್ಯ; ವೀರಭದ್ರ
**ಬೀರಗಚ್ಚೆ** – ಯುದ್ಧಕಾಲದ ವೀರರ ಕಚ್ಚೆ; ವೀರಗಚ್ಚೆ
**ಬೀರರವ** – ವೀರಘೋಷ; ವೀರನ ಕೂಗು
**ಬೀರವಟ್ಟ** – ಸೇನಾಪತಿಯ ಪಟ್ಟ
**ಬೀರವ(ಮ)ದ್ದಳೆ** – ರಣವಾದ್ಯ
**ಬೀರವರ್ತಿ** – ಸೈನಿಕ

**ಬೀರವಸದನಂಗೆಯ್** – ವೀರನ ಅಲಂಕಾರ ಮಾಡಿಕೊ
**ಬೀರವಱಿ** – ರಣಹಲಗೆ ಎಂಬ ವಾದ್ಯ
**ಬೀರಸಂಕಲೆ** – (ವೀರಶೃಂಖಲೆ) ವೀರನ ಕಾಲ್ಗಡಗ
**ಬೀವು** – ಬೆನ್ನ ಹುರಿ; ಹಗ್ಗ
**ಬೀಸರ** – ವ್ಯರ್ಥ; ನಿಂದನೆ
**ಬೀಸಾಡು** – ಬಿಸಾಕು, ಎಸೆ
**ಬೀಸು** – ಬಿಸುಡು; ಬಲೆಯಂತಹುದನ್ನು ಹರಡು; ಗಾಳಿ ಹಾಕು; ದೊಣ್ಣೆಯಂತಹುದನ್ನು ಝುಳಪಿಸು; ಬೀಸುವಿಕೆ
**ಬೀಸುಂಬಲೆ** – ಹರಡುವ ಬಲೆ
**ಬೀಸುಗಲ್** – ಕವಣೆ ಕಲ್ಲು
**ಬೀಳ್ಗಿಡಹು** – ಬೀಳುವಂತೆ ಹೊಡೆ
**ಬೀಱು** – ಹೊರಸೂಸು; ಹಬ್ಬುವಂತೆ ಮಾಡು; ಪ್ರಕಟಪಡಿಸು; ಇಷ್ಟದಿಂದ ಕೊಡು; ದೀರ್ಘತೆ
**ಬೀೞ್** – ಕೆಳಕ್ಕೆ ಕುಸಿ; ಉದುರು; ಎರಗು; ಹಳಸು; ಸುರಿ
**ಬೀೞಲ್** – ಬಿಳಲು
**ಬೀೞಲ್ಗಱಿ** – ಬಿಳಲು ಇಳಿಬೀಳು
**ಬೀೞಲ್ಬಿಡು** – ಬಿಳಲುಬಿಡು
**ಬೀೞಲ್ವರಿ** – ಬೀೞಲ್ಬಿಡು
**ಬೀೞು** – ಪತನ
**ಬೀೞುಡುಗೆ** – ಉಟ್ಟು ಕಳಚಿದ ಬಟ್ಟೆ
**ಬೀೞುಡೆ** – ಬೀೞುಡುಗೆ
**ಬೀೞ್ಕೊಳಿಸು** – ಹೊರಡಲು ಅನುಮತಿ ಕೊಡು
**ಬೀೞ್ಗುಂಡು** – ಬಿೞ್ಗುಂಡು, ಲಂಗರು ಗುಂಡು
**ಬೀೞ್ಗೊಂಬು** – ನೇತಾಡುವ ರೆಂಬೆ
**ಬೀೞ್ಜೊಂಪ** – ನೇತಾಡುವ ಗೊಂಚಲು
**ಬೀೞ್ತರ್** – ಬಿದ್ದು ಹೋಗು; ಉದುರು
**ಬೀೞ್ನೆಲ** – ಬರಡು ಭೂಮಿ
**ಬುಂಭುಕ** – ಕುಚ್ಚು, ಗೊಂಚಲು
**ಬುಗುಂಟು** – ಬೋರೆ, ಬುಗುಟು
**ಬುಕ್ಕ** – ಹೃದಯ
**ಬುತ್ತಿ** – (ಭುಕ್ತಿ) ಪ್ರಯಾಣ ಕಾಲದಲ್ಲಿ ಕಟ್ಟಿಕೊಂಡ ಊಟ
**ಬುತ್ತಿಯಿಡು** – ಊಟ ಅರ್ಪಿಸು; ನೈವೇದ್ಯ ಮಾಡು
**ಬುದ್ಧಿ** – ಅರಿವು; (ಜೈನ) ಏಳು ಬಗೆಯ ಋದ್ಧಿಗಳಲ್ಲಿ ಒಂದು, ನೋಡಿ 'ಋದ್ಧಿ'
**ಬುದ್ಧಿಗಲಿಸು** – ಅರಿವುಂಟುಮಾಡು
**ಬುದ್ಧಿಗೆಡು** – ವಿವೇಚನೆಯನ್ನು ಕಳೆದುಕೊ
**ಬುದ್ಧಿವೇೞ್** – ಉಪದೇಶ ಮಾಡು
**ಬುದ್ಧಿಶಕ್ತಿ** – ಅರಿವಿನ ಬಲ
**ಬುದ್ಧಿಶಾಲಿ** – ಬುದ್ಧಿಯಿರುವವನು
**ಬುದ್ಬುದ** – ನೀರ ಗುಳ್ಳೆ
**ಬುಧ** – ಪಂಡಿತ; ದೇವತೆ; ನವಗ್ರಹಗಳಲ್ಲಿ ಒಂದು
**ಬುಭುಕ್ಷಿತ** – ಹಸಿದ
**ಬುರುಂಡೆ** – ಗುಂಡಗಿನ ಒಂದು ಸಿಹಿತಿಂಡಿ
**ಬೂತಟ್ಟು** – ಕುಚೋದ್ಯಕ್ಕೆ ದೂತನನ್ನು ಕಳಿಸು; ಸ್ಪರ್ಧೆಗೆ ಆಹ್ವಾನಿಸು
**ಬೂತಾಟ** – ಪಿಶಾಚಿಯ ಆಟ; ಕಪಟ, ತೋರಿಕೆ
**ಬೂತು** – (ಭೂತ) ಪಿಶಾಚಿ; ಕುಚೋದ್ಯ; ದರಿದ್ರ; ವಂಚಕ
**ಬೂತುಗೊಳ್** – ಪಿಶಾಚಿ ಮೆಟ್ಟು; ಆವೇಶಗೊಳ್ಳು
**ಬೂತುತನ** – ಸೋಗು
**ಬೂತುತಪ** – ಸೋಗಿನ ತಪಸ್ಸು
**ಬೂದವೇಱು** – ಬೂದಿಬಣ್ಣವನ್ನು ಹೊಂದು
**ಬೂದಿವೂಸು** – ವಿಭೂತಿ ಧರಿಸು; ಬೂದಿ ಬಳಿದುಕೊ
**ಬೂವ** – (ಭೂಮ) ಮದುವೆಯಯಲ್ಲಿ ನವದಂಪತಿಗಳು ಜೊತೆಗೆ ಮಾಡುವ ಊಟ
**ಬೃಂದ** – ಗುಂಪು
**ಬೃಂಹಿತ** – ಆನೆಯ ಘೀಳಿಡುವಿಕೆ
**ಬೃಂಹಿತಧ್ವನಿ** – ಆನೆಯ ಘೀಳಿನ ಶಬ್ದ
**ಬೃಹಂದಳೆ** – ಬೃಹನ್ನಳೆ; ಅಜ್ಞಾತವಾಸ ಕಾಲದಲ್ಲಿ ಅರ್ಜುನ ತಳೆದಿದ್ದ ನಪುಂಸಕನ ವೇಷ
**ಬೃಹಸ್ಪತಿಮತ** – ಚಾರ್ವಾಕಮತ; ನಿರೀಶ್ವರವಾದ
**ಬೆಂಕೆ** – ಉರಿ, ಬೆಂಕಿ
**ಬೆಂಕೆಗಣ್** – ಉರಿಯುವ ಕಣ್ಣು
**ಬೆಂಕೊ(ಗೊ)ಳ್** – ಹಿಂಬಾಲಿಸು, ಬೆನ್ನಟ್ಟು
**ಬೆಂಗೆವರ್** – ಬೆನ್ನ ಮೇಲೆ ಹತ್ತು
**ಬೆಂಗೆವಾಯ್** – ಹಾರಿ ಬೆನ್ನ ಮೇಲೆ ಕುಳಿತುಕೊ
**ಬೆಂಚೆ** – ಕುಂಟೆ; ನೀರು ನಿಂತ ಜಾಗ
**ಬೆಂಟೆ** – ಹಗ್ಗ
**ಬೆಂಡುನೆಗೆ** – ಬೆಂಡಾಗು; ಸತ್ವಗುಂದು
**ಬೆಂಡುಮಗುೞ್** – ಬೋರಲಾಗು
**ಬೆಂಡುಮರಲ್** – ಬೆಂಡಾಗು; ಜಡವಾಗು
**ಬೆಂಡೇೞ್** – ಬೆಂಡಿನಂತೆ ತೇಲು
**ಬೆಂದಗುಳ್** – ಬೆನ್+ತಗುಳ್, ಅಟ್ಟಿಸಿಕೊಂಡು ಹೋಗು
**ಬೆಂದೊವಲ್** – ಬೆನ್ನ ಧರ್ಮ
**ಬೆಂಬತ್ತು** – ಹಿಂಬಾಲಿಸು
**ಬೆಂಬರಂ** – ಬೆನ್ನಿನವರೆಗೆ
**ಬೆಂಬರಿ** – ಬೆನ್+ಪರಿ, ಬೆಂಬತ್ತು
**ಬೆಂಬಲ** – ಹಿಂದಿರುವ ಸೈನ್ಯ; ನೆರವು
**ಬೆಂಬಲಂಬಾಯ್** – ನೆರವಿಗೆ ಹೋಗು
**ಬೆಂಬಟೆ** – ಹಿಂಭಾಗ; ಅನುಸರಿಸು(ವುದು)
**ಬೆಂಬಟೆಗೊಳ್** – ಹಿಂಬಾಲಿಸು
**ಬೆಂಬಟೆವಿಡಿ** – ಬೆಂಬಟೆಗೊಳ್
**ಬೆಂಬಿಡಿ** – ಬೆಂಬಟೆಗೊಳ್
**ಬೆಂಬೇೞ್** – ಬೆನ್ನ ಮೇಲೆ ಬೀಳು; ಶರಣಾಗು; ಹೊಂಚುಹಾಕು
**ಬೆಂಬೊಗು** – ಬೆನ್+ಪೊಗು, ಹಿಂಬಾಲಿಸು

**ಬೆಕ್ಕರಿಸು** – ಮೇಕೆಯ ಧ್ವನಿಮಾಡು; ಗರ್ವಪಡು
**ಬೆಕ್ಕಸ** – ಆಶ್ಚರ್ಯ
**ಬೆಕ್ಕಸಂಬಡು** – ಬೆರಗಾಗು
**ಬೆಕ್ಕಸಂಬೆಱಗು** – ಮಹಾ ಆಶ್ಚರ್ಯ
**ಬೆಕ್ಕಸಮುಱು** – ಅಚ್ಚರಿ ಪಡು
**ಬೆಗಡು** – ಹೆದರು; ಆಶ್ಚರ್ಯ; ಭ್ರಾಂತಿ
**ಬೆಗಡುಗೊಳ್** – ಆಶ್ಚರ್ಯಪಡು
**ಬೆಗಱ್ಬು** – ಬೆರಗು
**ಬೆಚ್ಚನೆ** – ಬಿಸಿಯಾಗಿ
**ಬೆಚ್ಚರಂ** – ಶೀಘ್ರವಾಗಿ
**ಬೆಚ್ಚಳಸು** – ದಿಗ್ಭ್ರಮೆಗೊಳ್ಳು
**ಬೆಚ್ಚುನೀರ್** – ಹುಟ್ಟಿದಾಗ ಮಗು ಅಳಲೆಂದು
ಚಿಮುಕಿಸುವ ತಣ್ಣೀರು
**ಬೆಜ್ಜ** – ವೈದ್ಯ
**ಬೆಜ್ಜು** – ಚಿಕಿತ್ಸೆ ಮಾಡು
**ಬೆಜ್ಜೆಗೆಯ್** – ಬಡಾಯಿ ಕೊಚ್ಚು
**ಬೆಟ್ಟ** – ಗಿರಿ
**ಬೆಟ್ಟನೆ** – ಬಿರುಸಾಗಿ, ಒರಟಾಗಿ
**ಬೆಟ್ಟವೆಟ್ಟನೆ** – ಒರಟಾಗಿ
**ಬೆಟ್ಟ(ಬೇ)ವೇಸಗೆ** – ಬಿರು ಬೇಸಿಗೆ
**ಬೆಟ್ಟಿತಾ(ತ್ತಾ)ಗು** – ಕಠಿಣಗೊಳ್ಳು
**ಬೆಟ್ಟಿತು** – ಒರಟಾದುದು; ಕಷ್ಟಕರವಾದುದು
**ಬೆಟ್ಟಿದ** – ಕಠಿಣ, ಕ್ರೂರ
**ಬೆಟ್ಟಿಸು** – ಚುಚ್ಚು
**ಬೆಟ್ಟು** – ಇರಿ; ಬೆಟ್ಟ
**ಬೆಟ್ಟುಂಬೊೞೆ** – ಬೆಟ್ಟದ ಮೇಲಿಂದ ಹರಿದು
ಬರುವ ನದಿ, ಪ್ರವಾಹ
**ಬೆಟ್ಟುಗೂಂಟ** – ನೆಡುವ ಗೂಟ
**ಬೆಟ್ಟೇಱು** – ಬೆಟ್ಟ ಹತ್ತು
**ಬೆಡಂಗ** – ಚೆಲುವ
**ಬೆಡಂಗಡ್** – ಸೌಂದರ್ಯ ಪಡೆ
**ಬೆಡಂಗಿ** – ಸುಂದರಿ
**ಬೆಡಂಗು** – ಸೊಗಸು; ರಮ್ಯತೆ
**ಬೆಡಂಗುಗಿಡು** – ಚೆಲುವನ್ನು ಕಳೆದುಕೊ
**ಬೆಡಂಗುವಡೆ** – ಚೆಲುವನ್ನು ಹೊಂದು
**ಬೆಡಂಗುವೆಱು** – ಬೆಡಂಗುವಡೆ
**ಬೆಡಂಗೊಂದು** – ಬೆಡಂಗುವಡೆ
**ಬೆಣ್ಣೆ** – ದಧಿಸಾರ, ನವನೀತ
**ಬೆತೆ** – (ವ್ಯಥೆ) ಅಳಲು
**ಬೆದಂಡೆ(ಗಬ್ಬ)** – ಒಂದು ಕಾವ್ಯಪ್ರಕಾರ
**ಬೆದಕು** – ಹುಡುಕು; ಗೀರು
**ಬೆದಱಟ್ಟು** – ಹೆದರಿಸಿ ಓಡಿಸು
**ಬೆದಱಿಸು** – ಹೆದರಿಸು
**ಬೆದಱು** – ಹೆದರು; ಅಂಜಿಕೆ
**ಬೆದೆ** – ಬಿತ್ತನೆಗೆ ಯೋಗ್ಯವಾದ ಭೂಮಿ;
ಕಾಮೋದ್ರೇಕ

**ಬೆದೆಗೂಡಿಸು** – ಬಿತ್ತನೆಗೆ ಭೂಮಿಯನ್ನು
ಹದಗೊಳಿಸು
**ಬೆದೆಗೂಡು** – ಭೂಮಿ ಬಿತ್ತಿಗೆ ಹದಗೊಳ್ಳು
**ಬೆದೆವಾವು** – ತಳುಕುಹಾಕಿಕೊಂಡ ಹಾವು
**ಬೆದೆವೆರಸು** – ಕಾಮೋದ್ರೇಕಗೊಳ್ಳು
**ಬೆನ್** – ಬೆನ್ನು; ಹಿಂಭಾಗ
**ಬೆನ್ನಟ್ಟು** – ಹಿಂಬಾಲಿಸು
**ಬೆನ್ನನೆ** – ಹಿಂಭಾಗದಲ್ಲಿ
**ಬೆನ್ನನೆ ಬರ್** – ಹಿಂಬಾಲಿಸು
**ಬೆನ್ನಿಕ್ಕು** – ಹಿಂದುಗಡೆ ಇರಿಸು
**ಬೆನ್ನೀ** – ಬೆನ್+ಈ, ಬೆನ್ನು ಕೊಡು,
ಪಲಾಯನಮಾಡು
**ಬೆನ್ನೀರ್** – ಬಿಸಿ ನೀರು
**ಬೆನ್ನೇಱು** – ಬೆನ್ನ ಮೇಲೆ ಹತ್ತು
**ಬೆಬ್ಬರ** – ಸೇರಿಕೊಳ್ಳುವುದು
**ಬೆಬ್ಬಳ(ಆ)ವೋಗು** – ಗಾಬರಿಗೊಳ್ಳು
**ಬೆಬ್ಬಳಸು** – ಬೆಬ್ಬಳ(ಳಿ)ವೋಗು
**ಬೆಮರ್** – ಬೆವರು; ಬೆವರು ಸೂಸು; ಹೆದರು
**ಬೆಮ್ಮರ** – ತೊಲೆ
**ಬೆರಕೆ** – ಮಿಶ್ರಣ; ಕೂಟ
**ಬೆರಕೆವಣ್ಣ** – ಮಿಶ್ರವರ್ಣ
**ಬೆರಕೆವಾಸಿಗ** – ವಿಧವಿಧವಾದ ಹೂಗಳ ಮಾಲೆ
**ಬೆರಗಱೆ** – ಉಪಾಯ ತಿಳಿ
**ಬೆರಗು** – ಉಪಾಯ
**ಬೆರಲ್(ಳ್)** – ಬೆರಳು
**ಬೆರಲಂ ಮಿಡಿಯಿಸು** – ಸೋಜಿಗಗೊಳಿಸು
**ಬೆರಲಚ್ಚು** – ಬೆರಳಿನ ಗುರುತು
**ಬೆರಲುಂಗುರ** – ಬೆರಳಲ್ಲಿ ಧರಿಸುವ ಉಂಗುರ
**ಬೆರಲೆತ್ತು** – ಮೇಲ್ಮೈ ತೋರಿಸು
**ಬೆರಲ್ಮಿಡಿ** – ಬೆರಳಿನಿಂದ ಸಂಜ್ಞೆ ಮಾಡು;
ಅಚ್ಚರಿಗೊಳ್ಳು
**ಬೆರಸು** – ಕೂಡಿ, ಜೊತೆಯಲ್ಲಿ
**ಬೆರೆ** – ಕುಡು, ಸೇರು
**ಬೆರೆ(ಯಿ)ಸು** – ಕೂಡಿಸು; ಸಂಭೋಗಿಸು
**ಬೆರ್ಕು(ಕ್ಕು)** – ಬೆಕ್ಕು, ಮಾರ್ಜಾಲ
**ಬೆರ್ಚಿಬೀಱು** – ಗಾಬರಿಗೊಳ್ಳು
**ಬೆರ್ಚಿಸು** – ಭಯಪಡಿಸು
**ಬೆರ್ಚು** – ಹೆದರು; ಹೆದರಿಸಲು ಕಟ್ಟುವ ಬೊಂಬೆ
**ಬೆರ್ಚುಗಟ್ಟು** – ಹೆದರಿಸಿ ಓಡಿಸಲು ಬೊಂಬೆ
ಕಟ್ಟು
**ಬೆಲಂಕು** – ಈಡಾಡು, ಬಿಸುಡು
**ಬೆಲೆ** – ಧಾರಣೆ; ವಸ್ತುವಿನ ವಿನಿಮಯ ಮೌಲ್ಯ
**ಬೆಲೆಗು(ಗೊ)ಡು** – ವಿನಿಮಯದ ಹಣ ಕೊಡು
**ಬೆಲೆಯಿಡಿಸು** – ಮೌಲ್ಯಮಾಪನ ಮಾಡಿಸು
**ಬೆಲೆವೆಣ್** – ಹಣಕ್ಕೆ ಸಿಗುವ ಹೆಣ್ಣು, ಸೂಳೆ
**ಬೆಲ್ಲ** – ಕಬ್ಬಿನ ರಸದಿಂದ ಮಾಡಿದ ಸಿಹಿ
ಘನಪದಾರ್ಥ

**ಬೆಲ್ಲವತ್ತ** – (ಬಿಲ್ವಪತ್ರ) ಶಿವನಿಗೆ ಪ್ರಿಯವಾದ ಪತ್ರೆ
**ಬೆಲ್ಲವಾತು** – ಸಿಹಿಯಾದ ಮಾತು; ನಟನೆಯ ನುಡಿ
**ಬೆಲ್ಲವೊತ್ತ** – ಹೊಗಳಿ ಕಾರ್ಯ
**ಸಾಧಿಸಿಕೊಳ್ಳುವವನು**–
**ಬೆವಸಾಯ** – (ವ್ಯವಸಾಯ) ಬೇಸಾಯ, ಕೃಷಿ; ಪ್ರಯತ್ನ
**ಬೆವಸಾಯಂಗೆಯ್** – ಪ್ರಯತ್ನ ಮಾಡು
**ಬೆಸ** – ಕೆಲಸ, ಕರ್ತವ್ಯ; ಎರಡರಿಂದ ಭಾಗವಾಗದ ಸಂಖ್ಯೆ
**ಬೆಸಂಬಡೆ** – ಅನುಜ್ಞೆ ಹೊಂದು
**ಬೆಸಂಬೇೞು** – ಬೆಸಂಬಡೆ
**ಬೆಸಂಬೇೞ್** – ಆಜ್ಞೆ ನೀಡು
**ಬೆಸಕೆಯ್** – ಸೇವೆಗೈ; ಹೇಳಿದ ಕೆಲಸ ಮಾಡು
**ಬೆಸಕೆಯ್ಸಿಕೊಳ್** – ಆಜ್ಞೆ ಪಾಲಿಸುವಂತೆ ಮಾಡು
**ಬೆಸಕೆಯ್ಸು** – ಅಧೀನಕ್ಕೆ ಬರುವಂತೆ ಮಾಡು
**ಬೆಸಕೇಳ್** – ಅನುಜ್ಞೆ ಬೇಡು; ಆಜ್ಞೆ ಪಾಲಿಸು
**ಬೆಸಗಱ** – ಆಜ್ಞೆ ಪಾಲಿಸುವವನು
**ಬೆಸಗೊಳ್** – ವಿಚಾರಿಸು
**ಬೆಸದಪ್ಪು** – ಆಜ್ಞೆ ಮೀರು
**ಬೆಸನ** – ಆಜ್ಞೆ
**ಬೆ(ಬ)ಸನ** – (ವ್ಯಸನ) ದುಃಖ; ಚಟ
**ಬೆ(ಬ)ಸನಿ(ಗ)** – ವ್ಯಸನ(ಚಟ)ಗಳಿಗೆ ಒಳಗಾದವನು
**ಬೆಸಮುಟ್ಟು** – ಕೆಲಸದ ಸಾಧನ
**ಬೆಸಲೆ** – ಬಾಣಂತಿ
**ಬೆಸವೇೞು** – ಆಜ್ಞೆಯನ್ನು ಪಾಲಿಸಲು ಹೊತ್ತುಕೊ
**ಬೆಸವೇೞ್** – ಬೆಸಂಬೇೞ್
**ಬೆಸಸು** – ಆಜ್ಞೆಮಾಡು; ಹೇಳು; ನಿರೂಪಿಸು
**ಬೆಸಳಗೆ** – ಬಾಣಲೆ
**ಬೆಸುಗೆಗಿಡು** – ಸಂಬಂಧ ಹಾಳಾಗು
**ಬೆಸೆ** – ಗರ್ವಿಸು; ಗರ್ವ; ಕೋಪಿಸಿಕೊ; ಹತ್ತಿ ಹಿಂಜುವ ಬಿಲ್ಲು
**ಬೆಸೆಕೋಲ್** – ಹತ್ತಿ ಹಿಂಜುವ ಬಿಲ್ಲು
**ಬೆಳ್** – ದಡ್ಡ; ದಡ್ಡತನ
**ಬೆಳ(೦)ತಿಗೆ** – ಹೊಳಪು; ಹೊಳೆಯುವ; ಶುಭ್ರವಾದ
**ಬೆಳ(೦)ತಿಗೆಗಣ್** – ಹೊಳೆಯುವ ಕಣ್ಣು
**ಬೆಳಕು** – ದೀಪ
**ಬೆಳಗಿಱಗಣ್** – ಹೊಳಪಿಲ್ಲದ ಕಣ್ಣು, ಕುರುಡುಗಣ್ಣು
**ಬೆಳಗು** – ಪ್ರಕಾಶಿಸು; ದೀಪ ಹೊತ್ತಿಸು; ಮೆರುಗುಗೊಳಿಸು; ಪ್ರಕಾಶ; ಹಗಲು
**ಬೆಳತಿಗೆ** – ಬಿಳಿಪು; ಪ್ರಕಾಶ; ಬಿಳಿಯ ಅಕ್ಕಿ
**ಬೆಳತುಗೆ ವಸದನ** – ಶುಭ್ರವಸನ, ಬಿಳಿಯ ಬಟ್ಟೆ
**ಬೆಳರ್** – ಬಿಳಿಚಿಕೊ; ಪ್ರಕಾಶ ಬೀರು; ಬಿಳುಪು
**ಬೆಳರ್ಗೆಂಪು** – ಹೊಳೆಯುವ ಕೆಂಪು(ಬಣ್ಣ)
**ಬೆಳರ್ಪು** – ಬಿಳಿಪು
**ಬೆಳರ್ಪೇೞು** – ಬಿಳಿಚಿಕೊ
**ಬೆಳರ್ಮಾಡ** – ಧವಳಾಗಾರ, ಬಿಳಿಯ ಬಣ್ಣದ ಮನೆ
**ಬೆಳರ್ವಡು** – ಬೆಳ್ಳಗಾಗು
**ಬೆಳರ್ವಣ್ಣ** – ಬಿಳಿ ಬಣ್ಣ
**ಬೆಳರ್ವಾಯ್** – ಬಿಳಿಚಿಕೊಂಡ ತುಟಿ
**ಬೆಳಸು** – ಫಸಲು, ಬೆಳೆ
**ಬೆಳೆ** – ಮನುಷ್ಯ–ಪ್ರಾಣಿ–ಸಸ್ಯಗಳ ವೃದ್ಧಿ; ಫಸಲು ನೀಡು
**ಬೆಳೆಗೆಯ್** – ಪೈರು ತುಂಬಿದ ಹೊಲ
**ಬೆಳೆನೆಲ** – ಸಾಗುವಳಿಯ ಭೂಮಿ
**ಬೆಳೆ(ಯಿ)ಸು** – ಗಿಡಮರಪ್ರಾಣಿಗಳನ್ನು ವೃದ್ಧಿಗೊಳಿಸು
**ಬೆಳೆವತ್ತರ್** – ಬೆಲೆ_ಮತ್ತರ್, ಸಾಗುವಳಿಯ ಭೂಮಿ
**ಬೆಳ್ಕನೆವೋಗು** – ದಿಗ್ಭ್ರಾಂತನಾಗು
**ಬೆಳ್ಕರಿಸು** – ಬಿಳಿಪಾಗು
**ಬೆಳ್ಕಾಡು** – ಬೆಂಗಾಡು, ಏನೂ ಇಲ್ಲದ ಪ್ರದೇಶ
**ಬೆ(ಬ)ಳ್ಕುೞು** – ಭಯಪಡು; ಭಯ
**ಬೆಳ್ಗಂಡ** – ಅಂಜುಕುಳಿ
**ಬೆಳ್ಗಡಲ್** – ಬಿಳಿಯ ಸಮುದ್ರಂ
**ಬೆಳ್ಗದಿರ್** – ಬಿಳಿಯ ಕಿರಣ, ಕಾಂತಿ; ಬೆಳುದಿಂಗಳು
**ಬೆಳ್ಗದಿರ** – ಬಿಳಿ ಕಿರಣಗಳನ್ನುಳ್ಳವನು, ಚಂದ್ರ
**ಬೆಳ್ಗರ್ಬು** – ಬಿಳಿಯ ಬಣ್ಣವುಳ್ಳ ಒಂದು ಬಗೆಯ ಕಬ್ಬು
**ಬೆಳ್ಗಱೆ** – ಬಿಳುಪಾದ ರೆಕ್ಕೆ; ಬಾಣದ ಬಿಳಿಪು ಹಿಂಗರಿ
**ಬೆಳ್ಗಱ್ತಿ** – ಬಿಳಿಯ ಕತ್ತೆ
**ಬೆಳ್ಗಾಡು** – ಬಿಳಿಯ (ಹೂಗಳಿಂದ ಕೂಡಿದ) ಕಾಡು
**ಬೆಳ್ಗುಂಬಳ** – ಬಿಳಿಯ (ಬೂದ) ಕುಂಬಳ
**ಬೆಳ್ಗೊಡೆ** – ಅಧಿಕಾರ ಸಂಕೇತವಾದ ಬಿಳಿಯ ಕೊಡೆ
**ಬೆಳ್ತನ** – ದಡ್ಡತನ
**ಬೆಳ್ದಾವರೆ** – ಬಿಳಿಯ ತಾವರೆ, ಪುಂಡರೀಕ
**ಬೆಳ್ದಿಂಗಳ್** – ಚಂದ್ರನ ಬೆಳಕು
**ಬೆಳ್ನವಿರ್** – ಬಿಳಿಯ (ನರೆತ) ಕೂದಲು
**ಬೆಳ್ನೊರೆ** – ಬಿಳಿಪು ನೊರೆ
**ಬೆಳ್ಪ** – ಬೆಪ್ಪ, ಮೂಢ
**ಬೆಳ್ಪಡರ್** – ಬೆಳ್ಳಗಾಗು
**ಬೆಳ್ಪಳ** – ಭಯ; ಅಲುಗಾಟ
**ಬೆಳ್ಪಳಂಬೋಗು** – ಭಯಗೊಳ್ಳು
**ಬೆಳ್ಪಳಸು** – ಬೆಳ್ಪಳಂಬೋಗು
**ಬೆಳ್ಪು** – ಬಿಳಿಪು; ಕಾಂತಿ; ಸ್ವಚ್ಛತೆ; ದಡ್ಡತನ
**ಬೆಳ್ಪುವೇೞು** – ಬಿಳುಪನ್ನು ಹೊಂದು
**ಬೆಳ್ಪೆಸೆ** – ಬೆಳ್ಳಗೆ ಹೊಳೆ
**ಬೆಳ್ಪೊೞಸು** – ಬಿಳಿ ಪಾರಿವಾಳ

**ಬೆಳ್ಮಡಿ** – ಬಿಳಿದಾದ ಬಟ್ಟೆ
**ಬೆಳ್ಮಾಡು** – ಬೆಪ್ಪನಾಗಿ ಮಾಡು; ಮರುಳುಗೊಳಿಸು
**ಬೆಳ್ಮಸೆ** – ಹೊಳೆಯುವಂತೆ ಮಸೆ, ಉಜ್ಜು
**ಬೆಳ್ಮಳಲ್** – ಬಿಳಿಯ ಮರಳು
**ಬೆಳ್ಮಿಗ** – ಸಾಧು ಪ್ರಾಣಿ; ಒಂದು ಬಗೆಯ ಜಿಂಕೆ
**ಬೆಳ್ಮುಗಿಲ್** – ಬಿಳಿ ಮೋಡ
**ಬೆಳ್ಮೃಗ** – ಬೆಳ್ಮಿಗ
**ಬೆಳ್ಮೊಗ** – ಬಿಳಿಚಿಕೊಂಡ ಮುಖ
**ಬೆಳ್ವ(ಳ್ಗ)ಕ್ಕಿ** – ಬಿಳಿಯ ಹಕ್ಕಿ, ಬಲಾಕ
**ಬೆಳ್ವಟ್ಟೆ** – ಬಿಳಿಯ ಬಟ್ಟೆ
**ಬೆಳ್ವಸದನ** – ಬೆಳ್+ಪಸದನ, ಬಿಳಿಯ ಉಡುಗೆ
**ಬೆಳ್ವಸದನಂಗೆಯ್** – ಬಿಳಿಯ ಉಡುಗೆ ಧರಿಸು
**ಬೆಳ್ವಸದನಂಗೊಳ್** – ಬೆಳ್ವಸದನಂಗೆಯ್
**ಬೆಳ್ವಳಸು** – ಬೆಳ್ಳಗೆ ಹೊಳೆ
**ಬೆಳ್ವಾಯ್** – ಬಿಳಿಚಿಕೊಂಡ ಬಾಯಿ
**ಬೆಳ್ವಿಟ್ಟು** – ಬೆಳ್+ಪಿಟ್ಟು, ಬಿಳಿಯ ಪುಡಿ
**ಬೆಳ್ವೆಳಗು** – ಹೊಳೆಯುವ ಬೆಳಕು
**ಬೆಳ್ವೊನಲ್** – ಬೆಳ್ಳಗೆ ಹರಿಯುವ ಪ್ರವಾಹ
**ಬೆಳ್ಸರಿ** – ಬೆಳ್ಳಗಿನ ಧಾರೆ, ಮಳೆ
**ಬೆಳ್ಸುಳಿ** – ಬಿಳಿಯ ಚಿಗುರು; ನೀರಿನ ಸುಳಿ
**ಬೆಳ್ಳ** – ದಡ್ಡ
**ಬೆಳ್ಳಂಗೆಡೆ** – ಪ್ರವಾಹದಂತೆ ಬೀಳು; ಬೆಳ್ಳಗೆ ಹರಡು
**ಬೆಳ್ಳಕ್ಕರಿಗ** – ಬೆಪ್ಪನಾದ ಪಂಡಿತ, ಕೂಚುಭಟ್ಟ
**ಬೆಳ್ಳಡಿ** – ಗೊರವ
**ಬೆಳ್ಳವಾಸ** – (ಜೈನ) ಚಳಿಗಾಲದಲ್ಲಿ ಪ್ರವಾಹದಲ್ಲಿ ನಿಂತು ಮಾಡುವ ತಪಸ್ಸು
**ಬೆಳ್ಳಾನೆ** – ಬಿಳಿಯ ಆನೆ; ಐರಾವತ
**ಬೆಳ್ಳಾರ** – ಬಿಳಿಯ ಮುತ್ತಿನ ಹಾರ
**ಬೆಳ್ಳಾಳ್** – ಅವಿವೇಕಿ, ಮೂರ್ಖ
**ಬೆಳ್ಳಿ** – ಶುಕ್ರಗ್ರಹ
**ಬೆಳ್ಳಿಯ ಬೆಟ್ಟ** – ಕೈಲಾಸಪರ್ವತ
**ಬೆಳ್ಳಿಯುತ್ತರಿಗೆ** – ಬೆಳ್ಳಿ ಜರಿಯ ಉತ್ತರೀಯ
**ಬೆಳ್ಳಿಗೊಡೆ** – ಬೆಳ್ಳಿ ಕೊಡೆ; ಬೆಳ್ಗೊಡೆ
**ಬೆಳ್ಳಿಲಿ** – ಬಿಳಿಯ ಇಲಿ
**ಬೆಳ್ಳಿವೆಟ್ಟ** – ಬೆಳ್ಳಿಯ ಬೆಟ್ಟ
**ಬೆಳ್ಳುಂಬಟ್ಟೆ** – ಬಿಳಿಯ ಬಟ್ಟೆ
**ಬೆಳ್ಳುರ್ಚೆ** – ಬುದ್ಧಿಯಿಲ್ಲದವನು
**ಬೆಳ್ಳುಳ್ಳಿ** – ಬಿಳಿಯ ಉಳ್ಳಿ, ಲಶುನ
**ಬೆಳ್ಳೆರಲೆ(ಳೆ)** – ಹೆದರಿದ ಜಿಂಕೆ; ಪುಕ್ಕಲ
**ಬೆೞಂಟು** – ಬೞುಂಟು, ಗೀಚು, ಗೆಬರು
**ಬೆೞಗಾಗು** – ವಿಸ್ಮಯಗೊಳ್ಳು
**ಬೆೞಗಾಗುಹ** – ಆಶ್ಚರ್ಯವಾಗುವಿಕೆ; ತಳಮಳ
**ಬೆೞಗು** – ವಿಸ್ಮಯ; ಸೆಡೆತ; ದಾಕ್ಷಿಣ್ಯ; ಗಾಬರಿ
**ಬೆೞಗುವಡು** – ಸ್ತಂಭಿತವಾಗು
**ಬೆ(ಬಿ)ೞಿ** – ಕಂಗೆಡು; ಅಹಂಕಾರಪಡು
**ಬೆೞಲ್** – ಒಂದು ಜಾತಿಯ ಮರ
**ಬೆೞ್ಕುೞ** – ಭಯಪಡು
**ಬೇ** – ಬೆಯ್, ಸುಡು; ಪಕ್ವಗೊಳ್ಳು; ಸಂಕಟಪಡು
**ಬೇ(ಂ)ಟ** – ಪ್ರಣಯ
**ಬೇಂಟಂಗೊಳ್** –ಪ್ರಣಯೋತ್ಸಾಹ ಹೊಂದು
**ಬೇ(ಂ)ಟಕಾ(ಗಾ)ೞ** – ಪ್ರಣಯಿ; ಕಾಮುಕ
**ಬೇ(ಂ)ಟೆ** – ಕಾಡುಪ್ರಾಣಿಗಳನ್ನು ಕೊಲ್ಲುವುದು
**ಬೇ(ಂ)ಟೆಗಾೞ** – ಬೇಟೆಯಾಡುವವನು
**ಬೇಂಟೆಯಾಡು** – ಪ್ರಾಣಿಗಳನ್ನು ಹಿಂಬಾಲಿಸಿ ಕೊಲ್ಲು
**ಬೇಂಟೆವೋಗು** – ಬೇಟೆಗಾಗಿ ಹೋಗು
**ಬೇಗ** – ಹೊತ್ತು; ತ್ವರೆ
**ಬೇಗಡವೆಸ** – ವೆಜ್ಜದ ಕೆಲಸ, ರತ್ನಕ್ಕೆ ರಂಧ್ರ ಕೊರೆಯುವ ಕೆಲಸ
**ಬೇಗುದಿ** – ತೀವ್ರ ಉಷ್ಣತೆ; ಸಂತಾಪ
**ಬೇಗುದಿಗೊಳ್** – ಬಿಸಿಲಿನಿಂದ ಬಳಲು; ಸಂತಾಪಗೊಳ್ಳು
**ಬೇಗೆ** – ಉರಿ, ಜ್ವಾಲೆ
**ಬೇಗೆಗಿರ್ಚು** – ಬೆಂಕಿಯ ಜ್ವಾಲೆ
**ಬೇಗೆಗೊಳ್** – ಬೆಂದುಹೋಗು
**ಬೇಗೆಮೊತ್ತು** – ಬೆಂಕಿ ಹೊತ್ತಿಕೊ
**ಬೇ(ಂ)ಟ** – ಅಭಿಲಾಷೆ, ಪ್ರಣಯ
**ಬೇಟಕಾರ್ತಿ** – ಪ್ರಣಯಿನಿ; ವೇಶ್ಯೆ
**ಬೇಟದಚ್ಚಿಗ** – ಪ್ರಣಯ ಕಾತರತೆ
**ಬೇಟವಾತು** – ಪ್ರಣಯದ ನುಡಿ
**ಬೇಡ** – ಬೇಟೆಯ ವೃತ್ತಿಯವನು; ನಿರಾಕರಣೆಯನ್ನು ಸೂಚಿಸುವ ಅವ್ಯಯ
**ಬೇಡಗೊಟ್ಟ** – ಬೇಡ+ಕೊಟ್ಟ, ಬೇಡರ ವಾಸಸ್ಥಳ
**ಬೇಡರಸ** – ಬೇಡರ ಮುಖ್ಯಸ್ಥ
**ಬೇಡವಟ್ಟ(ಟ್ಟು)** – ಬೇಡರ ಹಟ್ಟಿ
**ಬೇಡವಡೆ** – ಬೇಡರ ಗುಂಪು, ಸೈನ್ಯ
**ಬೇಡವಳ್ಳಿ** – ಬೇಡರು ವಾಸಿಸುವ ಹಳ್ಳಿ
**ಬೇಡವೆಂಡಿರ್** – ಬೇಡ ಹೆಣ್ಣುಗಳು
**ಬೇಡಿಕೊಳ್** – ಕೇಳಿಕೊ
**ಬೇಡಿತಿ** – ಬೇಡ ಹೆಂಗಸು
**ಬೇಡಿದಂ** – ಬೇಡಿದವನು, ಯಾಚಕ
**ಬೇಡು** – ಬಯಸು; ಯಾಚಿಸು; ಬೇಡಸಮೂಹ
**ಬೇತಾಳ** – ಪಿಶಾಚಿ
**ಬೇದನೆ** – (ವೇದನಾ) ಸಂಕಟ
**ಬೇನೆ** – ಸಂಕಟ; ನೋವು
**ಬೇರ್(ರು)** – ಮೂಲ; ಬುಡ
**ಬೇರುಗ** – ಮೂಲಿಕೆಗಳ ವ್ಯಾಪಾರಿ
**ಬೇರೂೞ** – ನೆಲೆನಿಲ್ಲು
**ಬೇರ್ಕೆಯ್** – ಬೇರ್ಪಡಿಸು
**ಬೇರ್ಗೊಳ್** – ಬೇರುಬಿಡು
**ಬೇರ್ನೆಲೆವೋಗು** – ಬೇರೆ ನೆಲೆಗೆ ಹೋಗು
**ಬೇರ್ಪಡು** – ಬೇರೆಯಾಗು; ಹರಡಿಕೊ
**ಬೇರ್ಮೆಯ್ವೊಗು** – ಬೇರೆಯ ಮೈಯನ್ನು ಪ್ರವೇಶಿಸು; ಪರಕಾಯಪ್ರವೇಶಮಾಡು

**ಬೇರ್ವೆರಸು** – ಬೇರಿನೊಡನೆ, ಬುಎಸಹಿತ
**ಬೇಲಿಯಿಕ್ಕು** – ಬೇಲಿಯನ್ನು ಹಾಕು
**ಬೇವಸ** – ಆಯಾಸ; ವ್ಯಥೆ
**ಬೇವಸಂಗೊಳ್** – ಆಯಾಸಗೊಳ್ಳು; ಚಿಂತೆ ಹೊಂದು
**ಬೇವಸಂಬಡು** – ತಳಮಳಿಸು
**ಬೇವಸಂಬಡೆ** – ಬೇವಸಂಬಡು
**ಬೇವು** – ಪಿಚುಮಂದ, ಅರಿಷ್ಟ
**ಬೇಸ(ಸಿ)ಗೆ(ಕಾಲ)** – (ವೈಶಾಖ) ಸೆಕೆಗಾಲ
**ಬೇಸರ್ನುಡಿ** – ಬೇಜಾರಿನಿಂದ ಕೂಡಿದ ಮಾತು
**ಬೇಸಱಿಸು** – ಬೇಸರವುಂಟುಮಾಡು
**ಬೇಸಱು** – ಬೇಜಾರು(ಪಟ್ಟುಕೊ); ಆಲಸ್ಯಪಡು
**ಬೇಸಱ್ಯುದ್ದು** – ಬೇಸರಪಟ್ಟುಕೊ
**ಬೇಳ್** – ಬೇಯಿಸು; ಹೋಮ ಮಾಡು; ದಿಗ್ಭ್ರಾಂತಿ
**ಬೇಳಂಬ** – ಮೋಸ; ಗಲಿಬಿಲಿ
**ಬೇಳಂಬಿಗ** – ನಕಲಿ, ಹಾಸ್ಯಗಾರ
**ಬೇಳಾಗು** – ಬೆಪ್ಪಾಗು
**ಬೇಳುನುಡಿ** – ಮರುಳುಗೊಳಿಸುವ ನುಡಿ
**ಬೇಳಿಗೆಯ್** – ಒಡೆ, ಬೇರ್ಪಡಿಸು
**ಬೇಳ್ಮಾಡು** – ಬೆಪ್ಪುಮಾಡು; ಮರುಳುಗೊಳಿಸು
**ಬೇಳ್ವೆ** – ಹೋಮ; ಮಾಟ
**ಬೇಳ್ವೇನೆ** – ಬೇಳ್+ಬೇನೆ, ಸಂತಾಪ
**ಬೇಱಿರಿಸು** – ಪ್ರತ್ಯೇಕವಾಗಿರಿಸು
**ಬೇಱೂರ್** – ಬೇರೆಯ ಊರು
**ಬೇಱ್** – ಪ್ರತ್ಯೇಕವಾದುದು; ಅನ್ಯ
**ಬೇಱ್ವೇಱ್** – ಬೇರೆ ಬೇರೆ; ಪ್ರತ್ಯೇಕ
**ಬೇಱೆ** – ಹೇಡಿ
**ಬೇಟ್ಪಿಂತು** – ಬೇಡುವಷ್ಟು
**ಬೇಟ್ಪಿನಿತು** – ಬೇಟ್ಪಿಂತು
**ಬೈಕ** – (ಭೈಕ್ಷ) ಭಿಕ್ಷೆ
**ಬೈಕಂಗುಳ** – ಭಿಕ್ಷುಕ
**ಬೈಕಂಗೊಳ್** – ಭಿಕ್ಷೆ ಬೇಡು
**ಬೈಕಂದಿರಿ** – ಭಿಕ್ಷೆಗಾಗು ಸುತ್ತು
**ಬೈಕೆಗೊಡು** – ಮರೆಯಾಗಿರಿಸು; ಒತ್ತೆ ಇಡು
**ಬೈಗು** – ಸಂಜೆ
**ಬೈಸಿಕೆ** – ಕುದುರೆ ಸವಾರಿ; ಹಾಡುವ ಒಂದು ಬಗೆ
**ಬೈತ್ರ** – (ವಹಿತ್ರ) ಹಡಗು
**ಬೊಂದರಿಗೆ** – ಮೇಲು ಹೊದಿಕೆ
**ಬೊಂದಿ** – ಶರೀರ
**ಬೊಂದುಕ** – ಚಿಂದಿ ತೊಡುವವನು
**ಬೊಕ್ಕಣ** – ಚೀಲ
**ಬೊಕ್ಕರಿಸು** – ಬೋರಲು ಬೀಳಿಸು
**ಬೊಜ(ಂ)ಗ** – (ಭುಜಂಗ) ವಿಟ
**ಬೊಜ(ಂ)ಗತನ** – ವಿಟನ ಸ್ವಭಾವ
**ಬೊಟ್ಟುವೋರಿಸು** – ಒಂದು ಆಟ
**ಬೊಡ್ಡಣಬಾವಿ** – (ವರ್ಧನವಾಪಿ) ತುಂಬಿದ ಬಾವಿ
**ಬೊಬ್ಬಿಡು** – ಹರ್ಷೋದ್ಗಾರ ಮಾಡು, ಕೂಗು
**ಬೊಬ್ಬಿಱೆ** – ಬೊಬ್ಬಿಡು
**ಬೊಬ್ಬುಳಿಕೆ** – ನೀರ ಗುಳ್ಳೆ
**ಬೊಬ್ಬುಳಿಸು** – ಗುಳ್ಳೆ ಉಂಟಾಗು
**ಬೊಮ್ಮಪಾಸ** – (ಬ್ರಹ್ಮಪಾಶ) ಬಿಡಿಸಲಾಗದ ಬಂಧ
**ಬೊಮ್ಮರಕ್ಕಸ** – (ಬ್ರಹ್ಮರಾಕ್ಷಸ) ಪಿಶಾಚಿಯಾದ ಬ್ರಾಹ್ಮಣ
**ಬೊಮ್ಮಹತಿ** – (ಬ್ರಹ್ಮಹತ್ಯಾ) ಪಂಚಮಹಾಪಾತಕಗಳಲ್ಲಿ ಒಂದಾದ ಬ್ರಾಹ್ಮಣನ ಕೊಲೆ
**ಬೊಲ್ಲವಣೆ** – ಚರ್ಮವಾದ್ಯವನ್ನು ನುಡಿಸುವ ವಿನ್ಯಾಸ
**ಬೋದನ** – ನೀರು ತುಂಬುವ ತೊಟ್ಟಿ
**ಬೋದಿಗೆ** – ಕಂಬದ ಮೇಲೆ ತೊಲೆಯಿಡಲು ಬಳಸುವ ಸಾಧನ
**ಬೋಧದೃಷ್ಟಿ** – ಜ್ಞಾನದೃಷ್ಟಿ
**ಬೋಧಾಲೋಕ** – ಜ್ಞಾನಿ
**ಬೋಧಾಳು** – ಜ್ಞಾನಿ, ಬುದ್ಧಿವಂತ
**ಬೋಧಿ** – ಅರಿವು, ಜ್ಞಾನ
**ಬೋಧಿಸು** – ಕಲಿಸು
**ಬೋನ** – (ಭೋಜನ) ಆಹಾರ; ಊಟ
**ಬೋನಪೇಳಿಗೆ** – ಬೋನ+ಪೇಳಿಗೆ, ಅಡುಗೆಯಿರುವ ಪಾತ್ರೆ
**ಬೋನಮಿಡು** – ಊಟವಿಕ್ಕು
**ಬೋನಮೆತ್ತು** – ಊಟ ಸಿದ್ಧಪಡಿಸು
**ಬೋರಗುದುರೆ** – ಕಂದುಬಣ್ಣದ ಕುದುರೆ
**ಬೋರಿಯ** – ನೆಲ ಹಾಸು
**ಬೋಸರಿಸು** – ಕಪಟ ಮರ್ಯಾದೆಮಾಡು
**ಬೋಳಯಿ(ವಿ)ಸು** – ಸಮಾಧಾನಪಡಿಸು
**ಬೋಱ್** – ಬಿಲ್ಲು
**ಬೋಱ** – ಸಾವು
**ಬೋಱದಲೆ** – ಕೂದಲು ತೆಗೆಸಿದ ತಲೆ
**ಬೋಱ(ಱು)ಮಂಡೆ** – ಬೋಱದಲೆ
**ಬೋಱಿಸು** – ತಲೆಗೂದಲು ತೆಗೆ
**ಬೋಱ್** – ಹರಿತವಾದ ಬಾಣ
**ಬೋಱ್ಯ** – ದೇವತೆ
**ಬೌವಳಸು** – ಕಲಕಲರವವುಂಟುಮಾಡು
**ಬ್ಯಾದಿ** – (ವ್ಯಾಧಿ) ರೋಗ
**ಬ್ರತ** – (ವ್ರತ) ನೋಂಪಿ
**ಬ್ರಹ್ಮಚರ್ಯ(ರ್ಯೆ)** – ಇಂದ್ರಿಯನಿಗ್ರಹ; (ಜೈನ) ಒಂದು ಗರ್ಭಾನ್ವಯಕ್ರಿಯೆ; ವ್ರತಗಳಲ್ಲಿ ಒಂದು
**ಬ್ರಹ್ಮತ್ತಿ** – ಅತ್ತಿಮರ
**ಬ್ರಹ್ಮಪುತ್ರ** – ಬ್ರಹ್ಮನ ಮಗ, ನಾರದ
**ಬ್ರಹ್ಮವೃಕ್ಷ** – ಅತ್ತಿಮರ; ಮುತ್ತುಗ
**ಬ್ರಹ್ಮಸೂತ್ರ** – ಹಾರ; ಜನಿವಾರ
**ಬ್ರಹ್ಮಸ್ವ** – ಬ್ರಾಹ್ಮಣನ ಸ್ವತ್ತು

**ಬ್ರಹ್ಮಹರಣ** – ಬ್ರಾಹ್ಮಣನ ಆಸ್ತಿಯನ್ನು ಲಪಟಾಯಿಸುವುದು
**ಬ್ರಹ್ಮಾಂಡ** – ವಿಶ್ವ
**ಬ್ರಹ್ಮೋತ್ತರ** – (ಜೈನ) ಹದಿನಾರು ಕಲ್ಪಗಳಲ್ಲಿ ಒಂದು
**ಬ್ರಾಹ್ಮ** – ಒಂದು ಮುಹೂರ್ತ
**ಬ್ರಾಹ್ಮಿ** – ಸರಸ್ವತಿ

## ಭ

**ಭಂಗ** – ಮುರಿಯುವುದು; ಸೋಲು; ಮಾನಹಾನಿ; ಅಲೆ; ಚಲನೆ
**ಭಂಗಂಬೆಱು** – ಅಲುಗಾಡು; ಅಸ್ಥಿರಗೊಳ್ಳು
**ಭಂಗವ್ಯಾಕುಳತ** – ಅಲೆಗಳಿಂದ ಅಸ್ತವ್ಯಸ್ತಗೊಂಡ
**ಭಂಗಿ** – ರೀತಿ; ಬಾಗು; ಒನಪು
**ಭಂಗಿಭಾಷಿತ** – ವಿಶಿಷ್ಟ ರೀತಿಯ ಮಾತು
**ಭಂಗಿವಡೆ** – ವಿಲಾಸವನ್ನು ಪಡೆ
**ಭಂಗಿವೆಱು** – ಭಂಗಿವಡೆ
**ಭಂಗಿಸು** – ಸೋಲಿಸು; ನಿಗ್ರಹಿಸು
**ಭಂಗುರ** – ಸುಲಭವಾಗಿ ಮುರಿದು ಹೋಗುವ; ಕ್ಷಣಿಕವಾದ
**ಭಂಗುರವೇಣಿ** – ಗುಂಗುರು ಕೂದಲುಳ್ಳವಳು
**ಭಂಜನ** – ನಾಶಗೊಳಿಸುವಿಕೆ; ಪೀಡಿಸುವಿಕೆ
**ಭಂಜಿತ** – ಅವಮಾನಿತಗೊಂಡ
**ಭಂಜಿಸು** – ಅವಮಾನಮಾಡು
**ಭಂಡ** – ಮಾರಾಟದ ಸರಕು
**ಭಂಡಾರ** –(ಭಾಂಡಾರ) ಖಜಾನೆ
**ಭಂಭಾ** – ಒಂದು ಚರ್ಮವಾದ್ಯ; ನಗಾರಿ
**ಭಂಭಾರವ** – ನಗಾರಿಯ ಸದ್ದು
**ಭಕ್ತಿ** – ಪೂಜ್ಯಭಾವನೆ
**ಭಕ್ತಿಪೂರ್ವಕ** – ಭಕ್ತಿಯಿಂದ ಕೂಡಿದ
**ಭಕ್ಷ್ಯ** – ತಿಂಡಿ
**ಭಗ** – ಕೀರ್ತಿ, ಯಶಸ್ಸು; ಸೂರ್ಯ; ಸ್ತ್ರೀಯೋನಿ
**ಭಗಂದರ** – ಒಂದು ಗುಹ್ಯರೋಗ
**ಭಗಣ** – ನಕ್ಷತ್ರಸಮೂಹ
**ಭಗಣೇಶ** – ನಕ್ಷತ್ರಸಮೂಹದ ಒಡೆಯ, ಚಂದ್ರ
**ಭಗವ** – ವೈಷ್ಣವ ಸನ್ಯಾಸಿ
**ಭಗವತಿ** – ದೇವತೆ
**ಭಗವತಿಯೇಱು** – ದೇವಿಯ ಯುದ್ಧ; ದೇವಿ ಮೈಮೇಲೆ ಬಂದಾಗ ಉಂಟಾಗುವ **ಉರುಬು**–
**ಭಗೀರಥ** – ಒಬ್ಬ ಚಕ್ರವರ್ತಿ
**ಭಗ್ನ** – ಮುರಿದುಹೋದ
**ಭಗ್ನಮನೋರಥ** – ಕೈಗೂಡದ ಆಸೆಯುಳ್ಳವನು
**ಭಗ್ನೋತ್ಸಾಹ** – ಉತ್ಸಾಹ ಕಳೆದುಕೊಂಡವನು
**ಭಟ** – ಸೈನಿಕ
**ಭಟಕಟಾಹ** – ಸೈನಿಕಸಮೂಹ
**ಭಟಸಂಘ** – ಭಟಕಟಾಹ
**ಭಟಾ(ಱಾ)ರ** – (ಭಟ್ಟಾರ) ಗುರು
**ಭಟ್ಟ** – ಪ<ಡಿತ
**ಭಟ್ಟಮಂಡಪ** – ವಿದ್ವತ್ಸಭೆ ಸೇರುವ ಜಾಗ, ಸಭಾಮಂದಿರ
**ಭಟ್ಟಾರಕ** – ಗೌರವಸೂಚಕ ವಿಶೇಷಣ
**ಭಟ್ಟಿಗೆಯ್** – ಭಟ್ಟಿಯಿಳಿಸು, ಬೇಯಿಸಿ ಕರಗಿಸಿ ಸೋಸು
**ಭಣತಿ** – ಮಾತು
**ಭಣಿತೆ** – ಭಣತಿ
**ಭದ್ರ** – ಉಪ್ಪರಿಗೆ; ಮಂಗಳಕರ; ಶುಭಲಕ್ಷಣದ ಆನೆ
**ಭದ್ರಗಜ** – ಶುಭಲಕ್ಷಣಗಳ ಆನೆ
**ಭದ್ರಬಾಹು** – (ಜೈನ) ಐದನೆಯ ಶ್ರುತಕೇವಲಿ; ಉತ್ತರಭಾರತದಿಂದ ಶ್ರವಣಬೆಳುಗೊಳಕ್ಕೆ ಚಂದ್ರಗುಪ್ತನ ಜೊತೆ ಬಂದನೆನ್ನಲಾದ ಮುನಿ
**ಭದ್ರಲಕ್ಷಣ** – ಶುಭಲಕ್ಷಣ; ಭದ್ರ ಎಂಬ ಜಾತಿಯ ಆನೆಯ ಲಕ್ಷಣಗಳು
**ಭದ್ರಶಾಲ** – (ಜೈನ) ಮೇರುಪರ್ವತದ ಮೇಲಿರುವ ನಾಲ್ಕು ವನಗಳಲ್ಲಿ ಒಂದು; ಉಳಿದ ಮೂರು: ನಂದನ, ಸೌಮನಸ, ಪಾಂಡುಕ
**ಭದ್ರಹಸ್ತಿ** – ಭದ್ರಗಜ
**ಭದ್ರಾಕಾರ** – ಶುಭಕರವಾದ ಆಕಾರ(ವುಳ್ಳವನು)
**ಭದ್ರಾಸನ** – ಸಿಂಹಾಸನ
**ಭದ್ರಿಸು** – ಕ್ಷೌರ ಮಾಡು
**ಭಯ** – ಅಂಜಿಕೆ
**ಭಯಂಗೊಳ್** – ಹೆದರು
**ಭಯಂಗೊಳಸು** – ಅಂಜಿಸು
**ಭಯಂದೋಱು** – ಭಯಂಗೊಳಿಸು
**ಭಯಂಬಡು** – ಭಯಂಗೊಳ್
**ಭಯಂಬೆರಸು** – ಭಯದಿಂದ ಕೂಡಿ(ರು)
**ಭಯರಸ(ಕ)** – ಹೆದರಿಕೆ
**ಭಯವಿಹ್ವಲ(ಳ)** – ಭಯದಿಂದ ತತ್ತರಿಸು
**ಭಯಸ್ಥೆ** – ಭೀತಳಾದವಳು
**ಭಯಾಕುಳ** – ಭಯದಿಂದ ಕೂಡಿದ
**ಭಯಾನಕ** – ನವರಸಗಳಲ್ಲಿ ಒಂದು
**ಭರಂಗೆಯ್** – ಕಾರ್ಯಭಾರವನ್ನು ಹೊರು; ತವಕಪಡು: ಆರ್ಭಟಿಸು
**ಭರಂಗೊಳ್** – ಚುರುಕಾಗು
**ಭರಣ** – ಹೊರುವುದು; ರಕ್ಷಣೆ
**ಭರಣಂಗೆಯ್** – ರಕ್ಷಿಸು
**ಭರತ** – ನಾಟ್ಯಶಾಸ್ತ್ರ; ಒಬ್ಬ ಚಕ್ರವರ್ತಿ; ಶ್ರೀರಾಮನ ತಮ್ಮ; (ಜೈನ) ಆದಿತೀರ್ಥಂಕರನ ಹಿರಿಯ ಮಗ, ತ್ರಿಷಷ್ಠಿಶಲಾಕಾಪುರುಷರಲ್ಲಿ ಒಬ್ಬ
**ಭರತಕುಲ** – ಪಾಂಡವ–ಕೌರವರ ರಾಜವಂಶ–
**ಭರತಕ್ಷೇತ್ರ** – ಭರತವರ್ಷ

**ಭರತಜ** – ಭರತವಂಶದಲ್ಲಿ ಜನಿಸಿದವನು
**ಭರತಪತಿ** – (ಜೈನ) ಆದಿತೀರ್ಥಂಕರರ ಹಿರಿಯ ಮಗ, ತ್ರಿಷಷ್ಠಿಶಲಾಕಾಪುರುಷರಲ್ಲಿ ಒಬ್ಬ
**ಭರತಮಂಡಲ** – ಭರತಕ್ಷೇತ್ರ
**ಭರತಾಗಮ** – ನಾಟ್ಯವಿದ್ಯೆ
**ಭರತಾನ್ವ(ನ್ವಾ)ಯ** – ಭರತವಂಶ
**ಭರತೋರ್ವಿ** – ಭರತಕ್ಷೇತ್ರ
**ಭರದ್ವಾಜ** – ಒಬ್ಬ ಋಷಿ
**ಭರಭಾರ** – ಪಾಲಿಸುವ ಜವಾಬ್ದಾರಿ
**ಭರವಶ** – ಅತಿಯಾದ ವೇಗ
**ಭರಿಕೆಯ್** – ಸೊಂಡಿಲು
**ಭರಿತ** – ತುಂಬಿರುವ
**ಭರ್ತಾರ** – ಗಂಡ
**ಭರ್ತಾರಿ** – ಹೆಂಡತಿ
**ಭರ್ತೃ** – ಗಂಡ
**ಭರ್ಮ** – ಚಿನ್ನ
**ಭರ್ಮಹರ್ಮ್ಯ** – ಚಿನ್ನದ ಮಂದಿರ
**ಭರ್ಮಾಚಲ** – ಚಿನ್ನದ ಬೆಟ್ಟ, ಮೇರು
**ಭಲ್ಲ** – ಅರ್ಧಚಂದ್ರಾಕಾರದ ಬಾಣ; ಕರಡಿ
**ಭಲ್ಲಾಸನ** – ಬಿಲ್ಲು
**ಭಲ್ಲೂಕ** – ಕರಡಿ
**ಭವ** – ಜೀವಿತಾವಧಿ; ಶಿವ; (ಜೈನ) ತೀರ್ಥಂಕರ
**ಭವಚತುಷ್ಟಯ** – (ಜೈನ) ದೇವ, ಮನುಷ್ಯ, ತಿರ್ಯಕ್, ನರಕ ಎಂಬ ನಾಲ್ಕು ಬಗೆಯ ಹುಟ್ಟುಗಳು
**ಭವತ್** – ನಿನ್ನ
**ಭವದೀಯ** – ನಿನಗೆ ಸಂಬಂಧಿಸಿದ
**ಭವನ** – ದೊಡ್ಡ ಮನೆ
**ಭವನಮಹತ್ತರದೇವ** – (ಜೈನ) ದೇವತೆಗಳ ಒಂದು ಪಂಗಡ
**ಭವನವಾಸಿಗ** – (ಜೈನ) ಭವನಮಹತ್ತರದೇವ
**ಭವನಾಂಗ** – (ಜೈನ) ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು
**ಭವನಾಂಗಭೂಜ** – ಭವನಾಂಗ
**ಭವನಾಮರ** – ಭವನವಾಸಿಗ
**ಭವಪರಿಣತಿ** – ಬೇರೆ ಬೇರೆ ರೂಪಗಳಲ್ಲು ಹುಟ್ಟುವುದು
**ಭವಪರಿಣಾಮ** – ಭವಪರಿಣತಿ
**ಭವಪರಿವರ್ತನ** – ಭವಪರಿಣತಿ
**ಭವಪಾಶ** – ಸಂಸಾರಬಂಧನ
**ಭವಪ್ರತ್ಯಯಜ್ಞಾನ** – (ಜೈನ) ಅವಧಿಜ್ಞಾನ; ಕಾಲದೇಶಗಳ ಎಲ್ಲೆಯನ್ನು ಮೀರಿ ಸಂಗತಿಗಳನ್ನು ಅರಿಯಬಲ್ಲ ಜ್ಞಾನ
**ಭವಬದ್ಧವೈರ** – ಜನ್ಮಾಂತರದ ದ್ವೇಷ
**ಭವಬಾಧೆ** – ಸಂಸಾರದ ಕಷ್ಟ
**ಭವಭೋಗ** – ಬದುಕಿನ ಸಂತೋಷ
**ಭವಭ್ರಮಣ** – ಜನ್ಮಗಳ ಚಕ್ರದಲ್ಲಿ ಸುತ್ತುವುದು
**ಭವಮಥನ** – ಜನ್ಮಗಳ ಕರ್ಮವನ್ನು ನಾಶಪಡಿಸುವುದು
**ಭವರಿಪು** – ಬದುಕಿನ ಕ್ಲೇಶಗಳನ್ನು ನಿವಾರಿಸುವವನು; (ಜೈನ) ಅರ್ಹಂತ
**ಭವವಧು** – ಪಾರ್ವತಿ
**ಭವಸ್ಮರಣೆ** – ಹಿಂದಿನ ಜನ್ಮದ ನೆನಪು; ಜಾತಿಸ್ಮರಣೆ
**ಭವಸ್ಮೃತಿ** – ಭವಸ್ಮರಣೆ
**ಭವಾಂತರ** – ಬೇರೆಯ ಹುಟ್ಟು
**ಭವಾದ್ರಿ** – ಶಿವನ ಬೆಟ್ಟ, ಕೈಲಾಸ
**ಭವಾನೀಧವ** – ಶಿವ
**ಭವಾಮಯ** – (ಭವ+ಆಮಯ) ಭವರೋಗ
**ಭವಾ(ವ)ಳಿ** – ಹುಟ್ಟುಸಾವುಗಳ ಪರಂಪರೆ
**ಭವಿತವ್ಯ** – ಮುಂದೆ ನಡೆಯುವುದು
**ಭವಿಷ್ಯತ್ತು** – ಮುಂದೆ ಸಂಭವಿಸುವ
**ಭವ್ಯ** – ಕ್ಷೇಮ; (ಜೈನ) ಮೋಕ್ಷಕ್ಕೆ ಅರ್ಹನಾದ ಜೀವ
**ಭವ್ಯಚಿಂತಾಮಣಿ** – ಭವ್ಯರ ಆಸೆಗಳನ್ನು ನೆರವೇರಿಸುವವನು
**ಭವ್ಯಜನ** – ಭವ್ಯರ ಸಮೂಹ
**ಭವ್ಯಜೀವ** – ಮೋಕ್ಷಾರ್ಹ ಜೀವ
**ಭವ್ಯತೆ(ತ್ವ)** – ಶ್ರೇಷ್ಠತೆ; (ಜೈನ) ಮೋಕ್ಷ ಪಡೆಯುವ ಅರ್ಹತೆ
**ಭವ್ಯಪ್ರಬೋಧಬೋಧಿ** – (ಜೈನ) ಬೋಧಿದುರ್ಲಭ ಎಂಬ ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು, ನೋಡಿ, 'ದ್ವಾದಶಾನುಪ್ರೇಕ್ಷೆ'
**ಭವ್ಯಾ(ವ)ಳಿ(ಳಿ)** – ಭವ್ಯರ ಸಮೂಹ
**ಭವ್ಯೇತರ** – ನೀಚ, ಕೆಟ್ಟವನು
**ಭವ್ಯೋತ್ಸವ** – (ಜೈನ) ಮೋಕ್ಷಾಪೇಕ್ಷಿಗಳ ಸಂತೋಷ
**ಭಸಿತ** – ಬೂದಿ; ವಿಭೂತಿ
**ಭಸಿತಪುಂಡ್ರಕ** – ಹಣೆಯ ಮೇಲಿನ ಮೂರೆಳೆ ವಿಭೂತಿ ಪಟ್ಟೆ
**ಭಸ್ತ್ರ(ಸ್ತ್ರೆ)** – ಚರ್ಮದ ಚೀಲ, ತಿತ್ತಿ
**ಭಸ್ತ್ರಿಕ** – ಭಸ್ತ್ರ; ಚರ್ಮದ ಜಲಪಾತ್ರೆ
**ಭಸ್ಮೋದ್ಧೂಳಿತ** – ಬೂದಿ (ವಿಭೂತಿ) ಬಳಿದುಕೊಂಡ
**ಭಾಂಕಾರ** – ಗದ್ದಲ
**ಭಾಂಡ** – ಪಾತ್ರೆ
**ಭಾಂಡಸಂಕರ** – ಪಾತ್ರೆಗಳನ್ನು ಮೈಲಿಗೆಗೊಳಿಸುವುದು
**ಭಾಂಡೀರ** – ಆಲದಂತಹ ಮರ
**ಭಾಗಧೇಯ** – ಪಾಲು; ಭಾಗ್ಯ; ಹಕ್ಕುದಾರ
**ಭಾಗಸ** – ಹಣ
**ಭಾಗಿನೇಯ** – ಭಗಿನಿ (ಅಕ್ಕ ಅಥವಾ ತಂಗಿ)ಯ **ಮಗ, ಸೋದರಳಿಯ–**
**ಭಾಜನ** – ಪಾತ್ರೆ

**ಭಾಜನಾಂಗ** – (ಜೈನ) ಒಂದು ಕಲ್ಪವೃಕ್ಷ; ಅಮೂಲ್ಯವಾದ ಪಾತ್ರೆಗಳನ್ನು ಕೊಡುವಂತದ್ದು, ನೋಡಿ, 'ಅಂಗಕಲ್ಪಕುಜ'
**ಭಾದ್ರಪದ** – ಚಾಂದ್ರಮಾನದ ಆರನೆಯ ತಿಂಗಳು
**ಭಾನಾಬಿ** – ತೇಜೋಕೇಂದ್ರ
**ಭಾನುತನೂಜ** – ಸೂರ್ಯನ ಮಗ, ಕರ್ಣ
**ಭಾನುಬಿಂಬ** – ಸೂರ್ಯಮಂಡಲ
**ಭಾನುಮತಿ** – ದುರ್ಯೋಧನನ ಹೆಂಡತಿ; ತೇಜೋವಂತೆ
**ಭಾನುರೋಚಿ** – ಸೂರ್ಯನ ತೇಜಸ್ಸು
**ಭಾಮಂಡಲ** – (ಜೈನ) ಪ್ರಭಾವಲಯ; ಅರ್ಹಂತನಿಗಿರುವ ಪ್ರಾತಿಹಾರ್ಯಗಳಲ್ಲಿ ಒಂದು
**ಭಾಮಿನೀವೇದ** – (ಜೈನ) ಸ್ತ್ರೀವೇದ, ಮೂರು ಬಗೆಯ ವೇದಗಳಲ್ಲಿ ಒಂದು
**ಭಾರತ** – ಭರತವಂಶಕ್ಕೆ ಸಂಬಂಧಪಟ್ಟ; ಮಹಾಭಾರತ ಕಾವ್ಯ; ಭಾರತ ಯುದ್ಧ; ಭಾರತಯುದ್ಧ ನಡೆದ ಪ್ರದೇಶ
**ಭಾರತಿ** – ಸರಸ್ವತಿ
**ಭಾರತಿಭಾಳನೇತ್ರ** – ವಿದ್ಯೆಯಲ್ಲಿ ಹಣೆಗಣ್ಣನಂತಹವನು
**ಭಾರತಿಕ** – ಭರತಮುನಿಗೆ ಸಂಬಂಧಿಸಿದ; ನರ್ತಕ
**ಭಾರತಿಕವಿದ್ಯೆ** – ನಟನಕಲೆ; ನಾಟ್ಯ
**ಭಾರದ್ವಾಜ** – ಭರದ್ವಾಜನ ಮಗ, ದ್ರೋಣ
**ಭಾರಾವತಾರ** – ಭಾರವನ್ನಿಳಿಸುವುದು
**ಭಾರ್ಗವ** – ಭೃಗುವಂಶಜ, ಪರಶುರಾಮ; ಬಿಲ್ಲುಗಾರ; ಬಾಣ
**ಭಾಲ(ಳ)** – ಹಣೆ
**ಭಾವ** – ಅಕ್ಕ ಅಥವಾ ತಂಗಿಯ ಗಂಡ; ಸೋದರಮಾವನ ಮಗ; ಅಭಿಪ್ರಾಯ; ಚಿತ್ತವೃತ್ತಿ; (ಜೈನ) ಔಪಶಾಮಿಕ, ಕ್ಷಾಯಿಕ, ಕ್ಷಯೋಪಶಮಿಕ, ಔದಯಿಕ, ಪಾರಿಣಾಮಿಕ ಎಂಬ ಐದು ಪ್ರಭೇದಗಳ ಜೀವನ ಪರಿಣಾಮ
**ಭಾವಕ** – ರಸಿಕ
**ಭಾವಕಿ** – ಚೆಲುವೆ
**ಭಾವಚೇಷ್ಟೆ** – ಭಾವನೆಗಳಿಗನುಗುಣವಾದ ಶಾರೀರಕ ಚೇಷ್ಟೆ
**ಭಾವಜ** – ಮನ್ಮಥ
**ಭಾವನ** –(ಜೈನ) ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಬಗೆ; ಭವನವಾಸಿ
**ಭಾವನಿರ್ದ್ವಂದ್ವ** – ಭಾವನೆಯಲ್ಲಿ ದ್ವಂದ್ವವಿಲ್ಲದ(ವನು); ಸಮಪ್ರಜ್ಞೆಯವನು
**ಭಾವನೆ** – ಅನುಸಂಧಾನ, ಧ್ಯಾನ
**ಭಾವಪರಿವರ್ತನ** – (ಜೈನ) ಜೀವಗಳ ಭವ ಬದಲಾಗುವುದು
**ಭಾವಭವ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ
**ಭಾವವಿದ** – ಇತರರ ಭಾವಗಳನ್ನು ತಿಳಿಯಬಲ್ಲವನು
**ಭಾವಶುದ್ಧಿ** – (ಜೈನ) ವೀತರಾದನಾದವನಿಗೆ ಮನಸ್ಸು ಶುದ್ಧವಾಗುವುದು; ಇದು ಅಷ್ಟಶುದ್ಧಗಳಲ್ಲಿ ಒಂದು
**ಭಾವಶುದ್ಧಿಗೆಡು** – ಮನಸ್ಸಿನ ನೈರ್ಮಲ್ಯವನ್ನು ಕಳೆದುಕೊ
**ಭಾವಳಯ** – ಪ್ರಭಾವಲಯ
**ಭಾವಾತ್ಮ** – ತತ್ವಜ್ಞ
**ಭಾವಿ** – ಭವಿಷ್ಯದ; ಕರ್ಮವಶದಿಂದ ಆಗಲೇಬೇಕಾದ
**ಭಾವಿಕೇವಲಿ** – (ಜೈನ) ಮುಂದೆ ಕೇವಲಿಯಾಗುವವನು
**ಭಾವಿತಾತ್ಮ** – ಪರಿಪಕ್ವ ಮನಸ್ಸಿನವನು; ಆತ್ಮಜ್ಞಾನಿ
**ಭಾವಿಸು** – ನೆನೆಪಿಸಿಕೊ; ತಿಳಿ; ಲಕ್ಷ್ಯಕೊಡು
**ಭಾವುಕ** – ಸಹೃದಯ
**ಭಾವೆ** – ಚೆಲುವೆ
**ಭಾವೋದ್ಭವ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ
**ಭಾವ್ಯ** – ಮುಂದೆ ನಡೆಯುವಂಥ(ದು); ಆಸ್ವಾದ್ಯವಾದುದು
**ಭಾಷಾವಿದ** – ಭಾಷೆಯಲ್ಲಿ ಪಾಂಡಿತ್ಯ ಗಳಿಸಿದವನು
**ಭಾಷಾಸಂಸ್ಕರಣ** – ಭಾಷೆಯ ತಪ್ಪುಗಳನ್ನು ತಿದ್ದುವುದು
**ಭಾಷಿತ** – ಹೇಳಲ್ಪಟ್ಟ(ದ್ದು); ನುಡಿ
**ಭಾಸ್ಕರಸುತ** – ಸೂರ್ಯನ ಮಗ, ಕರ್ಣ
**ಭಾಸ್ವರ** – ಹೊಳೆಯುವ
**ಭಾಸ್ವರಬೋಧ** – ದಿವ್ಯಜ್ಞಾನ(ವನ್ನು ಹೊಂದಿದವನು)
**ಭಾಳಾಕ್ಷಿ** – (ಫಾಲಾಕ್ಷಿ) (ಜೈನ) ಹಣೆಯಲ್ಲಿ ಕಣ್ಣುಳ್ಳವಳು, ಜ್ವಾಲಾಮಾಲಿನಿ ಎಂಬ ಯಕ್ಷಿ
**ಭಿಂಡಿವಾಲ** – ಒಂದು ಆಯುಧ, ಭಲ್ಲೆ
**ಭಿಕ್ಷುಕ** – ಜೈನಯತಿ, ಶ್ರಮಣ
**ಭಿತ್ತಿ** – ಗೋಡೆ
**ಭಿತ್ತಿಚಿತ್ರ** – ಗೋಡೆಯ ಮೇಲೆ ರಚಿಸಿದ ಚಿತ್ರ
**ಭಿದು** – ಕುಂಭಸ್ಥಳ
**ಭಿದುರ** – ಮುರಿಯುವ(ವನು)
**ಭಿನ್ನ** – ಬೇರೆಯಾದುದು; ಸೀಳಲ್ಪಟ್ಟ(ವನು)
**ಭಿನ್ನಭಾಜನ** – ಒಡೆದ ಮಡಕೆ, ಬೋಕಿ ಬಿಂಚು
**ಭಿನ್ನರುಚಿ** – ಬೇರೆ ಆಸಕ್ತಿ ಹೊಂದಿದವನು
**ಭಿನ್ನವಿದ್ಯ** – ವಿದ್ಯೆಯನ್ನು ಕಳೆದುಕೊಂಡವನು
**ಭಿಲ್ಲ** – ಬೇಡರವನು
**ಭಿಲ್ಲಪಲ್ಲಿ(ಳ್ಳಿ)** – ಬೇಡರು ವಾಸಿಸುವ ಹಳ್ಳಿ
**ಭಿಷಗ್ಗಣ** – ವೈದ್ಯರ ಸಮೂಹ
**ಭಿಷಗ್ದೋಷ** – ವೈದ್ಯನು ಮಾಡುವ ತಪ್ಪು
**ಭೀ** – ಭಯ

**ಭೀಂಕೃತ(ತಿ)** – ಬಾಣದ ಠೇಂಕಾರ
**ಭೀಕರ** – ಭಯಂಕರ(ವಾದುದು)
**ಭೀತಿ** – ಭಯ
**ಭೀಮ** – ಭಯವುಂಟುಮಾಡುವ(ವನು); ಪಾಂಡುವಿನ ಮಗ
**ಭೀಮಗದೆ** – ಭಯಂಕರವಾದ ಗದೆ
**ಭೀಮಭೀಮ** – ಭಯಂಕರನಾದ ಭೀಮ
**ಭೀಮಸೇನ** – ಪಾಂಡುವಿನ ಮಗ ಭೀಮ
**ಭೀಮಸೇನಿಕ** – ಕರ್ಪೂರ
**ಭೀಮಾಟವಿ** – ಭಯಂಕರ ಕಾಡು
**ಭೀರು** – ಹೆದರುವವನು
**ಭೀರುತ್ವ** – ಹೆದರಿಕೆ
**ಭೀಷಣ** – ಭಯವುಂಟುಮಡುವ
**ಭೀಷ್ಮ** – ಭಯಂಕರವಾದ; ಶಂತನು–ಗಂಗೆಯರ ಮಗ–
**ಭೀಷ್ಮಿಸು** – ಉಗ್ರರೂಪವನ್ನು ಪಡೆ
**ಭುಗಿಲಿಡು** – ಚಿಮ್ಮು
**ಭುಗಿಲ್ಗರೆ** – ಭುಗಿಲೆಂದು ಶಬ್ದಮಾಡು
**ಭುಜ** – ತೋಳು
**ಭುಜಂಗ** – ಹಾವು; ವಿಟ
**ಭುಜಂಗಭೋಗಾಶ್ರಿತೆ** – ಜಾರರ ಆಶ್ರಯದಲ್ಲಿರುವವಳು; ಹಾವಿನ ಹೆಡೆಗಳ **ಆಶ್ರಯದಲ್ಲಿರುವವಳು** –
**ಭುಜಂಗಾಧಿಪ** – ಆದಿಶೇಷ
**ಭುಜಂಗಾಸ್ತ್ರ** – ಸರ್ಪಾಸ್ತ್ರ
**ಭುಜಂಗಿ** – ಹೇಣ್ಣು ಹಾವು
**ಭುಜಂಗೇಂದ್ರ** – ಆದಿಶೇಷ
**ಭುಜಗದ್ವೇಷಿ** – ಹಾವಿನ ವೈರಿ, ಗರುಡ
**ಭುಜಗಧ್ವಜ** – ಬಾವುಟದಲ್ಲಿ ಹಾವಿನ ಗುರುತಿರುವವನು, ದುರ್ಯೋಧನ
**ಭುಜಗನಾಯಕ** – (ಜೈನ) ನಾಗಕುಮಾರರಲ್ಲಿ ಅಗ್ರಗಣ್ಯ
**ಭುಜಗಪುರಿ** – ನಾಗಲೋಕದ ಭೋಗವತಿ ಎಂಬ ಹೆಸರಿನ ರಾಜಧಾನಿ
**ಭುಜಗಭೂಷ** – ಸರ್ಪಾಭರಣ, ಶಿವ
**ಭುಜಗರಿಪು** – ಗರುಡ; ನವಿಲು
**ಭುಜಗರಿಪುಧ್ವಜ** – ಗರುಡಧ್ವಜ, ಕೃಷ್ಣ
**ಭುಜಗಲೋಕ** – ನಾಗಲೋಕ
**ಭುಜಗಾರಿ** – ಹಾವಿನ ವೈರಿ, ಗರುಡ
**ಭುಜಗೇಂದ್ರ** – ಭುಜಗನಾಯಕ
**ಭುಜಬಲ** – ಬಾಹುಬಲ, ಪರಾಕ್ರಮ
**ಭುಜಬಲಿ** – ಶೂರ; (ಜೈನ) ಆದಿತೀರ್ಥಂಕರನ ಮಗನಾದ ಬಾಹುಬಲಿ
**ಭುಜಭವ** – ಪರಬ್ರಹ್ಮನ ತೋಳಿನಿಂದ ಹುಟ್ಟಿದವನು, ಕ್ಷತ್ರಿಯ
**ಭುಜಮಂದರ** – ಭುಜಗಳೆಂಬ ಮಂದರಪರ್ವತ
**ಭುಜವಿಕ್ರಮ** – ಭುಜಬಲ
**ಭುಜವಿಕ್ಷೇಪ** – ನಾಟ್ಯದಲ್ಲಿನ ಬಾಹುಚಲನೆ
**ಭುಜಶಿಖರ** – ತೋಳಿನ ಮೇಲ್ಭಾಗ, ಹೆಗಲು
**ಭುಜಾಕ್ರಾಂತ** – ಸ್ವಂತ ಶೌರ್ಯದಿಂದ ಗೆದ್ದ
**ಭುಜಾಸ್ಫಾಲನ** – ತೋಳು ತಟ್ಟುವುದು
**ಭುಜಿಷ್ಯೆ** – ಸೇವಕಿ
**ಭುವನ** – ಲೋಕ; ಭೂಮಿ; ಮನೆ
**ಭುವನಖ್ಯಾತಿ** – ಜಗತ್ತಿನಲ್ಲೇ ಪ್ರಸಿದ್ಧವಾಗಿರುವುದು
**ಭುವನಜನಕ** – ಸೃಷ್ಟಿಕರ್ತ; ರಾಜ
**ಭುವನಜಭವ** – ಕಮಲದಲ್ಲಿ ಹುಟ್ಟಿದವನು, ಬ್ರಹ್ಮ
**ಭುವನಜ್ಯಾಯ** – ಜಗತ್ತಿಗೆ ಹಿರಿಯ
**ಭುವನತ್ರಯ** – ಸ್ವರ್ಗ–ಮರ್ತ್ಯ–ಪಾತಾಳಗಳು
**ಭುವನತ್ರಿಣೇತ್ರ** – ಲೋಕಕ್ಕೆ ರುದ್ರನಂತಿರುವನು
**ಭುವನದಯಿತ** – ಜಗತ್ತಿಗೇ ಒಡೆಯನಾದವನು
**ಭುವನನಾಥ** – ಭೂಮಿಯ ಒಡೆಯ, ರಾಜ
**ಭುವನಾಂತರ** – ಇಡೀ ಭೂಮಿ
**ಭುವನಾಧಿಪ** – ರಾಜ
**ಭೂಗೋಚರ** – ಮನುಷ್ಯ
**ಭೂಗೋಳ** – ಭೂಮಂಡಲ
**ಭೂಚರ** – ಮನುಷ್ಯ
**ಭೂಜಾಂಗವೃತ್ತಿ** –ಪ್ರವಾಹಕ್ಕೆ ಸಿಕ್ಕಿದ ಮರದಂತಹ ವರ್ತನೆ
**ಭೂಜಾತ** – ಭೂಮಿಯಲ್ಲಿ ಹುಟ್ಟಿದುದು, ಮರ
**ಭೂತಚತುಷ್ಯ** – ಪೃಥ್ವಿ, ಅಪ್ಪು, ತೇಜಸ್, ವಾಯು ಎಂಬ ಮೂಲವಸ್ತುಗಳು
**ಭೂತಧಾತ್ರಿ** – ಭೂಮಿ
**ಭೂತನಾಥ** – ಶಿವ
**ಭೂತಪುಣ್ಯ** – ಹಿಂದೆ ಮಾಡಿದ ಪುಣ್ಯದ ಫಲ
**ಭೂತಲ(ಳ)** – ಭೂಮಿ
**ಭೂತಲಪತಿ** – ಭೂಮಿಯ ಒಡೆಯ, ರಾಜ
**ಭೂತವಾದಿ** – ನಿರೀಶ್ವರವಾದಿ
**ಭೂತಾಡನಂಗೆಯ್** – ನೆಲವನ್ನು ಒದೆ
**ಭೂತಾಪಕಾರಿ** – ಕೆಡುಕುಂಟುಮಾಡುವವನು
**ಭೂತಾಮರ** – (ಜೈನ) ವ್ಯಂತರದೇವತೆಗಳಲ್ಲಿನ ಒಂದು ಗುಂಪು
**ಭೂತಿ** – ಐಶ್ವರ್ಯ; ಬೂದಿ
**ಭೂಧರ** – ಬೆಟ್ಟ, ಪರ್ವತ
**ಭೂಧರಧರ** – ಪರ್ವತವನ್ನೆತ್ತಿದವನು, ಕೃಷ್ಣ
**ಭೂಧ್ರ** – ಬೆಟ್ಟ
**ಭೂನಾಥ** – ರಾಜ
**ಭೂಪ** – ಭೂನಾಥ
**ಭೂಪತಿ** – ಭೂನಾಥ
**ಭೂಪಾಲ(ಳ)** – ಭೂಮಿಯನ್ನು ರಕ್ಷಿಸುವವನು, ರಾಜ
**ಭೂಪೇಂದ್ರ** – ರಾಜಶ್ರೇಷ್ಠ
**ಭೂಬಲ** – ಸಾಮ್ರಾಜ್ಯದ ಬಲ
**ಭೂಭರ** – ರಾಜ್ಯದ ಹೊರೆ
**ಭೂಭಾರ** – ಭೂಭರ

**ಭೂಭುಜ** – ರಾಜ
**ಭೂಭೃತ್** – ಬೆಟ್ಟ; ರಾಜ
**ಭೂಭೃತ್ಸುತೆ** – ಗಿರಿಸುತೆ, ಪಾರ್ವತಿ
**ಭೂಭೃನ್ನಾಥ** – ಚಕ್ರವರ್ತಿ; ಪರ್ವತಶ್ರೇಷ್ಠ, ಹಿಮಾಲಯ
**ಭೂಮಂಡಳಪತಿ** – ಭೂನಾಥ
**ಭೂಮಾನ** – ಭೂಮಿಯ ತೂಕ
**ಭೂಮಿಕಾಶ್ರಯ** – ನಾನಾ ಹರ್ಮ್ಯಗಳಿಂದ ಕೂಡಿರುವ(ಂಥದು); ನಾನಾ ಪಾತ್ರಗಳಿಂದ ಕೂಡಿರುವ(ಂಥದು)
**ಭೂಮಿಕೆ** – ಭೂಮಿ; ಉಪ್ಪರಿಗೆ
**ಭೂಮಿಗೃಹ** – ನೆಲಮಾಳಿಗೆ
**ಭೂಮಿಗೋಚರ** – ಭೂಗೋಚರ
**ಭೂಮಿಪಾಲ** – ಭೂಪಾಲ(ಳ)
**ಭೂಮಿರೇಖೆ** – ಗೆರೆ
**ಭೂಮೀಧ್ರ** – ಭೂಧ್ರ
**ಭೂರಿ** – ದೊಡ್ಡ; ಅಧಿಕವಾದ
**ಭೂರಿಪು** – ರಾಕ್ಷಸ
**ಭೂರುಹ** – ಮರಗಿಡ
**ಭೂರ್ಜ** – ಒಂದು ಬಗೆಯ ಮರ
**ಭೂವಲ(ಳ)ಯ** – ಭೂಮಿ
**ಭೂವಲ್ಲಭ** – ರಾಜ
**ಭೂವಿಶ್ರುತ** – ಲೋಕಪ್ರಸಿದ್ಧ(ನಾದವನು)
**ಭೂಶಯ್ಯೆ** – ನೆಲದ ಹಾಸುಗೆ, ನೆಲದ ಮೇಲೆ ಮಲಗುವಿಕೆ
**ಭೂಷಣ** – ಆಭರಣ; ಅಲಂಕಾರ
**ಭೂಷಣಾಂಗ** – (ಜೈನ) ಒಂದು ಕಲ್ಪವೃಕ್ಷ, ಆಭರಣಗಳನ್ನು ನೀಡುವಂಥದು, ನೋಡಿ, 'ಅಂಗಕಲ್ಪಕುಜ'
**ಭೂಷೆ** – ಆಭರಣ
**ಭೂಷ್ಯ** – ಅಲಂಕರಣಯೋಗ್ಯವಾದ(ದ್ದು)
**ಭೃಂಗ** – ದುಂಬಿ; ಕಾಗೆ ಬಂಗಾರ
**ಭೃಂಗಕುಂತಲೆ(ಳೆ)** – ದುಂಬಿಯಂತೆ ಕಪ್ಪಾದ ಕೂದಲುಳ್ಳ ಸುಂದರಿ
**ಭೃಂಗಾರ(ರಿ)(ರು)** – ಬಂಗಾರದ ಕಳಶ; ಪಾತ್ರೆ
**ಭೃಂಗಾರುಧಾರಿ(ಣಿ)** – ಬಂಗಾರದ ಕಳಶ ಹಿಡಿಯುವ ವ್ಯಕ್ತಿ
**ಭೃತ**– ಕಾಪಾಡಿದ; ಆಳು; ಅರ್ಥಪೂರ್ಣವಾದ; ಹೀನ
**ಭೃತವಂಶ** – ಕೊಳಲನ್ನು ಹಿಡಿದವನು; ಕುಲರಕ್ಷಕ
**ಭೇದೋಪಾಯ** – ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಂಶ್ರಯ ಎಂಬ ಆರು ಬಗೆಗಳು
**ಭೃತ್ಯ** – ಸೇವಕ
**ಭೃತ್ಯಭಾವ** – ಸೇವಕತನ
**ಭೇಕ** – ಕಪ್ಪೆ
**ಭೇದ** – ಪ್ರಕಾರ; ಸೀಳು; ಚತುರೋಪಾಯಗಳಲ್ಲಿ ಒಂದು
**ಭೇದಂಬಡು** – ದೂರವಾಗು
**ಭೇದಿಸು** – ಸೀಳು; ಖಂಡಿಸು; ಭೇದೋಪಾಯಕ್ಕೆ ಒಳಪಡಿಸು; ರಹಸ್ಯ ಬಯಲುಮಾಡು
**ಭೇರುಂಡ(ಪಕ್ಕಿ)** – ಎರಡು ತಲೆಗಳ ಕಾಲ್ಪನಿಕ ಪಕ್ಷಿ
**ಭೇಷಜ** – ಔಷಧಿ
**ಭೈಕ್ಷ** – ಭಿಕ್ಷೆ ಬೇಡುವುದು
**ಭೈಕ್ಷಾಶನಿ** – ಭಿಕ್ಷುಕ
**ಭೈತ್ರ** – (ಬಹಿತ್ರ) ಹಡಗು
**ಭೈತ್ರಕಾಱ** – ಹಡಗು ನಡೆಸುವವನು
**ಭೈರವ** – ರುದ್ರ, ಭಯಂಕರ
**ಭೈರವಾವಳ** – ಭೈರವ ದೇವತೆಗಳ ಸಮೂಹ
**ಭೈರವಿ** – ದುರ್ಗೆ
**ಭೈಷಜ್ಯ** – ಚಿಕಿತ್ಸೆ
**ಭೈಷಜ್ಯಕ** – ಜ್ವರ
**ಭೋಂಕನೆ** – ತಕ್ಷಣ; ಇದ್ದಕ್ಕಿದ್ದಂತೆ
**ಭೋಂಕಲ್** – ಭೋಂಕನೆ
**ಭೋಗ** – ಸುಖಸಾಮಗ್ರಿ; ಹಾವಿನ ಹೆಡೆ
**ಭೋಗಕ್ಷಿತಿ** – ಭೋಗಭೂಮಿ
**ಭೋಗತೃಷ್ಣೆ** – ಸುಖದ ಅಪೇಕ್ಷೆ
**ಭೋಗನಾಯಕ** – ಮಂಡಲವನ್ನು ರಕ್ಷಿಸುವವನು
**ಭೋಗಬ್ರಹ್ಮವ್ರತ** – (ಜೈನ) ಬ್ರಹ್ಮಚರ್ಯದಲ್ಲಿ ಗಂಧ, ರೂಪ, ಶಬ್ದಗಳ ಅನುಭವವನ್ನು ಮಾತ್ರ ಪಡೆಯಬೇಕೆಂಬ ಒಂದು ವ್ರತ
**ಭೋಗಭೂತಲ** – ಭೋಗಭೂಮಿ
**ಭೋಗಭೂಮಿ** – (ಜೈನ) ಭೂಮಿಯ ಮೇಲೆ ಪುಣ್ಯವಂತರು ಹುಟ್ಟುವ ಪ್ರದೇಶ
**ಭೋಗರತ್ನ** – ಹಾವಿನ ಹೆಡೆಯ ಮಣಿ
**ಭೋಗವತಿ** – ಪಾತಾಳಲೋಕದ ರಾಜಧಾನಿ
**ಭೋಗಾಂಗ** – ಸುಖಸಾಧನ
**ಭೋಗಾಭೋಗ** – ಭೋಗಸಾಮಗ್ರಿಗಳಿಂದ ಸಿಕ್ಕುವ ಸುಖ
**ಭೋಗಿ** – ಸುಖಾಪೇಕ್ಷಿ; ವಿಲಾಸವತಿ; ಸುಳಿ; ಸರ್ಪ
**ಭೋಗಿನಿ** – ಹೆಣ್ಣು ಹಾವು
**ಭೋಗಿಪತಿ** – ಆದಿಶೇಷ
**ಭೋಗಿಭೋಗ** – ಹಾವಿನ ಹೆಡೆ
**ಭೋಗಿವಿಷ** – ಹಾವಿನ ವಿಷ
**ಭೋಗಿಸು** – ಅನುಭವಿಸು
**ಭೋಗೀಂದ್ರ** – ಭೋಗಿಪತಿ
**ಭೋಜನ** – ಊಟ, ಆಹಾರ
**ಭೋಜನಂಬಡೆ** – ಆಹಾರವನ್ನು ದೊರಕಿಸಿಕೊ
**ಭೊಜನಭೂಮಿ** – ಊಟದ ಮನೆ
**ಭೋಜನಾಂಗ** – (ಜೈನ) ಬಯಸಿದ ಆಹಾರ ನೀಡುವ ಕಲ್ಪವೃಕ್ಷ, ನೋಡಿ, 'ಅಂಗಕಲ್ಪಕುಜ'
**ಭೋಜನೌಕ** – ಊಟದ ಮನೆ

**ಭೋಜ್ಯ** – ತಿನ್ನಲು ಯೋಗ್ಯವಾದ; ರಿಚಿಯಾದ ಆಹಾರ
**ಭೋಜ್ಯಾಂಗ** – ಭೋಜನಾಂಗ
**ಭೋರನೆ** – ಭೋರ್ ಎಂಬ ಶಬ್ದಸಹಿತ
**ಭೋರ್ಗರೆ** – ಭೋರ್ ಎಂದು ಶಬ್ದಮಾಡು
**ಭೌತಿಕ** – ಪಂಚಭೂತಗಳಿಂದಾದ; ತಪಸ್ವಿ
**ಭೌಮ** – ಭೂಮಿಗೆ ಸಂಬಂಧಿಸಿದ; ಭೂದೇವಿಯ ಮಗ, ನರಕಾಸುರ
**ಭೌಮವಿಹಾರ** – ವಿನೋದಾರ್ಥವಾದ ಭೂಸಂಚಾರ
**ಭೌಮಾಷ್ಟಮಿ** – ಮಹಾನವಮಿಯ ಹಿಂದಿನ ಅಂದರೆ ಆಶ್ವಯುಜ ಶುಕ್ಲ ಅಷ್ಟಮಿ; ಮಂಗಳವಾರದಂದು ಬರುವ ಅಷ್ಟಮಿ; ನೋಡಿ, 'ಜೀವದಯಾಷ್ಟಮಿ'
**ಭ್ರಮ** – ಭ್ರಾಂತಿ
**ಭ್ರಮಣ** – ತಿರುಗುವುದು; ಹುಟ್ಟುಸಾವುಗಳ ಪರಂಪರೆ; ಮಲ್ಲಯುದ್ಧದ ಒಂದು ವರಸೆ
**ಭ್ರಮರ(ಕ)** – ದುಂಬಿ; ಮುಂಗುರುಳು; ಬುಗುರಿ
**ಭ್ರಮರಹಿತ** – ಭ್ರಮರ+ಹಿತ, ದುಂಬಿಗೆ ಹಿತಕರವಾದ; ಭ್ರಮ+ರಹಿತ, ಭ್ರಮೆಯಿಲ್ಲದ
**ಭ್ರಮರಾಳಕಿ** – ದುಂಬಿಯ ಹಾಗೆ ಕಪ್ಪಾದ ಕೂದಲುಳ್ಳವಳು
**ಭ್ರಮರಿ** – ಹೆಣ್ಣು ದುಂಬಿ; ತಿರುಗಿಸುವುದು
**ಭ್ರಮರಿಗುಡು** – ಗುಂಡಾಗಿ ತಿರುಗು
**ಬ್ರಮರಿಗೊಳಿಸು** – ಗುಂಡಾಗಿ ತಿರುಗಿಸು
**ಭ್ರಮರೀಗೀತ** – (ಹೆಣ್ಣು) ದುಂಬಿಯ ಝೇಂಕಾರ
**ಭ್ರಮಿ** – ಭ್ರಾಂತಿಗೊಂಡವನು
**ಭ್ರಮಿತ** – ತಿರುಗಿಸಿದ
**ಭ್ರಮಿಸು** – ಸುತ್ತಾಡು; ಭವಾವಳಿಯಲ್ಲಿ ತಿರುಗು
**ಭ್ರಷ್ಟಾಚಾರ** – ದುರಾಚಾರಿ
**ಭ್ರಾಂತ** – ಯುದ್ಧರಥವನ್ನು ನಡೆಸುವ ಒಂದು ಬಗೆ
**ಭ್ರಾಂತತೆ** – ಭ್ರಮೆ
**ಭ್ರಾಂತಾತ್ಮ** – ಭ್ರಮೆಗೊಂಡ ಮನಸ್ಸುಳ್ಳವನು
**ಭ್ರಾಂತಿ** – ದಿಕ್ಕು ತೋಚದಿರುವುದು; ಸಂದೇಹ
**ಭ್ರಾಂತಿಸು** – ತಪ್ಪು ತಿಳಿ
**ಭ್ರಾಜಿತ** – ಪ್ರಕಾಶಮಾನವಾದ(ದ್ದು)
**ಭ್ರಾಜಿಷ್ಣು** – ಪ್ರಕಾಶಮಾನ
**ಭ್ರಾಮಕ** – ಅಯಸ್ಕಾಂತ
**ಭ್ರುಕುಟಿ** – ಹುಬ್ಬುಗಂಟು
**ಭ್ರೂ** – ಹುಬ್ಬು
**ಭ್ರೂಕೋಟಿ** – ಭ್ರುಕುಟಿ
**ಭ್ರೂಭಂಗ** – ಭ್ರುಕುಟಿ
**ಭ್ರೂಭ್ರುಕುಟಿ** – ಹುಬ್ಬುಗಂಟು
**ಭ್ರೂಲಾಸ್ಯ** – ಹುಬ್ಬು ಕುಣಿಸುವುದು
**ಭ್ರೂಲೇಖೆ** – ಹುಬ್ಬಿನ ಗೆರೆ
**ಭ್ರೂವಿಕ್ಷೇಪ(ಣ)** – ಭ್ರೂಲಾಸ್ಯ
**ಭ್ರೂವಿಭ್ರಮ** – ಭ್ರೂಲಾಸ್ಯ
**ಭ್ರೂಸಂಜ್ಞೆ** – ಹುಬ್ಬಿನಿಂದ ಮಾಡುವ ಸನ್ನೆ

## ಮ

**ಮಂಗಲ(ಳ)ಂಬಾಡು** – ಶುಭಕರವಾದ ಗೀತೆಯನ್ನು ಹಾಡು
**ಮಂಗಲತೋರಣ** – ಶುಭಸಮಾರಂಭದಲ್ಲಿ ಕಟ್ಟುವ ತೋರಣ
**ಮಂಗಲ(ಳ)ಪಾಠಕ** – ಹೊಗಳುಭಟ್ಟ
**ಮಂಗಲ(ಳ)ಪ್ರಸಾಧನ** – ಶುಭಕರವಾದ ಅಲಂಕರಣ
**ಮಂಗಲಾ(ಳಾ)ನಕ** – ಮಂಗಳವಾದ್ಯ
**ಮಂಗಳ** – ಶುಭಕರವಾದ; ಅಂಗಾರಕ
**ಮಂಗಳಕರ** – ಶುಭಕರ
**ಮಂಗಳಕಾರಣ** – ಶುಭಕ್ಕೆ ಕಾರಣವಾದ(ದ್ದು)
**ಮಂಗಳಕೇತು** – ಶುಭಸೂಚಕವಾದ ಧ್ವಜ
**ಮಂಗಳಕ್ರಿಯೆ** – ಶುಭಕಾರ್ಯ
**ಮಂಗಳಗಾಯಕ(ಯಿಕೆ)** – ಶುಭಪ್ರದ ಹಾಡುಗಳನ್ನು ಹೇಳುವವನು(ಳು)
**ಮಂಗಳಗಾಯಿನಿ** – ಮಂಗಳಗಾಯಿಕೆ
**ಮಂಗಳಗೀತ(ತಿ)** – ಶುಭಪ್ರದವಾದ ಗೀತೆ
**ಮಂಗಳಗುಣ** – ಸದ್ಗುಣ(ವಂತ)
**ಮಂಗಳತೂರ್ಯ** – ಮಂಗಳವಾದ್ಯ
**ಮಂಗಳದ್ರವ್ಯ** – ಶುಭಸಮಾರಂಭದಲ್ಲಿ ಬಳಸುವ ವಸ್ತುಗಳು
**ಮಂಗಳಧಾರಿಣಿ** – ಮಂಗಳದ್ರವ್ಯಗಳನ್ನು ಹಿಡಿದವಳು
**ಮಂಗಳನಿಲಯ** – ಶುಭಕ್ಕೆ ನೆಲೆಯಾದವನು
**ಮಂಗಳಮಂಡನ** – ಮಂಗಲ(ಳ)ಪ್ರಸಾಧನ
**ಮಂಗಳಮಜ್ಜನ** – ಶುಭಸ್ನಾನ
**ಮಂಗಳವಸದನ** – ಮಂಗಲ(ಳ)ಪ್ರಸಾಧನ
**ಮಂಗಳವಸದನಂಗೊಳ್** – ಶುಭಕಾರ್ಯಕ್ಕೆ ತಕ್ಕುದಾಗಿ ಅಲಂಕರಿಸಿಕೊ
**ಮಂಗಳವಹಿ** – ಮಂಗಲಾ(ಳಾ)ನಕ
**ಮಂಗಳವಿಧಿ** – ಶುಭಕಾರ್ಯ
**ಮಂಗಳವೇದಿ** – ಶುಬಕಾರ್ಯಕ್ಕಾಗಿ ಮಾಡಿದ ವೇದಿಕೆ
**ಮಂಗಳಶಿಖಿ** – ಹೋಮದ ಬೆಂಕಿ
**ಮಂಗಳಸವನ** – ಮಂಗಳಮಜ್ಜನ
**ಮಂಗಳಸಾದನ** – ಮಂಗಳದ್ರವ್ಯ
**ಮಂಗಳಾಚರಣ** – ಶುಭಕಾರ್ಯ
**ಮಂಗಳಾಚಾರ** – ಮಂಗಳಾಚರಣ
**ಮಂಗಳಾಲಂಕಾರ** – ಶುಭ ಸನ್ನಿವೇಶದ ಅಲಂಕಾರ
**ಮಂಗಳೆ** – ದುರ್ಗೆ
**ಮಂಚ** – ಪರ್ಯಂಕ, ಮಲಗಲು ಬಳಸುವ ಸಾಧನ
**ಮಂಚಲ್** – ಮೋಸ; ಸೆರೆ
**ಮಂಚಲಂಬಿಡಿ** – ಮೋಹಗೊಳಿಸು
**ಮಂಜರಿ** – ಗೊಂಚಲು

**ಮಂಜರಿಸು** – ಗೊಂಚಲಾಗು
**ಮಂಜಿ** – ನಾರು
**ಮಂಜಿಟಿಗೆ** – ಒಂದು ಸಸ್ಯ
**ಮಂಜಿಮ** – ಸೊಗಸು
**ಮಂಜೀರ(ಕ)** – ಕಾಲಿನ ಒಂದು ಆಭರಣ, ಕಾಲ್ಗೆಜ್ಜೆ
**ಮಂಜೀರಿಕೆ** – ಮಂಜೀರ(ಕ)
**ಮಂಜು** – ಹಿಮ, ಕಾವಳ; ಇಂಪಾದ
**ಮಂಜುಘೋಷ** – ಇಂಪಾದ ಧ್ವನಿ
**ಮಂಜುಘೋಷೆ** – ಇಂಪಾದ ಧ್ವನಿಯುಳ್ಳವಳು, ಒಬ್ಬ ಅಪ್ಸರೆಯ ಹೆಸರು
**ಮಂಜುಲ(ಳ)** – ಮೋಹಕವಾದ
**ಮಂಜುಲಾಸ್ಯ** – ಮಂಜುಲ+ಆಸ್ಯ, ಚೆಲುವಾದ ಮುಖ
**ಮಂಜುವೆಟ್ಟ(ಟ್ಟು)** – ಹಿಮದ ಬೆಟ್ಟ, ಕೈಲಾಸ
**ಮಂಜುಸಿಂಜಿತ** – ಇಂಪಾದ ಧ್ವನಿ
**ಮಂಜೂಷ** – ಪೆಟ್ಟಿಗೆ
**ಮಂಜೂಷಿಕೆ** – ಮಂಜೂಷ
**ಮಂಟಪ** – ದೇವತಾಮೂರ್ತಿಯಿರುವ ಕಟ್ಟಡ
**ಮಂಟ(ಟೆ)(ಠೆ)ಯ** – ಮಂಟಪ
**ಮಂಡಕ(ಗೆ)** – ಒಂದು ಭಕ್ಷ್ಯ
**ಮಂಡನ** – ಅಲಂಕರಿಸುವುದು; ಆಭರಣ
**ಮಂಡನಾಯೋಗ** – ಆನೆಯ ಮೇಲೆ ಅಲಂಕಾರಕ್ಕಾಗಿ ಹಾಕುವ ಜೂಲು
**ಮಂಡಪ** – ಮಂಟಪ; ಓಲಗಶಾಲೆ; ಚಪ್ಪರ
**ಮಂಡಲ** – ರಾಜ್ಯದ ಭಾಗ; ವೃತ್ತ; ಗುಂಪು; ಮಾಂತ್ರಿಕ ಗೆರೆಗಳ ವಿನ್ಯಾಸ; (ಜೈನ) ಪಾರಿವ್ರಾಜ್ಯದ ಇಪ್ಪತ್ತೇಳು ದ್ಯೋತಕಗಳಲ್ಲಿ ಒಂದು
**ಮಂಡಲಂಗೊಳ್ಳು** – ಸುರುಳಿಯಾಗಿ ಸುತ್ತಿಕೊ; ಸುತ್ತುಹಾಕು
**ಮಂಡಲಾಗ್ರ** – ತುದಿಯಲ್ಲಿ ಬಾಗಿದ ಕತ್ತಿ; ಗದಾಯುದ್ಧದಲ್ಲಿನ ಒಂದು ವರಸೆ
**ಮಂಡಲಾಧೀಶ** – ಮಂಡಲದ ಒಡೆಯ, ರಾಜ
**ಮಂಡಲಿ(ಳಿ)** – ಗುಂಪು
**ಮಂಡಲಿ(ಳಿ)ಕ** – ಸಾಮಂತ
**ಮಂಡಲಿ(ಳಿ)ಸು** – ವೃತ್ತಾಕಾರವಾಗಿ ತಿರುಗು
**ಮಂಡವ** – ಬಳ್ಳಿ ಹಬ್ಬಿಸಲು ಮಾಡಿದ ಚಪ್ಪರ
**ಮಂಡವಿಗೆ** –(ಮಂಟಪಿಕಾ) – ಸಣ್ಣ ಮಂಟಪ; ವಿತಾನ –
**ಮಂಡಳಗೊಳ್** – ಗುಂಪುಗೂಡು
**ಮಂಡೂಕ** – ಕಪ್ಪೆ
**ಮಂಡೆ** – ತಲೆ; ತಲೆಬುರುಡೆ
**ಮಂತ** – (ಮಂಥ) ಕಡೆಗೋಲು
**ಮಂತಣ** – (ಮಂತ್ರಣ) ಆಲೋಚನೆ; ಕಡೆಗೋಲು
**ಮಂತಣಮಿರ್** – ಸಮಾಲೋಚನೆ ಮಾಡು
**ಮಂತಣಸೂಲ** – ಈಟಿ
**ಮಂತಣಿ** – (ಮಂಥಣಿ) ಮೊಸರಿನ ಪಾತ್ರೆ
**ಮಂತು** – ಮಂತ್ರಿ; ತಪ್ಪು; ಕಡೆಗೋಲು
**ಮಂತ್ರ** – ಸಮಾಲೋಚನೆ; (ಜೈನ) ದೀಕ್ಷಾನ್ವಯಕ್ರಿಯೆಗೆ ಸೇರಿದ ಅವತಾರಕ್ರಿಯೆಯಹತ್ತು ವಿಧಗಲಲ್ಲಿ ಆರನೆಚಿಯುದು
**ಮಂತ್ರಗುಪ್ತಿ** – ಸಮಾಲೋಚನೆ
**ಮಂತ್ರಜಾಪ್ಯ** – ಮಂತ್ರ ಹೇಳುವುದು
**ಮಂತ್ರದೇವತೆ** – ಮಂತ್ರದ ಅಭಿಮಾನಿ ದೇವತೆ
**ಮಂತ್ರವಾದ** – ಇಂದ್ರಜಾಲ
**ಮಂತ್ರವಾದಿ** – ಐಂದ್ರಜಾಲಿಕ
**ಮಂತ್ರವಿದ** – ಮಂತ್ರವಾದಿ
**ಮಂತ್ರಶಾಲೆ** – ಸಮಾಲೋಚನೆಯ ಭವನ
**ಮಂತ್ರಸಿದ್ಧ** – ಮಂತ್ರಶಕ್ತಿಯನ್ನು ಕೈವಶಮಾಡಿಕೊಂಡವನು
**ಮಂತ್ರಾಕ್ಷರ** – ಮಂತ್ರದಲ್ಲಿನ ಅಕ್ಷರ ಅಥವಾ ವರ್ಣ
**ಮಂತ್ರಾಗಾರ** – ಮಂತ್ರಶಾಲೆ
**ಮಂತ್ರಾನುಷ್ಠಾನ** – ಮಂತ್ರಪೂರ್ವಕ ಆಚರಣೆ
**ಮಂತ್ರಾಲಯ** – ಮಂತ್ರಶಾಲೆ
**ಮಂತ್ರಾಳೋ(ಲೋ)ಚನೆ** – ಸಮಾಲೋಚನೆ
**ಮಂತ್ರಾವಾಸ** – ಮಂತ್ರಶಾಲೆ
**ಮಂತ್ರಿಮಂಡಲ** – ಸಚಿವ ಸಮಿತಿ
**ಮಂತ್ರಿಸು** – ರೋಗನಿವಾರಣೆಗೆ ಮಂತ್ರ ಹಾಕು
**ಮಂಥನ** – ಕಡೆಯುವುದು
**ಮಂಥಾಚಲ** – ಹಾಲುಗಡಲನ್ನು ಕಡೆಯಲು ಕಡೆಗೋಲಾಗಿ ಬಳಿಸಿದ ಬೆಟ್ಟ, ಮಂದರ ಪರ್ವತ
**ಮಂದಗತಿ** – ನಿಧಾನವಾದ ನಡಿಗೆ
**ಮಂದಗತ್ತಲೆ** – ಗಾಢವಾದ ಕತ್ತಲೆ
**ಮಂದಪವನ** – ಮೆಲುಗಾಳಿ
**ಮಂದಭಾಗ್ಯತೆ** – ದುರದೃಷ್ಟ
**ಮಂದಮ(ಮಾ)ರುತ** – ಮಂದಪವನ
**ಮಂದಯಿ(ವಿ)ಸು** – ಸಾಂದ್ರಗೊಳ್ಳು
**ಮಂದರ** – ಮಂಥಾಚಲ; ಸ್ವರ್ಗ; ಪೂಜಾಮಂಟಪ; **(ಜೈನ) ತೀರ್ಥಂಕರರ ಪಂಚಕಲ್ಯಾಣಗಳು ನಡೆಯುವ ಸ್ಥಳ, ಮೇರುಪರ್ವತ–**
**ಮಂದರಧರ** – ವಿಷ್ಣು
**ಮಂದರಯಾನ** – ಮಂದಗತಿ
**ಮಂದಸ(ಸು)** – (ಮಂಜೂಷ) ಪೆಟ್ಟಿಗೆ, ಭರಣಿ
**ಮಂದಸಿಕೆ** – ಮಂದಸ(ಸು)
**ಮಂದಹಾಸ** – ಮಂದಸ್ಮಿತ, ಮುಗುಳುನಗೆ
**ಮಂದಾಕಿನಿ** – ಗಂಗಾನದಿ
**ಮಂದಾಕಿನೀನಂದನ** – ಭೀಷ್ಮ
**ಮಂದಾನಿಲ(ಳ)** – ಮಂದಪವನ
**ಮಂದಾರ** – ಕ್ಷೀರಸಮುದ್ರಮಥನ ಕಾಲದಲ್ಲಿ ಹುಟ್ಟಿದ ಐದು ಕಲ್ಪವೃಕ್ಷಗಳಲ್ಲಿ ಒಂದು; ಪಾರಿಜಾತ

**ಮಂದಿರ** – ಮನೆ, ಆವಾಸಸ್ಥಾನ
**ಮಂದಿವಾಳತನ** – ಸಾಮಾನ್ಯ ಪ್ರವೃತ್ತಿ
**ಮಂದೀಭೂತ** – ಕ್ಷೀಣವಾದ
**ಮಂದುರ(ರೆ)** – ಕುದುರೆ ಲಾಯ
**ಮಂದುರಿಗ** – ಲಾಯದ ಅಧಿಕಾರಿ
**ಮಂದೇಹ** – ರಾಕ್ಷಸ
**ಮಂದೇಹರ** – ಕತ್ತಲೆ
**ಮಂದೈಸು** – ದಟ್ಟವಾಗು
**ಮಂದ್ರ** – ಗಂಭೀರವಾದ ಧ್ವನಿ
**ಮಕರ** – ಮೊಸಳೆ; ಮೀನು
**ಮಕರಂದ** – ಹೂವಿನ ಬಂಡು
**ಮಕರಕುಂಡಲ** – ಕಿವಿಯ ಕಡಕು
**ಮಕರಕೇತು** – ಮೀನಧ್ವಜ, ಮನ್ಮಥ
**ಮಕರತೋರಣ** – ಮೀನಿನ ಆಕಾರದ ತೊರಣ
**ಮಕರಧ್ವಜ** – ಮಕರಕೇತು
**ಮಕರಪತಾಕ** – ಮಕರಕೇತು
**ಮಕರವ್ಯೂಹ** – ಮೊಸಳೆಯಾಕಾರದ ಸೈನ್ಯವ್ಯೂಹ
**ಮಕರಾಂಕ** – ಮಕರಕೇತು
**ಮಕರಿಕಾಪತ್ರ** – ಅಲಂಕಾರಕ್ಕಾಗಿ ದೇಹದ ಮೇಲೆ ಬರೆದುಕೊಳ್ಳುವ ಚಿತ್ರ
**ಮಕರಿಕೆ** – ಮಕರಿಕಾಪತ್ರ
**ಮಕರೇಶ** – ಮೊಸಳಯನ್ನು ವಾಹನವಾಗಿ ಪಡೆದವನು, ವರುಣ
**ಮಕುಟ** – ಕಿರೀಟ
**ಮಕುಟಬದ್ಧ** – ಕಿರೀಟ ಧರಿಸಿದವನು, ರಾಜ
**ಮಕುಟಭಂಗ** – ಕಿರೀಟವನ್ನು ಒಡೆಯುವುದು
**ಮಕುಟಮಣಿ** – ಕಿರೀಟದಲ್ಲಿ ಸೇರಿಸಿದ ರತ್ನ
**ಮಕುಟಮಸಕ** – ಕಿರೀಟ ಧರಿಸಿದ ತಲೆ
**ಮಕ್ಷಿ(ಕಾ)** – ನೊಣ
**ಮಖ** – ಯಜ್ಞ
**ಮಖಪುರುಷ** – ಯಜ್ಞಪುರುಷ, ವಿಷ್ನು
**ಮಖಶೀಖಿ** – ಯಜ್ಞದ ಬೆಂಕಿ
**ಮಗಂಬಡೆ** – ಪುತ್ರನನ್ನು ಪಡೆ
**ಮಗಮಗಿಸು** – ಪರಿಮಳ ಬೀರು
**ಮಗರಿ** – ಒಂದು ವಿಧವಾದ ಬಟ್ಟೆ
**ಮಗಿಲ್** – ಪ್ರಾಕಾರ
**ಮಗ್ನ** – ಮುಳುಗಿದ
**ಮಗುೞ್** – ಮತ್ತೆ; ಮರಳಿ ಬರು
**ಮಗುೞೆ** – ಮತ್ತೆ, ಪುನಃ
**ಮಗುೞ್ಚು**– ಹಿಂದಿರುಗಿಸು; ವಾಂತಿಮಾಡು; ತೇಯು
**ಮಗುೞ್ದುಂ** – ಮತ್ತೆಯೂ, ಪುನಃ
**ಮಗ್ಗು** – ಮಬ್ಬು, ಆರು; ಕುಗ್ಗಿಹೋಗು
**ಮಗ್ಗುಲ್** – ಬದಿ, ಪಕ್ಕ
**ಮಗ್ನತೆ** – ತನ್ಮಯತೆ, ಏಕಾಗ್ರತೆ
**ಮಘವ** – ಇಂದ್ರ
**ಮಚ್ಚ** – ಚಿನ್ನದ ಶುದ್ಧತೆ
**ಮಚ್ಚರ** – ಅಧಿಕ ಅಪೇಕ್ಷೆ; ಅಸೂಯೆ
**ಮಚ್ಚರಕಾೞ** – ಅಸೂಯೆ ಉಂಟುಮಾಡುವವನು
**ಮಚ್ಚಿ** – ನೊಣ
**ಮಚ್ಚು** – ಅತಿ ಪರಿಚಯವಾಗು
**ಮಚ್ಛನೇತ್ರ** – (ಮತ್ಸ್ಯನೇತ್ರ) ಮೀನುಗಣ್ಣು
**ಮಚ್ಚುಗೆ** – ಮೆಚ್ಚಿಗೆ
**ಮಜ್ಜನ** – (ಮಾರ್ಜನ) ಸ್ನಾನ
**ಮಜ್ಜನಂಬೊಗು** – ಸ್ನಾನಮಾಡು
**ಮಜ್ಜನಗೃಹ** – ನೀರು ಮನೆ
**ಮಜ್ಜನಜಲ** – ಸ್ನಾನದ ನೀರು
**ಮಜ್ಜನಪೀಠ** – ಸ್ನಾನಮಾಡುವಾಗ ಕುಳಿತುಕೊಳ್ಳುವ ಮಣೆ
**ಮಜ್ಜನವ((ಳ್ತಿ)** – ಸ್ನಾನಮಾಡಿಸುವವನು(ಳು)
**ಮಜ್ಜ(ಜ್ಜೆ)** – ಮೂಳೆಯ ಸಾರ
**ಮಟ್ಟ** – ಸಮಪ್ರದೇಶ
**ಮಟ್ಟಂ** – ಸುಮ್ಮನೆ
**ಮಟ್ಟಮಿ(ವಿ)ರ್** – ಸುಮ್ಮನಿರು
**ಮಟ್ಟಯಿಸು** – ಸಮಗೊಳಿಸು
**ಮಡ** – ಕಾಲಿನ ಹರಡು; ರಥದ ಚೌಕಟ್ಟು; ಮಠ
**ಮಡಂ(ದಂ)ಬ** – ಗಡಿನಾಡು; ನಾಲ್ಕೂ ಕಡೆಗಳಲ್ಲಿ ಒಂದು ಯೋಜನ ದೂರ ಯಾವ ಹಳ್ಳಿಯೂ ಇರದ ಊರು; ಯನೂರು ಹಲ್ಳಿಗಳ ನಗರ
**ಮಡಕಾ(ಗಾ)ಲ್** – ಮಂಡಿಯಿಂದ ಕಣಕಾಲಿನವರೆಗಿನ ಭಾಗ
**ಮಡಗು** – ಇರಿಸು; ಗೋಪ್ಯವಾಗಿಡು
**ಮಡಗಿಡು** – ಜೋಪಾನವಾಗಿಡು
**ಮಡ(ಡೆ)ಗೂೞ್** – ಎಂಜಲನ್ನ, ಉಚ್ಚಿಷ್ಟ
**ಮಡಲ್** – ಕೊಂಬೆ; ಹಬ್ಬುವುದು; ವಿಸ್ತಾರ; ಸೋಗೆ
**ಮಡಲ್ಗೊಳ್** – ವ್ಯಾಪಿಸು
**ಮಡಸನ್ನೆ** – ಸವಾರಿ ಕಾಲದಲ್ಲಿ ಕುದುರೆಯನ್ನು ಹಿಮ್ಮಡಿಯಿಂದ ತಿವಿದು ಚೋದಿಸುವುದು
**ಮಡಿ** – ತಿರಿ, ಕೀಳು; ಸಾಯು; ಒಗೆದ ಬಟ್ಟೆ; ರೇಷ್ಮೆ ವಸ್ತ್ರ; ಜಮೀನಿನ ಭಾಗ
**ಮಡಿಪು** – ಕೊಲ್ಲು
**ಮಡಿಯಿಸು** – ಮಡಿಪು
**ಮಡಿವರ್ಗ** – ಒಗೆದ ಬಟ್ಟೆಗಳ ರಾಶಿ
**ಮಡಿವಳ(ಳ್ಳ)** – ಅಗಸ
**ಮಡಿವಳ್ತಿ(ಆತಿ)** – ಅಗಸಗಿತ್ತಿ
**ಮಡು** – ಬಿಗಿಯಾಗಿಡು; ನದಿಯ ಆಳವಾದ ಜಾಗ; ಕೊಳ
**ಮಡುಗೊರ್ವು** – ತುಂಬಿಕೊಂಡಿರುವುದು
**ಮಡುಗೊಳ್** – ತುಂಬಿಕೊಳ್ಳು
**ಮಣ್** – ಮೃತ್ತಿಕೆ; ಭೂಮಿ
**ಮಣಕು** – ಕಮಟುವಾಸನೆ
**ಮಣಲ್** – ಮರಳು
**ಮಣಲ್ದಿಂಟೆ** – ಮರಳ ದಿಬ್ಬ
**ಮಣಿ** – ಹೆದರು; ನಮಿಸು; ರತ್ನ

**ಮಣೆ(ಣ)ಕ** – ಪಡ್ಡೆ ಹಸು; ಮೊದಲ ಕರು ಹಾಕಿದ ಹಸು
**ಮಣಿಕಂಕಣ** – ರತ್ನಖಚಿತ ಬಳೆ
**ಮಣಿಕುಂಡಲ** – ಕಿವಿಯ ರತ್ನಖಚಿತ ಆಭರಣ
**ಮಣಕುಟ್ಟಿಮ** – ರತ್ನಖಚಿತ ನೆಲಗಟ್ಟು
**ಮಣಿಕೂಟ** – (ಜೈನ) ಮಾನುಷೋತ್ತರದ್ವೀಪದ ಒಂದು ಪರ್ವತ
**ಮಣಿಗಡಗ** – ಮಣಿಕಂಕಣ
**ಮಣಿಗಣ** – ರತ್ನಸಮೂಹ
**ಮಣಿಗರ್ಭೆ** – ಭೂಮಿ
**ಮಣಿಗಾಱ(ರ್ತಿ)** – ರತ್ನಪಡಿವ್ಯಾಪಾರಿ
**ಮಣಿಚೂಳಿಕೆ** – ಮಣಿಗಳಿಂದ ಕೂಡಿದ ಶಿಖರ
**ಮಣಿತ** – ಸುರತಧ್ವನಿ
**ಮಣಿತೋರಣ** – ರತ್ನಖಚಿತ ತೋರಣ
**ಮಣಿದರ್ಪಣ** – ರತ್ನಖಚಿತ ಕನ್ನಡಿ
**ಮಣಿದೀಪ** – ರತ್ನಖಚಿತ ದೀಪ
**ಮಣಿನೂಪುರ** – ರತ್ನಖಚಿತ ಕಾಲಂದುಗೆ
**ಮಣಿಪೀಠ** – ರತ್ನಖಚಿತ ಪೀಠ
**ಮಣಿಪುತ್ರಿಕೆ** – ಮಣಿಗಳಿಂದ ಅಲಂಕೃತಗೊಂಡ ಬೊಂಬೆ
**ಮಣಿಭವನ** – ರತ್ನಖಚಿತವಾದ ಹರ್ಮ್ಯ
**ಮಣಿಮಕುಟ** – ರತ್ನಖಚಿತ ಕಿರೀಟ
**ಮಣಿಮೇಖಲೆ(ಳೆ)** – ರತ್ನಖಚಿತ ಡಾಬು
**ಮಣಿಯೇಱು** – ಗಂಟೆಯ ಸದ್ದು
**ಮಣಿವೆಸ** – ರತ್ನಗಳನ್ನು ಜೋಡಿಸುವ ಕೆಲಸ
**ಮಣಿಸರವಳಗೆ** – ಬಟವಿ, ದುಂಡುಗವಲಿ
**ಮಣಿಶುಕ್ತಿ** – ಸುಗಂಧದ್ರವ್ಯ
**ಮಣಿಹರ್ಮ್ಯ** – ಮಣಿಭವನ
**ಮಣೆ** – ಆಸನ, ಪೀಠ
**ಮಣ್ಬೆಱು** – ಭೂಮಿಯನ್ನು ಹೊಂದು
**ಮಣ್ಮಲೆ** – ಭಯಂಕರ ಸಾವು; ತಳಮಳ
**ಮತಂಗಜ** – ಆನೆ
**ಮತಂಗಜರಿಪು** – ಸಿಂಹ
**ಮತಿ** – ಬುದ್ಧಿ. ಅರಿವು
**ಮತಿಗಿಡಿಸು** – ತಿಳಿವು ಕೆಡಿಸು
**ಮತಿಗೆಡು** – ಅರಿವಿಲ್ಲದಾಗು
**ಮತಿಜ್ಞಾನ** – (ಜೈನ) ಎಂಟು ವಿಧವಾದ ಜ್ಞಾನಗಳಲ್ಲಿ ಒಂದು, ಮನನ
**ಮತಿವಂತ** – ಬುದ್ಧಿವಂತ
**ಮತಿವಿಕಳತೆ** – ಬುದ್ಧಿಹೀನತೆ
**ಮತ್ಕುಣ** – ತಿಗಣೆ
**ಮತ್ತ** – ಅಮಲೇರಿದ; ಕೊಬ್ಬಿದ
**ಮತ್ತಂ** – ಪುನಃ; ಅಲ್ಲದೆ
**ಮತ್ತಕಾಶಿನಿ** – ಮೋಹವನ್ನುಂಟುಮಾಡುವವಳು
**ಮತ್ತಕೋಕಿಲ** – ಮದಿಸಿದ ಕೋಗಿಲೆ
**ಮತ್ತಮದ** – ತುಂಬ ಸೊಕ್ಕಿದವನು
**ಮತ್ತವಟ್ಟಿಗೆ** – (ಮಸ್ತಕಪಟ್ಟಿಕಾ), ತಲೆಗೆ ಸುತ್ತುವ ವಸ್ತ್ರ
**ಮತ್ತವಾರಣ** – ಮದಿಸಿದ ಆನೆ; ಜಗಲಿ; ರಥದಲ್ಲಿ ಯೋಧನು ನಿಲ್ಲುವ ಜಾಗ; ಒರಗುದಿಂಬು
**ಮತ್ತಾಲಂಬ** – ಆವರಣ
**ಮತ್ತಾಳ** – ಮದಿಸಿದ ದುಂಬಿ
**ಮತ್ತಿಕಾ(ಗಾ)ಯ್** – ಒಂದು ಆಭರಣ
**ಮತ್ತಿನ** – ಉಳಿದ; ಆನಂತರದ
**ಮತ್ತೆ** – ಆನಂತರ; ಪುನಃ
**ಮತ್ತೇಭ** – ಮತ್ತ+ಇಭ, ಮದ್ದಾನೆ
**ಮತ್ತೇಭವಿಕ್ರೀಡಿತ** – ಮದ್ದಾನೆಯ ಆಟ; ಒಂದು ಅಕ್ಷರ ವೃತ್ತ
**ಮತ್ತೋಪಚಾರ** – ಕಾಮಾತುರವನ್ನು ಇಳಿಸುವ ಕ್ರಮ
**ಮತ್ಸರ** – ಹೊಟ್ಟೆ ಉರಿ, ಅಸೂಯೆ
**ಮತ್ಸರಿಸು** – ಅಸೂಯೆ ಪಡು
**ಮತ್ಸ್ಯ** – ಮೀನು; ಒಂದು ದೇಶ
**ಮತ್ಸ್ಯನ್ಯಾಯ** – ದೊಡ್ಡ ಮೀನು ಸಣ್ಣ ಮೀನನ್ನು ನುಂಗುವ ಕ್ರಮ, ದುರ್ಬಲನನ್ನು ಪ್ರಮಲನು ಪೀಡಿಸುವುದು
**ಮತ್ಸ್ಯಾವತಾರ** – ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೊದಲನೆಯದಾದ ಮೀನಿನ ಅವತಾರ
**ಮತ್ಸ್ಯಾವಾಸ** – ಮತ್ಸ್ಯದೇಶದ ರಾಜನಾದ ವಿರಾಟನ ಮನೆ
**ಮಥಿಯಿಸು** – ಘಾತಿಸು; ಪೀಡಿಸು
**ಮದ** – ಮದೋದಕ; ಸೊಕ್ಕು
**ಮದಕರಿ** – ಮದವೇರಿದ ಆನೆ
**ಮದಗಂಧ** – ಆನೆಯ ಮದೋದಕದ ವಾಸನೆ
**ಮದಗಂಧಿ** – ಒಂದು ಗಿಡ
**ಮದಗಜ** – ಮದಕರಿ
**ಮದಗಜಗಮನೆ** – ಮದಿಸಿದ ಆನೆಯಂತೆ ನಿಧಾನವಾಗಿ ನಡೆಯುವವಳು
**ಮದಗಜಗಾಮಿನಿ** – ಮದಗಜಗಮನೆ
**ಮದಜಲ(ಳ)** – ಸೊಕ್ಕಿದ ಆನೆಯ ಗಂಡಸ್ಥಳದಿಂದ ಸುರಿಯುವ ನೀರು
**ಮದದೂಷಿತ** – ಮದದಿಂದ ಕೆಟ್ಟವನು
**ಮದದ್ವಿಪ** – ಮದಕರಿ
**ಮದನ** – ಮನ್ಮಥ
**ಮದನಕೇಳಿ** – ರತಿಕ್ರೀಡೆ
**ಮದನಜನಕತ್ವ**–ಮನ್ಮಥನ ತಂದೆಯಾಗಿರುವಿಕೆ; **ಕಾಮಾಭಿಲಾಷೆಯುಂಟುಮಾಡುವಿಕೆ–**
**ಮದನಜಲ** – ವೀರ್ಯ; ಮನ್ಮಥದ್ರವ
**ಮದನಡಿಂಡಿಮ** – ಮನ್ಮಥನ ನಗಾರಿ
**ಮದನದ್ರವ** – ಮದನಜಲ
**ಮದನಪತತ್ರಿ** – ಮನಥನ ಬಾಣ
**ಮದನಪತಾಕೆ** – ಮನ್ಮಥನ ಬಾವುಟ
**ಮದನರಸ** – ಮದನಜಲ

**ಮದನವಿಕಾರ** – ಕಾಮದಿಂದಾಗಿ ಮನಸ್ಸಿನಲ್ಲಾಗುವ ವ್ಯತ್ಯಾಸ
**ಮದನಶರ** – ಮದನಪತತ್ರಿ
**ಮದನಸದನ** – ಮಲಗುವ ಮನೆ
**ಮದನಾಂಬು** – ಮದನಜಲ
**ಮದನಾಕ್ರಾಂತ** – ಮದನಬಾಧೆಗೊಳಗಾದವನು; ಬಕುಳವೃಕ್ಷಳಿಂದ ಆವೃತವಾದುದು
**ಮದನಾತುರ(ರೆ)** – ಕಾಮಾತುರ(ರೆ)
**ಮದನಾನಲ(ಳ)** – ಕಾಮತಾಪ
**ಮದನಾರಾತಿ** – ಕಾಮನ ಶತ್ರು, ಶಿವ; ಜಿನ
**ಮದನಾವತಾರ** – ಕಾಮನ ರೂಪ
**ಮದನಾವಸ್ಥೆ** – ಕಾಮತೀವ್ರತೆಯ ಸ್ಥಿತಿ
**ಮದನಾವೇಶ** – ತೀವ್ರ ಕಾಮೋದ್ರೇಕ
**ಮದನಾಸ್ತ್ರ** – ಕಾಮಬಾಣ
**ಮದಪಟ್ಟಿಕೆ** – ಆನೆಯ ಕಪೋಲದ ಮೇಲೆ ಮದರಸ ಇಳಿಯುವುದರಿಂದಾದ ಗೆರೆ
**ಮದರದನಿ** – ಮದಿಸಿದ ಆನೆ
**ಮದಲೇಖೆ** – ಮದಪಟ್ಟಿಕೆ
**ಮದಲೋಲ** –ಮತ್ತು ಬರಿಸುವಷ್ಟು ಚಂಚಲವಾದ
**ಮದವಕ್ಕಳ್** – ಮದುಮಕ್ಕಳು, ವಧೂವರರು
**ಮದವಟ್ಟೆ** – ಮದಪಟ್ಟಿಕೆ
**ಮದವಟ್ಟೆದೆಗೆ** – ಮಕರಿಕಾಪತ್ರ ರಚಿಸು
**ಮದ(ದು)ವಳ(ಣಿ)ಗ** – ಮದುಮಗ, ಮದುವೆಯ ಗಂಡು
**ಮದ(ದು)ವಳಗೆ** – ಮದುವಣಗಿತ್ತಿ
**ಮದವಾರಣ** – ಮದಿಸಿದ ಆನೆ
**ಮದವಾರಿ** – ಮದಜಲ
**ಮದವಿಕಾರ** – ಹೆಂಡ ಕುಡಿದ ಅಮಲು
**ಮದವಿರಹಿತ** – ಮದಜಲರಹಿತ ಆನೆ; ಅಹಂಕಾರವಿಲ್ಲದವನು
**ಮದವಿಹ್ವಳತ** – ಮದದಿಂದ ಉಗ್ರವಾದ; ಅಮಲಿನಿಂದ ಕೂಡಿದ
**ಮದವೇತಂಡ** – ಮದರದನಿ
**ಮದವೇಱು** – ಗರ್ವಿಸು; ಅಮಲೇರು
**ಮದಾಂಧ(ರ್ದಕ)** – ಅಮಲಿನಿಂದ (ಗರ್ವದಿಂದ) ಕುರುಡಾದ
**ಮದಾನೇಪಕ** – ಮದರದನಿ
**ಮದಾಲಸ** – ಮತ್ತಿನಿಂದ (ಗರ್ವದಿಂದ) ಜಡಗೊಂಡ
**ಮದಾವಸ್ಥೆ** – ಅಮಲೇರಿದ ಸ್ಥಿತಿ
**ಮದಾಳ** – ಸೊಕ್ಕಿದ ದುಂಬಿ
**ಮದಿರ** – ಅಮಲೆರಿಸುವ
**ಮದಿರಾ** – ಮದ್ಯ
**ಮದಿರಾಕ್ಷಿ** – ಮಾದಕವಾದ ಕಣ್ಣುಳ್ಳವಳು
**ಮದಿರಾಪಾಂಗ** – ಮಾದಕವಾದ ಕಡೆಗಣ್ಣ ನೋಟ
**ಮದಿರಾಮದ** – ಮದ್ಯದ ಅಮಲು
**ಮದಿರೇಕ್ಷಣೆ** – ಮಾದಕ ನೋಟವುಳ್ಳವಳು
**ಮದಿರೋನ್ಮತ್ತ** – ಮದ್ಯದಿಂದ ಅಮಲೇರಿದ
**ಮದಿಲ್** – ಗೋಡೆ
**ಮದೀಯ** – ನನ್ನ; ನನಗೆ ಸಂಬಂಧಪಟ್ಟ
**ಮದುವೆಗಚೆ(ಱು)ಪು** – ಮದುವೆಗೆ ಬಂದವರನ್ನು ಬೀಳ್ಕೊಡು
**ಮದುವೆಗುಡು** – ಮದುವೆ ಮಾಡಿಕೊಡು
**ಮದುವೆನಿಲ್** – ಮದುವೆಯಾಗು
**ಮದುವೆನಿಱಿಸು** – ಮದುವೆ ಮಾಡಿಕೊಡು
**ಮದುವೆನೆರೆ** – ಮದುವೆಯ ಮೂಲಕ ಸೇರು
**ಮದೆ(ದ)(ದು)ವಳ್** – ಮದುವೆಯ ಹೆಣ್ಣು
**ಮದೇಭ** – ಮದಕರಿ
**ಮದೇಭಗಾಮಿನಿ** – ಮದ್ದಾನೆಯಂತೆ ನಿಧಾನವಾಗಿ ನಡೆಯುವವಳು
**ಮದೋತ್ಕ** – ಅಮಲೇರಿದ; ಸೊಕ್ಕಿದ
**ಮದೋದಕ** – ಮದಜಲ
**ಮದೋದಯ** – ಆನೆಗೆ ಮದ ಉದಿಸುವುದು; ಗರ್ವ ತಲೆರೋರುವುದು
**ಮದೋದ್ಗಂಧ** – ಮದಜಲದ ಕಟು ವಾಸನೆ
**ಮದೋದ್ಧತ** – ಮದ(ಗರ್ವ)ದಿಂದ ಸೊಕ್ಕಿದ
**ಮದೋನ್ಮತ್ತ** – ಮದ್ಯ(ಗರ್ವ)ದಿಂದ ಅಮಲೇರಿದ
**ಮದ್ದಳೆ(ಳ)** – ಮೃದಂಗ
**ಮದ್ದುಗುಣಿಕೆ** – ದತ್ತೂರದ ಗಿಡ
**ಮದ್ಯ** – ಅಮಲೇರಿಸುವ, ಹೆಂಡ
**ಮದ್ಯಾಂಗ** – (ಜೈನ) ಹತ್ತು ಕಲ್ಪಕುಜಗಳಲ್ಲಿ ಒಂದು, ಮದ್ಯ ನೀಡುವಂಥದು
**ಮಧು** – ವಸಂತ; ಮದ್ಯ
**ಮಧುಕ** – ಹಿಪ್ಪೆ ಮರ
**ಮಧುಕರ** – ದುಂಬಿ
**ಮಧುಕರಿ** – ಹೆಣ್ಣು ದುಂಬಿ
**ಮಧುಕೋಶ** – ಜೇನುಗೂಡು; ಮದ್ಯಪಾನ ಪಾತ್ರೆ
**ಮಧುದ್ರವ** – ಮದ್ಯ
**ಮಧುಪ** – ದುಂಬಿ; ಹೆಂಡಕುಡುಕ
**ಮಧುಪರ್ಕ** – ಮೊಸರು, ತುಪ್ಪ ನೀರು, ಜೇನುತುಪ್ಪ ಮತ್ತು ಸಕ್ಕರೆಗಳ ಮಿಶ್ರಣ
**ಮಧುಪಿಂಗಳ** – ಜೇನಿನಂತಹ ಹೊಂಗೆಂಪು ಬಣ್ಣ
**ಮಧುಪ್ರಸಂಗ** – ವಸಂತ ಸಮಯ
**ಮಧುಮಥನ** – ಮಧು ಎಂಬ ರಾಕ್ಷಸನನ್ನು ಕೊಂದವನು, ಕೃಷ್ಣ
**ಮಧುಮರ್ದನ** – ಮಧುಮಥನ; (ಜೈನ) ವಾಸುದೇವ
**ಮಧುಮಹೋತ್ಸವ** – ವಸಂತಕಾಲದ ಸಂಭ್ರಮ
**ಮಧುಮಿತ್ರ** – ವಸಂತನ ಗೆಳೆಯ, ಮನ್ಮಥ
**ಮಧುರರವ** – ಇಂಪಾದ ಧ್ವನಿ
**ಮಧುರರಸ** – ಕಬ್ಬಿನ ರಸ
**ಮಧುರಸ** – ಮದ್ಯ
**ಮಧುರಾಲಾ(ಳಾ)ಪ** – ಸವಿ ಮಾತು
**ಮಧುರಿಪುಜ** – ವಿಷ್ಣುವಿನ ಮಗ, ಮನ್ಮಥ

**ಮಧುರೋಕ್ತಿ** – ಮಧುರಾಲಾ(ಳಾ)ಪ
**ಮಧುಲಿಟ್** – ದುಂಬಿ
**ಮಧುವಿಕಾರಿ** – ಮಧುವನ್ನು ಹೀರಿ ಸೊಕ್ಕೇರಿದ
**ಮಧುವಿಹಂಗ** – ದುಂಬಿ
**ಮಧುವ್ರತ** – ಮಧುವಿಹಂಗ
**ಮಧುಸಂಗಮ** – ವಸಂತ ಸಮಾಗಮ; ಮದ್ಯದ ಸಂಪರ್ಕ
**ಮಧುಸಖ** – ಮಧುಮಿತ್ರ
**ಮಧುಸೇಕ** – ಮದ್ಯಸಿಂಚನ; ದೋಹದಕ್ರಿಯೆ
**ಮಧೂದ್ಗಮ** – ವಸಂತದ ಆರಂಭ
**ಮಧೂಳ** – ಇರುವಂತಿಗೆ
**ಮಧ್ಯ** – ನಡುವಣ; ಸೊಂಟ; ಮೂರು ಬಗೆಯ ಸಂಗೀತದಲ್ಲಿನ ಲಯಗಳಲ್ಲಿ ಒಂದು
**ಮಧ್ಯಂದಿನ** – ನಡುಹಗಲು
**ಮಧ್ಯಮತನು** – ಅತಿರೇಕಗಳಿಲ್ಲದ ಹದವಾದ ದೇಹಗಾತ್ರ
**ಮಧ್ಯಮವರ್ತಿ** – ನಡುವೆ ಇರುವ
**ಮಧ್ಯಲೋಕ** – ಊರ್ಧ್ವಲೋಕ ಮತ್ತು ಅಧೋಲೋಕಗಳ ನಡುವಣ ಭೂಲೋಕ
**ಮಧ್ಯಾಜಿರ** – ನಡುವಣ ಅಂಗಳ
**ಮನಂಗಲ್** – ಮತ್ತೊಬ್ಬರ ಮನಸ್ಸನ್ನು ಅರಿತುಕೊ
**ಮನಂಲಿ** – ಮಾನಸಿಕವಾಗಿ ಪರಾಕ್ರಮಿಯಾದವನು
**ಮನಂಕಿ(ಗೆ)ಡು** – ಎದೆಗುಂದು
**ಮನಂಗಾಣ್** – ಸ್ಪಷ್ಟವಾಗಿ ಅರಿತುಕೊ
**ಮನಂಗಾಪು** – ಮನೋನಿಗ್ರಹ
**ಮನಂಗುಂದು** – ಎದೆಗುಂದು
**ಮನಂಗು(ಗೊ)ಡು** – ಗಮನವಿರಿಸು
**ಮನಂಗೆಡಿಸು** – ಎದೆಗುಂದಿಸು
**ಮನಂಗೆಯ್** – ನಿರ್ಧಾರಮಾಡು
**ಮನಂಗೊಳ್** – ಆಕರ್ಷಿಸು; ಮನಸ್ಸಿಗೆ ಹಿಡಿ
**ಮನಂಗೊಳಸು** – ಆಹ್ಲಾದವುಂಟುಮಾಡು; ಒಪ್ಪಿಸು
**ಮನಂದರ್** – ಇಚ್ಛಿಸು
**ಮನಂದೆಗೆ** – ಹಿಂಜರಿ
**ಮನಂದೋಱು** – ವ್ಯಕ್ತಪಡಿಸು
**ಮನಂಬಸು** – ಇಮ್ಮನವಾಗು, ಒಡೆದ ಮನಸ್ಸು
**ಮನಂಬುಗು** – ಮನಸ್ಸಿಗೆ ನಾಟು
**ಮನಂಬೊಯ್** – ಮನದಟ್ಟುಮಾಡು
**ಮನಂಮಿಗು** – ಧೈರ್ಯಗುಂದು
**ಮನಃಕಂಪ** – ಎದೆನಡುಕ, ಭಯ
**ಮನಃಕ್ಷತ** – ಮನಸ್ಸಿನ ಮೇಲಾದ ಪೆಟ್ಟು
**ಮನಃಖೇದ** – ಮನಸ್ಸಿನೊಳಗಣ ದುಃಖ
**ಮನಃಪರ್ಯಯ** – (ಜೈನ) ಐದು ವಿಧವಾದ ಜ್ಞಾನಗಳಲ್ಲಿ ಒಂದು; ಇತರರ ಅಂತರಂಗವನ್ನು ತಿಳಿಯುವುದು; ನೋಡಿ, 'ಜ್ಞಾನ'
**ಮನಃಪ್ರವೀಚರಣ** – ಮನಸ್ಸಿನಲ್ಲಿ ಇಂದ್ರಿಯಸುಖಾನುಭವ
**ಮನಃಪ್ರವೀಚಾರ** – ಮನಃಪ್ರವೀಚರಣ
**ಮನಃಪ್ರಿಯ(ಯೆ)** – ಮನದನ್ನ(ನ್ನೆ)
**ಮನಕತ** – (ಮನಃಕ್ಷತ) ಮನಸ್ತಾಪ
**ಮನಃಕ್ಷತ** – ಮನೋವ್ಯಥೆ
**ಮನಕ್ಕೆ ತರ್** – ಗಮನ ಹರಿಸು
**ಮನಕ್ಕೆ ವರ್** – ಇಷ್ಟವಾಗು
**ಮನದನ್ನ** – ಪ್ರಿಯಕರ
**ಮನದನ್ನಳ್** – ಪ್ರಿಯೆ
**ಮನದೆಗೊಳ್** – ಒಪ್ಪಿಕೊ; ಮೆಚ್ಚಿಕೊ
**ಮನದೆಗೊಳದು** – ಮನಸ್ಸಿಗೆ ಹಿಡಿಸು
**ಮನಮಾರೆ** – ತೃಪ್ತಿಯಾಗುವ ಹಾಗೆ
**ಮನ(ಂ)ಮಿಗು** – ಎದೆಗುಂದು, ಮನಸ್ಸು ಕುಸಿ
**ಮನಮುರಿ** – ಮನಸ್ಸನ್ನು ಬೇರೆಡೆ ತಿರುಗಿಸು
**ಮನಮೊ(ವೊ)ಸೆ** – ಮನಸ್ಸಿಗೆ ಒಪ್ಪು
**ಮನಸಲ್** – ಮನಸೋಲು
**ಮನಸಿಜ** – ಮನ್ಮಥ; (ಜೈನ) ಬಾಹುಬಲಿಯ ಹೆಸರುಗಳಲಿ ಒಂದು
**ಮನಸ್ತಾಪ** – ಬೇಗುದಿ
**ಮನಸ್ವಿ** – ದೃಢಚಿತ್ತ; ಸ್ವಾಭಿಮಾನಿ
**ಮನೀಷಿ** – ವಿದ್ವಾಂಸ
**ಮನುಕುಲ** – ಮನುಷ್ಯ ಸಮುದಾಯ
**ಮನುಜ** – ಮಾನವ
**ಮನುಜಗತಿ _ (ಜೈನ) ಮನುಷ್ಯ ಜನ್ಮ; ಚತುರ್ಗತಿಗಳಲ್ಲಿ ಒಂದು, ನೋಡಿ 'ಚತುರ್ಗತಿ'–**
**ಮನುಜತೆ** – ಮನುಷ್ಯತ್ವ
**ಮನುಜಾಧೀಶ** – ರಾಜ
**ಮನುಜೇಂದ್ರ** – ಮನುಜಾಧೀಶ
**ಮನುಮಾರ್ಗ** – ಸ್ಮೃತಿಕಾರ ಮನು ಹಾಕಿಕೊಟ್ಟ ದಾರಿ; ಸ್ಮೃತಿಗನುಗುಣವಾದ ನಡವಳಿಕೆ
**ಮನುವಂಶ** – ಮಾನವಸಮುದಾಯ
**ಮನುವಂಶಧ್ವಜ** – ಮಾನವಶ್ರೇಷ್ಠ
**ಮನುಷ್ಯಗತಿ** – (ಜೈನ) ಮನುಜಗತಿ
**ಮನುಷ್ಯಜಾತಿ** – ಮನುಕುಲ
**ಮನುಷ್ಯಧರ್ಮ** – ಮಾನವ ನಡವಳಿಕೆ; ಕುಬೇರ
**ಮನುಷ್ಯಲೋಕ** – ಭೂಲೋಕ
**ಮನೆಯಾಣ್ಮ** – ಮನೆಯ ಯಜಮಾನ; ಗಂಡ
**ಮನೆದೈವ** – ಕುಲದೇವರು
**ಮನೆದೊಱ್ತಿ** – ಮನೆ ಕೆಲಸದವಳು
**ಮನೆವಾೞ್** – ಸಾಂಸಾರಿಕ ಜೀವನ
**ಮನೆವಾೞದಮ್ಮ** – ಗೃಹಸ್ಥಧರ್ಮ
**ಮನೆವಾೞ್ತಿ** – ಗೃಹಕೃತ್ಯ
**ಮನೆವೆರ್ಗಡೆ** – ಅರಮನೆಯ ವ್ಯವಹಾರಗಳನ್ನು ನೋಡಿಕೊಳ್ಳುವ ಅಧಿಕಾರಿ
**ಮನೋಗತ** – ಅಭಿಪ್ರಾಯ; ಆಶಯ
**ಮನೋಗುಪ್ತಿ** – (ಜೈನ) ಸಮಭಾವನೆಯಿಂದ ಎಲ್ಲರ ಕಲ್ಯಾಣವನ್ನು ಬಯಸುವುದು;

ಮೂರು ಗುಪ್ತಿಗಳಲ್ಲಿ ಒಂದು; 'ಗುಪ್ತಿತ್ರಯ'
**ಮನೋಗ್ಲಾನಿ** – ಮಾನಸಿಕ ವ್ಯಥೆ
**ಮನೋಜ** – ಕಾಮ, ಮನ್ಮಥ
**ಮನೋಜನಿತ** – ಮನಸ್ಸಿನಲ್ಲಿ ಜನಿಸಿದ
**ಮನೋಜವ** – ಮನಸ್ಸಿನ ವೇಗ
**ಮನೋಜಸೂದನ** – ಮನ್ಮಥಸಂಹಾರಿ, ಶಿವ
**ಮನೋಜಾಗಮ** – ಕಾಮಶಾಸ್ತ್ರ
**ಮನೋಜ್ಞ** – ಸುಂದರವಾದ
**ಮನೋಜ್ಞತೆ** – ಚೆಲುವು
**ಮನೋಜ್ಞೆ** – ಚೆಲುವೆ
**ಮನೋಗದ** – ಚಿಂತೆ; ದುಃಖ
**ಮನೋನಂದನ** – ಆಹ್ಲಾದಕಾರಿಯಾದುದು
**ಮನೋಬಲ** – ಮನಸ್ಸಿನ ಸ್ಥೈರ್ಯ
**ಮನೋಭಂಗ** – ನಿರಾಶೆ
**ಮನೋಭವ** – ಮನಸ್ಸಿನಲ್ಲಿ ಹುಟ್ಟಿದ; ಮನ್ಮಥ
**ಮನೋಭಿಲಷಿತ** – ಇಷ್ಟಪಟ್ಟ
**ಮನೋಮುದ** – ಮಾನಸಿಕ ಸಂತೋಷ
**ಮನೋರಥ** – ಆಸೆ
**ಮನೋರಥಮಹೀರುಹ** – ಇಷ್ಟವನ್ನು ಪೂರೈಸುವ ಮರ, ಕಲ್ಪವೃಕ್ಷ
**ಮನೋರುಜೆ** – ಮಾನಸಿಕ ಕಾಯಿಲೆ
**ಮನೋವಲ್ಲಭ(ಭೆ)** – ಮನಸ್ಸಿನ ಒಡೆಯ, ಪ್ರಿಯಕರ(ಳು)
**ಮನೋವಿರತಿ** – ಆಸಕ್ತಿಯಿಲ್ಲದಿರುವುದು
**ಮನೋಹರ** – ಚಿತ್ತವನ್ನು ಅಪಹರಿಸುವಂಥದು, ರಮಣಿಯವಾದುದು
**ಮನೋಹರಿ** – ಚೆಲುವೆ
**ಮನೋಹಾರಿ** – ಮನಸೆಳೆಯುವಂತಹ(ದು)
**ಮನ್ನಣೆ** – ಗೌರವ
**ಮನ್ನಣೆವಡೆ** – ಮರ್ಯಾದೆಯನ್ನು ಹೊಂದು
**ಮನ್ನಟೆ** – ಕೊರಳ ಸೆರೆಗಳ ಗುಂಪು
**ಮನ್ನಿಸು** – ಗೌರವ ನೀಡು
**ಮನ್ನೆಯ** – ಮಾಂಡಳಿಕ; ಮುಖಂಡ;
**ಮನ್ಮಥ** – ಕಾಮ
**ಮನ್ಯು** – ವ್ಯಥೆ
**ಮನ್ಯ್ವುದ್ಗತ** – ಶೋಕಭರಿತವಾದ
**ಮನ್ವಂತರ** – ಹದಿನಾಲ್ಕು ಮಂದಿ ಮನುಗಳಲ್ಲಿ ಪ್ರತಿಯೊಬ್ಬನ ಆಳ್ವಿಕೆಯ ಅವಧಿ
**ಮನ್ವನ್ವಯ** – ಮನು+ಅನ್ವಯ, ಮನುವಂಶ
**ಮಮ್ಮ** – ಮೊಮ್ಮಗ
**ಮಮ್ಮಲ(ಂ)((ನೆ)** – ವಿಶೇಷವಾಗಿ
**ಮಮ್ಮಟಿಸು** – ಭಯದಿಂದ ತತ್ತರಿಸು
**ಮಯೂಖ** – ಕಾಂತಿ, ಕಿರಣ
**ಮಯೂರ** – ನವಿಲು
**ಮಯೂರಪಿಂಛ** – ನವಿಲುಗರಿ
**ಮಯೂರವಾಹನ** – ಷಣ್ಮುಖ
**ಮಯ್ಮೆ** – ಮಹಿಮೆ
**ಮರಂದ** – ಮಕರಂದ
**ಮರ(ಂ)ಗಡಿ** – ಮರವನ್ನು ಕತ್ತರಿಸು
**ಮರಕತ** – ಪಚ್ಚೆ
**ಮರಕ(ಗ)ಟ್ಟು** – ಮರದ ಬುಡದ ಪಾತಿ
**ಮರಗಟ್ಟಿಲೆ** – ದಟ್ಟವಾದ ಕತ್ತಲೆ
**ಮರಗೆರಸಿ** – ಮರಕೋತಿಯಾಟ
**ಮರಗೊಂಬು** – ಮರದ ಕೊಂಬೆ; ಮರಕೋತಿಯಾಟ
**ಮರಗೋಡು** – ಮರದ ಕೊಂಬೆ; ಕುದುರೆ ಜೀನಿನ ಮುಂದಿನ ಮರದ ಭಾಗ
**ಮರದುಱುಗಲ್** – ಮರಗಳ ತೋಪು
**ಮರಮೊಗ** – ಮರದ ಮುಖವಾಡ
**ಮರಮೊದಲ್** – ಮರದ ಬುಡ
**ಮರಲ್(ಳ್)** – ಹಿಂದಿರುಗು; ಹೂ
**ಮರಲುಂದು** – ಮೈಮರೆತು ನಿದ್ದೆ ಮಡು
**ಮರಲ್ಚು(ಳ್ಚು)** – ಹಿಂದಿರುಗಿಸು
**ಮರವಡು** – ಸ್ತಬ್ದನಾಗು, ಮರದ ಹಾಗೆ ಜಡವಾಗು
**ಮರವಾನಸ** – ಮರದಿಂದ ಮಾಡಿದ ಮನುಷ್ಯನ ಗೊಂಬೆ
**ಮರವಾನಿಸೆ** – ಮರದಿಂದ ಮಾಡಿದ ಹೆಣ್ಣಿನ ಗೊಂಬೆ
**ಮರವಾಯ್** – ಜೋರಾಗಿ ನುಗ್ಗು
**ಮರವಾಳ್** – ಮರದ ಕತ್ತಿ
**ಮರವಿಲ್** – ಮರದ (ಬಿದಿರಿನ?) ಬಿಲ್ಲು
**ಮರಸರಿಗೆ** – ದೊಡ್ಡಚೆಂಬು; ಮರದ ಪಾತ್ರೆ
**ಮರಾಳಯಾನೆ** – ಹಂಸದಂತೆ ಮೆಲುನಡಿಗೆಯುಳ್ಳವಳು
**ಮರಾಳಗಾಮಿನಿ** – ಮರಾಳಯಾನೆ
**ಮರಾಳತೂಳ** – ಹಂಸದ ತುಪ್ಪುಳು
**ಮರಾಳ(ಕೆ)** – ಹೆಣ್ಣು ಹಂಸ
**ಮರಾಳಕಾತೂಲತಲ್ಪ** – ಹಂಸದ ತುಪ್ಪುಳಿನಿಂದ ಮಾಡಿದ ಹಾಸಿಗೆ
**ಮರಿಚ** – ಮೆಣಸು
**ಮರಿಪುಗೊಳ್** – ಸುವಾಸನೆಯನ್ನು ಹೊಂದು
**ಮರೀಚಿ** – ಕಿರಣ, ಕಾಂತಿ
**ಮರೀಚಿಮಾಲಿ** – ಕಿರಣಗಳಿಂದ ಆವೃತನಾದವನು, ಸೂರ್ಯ
**ಮರುಚ್ಚಾಪ** – ಮರುತ್+ಚಾಪ, ಕಾಮನ ಬಿಲ್ಲು
**ಮರುಚ್ಛಿಲ್ಪಿ** – ಮರುತ್+ಶಿಲ್ಪಿ, ದೇವತೆಗಳ ಶಿಲ್ಪಿ
**ಮರುಜ್ಜವ** – ಮರುತ್+ಜವ, ಗಾಳಿಯ ವೇಗ
**ಮರುತ** – ದೇವತೆ; ಗಾಳಿ
**ಮರುತ್ಕುಜ** – ದೇವತೆಗಳ ಮರ, ಕಲ್ಪವೃಕ್ಷ
**ಮರುತ್ತರಂಗಿಣಿ** – ದೇವನದಿ
**ಮರುತ್ತ್ರಿಕ** – (ಜೈನ) ಮೂರು ಬಗೆಯ ವಾಯುಗಳು; ನೋಡಿ, 'ವಾಯುತ್ರಿತಯ'

**ಮರುತ್ವತಿ** – ದೇವೇಂದ್ರ
**ಮರುತ್ಪಥ** – ವಾಯುಮಾರ್ಗ, ಆಕಾಶ
**ಮರುತ್ಪಾಲಕ** – ಮರುತ್ಪತಿ
**ಮರುದಧ್ವಾಪಗೆ** – ದೇವಗಂಗೆ
**ಮರುದಭಿಹತಿ** – ಗಾಳಿಯ ಹೊಡೆತ
**ಮರುದ್ಗಿರಿ** – ದೇವತೆಗಳ ಬೆಟ್ಟ, ಮೇರು
**ಮರುದ್ದಿಶೆ** – ವಾಯುವಿನ ದಿಕ್ಕು, ವಾಯವ್ಯ
**ಮರುದ್ರುಮ** – ಕಲ್ಪವೃಕ್ಷ
**ಮರುದ್ವರ** – ದೇವೇಂದ್ರ
**ಮರುದ್ವೇಗ** – ವಾಯುವೇಗ
**ಮರುನ್ನದಿ** – ಮರುತ್+ನದಿ, ದೇವನದಿ
**ಮರುನ್ಮನ** – ಉಸಿರಾಟದ ಗಾಳಿ
**ಮರುನ್ಮಾರ್ಗ** – ಮರುತ್ಪಥ
**ಮರುಳ್** – ಮೂಢ; ಹುಚ್ಚ; ದೆವ್ವ; ಭ್ರಮೆ
**ಮರುಳ(ಳ)** – ದಡ್ಡ(ಡ್ಡಿ); ಹುಚ್ಚ(ಚ್ಚಿ)
**ಮರುಳಾಗು** – ಮೋಹಗೊಳ್ಳು; ಬುದ್ಧಿಗೇಡಿಯಾಗು
**ಮರುಳ್ಚು** – ಮೋಹಗೊಳಿಸು, ಮರುಳುಗೊಳಿಸು
**ಮರುಳ್ಮಾಡು** – ಮೋಹಗೊಳಿಸು
**ಮರುಳಾಟ** – ತಿಳಿಗೇಡಿತನ; ಪಿಶಾಚಿಗಳ ಕಾಟ
**ಮರುಳಿಕ್ಕು** – ಮಂಕುಬಡಿಸುವ ಮದ್ದನ್ನು ಉಣಿಸು
**ಮರುಳಿಸು** – ಮೋಹಗೊಳಿಸು
**ಮರುಳ್ಗವಿ** – ತಿಳಿಗೇಡಿಯಾದ ಕವಿ
**ಮರುಳ್ಗೊಳ್** – ಭ್ರಾಂತಿಗೊಳ್ಳು; ಸಡಗರಿಸು; ಮೈದುಂಬು
**ಮರುಳ್ತನ** – ಭ್ರಮೆ; ದಡ್ಡತನ
**ಮರುಳ್ವಡೆ** – ಮರುಳ್+ಪಡೆ, ದೆವ್ವಗಳ ಸಮೂಹ
**ಮರೆ** – ಜಿಂಕೆ
**ಮರ್ಕಟ** – ಕೋತಿ
**ಮರ್ಕಟಧ್ವಜ** – ಅರ್ಜುನ
**ಮರ್ಕಟಬಂಧ** – ಬಿಗಿಯಾದ ಹಿಡಿತ; ಬಿಗಿ ಕಟ್ಟು
**ಮರ್ಚ್ಚಿ** – ಮಚ್ಚು, ಚಿನ್ನದ ಚೂರು
**ಮರ್ಚು** – ಮಚ್ಚೆ, ನೊಣ
**ಮರ್ಣಾಳ** – ತಾವರೆಯ ದೇಟು
**ಮರ್ತ್ಯಜನ್ಮ** – ಮನುಷ್ಯ ಜನ್ಮ
**ಮರ್ದಳೆ** – ಮದ್ದಳೆ
**ಮರ್ದಿಸು** – ಕೊಲ್ಲು
**ಮರ್ದು** – ಔಷಧ
**ಮರ್ದುವೇಟ್** – ಔಷಧವನ್ನು ಸೂಚಿಸು
**ಮರ್ಮ** – ದೇಹದ ಸೂಕ್ಷ್ಮ ಭಾಗ; ರಹಸ್ಯ
**ಮರ್ಮಜ್ಞ** – ಬದುಕಿನ ಸೂಕ್ಷ್ಮವನ್ನು ಬಲ್ಲವನು
**ಮರ್ಮರಪತ್ರ** – ಮರಮರ ಸದ್ದುಮಾಡುವ ಎಲೆ
**ಮರ್ಮೋದ್ಘಾಟನ** – ಮನಸ್ಸನ್ನು ನೋಯಿಸುವುದು
**ಮರ್ಯಾದೆ** – ಎಲ್ಲೆ
**ಮರ್ವು(ರ್ಬು)** – ಕತ್ತಲೆ
**ಮಲ(ಂ)ಗು** – ಒರಗು; ನಿದ್ರಿಸು; ದಿಂಬು
**ಮಲಧಾರ(ರಿ)** – (ಜೈನ) ಸನ್ಯಾಸಿ
**ಮಲಮಱುಗು** – ಬಹಳ ಕನಿಕರಿಸು; ಮಮ್ಮಲ ಮರುಗು
**ಮಲ(ಳ)ಯ** – ಕುಲಪರ್ವತಗಳಲ್ಲಿ ಒಂದು
**ಮಲ(ಳ)ಯಜ** – ಶ್ರೀಗಂಧ
**ಮಲ(ಳ)ಯರುಹ** – ಶ್ರೀಗಂಧದ ಮರ
**ಮಲ(ಳ)ಯಾನಿಲ(ಳ)** – ಸುಗಂಧಪೂರಿತ ತಂಗಾಳಿ
**ಮಲ(ಳ)ಯೋದ್ಭವ** – ಮಲ(ಳ)ಯರುಹ
**ಮಲರ್** – ಅರಳು, ವಿಕಸಿಸು; ಹೂ; ಮುಖ ತಿರುಗಿಸು
**ಮಲ(ಳ)ರಹಿತ** – ಕಳಂಕವಿಲ್ಲದ
**ಮಲಿನಾಕಾರ** – ಅಂದಗೇಡಿ, ಕುರೂಪಿ
**ಮಲೀ(ಳೀ)ಮಸ** – ಕ್ಷುದ್ರ(ವಾದ); ಮಾಸಿದ
**ಮಲೆ** – ಗರ್ವಿಸು; ಬೆಟ್ಟ; ಬೆಟ್ಟಸೀಮೆ
**ಮಲೆತರ್** – ಸೊಕ್ಕು
**ಮಲೆಪ** – ಬೆಟ್ಟಸೀಮೆಯ ಅರಸು
**ಮಲೆಪು** – ಗರ್ವ
**ಮಲೆಯೆಲರ್** – ಬೆಟ್ಟದ ಕಡೆಯಿಂದ ಬೀಸುವ ಗಾಳಿ
**ಮಲ್ಲ** – ಜಟ್ಟಿ
**ಮಲ್ಲಂತಿಗೆ** – (ಮಲ್ಲವಸ್ತ್ರಿಕಾ) ಮಲ್ಲರು ಧರಿಸುವ ಬಟ್ಟೆ
**ಮಲ್ಲಗಳ** – ಮಲ್ಲ+ಕಳ, ಕುಸ್ತಿಯ ಕಣ
**ಮಲ್ಲದಾಳ** – ತೋಳು ತೊಡೆ ತಟ್ಟಿಕೊಳ್ಳುವುದು
**ಮಲ್ಲಯುದ್ಧ** – ದ್ವಂದ್ವ ಕಾಳಗ
**ಮಲ್ಲರಂಗ** – ಮಲ್ಲಗಳ
**ಮಲ್ಲಲ್** – ಪಾತ್ರೆ
**ಮಲ್ಲವೋರ್** – ಕುಸ್ತಿಮಾಡು
**ಮಲ್ಲಣಿ** – ತಳಮಳ; ಕ್ಷೋಭೆ
**ಮಲ್ಲಣಿಗೊಳ್** – ತಳಮಳಗೊಳ್ಳು; ಮೂರ್ಛೆಗೊಳ್ಳು
**ಮಲ್ಲಾಮಲ್ಲಿ** – ಯುದ್ಧ; ಸ್ಪರ್ಧೆ
**ಮಲ್ಲಿಕಾವೃತಿ** – ಮಲ್ಲಿಗೆ ಪೊದೆ
**ಮಲ್ಲಿಗೆ** – ಮಲ್ಲಿಕಾ
**ಮಲ್ಲಿನಾಥ** – (ಜೈನ) ಒಬ್ಬ ತೀರ್ಥಂಕರ
**ಮಶಕ** – ಸೊಳ್ಳೆ
**ಮಸ** – ಕಾಮತೃಷೆ
**ಮಸಕ** – ವಿಜೃಂಭಣೆ; ತೀಕ್ಷ್ಣತೆ; ಕೆಲಸ; ಉತ್ಸಾಹ
**ಮಸಕಂಗುಂದು** – ಉತ್ಸಾಹಗುಂದು
**ಮಸಗು** – ರೇಗು, ಕೋಪಗೊಳ್ಳು; ವಿಜೃಂಭಿಸು
**ಮಸಣ** – (ಶ್ಮಶಾನ) ಸುಡುಗಾಡು
**ಮಸಣವಟ್ಟಿಗೆ** – ಮಸಣ
**ಮಸಣಿಗೆ** – ಒಂದು ಕ್ಷುದ್ರ ದೇವತೆ
**ಮಸಿ** – ಕಪ್ಪು ಬಣ್ಣ; ಕಾಡಿಗೆ; ಕಲೆ
**ಮಸುರಿಗೆ** – ದಿಂಬು
**ಮಸುಳ್** – ಮಾಸು; ಮಂಕಾಗು
**ಮಸುಳ** – ಕಪ್ಪಗಿರುವವನು
**ಮಸುಳಿಸು** – ಮಂಕುಗೊಳಿಸು; ಕುಗ್ಗು
**ಮಸುಳ್ಕೆವೆಱು** – ಕಾಂತಿಹೀನವಾಗಿರು
**ಮಸೂರಿಕೆ(ಗೆ)** – ಕಡಲೆ; ಮಚ್ಚೆ

**ಮಸೃಣ** – ಮೆತ್ತನೆಯ; ನಯವಾದ
**ಮಸೃಣಿತ** – ನಯವಾಗಿರುವ
**ಮಸೆ** – ತಿಕ್ಕು; ಹರಿತಗೊಳಿಸು; ಹೊಳಪು
**ಮಸೆಯಂಬು** – ಹರಿತವಾದ ಬಾಣ
**ಮಸೆವಡು** – ಹರಿತಗೊಳ್ಳು
**ಮಸ್ಕರಿ** – ಸನ್ಯಾಸಿ
**ಮಸ್ಕರಿಮಾರ್ಗ** – ಸನ್ಯಾಸಿಮಾರ್ಗ
**ಮಸ್ಕರಿಸಮಯ** – ಮಸ್ಕರಿಮಾರ್ಗ
**ಮಸ್ತ(ಕ)** – ತಲೆ
**ಮಸ್ತಿಷ್ಕ** – ಮೆದುಳು
**ಮಹ** – ಉತ್ಸವ; ಹಬ್ಬ
**ಮಹತ್ತರ** – ಅಧಿಕಾರಿ
**ಮಹತ್ತರದೇವಿ** – (ಜೈನ) ಜನಸಾಮಾನಿಕ ದೇವತೆ
**ಮಹತ್ತರಿಕೆ** – ಮಹತ್ತರದೇವಿ
**ಮಹದ್ಬ್ರಹ್ಮಚರ್ಯ** – (ಜೈನ) ಒಂದು ಸಾಧನೆ; ಉಪಾಸಕಗುಣ
**ಮಹರ್ಧಿಕ** – ತುಂಬ ಪ್ರಭಾವಶಾಲಿಯಾದವನು
**ಮಹಳ** – (ಮಹಾಲಯ) ಶ್ರಾದ್ಧ
**ಮಹಾಕಲ್ಯಾಣ** – (ಜೈನ) ಪಂಚಕಲ್ಯಾಣಗಳಲ್ಲಿ ಪ್ರತಿಯೊಂದು
**ಮಹಾಕಾಯ** – ಭಾರಿ ದೇಹವುಳ್ಳವನು
**ಮಹಾಕಾಲ(ಳ)** – ಶಿವನ ಲಯಕಾರಕರೂಪ; (ಜೈನ) ಚಕ್ರವರ್ತಿಯ ಬಳಿಯ ನವನಿಧಿಗಳಲ್ಲಿ ಒಂದು
**ಮಹಾಜನ** – ಜನಸಮೂಹ
**ಮಹಾಜ್ವಾಲ** – (ಜೈನ) ಒಂದು ಮಂತ್ರವಿದ್ಯೆ
**ಮಹಾದ್ವಾರ** – ಹೆಬ್ಬಾಗಿಲು
**ಮಹಾದ್ವಕೃತಿ** – ಶ್ರೇಷ್ಠ ಕಾವ್ಯ
**ಮಹಾನಿಧಾನ** – ಮಹಾ ಸಂಪತ್ತು
**ಮಹಾನಿಲ** – (ಜೈನ) ಭೂಲೋಕವನ್ನು ಆವರಿಸಿರುವ ವಾಯು
**ಮಹಾನೈಷ್ಠಿಕ** – ನಿಷ್ಠಾವಂತ ತಪಸ್ವಿ
**ಮಹಾಪಥಂಬೊಗು** – ಮರಣಿಸು
**ಮಹಾಪುರಾಣ** – (ಜೈನ) ತ್ರಿಷಷ್ಠಿಶಲಾಕಾ ಪುರುಷರನ್ನು ಕುರಿತ, ಜಿನಸೇನರು ಮತ್ತು ಗುಣಭದ್ರರಿಂದ ಸಂಸ್ಕೃತದಲ್ಲಿ ರಚಿತವಾದ ಪುರಾಣ
**ಮಹಾಪುರುಷ** – ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಶ್ರೇಷ್ಠ ವ್ಯಕ್ತಿ
**ಮಹಾಪೂಜೆ** – ಮುಖ್ಯ ಪೂಜೆ
**ಮಹಾಪ್ರಬಂಧ** – ದೊಡ್ಡ ಕಾವ್ಯ
**ಮಹಾಪ್ರಸಾದ** – ಹಿರಿಯರು ಅನುಗ್ರಹಿಸುವ ವಸ್ತು
**ಮಹಾಪ್ರಾಣತೆ** – ಅಪ್ರತಿಮ ಶಕ್ತಿ
**ಮಹಾಭಾಗ(ಗೆ)** – ಅತ್ಯಂತ ಶ್ರೇಷ್ಠನಾದವನು(ಳು); ಪುಣ್ಯಶಾಲಿ
**ಮಹಾಭೋಗ** – ತುಂಬ ಸಂತೋಷದಿಂದ ಕೂಡಿರುವುದು; ವಿಶಾಲವಾದ ಅಂಗಳವನ್ನು ಹೊಂದಿರುವುದು
**ಮಹಾಭೋಗಿ** – ಪರಮ ಸುಖಿ
**ಮಹಾಮಂಡಳಪತಿ** – ರಾಜನಿಗೆ ಮಾತ್ರ ಅಧೀನನಾದ ರಾಜ್ಯದ ಪ್ರಮುಖ ಅಧಿಕಾರಿ
**ಮಹಾಮಹ** – (ಜೈನ) ಮಹಾರಾಜನು ಚತುರ್ಮುಖಮಂಟಪದಲ್ಲಿ ಮಾಡುವ ಜಿನಪೂಜೆ
**ಮಹಾಮಹತ್ತರೆ** – ಅಂತಃಪುರದ ಮುಖ್ಯ ಸೇವಕಿ
**ಮಹಾಮಹಿಮೆ** – ತುಂಬ ಶ್ರೇಷ್ಠನಾದವನು; (ಜೈನ) ಮಹಾಮಹ
**ಮಹಾಮಾತ್ರ** – ಗಜಶಾಲೆಯ ಮುಖ್ಯಸ್ಥ
**ಮಹಾಮಾತ್ಯ** – ಹಿರಿಯ ಮಂತ್ರಿ
**ಮಹಾರಥ** – ಹತ್ತು ಸಾವಿರ ಯೋಧರ ವಿರುದ್ಧ ಯುದ್ಧಮಾಡಬಲ್ಲ ರಥಿಕ
**ಮಹಾಲಯ** – ಮಹಾ+ಆಲಯ, ದೊಡ್ಡ ಭವನ; ಮಹಾ+ಲಯ, ಮಹಾ ವಿನಾಶ
**ಮಹಾವಾತ(ತ್ಯೆ)** – ಬಿರುಗಾಳಿ
**ಮಹಾವಾಹಿನಿ** – ದೊಡ್ಡ ನದಿ
**ಮಹಾವಿದ್ಯೆ** – ಅಸಾಧಾರಣ ಜ್ಞಾನ
**ಮಹಾವಿಭೂತಿ** – ಅತಿಶಯ ವೈಭವ
**ಮಹಾವೀರ** – ದೊಡ್ಡ ಪರಾಕ್ರಮಿ; (ಜೈನ) ಇಪ್ಪತ್ತನಾಲ್ಕನೆಯ ತೀರ್ಥಂಕರನಾದ ವರ್ಧಮಾನ
**ಮಹಾವ್ರತ** – ಮುನಿಗಳು ಪಾಲಿಸಬೇಕಾದ ಪಂಚವ್ರತಗಳ ಗರಿಷ್ಠ ಆಚರಣೆ; (ಜೈನ) ಪಂಚಪಾಪಗಳನ್ನು ಮನಸ್ಸಿನಲ್ಲಿ ಮತ್ತು ಕೃತಿಯಲ್ಲಿ ಮಾಡದ, ಮಾಡಿಸದ ಹಾಗೂ ಅವುಗಳಿಗೆ ಒಪ್ಪಿಗೆ ನೀಡದ – ಹೀಗೆ ಒಂಬತ್ತು ಪ್ರಕಾರದ ಮುನಿಗಳ ವ್ರತ–
**ಮಹಾವ್ರತಿ** – (ಜೈನ) ಮಹಾವ್ರತವನ್ನು ಕೈಗೊಂಡವನು
**ಮಹಾಶುಕ್ರ** – (ಜೈನ) ದ್ವಾದಶಕಲ್ಪಗಳಲ್ಲಿ ಏಳನೆಯದು; ನೋಡಿ, 'ದ್ವಾದಶಕಲ್ಪ'
**ಮಹಾಶ್ವೇತೆ** – ಬಿಳಿಯ ಹೂಬಿಡುವ ಕರೀ ನೆಲಗುಂಬಳ ಎಂಬ ಒಂದು ಸಸ್ಯ; 'ಕಾದಂಬರಿ' ಕಾವ್ಯದ ನಾಯಕಿ
**ಮಹಾಸಂಧಿವಿಗ್ರಹಿ** – ಯುದ್ಧ–ಶಾಂತಿಗಳ ಬಗ್ಗೆ ವ್ಯವಹರಿಸುವ ಸಚಿವರಲ್ಲಿ ಹಿರಿಯ–
**ಮಹಾಸತಿ** – ಪತಿವ್ರತೆ; ಪತಿಯೊಡನೆ ಸಹಗಮನ ಮಾಡಿದವಳು
**ಮಹಾಸಾಮ(ವ)ಂತ** – ಅಧೀನರಾಜರುಗಳಲ್ಲಿ ಮುಖ್ಯನಾದವನು
**ಮಹಾಹವ(ಧ್ವನಿ)** – ಭಾರಿ ಕದನ (ಸದ್ದು)
**ಮಹಿ(ಅ)ಚಕ್ರ** – ಭೂಮಂಡಲ

**ಮಹಿಧರ** – ಪರ್ವತ; ಕೂರ್ಮಾವತಾರದಲ್ಲಿ ಭೂಮಿಯನ್ನು ಹೊತ್ತ ವಿಷ್ಣು
**ಮಹೀಧರೋಪಕಂಠ** – ಬೆಟ್ಟದ ತಪ್ಪಲು
**ಮಹಿ(ೀ)ಭುಜ** – ರಾಜ
**ಮಹಿ(ೀ)ಭೃತ್** – ಮಹಿಭುಜ
**ಮಹಿಮೆ** – (ಜೈನ) ಪೂಜೆ
**ಮಹಿಮೆವಡೆ** – ಘನತೆಯನ್ನು ಪಡೆ
**ಮಹಿಷ** – ಕೋಣ
**ಮಹಿಷನಾಥ** – ದಿಕ್ಪಾಲಕರಲ್ಲಿ ಒಬ್ಬನಾದ ಯಮ
**ಮಹಿಷಿ** – ಎಮ್ಮೆ; ಮಹಾರಾಣಿ
**ಮಹೀಗೃಹ** – ನೆಲಮನೆ
**ಮಹೀಚರ** – ಮಾನವ
**ಮಹೀಜ** – ಮರ
**ಮಹೀಧರ** – ಪರ್ವತ
**ಮಹೀಧ್ರ** – ಮಹೀಧರ
**ಮಹೀಧಾಸ್ತ್ರ** – ಬೆಟ್ಟಗಳನ್ನು ಸುರಿಸುವ ಅಸ್ತ್ರ
**ಮಹೀನಾಥ** – ಭೂಮಿಯ ಒಡೆಯ, ರಾಜ
**ಮಹೀಪತಿ**– ಮಹೀನಾಥ
**ಮಹಿ(ೀ)ಭುಜ** – ರಾಜ
**ಮಹೀರುಹ** – ಮಹೀಜ
**ಮಹೀವಲ್ಲಭ** – ಮಹೀನಾಥ
**ಮಹೀಶ್ವರ** – ಮಹೀನಾಥ
**ಮಹೇಂದ್ರಕಲ್ಪ** – (ಜೈನ) ಹದಿನಾರು ಸ್ವರ್ಗಗಳಲ್ಲಿ ನಾಲ್ಕನೆಯದು
**ಮಹೇಂದ್ರಜಾಲ(ಳ)** – ಅರವತ್ತನಾಲ್ಕು ಕಲೆಗಳಲ್ಲಿ ಒಂದು, ಇಂದ್ರಜಾಲ
**ಮಹೇಂದ್ರಜಾಳಿಗ** – ಯಕ್ಷಿಣಿಗಾರ
**ಮಹೋಕ್ಷ** – ದೊಡ್ಡ ಎತ್ತು
**ಮಹೋತ್ಸವ** – ಸಂಭ್ರಮ; ದೊಡ್ಡ ಉತ್ಸವ
**ಮಹೋದಧಿ** – ಮಹಾ ಸಮುದ್ರ
**ಮಹೋದಯ** – ಹೆಚ್ಚಿನ ಏಳಿಗೆ; ಭಾಗ್ಯವಂತ
**ಮಹೋದ್ಯ** – ಮಹೋದಯ, ಪ್ರಯತ್ನಶಾಲಿ
**ಮಹೋನ್ನತಿ(ಕ್ಕೆ)** – ಹೆಚ್ಚಿನ ಹಿರಿಮೆ
**ಮಹೋರಗ** – ದೊಡ್ಡ ಹಾವು
**ಮಹೌಷಧಿ** – ದೊಡ್ಡ ಸಸ್ಯ; ಒಳ್ಳೆಯ ಔಷಧಿ
**ಮಳ(ಲ)ಯ ಮಹೀಜ** – ಶ್ರೀಗಂಧದ ಮರ
**ಮಳ(ಲ)ಯ ಸಮೀರಣ** – ಮಲಯಪರ್ವತದಿಂದ ಬೀಸುವ ಗಾಳಿ; ತಂಗಾಳಿ
**ಮಳವೆ** – ರಾಶಿ
**ಮಳಮ್ಲುಚ** – ಕಪ್ಪಾದುದು
**ಮಱಕೆ(ಸು)(ಸೊ)ಂದು** – (ಮೈಮರೆತು) ಗಾಢವಾಗಿ ನಿದ್ದೆಮಾಡು
**ಮಱಪಿಕ್ಕು** – ಮರೆಮಾಚು
**ಮಱಪು** – ಮರೆಯುವಂತೆ ಮಾಡು; ಮುಚ್ಚಿಡು
**ಮಱಸು** – ಹೊದಿಸು
**ಮಱಲಿಚೆ** – ಸಾಯುವಂತೆ ಇರಿ, ಹೊಡೆ
**ಮಱಲುಂದು** – ಮಱಕೆಂದು
**ಮಱಲುಂದುವೋವರಿ** – ಮಲಗುವ ಮನೆ
**ಮಱವಡು** – ಮೈಮರೆ
**ಮಱವೆ** – ನೆನಪಿಲ್ಲದಿರುವುದು; ಮೂರ್ಛೆ
**ಮಱಿ** – ಎಳೆಯದು
**ಮಱಿದುಂಬಿ** – ದುಂಬಿಯ ಮರಿ
**ಮಱಿಯಾನೆ** – ಆನೆಯ ಮರಿ
**ಮಱಿವುಲ್ಲೆ** – ಮಱಿ+ಪುಲ್ಲೆ, ಜಿಂಕೆಯ ಮರಿ
**ಮಱಿಸಸಿದಲೆಯ** – ಬಾಲಚಂದ್ರನನ್ನು ತಲೆಯಲ್ಲಿರಿಸಿಕೊಂಡವನು, ಶಿವ
**ಮಱುಕ** – ದುಃಖ; ತಳಮಳ; ಕರುಣೆ
**ಮಱುಕಣಿ(ಳ)ಸು** – ಮರಳಿ ಬರು
**ಮಱುಕುಳ** – ಮರುಗುವ ಸ್ವಭಾವದವನು
**ಮಱುಗಿಸು** – ಕುದಿಸು; ಸುಡು; ನೋವಿಗೊಳಪಡಿಸು
**ಮಱುಗು** – ಕುದಿ; ತವಕಿಸು; ಪರಿತಪಿಸು
**ಮಱುಗುತ್ತಂಬಡು** – ರೋಗವು ಮರುಕಳಿಸು
**ಮಱುಜವಣಿ** – ಸಂಜೀವಿನಿ
**ಮಱುದಿನ** – ಮಾರನೆಯ ದಿನ
**ಮಱುದಿ(ದೆ)ವಸ** – ಮಱುದಿನ
**ಮಱುಭವ** – ಪುನರ್ಜನ್ಮ
**ಮಱುಮಾ(ವಾ)ತು** – ಉತ್ತರ
**ಮಱುಮಾ(ವಾ)ತುಗೊಡು** – ಪ್ರತ್ಯುತ್ತರ ಕೊಡು
**ಮಱುಮೆಯ್** – ಮಱುಭವ
**ಮಱುವಕ್ಕ** – ಪ್ರತಿ ಪಕ್ಷ; ಶತ್ರು
**ಮಱುವಗಲ್** – ಮಱುದಿನ
**ಮಱುವರಸ** – ಶತ್ರು ರಾಜ
**ಮಱುವಾನಿಸ** – ಶತ್ರು ಪಕ್ಷದವನು
**ಮಱುವಾರ್ತೆ** – ವಾಪಸು ಬಂದು ಹೇಳುವ ಸುದ್ದಿ
**ಮಱುವುಟ್ಟು** – ಪುನರ್ಜನ್ಮ
**ಮಱೆ** – ಬಾಹ್ಯಜ್ಞಾನವಿಲ್ಲದಿರು, ನೆನಪು ಹೋಗು; ಗುಪ್ತಸ್ಥಳ; ಹಿಂಬದಿ; ಅಶ್ರಯ
**ಮಱೆಗೆ ವರ್** – ಆಶ್ರಯಕ್ಕೆ ಬರು
**ಮಱೆಗೆಯ್** – ಮರೆಮಾಡು
**ಮಱೆಗೇಳ್** – ಕದ್ದು ಕೇಳು
**ಮಱೆಗೊಳ್** – ಕಾಣದಾಗು; ಅಡಗಿಕೊ
**ಮಱೆಗೋಟೆ** – ಆಶ್ರಯಸ್ಥಾನ
**ಮಱೆಮಾಡು** – ಗುಪ್ತವಾಗಿರಿಸು
**ಮಱೆಮೆಯ್** – ನೆನಪಿಲ್ಲದ ಹಿಂದಿನ ಜನ್ಮ
ಮಱೆಯಿಸು – ಮರೆತುಹೋಗುವಂತೆ ಮಾಡು; ಅಡಗಿಸಿಡು; ಎಚ್ಚರ ತಪ್ಪಿಸು–
**ಮಱೆಯೊಡ್ಡು** – ಅಡ್ಡಲಾಗಿ ಹಿಡಿ
**ಮಱೆವಡು** – ಮಱೆ+ಪಡು, ಮೈಮರೆತು ನಿದ್ರಿಸು
**ಮಱೆವಾಱ್** – ಹಾದರ ಮಾಡು; ವ್ಯಭಿಚಾರ
**ಮಱೆವೇಱು** – ಆಶ್ರಯವನ್ನು ಹೊಂದು
**ಮಱೆವೊ(ವು)ಗು** – ಶರಣಾಗತನಾಗು
**ಮಱೆಸನ್ನೆಗೆಯ್** – ರಹಸ್ಯವಾಗಿ ಸನ್ನೆ ಮಾಡು
**ಮಱಮಱಿಸು** – ಕಣ್ಣು ಮಸುಕಾಗು; ದೃಷ್ಟಿಕ್ಷೋಭೆ

**ಮಱಿಲ್** – ಮಱಿಮಱಿಸು
**ಮಱಿಗೆ** – ಅಂಗಡಿ; ಶೇಖರಣಾ ಸ್ಥಳ
**ಮಱಿಗಾಲ** – ಕಾರ್ಗಾಲ
**ಮಱಿವನಿ** – ಮಳೆಯ ಹನಿ
**ಮೞ್ಗಿಸು** – ಅಡಗಿಸು, ತಗ್ಗಿಸು
**ಮೞ್ಗು** – ಆರು; ಕುಗ್ಗಿಹೋಗು
**ಮೞ್ತಿ** – ಮತ್ತಿ ಮರ; ಅರ್ಜುನ ವೃಕ್ಷ; ಮಚ್ಚೆ
**ಮಾ** – ಬೇಡ
**ಮಾಂಕರಿಸು** – ಹೀಯಾಳಿಸು
**ಮಾಂಗಲಿ(ಳ)ಕ** – ಮಂಗಳಕರವಾದ; ಮಂಗಳಗೀತೆ
**ಮಾಂಗಲ್ಯಗೇಯ** – ಮಂಗಳಗೀತೆ
**ಮಾಂಗಾಯ್** – ಮಾವಿನ ಕಾಯಿ; ಒಂದು ಆಭರಣ
**ಮಾಂಗೊನರ್** – ಮಾವಿನ ಚಿಗುರು
**ಮಾಂಜು** – ಮರೆಮಾಚು
**ಮಾಂತನ** – ಹಿರಿತನ
**ಮಾಂದಳಿರ್** – ಮಾಂಗೊನರ್
**ಮಾಂದಿಸು** – ಅಡ್ಡಗಟ್ಟು
**ಮಾಂದು** – ಪ್ರತಿಭಟನೆ ಮಾಡು; ಹಿಮ್ಮೆಟ್ಟು
**ಮಾಂದ್ಯ** – ಮೆಲ್ಲನೆ; ಜಾಡ್ಯ
**ಮಾಂಸಕವಳ** – ಬಾಡಿನ ಊಟ
**ಮಾಂಸಳ** – ಪುಷ್ಟವಾದ
**ಮಾಂಸಳಿತ** – ಮಾಂಸಳ
**ಮಾಕಂದ** – ಮಾವಿನ ಮರ
**ಮಾಕಾಳ** – (ಮಹಾಕಾಲ) ಒಂದು ಪ್ರಮಥಗಣ
**ಮಾಕಾಳ** – (ಮಹಾಕಾಲಿ) ಪಾರ್ವತಿ
**ಮಾಗ** – ಮಾಘಮಾಸ
**ಮಾಗಧ** – ರಾಜರ ಕೀರ್ತಿಯನ್ನು ಹೊಗಳುವವನು; ಮಗಧ ದೇಶಕ್ಕೆ ಸಂಬಂಧಿಸಿದ
**ಮಾಗಿ(ಗೆ)** – ಚಳಿಗಾಲ
**ಮಾಗುಳವೇರ್** – ಮಾಕಳಿ ಬೇರು
**ಮಾಟ** – ಕೆಲಸ; ನಿರ್ಮಿತಿ; ಕಣ್ಕಟ್ಟು; ಕೃತ್ರಿಮವಾದುದು; ಅಭಿಚಾರ
**ಮಾಟಕೂಟ** – ಸುಂದರವಾದ ಗೋಪುರ
**ಮಾಡ** – ಉಪ್ಪರಿಗೆ; ಹರ್ಮ್ಯ; ಗೋಡೆಯ ಗೂಡು
**ಮಾಡಶಾಲೆ** – ಮೊಗಸಾಲೆ
**ಮಾಡು** – ಕೆಲಸಗೈ; ಸೃಷ್ಟಿಸು; ಉಂಟಾಗಿಸು
**ಮಾಡುವೆಟ್ಟು** – ಕೃತಕಶೈಲ
**ಮಾಡುಹ** – ಮಾಡುವಿಕೆ
**ಮಾಣ್** – ಬಿಟ್ಟುಬಿಡು; ನಿಂತುಹೋಗು; ಸುಮ್ಮನಿರು; ಈಡೇರಿಸದಿರು; ತಪ್ಪಿಸಿಕೊ
**ಮಾಣವಕ** – ಇಪ್ಪತ್ತು ಎಳೆಗಳ ಮುತ್ತಿನ ಹಾರ; (ಜೈನ) ನವನಿಧಿಗಳಲ್ಲಿ ಒಂದು
**ಮಾಣಿ** – ಹುಡುಗ
**ಮಾಣಿಕ** – ಪದ್ಮರಾಗ, ನವರತ್ನಗಳಲ್ಲಿ ಒಂದು; ರಜಸ್ಸು
**ಮಾಣಿಕಂಗಾಣ್** – ಮುಟ್ಟಾಗು, ರಜಸ್ವಲೆಯಾಗು
**ಮಾಣಿಕೆಗೆಂಟು** – ರಜಸ್ವಲೆಯಾದ್ದರಿಂದ ದೂರವಿರಬೇಕಾದುದು
**ಮಾಣಿಕಚಟ್ಟ** – ರತ್ನಪರೀಕ್ಷಕ
**ಮಾಣಿಕವರಿಗೆ** – ಕೆಂಪು ಹರಳು ಜೋಡಿಸಿರುವ ಗುರಾಣಿ
**ಮಾಣಿಕ್ಯ** – ಪದ್ಮರಾಗ
**ಮಾಣಿಸು** – ನಿಲ್ಲಿಸು; ಅಡಗಿಸು; ಸುಮ್ಮನಿರಿಸು
**ಮಾತಂಗ** – ಆನೆ; ಬೇಡರವನು; ಶ್ವಪಚ
**ಮಾತಂಗಕುಲ** – ಆನೆಗಳ ಗುಂಪು
**ಮಾತಂಗಚರಿತ** – ಆನೆಯ ಗಾಂಭೀರ್ಯದವನು; ಚಂಡಾಲನ ಗುಣದವನು
**ಮಾತಂಗಿ** – ಚಂಡಾಲರವಳು; ಬೇಡಿತಿ; (ಜೈನ) ಹತ್ತು ಮಹಾವಿದ್ಯೆಗಳಲ್ಲಿ ಒಂದು
**ಮಾತಟ್ಟು** – ಸುದ್ದಿಯನ್ನು ಹೇಳಿ ಕಳಿಸು
**ಮಾತಡಕು** – ಸಂದೇಶ ತಲುಪಿಸು
**ಮಾತರಿಶ್ವ** – ಗಾಳಿ
**ಮಾತಾಮಹ** – ತಾಯಿಯ ತಂದೆ
**ಮಾತಱಿವಂ** – ಚೆನ್ನಾದ ಮಾತು ಬಲ್ಲವನು
**ಮಾತಾಳ** – (ಮಾತಲಿ) ಇಂದ್ರನ ಸಾರಥಿ
**ಹರಟೆಕೋರ**–
**ಮಾತು** – ನುಡಿ; ಹೇಳಿಕೆ; ವಿಷಯ
**ಮಾತುಂಗುಟ್ಟು** – ಮಾತಾಡು, ಸಂಭಾಷಿಸು
**ಮಾತುಗೆಡು** – ನುಡಿಯಿಲ್ಲದಾಗು
**ಮಾತುಗೇಳ್** – ಒಡಂಬಡು, ಒಪ್ಪು
**ಮಾತುದೆಗೆ** – ಸಂಭಾಷಣೆಗೆ ತೊಡಗು
**ಮಾತುಲ(ಳ)** – ಸೋದರ ಮಾವ
**ಮಾತುಲು(ಳು)ಂಗ** – ಮಾದಲ ಹಣ್ಣು
**ಮಾತುವಲ್ಲಹ** – ಮಾತಿನ ದೇವತೆಯಾದ ಸರಸ್ವತಿಯ ಗಂಡ, ಬ್ರಹ್ಮ
**ಮಾತ್ರಾಭಾಂಡ** – ಹಣ ಅಥವಾ ಒಡವೆಗಳನ್ನಿಡುವ ಚೀಲ ಅಥವಾ ಪೆಟ್ಟಿಗೆ
**ಮಾತ್ಸ್ಯನ್ಯಾಯ** – ಮತ್ಸ್ಯನ್ಯಾಯ, ಬಲಿಷ್ಠ ದುರ್ಬಲನ್ನು ಪೀಡಿಸುವುದು
**ಮಾದರ** – ಮಾದಿಗ
**ಮಾದುಪಳ** – ಮಾದಲ ಹಣ್ಣು
**ಮಾದುಫಲ(ಳ)** – ಮಾದುಪಳ
**ಮಾದುರ** – (ಮಹಾಧುರ) ದೊಡ್ಡ ಯುದ್ಧ
**ಮಾದಿಂಗಿತ್ತಿ** – ಮಾದಿಗ ಹೆಂಗಸು
**ಮಾದೆ(ಂ)(ದಿ)ಗ** – ಒಂದು ಪರಿಶಿಷ್ಟ ಜಾತಿ
**ಮಾದೆ(ಂ)ಗಿ** – ಮಾದಿಗ ಹೆಂಗಸು
**ಮಾದೇವ** – (ಮಹಾದೇವ) ಈಶ್ವರ
**ಮಾದೇವಿ** – (ಮಹಾದೇವಿ) ಪಾರ್ವತಿ; ಪಟ್ಟಮಹಿಷಿ
**ಮಾದ್ಯತ್** – ಮದಿಸಿದ
**ಮಾದ್ಯದ್ಗಜ** – ಮದ್ದಾನೆ
**ಮಾಧವ** – ಮಧುಮಾಸ, ವಸಂತ
**ಮಾಧವೀ** – ವಾಸಂತಿ, ಮೊಲ್ಲೆ, ಇರುವಂತಿಗೆ

**ಮಾಧ್ಯಮಿಕ** – ಶೂನ್ಯವಾದ; ಬೌದ್ಧಮತದ ಒಂದು ಪಂಗಡ
**ಮಾಧ್ಯಸ್ಥವೃತ್ತಿ** – (ಜೈನ) ದುಷ್ಟರ ಬಗ್ಗೆ ವ್ರತಸ್ಥರು ಇರಿಸಿಕೊಳ್ಳಬೇಕಾದ ತಟಸ್ಥ ಭಾವನೆ
**ಮಾನ** – ಆತ್ಮಗೌರವ; ಅಳತೆಯ ಪ್ರಮಾಣ; ಸ್ತ್ರೀಯ ಪ್ರಣಯಕೋಪ
**ಮಾನಂದನ** – ಲಕ್ಷ್ಮಿಯ ಮಗ, ಮನ್ಮಥ
**ಮಾನಕಷಾಯ** – (ಜೈನ) ನಾಲ್ಕು ಮಾನಸಿಕ ದೋಷಗಳಲ್ಲಿ ಒಂದು, ನೋಡಿ, 'ಕಷಾಯ'
**ಮಾನಗರ್ವ** – ಅಹಂಕಾರ
**ಮಾನಗೆ** – (ಮಾನಕ) ಅಳತೆಯ ಸಾಧನ
**ಮಾನತೆ** – ದುಃಖ
**ಮಾನದಿ** – (ಮಹಾನದಿ) ದೊಡ್ಡ ನದಿ
**ಮಾನಧನ** – ಸ್ವಾಭಿಮಾನವನ್ನೇ ಧನವೆಂದು ಪರಿಗಣಿಸುವವನು, ದುರ್ಯೋಧನ
**ಮಾನಧರ** – ಗೌರವಸ್ಥ
**ಮಾನನಿಧಾನೆ** – ಮರ್ಯಾದೆಯನ್ನೇ ಧನವೆಂದು ಪರಿಗಣಿಸುವವಳು
**ಮಾನನಿಧಿ** – ಮಾನಧನ
**ಮಾನನೀಯ** – ಗೌರವಾರ್ಹ
**ಮಾನಭಂಗ** – ಅವಮಾನ
**ಮಾನವಲೋಕ** – ಭೂಲೋಕ
**ಮಾನವಾಹಿತ** – ಮರ್ಯಾದೆವಂತ
**ಮಾನಸ** – ಮಾನಸ ಸರೋವರ; ಮನಸ್ಸು; ಮನುಷ್ಯ
**ಮಾನಸಗೋಲ** – ಕುಸ್ತಿಯ ಒಂದು ವರಸೆ
**ಮಾನ(ನಿ)ಸವಾಱ್** – ಮನುಷ್ಯ ಜೀವನ
**ಮಾನಸವೇಗ** – ಮನಸ್ಸಿನ ವೇಗ
**ಮಾನಸಸಂಭವ** – ಮನಸ್ಸಿನಲ್ಲಿ ಹುಟ್ಟಿದವನು; ಮಾನಸ ಸರೋವರದಲ್ಲಿ ಜನಿಸಿದವನು
**ಮಾನಸಿ(ಸೆ)** – ಮಾನವ ಹೆಂಗಸು
**ಮಾನಸಿಕೆ(ಕ್ಕೆ)** – ಮಾನವತ್ವ; ಸ್ವಾಭಿಮಾನ
**ಮಾನಸೂತ್ರ** – ಅಳತೆಯ ದಾರ
**ಮಾನಸೌಕಸ** – ಮಾನಸ ಸರೋವರದ ಹಂಸ
**ಮಾನಸ್ತಂಭ** – (ಜೈನ) ಬಸದಿಯ ಮುಂದಿನ ಕಂಬ; ಸಮವಸರಣಮಂಟಪದ ನಡುವಣ ಕಂಬ
**ಮಾನವಮಿ** – ಮಹಾನವಮಿ
**ಮಾನಾಮಿ** – ಮಾನವಮಿ
**ಮಾನಿತ** – ಗೌರವನೀಯ
**ಮಾನಿನಿ** – ಸ್ವಾಭಿಮಾನಿ ಹೆಣ್ಣು
**ಮಾನುಷಸಿದ್ಧಿ** – ಮಾನವಯತ್ನದಿಂದ ಪಡೆದುದು
**ಮಾನುಷೋತ್ತರಗಿರಿ** – (ಜೈನ) ಮಧ್ಯಮಲೋಕದ ಒಂದು ಪರ್ವತ
**ಮಾನುಸ** – ಮಾನವ
**ಮಾನೋನ್ನತ** – ಉನ್ನತವಾದ ಗೌರವ ಪಡೆದವನು
**ಮಾನೋನ್ನತಿ** – ಹಿರಿದಾದ ಗೌರವ
**ಮಾನೋಮಿ** – ಮಹಾನವಮಿ
**ಮಾನ್ಯ** – ಗೌರವಾರ್ಹ
**ಮಾಮ** – ಮಾವ
**ಮಾಮರ** – ಮಾವಿನ ಮರ
**ಮಾಮಸಕ** – ಸಡಗರ; ಅತಿ ರೋಷ
**ಮಾಮಸಕಂ ಮಸಗು** – ಕೋಪದಿಂದ ಕೆರಳು
**ಮಾಮಸಕಂಗೊಳ್** – ಕೋದಿಂದ ಕೆರಳು
**ಮಾಮಿಡಿ** – ಮಾವಿನ ಮಿಡಿ, ಕಸುಗಾಯಿ
**ಮಾಯ್** – ಕ್ಷೀಣಿಸು; ಮರೆಯಾಗು; ದುಷ್ಟತೆಯಿಂದ ಕೂಡಿರು; ನಿವಾರಣೆಗೊಳ್ಳು
**ಮಾಯವಾಗು** – ಅದೃಶ್ಯವಾಗು
**ಮಾಯಾನಿದ್ರೆ** – ಮಂತ್ರಹಾಕಿ ಬರಿಸುವ ನಿದ್ದೆ
**ಮಾಯಾಮಾರ್ಗ** – ಮಿಥ್ಯೆಯ ದಾರಿ
**ಮಾಯಾಯುದ್ಧ** – ಇಂದ್ರಜಾಲದಿಂದ ಕೂಡಿದ ಯುದ್ಧ
**ಮಾಯಾರ್ಭಕ** – (ಜೈನ) ಜಿನಶಿಶು ಹುಟ್ಟಿದಾಗ ಅದಕ್ಕೆ ಜನ್ಮಾಭಿಷೇಕವನ್ನು ನೆರವೇರಿಸಲು ನಿಜವಾದ ಮಗುವನ್ನು ತೆಗೆದುಕೊಂಡು ಇಂದ್ರಾಣಿಯು ಜಿನಮಾತೆಯ ಬಳಿ ಇಡುವ ಕೃತಕ ಮಗು
**ಮಾಯಾವಿ** – ಮೋಸಗಾರ
**ಮಾಯಾಶಲ್ಯ** – (ಜೈನ) ವ್ರತಸ್ಥನಿಗೆ ಬರುವ ಮೂರು ಬಗೆಯ ಅಡ್ಡಿಗಳಲ್ಲಿ ಒಂದು
**ಮಾಯಾಶಿಶು** – ಮಾಯಾರ್ಭಕ
**ಮಾಯೆ** – ಇಂದ್ರಜಾಲ; ಕಪಟ
**ಮಾಯ್ದ** – ನೀಚ
**ಮಾರ** – ಕಾಮ
**ಮಾರಣ** – ಕೊಲೆ; ಅಳಿವು
**ಮಾರಣಮಂತ್ರ** – ಶತ್ರುವಿನ ವಿನಾಶಕ್ಕಾಗಿ ಪ್ರಯೋಗಿಸುವ ಮಂತ್ರ
**ಮಾರಣಹೋಮ** – ಶತ್ರುವಿನ ವಿನಾಶಕ್ಕಾಗಿ ಮಾಡುವ ಯಜ್ಞ
**ಮಾರಿ** – ಮೃತ್ಯುದೇವತೆ; ಆಪತ್ತು; ಕ್ಷುದ್ರ ದೇವತೆ
**ಮಾರಿಕಬ್ಬೆ** – ಮಾರಿ ಎಂಬ ದೇವತೆ
**ಮಾರಿಗುತ್ತ** – ಭಯಂಕರ ರೋಗ
**ಮಾರಿಗೆ** – ಮಾರಿದೇವತೆ
**ಮಾರಿಯ ಮೂರಿ** – ಮಾರಿಯ ಮೃತ್ಯುರೂಪದ ಬಾಯಿ
**ಮಾರೀಚ** – ಕಶ್ಯಪ ಋಷಿ; ಒಬ್ಬ ರಾಕ್ಷಸ
**ಮಾರುಡ(ಡು)** – ಬಿಲ್ವಪತ್ರೆ
**ಮಾರುತ** – ಗಾಳಿ; ವಾಯು ದೇವತೆ
**ಮಾರುತಪಥ** – ಆಕಾಶ
**ಮಾರುತಬಂಧು** – ಗಾಳಿಯ ಗೆಳೆಯ, ಬೆಂಕಿ, ಅಗ್ನಿ
**ಮಾರುತಭುಕ್** – ಗಾಳಿಯನ್ನೇ ಆಹಾರವಾಗಿ ಸೇವಿಸುವುದು, ಹಾವು
**ಮಾರುತಮಂಡಲ(ಳ)** – ವಾಯುಮಂಡಲ
**ಮಾರುತಮಾರ್ಗ** – ಮಾರುತಪಥ

**ಮಾರುತಸುತ** – ವಾಯುವಿನ ಮಗ, ಹನುಮಂತ; ಭೀಮ
**ಮಾರುತಿ** – ಮಾರುತಸುತ
**ಮಾರ್ಕಂಡಿ** – ಕಾಡುಮೃಗಗಳ ಜಾಡು
**ಮಾರ್ಕಾಡು** – ಕಾಡುಮೃಗಗಳ ಆಶ್ರಯದ ಕಾಡು
**ಮಾರ್ಕಿಡಿವಿಡು** – ಪ್ರತಿಯಾಗಿ ಕಿಡಿಸೂಸು
**ಮಾರ್ಕೊಳ್** – ಎದುರಿಸು; ಆಕ್ಷೇಪಿಸು; ಪ್ರತಿ ನುಡಿ
**ಮಾರ್ಗ** – ದಾರಿ; ಭಾಷೆಯನ್ನು ಬಳಸುವ ವಿವಿಧ ಶೈಲಿ; ಸಂಪ್ರದಾಯಬದ್ಧ ಕಾವ್ಯ; ಅಭಿಜಾತ ಕಾವ್ಯ
**ಮಾರ್ಗಂದಪ್ಪು** – ಹಾದಿ ತಪ್ಪು
**ಮಾರ್ಗಗ** – ದಾರಿಹೋಕ
**ಮಾರ್ಗಜಱು** – ಮಾರ್+ಗಜಱು, ಪ್ರತಿಯಾಗಿ ಗದರು
**ಮಾರ್ಗಣ** – ಬಾಣ, ಅಸ್ತ್ರ; (ಜೈನ) ಜೀವಿಗಳು ಹಾದುಹೋಗಬೇಕಾದ ಮಾರ್ಗ
**ಮಾರ್ಗಣಾನುರಕ್ತ** – ಧನುರ್ವಿದ್ಯಾಸಕ್ತ
**ಮಾರ್ಗಪ್ರಭಾವನೆ** – (ಜೈನ) ಜಿನಧರ್ಮವನ್ನು ಹೊಳಪುಗೊಳಿಸುವುದು
**ಮಾರ್ಗವಿದ** – ಸಂಪ್ರದಾಯವನ್ನು ತಿಳಿದವನು
**ಮಾರ್ಗಶಿರ** – ಮಾರ್ಗಶೀರ್ಷ, ಚಾಂದ್ರಮಾನದ ಹನ್ನೆರಡನೆಯ ತಿಂಗಳು
**ಮಾರ್ಗಶ್ರಮ** – ಪ್ರಯಾಣದ ದಣಿವು
**ಮಾರ್ಜಡಿ** – ಮಾರ್+ಜಡಿ, ಪ್ರತಿಯಾಗಿ ಹೊಡಿ
**ಮಾರ್ಜಾರ(ಲ)** – ಬೆಕ್ಕು
**ಮಾರ್ತಂಡ** – ಸೂರ್ಯ
**ಮಾರ್ತಲೆ** – ಎದುರಾಳಿ; ಪ್ರತಿಪಕ್ಷ
**ಮಾರ್ತಾಗು** – ಮಾರ್+ತಾಗು, ಎದುರಿಸು
**ಮಾರ್ತೊಳಗು** – ಪ್ರತಿಯಾಗಿ ಹೊಳೆ
**ಮಾರ್ದನಿ** – ಪ್ರತಿಧ್ವನಿ
**ಮಾರ್ದನಿಯಿ(ವಿ)ಡು** – ಪ್ರತಿಧ್ವನಿಸು
**ಮಾರ್ದವ** – ಮೃದುಸ್ವಭಾವ; (ಜೈನ) ಸನ್ಯಾಸಿ ಅನುಸರಿಸಬೇಕಾದ ಕ್ರಮಗಳಲ್ಲಿ ಒಂದು, ನೋಟಿ 'ದಶಕುಲಧರ್ಮ'
**ಮಾರ್ನುಡಿ** – ಉತ್ತರ ನೀಡು; ಪ್ರತ್ಯುತ್ತರ
**ಮಾರ್ಪಡಿ** – ಸರಿಸಮಾನ
**ಮಾರ್ಪಡೆ** – ಶತ್ರುಸೈನ್ಯ
**ಮಾರ್ಪೊಡೆ** – ಪ್ರತಿಯಾಗಿ ಹೊಡೆ
**ಮಾರ್ಪೊಣರ್** – ಎದುರಾಗಿ ಕಾದು
**ಮಾರ್ಪೊಯ್** – ಮಾರ್ಪೊಡೆ
**ಮಾರ್ಪೊಳಪು** – ಪ್ರತಿಬಿಂಬ
**ಮಾರ್ಪೊಳೆ** – ಪ್ರತಿಬಿಂಬಿಸು
**ಮಾರ್ಬಟ್ಟೆ** – ಬೇರೆ ದಾರಿ
**ಮಾರ್ಮ** – ಪ್ರತಿಭಟಿಸುವವನು, ಮಲೆವವನು
**ಮಾರ್ಮನುಷ್ಯ** – ಬೇರೆಯೇ ವ್ಯಕ್ತಿ
**ಮಾರ್ಮಲೆ** – ಉದ್ಧಟತನಾಗಿ ವರ್ತಿಸು; ವಿರೋಧಿಸು
**ಮಾರ್ಮುಗಿಲ್** – ಪ್ರತಿ ಮೋಡ
**ಮಾರ್ವ(ರ್ಬ)ಟ್ಟೆ** – ದಾರಿಗೆ ಎದುರು
**ಮಾರ್ವಲ** – ಶತ್ರು ಸೈನ್ಯ; ಮಹಾ ಸೈನ್ಯ
**ಮಾಲಾಕಾರ** – ಮಾಲೆಗಾರ
**ಮಾಲಾಮಂತ್ರ** – ದುರ್ಮಂತ್ರ
**ಮಾಲಿನ್ಯ** – ಕೊಳೆ
**ಮಾಲಿಸು** – ಕಡೆಗಣ್ಣಿನಿಂದ ನೋಡು
**ಮಾಲೂರ** – ಬಿಲ್ವಪತ್ರೆ; ಬೇಲ
**ಮಾಲೆ** – ಹೂವಿನ ಹಾರ; ಸರ
**ಮಾಲೆಗಟ್ಟು** – ಸಾಲಾಗಿ ನಿಲ್ಲು
**ಮಾಲೆಗಾರ್ತಿ** – ಹೂವಾಡಗಿತ್ತಿ
**ಮಾಲೆಗಾಱ** – ಹೂವಾಡಿಗ
**ಮಾಲೆಗಾಱಗೇರಿ** – ಹೂವಾಡಿಗರ ಬೀದಿ
**ಮಾಲೆಗುಂಡಿಗೆ** – ಜೋಡಿಸಿದ ಗಡಿಗೆಗಳು
**ಮಾಲೆಗೊಳ್** – ಒಂದರ ಹಿಂದೊಂದು ಬಾ
**ಮಾಲೆಜೊಡರ್** – ಸಾಲುದೀಪ
**ಮಾಲೆದುಂಬಿ** – ದುಂಬಿಯ ಸಾಲು
**ಮಾಲೆದೊಡರ್** – ಹೂವಿನ ಒಡವೆ
**ಮಾಲೆವೂ** – ಹೂವಿನ ಹಾರ
**ಮಾಲೆಸೂ(ವೂ)ಡು** – ಹಾರವನ್ನು ಹಾಕು
**ಮಾಲ್ಯ** – ಹಾರ; (ಜೈನ) ಕಲ್ಪವೃಕ್ಷಗಳಲ್ಲಿ ಒಂದು, ನೋಡಿ, 'ದಶಕಲ್ಪಕುಜ'
**ಮಾಲ್ಯಮಹೀಜ** – ಮಾಲ್ಯ
**ಮಾಲ್ಯಾಂಗ** – ಮಾಲ್ಯ
**ಮಾವಂತ** – ಮಾವುತ
**ಮಾವ(ಂ)ತಿಗ** – ಮಾವಂತ
**ಮಾವಣ್** – ಮಾವಿನ ಹಣ್ಣು
**ಮಾವುಲಿ(ರಿ)ಗ** – ಬೇಟೆಗಾರ
**ಮಾಷ** – ಉದ್ದು
**ಮಾಷಮುಖ** – ನೊಣ
**ಮಾಷೀಣ** – ಉದ್ದು ಬಿತ್ತಿರುವ ಹೊಲ
**ಮಾಷ್ಯ** – ಮಾಷೀಣ
**ಮಾಷ್ಯಪ್ರಾಂಗಣ** – ಮಾಷೀಣ
**ಮಾಸದಿಕೆ** – ಮಾಸದಿರುವಿಕೆ
**ಮಾಸರ** – ಅಂದ(ವಾದುದು); ಮಹಾಸ್ವರ
**ಮಾಸರಂ** – ಅಂದವಾಗಿ
**ಮಾಸರಿಕೆ** – ಚೆಲುವು
**ಮಾಸವಳ** – ಈಟಿ
**ಮಾಸಾದಿ** – (ಮಹಾಸಾದಿನ್) ರಾವುತ
**ಮಾಸಿರಿವಂತ** – ದೊಡ್ಡ ಶ್ರೀಮಂತ
**ಮಾಸಿಸು** – ಕಾಂತಿ ಕುಂದುವಂತೆ ಮಾಡು
**ಮಾಸು** – ಕೊಳೆಯಾಗು; ಕೊಳೆ
**ಮಾಸೋಪವಾಸ** – ಒಂದು ತಿಂಗಳ ಕಾಲ ಮಾಡುವ ಉಪವಾಸ ವ್ರತ
**ಮಾಹತ್ತರ** – ಮುಖಂಡ
**ಮಾಹಾತ್ಮ್ಯ** – ಹಿರಿಮೆ

**ಮಾಹೇಂದ್ರಕಲ್ಪ** – (ಜೈನ) ಹದಿನಾರು ಕಲ್ಪಗಳಲ್ಲಿ ನಾಲ್ಕನೆಯದು
**ಮಾಳ** – ಬಯಲು
**ಮಾಳಂಗೊಳ್** – ದಿಕ್ಕಾಪಾಲಾಗಿ ಓಡು
**ಮಾಳಬೆ** – ಮಾರಿ
**ಮಾಳಜಿಗೆ** – ಒಂದು ಆಯುಧ
**ಮಾಳಗೆ** – ಉಪ್ಪರಿಗೆ ಮನೆ
**ಮಾಳ್ಕುಕಿ** – ಗಂಡನನ್ನು ಬಿಡದವಳು
**ಮಾಱಂಕ** – ಮತ್ತೊಂದು ಯುದ್ಧ; ಎದುರು ಕಾಳಗ; ಪ್ರತಿಸ್ಪರ್ಧೆ
**ಮಾಱಂಬು** – ಗುರಿಯಿಟ್ಟು ಬಿಟ್ಟ ಬಾಣ
**ಮಾಱಣಿ** – ಶತ್ರು ಸೈನ್ಯ
**ಮಾಱಗೆ** – ಮಾರಾಟಕ್ಕಿರುವ ಸರಕು
**ಮಾಱು** – ವಿಕ್ರಯಿಸು; ಸ್ವಾಧೀನಪಡಿಸಿಕೋ
**ಮಾಱುಗೊಡು** – ವಿನಿಮಯ ಮಾಡಿಕೊ; ಒಪ್ಪಿಸು
**ಮಾಱುಲಿ** – ಪ್ರತಿಧ್ವನಿಸು
**ಮಾಱುವಡೆ** – ಮಾರಾಟಗೊಳ್ಳು
**ಮಾಱುವೋಗು** – ಮಾರಾಟಗೊಳ್ಳು; ಮೋಹಗೊಳ್ಳು
**ಮಾಱಿಸು** – ಗುರಿಯಿಟ್ಟು ಬಾಣ ಬಿಡು
**ಮಾಱೊಡ್ಡು** – ಶತ್ರು ಸೈನ್ಯ
**ಮಾಱೋಲೆ** – ಪ್ರತಿಯಾಗಿ ಬರೆದ ಓಲೆ
**ಮಾಱ** – ಮಾಳವ ದೇಶ
**ಮಾಱ್ಕಿ** – ರೀತಿ
**ಮಿಂಚು** – ಪ್ರಕಾಶಿಸು; ಕಾಂತಿ; ಆಕಾಶದ ತಟಿತ್
**ಮಿಂಚುಂಬುಱು** – ಮಿಣುಕು ಹುಳು
**ಮಿಂಚುವಡೆ** – ಹೊಳಪನ್ನು ಹೊಂದು
**ಮಿಂಚುವೋಗು** – ಹೊಳೆದು ಕಣ್ಮರೆಯಾಗು
**ಮಿಂಡ** – ಪರಾಕ್ರಮಿ; ಉಪಪತಿ
**ಮಿಂಡಮಕ್ಕಳ್** – ಶೂರ ತರುಣರು
**ಮಿಂಡಾಡು** – ಹಾದರ ಮಾಡು
**ಮಿಂಡಿ** – ನವಯುವತಿ; ಉಪಪತ್ನಿ
**ಮಿಂಡು** – ಕಲಿತನ; ಪುಂಡತನ
**ಮಿಂಡುವಡೆ** – ಮಿಂಡು+ಪಡೆ, ತುಂಟರ ಗುಂಪು
**ಮಿಂಬೊಣರ್** – ಮೀನಿನ ಜೋಡಿ
**ಮಿಗ** – ಕಾಡುಮೃಗ; ಜಿಂಕೆ
**ಮಿಗವಕ್ಕೆಗ** – ಚಂದ್ರ
**ಮಿಗವಗೆ** – ಜಿಂಕೆಯ ವೈರಿ, ಹುಲಿ
**ಮಿಗವಱ** – ಜಿಂಕೆಯ ಮರಿ
**ಮಿಗಿಲ್** – ಅತಿಶಯ; ಶ್ರೇಷ್ಠ
**ಮಿಗು** – ಹೆಚ್ಚಾಗು, ಅಧಿಕವಾಗು
**ಮಿಗೆ** – ಅಧಿಕವಾಗಿ
**ಮಿಗದೇರ** – ವಾಯು
**ಮಿಗಬೇರ** – (ಮೃಗವೈರ) ಹುಲಿ; ವ್ಯಾಘ್ರಾಸುರ
**ಮಿಗೆವರ್** – ಅತಿಶಯವಾಗು
**ಮಿಟ್ಟೆ** – ಮಣ್ಣಿನ ಹೆಂಟೆ; ಗುಂಡು, ಗೋಲಿ
**ಮಿಟ್ಟೆಗೊಂಡ ಚಿಟ್ಟೆ** – ಮಣ್ಣಿನ ಹೊಡೆತಕ್ಕೆ ಸಿಕ್ಕಿದ ಮಿಡತೆ
**ಮಿಡಿ** – ಬೆರಳಿನಿಂದ ಹೊಡೆ, ಮೀಟು; ಹೀಚು
**ಮಿಡಿವಟ್ಟು** – ಕವಣೆ ಕಲ್ಲು
**ಮಿಡಿವಿಲ್** – ಮಿಡಿಯುವ ಬಿಲ್ಲು, ಕವಣೆ
**ಮಿಡುಕಾಡು** – ಕಂಪಿಸು
**ಮಿಡುಕಿಸು** – ತಳಮಳಗೊಳ್ಳು
**ಮಿಡು(ಂ)ಕು** – ವ್ಯಥೆಪಡು; ಮಿಸುಕಾಡು; ಧಾವಿಸು; ಚೇತರಿಸಿಕೊ
**ಮಿಡುಮಿಡುಕು** – ತುಂಬ ಚಡಪಡಿಸು
**ಮಿತವಚನ** – ಮಿತವಾಗಿ ಮಾತಾಡುವವನು
**ಮಿತವಾಕ್ಯ** – ಮಿತವಚನ
**ಮಿತ್ರ** – ಸೂರ್ಯ; ಗೆಳೆಯ; ರಾಜನ 'ಸಪ್ತಾಂಗ'ಗಳಲ್ಲಿ ಒಂದು
**ಮಿತ್ರಕಾರ್ಯ** – ರಾಜನು ಮಿಕ್ಕ ರಾಜರನ್ನು ಗೆಳೆಯರನ್ನಾಗಿಸಿಕೊಳ್ಳುವ ತಂತ್ರ
**ಮಿತ್ರಗುಣ** – ಗೆಳೆಯನಲ್ಲಿರಬೇಕಾದ ಗುಣ
**ಮಿತ್ರದ್ರೋಹ** – ಗೆಳೆಯನಿಗೆ ಮಾಡುವ ಮೋಸ
**ಮಿತ್ರದ್ವಿಷ** – ಸೂರ್ಯನ ಶತ್ರು, ರಾಹು
**ಮಿತ್ರಬಲ** – ಸ್ನೇಹಿತರಾದ ರಾಜರ ಬಲ
**ಮಿತ್ರಭಾವ** – ಗೆಳೆತನ
**ಮಿತ್ರಮಂಡಲ(ಳ)** – ಸೂರ್ಯಮಂಡಲ; ಸ್ನೇಹಿತರ ಗುಂಪು
**ಮಿತ್ರಲಕ್ಷಣ** – ಸ್ನೇಹಿತನಲ್ಲಿರಬೇಕಾದ ಗುಣ
**ಮಿತ್ರವಿಯೋಗ** – ಸೂರ್ಯನ ಅಗಲಿಕೆ; ಗೆಳೆಯನ ವಿಯೋಗ
**ಮಿಥಸ್ಸ್ಪರ್ಧೆ** – ಪರಸ್ಪರ ಪೈಪೋಟಿ
**ಮಿಥುನ** – ಗಂಡು ಹೆಣ್ಣು ಜೋಡಿ
**ಮಿಥ್ಯಾಕಂದರ** – ಸುಳ್ಳು ಎಂಬ ಗುಹೆ
**ಮಿಥ್ಯಾಚತುಷ್ಟಯ** – ಇದು ಸುಳ್ಳು, ಇದರ ಪರಿಚಯ ಇಲ್ಲ, ಆಗ ಅಲ್ಲಿ ನಾನಿರಲಿಲ್ಲ, ಆ ಕಾಲಕ್ಕೆ ನನು ಹುಟ್ಟಿರಲಿಲ್ಲ ಎಂಬ ನಾಲ್ಕು ಬಗೆಯ ಸುಳ್ಳುಗಳು
**ಮಿಥ್ಯಾಚರಣ** – ಕಪಟಾಚರಣೆ
**ಮಿಥ್ಯಾಜ್ಞಾನ** – ತಪ್ಪು ತಿಳಿವಳಿಕೆ
**ಮಿಥ್ಯಾಜ್ಞಾನಿ** – ಅಜ್ಞಾನಿ
**ಮಿಥ್ಯಾತ್ವ** – ಹುಸಿ; (ಜೈನ) ನಿಜವಾದ ತತ್ವಜ್ಞಾನವನ್ನು ನಂಬದಿರುವುದು; ಇದರಲ್ಲಿ ವಿಪರೀತ, ಏಕಾಂತ, ವಿನಯ, ಸಂಶಯ, ಅಜ್ಞಾನ ಎಂಬ ಐದು ಬಗೆ
**ಮಿಥ್ಯಾದರ್ಶನ** – ಮಿಥ್ಯಾತ್ವ
**ಮಿಥ್ಯಾದೃಷ್ಟಿ** – (ಜೈನ) ಅಭವ್ಯನ ದೃಷ್ಟಿ
**ಮಿಥ್ಯಾಭಾವನೆ** – ಮಿಥ್ಯಾದೃಷ್ಟಿ
**ಮಿಥ್ಯಾಭಿಯೋಗ** – ಸುಳ್ಳು ಅಪವಾದ
**ಮಿಥ್ಯಾವಾದಿ** – ಒಂದು ಬೌದ್ಧ ಪಂಗಡ; ವಿಜ್ಞಾನವನ್ನು ಆಶ್ರಯಿಸಿದವನು
**ಮಿಥ್ಯಾವಿನಯ** – ಕಪಟ ವಿನಯ
**ಮಿಥ್ಯಾಶಲ್ಯ** – (ಜೈನ) ವ್ರತಸ್ಥನನ್ನು ಬಾಧಿಸುವ ಮೂರು ಬಾಧೆಗಳಲ್ಲಿ ಒಂದು; ಸರಿಯಲ್ಲದ

ದೃಷ್ಟಿಯನ್ನು ಹೊಂದಿರುವುದು, ನೋಡಿ, 'ಶಲ್ಯತ್ರಯ'
**ಮಿಥ್ಯೆ** – ಸುಳ್ಳು; ಅಜ್ಞಾನ
**ಮಿದಿ** – ನಾದು; ತುಳಿ
**ಮಿದುಳ್** – ಮಸ್ತಿಷ್ಕ; ಧೀಶಕ್ತಿಯ ಆಧಾರವಾದ ಅವಯವ
**ಮಿನಿಮಿನಿಗಣ್** – ಹೊಳೆಯುವ ಕಣ್ಣು
**ಮಿನುಕು** – ಹೊಳಪು; ಪಿಸುಗುಡು
**ಮಿನುಗು** – ಹೊಳೆ, ಮಿಂಚು
**ಮಿಶ್ರ** – ಬೆರೆತ; ನಾಲ್ಕು ಧ್ವನಿಭೇದಗಲಲ್ಲಿ ಒಂದು; ಮಿಕ್ಕ ಮೂರು: ಖಾವುಳ, ಬೊಂಬುಳ, ತ್ರಿಶ್ರ
**ಮಿಷ** – ನೆವ
**ಮಿಸಿಸು (ಮೀಯಿಸು)** – ಸ್ನಾನಮಾಡಿಸು
**ಮಿಸುಕು(ಗು)** – ಅಲುಗಾಡು; ಚಲಿಸು; ಪ್ರತಿಭಟಿಸು; ಚಲಾವಣೆಯಲ್ಲಿರು
**ಮಿಸುಗು** – ಹೊಳೆ; ಕಂಗೊಳಿಸು
**ಮಿಸುನಿ** – ಚಿನ್ನ
**ಮಿಸುನಿಯ ಚಿನ್ನ** – ಅಪ್ಪಟ ಬಂಗಾರ
**ಮಿಸುಪು** – ಹೊಳಪು; ಮನೋಹರತೆ
**ಮಿಸುಪೇಱು** – ಹೊಳಪು ಹೆಚ್ಚು
**ಮಿಹಿರ** – ಸೂರ್ಯ
**ಮಿಹಿರಾಧ್ವ** – ಸೂರ್ಯನ ದಾರಿ, ಆಕಾಶ
**ಮಿೞ(ಣಿ)** – ಹಗ್ಗ; ತೊಗಲಿನ ಪಟ್ಟಿ
**ಮಿೞಂದ** – ದುಂಬಿ
**ಮಿೞಮಿೞಗಣ್** – ಪಿಳಿಪಿಳಿಸುವ ಕಣ್ಣು
**ಮಿೞಮಿೞನೇತ್ರ** – ಮಿಳಿಮಿಳಿಗಣ್
**ಮಿೞಯಿಕ್ಕು** – ಹಗ್ಗದಿಂದ ಕಟ್ಟು
**ಮಿೞರ್** – ಚಲಿಸು; ಹೊರಳಾಡು; ನಿಮಿರು; ಉತ್ಸಾಹಗೊಳ್ಳು; ಕಂಗೊಳಿಸು
**ಮಿೞಮಿೞರ್** – ಅಲುಗಾಡು; ಹೊಯ್ದಾಡು; ಹಾರಾಡು
**ಮಿಳ್ಮಿೞಸು** – ಕಣ್ಣು ಮಿಟುಕಿಸು
**ಮಿಳ್ಳಿಸು** – ಚಲಿಸು; ಅಲುಗಾಡಿಸು; ನಿಮಿರಿಸು; ಆವರಿಸು; ಕಂಗೊಳಿಸು
**ಮಿಳ್ಳೆಗಾಲ್** – ಸಣಕಲು ಕಾಲು
**ಮಿಱಪಿಗ** – ಶೋಕಿ ಮಾಡುವವನು
**ಮಿಱುಗು** – ಥಳಥಳಿಸು; ಕಂಗೊಳಿಸು
**ಮಿಱುಪು** – ಕಾಂತಿ
**ಮಿೞ್ತು** – (ಮೃತ್ಯು) ಸಾವು
**ಮಿೞ್ತುಗರೆ** – ಮೃತ್ಯುವನ್ನು ಬರಮಾಡಿಕೊ
**ಮಿೞ್ತುಗೊಡ್ಡ** – ಸಾವಿನ ಹೆದರಿಕೆಯ ಮಾತು
**ಮೀ** – ಸ್ನಾನಮಾಡು
**ಮೀಂಗುಡಿ** – ಮೀನಿನ ಚಿಹ್ನೆಯುಳ್ಳ ಬಾವುಟ
**ಮೀಂಗುಲಿ(ಗ)** – ಬೆಸ್ತ; ಬಕಪಕ್ಷಿ
**ಮೀಂಗುಲಿಗವಕ್ಕಿ** – ಬಕಪಕ್ಷಿ
**ಮೀಂಟು** – ಕಿತ್ತು ಹಾಕು; ಅತಿಶಯ
**ಮೀಂಟೆ** – ಮಣ್ಣು ಹೆಂಟೆ
**ಮೀಂಬುಲಿಗ** – ಮೀನು ತಿನ್ನುವ ಹಕ್ಕಿ, ಮೀಂಚುಳ್ಳಿ
**ಮೀಂಬುೞು** – ಮಿಣುಕು ಹುಳು
**ಮೀನ(ನು)ಂಬುೞು** – ಬಕಪಕ್ಷಿ
**ಮೀಂಬೊಣರ್** – ಮೀನಿನ ಜೋಡಿ
**ಮೀಂಬೊಲಸು** – ಮೀನಿನ ಮಾಂಸ
**ಮೀಂಬೊಳಪು** – ಮೀನಿನ ಹೊಳಪು
**ಮೀನ್** – ನಕ್ಷತ್ರ; ಪ್ರಕಾಶ; ಮೀನು
**ಮೀನ** – ಮೀನು
**ಮೀನಕೇತನ** – ಮೀನಿನ ಚಹ್ನೆಯ ಧ್ವಜ; ಮನ್ಮಥ
**ಮೀನಕೇತು** – ಮೀನಕೇತನ
**ಮೀನನೇತ್ರೆ** – ಮೀನಿನಾಕಾರದ ಕಣ್ಣುಳ್ಳವಳು
**ಮೀನಲೋಚನೆ** – ಮೀನನೇತ್ರೆ
**ಮೀನಾಂಕ** – ಮನ್ಮಥ
**ಮೀನಾಲೋಕ** – ಮೀನಿನಾಕಾರದ ಕಣ್ಣು
**ಮೀಯಿಸು** – ಸ್ನಾನಮಾಡಿಸು; ತೋಯಿಸು
**ಮೀಲನ** – ಮುಚ್ಚುವುದು
**ಮೀಸಲ್ಕಂಪು** – ಯಾರೂ ಮೂಸದ ಕಂಪು
**ಮೀಸಲ್ವಾಯ್** – (ಚುಂಬನಕ್ಕೆ) ಮುಡಿಪಾಗಿರುವ ಬಾಯಿ
**ಮೀಸಲ್ವಾಯ್ದೆೞ** – (ಚುಂಬನಕ್ಕೆ) ಮುಡಿಪಾಗಿರುವ ತುಟಿ
**ಮೀಸಲ್ವಾಸಿಗ** – ಮುಡಿಪಾದ ಹೂದಂಡೆ
**ಮೀಸೆವೊಱು** – ಮೀಸೆಯನ್ನು ಬಿಟ್ಟಿರು
**ಮೀಹ** – ಸ್ನಾನ
**ಮೀಱು** – ಉಲ್ಲಂಘನೆ; ದಾಟು; ಮಿಗಿಲಾಗು
**ಮುಂಗಾರ್** – ಮಳೆಗಾಲದ ಆರಂಭ
**ಮುಂಗಾಲ್** – ಪ್ರಾಣಿಗಳ ಮುಂದಿನ ಕಾಲು
**ಮುಂಗುಡಿ** – ಮುಂದಿನ ಭಾಗ; ಮುಂಭಾಗದ ಚಿಗುರು; ಮುಂಭಾಗದಲ್ಲಿರುವ ಧ್ವಜ
**ಮುಂಗುರಿ** – ಮುಂಗುಸಿ
**ಮುಂಗೂಳೆಯ** – ಮುಂಭಾಗದ (ವಲಸೆ) ಗುಂಪು
**ಮುಂಗೆಯ್** – ಕೈಯ ಮುಂಭಾಗ; ಮಣಿಕಟ್ಟು
**ಮುಂಗೊರಲ್** – ಕೊರಳಿನ ಮುಂಭಾಗ
**ಮುಂಗೋೞ್** – ಸೈನ್ಯದ ಮುಂಭಾಗ
**ಮುಂಚು** – ಮುಂದುವರಿ; ಮುಂದಾಗಿ ಹೋಗು; ಮೇಲುಗೈಯಾಗು
**ಮುಂಜಕೇಶಿ** – ವಿಷ್ಣು
**ಮುಂಜಮೇಖಲೆ** – ನೊದೆಹುಲ್ಲಿನ ಉಡಿದಾರ
**ಮುಂಜಿ** – (ಮೌಂಜಿ) ನೊದೆಹುಲ್ಲಿನ ಉಡಿದಾರ; ಉಪನಯನ
**ಮುಂಜಿಗಟ್ಟು** – ಹುಲ್ಲಿನ ಉಡಿದಾರ ಕಟ್ಟು; ಉಪನಯನ ಮಾಡು
**ಮುಂಜಿಬಂಧನಕ್ರಿಯೆ** – ಉಪನಯನ
**ಮುಂಜೂರ್** – ಸೂರಿನ ಮುಂಭಾಗ
**ಮುಂಡಾ(ಡಿ)ಡು** – ಮುದ್ದಾಡು; ನೇವರಿಸು
**ಮುಂಡಿಗೆ** – ಮರದ ಗೂಟ; ಸವಾಲು
**ಮುಂಡುವೋಗು** – ಕತ್ತರಿಸಿ ಹೋಗು

**ಮುಂತಱಿಪು** – ಪೂರ್ವಸೂಚನೆ ನೀಡು
**ಮುಂತಾ(ದಾ)ಗು** – ಎದುರುಗಡೆ ಬಾ; ಮುಂದೆ ಸಂಭವಿಸು
**ಮುಂತು(ದು)** – ಮುಂಭಾಗ
**ಮುಂತ(ದ)ಣ್** – ಮುಂದೆ
**ಮುಂತ(ದ)ಣ** – ಮುಂದುಗಡೆಯಿರುವ
**ಮುಂತು(ದು)** – ಮುಂಭಾಗದಲ್ಲಿ; ಮುಂಚೆ
**ಮುಂತೆ(ದೆ)** – ಮುಂದುಗಡೆಯಲ್ಲಿ; ಮುಂಚಿತವಾಗಿ
**ಮುಂದಲೆ** – ತಲೆಯ ಮುಂಭಾಗ; ಮುಂಗೂದಲು
**ಮುಂದಱಿ** – ಮುಂದಾಗುವುದನ್ನು ತಿಳಿ
**ಮುಂದಿಕ್ಕು** – ಮುಂದುಗಡೆ ಇರಿಸು
**ಮುಂದಿ(ತಿ))ಡು** – ಮುಂದುವರಿ; ನಿವೇದಿಸು; ಮುಂದೆ ನಿಲ್ಲು
**ಮುದಿ(ತಿ)ರ್** – ಎದುರಿನಲ್ಲಿರು; ಪ್ರಮುಖವಾಗಿರು
**ಮುಂದುಗಾಣ್** – ದೂರಾಲೋಚಿಸು; ದಿಕ್ಕು ತೋಚು
**ಮುಂದುಗೆಯ್** – ಮುಂದೆ ಮಾಡು; ಪ್ರಮುಖವಾಗಿಸು
**ಮುಂದುವರಿ** – ಮುಂದೆ ಹೋಗು; ಮುಂಚಿತವಾಗಿರು
**ಮುಂದುಱುವರಿ** – ಮುಂದೆ ಸಾಗು
**ಮುಂದುಱುವಾಯ್ತರ್** – ಮುಂದುವರಿದು ಬಾ
**ಮುಂಪೇೞ್** – ಮೊದಲೇ ಹೇಳು
**ಮುಂಬಗಲ್** – ಬೆಳಿಗ್ಗೆ
**ಮುಂಬಗೆ** – ಮೊದಲೇ ಆಲೋಚಿಸು
**ಮುಂಬಟ್ಟೆ** – ಮುಂದಿನ ಹಾದಿ
**ಮುಂಬದ** – ಸುರತದ್ರವ
**ಮುಂಬನಿ** – ಮೊದಲ ಹನಿ, ಮೊದಲ ಮಳೆ
**ಮುಂಬಯಣ** – ಮುಂಚಿತವಾದ ಪ್ರಯಾಣ
**ಮುಂಬರ್** – ಮೊದಲು ಬಾ; ಮುಂಭಾಗಕ್ಕೆ ಬಾ
**ಮುಂಬರಿ** – ಮುಂದುವರಿ; ವ್ಯಾಪಿಸು
**ಮುಂಬರೆಯ** – ಹೊಸ ಯೌವನ
**ಮುಂಬಲ** – ಸೈನ್ಯದ ಮುಂಭಾಗ, ಮುಂಚೂಣಿ
**ಮುಂಬಾಯ್** – ಮುನ್+ಪಾಯ್, ಮುಂದೆ ನುಗ್ಗು
**ಮುಂಬಿಡು** – ಮುಂದಕ್ಕೆ ಬಿಡು, ಮುಂದೆ ಸರಿಸು
**ಮುಂಬು** – ಮೊದಲು, ಆರಂಭ; ಮುನ್ಸೂಚನೆ
**ಮುಂಬುಗಳೆ** – ಮುಂಬು+ಕಳೆ, ಮುಂದಾಗುವುದನ್ನು ಅಲಕ್ಷಿಸು
**ಮುಂಬುಗೊಳ್** – ಮುಂಬು+ಕೊಳ್, ಮುಂದೆ ಹಬ್ಬು
**ಮುಕುಂದ** – ಕೃಷ್ಣ; ಮದ್ದಳೆ
**ಮುಕುರ** – ಕನ್ನಡಿ
**ಮುಕುಲ(ಳ)** – ಮೊಗ್ಗು; ಮುಗಿದ
**ಮುಕುಲಿ(ಳ)ತ** – ಮೊಗ್ಗಾಗಿರುವ; ಮುಗಿದಿರುವ
**ಮುಕು(ಳ)ತಕರ** – ಮುಗಿದ ಹಸ್ತ
**ಮುಕುಲಿ(ಳ)ತಾಂಜಲಿ** – ಮುಕು(ಳಿ)ತಕರ
**ಮುಕುಳತಾಕ್ಷ** – ಮುಚ್ಚಿದ ಕಣ್ಣುಗಳವನು
**ಮುಕುಳಸು** – ಮೊಗ್ಗಾಗು; ಮುಚ್ಚಿಕೊ
**ಮುಕುಳೀಕೃತ** – ಮುಚ್ಚಿಕೊಮಡ
**ಮುಕ್ಕಡಿ** – ಮೂರು ಭಾಗ
**ಮುಕ್ಕು** – ಗಬಗಬ ತಿನ್ನು; ನಾಶಮಾಡು
**ಮುಕ್ಕುಡಿತೆ** – ಮೂರು ಕುಡಿತೆ
**ಮುಕ್ಕುಪ್ಪೆ** – ಮೂರು ಕುಪ್ಪೆ, ರಾಶಿ
**ಮುಕ್ಕುವೋಗು** – ಮುರಿದು ಹೋಗು; ಊನವಾಗು
**ಮುಕ್ಕುಳ್** – ಬಾಯಲ್ಲಿ ತುಂಬಿಕೊಂಡ ದ್ರವ
**ಮುಕ್ಕುಳಸು** – ಬಾಯಲ್ಲಿ ತುಂಬಿಕೊಂಡು ಉಗುಳು; ಗುಟುಕು ಕೊಡು
**ಮುಕ್ಕುೞು** – ಮುತ್ತಿಗೆ ಹಾಕು
**ಮುಕ್ಕೊಡೆ** – (ಜೈನ) ಚಕ್ರವರ್ತಿ ಲಾಂಚನದ ಮೂರು ಕೊಡೆಗಳ ಸಾಲು
**ಮುಕ್ತ** – ಬಿಟ್ಟ, ಎಸೆದ
**ಮುಕ್ತಕ** – ಮುತ್ತು; ಮುತ್ತುಗ
**ಮುಕ್ತಕೇಶಿ** – ಕೂದಲು ಬಿರಿ ಹುಯ್ದುಕೊಂಡ ವ್ಯಕ್ತಿ
**ಮುಕ್ತಬಾಣ** – ಬಾಣ ಎಂದರೆ ಶಸ್ತ್ರವನ್ನು ತೊರೆದವನು
**ಮುಕ್ತಾತ್ಮ** – ಮುತ್ತುಗಳಿಂದ ರಚಿಸಿರುವ; ಜೀವನ್ಮುಕ್ತನಾದ
**ಮುಕ್ತಾಫಲ(ಳ)** – ಮುತ್ತು
**ಮುಕ್ತಾಭರಣ** – ಆಭರಣ ಕಳಚಿದ; ಮುತ್ತಿನ ಒಡವೆ
**ಮುಕ್ತಾಮಾಳಿಕೆ** – ಮುತ್ತಿನ ಸರ
**ಮುಕ್ತಾ(ವ)ಲಿ(ಳ)** – ಮುತ್ತಿ ಸರ
**ಮುಕ್ತಾವಳಿತಪ** – ಮುಕ್ತಾವಳಿ ಎಂಬ ವ್ರತ
**ಮುಕ್ತಾಸಾರ** – ಶ್ರೇಷ್ಠ ಮುತ್ತು
**ಮುಕ್ತಿ** – ಬಿಡುಗಡೆ; ಮೋಕ್ಷ
**ಮುಕ್ತಿಪದ** – ಮೋಕ್ಷ
**ಮುಕ್ತಿಸ್ಥಾನ** – ಮುಕ್ತಿಪದ
**ಮುಕ್ತಿಹೇತು** – ಮೋಕ್ಷಕ್ಕೆ ಕಾರಣ
**ಮುಕ್ತೋಷ್ಠ** – ತೆರೆದ ತುಟಿ
**ಮುಖ** – ಬಾಯಿ; ಆರಂಭ
**ಮುಖಪ್ರಕ್ಷಾಳನ** – ಮುಖ ತೊಳೆಯುವುದು
**ಮುಖಪ್ರಸಾದನ** – ಮುಖದ ಅಲಂಕಾರ
**ಮುಖಮಂಡನಕ್ರೀಡೆ** – ತಾಂಬೂಲ ಅಗಿಯುವುದು
**ಮುಖಮುದ್ರೆ** – ಮುಖಭಾವ
**ಮುಖರ** – ಸದ್ದುಮಾಡು; ಮಾತಾಡು; ಅಣಕಿಸು
**ಮುಖರತ** – ಚುಂಬನ
**ಮುಖರತೆ** – ನಿಂದೆ; ಗದ್ದಲ
**ಮುಖರಾಗ** – ಮುಖಕಾಂತಿ
**ಮುಖರಿತ** – ಸದ್ದಿನಿಂದ ಕೂಡಿದ
**ಮುಖರೋಮ** – ಮೀಸೆ
**ಮುಖವಿಕ್ಷೇಪಣ** – ಮುಖದ ಚಲನೆ
**ಮುಖಶ್ರೀ** – ಮುಖದ ಚೆಲುವು
**ಮುಖ್ಯತ್ವ** – ಮುಖ್ಯತೆ, ಪ್ರಾಮುಖ್ಯ
**ಮುಗಿ** – ಮುಚ್ಚಿಕೊ; ಹೂವು ಸಂಕೋಚಗೊಳ್ಳು; ಮುಕ್ತಾಯವಾಗಿ

**ಮುಗಿಯಿಸು** – ಹೂದಳಗಳು ಮುಚ್ಚಿಕೊಳ್ಳುವಂತೆ ಮಾಡು; ಕೈಜೋಡಿಸು
**ಮುಗಿಲ್** – ಮೋಡ; ಆಕಾಶ
**ಮುಗಿಲಂ ಮುಟ್ಟು** – ಎತ್ತರಕ್ಕೆ ಬೆಳೆ; ಏಲಿಗೆ ಹೊಂದು
**ಮುಗಿಲ ದನಿ** – ಗುಡುಗು
**ಮುಗಿಲುದ್ದ** – ಆಗಸದೆತ್ತರ; ತುಂಬ ಎತ್ತರ
**ಮುಗಿಲಟ್ಟಳೆ** – ಆಗಸದಷ್ಟು ಎತ್ತರವಾದ ಅಟ್ಟಳೆ
**ಮುಗಿಲೂಱು** – ಆಕಾಶದಲ್ಲಿ ಸೇರು
**ಮುಗಿಲ್ಗಡವು** – ಈಚಲ ಮರ
**ಮುಗಿಲ್ದನಿ** – ಗುಡುಗು
**ಮುಗಿಲ್ದುಱುಗು** – ಮೋಡ ಆವರಿಸು
**ಮುಗಿಲ್ಮುೞಿ** – ಮೋಡದ ತುಂಡು
**ಮುಗಿಲ್ವಟ್ಟೆ** – ಮೋಡದ ದಾರಿ, ಆಕಾಶ
**ಮುಗಿಲ್ವನಿ** – ಮಳೆಹನಿ
**ಮುಗಿಲ್ವೊ(ಲ್ಪೊ)ರೆ** – ಮೋಡದ ತೆರೆ, ಪದರು
**ಮುಗುಳ್** – ಮೊಗ್ಗು; ಮೂಡು; ಕಣ್ಣು ಮುಚ್ಚಿಕೊ
**ಮುಗುಳಲರ್** – ಅರಳುತ್ತಿರುವ ಹೂ
**ಮುಗುಳಸು** – ಮೊಗ್ಗಿ ಬಿಡು
**ಮುಗುಳೇಱು** – ಮೊಗ್ಗು ಬಿಡು
**ಮುಗುಳ್ಗಣೆ** – ಮೊಗ್ಗಿನ ಬಾಣ
**ಮುಗುಳ್ಗಾಯ್** – ಕಸಗಟ್ಟೆ ಕಾಯಿ
**ಮುಗುಳ್ಚು** – ಸಂಕುಚಿಸು
**ಮುಗುಳ್ನಗೆ** – ನಸುನಗೆ
**ಮುಗುಳ್ನನೆ** – ಅರಳುವ ಮೊಗ್ಗು
**ಮುಗುಳ್ವದ** – ಮೊಗ್ಗಿನ ಹದ
**ಮುಗುಳ್ಸರಿಗೆ** – ಮೊಗ್ಗಿನ ಹಾರ
**ಮುಗ್ಗು** – ಬಾಗು; ನಮಸ್ಕರಿಸು; ಮುಗ್ಗರಿಸು
**ಮುಗ್ಧ** – ಮೋಹಕ
**ಮುಗ್ಧಾಲಾ(ಳಾ)ಪ** – ಕಪಟರಹಿತ ಮಾತು
**ಮುಗ್ಧೆ** – ಕಪಟರಹಿತೆ
**ಮುಚುಕುಂದ** – ಒಬ್ಬ ಋಷಿಯ ಹೆಸರು; ಸದಾಪುಷ್ಪ
**ಮುಚ್ಚು** – ಹೊದೆಸು; ಅಡಗಿಸು; ಕದ ಹಾಕು
**ಮಮುಚ್ಚುಮಱೆ** – ರಹಸ್ಯ
**ಮುಚ್ಚುಳಕ್ಕು** – ಮುಚ್ಚಳ ಹಾಕು
**ಮುಚ್ಚುಱು** – ಮೂರ್ಛೆ ಹೋಗು
**ಮುಚ್ಚೆ** – (ಮೂರ್ಛೆ) ಎಚ್ಚರ ತಪ್ಪುವುದು
**ಮುಚ್ಚೆದಿಳ** – ಮೂರ್ಛೆಯಿಂದ ಎಚ್ಚರವಾಗು
**ಮುಚ್ಚೆವೋಗು** – ಮೂರ್ಛೆಗೊಳ್ಳು
**ಮುಜ್ಜುಟ** – ಕುಸ್ತಿಯ ಒಂದು ವರಸೆ
**ಮುಟ್ಟಿ** – (ಮುಷ್ಟಿ) ಹಿಡಿ
**ಮುಟ್ಟಿಗೆ** – (ಮುಷ್ಟಿಕಾ) ಇಕ್ಕುಳ
**ಮುಟ್ಟು** – ಸ್ಪರ್ಶಿಸು; ತಲುಪು; ಕಚ್ಚು; ಉಪಕರಣ; ಸಮಾನ
**ಮುಟ್ಟುಗಿಡಿಸು** – ಅಸಹಾಯಕನಾಗಿ ಮಾಡು
**ಮುಟ್ಟುಗಿ(ಗೆ)ಡು** – ಅಸಹಾಯಕನನ್ನಾಗಿಸು; ದಿಗ್ಭ್ರಮೆಗೊಳಿಸು
**ಮುಟ್ಟುಪಡ** – ಸ್ವೀಕಾರಾರ್ಹವಲ್ಲದ್ದು
**ಮುಟ್ಟೈಸು** – ನಿಲ್ಲಿಸು, ನಿರ್ಬಂಧಿಸು
**ಮುಡಿ** – ತಲೆಯಲ್ಲಿಟ್ಟುಕೊ; ತಲೆಗೂದಲ ಗಂಟು; ಇಲ್ಲವಾಗು; ತಲೆ
**ಮುಡಿಬಿಡು** – ತಲೆಗೂದಲನ್ನು ಕಟ್ಟದೆ ಬಿಡು
**ಮುಡಿಗಟ್ಟು** – ತಲೆಯ ವಸ್ತ್ರ
**ಮುಡಿಗವಿ** – ಕಿರೀಟವಿಡು
**ಮುಡಿಗೆಯಿಕ್ಕು** – ಸವಾಲು ಒಡ್ಡು
**ಮುಡಿ(ಡು)ಪು** – ವ್ರತದ ಮೂಲಕ ಮರಣಿಸು; ಮೀಸಲು
**ಮುಡಿಯಿಕ್ಕು** – ತಲೆಗೂದಲನ್ನು ಅಲಂಕರಿಸು
**ಮುಡಿವೂ** – ಮುಡಿದುಕೊಳ್ಳುವ ಹೂ
**ಮುಡಿವೊಱೆ** – ಸಮೃದ್ಧವಾದ ತಲೆಗೂದಲು
**ಮುಡು(ದು)ಕು** – ಆಲಂಗಿಸು
**ಮುಡುಪು** – ಹೆಗಲು
**ಮುತ್ತ** – ಮುದುಕ
**ಮುತ್ತಂಚೆ** – ಮುದಿ ಹಂಸ
**ಮುತ್ತಂದೆ** – ಅಜ್ಜನ ಅಥವಾ ಅಜ್ಜಿಯ ತಂದೆ
**ಮುತ್ತಬ್ಬೆ** – ಮುತ್ತಜ್ಜಿ
**ಮುತ್ತರ್** – ಮುದುಕರು; ಪೂರ್ವಿಕರು
**ಮುತ್ತಾಣ್ಮ** – ಮುದುಕ ಗಂಡ
**ಮುತ್ತು** – ಆವರಿಸು; ದಾಳಿಮಾಡು; ನವರತ್ನಗಳಲ್ಲಿ ಒಂದು; ಆನೆಯ ಗಂಡಸ್ಥಳದ ರತ್ನ; ಚುಂಬನ
**ಮುತ್ತಿಕೊಳ್** – ಆವರಿಸು; ದಾಳಿ ಮಾಡು
**ಮುದ** – ಸಂತೋಷ
**ಮುದಶ್ರು** – ಆನಂದಬಾಷ್ಪ
**ಮುದಿತ** – ಸಂತಸಗೊಂಡ
**ಮುದಿಪಾೞಿ** – ಮುದಿ ಸೂಳೆ
**ಮುದಿರ್** – ಸೊರಗು
**ಮುದು** – ಮುಪ್ಪಾಗು
**ಮುದುಗಣ್** – ಪಟುತ್ವ ಕಳೆದುಕೊಂಡ ಕಣ್ಣು
**ಮುದುಗ(ಣ್ಣ)ಂಗಳ್** – ಮುದುಕರು
**ಮುದುಗಣ್ತನ** – ಮುದಿತನ
**ಮುದುಗಲ್ಲೆ** – ಮುದುಕಿ
**ಮುದುಗುದುರೆ** – ಮುದಿಯಾದ ಕುದುರೆ
**ಮುದುಡು** – ಸಂಕುಚಿತಗೊಳ್ಳು
**ಮುದುದೊವಲ್** – ಹಳೆಯ ತೊಗಲು
**ಮುದುಪ** – ಮುದುಕ
**ಮುದುಪಾರ್ವ** – ಮುದಿ ಬ್ರಾಹ್ಮಣ
**ಮುದುವೇಡ** – ಮುದುಕ ಬೇಡ
**ಮುದುವೊೞಲ್** – ಮುಧೋಳ ಎಂಬ ಊರು
**ಮುದ್ಗ** – ಹೆಸರುಕಾಳು
**ಮುದ್ಗಚ್ಛವಿ** – ಹೆಸರುಕಾಳಿನ ಬಣ್ಣ, ಹಸಿರು
**ಮುದ್ಗರ** – ಒಂದು ಆಯುಧ

**ಮುದ್ದಂಚೆ** – ಮುದ್ದಾದ ಹಂಸ
**ಮುದ್ದಾಟ** – ಮುದ್ದಿಸುವಿಕೆ
**ಮುದ್ದಾಡು** – ಮುದ್ದಿಸು
**ಮುದ್ದಿಕೆ(ಗೆ)** – (ಮೃದ್ವೀಕಾ) ದ್ರಾಕ್ಷಿ
**ಮುದ್ದು** – ಪ್ರೀತಿ; ಸೊಗಸು; ಪ್ರೀತಿಯ ವಸ್ತು
**ಮುದ್ದುಗೆಯ್ತು** – ಸರಸ
**ಮುದ್ದುನುಡಿ** – ಸರಸದ ಮಾತು; ಸವಿನುಡಿ
**ಮುದ್ದುಮೊಗ** – ಸುಂದರವಾದ ಮುಖ
**ಮುದ್ದುವಡೆ** – ಚೆಲುವಾಗು
**ಮುದ್ದುವೀಱು** – ಚೆಲುವನ್ನು ಬೀರು
**ಮುದ್ರಾಂಕಿತ** – ಗುರುತುಳ್ಳದ್ದು
**ಮುದ್ರಿತ** – ಮೇರೆಯಾಗುಳ್ಳ
**ಮುದ್ರಿಸು** – ಮುಚ್ಚು; ಒಪ್ಪಿಗೆ ನೀಡು; ಆವರಿಸುವಂತೆ ಮಾಡು
**ಮುದ್ರೆ** – ಮೊಹರು
**ಮುಧಾ** – ವ್ಯರ್ಥವಾಗಿ
**ಮುನ್** – ಮುಂಚಿನ; ಮುಂಚೆ; ಭವಿಷ್ಯದಲ್ಲಿ
**ಮುನ್ನ(ಂ)** – ಮುಂಚೆ; ಮೊದಲು; ಹಿಂದೆ
**ಮುನಿ** – ಕೋಪಿಸಿಕೊ; ತಪಸ್ವಿ; ಸವಣ; ಸಿದ್ಧ
**ಮುನಿನಿವೇದಕ** – ತಾಪಸಿಯ ಬರವನ್ನು ತಿಳಿಸುವವನು
**ಮುನಿಪ** – ತಾಪಸ ಮುಖ್ಯ
**ಮುನಿಯ** – ಭಾರಧ್ವಾಜ ಪಕ್ಷಿ
**ಮುನಿಯಿಸು** – ಕೋಪಗೊಳ್ಳುವಂತೆ ಮಾಡು
**ಮುನಿಸಂ ಮಾಡು** – ಕೋಪಿಸುವಂತೆ ಮಾಡು
**ಮುನಿಸು** – ಸಿಟ್ಟು; ವೈರ
**ಮುನಿಸುವ್ರತ** – (ಜೈನ) ಇಪ್ಪತ್ತನೆಯ ತೀರ್ಥಂಕರ
**ಮುನೀಂದ್ರ** – ಮುನಿಪ
**ಮುನ್ನಡಿ** – ಅಡಿಯ ಮುಂಭಾಗ
**ಮುನ್ನೀರ್** – ಸಮುದ್ರ
**ಮುನ್ನೀರ್ಗಂದ** – ಮುನ್ನೀರ್+ಕಂದ, ಸಮುದ್ರದಲ್ಲಿ ಜನಿಸಿದವನು, ಚಂದ್ರ
**ಮುನ್ನುಱಿವು** – ಮುಂದಿನ ಬದುಕು
**ಮುನ್ನೇಸಱ್** – ಸೂರ್ಯ ಉದಯಿಸುವ ಮುಂಚಿನ ಕಾಲ, ಅರುಣೋದಯ
**ಮುಪ್ಪು** – ವೃದ್ಧಾಪ್ಯ
**ಮುಪ್ಪುರಿ** – ಮೂರು ಎಳೆಗಳು; ಮೂರರ ಕೂಟ
**ಮುಪ್ಪುರಿಗೂಡು** – ಒಗ್ಗೂಡಿಸು
**ಮುಪ್ಪುರಿಗೊಳ್** – ಹೊಸೆ, ಒಂದಾಗು
**ಮುಮುಕ್ಷು** – ಮೋಕ್ಷಾಪೇಕ್ಷಿ
**ಮುಮುಕ್ಷುವೃತ್ತಿ** – ತಾಪಸ ಕ್ರಮ
**ಮುಮೂರ್ಷು** – ಸಾಯಲಿಚ್ಛಿಸುವವನು; ಸಾಯಲಿರುವವನು
**ಮುಮ್ಮಱಿ** – ಮಣ್ಮಱಿ, ಭಯಂಕರ ಸಾವು
**ಮುಮ್ಮಳಸು** – ಮುಂದಕ್ಕೆ ನುಗ್ಗು
**ಮುಮ್ಮುರಿ** – ಕಾದ ಮರಳು
**ಮುಮ್ಮುರಿಗಾಯ್** – ಕಾದ ಮರಳಿನಂತೆ ತುಂಬ ಬಿಸಿಯಾಗು
**ಮುಮ್ಮುರಿಗೊಳ್** – ಮುಮ್ಮುರಿಗಾಯ್
**ಮುಯ್** – ಉಡುಗೊರೆ; ಪ್ರತೀಕಾರ
**ಮುಯ್ವ(ಯ್ವಾ)ಂ ನೋಡಿ** – ಸಾಮರ್ಥ್ಯ ಅರಿತುಕೊ; ಗರ್ವಿಸು; ಭುಜ ತಟ್ಟಿಕೊ; ಹರ್ಷಪಡು
**ಮುಯ್ವ(ಯ್ವಾ)ಂ ನೋಡಿಸು** – ಹೆಮ್ಮೆಪಡಿಸು
**ಮುಯ್ಯಡಿ** – ಮೂರು ಅಡಿ
**ಮುಯ್ಯಾನ್** – ಗರ್ವಿಸು; ಪ್ರತೀಕಾರ ಮಾಡು; ಸ್ಪರ್ಧಿಸು
**ಮುಯ್ಯೇರಡಿ** – ಮೂರೆರಡು ಅಂದರೆ ಆರು ಕಾಲುಗಳುಳ್ಳದ್ದು, ದುಂಬಿ
**ಮುಯ್ಯೇೞ್** – ಮೂರು ಬಾರಿ ಏಳಬೇಳು ಮೂರಲ, ಇಪ್ಪತ್ತೊಂದು
**ಮುಯ್ವು(ಯ್ಪು)** – ಹೆಗಲು, ಭುಜ
**ಮುಯ್ವು** – ಮುಯ್ಯಿ, ಪ್ರತಿನಿರ್ಯಾತ
**ಮುಯ್ವೊನೆ** – ಭುಜದ ತುದಿ
**ಮುರಜ** – ಮದ್ದಳೆ
**ಮುರಜಕೇತನ** – ಮೃದಂಗದ ಚಿಹ್ನೆಯುಳ್ಳ ಬಾವುಟ
**ಮುರಜಬಂಧ(ಕ)** – ಒಂದು ಬಗೆಯ ಚಿತ್ರಕವಿತ್ವ; ಮೃದಂಗದ ಆಕಾರದಲ್ಲಿ ಪದ್ಯ ಬರೆಯುವುದು
**ಮುರಿ** – ಬಾಗು; ಹೊರಳು; ಹೊಸೆ; ಹಿಂದಿರುಗು
**ಮುರಿಗೇಶ** – ಮುರಿ+ಕೇಶ, ಗುಂಗುರು ಕೂದಲು
**ಮುರಿಪು** – ಬಗ್ಗಿಸು; ಹಿಂಜರಿತ
**ಮುರುಂಟು** – ಮುರುಟಿಹೋಗು; ಡೊಂಕಾಗು; ಉರಿಯಿಸು; ಬಾಡಿಹೋಗು
**ಮುರುಡ** – ಒರಟ
**ಮುರುಡು** – ಡೊಂಕಾಗು; ಬಿದಿರ ಹಿಂಡಲು
**ಮುರುವು** – ದನಗಳಿಗಿಡುವ ಮುಸುರೆ
**ಮುಷ್ಟಿ** – ಹಿಡಿ; (ಅಸ್ತ್ರದ) ಮಂತ್ರ ಪ್ರಯೋಗ ಕ್ರಮ
**ಮುಷ್ಟಿಗ್ರಾಹ್ಯ** – ಹಿಡಿಯಲ್ಲಿ ಅಡಗಿಸಬಹುದಾದ
**ಮುಷ್ಟಿಘಾತ** – ಮುಷ್ಟಿಯ ಹೊಡೆತ
**ಮುಸಲ** – ಒನಕೆ; ಒಂದು ಆಯುಧ; ಗದೆ
**ಮುಸಲಪಾಣಿ** – ಬಲರಾಮ
**ಮುಸಲಾಯುಧ** – ಗದೆ; ಒಬ್ಬ ರಾಕ್ಷಸ
**ಮುಸು** – ಕಪ್ಪುಮುಖದ ಕೋತಿ, ಗೋಲಾಂಗೂಲ
**ಮುಸು(ಂ)ಕು** – ಹೊದೆಸು; ಆವರಿಸು; ವ್ಯಾಪಿಸು; ಹೊದಿಕೆ; ಪರದೆ
**ಮುಸುಂಡಿ** – ಒಂದು ಬಗೆಯ ಆಯುಧ
**ಮುಸುಂಬು** – ಮುಸುಡು, ಮೂತಿ
**ಮುಸುಮೊಗ** – ಕೋತಿಯ ಮುಖ, ವಿಕಾರ ಮುಖ
**ಮುಸುಱು** – ಮುಸುಕು; ಆವರಿಸು; ಗುಂಪಾಗು
**ಮುಹ(ಹು)ಡ** – ಕುಸ್ತಿಯ ಒಂದು ಪಟ್ಟು
**ಮುಹುಃ** – ಪುನಃ
**ಮುಹುರ್ಮುಹು** – ಮತ್ತೆ ಮತ್ತೆ

**ಮುಹೂರ್ತ** – ಶುಭಗಳಿಗೆ; ಎರಡು ಗಳಿಗೆಯ ಅವಧಿ
**ಮುಳ್** – ಕಂಟಕ
**ಮುಳಿ** – ಕೋಪಗೊಳ್ಳು
**ಮುಳಿಕೆಯ್** – ಮುಳಿ
**ಮುಳಿದರ್** – ಶತ್ರುಗಳು
**ಮುಳಿಯಿಸು** – ಕೋಪಗೊಳಿಸು
**ಮುಳಿಸು** – ಕೋಪ
**ಮುಳ್ಗಿಡು** – ಮುಳುಗಿಡ
**ಮುಳ್ಪು** – ಕೆಂಪು ಬಣ್ಣ; ಕೆಂಪು ಬಣ್ಣದ ಬಟ್ಟೆ
**ಮುಳ್ವೊಗು** – ಮುಳ್ಳು ಚುಚ್ಚು
**ಮುಳ್ಮರ** – ಮುಳ್ಳುಗಳಿರುವ ಮರ
**ಮುಳ್ಮೊನೆ** – ಮುಳ್ಳಿನ ತುದಿ
**ಮುಳ್ವಟ್ಟೆ** – ಮುಳ್ಳಿನ ದಾರಿ
**ಮುೞಿ** – ಕತ್ತರಿಸು; ತುಂಡಾಗು; ತುಂಡು
**ಮುೞಿಗಣ್** – ಗಿಡದ ಗೆಣ್ಣು
**ಮುೞಿವು** – ಸಂಕೋಚ
**ಮುೞುಕ** – ಒಯ್ಯಾರ
**ಮುೞುಂಕಾ(ಗಾ)ಡಿಸು** – ಮುಳುಗಿಸು; ತನ್ಮಯಗೊಳಿಸು
**ಮುೞುಕು(ಕ)** – ಬದಲಾವಣೆ; ವಕ್ರತೆ; ಸೆಟೆಯುವಿಕೆ; ಮುಖ ವಿಕಾರಮಾಡು
**ಮುೞು(ಂ)ಗು(ಕು)** – ದ್ರವದಲ್ಲಿ ಅಡಗು; ಸ್ನಾನ ಮಾಡು ತಲ್ಲೀನಗೊಳ್ಳು
**ಮುೞ್ಕು** – ಮುಳುಗು
**ಮುೞ್ಗು** – ಬೀಳು; ನಮಸ್ಕರಿಸು
**ಮುೞ್ತುಗ** – ಮುತ್ತುಗ, ಪಲಾಶ
**ಮೂಂಕಿ(ಗಿ)ೞಿ** – ಹೀಯಾಳಿಸು; ವಾಸನೆ ನೋಡಿ
**ಮೂಕ(ಗ)** – ಮಾತು ಬಾರದವನು
**ಮೂಕತೆ** – ಮೂಕವಾಗಿರುವಿಕೆ
**ಮೂಕೀಭಾವ** – ಮೂಕತೆ
**ಮೂಕೆ** – ಮೂಗಿಯಾದವಳು
**ಮೂಕೊೞೆಯ** – ಮೂಗು ಊನವಾದವನು
**ಮೂಗಯ್** – ಮೂರು ಕೈ (ಮೊಳ) ಅಳತೆ
**ಮೂಗರಿ**– ಮೂಗು ಕತ್ತರಿಸು
**ಮೂಗೞ್ಕಿ(ಕ್ಕೆ)** – ಮೂಕ ರೋದನ
**ಮೂಗೞ್ಮೆ** – ಮೂಗೞ್ಕೆ(ಕ್ಕೆ)
**ಮೂಗಿಡು** – ಮೂಗುದಾರ ಹಾಕು; ಹತೋಟಿಯಲ್ಲಿಡು
**ಮೂಗಿಟ್ಟೇೞು** – ಅಂಕೆಯಲ್ಲಿರಿಸು
**ಮೂಗುರ್ಚು** – ಮೂಗುದಾರ ತೆಗೆದುಬಿಡು
**ಮೂಗುವಡು** – ಮೂಕವಾಗು, ಮಾತಿಲ್ಲದಾಗು
**ಮೂಗುವಡೆ** – ಮೂಗುವಡು
**ಮೂಗೇಣ್** – ಮುರು ಗೇಣು
**ಮೂಗೊಡೆ** – ಮುಕ್ಕೊಡೆ
**ಮೂಡಗಡಲ್** – ಪೂರ್ವ ಸಮುದ್ರ
**ಮೂಡಣ್(ಲ್)** – ಪೂರ್ವದಿಕ್ಕು
**ಮೂಡಣಂ** – ಪೂರ್ವದಿಕ್ಕಿನವನು
**ಮೂಡಮೊಗ** – ಪೂರ್ವದಿಕ್ಕು
**ಮೂಡಿ** – ಉದಯ
**ಮೂಡಿಗೆ** – ಬತ್ತಳಿಕೆ
**ಮೂಡಿ ಮುೞು(ಂ)ಗಾಡು** – ಮಗ್ನವಾಗು
**ಮೂಡಿ ಮುೞ್ಕಾಡು** – ಮಗ್ನವಾಗು
**ಮೂಡು** – ಕಾಣಿಸಿಕೊ; ಹುಟ್ಟು; ಪೂರ್ವದಿಕ್ಕು
**ಮೂಡೆ** – ಮೂಟೆ, ದಿಂಬು
**ಮೂಢತ್ರಯ** – (ಜೈನ) ಲೋಕಮೂಢ, ದೇವತಾಮೂಢ, ಪಾಷಂಡಿ ಎಂಬ ಮೂಢಭಾವನೆಗಳು
**ಮೂದಲಿಸು** – ಹೀಯಾಳಿಸು
**ಮೂದಲೆ** – ಮೂರು ತಲೆ; ಮೂದಲಿಕೆ
**ಮೂದಲ್ಮೆ** – ಮೂದಲೆ
**ಮೂದಿರಿಕ** – ಮುರು ಕಡೆ ತಿರುಗುವಂತಹುದು
**ಮೂದೇವರ್** – ತ್ರಿಮೂರ್ತಿಗಳು, ಬ್ರಹ್ಮ, ವಿಷ್ಣು ಮಹೇಶ್ವರ
**ಮೂಮೆ** – ಮೂರು ಬಾರಿ
**ಮೂರಿ** – ಮೂತಿ, ಬಾಯಿ
**ಮೂರಿಗೊಳ್** – ಮೂತಿಯನ್ನು ಹಿಡಿದುಕೊ
**ಮೂರಿ(ವಿ)ಡು** – ಬಿರಿ, ಬಾಯಿಬಿಡು
**ಮೂರ್ಖವೃತ್ತಿ** – ಮೂರ್ಖತನ
**ಮೂರ್ಛನ** – ಎಚ್ಚರ ತಪ್ಪುವುದು
**ಮೂರ್ಛಿಸು** – ಮೂರ್ಛೆ ಹೋಗು
**ಮೂರ್ಛೆ** – ಎಚ್ಚರ ತಪ್ಪಿದ ಸ್ಥಿತಿ
**ಮೂರ್ಛೆದಿಳಿ** – ಮೂರ್ಛೆಯಿಂದ ಎಚ್ಚರಗೊಳ್ಳು
**ಮೂರ್ತಿಗೊಳ್** – ಆಕಾರವನ್ನು ಹೊಂದು
**ಮೂರ್ತಿಬಲ** – ದೇಹದ ಶಕ್ತಿ
**ಮೂರ್ತಿಮತಿ** – ಆಕಾರವನ್ನು ತಳೆದ
**ಮೂರ್ಧ** – ತಲೆ, ನೆತ್ತಿ
**ಮುರ್ಧಾಭಿಷಿಕ್ತ** – ನೆತ್ತಿಯ ಮೇಲೆ ವಿಧಿವತ್ತಾಗಿ ಅಭಿಷೇಕಗೊಂಡ ರಾಜ
**ಮೂರ್ಧಾಭಿಷೇಕ** – ಪಟ್ಟಾಭಿಷೇಕ
**ಮೂರ್ಧ್ನಿಘ್ರಾಣ** – ಪ್ರೀತಿಯಿಂದ ನೆತ್ತಿಯನ್ನು ಮೂಸುವುದು (ಮುಖದಿಂದ ಅಪ್ಪುವುದು)
**ಮೂಲ** – ಬೇರು; ಕಾರಣ
**ಮೂಲಂಬರಂ** – ಬೇರಿನವರೆಗೆ
**ಮೂಲಕರ್ಮ** – (ಜೈನ) ಆತ್ಮನನ್ನು ಬಂಧಿಸುವ ಎಂಟು ಅಂಶಗಳು: ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ ಎಂಬ ನಾಲ್ಕು ಘಾತಿ ಕರ್ಮಗಳು; ಮತ್ತು ಆಯುಃಕರ್ಮ, ನಾಮಕರ್ಮ, ಗೋತ್ರಕರ್ಮ, ವೇದನೀಯಕರ್ಮ ಎಂಬ ನಾಲ್ಕು ಅಘಾತಿ ಕರ್ಮಗಳು;
**ಮೂಲಗುಣ** – (ಜೈನ) ಮುನಿಗಳಿಗೆ ಬೇಕಾದ ಆವಶ್ಯಕ ಗುಣಗಳು: ಪಂಚ ಮಹಾವ್ರತ,

ಪಂಚ ಸಮಿತಿ, ಪಂಚೇಂದ್ರಿಯನಿಗ್ರಹ, ದಿಗಂಬರತ್ವ, ಕೇಶಲುಂಚನ ಪ್ರತಿಜ್ಞೆ, ಷಡಾವಶ್ಯಕಗಳಲ್ಲಿ ನಿರ್ಬಾಧಕತ್ವ, ಸ್ನಾನರಾಹಿತ್ಯ, ದಂತಧಾವನರಾಹಿತ್ಯ, ನಿಂತು ಮಾಡುವ ಊಟ, ಒಂದೇ ಹೊತ್ತಿನ ಊಟ

**ಮೂಲಬಲ** – ಸೈನ್ಯದ ಮುಖ್ಯ ಭಾಗ

**ಮೂಲಸ್ತಂಭ** – ಆಧಾರಭೂತವಾದುದು

**ಮೂಲಸ್ಥಾನ** – ಹುಟ್ಟಿದ ಜಾಗ

**ಮೂಲಿಗ** – ಕಾರಣಭೂತನಾದ ವ್ಯಕ್ತಿ

**ಮೂಲೋಕ** – ಮೂರು ಲೋಕಗಳು, ಸ್ವರ್ಗ ಮರ್ತ್ಯ ಪಾತಾಳಗಳು

**ಮೂಲೋತ್ತರಗುಣ** – (ಜೈನ) ಆಚಾರ್ಯರಿಗೆ ಇರಬೇಕಾದ ಮೂವತ್ತಾರು ಗುಣಗಳು: ದ್ವಾದಶ ತಪಸ್ಸು, ಷಡಾವಶ್ಯಗಳು, ಪಂಚಾಚಾರಗಳು, ದಶಧರ್ಮಗಳು, ತ್ರಿಗುಪ್ತಿಗಳು

**ಮೂಲ್ಯ** – ಬೆಲೆಬಾಳುವ

**ಮೂವಣ್ಣಂಬರ್** – ಬಾಲ್ಯ, ಯೌವನ, ಮುಪ್ಪುಗಳನ್ನು ಹಾದು ಬರು

**ಮೂವತ್ತಾರು ಗುಣ** – ಮೂಲೋತ್ತರಗುಣ

**ಮೂವತ್ತುಮೂದೇವರ್** – ತ್ರಿದಶರು; ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಇಬ್ಬರು ಅಶ್ವಿನೀ ದೇವತೆಗಳು

**ಮೂವತ್ತೆರಡಾಯುಧ** – ಬತ್ತೀಸಾಯುಧ; ಮೂವತ್ತೆರಡು ಬಗೆಯ ವಿವಿಧ ಅಸ್ತ್ರಗಳು

**ಮೂವತ್ತೆರಡು ನಾಡು** – (ಜೈನ) ವಿದೇಹಕ್ಷೇತ್ರದ ನಾಡುಗಳು

**ಮೂವಳಸು** – ಮೂರು ಬಳಸು; ಮೂರು ಸುತ್ತು ಹಾಕು

**ಮೂವಿಟ್ಟಿ** – ಮೂರು ಬಗೆಯ ಬಿಟ್ಟಿ, ನೋಡಿ, 'ಬಿಟ್ಟಿ'

**ಮೂವೆಡ್ಡಂ** – ತುಂಬ ಸುಂದರ

**ಮೂಷಿಕ** – ಇಲಿ

**ಮೂಷಿಕೆ** – ಹೆಣ್ಣು ಇಲಿ

**ಮೂಷೆ** – ಮೂಷಿಕೆ; ಮೂಸೆ, ಲೋಹ ಕರಗಿಸುವ ಬಟ್ಟಲು

**ಮೂಱೆರವು** – ಪ್ರಾಣಿಗಳ ನೀರು ಕುಡಿಯುವ, ಶತ್ರುಗಳಿರುವ, ಮರಿ ಇರುವ ಜಾಗಗಳು

**ಮೂವರ್** – ಮೂರು ಮಂದಿ

**ಮೂಱಿಗಿವಿ** – ಹರುಕುಕಿವಿ

**ಮೂಱೆ** – ಕಿವಿಯಿಲ್ಲದವಳು; ಕರಗದ ಜೂಳಿ

**ಮೃಗ** – ಕಾಡುಪ್ರಾಣಿ; ಜಿಂಕೆ; ಕಸ್ತೂರಿ

**ಮೃಗಚಾರಿ** – ಜಿಂಕೆಯಾಕಾರ ತಾಳು

**ಮೃಗತತಿ** – ಪ್ರಾಣಿಸಂಕುಲ

**ಮೃಗತೃಷ್ಣಿಕೆ** – ಬಿಸಿಲುಗುದುರೆ

**ಮೃಗತೃಷ್ಣೆ** – ಮೃಗತೃಷ್ಣಿಕೆ

**ಮೃಗಧರ** – ಜಿಂಕೆಯ ಗುರುತುಳ್ಳ, ಚಂದ್ರ

**ಮೃಗಧೂರ್ತ** – ನರಿ

**ಮೃಗನಯನೆ** – ಜಿಂಕೆಯಂತೆ ಚಂಚಲ ಕಣ್ಣುಗಳುಳ್ಳವಳು

**ಮೃಗನಾಭಿ** – ಕಸ್ತೂರಿ

**ಮೃಗನೇತ್ರೆ** – ಮೃಗನಯನೆ

**ಮೃಗಪತಿ** – ಸಿಂಹ

**ಮೃಗಭೂ** – ಚೌರಿ

**ಮೃಗಮದ** – ಕಸ್ತೂರಿ

**ಮೃಗಮದಾಮೋದ** – ಕಸ್ತೂರಿಯ ಪರಿಮಳ

**ಮೃಗಯಾ(ಯೆ)** – ಬೇಟೆ

**ಮೃಗಯಾವ್ಯಸನ** – ಬೇಟೆಯ ಗೀಳು

**ಮೃಗಯು** – ಬೇಟೆಗಾರ

**ಮೃಗರಾಜ** – ಸಿಂಹ

**ಮೃಗರಾಜವಿಷ್ಟರ** – ಸಿಂಹಾಸನ

**ಮೃಗರಿಪು** – ಜಿಂಕೆಯ ಶತ್ರು, ಸಿಂಹ

**ಮೃಗಲಕ್ಷ್ಮ** – ಚಂದ್ರ

**ಮೃಗಲಾಂಛನ** – ಮೃಗಲಕ್ಷ್ಮ

**ಮೃಗಲೋಚನ** – ಜಿಂಕೆಯಂತೆ ಚಂಚಲವಾದ ಕಣ್ಣು

**ಮೃಗಲೋಚನೆ** – ಮೃಗನಯನೆ

**ಮೃಗವ್ಯ** – ಬೇಟೆ

**ಮೃಗಶಾಬ** – ಜಿಂಕೆಯ ಮರಿ

**ಮೃಗಶಾಬಾಕ್ಷಿ** – ಜಿಂಕೆಯ ಮರಿಯಂತೆ ಚಂಚಲವಾದ ಕಣ್ಣುಳ್ಳವಳು

**ಮೃಗಾಂಕ** – ಜಿಂಕೆಯ ಗುರುತುಳ್ಳುದು, ಚಂದ್ರ

**ಮೃಗಾಕ್ಷಿ** – ಮೃಗನಯನೆ

**ಮೃಗಾಜಿನ** – ಜಿಂಕೆಯ ಚರ್ಮ

**ಮೃಗಾಧಿಪ** – ಸಿಂಹ

**ಮೃಗಾರಿಪೀಠ** – ಸಿಂಹಾಸನ

**ಮೃಗಿ** – ಹೆಣ್ಣು ಜಿಂಕೆ

**ಮೃಗೇಂದ್ರ** – ಸಿಂಹ

**ಮೃಗೇಂದ್ರವಿಷ್ಟರ** – ಸಿಂಹಾಸನ

**ಮೃಗೇಕ್ಷಣ** – ಚಂಚಲ ದೃಷ್ಟಿ

**ಮೃಗೋತ್ಥ** – ಮೃಗಮದ

**ಮೃಗೋದ್ಭವ** – ಮೃಗಮದ

**ಮೃಡ** – ಈಶ್ವರ

**ಮೃಡಾದ್ರಿ** – ಕೈಲಾಸಪರ್ವತ

**ಮೃಣಾಲ(ಳ)** – ತಾವರೆಯ ದಂಟು

**ಮೃಣಾಲ(ಳ)(ನಾಳ)** – ಮೃಣಾಲ(ಳ)

**ಮೃಣಾಳನಾಳಕೆ** – ಮೃಣಾಲ(ಳ)

**ಮೃಣಾಳಕೆ** – ತಾವರೆ ದಂಟಿನ ನಾರು

**ಮೃತಕ** – ಹೆಣ

**ಮೃತಕಸೆಜ್ಜೆ** – (ಜೈನ) ಒಂದು ಬಗೆಯ ತಪಸ್ಸು

**ಮೃತಪಟಹ** – ವ್ಯಕ್ತಿ ಸತ್ತಾಗ ಬಾರಿಸುವ ತಮಟೆ

**ಮೃತಿ** – ಸಾವು

**ಮೃತ್ತಿಕಾ(ಕೆ)** – ಮಣ್ಣು

**ಮೃತ್ಪಾತ್ರ** – ಮಣ್ಣಿನ ಗಡಿಗೆ
**ಮೃತ್ಸ್ನಾಘಟ** – ಮಣ್ಣಿನ ಮಡಕೆ
**ಮೃದುತಲ್ಪ** – ನಯವಾದ ಹಾಸಿಗೆ
**ಮೃದುಪದ** – ಕೋಮಲ ಅಡಿ; ಮೃದುವಾದ ಶಬ್ದ
**ಮೃದುಬಂಧ(ನ)** – ಪದಗಳ ಸರಳ ಜೋಡಣೆ
**ಮೃದುಯಾನ** – ಮೆಲುವಾದ ನಡಿಗೆ
**ಮೃದುವಚನ** – ಮೇಲುಮಾತು
**ಮೃದುಸಿಂಜ** – ಇಂಪಾದ ಮೆಲುದನಿ
**ಮೃದುಹೃದಯ** – ಕೋಮಲ ಮನಸ್ಸು
**ಮೃದ್ಭಾಜನ** – ಮಣ್ಣಿನ ಮಡಕೆ
**ಮೃದ್ವೀಕೆ** – ದ್ರಾಕ್ಷಿ
**ಮೃಷಂ**– ಸುಳ್ಳುಗಾರ
**ಮೃಷಾನಂದ** – (ಜೈನ) ಒಂದು ಬಗೆಯ ರೌದ್ರಧ್ಯಾನ; ಸುಳ್ಳಾಡುವ ಆನಂದ
**ಮೃಷಾಪಾತಕ** – ಅಸತ್ಯದ ದೋಷ
**ಮೆಚ್ಚಿಸು** – ಒಪ್ಪಿಸು; ಇಷ್ಟಪಡಿಸು
**ಮೆಚ್ಚು** – ಇಚ್ಛೆ; ಬಹುಮಾನ; ಇಷ್ಟಪಡು
**ಮೆಚ್ಚುಕೆಯ್** – ಇಷ್ಟಬಂದಂತೆ ಮಾಡು
**ಮೆಚ್ಚುಗೊ(ಗು)ಡು** – ಬಹುಮಾನ ನೀಡು
**ಮೆಚ್ಚುಗೊಳ್** – ಬಹುಮಾನ ಸ್ವೀಕರಿಸು
**ಮೆಚ್ಚುವಡೆ** – ಮೆಚ್ಚುಗೊಳ್
**ಮೆಚ್ಚು(ಚ್ಚ)ವಣಿಗೆ** – ಮೆಚ್ಚಿಕೆಯನ್ನು ಹೊಂದಿರುವುದು
**ಮೆಚ್ಚುವೇೞ್** – ಇಷ್ಟವಾದುದನ್ನು ತಿಳಿಸು
**ಮೆಟ್ಟು** – ತುಳಿ; ಹೆಜ್ಜೆಯಿಡು; ಪಾದರಕ್ಷೆ ಧರಿಸು; ಪಾದರಕ್ಷೆ
**ಮೆಡಱು** – ಹಣೆ
**ಮೆಯ್** – ಶರೀರ
**ಮೆಯ್ಗೊಳಸು** – ಧರಿಸು
**ಮೆಯ್ಗಂಡ** – ದೇಹದ ಮಾಂಸ
**ಮೆಯ್ಗಣ್ಣ** – ಇಂದ್ರ
**ಮೆಯ್ಗರೆ** – ಕಣ್ಣಿಗೆ ಕಾಣದಾಗು, ಅಂತರ್ಧಾನವಾಗು
**ಮೆಯ್ಗರ್ಚು** – ಮೈತೊಳೆ, ಸ್ನಾನಮಾಡು
**ಮೆಯ್ಗಲಿ** – ಪರಾಕ್ರಮಿ
**ಮೆಯ್ಗಲಿತನ** – ಪರಾಕ್ರಮ
**ಮೆಯ್ಗಾಪು** – ಮೈಗಾವಲು
**ಮೆಯ್ಗುಂದು** – ಹೆದರಿಕೊ
**ಮೆಯ್ಗೆಡು** – ವಿಕಾರಗೊಳ್ಳು
**ಮೆಯ್ಗೊಳ್** – ಕಾಣಿಸಿಕೊ
**ಮೆಯ್ಗೆಯ್ಮೆ** – ಪ್ರತ್ಯೇಕವಾಗಿ
**ಮೆಯ್ದೆಗೆ** – ಹೆದರಿಕೊ; ಹಿಂಜರಿ
**ಮೆಯ್ದೆರೆ** – ಸುಕ್ಕು
**ಮೆಯ್ದೊಡವು** – ಒಡವೆ
**ಮೆಯ್ದೋಱು** – ಕಾಣಿಸಿಕೊ
**ಮೆಯ್ನವಿರ್** – ಮೈಮೇಲಿನ ಕೂದಲು
**ಮೇಯ್ನೞಿ** – ಹುಡುಗಿ ಪ್ರಾಯಕ್ಕೆ ಬರು
**ಮೆಯ್ಪಿಂಗಿಸು** – ಹಿಮ್ಮೆಟ್ಟಿಸು
**ಮೆಯ್ಪೊರ್ದು** – ತಾಕು, ಮುಟ್ಟು
**ಮೆಯ್ಬಿಸುಪು** – ಮೈಯ ಕಾವು
**ಮೆಯ್ಮಱುಗು** – ದೇಹದ ತಾಪ; ವ್ಯಸನಪಡು
**ಮೆಯ್ಮಱೆ** – ಪರವಶವಾಗು; ದೇಹದ ಅರಿವಿಲ್ಲದಾಗು
**ಮೆಯ್ಮಱೆಪು** – ಮೈಮರವೆ, ಪರವಶತೆ
**ಮೆಯ್ಮೆಯ್ಗೆ** – ಪ್ರತಿಯೊಬ್ಬರಿಗೆ
**ಮೆಯ್ಯನಿಕ್ಕು** – ನಮಸ್ಕರಿಸು
**ಮೆಯ್ಯಲಸು** – ದೇಹದ ದಣಿವು; ದೈಹಿಕವಾಗಿ ದಣಿ
**ಮೆಯ್ಯಱೆ** – ಎಚ್ಚರವಾಗಿರು
**ಮೆಯ್ಯಾನ್** – ಶರೀರವನ್ನು ಮುಂದೆ ಒಡ್ಡು
**ಮೆಯ್ಯಾೞು** – ಸಮರ್ಥವಾಗು
**ಮೆಯ್ಯಿಕ್ಕು** – ನಮಸ್ಕರಿಸು
**ಮೆಯ್ಯೇಱು** – ದೇಹದ ಮೇಲಾದ ಗಾಯ
**ಮೆಯ್ಯೊಡ್ಡು** – ದೇಹವನ್ನು ಒಪ್ಪಿಸು
**ಮೆಯ್ಯೋಗ** – ದೇಹಾಲಂಕರಣ
**ಮೆಯ್ವಚ್ಚ** – ಮೈಯ ಅಲಂಕರಣ, ಒಡವೆ
**ಮೆಯ್ವಣ್ಣ** – ದೇಹದ ಬಣ್ಣ, ಕಾಂತಿ
**ಮೆಯ್ವಸ** – ಆಸೆ, ಇಷ್ಟ
**ಮೆಯ್ವೞಿ** – ಮೈಯ ಬಳಿ
**ಮೆಯ್ವಿಡಿ** – ಸಾಕಾರಗೊಳ್ಳು, ರೂಪ ಪಡೆ
**ಮೆಯ್ವಿಡು** – ಟಿಸಿಲೊಡೆ; ನಿರ್ಭಯದಿಂದಿರು
**ಮೆಯ್ವೆಂಕೆ** – ಮೆಯ್+ಬೆಂಕೆ, ದೇಹದ ತಾಪ
**ಮೆಯ್ವೆರಸು** – ಜೊತೆಗೂಡು
**ಮೆಯ್ವೆರ್ಚು** – ಉಬ್ಬು; ಅಧಿಕವಾಗು; ಹಿಗ್ಗು
**ಮೆಯ್ವೆಸ** – ದೇಹದ ಚಟುವಟಿಕೆ
**ಮೆಯ್ವೆಱು** – ಮೈದಾಳು; ಕಾಣಿಸಿಕೊ; ಶೋಭಿಸು
**ಮೆಯ್ವೊಣರ್** – ಆವೇಶದಿಂದ ಕಾದು
**ಮೆಯ್ವೊರೆ** – ಸೇರಿಕೊ
**ಮೆಯ್ವೊಳೆಪು** – ದೇಹಕಾಂತಿ
**ಮೆಯ್ವೋಗ** – ಶರೀರಸುಖ
**ಮೆಯ್ಸವಿ** – ದೇಹದ ಚೆಲುವು
**ಮೆಯ್ಸಾರ್ಚು** – ಮೈಯನ್ನು ಒಪ್ಪಿಸು
**ಮೆಯ್ಸಿರಿ** – ದೇಹದ ಚೆಲುವು
**ಮೆಯ್ಸಿರಿಗೆಡು** – ಸತ್ವ ಕಳೆದುಕೊ; ಸೊಬಗು ಹಾಳಾಗು
**ಮೆಯ್ಸುಖ** – ದೇಹಸುಖ; ಕಾಮತೃಪ್ತಿ
**ಮೆಯ್ಸೊಗ** – ಮೆಯ್ಸುಖ
**ಮೆಯ್ಸೊಬಗು** – ಮೆಯ್ಸಿರಿ
**ಮೆಯ್ಸೋಂಕು** – ಮೈ ಮುಟ್ಟು, ಸ್ಪರ್ಶಿಸು; ಸಾಮೀಪ್ಯ
**ಮೆಲ್** – ತಿನ್ನು; ಮೃದುವಾದ
**ಮೆಲ್ಕಾಡು** – ಮೆಲುಕು ಹಾಕು
**ಮೆಲ್ಕಿಱೆ** – ಮೆಲ್ಕಾಡು
**ಮೆಲ್ಕೊತ್ತು** – ಮೆಲ್ಕಾಡು
**ಮೆಲ್ಗುಟುಕು** – ಮೃದುವಾದ ಗುಟುಕು
**ಮೆಲ್ನಗೆ** – ಮುಗುಳುನಗೆ

**ಮೆಲ್ನುಡಿ** – ಮೃದುವಾದ ಮಾತು
**ಮೆಲ್ಪು** – ಮೃದುತೆ; ಇಂಪು; ನಿಧಾನಗತಿ
**ಮೆಲ್ಪುಗುಂದು** – ಮೃದುತ್ವವನ್ನು ಕಳೆದುಕೊ
**ಮೆಲ್ಪುದೋಱು** – ಮೆಲ್ಪನ್ನು ಹೊಂದು
**ಮೆಲ್ಪುವೆಱು** – ಮೆಲ್ಪುದೋಱು
**ಮೆಲ್ಪೊದೆ** – ನಯವಾದ ಹೊದಿಕೆ
**ಮೆಲ್ಲಗೆ(ನೆ)** – ಮೃದುವಾಗಿ; ನಿಧಾನವಾಗಿ; ನಯವಾಗಿ
**ಮೆಲ್ಲಡಿ** – ಕೋಮಲ ಪಾದ
**ಮೆಲ್ಲಿದ** – ಕೋಮಲ ವ್ಯಕ್ತಿ
**ಮೆಲ್ಲುಲಿ** – ಮೃದು ಮಾತು; ಇನಿದನಿ
**ಮೆಲ್ಲೆರ್ದೆ** – ಮಿದುವೆದೆ, ಮೃದುವಾದ ವಕ್ಷ; ಕೋಮಲ ಸ್ವಭಾವ
**ಮೆಲ್ಲೆಲರ್** – ಮಂದಮಾರುತ
**ಮೆಲ್ಲೆಸಱ್** – ಕೋಮಲವಾದ ಪಕಳೆ
**ಮೆಲ್ವಚನ** – ಮೆಲ್ಲುಲಿ
**ಮೆಲ್ಸರ** – ಮೆಲ್ಲುಲಿ
**ಮೆಲ್ಸರಿ** – ತುಂತುರು ಮಳೆ
**ಮೆಲ್ಸುಯ್** – ನಿಧಾನವಾದ ಉಸಿರು
**ಮೆಲ್ಸೋಂಕು** – ನಯವಾದ ಸ್ಪರ್ಶ
**ಮೆಳೆ** – ಪೊದರು
**ಮೆಳ್ಪಡು** – ಮೋಸಹೋಗು; ಭ್ರಾಂತಿಗೊಳ್ಳು
**ಮೆಱ್** – ಒಪ್ಪು; ಪ್ರಖ್ಯಾತಿಗೊಳ್ಳು; ಪ್ರಕಟಿಸು; ಬೀಗು
**ಮೆಱಸು** – ಮೆಣಸು
**ಮೆಳ್ಳು** – ಲೇಪಿಸು
**ಮೆಳ್ವಿಡಿತು** – ಮೋಸ
**ಮೆಳ್ವಿಡಿಸು** – ವಂಚಿಸು
**ಮೆಳ್ವಿಡು** – ಮೋಸ ಹೋಗು; ಮೋಸ; ಮೈಮರೆವು; ಭ್ರಮೆ
**ಮೇಂಟಿ** – ಕಂಬ; ಬೇಸಾಯ
**ಮೇಕು**– ಗೂಟ
**ಮೇಖಲೆ(ಳೆ)** – ಡಾಬು; ಬೆಟ್ಟದ ತಪ್ಪಲು
**ಮೇಗಣ್** – ಮೇಲ್ಭಾಗ
**ಮೇಗಣ** – ಮೇಲಿರುವ
**ಮೇಗು** – ಮೇಲ್ಭಾಗ; ಉತ್ತಮ
**ಮೇಗುಗಾಣ್** – ದಿಕ್ಕುತೋಚು
**ಮೇಗು(ಕು)ದೋಱ್(ಱು)** – ಒಣಜಂಭ ತೋರಿಸು; **ಪೈಪೋಟಿ ಮಾಡು; ಮೋಸಮಾಡು**–
**ಮೇಗುವೇೞ್** – ಮೋಸದ ನುಡಿಯನ್ನಾಡು
**ಮೇಗುಸಿರ್ಗೊಳ್** – ಏದುಸಿರು ಬಿಡು
**ಮೇಗುಸಿರ್ವ(ರ್ವಿ)ಡು** – ಮೇಗುಸಿರ್ಗೊಳ್
**ಮೇ** – (ಪ್ರಾಣಿ) ತಿನ್ನು, ಮೇಯುವುದು
**ಮೇಗೆ** – ಮೇಲುಭಾಗದಲ್ಲಿ; ಆನಂತರ
**ಮೇಗೆಯ್** – ಮೇಲೆ ಚಾಚಿದ ಕೈ
**ಮೇಘಕಾಲ** – ಮಳೆಗಾಲ
**ಮೇಘಘಟೆ** – ಮೋಡದ ರಾಶಿ
**ಮೇಘಡಂಬರ** – ಗುಡುಗು; ಛತ್ರಿ
**ಮೇಘನಾದ** – ಗುಡುಗು; ರಾವಣನ ಮಗ; ಮುತ್ತುಗದ ಮರ; ಮೊಳಗೀ ವೃಕ್ಷ
**ಮೇಘನಿಸ್ವನ** – ಮೇಘನಾದ
**ಮೇಘಮಾರ್ಗ** – ಆಕಾಶ
**ಮೇಘಶಿಖಾವಹ** – ಸಿಡಿಲು
**ಮೇಘಾಗಮ** – ಮಳೆಗಾಲ
**ಮೇಘಾಧ್ವ** – ಆಕಾಶ
**ಮೇಚಕ** – ಕಪ್ಪು, ಶ್ಯಾಮಲ ; ನವಿಲುಗರಿಯ ಕಣ್ಣು
**ಮೇಚಕತೆ** – ಕಪ್ಪು ಬಣ್ಣ
**ಮೇಚಕಿತ** – ಕಪ್ಪು ಬಣ್ಣದ; ಕಡುನೀಲಿಯಾದ
**ಮೇಡು** – ದಿಣ್ಣೆ
**ಮೇಣ್** – ಮತ್ತು; ಅಥವಾ;
**ಮೇತ** – ಮೇವು; ಮೇಯುವಿಕೆ
**ಮೇದ** – ಬಿದಿರ ಕೆಲಸದವನು
**ಮೇದುರ** – ನಯವಾದ; ಅತಿಶಯವಾದ
**ಮೇಪು** – ಮೇವು
**ಮೇಪುಗಾಡು** – ಮೇಯುವ ಸ್ಥಳ
**ಮೇಪುಗೊಳ್** – ಮೇಯು
**ಮೇರುನಗ** – ಮೇರುಪರ್ವತ
**ಮೇರೆ** – ಎಲ್ಲೆ
**ಮೇರೆಗೆಡು** – ಮಿತಿಮೀರು
**ಮೇರೆದಪ್ಪು** – ಮಿತಿಮೀರು; ಆಕ್ರಮಣ ಮಾಡು
**ಮೇರೆವರಿ** – ದಡದವರೆಗೂ ಹರಿ
**ಮೇಲ್** – ಮೇಲ್ಭಾಗ; ಶ್ರೇಷ್ಠ; ಹೆಚ್ಚಿನ
**ಮೇಲಾ(ಳಾ)ಪ(ಕ)** – ಜೊತೆ; ವಾದ್ಯವೃಂದ
**ಮೇಲುದು** – ಮೇಲುಹೊದಿಕೆ; ಸೆರಗು
**ಮೇಲುಸಿರಿಡು** – ಏದುಸಿರು ಬಿಡು
**ಮೇಲೆತ್ತಿ ಬರ್** – ದಾಳಿಯಿಡು
**ಮೇಲೆತ್ತು** – ಮೇಲೆತ್ತಿ ಬರ್
**ಮೇಲೆ ಮೇಲೆ** – ಮತ್ತೆ ಮತ್ತೆ
**ಮೇಲೆವರ್** – ಮೇಲೆತ್ತಿ ಬರ್
**ಮೇಲೆವಾಯ್** – ಮೇಲೆತ್ತಿ ಬರ್
**ಮೇಲ್ಕೊಳ್** – ಹೊದೆದುಕೊ
**ಮೇಲ್ನೆಲೆ** – ಮಹಡಿ
**ಮೇಲ್ಪೊೞ್ತು** – ಒಳ್ಳೆಯ ಮುಹೂರ್ತ
**ಮೇಲ್ಮಲೆಗೆಯ್** – ತೋರಿಕೆ ಮಾಡು
**ಮೇಲ್ವಾಯ್** – ಮುನ್ನುಗ್ಗು; ಮೇಲೆ ಬೀಳು
**ಮೇಲ್ವೀೞ್** – ಮೇಲೆ ಬೀಳು, ದಾಳಿಮಾಡು
**ಮೇವಳ** – ಮೇಯುವಿಕೆ; ಮೇಯುವ ಸ್ಥಳ
**ಮೇಷವಾಹನ** – ಕುರಿಯ ವಾಹನದವನು, ಅಗ್ನಿ
**ಮೇಹು** – ಮೇವು
**ಮೇಳ** – ಜೊತೆ
**ಮೇಳಂಬ** – ದುಂಬಿ
**ಮೇಳಗಾಳೆಗ** – ಆಟಕ್ಕಾಗಿ ಆಡುವ ಯುದ್ಧ
**ಮೇಳಗಾಱ** – ಜೊತೆಗಾರ

**ಮೇಳಿಸು** – ಸೇರು; ಗುಂಪಾಗು; ಉಂಟಾಗು; ದೊರಕಿಸು
**ಮೈ(ಮಯಿ)ಂದವಾೞಿ** – ಒಂದು ಬಗೆಯ ಬಾಳೆ, ಮಹೇಂದ್ರ ಬಾಳೆ
**ಮೈತ್ರ** – ಮಿತ್ರಸಂಬಂಧವಾದ
**ಮೈತ್ರಿ** – ಗೆಳೆತನ
**ಮೈಥುನ** – ಸಂಭೋಗ
**ಮೈಮೆ** – (ಮಹಿಮೆ) ಮಯ್ಮೆ
**ಮೈಮೆವಡೆ** – ಘನತೆಯನ್ನು ಪಡೆ
**ಮೈಮೆವೆಱು** – ಮೈಮೆವಡೆ
**ಮೈಲಾರ** – ಒಬ್ಬ ದೇವತೆ
**ಮೈಲ(ಅ)ಗೆ** – ಮಲಿನತೆ, ಕೊಳೆ
**ಮೈಲೆ** – ನವಿಲು
**ಮೈಹಿರ** – ಸೂರ್ಯ; ಬಿಸಿಲು
**ಮೊಂಟು** – ಮೋಟು, ಗಿಡ್ಡ
**ಮೊಕ್ಕಳಂ** – ವಿಶೇಷವಾಗಿ
**ಮೊಗ** – (ಮುಖ) ಬಾಯಿ; ಎದುರು; ಆರಂಭ
**ಮೊಗಂಗುಡು** – ಎದುರಾಗು
**ಮೊಗಂದಿರಿ(ರು)(ಪು)** – ಮುಖ ತಿರುಗಿಸು; ವಿಮುಖವಾಗು
**ಮೊಗಂದೋಱು** – ಕಾಣಿಸಿಕೊ
**ಮೊಗಂಬಡೆ** – ಅನುನಯ ಮಾಡು; ಒಲಿಸು
**ಮೊಗಂಬುಗಿಸು** – ಎದುರಾಗಿಸು
**ಮೊಗಂಬು(ಬೊ)ಗು** – ಎದುರಾಗು
**ಮೊಗಂಮುರಿ** – ಮುಖ ಕಿವಿಚು; ಮುಖ ತಿರುಗಿಸು
**ಮೊಗಪೆ** – ನೀರು ತುಂಬುವ ಪಾತ್ರೆ
**ಮೊಗಮಜ್ಜನ** – (ಮುಖಮಾರ್ಜನ) ಮುಖ ತೊಳೆಯುವುದು
**ಮೊಗಮಿಕ್ಕು** – ಪ್ರತಿಭಟಿಸು
**ಮೊಗರಂಬ** – ಆನೆಕುದುರೆಗಳ ಮುಖಾಲಂಕಾರ ಸಾಧನ
**ಮೊಗರಾಗ** – ಮುಖಕಾಂತಿ
**ಮೊಗವಡ** – ಮುಖವಾಡ
**ಮೊಗಸಾಲೆ** – (ಮುಖಶಾಲಾ) ಮುಖಮಂಟಪ
**ಮೊಗಸು** – ಮೇಲೆ ಬೀಳು; ಕೆಲಸಕ್ಕೆ ತೊಡಗು
**ಮೊಗೆ** – ನೀರು ತುಂಬು
**ಮೊಗ್ಗರ** – ಸಮೂಹ; ಸೈನ್ಯ
**ಮೊಗ್ಗರಿಸು** – ಗುಂಪುಗೂಡು
**ಮೊಗ್ಗು** – ಸಾಧ್ಯ; ಅರಳದ ಹೂ
**ಮೊಗ್ಗೆ** – ಅರಳದ ಹೂ; ಸಾಧ್ಯವೇ?
**ಮೊಚ್ಚೆ(ಯ)** – ಪಾದರಕ್ಷೆ
**ಮೊಟ್ಟನೆ** – ಹಾಳು
**ಮೊಟ್ಟಯಿಸು** – ಪ್ರತಿಭಟಿಸು
**ಮೊಟ್ಟು** – ಮಟ್ಟಸ
**ಮೊಟ್ಟೆ** – ಮೂಟೆ, ಗಂಟು
**ಮೊಡವಿ** – ಮೊಡವೆ, ಮುಖದ ಗುಳ್ಳೆ
**ಮೊಡೆನಾರು** – ಕೆಟ್ಟ ವಾಸನೆ ಸೂಸು
**ಮೊತ್ತ** – ಸಮೂಹ
**ಮೊತ್ತಮೊದಲ್** – ಎಲ್ಲಕ್ಕಿಂತ ಮೊದಲು
**ಮೊದಲ್** – ಆರಂಭ; ಬೇರು; ತುದಿ; ಮುಂಚೆ; ಬಂಡವಾಳ
**ಮೊದಲಾಗಿ** – ಇತ್ಯಾದಿಯಾಗಿ
**ಮೊದಲಿಕ್ಕು** – ಆರಂಭಿಸು
**ಮೊದಲಿಗ** – ಆರಂಭಿಸಿದವನು; ಪ್ರಮುಖ
**ಮೊದಲಿಡು** – ಮೊದಲಿಕ್ಕು
**ಮೊದಲ್ಗೆಡಿಸು** – ಹಾಳುಮಾಡು; ಬೇರು ಕೀಳು
**ಮೊದಲ್ಗೆಡು** – ಬೇರು ಹಾಳಾಗು; ಬಂಡವಾಳ ಕಳೆದುಕೊ
**ಮೊದಲ್ಗೊಳ್** – ಆರಂಭಗೊಳ್ಳು
**ಮೊನಸು** – ಮೊಳಕೆಯೊಡೆ; ಮೂಡು
**ಮೊನೆ** – ಮುಂಭಾಗ; ತುದಿ; ಹರಿತವಾದ ಭಾಗ; ಕಾಳಗ; ಸೈನ್ಯ; ಮೊಳಕೆ
**ಮೊನೆಗಣೆ** – ಚೂಪಾದ ಬಾಣ
**ಮೊನೆದೋಱು** – ಮೊಳಕೆಯೊಡೆ
**ಮೊನೆಗಾಱ** – ಶೂರ, ಯೋಧ
**ಮೊನೆಯಂಬು** – ಮೊನೆಗಣೆ
**ಮೊನೆಯಿಡು** – ತಿವಿ, ಚುಚ್ಚು
**ಮೊಮ್ಮ** – ಮರ್ಮ, ಮೊಮ್ಮಗ
**ಮೊರಡು(ಡಿ)** – ದಿಣ್ಣೆ
**ಮೊರೆ** – ಝೇಂಕರಿಸು; ಸದ್ದುಮಾಡು
**ಮೊರಕು(ರ್ಕು)** – ಗರ್ವದಿಂದ ತಲೆಗೂಗು
**ಮೊರ್ಮರ** – ಚಟಪಟ; ಗರಿಗರಿ
**ಮೊಲಗಟ್ಟಿ(ತ್ತ)ಲೆ** – ದಟ್ಟವಾದ ಕತ್ತಲೆ; ಚಂದ್ರನಲ್ಲಿನ ಮೊಲದಿಂದಾದ ಕತ್ತಲೆ(?)
**ಮೊಲೆವೆಱು** – ಹೆಣ್ತನವನ್ನು ಹೊಂದು
**ಮೊಲ್ಲೆ** – ಕುಂದಪುಷ್ಪ
**ಮೊಸರಣ್ಕೆ** – ಕಳಶಕ್ಕೆ ಮಾಡುವ ಮೊಸರ ಲೇಪನ
**ಮೊಳೆ** – ಮೊಳಕೆ; ಮೊಳಕೆಯೊಡೆ
**ಮೊಳೆನುಡಿ** – ಸಲಿಗೆ ಮಾತು
**ಮೊಳೆವುಲ್** – ಎಳೆ ಹುಲ್ಲು
**ಮೊಳೆವೋಗು** – ಮೊಳಕೆಯೊಡೆ
**ಮೊಳ್ಗು** – ಮೊಕ್ಕು, ನಮಸ್ಕರಿಸು
**ಮೊಱೆ** – ಕ್ರಮ; ಭೋರ್ಗರೆತ; ಗರ್ಜನೆ; ಬಂಧು; ಗೋಳಾಟ
**ಮೊಱೆಮುಟ್ಟು** – ಕ್ರಮ
**ಮೊಱೆಪು** – ಭೋರ್ಗರೆತ
**ಮೊಱೆಯಟೆ** – ನೀತಿಯನ್ನು ತೊರೆ; ಕ್ರಮತಪ್ಪು
**ಮೊಱೆಯಿಡು** – ಆಕ್ರಂದನ ಮಾಡು; ಬಿನ್ನವಿಸು
**ಮೊೞ(ಂ)ಗು** – ಶಬ್ದಮಾಡು; ಗುಡುಗು; ಆರ್ಭಟಿಸು; ವಾದ್ಯಘೋಷ
**ಮೊೞ್ಗು** – ಬಾಗು; ಕುಗ್ಗು; ನಮಸ್ಕರಿಸು; ಅಧೀನ
**ಮೋಕ್ಷ** – ಬಿಡುಗಡೆ; ಮುಕ್ತಿ; (ಜೈನ) 'ಸಪ್ತತತ್ವ'ಗಳಲ್ಲಿ ಒಂದು; ಎಲ್ಲದರಿಂದ

ಬಿಡುಗಡೆ ಹೊಂದಿ ಆತ್ಮ ಪರಿಶುದ್ಧಗೊಳ್ಳುವುದು
**ಮೋಕ್ಷಗತಿ** – ಮುಕ್ತಿ
**ಮೋಕ್ಷಗಾಮಿ** – ಮುಕ್ತಿಯೆಡೆ ಸಾಗುವವನು
**ಮೋಕ್ಷಪದ** – ಮುಕ್ತಿಪದವಿ
**ಮೋಘ** – ವ್ಯರ್ಥ
**ಮೋಚ** – ಬಾಳೆ
**ಮೋಚು** – ಕೂದಲು ಬೋಳಿಸು
**ಮೋದ** – (ಜೈನ) ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು
**ಮೋದಕ** – ಸಂತೋಷವುಂಟುಮಾಡುವ
**ಮೋದಗೆ** – ಕಡುಬು
**ಮೋದು** – ಅಪ್ಪಳಿಸು; ತುಳಿ: ಹೊಡೆತ
**ಮೋದುವೇಱು** – ಪೆಟ್ಟು ತಿನ್ನು
**ಮೋನ** – (ಮೌನ) ಮಾತಾಡದಿರುವುದು
**ಮೋನಂಗೊಳ್** – ಸುಮ್ಮಗಿರು; ಮೌನವ್ರತ ತಾಳು
**ಮೋನಿ** – ಮೌನಿ; ತಪಸ್ವಿ
**ಮೋಪು** – ಈರ್ಷ್ಯೆ; ಪ್ರೀತಿ
**ಮೋರುಂಡೆ** – ಒಂದು ಸಿಹಿತಿಂಡಿ
**ಮೋಹ** – ಕೂರ್ಮೆ; ಆಕರ್ಷಣೆ; ಭ್ರಮೆ; ಅರಿಷಡ್ವರ್ಗದಲ್ಲಿ ಒಂದು
**ಮೋಹನ** – ಆಕರ್ಷಿಸುವ; ಮೂರ್ಛೆ
**ಮೋಹನೀಯ(ಕರ್ಮ)** – ಭ್ರಮೆಯುಂಟುಮಾಡುವ; (ಜೈನ) ಆತ್ಮನ ಬಂಧನಕ್ಕೆ ಕಾರಣವಾಗುವ 'ಮೂಲಕರ್ಮ'ಗಳಲ್ಲಿ ಒಂದು
**ಮೋಹರ** – ಸೈನ್ಯ; ಗುಂಪು
**ಮೋಹರಂಬಡೆ** – ಗುಂಪಾಗು
**ಮೋಹರಸ** – ಪ್ರೀತಿ
**ಮೋಹಿಸು** – ಎಚ್ಚರ ತಪ್ಪು; ಭ್ರಮೆಗೊಳಗಾಗು
**ಮೌಂಜಿ** – ಹುಲ್ಲಿನ ಹುರಿ
**ಮೌಕ್ತಿಕ** – ನವರತ್ನಗಳಲ್ಲಿ ಒಂದು, ಮುತ್ತು
**ಮೌಖರ್ಯ** – (ಜೈನ) ಅನವಶ್ಯಕ ಮಾತನ್ನಾಡಿ ಹಿಂಸಿಸುವುದು;ಒಂದು 'ಅನರ್ಥದಂಡವಿರತಿ'
**ಮೌನಾಧ್ಯಯನವೃತ್ತಿ** – (ಜೈನ) ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಮೌನ ಶಾಸ್ತ್ರಾಭ್ಯಾಸ
**ಮೌರವಪಾಶ** – ಕಬ್ಬಿಣದ ಸರಪಳಿ
**ಮೌರ್ವೀ** – ಬಿಲ್ಲಿನ ಹೆದೆ
**ಮೌಲ** – ರಾಜನ ಸೇವೆಯಲ್ಲಿರುವವನು
**ಮೌಳಿ(ಳಿ)** – ತುದಿ; ತಲೆ
**ಮೌಲಬಲ** – ಮುಖ್ಯ ಸೈನ್ಯ; 'ಷಡ್ಬಲ'ದಲ್ಲಿ ಒಂದು
**ಮೌಹೂರ್ತಿಕ** – ಜೋಯಿಸ
**ಮೌಳಿಮಣಿ** – ಕಿರೀಟದ ರತ್ನ
**ಮ್ಲಾನ** – ಬಾಡಿದುದು
**ಮ್ಲಾನತೆ** – ಕಳಾಹೀನತೆ; ದುಃಖ
**ಮ್ಲೇಂಛ(ಚ್ಛ)ಖಂಡ** – ಅನಾರ್ಯರ ನಾಡು; **ಐವತ್ತಾರು ದೇಶಗಳಲ್ಲಿ ಒಂದು–**
**ಮ್ಲೇಚ್ಛರಾಜ** – ಅನಾರ್ಯರ ದೊರೆ

## ಯ

**ಯಕ್ಷ** – ಸುಗಂಧ; (ಜೈನ) ವ್ಯಂತರ ದೇವತೆಗಳ ಒಂದು ವರ್ಗ; ಪ್ರತಿಯೊಬ್ಬ ತೀರ್ಥಂಕರನ ಬಳಿ ಇರುವ ಶಾಸನ ದೇವತೆ
**ಯಕ್ಷಕರ್ದಮ** – ಪರಿಮಳ, ಲೇಪನ ದ್ರವ್ಯ
**ಯಕ್ಷಾಂದೋಳ** – ಒಂದು ಬಗೆಯ ನೃತ್ಯ
**ಯಕ್ಷಿ** – (ಜೈನ) ಪ್ರತಿಯೊಬ್ಬ ತೀರ್ಥಂಕರನ ಬಳಿ ಇರುವ ಶಾಸನ ದೇವತೆ
**ಯಕ್ಷೇಂದ್ರ** – ಯಕ್ಷರ ಒಡೆಯ, ಕುಬೇರ
**ಯಕ್ಷೇಶ್ವರ** – ಯಕ್ಷೇಂದ್ರ
**ಯಜನ** – ಯಾಗ ಮಾಡುವಿಕೆ
**ಯಜಮಾನ** – ಯಾಗಕರ್ತ
**ಯಜ್ಞ** – ಯಾಗ
**ಯಜ್ಞದ್ರವ್ಯ** – ಯಜ್ಞ ಮಾಡಲು ಬೇಕಾದ ಸಾಮಗ್ರಿ
**ಯಜ್ಞವಿದ್ಯೆ** – ಯಜ್ಞದ ಬಗೆಗಿನ ತಿಳಿವಳಿಕೆ
**ಯಜ್ಞವೇದಿ** – ಯಜ್ಞಕ್ಕಾಗಿ ಸಿದ್ಧಪಡಿಸಿದ ವೇದಿಕೆ
**ಯಜ್ಞವೇದೀಸಂಭವೆ** – ಯಜ್ಞದ ವೇದಿಕೆಯಲ್ಲಿ ಹುಟ್ಟಿದವಳು, ದ್ರೌಪದಿ
**ಯಜ್ಞೋಪವೀತ** – ದ್ವಿಜರು ಧರಿಸುವ ಜನಿವಾರ
**ಯತಯಾತಪ್ರೌಢಿ** – ಅಂಕುಶದಿಂದ ಆನೆಯನ್ನು ನಿಯಂತ್ರಿಸುವ ಕೌಶಲ
**ಯತಿಗಣ** – ಮುನಿಸಂದೋಹ
**ಯತಿರಾಜ** – ಮುನಿಶ್ರೇಷ್ಠ
**ಯಥಾಕಾಲ** – ಸೂಕ್ತವಾದ ಸಮಯ
**ಯಥಾಕ್ರಮ** – ಸಮರ್ಪಕವಾದ ರೀತಿ; ಸೂಕ್ತವಾಗಿ
**ಯಥಾಖ್ಯಾತಚರಿತ** – (ಜೈನ) ವಿವಿಧ ಅನುಷ್ಠಾನಗಳಿಂದ ಕಷಾಯರಹಿತನಾದವನು
**ಯಥಾಖ್ಯಾತಚಾರಿತ್ರ** – (ಜೈನ) ಮೋಹನೀಯ ಕರ್ಮಗಳನ್ನೆಲ್ಲ ಕಳೆದುಕೊಂಡ ಆತ್ಮನ ಸ್ಥಿತಿ, ಸಪ್ತಸಂಯಮಗಳಲ್ಲಿ ಒಂದು
**ಯಥಾಗಮ** – ಆಗಮಕ್ಕನುಗುಣವಾಗಿ
**ಯಥಾಯಥಂ** – ಯದ್ವಾತದ್ವ
**ಯಥಾರೂಪ** – ತಕ್ಕುನಾದ
**ಯಥಾರ್ಥಂ** – ಯೋಗ್ಯ ಬಗೆಯಲ್ಲಿ
**ಯಥಾರ್ಥಜ್ಞ** – ಸತ್ಯವನ್ನು ತಿಳಿದವನು
**ಯಥಾರ್ಹ** – ಯೋಗ್ಯತಾನುಸಾರವಾದ
**ಯಥಾವಿಧಿ** – ವಿಧಿಗನುಗುಣವಾಗಿ
**ಯಥಾಶಕ್ತಿ** – ಎಷ್ಟು ಶಕ್ತಿಯಿದೆಯೋ ಅಷ್ಟು
**ಯಥಾಸ್ಥಾನ** – ಸೂಕ್ತ ಸ್ಥಳ
**ಯಥೋಕ್ತ** – ಮುಂಚೆ ಹೇಳಿದ ಹಾಗೆ
**ಯಥೋಚಿತ** – ತಕ್ಕ ರೀತಿಯ
**ಯಥೋದ್ದಿಷ್ಟ** – ಸೂಚನೆಗನುಗುಣವಾದ
**ಯಥೋಪದಿಷ್ಟ** – ಯಥೋದ್ದಿಷ್ಟ
**ಯದು** – ಯದುವಂಶದವನು

**ಯದುಕುಲ** – ಯದುವಂಶ; ಯದುವಂಶದವನು
**ಯದ್ಭವಿಷ್ಯ** – ಭವಿಷ್ಯದಲ್ಲಿ ಏನಿದೆಯೋ ಹಾಗಾಗಲಿ ಎಂಬ ನಂಬಿಕೆಯವನು
**ಯಮ** – ಹತೋಟಿ; ಮೃತ್ಯುದೇವತೆ
**ಯಮಜ** – ಯಮನ ಮಗ, ಯುಧಿಷ್ಠಿರ
**ಯಮದಂಡ** – ಯಮನ ಆಯುಧ, ಗದೆ
**ಯಮನಂದನ** – ಯಮಜ
**ಯಮನಿಕೇತನ** – ಯಮನ ಮನೆ, ಯಮಲೋಕ
**ಯಮಪಾಶ** – ಯಮನ ಹಗ್ಗ
**ಯಮಪುತ್ರ** – ಯಮಜ
**ಯಮಪುರ** – ಸಂಯಮನೀ ಎಂಬ ಯಮನ ಊರು
**ಯಮಲ(ಳ)** – ಅವಳಿ ಜವಳಿ, ನಕುಲ–ಸಹದೇವ–
**ಯಮಳಮರ್ದಳ** – ಜೋಡಿ ಮದ್ದಳೆ
**ಯಮಸಮಾಧಿ** – ಇಂದ್ರಿಯನಿಗ್ರಹದಿಂದ ಸಾಧಿಸಿದ ಸಮಾಧಿಯೋಗ
**ಯಮಸುತ** – ಯಮಜ
**ಯಮಿ** – ಸಂಯಮಿ
**ಯವ(ವೆ)** – ಒಂದು ಜಾತಿಯ ಗೋಧಿ
**ಯಮನಿ** – ಯವನ ದೇಶದ ಹೆಂಗಸು
**ಯಮಿ** – ತಪಸ್ವಿ
**ಯವನಿಕೆ** – ತೆರೆ, ಪರದೆ
**ಯವ್ವನ** – ಯೌವನ, ಹರಯ
**ಯಶ(ಸು)** – ಕೀರ್ತಿ
**ಯಶಃಪಟಹ** – ಜಯಭೇರಿ
**ಯಶಃಪಿಂಡ** – ಜಯಗಳ ಸಾಲು
**ಯಶಸ್ಕೀರ್ತಿ** – (ಜೈನ) ನಾಮಪ್ರಕೃತಿಗಳಲ್ಲಿ ಒಂದು; ಜೀವನಿಗೆ ಕೀತೀ ಬರುವಂತೆ **ಮಾಡುವಂಥದು–**
**ಯಶಃಸ್ತಂಭ** – ಗೆಲುವಿನ ಸ್ಮಾರಕವಾದ ಕಂಬ
**ಯಶೋದುಂದುಭಿ** – ಗೆಲವನ್ನು ಸಾರುವ ದುಂದುಭಿಧ್ವನಿ
**ಯಶೋದೆ** – ಜಯವನ್ನು ನೀಡುವವಳು; ಶ್ರೀಕೃಷ್ಣನ ಸಾಕುತಾಯಿ
**ಯಶೋಧನ** – ಕೀರ್ತಿಯನ್ನೇ ಧನವಾಗುಳ್ಳವನು
**ಯಶೋಧಿಕ** – ಹೆಚ್ಚಿನ ಕೀರ್ತಿಶಾಲಿ
**ಯಶೋನಿಧಿ** – ಯಶಸ್ಸಿನ ಆಗರ
**ಯಶೋನಿಳಯ** – ಯಶೋನಿಧಿ
**ಯಶೋರ್ಥಿ** – ಯಶಸ್ಸನ್ನು ಬಯಸುವವನು
**ಯಷ್ಟಿ** – ಕೋಲು; ಕಂಬ; ಗದೆ; ಹಾರ
**ಯಾಚಕ** – ಬೇಡುವವನು
**ಯಾಜನ** – ಯಜ್ಞ ಮಾಡಿಸುವುದು; ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದು
**ಯಾಜ್ಞಸೇನಿ** – ಯಾಜ್ಞಸೇನ(ದ್ರುಪದ)ನ ಮಗಳು, ದ್ರೌಪದಿ
**ಯಾತವ್ಯ** – ಶತ್ರು
**ಯಾತುಧಾನ** – ರಾಕ್ಷಸ
**ಯಾತ್ರೆ** – ಪಯಣ; ಮೆರವಣಿಗೆ
**ಯಾಥಾತ್ಮ್ಯ** – ಸ್ವಭಾವ
**ಯಾದಃಪತಿ** – ವರುಣ; ಪಶ್ಚಿಮ ದಿಕ್ಕಿನ ಅಧಿಪತಿ
**ಯಾದವಕುಲ** – ಯದುವಂಶ
**ಯಾದವ್ರೋದ** – ಮೊಸಳೆ
**ಯಾದಶ್ಚರ** – ಜಲಚರ
**ಯಾನ** – ಚಲನೆ; ಪ್ರಯಾಣ; ರಾಜನ ಷಡ್ಗುಣಗಳಲ್ಲಿ ಒಂದು, ಯುದ್ಧಕ್ಕೆ ಹೊರಡುವುದು
**ಯಾನನಾಗ** – ಸವಾರಿಯ ಆನೆ
**ಯಾನಪಾತ್ರ** – ಹಡಗು
**ಯಾನಹಸ್ತಿ** – ಯಾನನಾಗ
**ಯಾಪ್ಯಯಾನ** – ಮೇನೆ, ಪಲ್ಲಕ್ಕಿ
**ಯಾಮತೂರ್ಯ** – ಜಾವಕ್ಕೊಮ್ಮೆ ಮಾಡುವ ವಾದ್ಯಧ್ವನಿ
**ಯಾಮತ್ರಯ** – ಮೂರು ಜಾವಗಳು
**ಯಾಮಿಕ** – ಜಾವದ ಪಹರೆಯವನು
**ಯಾಮಿಕವೃತ್ತಿ** – ಪಹರೆಯ ಕೆಲಸ
**ಯಾಮಿನಿ** – ರಾತ್ರಿ
**ಯಾಮಿನೀವಿರಾಮ** – ರಾತ್ರಿಯ ಕೊನೆ, ಬೆಳಗು
**ಯಾಮ್ಯದಿಶೆ** – ಯಮನ ದಿಕ್ಕು, ದಕ್ಷಿಣ
**ಯಾವಕದ್ರವ** – ಅರಗಿನ ರಸ; ಅಲತಿಗೆ
**ಯಾವಕರಸ** – ಯಾವಕದ್ರವ
**ಯಾವಕರಾಗ** – ಅರಗಿನ ಕೆಂಬಣ್ಣ
**ಯಾವಜ್ಜೀವ** – ಯಾವತ್+ಜೀವ, ಜೀವವಿರುವವರೆಗೆ
**ಯಾವನಾಳ** – ಜೋಳ
**ಯುಕ್ತ** – ಜೋಡಿಸಿದ; ಸೂಕ್ತವಾದ
**ಯುಕ್ತಾರ್ಥ** – ಸಮಂಜಸವಾದ
**ಯುಗ** – ಜೋಡಿ; ಒಂದು ಮಾರು; ಐದು ವರ್ಷಗಳ ಅವಧಿ; ಚತುರ್ಯುಗಗಳಲ್ಲಿ ಒಂದು
**ಯುಗನಾಯಕ** – ಒಂದು ಕಾಲಮಾನದ ಮುಂದಾಳು
**ಯುಗಪತ್** – ಏಕಕಾಲದಲ್ಲಿ
**ಯುಗಪರಿವರ್ತನ** – ಒಂದು ಯುಗ ಹೋಗಿ ಮತ್ತೊಂದು ಬರುವುದು
**ಯುಗಲಕ** – ಅವಳಿ ಜವಳಿ
**ಯುಗಳ** – ಯುಗಲಕ
**ಯುಗಾಂತ** – ಯುಗದ ಕೊನೆ; ಪ್ರಳಯ
**ಯುಗಾವಸಾನ** – ಯುಗಾಂತ
**ಯುಗ್ಮ** – ಜೋಡಿ; ದಂಪತಿ
**ಯುತ** – ಕೂಡಿದ; ಸೇರಿಸಿದ
**ಯುದ್ಧಸನ್ನದ್ಧ** – ಯುದ್ಧಮಾಡಲು ಸಿದ್ಧನಾದವನು
**ಯುವ** – ಕಿರುವರೆಯದ; ತರುಣ; ಅರವತ್ತು ವರ್ಷದ ಆನೆ
**ಯುವತಿ** – ತರುಣಿ
**ಯುವರಾಜ** – ರಾಜನ ಬಳಿಕ ಪಟ್ಟಕ್ಕೆ ಬರುವವನು
**ಯುವರಾಜಕ್ರಿಯೆ** – (ಜೈನ) ಒಂದು 'ಗರ್ಭಾನ್ವಯಕ್ರಿಯೆ'; ಯೌವರಾಜ್ಯಾಭಿಷೇಕ

**ಯುವಾಧಿಪ** – ಯುವರಾಜ
**ಯುಷತ್** – ನಿಮ್ಮ
**ಯೂಕ** – ಕೂರೆ ಎಂಬ ಕ್ರಿಮಿ
**ಯೂಥ(ಧ)** – ಗುಂಪು; ಹಿಂಡು
**ಯೂಥ(ಧ)ಪತಿ** – ಗುಂಪಿನ ನಾಯಕ; ಸಲಗ
**ಯೂಥಿಕೆ** – ಕಾಡಮಲ್ಲಿಗೆ
**ಯೂಪ** – ಬಲಿಗಂಬ, ಯಜ್ಞಪಶುವನ್ನು ಕಟ್ಟುವ ಕಂಬ
**ಯೂಪಸ್ತಂಭ** – ಯೂಪ
**ಯೋಗಂಗೊಳ್** – ಧ್ಯಾನದಲ್ಲಿ ತೊಡಗು
**ಯೋಗಕ್ಷೇಮ** – ಸಂಪಾದನೆ ಮತ್ತು ಅದರ ರಕ್ಷಣೆ
**ಯೋಗ್ಯತಾಕ್ರಿಯೆ** – (ಜೈನ) ಒಂದು ಗರ್ಭಾನ್ವಯ ಕ್ರಿಯೆ; ಸಮವಸರಣವನ್ನು ವಿಸರ್ಜಿಸಿ ವಿಹಾರಾದಿಗಳನ್ನು ಮಾಡುವುದು
**ಯೋಗತ್ರಯ** – (ಜೈನ) ಮನ, ವಚನ, ಕಾಯಎಂಬ ಮೂರು ಪ್ರವೃತ್ತಿಗಳು
**ಯೋಗನಾಥ** – ವಿಷ್ಣು; ಶಿವ
**ಯೋಗನಿಯೋಗ** – ಯೋಗದಲ್ಲಿ ತೊಡಗುವುದು
**ಯೋಗನಿರೋಧ** – (ಜೈನ) ಮನೋವಾಕ್ಕಾಯಗಳ ಚಂಚಲತೆಯನ್ನು ನಿಗ್ರಹಿಸುವುದು
**ಯೋಗನಿರ್ವಾಸಂಪ್ರಾಪ್ತಿ** – (ಜೈನ) ಒಂದು **ಗರ್ಭಾನ್ವಯ ಕ್ರಿಯೆ–**
**ಯೋಗನಿರ್ವಾಣಸಾಧನ** – (ಜೈನ) ಒಂದು **ಗರ್ಭಾನ್ವಯ ಕ್ರಿಯೆ–**
**ಯೋಗವರ್ತನ** – (ಜೈನ) ತಪಸ್ಸಿನಲ್ಲಿ ತೊಡಗುವುದು; (ಜೈನ) ಮನೋವಾಕ್ಕಾಯಗಳ ಸಂಬಂಧ
**ಯೋಗವಿಡಿಸು** – (ಜೈನ) ಕರ್ಮಗಳ ಆಸ್ರವ ಸಂಬಂಧವನ್ನು ನಿಲ್ಲಿಸು
**ಯೋಗಶಾಸ್ತ್ರ** – ಪಾತಂಜಲ ಯೋಗ
**ಯೋಗಸನ್ನಾಹ** – (ಜೈನ) ಒಂದು ಗರ್ಭಾನ್ವಯ ಕ್ರಿಯೆ; ಕೇವಲಜ್ಞಾನ ಪಡೆದ ನಂತರ ಹೊಂದುವ ಪೂಜೆ
**ಯೋಗಾಕ್ಷಿ** – ಯೌಗಿಕತೆಯಿಂದ ದೊರೆಯುವ ದೃಷ್ಟಿ, ಒಳನೋಟ
**ಯೋಗಾಚಾರ** – ಯೋಗಾನುಷ್ಠಾನ; ಬೌದ್ಧಮತ
**ಯೋಗಿನಿ** – ಪಿಶಾಚಿ; ಚೌಷಷ್ಠಿ ಉಗ್ರ ದೇವತೆಗಳು
**ಯೋಜಕ** – ಹೊಂದಿಸುವಂತಹುದು
**ಯೋಜನ** – ಎರಡು ಗಾವುದ ದೂರ
**ಯೋಜನಗಂಧಿತ್ವ** – ಒಂದು ಯೋಜನ ದೂರ ದೇಹದ ಪರಮಳವನ್ನು ಸೂಸುವುದು
**ಯೋಜಿಸು** – ಅನುಮತಿಸು; ನಿಯಮಿಸು; ಧಾರಣ ಮಾಡಿಸು; ಬಳಸು; ತೊಡಗಿಸು
**ಯೋಷಾ** – ಹೆಂಗಸು
**ಯೋಷಿತ್** – ಯೋಷಾ
**ಯೋಷಿಜ್ಜನ** – ಯೋಷಿತ್+ಜನ, ಸ್ತ್ರೀಸಮುದಾಯ
**ಯೌವತ(ವರ್ಗ)** – ಯುವತಿಯರ (ಸಮೂಹ)
**ಯೌವನ** – ತಾರುಣ್ಯ
**ಯೌವನೋದಯ** – ತಾರುಣ್ಯದ ಆರಂಭ
**ಯೌವರಾಜ್ಯ(ಪದ)** – ಯುವರಾಜ ಪದವಿ; (ಜೈನ) ಒಂದು ಗರ್ಭಾನ್ವಯ ಕರಿಯೆ
**ಯೌವರಾಜ್ಯಾಭಿಷೇಕ** – ಯುವರಾಜನಾಗಿ ಮಾಡುವ ವಿಧಿ

## ರ

**ರಂಕು** – ಮಚ್ಚೆಗಳಿರುವ ಜಿಂಕೆ
**ರಂಗ** – ಬಣ್ಣದ ಚಿತ್ರ; ವೇದಿಕೆ
**ರಂಗಂಬೊಗು** – ಪ್ರದರ್ಶನ ನೀಡಲು ವೇದಿಕೆಯನ್ನು ಪ್ರವೇಶಿಸು
**ರಂಗಕಾಱ** – ಅಗಸ
**ರಂಗತ್** – ಚಲಿಸುತ್ತಿರುವ
**ರಂಗಭೂಮಿ(ಕೆ)** – ರಂಗಸ್ಥಳ; ಸಭಾಮಂಟಪ; **ವೇದಿಕೆ–**
**ರಂಗವಲ಼(ಲ್ಲಿ)** – ರಂಗೋಲಿ
**ರಂಜಿಸು** – ಪ್ರಕಾಶಿಸು; ಶೋಭಿಸು; ಉದ್ರೇಕಗೊಳಿಸು; ಸಂತಸಪಡಿಸು
**ರಂಡೆ** – ವಿಧವೆ
**ರಂಡೆತನ** – ವೈಧವ್ಯ
**ರಂಭಾಸ್ತಂಭ** – ಬಾಳೆಗಿಡದ ಕಾಂಡ
**ರಂಭೆ** – ಬಾಳೆ ಗಿಡ; ಒಬ್ಬ ಅಪ್ಸರೆ
**ರಂಭೋರು** – ಬಾಳೆಯ ದಿಂಡಿನಂತಹ ತೊಡೆ
**ರಕ್ಕಸಪಾರ್ವ** – ಬ್ರಹ್ಮರಾಕ್ಷಸ
**ರಕ್ಕಸವಡೆ** – ರಕ್ಕಸ+ಪಡೆ, ರಾಕ್ಷಸ ಸೈನ್ಯ
**ರಕ್ಕಸಿ** – ರಾಕ್ಸಿ; ಕ್ರೂರ ಹೆಂಗಸು
**ರಕ್ಕೆ (ರಕ್ಷೆ) ಭಯನಿವಾರಣೆಯ ಯಂತ್ರ–**
**ರಕ್ಕೆವಣಿ** – ಕ್ಷೇಮಕ್ಕಾಗಿ ಕಟ್ಟುವ ಮಣಿ
**ರಕ್ಕೆವೊಟ್ಟು** – ದೃಷ್ಟಿಬೊಟ್ಟು
**ರಕ್ತ** – ಕೆಂಪಾದ; ನೆತ್ತರು; ಅನುರಾಗವುಳ್ಳವನು
**ರಕ್ತಕಂಬಲ(ಳ)** – ಕೆಂಪು ಕಂಬಳಿ
**ರಕ್ತಚಂಚು** – ಕೆಂಬಣ್ಣದ ಕೊಕ್ಕು
**ರಕ್ತತುಡ** – ರಕ್ತಚಂಚು
**ರಕ್ತಪ್ರಸೂನ** – ಕೆಂಪು ಹೂ
**ರಕ್ತಸೇಕ** – ರಕ್ತ ಸುರಿಯುವುದು
**ರಕ್ತಾಂಬು** – ಕೆಂಪು ನೀರು; ನೆತ್ತರು
**ರಕ್ತಾಶೋಕ** – ಕೆಂಪು ಅಶೋಕವೃಕ್ಷ
**ರಕ್ಷಾಮಣಿ** – ಕಾಪಾಡುವ ವ್ಯಕ್ತಿ
**ರಕ್ಷಾಮರಿ** – ರಕ್ಷಾ+ಅಮರಿ, ರಕ್ಷಿಸುವ ದೇವತೆ
**ರಜ** – ಧೂಳು; ಹೂವಿನ ಪರಾಗ; ಕತ್ತಲೆ; ರಜೋ ಗುಣ
**ರಜಂಬೊರೆ** – ಧೂಲಿನಿಂದ ಕೂಡಿರು; ಪರಾಗವನ್ನು ಹೊಂದಿರು; ರಜೋಗುಣವನ್ನು ಉ<ಟುಮಾಡು
**ರಜಕ** – ಅಗಸ

**ರಜತ** – ಬೆಳ್ಳಿ; ಬೆಳ್ಳಗಿರುವ
**ರಜತಗಿರಿ** – ಬೆಳ್ಳಿಯ ಬೆಟ್ಟ
**ರಜನಿ** – ರಾತ್ರಿ; ಅರಿಸಿನ
**ರಜನೀಕರ** – ಚಂದ್ರ
**ರಜನೀರಜ** – ಅರಿಸಿನ ಪುಡಿ
**ರಜನೀವಲ್ಲಭ** – ಚಂದ್ರ
**ರಜಸ್ವರ** – ಪರಾಗ
**ರಜಸ್ವಲೆ** – ಮುಟ್ಟಾದ ಹೆಂಗಸು
**ರಜೋವಿಕೃತಿ** – ಧೂಳು ಏಳುವುದು; ರಜೋಗುಣ ಹೆಚ್ಚುವುದು; ಮುಟ್ಟಾಗುವುದು
**ರಜ್ಜು** – ಹಗ್ಗ; (ಜೈನ) ಒಂದು ಉದ್ದಳತೆ; ಎಂಟು ಹಸ್ತಗಳು
**ರಟತ್** – ಧ್ವನಿ ಮಾಡುವ
**ರಟನ** – ಧ್ವನಿ; ಅಬ್ಬರ
**ರಣ** – ಯುದ್ಧ
**ರಣಕರ್ಕಶ** – ಯುದ್ಧದಲ್ಲಿ ಗೆಲ್ಲಲು ಕಷ್ಟಕರನಾದವನು
**ರಣಗತ್ತಲೆ** – ಧೂಳು ಮುಂತಾದವುಗಳಿಂದ ಯುದ್ಧದಲ್ಲಿ ಆಗುವ ಕತ್ತಲೆ
**ರಣದೀಕ್ಷಿತ** – ಯುದ್ಧಮಾಡಲು ನಿರ್ಧರಿಸಿದವನು
**ರಣದೋಹಳ** – ಯುದ್ಧಾಕಾಂಕ್ಷೆ
**ರಣಪಟಹ** – ಯುದ್ಧಭೇರಿ
**ರಣಬಾಲಕ** – ಅನನುಭವಿ ಯೋಧ
**ರಣಮಂಡಲ** – ಯುದ್ಧರಂಗ; ಯುದ್ಧ ತರಬೇತಿ ಮೈದಾನ
**ರಣಮರಣ** – ಯುದ್ಧದಲ್ಲಿ ಪಡೆಯುವ ಸಾವು
**ರಣರಣಕ** – ಉದ್ವೇಗ
**ರಣರಭಸ** – ಯುದ್ಧಾವೇಶ
**ರಣರಸಿಕ** – ಯುದ್ಧದಲ್ಲಿ ಆಸಕ್ತನಾದವನು
**ರಣರಾಗ** – ಯುದ್ಧ ಮಾಡುವ ಆಸೆ
**ರಣರಾಮ** – ಯುದ್ಧಮಾಡುವುದರಲ್ಲಿ ಸಂತಸ ಪಡೆಯುವವನು
**ರಣಲಂಪಟ** – ಅತಿ ಯುದ್ಧಾಸಕ್ತ
**ರಣವಸುಧೆ** – ಯುದ್ಧಭೂಮಿ
**ರಣವ್ಯಸನಿ** – ರಣಲಂಪಟ
**ರಣವ್ರಣಿತ** – ಯುದ್ಧದ ಗಾಯಗಳು ತುಂಬಿದ
**ರಣಸ್ಥಾನ** – ಯುದ್ಧರಂಗ
**ರಣಾಂಗಣ** – ರಣಸ್ಥಾನ
**ರಣಾಗ್ರ** – ಮುಂಚೂಣಿ
**ರಣಾಜಿರ** – ರಣಸ್ಥಾನ
**ರಣಾನಕ** – ಯುದ್ಧಭೇರಿ
**ರಣಾನುರಾಗ** – ಯುದ್ಧದಲ್ಲಿ ಆಸಕ್ತಿ
**ರಣಾವನಿ** – ಯದ್ಧಭೂಮಿ
**ರಣಿತ** – ಸದ್ದು; ಸದ್ದುಮಾಡುವ
**ರಣೋರ್ವಿ** – ಯುದ್ಧಭೂಮಿ
**ರತ** – ಮಗ್ನ; ತತ್ಪರ
**ರತ(ತಿ)ಕೇಳಿ** – ಸಂಭೋಗ
**ರತ(ತಿ)ಕ್ರೀಡೆ** – ರತಕೇಳಿ
**ರತಖಿನ್ನ** – ಸಂಭೋಗದಿಂದಾಗಿ ಆಯಾಸಗೊಂಡ
**ರತದೀಪಿಕೆ** – ಸಂಭೋಗಾಲದಲ್ಲಿ ಹತ್ತಿಸಿಟ್ಟ ದೀಪ
**ರತಾಂತ** – ಸಂಭೋಗದ ಮುಗಿವು
**ರತಾರ್ತ** – ರತಿಕ್ರೀಡೆಗಾಗಿ ಹಂಬಲಿಸುವವನು
**ರತಿಕಾಂತ** – ರತಿಯ ಗಂಡ, ಮನ್ಮಥ
**ರತಿಗೇಹ** – ಸೂಳೆಯ ಮನೆ
**ರತಿರಮ** – ರತಿಕಾಂತ
**ರತಿರಾಗ** – ಕಾಮಾಸಕ್ತಿ
**ರತಿರಾಗಂಬೆಱು** – ಕಾಮಾಸಕ್ತಿಯನ್ನು ಹೊಂದು
**ರತಿಶ್ರಾಂತಿ** – ಸಂಭೋಗದಿಂದಾಗುವ ಆಯಾಸ
**ರತುನ** – (ರತ್ನ) ಬೆಲೆಬಾಳುವ ಹರಳು
**ರತೋತ್ಕಂಠೆ** – ಸಂಭೋಗಾತುರೆ
**ರತೋತ್ಸವ** – ರತ+ಉತ್ಸವ, ಸಂಭೋಗದ ಸಂಭ್ರಮ
**ರತ್ನಕಂ(ಗಂ)ಬಲ(ಳ)(ೞ)** – ಅಮೂಲ್ಯವಾದ ಕಂಬಳಿ
**ರತ್ನಕುಂಡಲ** – ರತ್ನಗಳಿಂದ ಮಾಡಿದ ಕಿವಿಯ ಆಭರಣ
**ರತ್ನತ್ರಯ** – (ಜೈನ) ಮೋಕ್ಷಸಾಧನಗಳಾದ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, **ಸಮ್ಯಕ್‌ಚಾರಿತ್ರಗಳು; ಪಂಪ ಪೊನ್ನ ರನ್ನ ಎಂಬ ಮೂವರು ಕವಿಗಳು–**
**ರತ್ನಪರೀಕ್ಷಕ** – ರತ್ನಗಳ ಮೌಲ್ಯನಿರ್ಧಾರಕ
**ರತ್ನಪರೀಕ್ಷೆ** – ರತ್ನಗಳ ಮೌಲ್ಯಮಾಪನ, ಚೌಷಷ್ಠಿಕಲೆಗಳಲ್ಲಿ ಒಂದು
**ರತ್ನಪ್ರಭೆ** – (ಜೈನ) ಒಂದು ನರಕ
**ರತ್ನಮುದ್ರಿಕೆ** – ರತ್ನಖಚಿತವಾದ ಉಂಗುರ
**ರತ್ನಂಗುಳೀಯ** – ರತ್ನಮುದ್ರಿಕೆ
**ರತ್ನಾಕರ** – ಸಮುದ್ರ
**ರತ್ನಾತಪ** – ರತ್ನ+ಆತಪ, ರತ್ನದ ಕಾಂತಿ
**ರತ್ನಾಭೋಗ** – ರತ್ನದ ಆಭರಣ
**ರತ್ನಾವಳ(ತಪ)** – (ಜೈನ) ಒಂದು ವ್ರತ
**ರತ್ನಿ** – ಒಂದು ಅಳತೆ
**ರಥ** – ತೇರು; ಚತುರಂಗಸೈನ್ಯದಲ್ಲಿ ಒಂದು
**ರಥಂತರ** – ವೇದದಲ್ಲಿನ ಶಿವಸ್ತವನ ಮಂತ್ರ
**ರಥಕಲ್ಪ** – ರಥಚಾಲನಾ ಕೌಶಲ; ರಥದ ಬಗೆಗಿನ ಶಾಸ್ತ್ರ;
**ರಥಚರಣ** – ತೇರಿನ ಚಕ್ರ; ಚಕ್ರಾಯುಧ
**ರಥಚರಣಪಾಣಿ** – ಚಕ್ರ ಹಿಡಿದವನು, ಕೃಷ್ಣ
**ರಥಚೋದಕ** – ಸಾರಥಿ
**ರಥದಂ** – ರಥದವನು
**ರಥವಾಜಿ** – ರಥಕ್ಕೆ ಕಟ್ಟುವ ಕುದುರೆ
**ರಥಹಯ** – ರಥವಾಜಿ
**ರಥಾಂಗ** – ಚಕ್ರವಾಕ; ಚಕ್ರಾಯುಧ; ಬಂಡಿಯ ಗಾಲಿ; ಕುಂಬಾರನ ತಿಗುರಿ
**ರಥಾಂಗಧರ** – ಚಕ್ರವನ್ನು ಧರಿಸಿದವನು, ವಿಷ್ಣು, ಕೃಷ್ಣ; (ಜೈನ) ವಾಸುದೇವ
**ರಥಾಂಗಪಾಣಿ** – ರಥಾಂಗಧರ

**ರಥಾಂಗಯುಗ** – ಚಕ್ರವಾಕ ದಂಪತಿ
**ರಥಾರೋಹಣ** – ರಥಕಲ್ಪ
**ರಥಾವರ್ತ** – (ಜೈನ) ವಿದ್ಯಾಧರರ ಜಿನಪೂಜೆ
**ರಥಿ(ಕ)** – ರಥವನ್ನೇರಿದವನು; ರಥದಲ್ಲಿದ್ದು ಯುದ್ಧಮಾಡುವವನು
**ರಥಿಕಾಧಿಪತಿ** – ರಥಸೈನ್ಯದ ನಾಯಕ
**ರಥಿನೀ** – ರಥಸಮೂಹ; ಸೈನ್ಯ
**ರಥ್ಯೆ** – ರಾಜಬೀದಿ
**ರದ(ನ)** – ಸೀಳುವಿಕೆ; ಹಲ್ಲು; ಆನೆಯ ದಂತ
**ರದನಿ** – ದಂತಗಳುಳ್ಳದು, ಆನೆ
**ರನ್ನವಚ್ಚ** – ರತ್ನಾಭರಣ
**ರನ್ನವಟ್ಟಿಗೆ** – (ರತ್ನಪಟ್ಟಿಕಾ) ರತ್ನದ ಡಾಬು
**ರನ್ನವಟ್ಟೆ** – ರನ್ನವಟ್ಟಿಗೆ
**ರನ್ನವಸರ** – ರತ್ನಗಳ ಅಂಗಡಿ
**ರಪ(ವ)ಣ** – ಐಶ್ವರ್ಯ; ಜೂಜಿನ ಒತ್ತೆಯ ಹಣ
**ರಮ(ಣ)** – ಪ್ರಿಯಕರ
**ರಮಣೀಯ** – ಸಂತಸವುಂಟುಮಾಡುವ
**ರಮಿ(ಯಿ)ಸು** – ಕ್ರೀಡಿಸು
**ರಯ** – ವೇಗ
**ರಯಪತಿ** – ಗಾಳಿಯ ಅಧಿದೇವತೆ, ವಾಯು
**ರಯ್ಯ** – (ರಮ್ಯ) ಮನೋಹರ
**ರಯ್ಯನೆ** – ರಭಸದಿಂದ
**ರಲ್ಲಕ** – ಕಂಬಳಿ
**ರವ** – ಶಬ್ದ
**ರವನ** – ಘೋಷಣೆ
**ರವಳ** – ವಾದ್ಯಘೋಷ; ವಾದ್ಯವಿಶೇಷ
**ರವಳಘೋಷಿಸು** – ವಾದ್ಯದ ಧ್ವನಿ ಮಡಿ ಯುದ್ಧಾರಂಭಕ್ಕೆ ಸೂಚಿಸು
**ರವಿಕಾಂತೋಪಲ** – ಸೂರ್ಯಕಾಂತಶಿಲೆ, ಬಿಸಿಲಿಗೆ ಕಿಡಿಸೂಸುವ ಶಿಲೆ
**ರವಿಮಂಡಲ** – ಸೂರ್ಯಬಿಂಬ
**ರವಿಸುತ** – ಕರ್ಣ
**ರವಿಸುತೆ** – ಯಮುನೆ
**ರಶನ** – ಡಾಬು
**ರಶ್ಮಿ** – ಕಾಂತಿ
**ರಶ್ಮಿಕಲಾಪ** – ಐವತ್ತನಾಲ್ಕು ಎಳೆಗಳ ಮುತ್ತಿನ ಹಾರ
**ರಸ** – ವಿಷ; ಪಾದರಸ; ರುಚಿ
**ರಸಋದ್ಧಿ** – (ಜೈನ) ತಪಸ್ಸಿನಿಮದ ಪಡೆಯುವ ಒಂದು ಬಗೆಯ ಸಿದ್ಧಿ
**ರಸಂಬೋಗು** – ಒಣಗಿಹೋಗು
**ರಸಗೀತ** – ಸಂತಸದಾಯಕವಾದ ಹಾಡು
**ರಸಗೇಯ** – ರಸಗೀತ
**ರಸಚಿತ್ರ** – ಸಸ್ಯಗಳ ರಸದಿಂದ ಬಣ್ಣ ಹಾಕಿದ ಚಿತ್ರ
**ರಸಜ್ಞ** – ರಸಿಕ
**ರಸಜ್ಞಾನಿ** – ಕೀಳುಲೋಹಗಳನ್ನು ಚಿನ್ನ ಮಾಡಬಲ್ಲವನು
**ರಸತ್ತಾರುಗ** – ಆನೆಯ ಮೇಲೆ ಕುಳಿತು ಯುದ್ಧಮಾಡುವವನು
**ರಸದಾಡಿಮ** – ರಸಭರಿತ ದಾಳಿಂಬೆಹಣ್ಣು
**ರಸದಾನ** – ವಿಷ ಪ್ರಯೋಗ
**ರಸನ(ನೆ)** – ಆಸ್ವಾದ; ನಾಲಗೆ
**ರಸನಾಂಚಲ** – ನಾಲಗೆಯ ತುದಿ
**ರಸನಾಗ್ರ** – ರಸನಾಂಚಲ
**ರಸನಾಲಂಪಟ** – ನಾಲಗೆಯ ಚಾಪಲ್ಯವಿರುವವನು
**ರಸನೇಂದ್ರ** – ಸರ್ಪರಾಜ
**ರಸನೇಂದ್ರಿಯ** – ರಸನ(ನೆ)
**ರಸಪಂಚಕ** – (ಜೈನ) ಸಿಹಿ, ಹುಳಿ, ಕಟು, ಕಷಾಯ, ತಿಕ್ತ ಎಂಬ ಐದು ರುಚಿಗಳು
**ರಸಪರಿತ್ಯಾಗ** – (ಜೈನ) ಬಾಹ್ಯತಪಗಳಲ್ಲಿ ಒಂದು; ರುಚಿಕರವಾದುದನ್ನು ಸೇವಿಸದಿರುವುದು
**ರಸಭಾವ** – ತೇವವಾಗಿರುವುದು; ಸಂತಸದಾಯಕ ಚಿತ್ತವೃತ್ತಿ
**ರಸಮಗ್ನ** – ಆನಂದದಲ್ಲಿ ತಲ್ಲೀನನಾದವನು
**ರಸಮಾರ್ಗ** – ನವರಸಗಳನ್ನು ನಿರೂಪಿಸುವ ಕ್ರಮ
**ರಸ ರಸಾಯನ** – ರುಚಿಕರವಾದ ಆಹಾರ
**ರಸವದ್ಗೇಯ** – ಸಂತಸದಾಯಕವಾದ ಸಂಗೀತ
**ರಸವಾದಕ** – ರಸಜ್ಞಾನಿ
**ರಸವಾದಿ** – ರಸಜ್ಞಾನಿ
**ರಸವೃತ್ತಿ** – ನವರಸಗಳಿಂದ ಕೂಡಿದುದು
**ರಸಹೀನ** – ಒಣಗಿದುದು
**ರಸಾ** – ಪಾತಾಳ
**ರಸಾತಲ(ಳ)** – ರಸಾ
**ರಸಾಯ** – ಸಿಹಿನೀರನ್ನುಳ್ಳ
**ರಸಾಯನ** – ರುಚಿಕರವಾದ, ಇಂಪಾದುದು
**ರಸಾರುಹ** – ಮರ
**ರಸಾಲ(ಳ)** – ರುಚಿಕರವಾದ; ಮಾವಿನ ಮರ
**ರಸಾಶ್ರಯ** – ನೀರಿನ ಆಶ್ರಯತಾಣ; ರಸಜ್ಞ
**ರಸಿಕತೆ** – ರಸಾನುಭವ ಹೊಂದಬಲ್ಲ ಸ್ವಭಾವ
**ರಸಿತ** – ಧ್ವನಿ
**ರಸೆ** – ಭೂಮಿ, ಪಾತಾಳ
**ರಹಘಟಕಾನ್ಯಾಯ** –ಒಂದು ಲೌಕಿಕನ್ಯಾಯ, ರಾಟೆ–ಗಡಿಗೆಗಳು ಒಂದನ್ನೊಂದು ಹಿಂಬಾಲಿಸುವ ಕ್ರಮ–
**ರಹಟ** – ನೀರೆತ್ತುವ ರಾಟೆ
**ರಹಘಟೀಯಂತ್ರ** – ರಹಟ
**ರಹೋಭ್ಯಾಖ್ಯಾನ** – (ಜೈನ) ಸತ್ಯಾಣುವ್ರತದ ಒಂದು ಅತಿಚಾರ, ಗಂಡಗೆಂಡಿರ ಗುಟ್ಟು ಬಯಲುಮಾಡುವುದು
**ರಾಕಾ** – ಪೂರ್ಣ
**ರಾಕೇಂದು** – ಪೂರ್ಣಚಂದ್ರ, ಹುಣ್ಣಿಮೆಯ ಚಂದ್ರ
**ರಾಗ** – ಕೆಂಪುಬಣ್ಣ; ಪ್ರೀತಿ
**ರಾಗಂಗೆಡು** – ಪ್ರೀತಿಯನ್ನು ಕಳೆದುಕೊ
**ರಾಗಂಬೊರೆ** – ಬಣ್ಣದಿಂದ ಕೂಡು

**ರಾಗರಸ** – ಪ್ರಣಯ
**ರಾಗಾಂಧತೆ** – ಮೋಹದಿಂದ ಕುರುಡಾಗುವುದು
**ರಾಗಾಧರೆ** – ಕೆಂಪಾದ ತುಟಿಯುಳ್ಳವಳು
**ರಾಗಾವಿಲ(ಳ)** – ಮೋಹಕ್ಕೊಳಗಾದವನು
**ರಾಗಿ** – ಅನುರಾಗವುಳ್ಳ ವ್ಯಕ್ತಿ
**ರಾಗಿಸು** – ಪ್ರೀತಿಸು
**ರಾಜಕ** – ರಾಜರ ಗುಂಪು
**ರಾಜಕಪೋತ** – ಶ್ರೇಷ್ಠ ಜಾತಿಯ ಪಾರಿವಾಳ
**ರಾಜಕರ** – ರಾಜನಿಗೆ ಕೊಡಬೇಕಾದ ತೆರಿಗೆ; ಚಂದ್ರಕಿರಣ
**ರಾಜಕೀರ(ಕ)** – ಅರಗಿಳಿ
**ರಾಜಕುಂಜರ** – ಉತ್ತಮವಾದ ಆನೆ
**ರಾಜಕುಮಾರ(ಕ)** – ರಾಜನ ಮಗ
**ರಾಜಕೇತನ** – ಅರಮನೆ
**ರಾಜಗೃ(ಗೇ)ಹ** – ರಾಜಕೇತನ
**ರಾಜಚಿಹ್ನ(ಹ್ನೆ)** – ಅರಸನ ಅಧಿಕಾರಲಾಂಛನ
**ರಾಜಜಂಬೂ** – ಶ್ರೇಷ್ಠವಾದ ನೇರಿಳೆ
**ರಾಜತ್** – ಪ್ರಕಾಶಿಸುವ
**ರಾಜತ** – ಬೆಳ್ಳಿಯಿಂದ ಮಾಡಿದ
**ರಾಜಧರ್ಮ** – ಅರಸನ ಕರ್ತವ್ಯ
**ರಾಜನ್ಯ(ಕ)** – ಕ್ಷತ್ರಿಯ; ರಾಜ; ರಾಜಸಮೂಹ
**ರಾಜನ್ವತಿ** – ಒಳ್ಳೆಯ ರಾಜನಿರುವ ನಾಡು
**ರಾಜಪೂಜ್ಯ** – ಚಂದ್ರನಿಂದ ಪೂಜೆಗೊಂಡವನು, ಗುರು
**ರಾಜಮಂಡಲ(ಳ)** – ಚಂದ್ರಮಂಡಲ; ರಾಜರ ಸಮೂಹ
**ರಾಜಮಹಿಷಿ** – ಪಟ್ಟದ ರಾಣಿ
**ರಾಜಮಾಷ** – ಅಲಸಂದೆ
**ರಾಜಯಕ್ಷ್ಮ** – ಕ್ಷಯರೋಗ
**ರಾಜರಾಜ** – ಸಮ್ರಾಟ; ಚಂದ್ರ
**ರಾಜಲೀಲೆ** – ಅರಸನ ವಿಲಾಸ
**ರಾಜವಂಶ** – ಅರಸು ಮನೆತನ; ಶ್ರೇಷ್ಠ ಬಿದಿರು
**ರಾಜವತಿ** – ನಾಮಮಾತ್ರ ರಾಜನಿರುವ ನಾಡು
**ರಾಜವೃತ್ತ** – ರಾಜನ ನಡವಳಿಕೆ
**ರಾಜವೃಷಭ** – ಶ್ರೇಷ್ಠ ರಾಜ
**ರಾಜಶುಕ** – ಅರಗಿಳಿ
**ರಾಜಶೂನ್ಯ** – ರಾಜನಿಲ್ಲದ ಸ್ಥಿತಿ; ಚಂದ್ರನಿಲ್ಲದ್ದು
**ರಾಜಸೂಯ** – ಚಕ್ರಚರ್ತಿ ಮಾಡುವ ಒಂದು ಯಾಗ
**ರಾಜಹಂಸ** – ಶ್ರೇಷ್ಠ ಹಂಸ; ರಾಜಶ್ರೇಷ್ಠ
**ರಾಜಹಂಸೆ(ಸಿ)** – ಶ್ರೇಷ್ಠವಾದ ಹೆಣ್ಣು ಹಂಸ
**ರಾಜಾಂಗಣ** – ಅರಮನೆಯ ಅಂಗಳ
**ರಾಜಾಂತರ** – ಒಬ್ಬ ರಾಜನಿಂದ ಇನ್ನೊಬ್ಬ ರಾಜನ ಬಳಿಗೆ ಹೋಗುವುದು
**ರಾಜಾಧಿರಾಜ** – ಚಕ್ರವರ್ತಿ
**ರಾಜಾಲಯ** – ಅರಮನೆ
**ರಾಜಾವರ್ತ** – ನೀಲ ರತ್ನ
**ರಾಜಿ** – ಗುಂಪು; ಸಾಲು
**ರಾಜಿಸು** – ಶೋಭಿಸು
**ರಾಜೀವ** – ತಾವರೆ
**ರಾಜ್ಞಿ** – ರಾಣಿ
**ರಾಜ್ಯ** – ಒಂದು ಆಡಳಿತಕ್ಕೆ ಒಳಪಟ್ಟ ಭೂಪ್ರದೇಶ; ರಾಜನ ಸಪ್ತಾಂಗಗಳಲ್ಲಿ ಒಂದು
**ರಾಜ್ಯಂಗೆಯ್** – ಆಳ್ವಿಕೆ ಮಾಡು
**ರಾಜ್ಯಕಾಲ** – ಆಳ್ವಿಕೆಯ ಅವಧಿ
**ರಾಜ್ಯಪಟ್ಟ** – ಅಧಿಕಾರಸೂಚಕ ಹಣೆಪಟ್ಟಿ
**ರಾಜ್ಯಭ(ಭಾ)ರ** – ಆಳ್ವಿಕೆ
**ರಾಜ್ಯಶ್ರೀಕ** – ರಾಜ್ಯವೆಂಬ ಸಂಪತ್ತು ಇರುವವನು
**ರಾಜ್ಯಾಂಗ** – ಆಳ್ವಿಕೆಯ ಏಳು ವಿಭಾಗಗಳು, ನೋಡಿ 'ಸಪ್ತಾಂಗ'
**ರಾಜ್ಯಾನುಷ್ಠಾನ** – ಆಳ್ವಿಕೆ
**ರಾಜ್ಯಾಭಿಷವಣ** – ರಾಜ್ಯಾಭಿಷೇಕ
**ರಾಟಣ** – ಉಾಟಣ, ರಾಟೆ, ನೀರೆತ್ತುವ ಯಂತ್ರ
**ರಾಣಿ(ಯ) ವಾಸ** – ಪೆಂಡವಾಸ, ಅಂತಃಪುರ
**ರಾತ್ರಿಂಚರ** – ರಾಕ್ಷಸ; ಪಿಶಾಚಿ
**ರಾತ್ರಿಂಚರಪತಿ** – ರಾಕ್ಷಸ ಮುಖಂಡ,ನೈಋತಿ
**ರಾತ್ರಿಭುಕ್ತಿವ್ರತಿಕ** – (ಜೈನ) ರಾತ್ರಿ ಊಟ ಮಾಡದ ವ್ರತ ತೊಟ್ಟವನು
**ರಾತ್ರ್ಯಂಧ** – ರಾತ್ರಿ ಕುರುಡ
**ರಾದ್ಧಾಂತ** – ಸಿದ್ಧಾಂತ
**ರಾಧೇಯ** – ಕರ್ಣ
**ರಾಭಸಿಕ** – ರಭಸದ ಸ್ವಭಾವದವನು
**ರಾಭಸಿಕವೃತ್ತಿ** – ಆತುರಪ್ರವೃತ್ತಿ
**ರಾಮಬಾಣ** – ರಾಮ ಬಿಡುವ ಬಾಣ; ಪ್ರಯೋಗಿಸಿದಾಗ ಕೆಲಸ ಮುಗಿಸಿ ಬತ್ತಳಿಕೆಗೆ ವಾಪಸಾಗುವ ಬಾಣ
**ರಾಮಾಂಗೆ** – ಆಕರ್ಷಕ ದೇಹದವಳು
**ರಾಮೆ** – ಹೆಂಗಸು; ಸುಂದರಿ
**ರಾಮೋತ್ಕಂಠೆ** – ರಾಮನ ಬಗ್ಗೆ ಉತ್ಕಂಠಿತಳಾದವಳು; ವರುಣನಲ್ಲಿ ಉತ್ಕಂಠಿತಳಾದವಳು
**ರಾಯ** – ರಾಜ
**ರಾಯಂಚೆ** – ರಾಜಹಂಸ
**ರಾಯಭಾರಿ** – ರಾಜನ ಪ್ರತಿನಿಧಿ
**ರಾಯಸ** – ರಾಜಾಜ್ಞೆ; ನಿರೂಪ
**ರಾವ** –ಶಬ್ದ
**ರಾವಣ** – ಗರ್ಜನೆ; ಗರ್ಜಿಸುವವನು; ಲಂಕೆಯ ಒಡೆಯ
**ರಾವಣಹಸ್ತ** – ಒಂದು ವಾದ್ಯವಿಶೇಷ; ತೆಂಗಿನ ಚಿಪ್ಪನ್ನುಳ್ಳ ಚಿಕ್ಕ ವೀಣೆ
**ರಾಸಭ** – ಕತ್ತೆ
**ರಾಸಭಿ** – ಹೆಣ್ಣು ಕತ್ತೆ
**ರಾಸಿಗೆಯ್** – ಗುಡ್ಡೆ ಮಾಡು
**ರಾಸಿಗೊಳ್** – ಗುಡ್ಡೆಯಾಗು
**ರಿಂಗಣ** – ನೃತ್ಯ

**ರಿಕ್ಕಟ** –ಮೌನ
**ರಿಗ್ಗವಣೆ** – ಮೃದಂಗ(ವಾದನ)
**ರಿಚ** – ಋಕ್ಕು; ಮಂತ್ರ
**ರಿಚವೇಳ್** – ಮಂತ್ರ ಹೇಳು
**ರಿಪು** – ಶತ್ರು
**ರಿಪುಬಲ(ಳ)** – ಶತ್ರು ಸೈನ್ಯ
**ರುಂಜೆ** – ಒಂದು ರಣವಾದ್ಯ
**ರುಂದ್ರ** – ವಿಸ್ತಾರವಾದ
**ರುಕ್** – (ರುಚ್) ಕಾಂತಿ
**ರುಕ್ಚಕ್ರ** – ಕಿರಣಸಮೂಹ
**ರುಕ್ಮ** – ಚಿನ್ನ
**ರುಕ್ಷ** – ಕರಡಿ; ನಕ್ಷತ್ರ
**ರುಚಿ** – ಕಾಂತಿ; ಸ್ವಾದ
**ರುಚಿಗೆಡು** – ಕಾಂತಿಗುಂದು
**ರುಚಿರ** – ಹೊಳೆಯುವ; ಸವಿಯಾದ
**ರುಚಿವಡೆ** – ಸವಿಯಾಗು
**ರುಟ್** – ರೋಗ
**ರುತ(ತಿ)** – ಶಬ್ದ
**ರುದಿತ** – ರೋದನ
**ರುದ್ರಾಟ್ಟಹಾಸ** – ರುದ್ರನ ನಗು
**ರುದ್ರಾಣಿ** – ಪಾರ್ವತಿ
**ರುದ್ರಾವತಾರ** – ರುದ್ರನ ಅಂಶಸಂಭೂತ
**ರುಧಿರ** – ಕೆಂಪು ಬಣ್ಣ; ರಕ್ತ
**ರುರು** – ಮಚ್ಚೆಗಳಿರುವ ಜಿಂಕೆ; ಒಬ್ಬ ಋಷಿಯ ಹೆಸರು
**ರುಸಿವಳ್ಳಿ** – ಋಷಿಗಳು ವಾಸಿಸುವ ಹಳ್ಳಿ
**ರೂಕ್ಷ** – ಕ್ರೂರ
**ರೂಕ್ಷಾನಿಲ** – ಬಿರುಗಾಳಿ
**ರೂಢಿವಡೆ** – ಪ್ರಸಿದ್ಧನಾಗು
**ರೂಢಿವೆಱು** – ಪ್ರಸಿದ್ಧಿಯನ್ನು ಪಡೆ
**ರೂಪಕ** – ಆಕಾರ; ಹೋಲಿಕೆ; ಒಂದು ಅಲಂಕಾರ
**ರೂಪಧಾರಿ** – ರೂಪವನ್ನು ಧರಿಸಿದವನು
**ರೂಪನಿದಾನ** – ಚೆಲುವಿನ ನಿಧಿ
**ರೂಪಪರಾವರ್ತನ(ವಿದ್ಯೆ)** – ರೂಪ ಬದಲಾಯಿಸುವಿಕೆ, ಹಾಗೆ ಮಾಡುವ ವಿದ್ಯೆ
**ರೂಪಪ್ರವೀಚಾರ** – (ಜೈನ) ದೇವತಾಸ್ತ್ರೀಯರನ್ನು ನೋಡಿದ ಮಾತ್ರಕ್ಕೆ ಇಂದ್ರಿಯಸುಖವನ್ನು ಪಡೆಯುವ ದೇವತಾವರ್ಗ
**ರೂಪಮದ** – ತನ್ನ ಚೆಲುವಿನ ಬಗ್ಗೆ ಅಹಂಕಾರ; ಅಷ್ಟಮದಗಳಲ್ಲಿ ಒಂದು
**ರೂಪವಿದ್ಯಾಧರ** – ಚೆಲುವಿನಲ್ಲಿ ವಿದ್ಯಾಧರನಂತಿರುವವನು
**ರೂಪಸ್ತವ** – ಚೆಲುವಿನ ಹೊಗಳಿಕೆ
**ರೂಪಾಂತರ** – ಆಕಾರ ಬದಲಾವಣೆ
**ರೂಪಾನುಪಾತ** – (ಜೈನ) ದೇಶವ್ರತಾತಿಚಾರಗಳಲ್ಲಿ ಒಂದು, ತನ್ನ ರೂಪವನ್ನು ಬೇರೆಯವರಿಗೆ ತೋರಿಸುವುದು
**ರೂಪಾ(ವಾ)ರ** – (ರೂಪಾಕಾರ) ಶಿಲ್ಪಿ
**ರೂಪಿಡು** – ಕೋಪವನ್ನು ತೋರಿಸು
**ರೂಪುಗರೆ** – ರೂಪನ್ನು ಮರೆಮಾಚು; ಬೇರೆ ವೇಷ ಹಾಕಿಕೊ
**ರೂಪುಗೆಡು** – ಮರೆಯಾಗು
**ರೂಪುಗೊಳ್** – ಆಕಾರವನ್ನು ತಾಳು
**ರೂಪುದಳೆ** – ರೂಪುಗೊಳ್
**ರೂಪ್ಯ** – ಬೆಳ್ಳಿ
**ರೂವು(ಪು)** – ಆಕಾರ
**ರೇಱಕೆ** – ಗೆರೆ
**ರೇಚಕ** – ಉಸಿರು ಬಿಡುವ ಒಂದು ವಿಧಾನ; ನೃತ್ಯದಲ್ಲಿ ಕೈಚಾಚುವುದು
**ರೇಣು** – ಧೂಳು
**ರೇಣುಕಾನಂದನ** – ಪರಶುರಾಮ
**ರೇವತಿ** – ಬಲರಾಮನ ಹೆಂಡತಿ; ಒಂದು ನಕ್ಷತ್ರ
**ರೇಶ** – ಕುಬೇರ
**ರೈ** – ಸಿರಿ; ಚಿನ್ನ
**ರೈವೃಷ್ಟಿ** – ಕನಕವೃಷ್ಟಿ, ಚಿನ್ನದ ಮಳೆ
**ರೈಸ್ತಂಭ** – ಚಿನ್ನದ ಕಂಬ
**ರೋಚನ** – ಗೋರೋಚನ
**ರೋಚಿ** – ಕಾಂತಿ; ಕಿರಣ
**ರೋಚಿಷ್ಣು** – ಕಾಂತಿ
**ರೋದನ** – ಗೋಳಾಟ
**ರೋದಸ್** – ಭೂಮಿ–ಆಕಾಶಗಳು–
**ರೋದೋಂಗಣ** – ಆಕಾಶಪ್ರದೇಶ
**ರೋದೋಂತ** – ಭೂಮ್ಯಾಕಾಶಗಳ ನಡುವೆ
**ರೋದೋವಾತ** – ಆಕಾಶದಲ್ಲಿ ಬೀಸುವ ಗಾಳಿ
**ರೋದೋ ವಿವರ** – ಆಕಾಶದ ಬಿಲ; ಭೂಮಿ ಆಕಾಶಗಳ ನಡುವಣ ಪ್ರದೇಶ
**ರೋಧ** – ದಂಡೆ, ತೀರ
**ರೋಧಸ್ವಿನಿ** – ನದಿ, ಹೊಳೆ
**ರೋಪ** – ಬಾಣ; ರಂಧ್ರ
**ರೋಪಿತ** – ಲೇಪಿಸಿಕೊಂಡ
**ರೋಮಂಥ** – ಮೆಲುಕು ಹಾಕುವುದು
**ರೋಮಹರ್ಷ** – ಸಂತಸದಿಂದ ಮೈಕೂದಲು ನಿಮಿರುವುದು
**ರೋಮಾಂಚ(ತೆ)** – ಪುಳಕ
**ರೋಮೋದ್ಗಮ** – ರೋಮಾಂಚ(ತೆ)
**ರೋಲಂಬ(ಬಿ)** – ತುಂಬಿ
**ರೋಷಿ** – ಕೋಪಗೊಂಡ(ವನು)
**ರೋಹಿಣಿ** – ಕೆಂಪು ಬಣ್ಣದ ಹಸು; ಒಂದು ನಕ್ಷತ್ರ
**ರೋಹಿತ** – ರಕ್ತ; ಕೆಂಪಾದ
**ರೌದ್ರ(ಧ್ಯಾನ)** – (ಜೈನ) ಕೆಟ್ಟುದರಲ್ಲಿ ಕಾಣುವ ಸಂತೋಷ; ಹಿಂಸಾನಂದ, ಮೃಷಾನಂದ, ಸ್ತೇಯಾನಂದ, ಪರಿಗ್ರಹಾನಂದ ಎಂಬ ನಾಲ್ಕು ಬಗೆ
**ರೌದ್ರಾವಹ** – ಭಯವನ್ನುಂಟುಮಾಡುವ

**ರೌದ್ರಾಹವ** – ಭಯಂಕರ ಯುದ್ಧ
**ರೌಪ್ಯ** – ಬೆಳ್ಳಿ
**ರೌಪ್ಯಾದ್ರಿ** – ಬೆಳ್ಳಿಯ ಬೆಟ್ಟ
**ರೌಹಿಣೇಯ** – ಬಲರಾಮ

## ಲ

**ಲಂಗಿಗ** – ದೊಂಬರವನು
**ಲಂಘನ** – ನೆಗೆತ; ಉಪವಾಸ
**ಲಂಘನೀಯ** – ತಿರಸ್ಕಾರಾರ್ಹ
**ಲಂಘಿಸು** – ಹಾರು
**ಲಂಚಂಗುಳ** – ಲಂಚಕ್ಕೆ ಆಸೆಪಡುವವನು
**ಲಂಚಂಗೊಳ್** – ಲಂಚ ತೆಗದುಕೊ
**ಲಂಚಗಾಱ** – ಲಂಚಗುಳಿ
**ಲಂಚವಣಿಗ** – ಲಂಚಗುಳಿ
**ಲಂಜಿಕೆ** ಸೂಳೆ–
**ಲಂಡ** – ಲದ್ದಿ
**ಲ(ರ)ಂದಣಿಗ** – ಅಡುಗೆಯವನು, ಬಾಣಸಿಗ
**ಲಂಪಟ(ಳ)** – ಆಸಕ್ತ
**ಲಂಪಟತೆ** – ಕಾಮುಕತನ
**ಲಂಪಳಕೆ** – ಲಂಪಟತೆ
**ಲಂಬ** – ಜೋಲುಬಿದ್ದಿರುವ
**ಲಂಬಣ(ಳ)** – ಹಾರ; ಕುಚ್ಚು
**ಲಂಬಣ(ಳ)ಗೆ** – ಲಂಬಣ
**ಲಂಬೂಷ** – ಏಳು ಎಳೆಗಳ ಹಾರ
**ಲಂಬೋದರ** – ಡೊಳ್ಳುಹೊಟ್ಟೆಯವನು
**ಲಂಭ** – ಸಿದ್ಧಿ
**ಲಂಭೂಷ** – ಒಂದು ಆಭರಣ
**ಲಕುಚ** – ಕಂಚಿ ಗಿಡ
**ಲಕುಟ** – ಕೋಲು
**ಲಕ್ಕ(ಕ್ಕೆ)** – ಲಕ್ಷ ಎಂಬ ಸಂಖ್ಯೆ
**ಲಕ್ಕಂಬಡೆ** – ನೂರು ಸಾವಿರ (ಒಂದು ಲಕ್ಷ) ಬೆಲೆಬಾಳು
**ಲಕ್ಕಚಣ** – ಒಂದು ಆಯುಧ
**ಲಕ್ಕಣ** – ಲಕ್ಷ್ಮಣ; ದುರ್ಯೋಧನನ ಮಗನ ಹೆಸರು
**ಲಕ್ಕೆ** – ತಡೆ
**ಲಕ್ಷ** – ನೂರು ಸಾವಿರ; ಗುರಿ
**ಲಕ್ಷಣ** – ಗುರುತು; ಸೂತ್ರ; ದುರ್ಯೋಧನನ ಮಗ; (ಜೈನ) ಪರಿವ್ರಾಜಕನ ಗುರುತು
**ಲಕ್ಷಿತ** – ಲಕ್ಷಣಸಹಿತವಾದ
**ಲಕ್ಷಿಸು** – ಗಮನಿಸು; ಅನ್ವಯಿಸು
**ಲಕ್ಷ್ಮ** – ಗುರುತು; ಚಂದ್ರನ ಕಲೆ
**ಲಕ್ಷ್ಮೀನೀಡ** – ಸಂಪತ್ತಿನ ಆಗರ
**ಲಕ್ಷ್ಮೀಸುತ** – ಮನ್ಮಥ
**ಲಕ್ಷ್ಯ** – ಗುರಿ; ನಿದರ್ಶನ; ಪಾತ, ಲಕ್ಷ್ಯ, ಶೀಘ್ರ, ಘಾತ, ಬಹುವೇಗ ಎಂಬ ಐದು ಬಗೆಯ ಬಾಣಪ್ರಯೋಗಗಳಲ್ಲಿ ಒಂದು
**ಲಕ್ಷ್ಯಸಿದ್ಧಿ** – ಗುರಿ ತಲುಪುವುದು
**ಲಗತ** – ನೃತ್ಯ
**ಲಗುಡತಾಡನ** – ಕೋಲಿನಿಂದ ಕೊಡುವ ಪೆಟ್ಟು
**ಲಗ್ಗಿಕ** – ಜ್ಯೋತಿಷಿ
**ಲಗ್ಗೆಗೆಯ್** – ದಾಳಿ ಮಾಡು
**ಲಗ್ಗೆವಱೆ** – ದಾಳಿಯ ಕಾಲದಲ್ಲಿ ಹೊಡೆಯುವ ತಮಟೆ
**ಲಗ್ನ** – ಕೂಡಿದ; ಚುಚ್ಚಿಕೊಂಡ
**ಲಗ್ನಾಹ** – ಕಾರ್ಯ ನಡೆಸಲು ನಿಗದಿಯಾದ ದಿನ
**ಲಘುವಾಗು** – ಕೀಳಾಗು
**ಲಘುಕರಿ** – (ಜೈನ) ಒಂದು ವಿದ್ಯೆ, ಹಗುರಗೊಳ್ಳುವುದು
**ಲಚ್ಚಣ** – (ಲಕ್ಷಣ) ಗುರುತು
**ಲಚ್ಚಿಸು** – ಗುರುತು ಮಾಡು
**ಲಜ್ಜಿಸು** – ಸಿಗ್ಗುಗೊಳ್ಳು, ನಾಚಿಕೊ
**ಲಜ್ಜೆಗೆಡು** – ನಾಚಿಕೆಗೆಡು
**ಲಟಹ** – (ರಟಭ) ಬೆಡಗು
**ಲಟ್ಟೆ** – ಎಳೆಯ ಬಿದಿರು
**ಲತಾಂತ** – ಹೂ
**ಲತಾಗೃಹ** – ಬಳ್ಳಿಮಾಡ
**ಲತಾಲೀಢ** – ಲತಾಗೃಹ
**ಲತಿಕಾ(ಕೆ)** – ಬಳ್ಳಿ
**ಲತಿಕಾಗೃಹ** – ಲತಾಗೃಹ
**ಲತೆವನೆ** – ಲತಾಗೃಹ
**ಲಪನ** – ಮುಖ
**ಲಬ್ಧ** – ಸಿಕ್ಕಿದ; ಪ್ರಾಪ್ತಿ
**ಲಬ್ಧಿ** – (ಜೈನ) ಮೋಕ್ಷಪೂರ್ವಜ್ಞಾನ
**ಲಬ್ಧಿಗ್ರಹ** – ಸಮ್ಯಕ್ತ್ವ ಪಡೆಯುವುದು
**ಲಬ್ಧಿತ್ರಯ** – (ಜೈನ) ಕಾಯ, ಕರಣ, ಉಪಶಮ ಎಂಬ ಮೂರು ಲಬ್ಧಿಗಳು
**ಲಬ್ಧಿಪಂಚಕ** – (ಜೈನ) ಕಾಲ, ಕರಣ, ಉಪಶಮ, ಕ್ಷಯೋಪಶಮ, ಪ್ರಾಯೋಗ್ಯತಾ ಎಂಬ ಐದು ಲಬ್ಧಿಗಳು
**ಲಬ್ಧಿಬಧಿರಸಮ** – (ಜೈನ) ಕಿವುಡನ ಹಾಗೆ ಬೇರೇನನ್ನೂ ಕೇಳಿಕೊಳ್ಳದೆ ಜಿನತತ್ವವನ್ನು ಕೇಳಿಸಿಕೊಳ್ಳುವವನು
**ಲಬ್ಧಿಬುದ್ಧ** – (ಜೈನ) ಸಮ್ಯಕ್‌ಜ್ಞಾನಿ
**ಲಬ್ಧೋಪದೇಶ** – ಉಪದೇಶ ಪಡೆದವನು
**ಲಯ** – ನಾಶ; ತಾಳಗತಿ
**ಲಯಕಾಲ** – ವಿನಾಶಕಾಲ; ಪ್ರಳಯ
**ಲಯಕ್ರೀಡೆ** – ಪ್ರಳಯ ಕಾಲದ ವಿನೋದ
**ಲಯತ್ರಯ** – ದ್ರುತ, ಮಧ್ಯಮ, ವಿಲಂಬಿತ ಎಂಬ ಮುರು ಲಯಗಳು
**ಲಯ ತಾಂಡವ** – ಪ್ರಳಯ ಕಾಲದ ಕುಣಿತ
**ಲಯಸಮಯ** – ಲಯಕಾಲ
**ಲಯಾಂತಕ** – ಪ್ರಳಯಕಾಲದಂತೆ ವಿನಾಶಕಾರಕವಾದ; ಪ್ರಳಯಕಾಲದ ಯಮ

**ಲಯಾಗ್ನಿ** – ಪ್ರಳಯಕಾಲದ ಬೆಂಕಿ
**ಲಲನಾ(ನೆ)** – ಹೆಂಗಸು
**ಲಲಾಟತ್ರಿಪತಾಕೆ** – ಹಣೆಯ ಮೂರು ಗೆರೆಗಳು
**ಲಲಾಟ(ಪಟ್ಟ)** – ಹಣೆ
**ಲಲಾಟನೇತ್ರ** – ಹಣೆಯ ಕಣ್ಣು; ಶಿವ
**ಲಲಾಟುಕೆ** – ಹಣೆಯ ಬೊಟ್ಟು, ತಿಲಕ
**ಲಲಾಮ** – ತಿಲಕ; ಶ್ರೇಷ್ಠ
**ಲಲಾಮೆ** – ತಿಲಕದಂತೆ ಶ್ರೇಷ್ಠಳಾದವಳು
**ಲಲಿತ** – ಸುಂದರವಾದ; ಕೋಮಲವಾದ
**ಲಲಿತಾಂಗ** – ಸುಂದರ
**ಲಲಿತಾಕಾರ** – ಸುಂದರ ದೇಹ
**ಲಲ್ಲಯಿಸು** – ರಮಿಸು
**ಲಲ್ಲೆ** – ಪ್ರೇಮ, ಸರಸ
**ಲಲ್ಲೆಗೆಯ್** – ಲಲ್ಲಯಿಸು
**ಲಲ್ಲೈಸು** – ಮೆಚ್ಚಿಕೆಯ ಮಾತಾಡು
**ಲವ** – ಸ್ವಲ್ಪ; ತುಂತುರು
**ಲವಣೋದಧಿ** – ಉಪ್ಪುನೀರಿನ ಸಮುದ್ರ
**ಲವಲಿ(ಳಿ)** – ಅರನೆಲ್ಲಿ ಮರ
**ಲವಲಿಕೆ** – ಲವಲವಿಕೆ
**ಲವೋದ್ಗಮ** – ತುಂತುರುಹನಿ
**ಲಸತ್** – ಹೊಳೆಯುವ
**ಲಸಿತ** – ಚಲತ್ಕಾರ
**ಲಹರಿ(ಕೆ)** – ಅಲೆ
**ಲಳಿ** – ಕೌಶಲ
**ಲಾಂಗಲ** – ನೇಗಿಲು
**ಲಾಂಗಲಹಸ್ತ** – ಬಲರಾಮ
**ಲಾಂಗಲಿ** – ಲಾಂಗಲಹಸ್ತ
**ಲಾಂಗೂಲ** – ಬಾಲ
**ಲಾಂಚನ** – ಚಿಹ್ನೆ; ಚಂದ್ರನಲ್ಲಿರುವ ಕಪ್ಪು ಕಲೆ
**ಲಾಂತವ** – (ಜೈನ) ಒಂದು ಕಲ್ಪ
**ಲಾಕುಳ** – ಯೋಗದಂಡ
**ಲಾಕ್ಷಾ** – ಅರಗು
**ಲಾಕ್ಷಾಗೃಹ** – ಅರಗಿನ ಮನೆ
**ಲಾಕ್ಷಾದ್ರವ** – ಅರಗಿನ ರಸ
**ಲಾಕ್ಷಾಮುದ್ರೆ** – ಅರಗಿನ ಮೊಹರು
**ಲಾಕ್ಷಾರಸ** – ಲಾಕ್ಷಾದ್ರವ
**ಲಾಘವ** – ಕ್ಷುಲ್ಲಕ; ಹಗುರವಾದ
**ಲಾಜ(ಜೆ)** – ಬತ್ತದ ಅರಳು
**ಲಾಜಾಂಜಲಿ(ಳಿ)** – ಅರಳು ತುಂಬಿದ ಬೊಗಸೆ
**ಲಾಭಂಬೆಱು** – ಲಾಭವನ್ನು ಪಡೆ
**ಲಾಲಂಗಿ** – ಆಲಾಪನೆಯ ಒಂದು ವಿಧ
**ಲಾಲಸ(ಸೆ)** – ಬಯಕೆ
**ಲಾಲಾಂಬು** – ಜೊಲ್ಲಿನ ರಸ
**ಲಾಲಾಜಲ(ಳ)** – ಲಾಲಾಂಬು
**ಲಾಲೆ(ಳೆ)** – ಲಾಲಾಂಬು
**ಲಾವ(ವಿ)ಗೆ** – ಒಂದು ಹಕ್ಕಿ; ಪತಂಜಲ
**ಲಾವುಕ** – ವಿಟಪುರುಷ; ಚಾಡಿಕೋರ
**ಲಾವಣಿಗೆ** – ಉಪ್ಪಿನಕಾಯಿ
**ಲಾವಣ್ಯ** – ಉಪ್ಪಾಗಿರುವುದು; ಚೆಲುವು
**ಲಾವ(ವು)ಕ** – ಲಾವಗೆ
**ಲಾಸಕಿ** – ನರ್ತಕಿ
**ಲಾಸಿಕೆ** – ಲಾಸಕಿ
**ಲಾಳವಿಂಡಿಗೆ** – ಅಗುಳಿ
**ಲಾಳ(ಳಾ)** – (ಲಾಲಾ) ಜೊಲ್ಲು
**ಲಿಂಗಜ** – ಇಂದ್ರಿಯಜನ್ಯಜ್ಞಾನ
**ಲಿಕುಚ** – ಗಜನಿಂಬೆ
**ಲಿಪಿವಿಧಾನ** – ಬರೆಯುವ ಕ್ರಮ
**ಲಿಪಿಸಂಖ್ಯಾನಸಂಗ್ರಹ** – (ಜೈನ) ಒಂದು ಗರ್ಭಾನ್ವಕ್ರಿಯೆ
**ಲೀಲಾಜಲಾಶಯ** – ಆಟಕ್ಕಾಗಿ ನಿರ್ಮಿಸಿದ ಕೊಳ
**ಲೀಲೆ(ಳೆ)** – ಸಂತೋಷ; ಆಟ; ವಿಲಾಸ
**ಲುಂಗ** – ಮಾದಲ
**ಲುಂಟಾಕ** – (ಲುಂಠಾಕ) ಕಳ್ಳ
**ಲುಂಠನ** – ಅಪಹರಣ
**ಲುಂಠಾ(ಡಾ)ಕ** – ಕಳ್ಳ
**ಲುಂದು** – ಮಲಗು; ಸಂಭೋಗಿಸು; ಸಂಭೋಗ
**ಲುಂದುವೋವರಿ(ಗೆ)** – ಮಲಗುವ ಮನೆ
**ಲುಬ್ಧ** – ಲೋಭಗೊಂಡ(ವನು)
**ಲುಬ್ಧಕ** – ಲೋಭಿ; ಬೇಡ
**ಲುಲಾಯ** – ಕೋಣ, ಮಹಿಷ
**ಲುಲಾಯಚ್ಛವಿಕ** – ಕೋಣದ ಬಣ್ಣವುಳ್ಳ; ಕಪ್ಪು
**ಲುಲಿ(ಳಿ)ತ** – ಚಲಿಸುತ್ತಿರುವ; ಸುಂದರವಾದ
**ಲುಲಿಳ)ತಕುಂತಲೆ** – ಅಲುಗುವ ಮುಂಗುರುಳವಳು
**ಲುಲಿ(ಳಿ)ತಾಳಕಿ** – ಲುಲಿತಕುಂತಲೆ
**ಲೂನ** – ಮುರಿಯಲ್ಪಟ್ಟ
**ಲೆಂಕ** – ನಿಷ್ಠಾವಂತ ಸೇವಕ; ಭೃತ್ಯ
**ಲೆಂಕದಂಡ** – ಲೆಂಕರ ಮುಖ್ಯಸ್ಥ
**ಲೆಂಕಿ** – ಸೇವಕಿ
**ಲೆಕ್ಕ** – ಎಣಿಕೆ; ಪರಿಗಣನೆ
**ಲೆಕ್ಕಂಗೊಳ್** – ಎಣಿಕೆಮಾಡು
**ಲೆಕ್ಕಣಿ(ಕೆ)** – (ಲೇಖನೀ, ಲೇಖನಿಕಾ) ಬರೆಯುವ ಸಾಧನ
**ಲೆಕ್ಕವಣಿಗೆ** – ಲೆಕ್ಕದ ವಿವರ
**ಲೆಕ್ಕವಲಗೆ** – ಲೆಕ್ಕ ಬರೆಯುವ ಹಲಗೆ
**ಲೆಕ್ಕಿಗ** – ಕರಣಿಕ
**ಲೆಕ್ಕಿಗರ ಪಿರಿಯ** – ಕರಣಿಕರ ಮುಖ್ಯಸ್ಥ
**ಲೆಕ್ಕಿಗರರಸ** – ಲೆಕ್ಕಿಗರ ಪಿರಿಯ
**ಲೆಪ್ಪ** – (ಲೇಪ್ಯ) ಎರಕದ ಬೊಂಬೆ
**ಲೇಖವಾರ್ತೆ** – ಪತ್ರದಲ್ಲಿ ಬರೆದಿರುವ ವಿಷಯ
**ಲೇಖವಾಹ(ಕ)(ನ)** – ಓಲೆ ಒಯ್ಯುವವನು
**ಲೇಖವಾಹಕವೃತ್ತಿ** – ದೌತ್ಯ, ಸಂದೇಶವಾಹನ
**ಲೇಖೆ** – ಗೆರೆ
**ಲೇಲಿಹಾನ** – ಹಾವು

**ಲೇಶ್ಯಾ(ವಿ)ಶುದ್ಧಿ** – (ಜೈನ) ಕರ್ಮಸಂಬಂಧೀ ಬಣ್ಣಗಳ ನಾಶ
**ಲೇಶ್ಯೆ** – (ಜೈನ) ಕರ್ಮಸಂಬಂಧವಾದ ಬಣ್ಣಗಳು ಆರು ಕೃಷ್ಣ, ನೀಲ, ಕಪೋತ, ಪೀತ, ಪದ್ಮ, ಶುಕ್ಲ; ಇವು ಕ್ರಮವಾಗಿ ಆಲಸ್ಯ, ಬುದ್ಧಿಹೀನತೆ, ಅವಿವೇಕ, ವಿಷಯಲಂಪಟತೆ, ಅಭಿಮಾನ, ಕಾಪಟ್ಯ, ಅತಿನಿದ್ರೆ ಇವುಗಳಿಗೆ ಕಾರಣ
**ಲೇಸಲ್ಲರ್** – ಒಳ್ಳೆಯವರಲ್ಲದವರು
**ಲೇಸು** – ಹಿತಕರವಾದುದು; ಶ್ರೇಯಸ್ಕರ
**ಲೇಸುಗೆಯ್** – ಒಳ್ಳೆಯದನ್ನು ಮಾಡು
**ಲೋಕಜ್ಞ** – ಲೋಕದ ರೀತಿನೀತಿಗಳನ್ನು ಬಲ್ಲವನು
**ಲೋಕನೇತ್ರ**– ಸೂರ್ಯ, ಚಂದ್ರ
**ಲೋಕಪೂರಣ(ಕ್ರಿಯೆ)** – (ಜೈನ) ಕೇವಲಿಗಳ ಆತ್ಮವು ಭೂಮಂಡಲದ ವಾಯುತ್ರಯದೊಡನೆ ಬೆರೆಯುವುದು
**ಲೋಕಪ್ರತೀತ** – ಜಗತ್ಪ್ರಸಿದ್ಧ
**ಲೋಕಲುಂಟಾಕ** – ಲೋಕಕ್ಕೆ ಪೀಡೆಯಾದವನು
**ಲೋಕಾಂತರಿತ** – ಬೇರೆ ಲೋಕಕ್ಕೆ ಹೋದವನು, ಸತ್ತವನು
**ಲೋಕಾಂತಿಕ(ದೇವ)** – (ಜೈನ) ಸಾರಸ್ವತ, ಆದಿತ್ಯ, ವಹ್ನಿ, ಅರುಣ, ಗರ್ದತೋಯ. ತುಷಿತ, ಅವ್ಯಾಬಾಧ, ಅರಿಷ್ಟ ಎಂಬ ಎಂಟು ಮಂದಿ
**ಲೋಕಾಕಾರಕಥನ** – (ಜೈನ) ಅಧೋ, ಮಧ್ಯ, ಊರ್ಧ್ವಲೊಕಗಳ ವರ್ಣನೆ
**ಲೋಕಾಕಾಶ** – (ಜೈನ) 'ಷಡ್ದ್ರವ್ಯ'ಗಳನ್ನು ಹೊಂದಿರುವ ಆಕಾಶಪ್ರದೇಶ
**ಲೊಕಾಖ್ಯಾನ** – (ಜೈನ) ಲೋಕದ ಆಕಾರ ವರ್ಣನೆ
**ಲೋಕಾಯತ(ವಾದಿ)** – ನಾಸ್ತಿಕ
**ಲೋಕಾಯತಿಕ** – ನಾಸ್ತಿಕತೆ
**ಲೋಕೋತ್ತರ** – ಅಸಾಧಾರಣ(ವಾದ)
**ಲೋಗ** – ಸಾಮಾನ್ಯ ವ್ಯಕ್ತಿ
**ಲೋಗಾಣಿ** – ಲೋಕಾಕಾರವನ್ನು ತಿಳಿಸುವ ಗ್ರಂಥ
**ಲೋಚನ** – ಹೊಳೆಯುವ; ಕಣ್ಣು
**ಲೋಚನಾಂಶು** – ಕಣ್ಣಿನ ಹೊಳಪು
**ಲೋಚು** – (ಜೈನ) ಮುನಿಗಳು ತಮ್ಮ ತಲೆಗೂದಲನ್ನು ತಾವೇ ಕಿತ್ತುಕೊಳ್ಳುವುದು
**ಲೋಚುಗೆಯ್** – (ಜೈ) ಜಿನದೀಕ್ಷೆ ಪಡೆದವರ ಕೂದಲು ಕೀಳು
**ಲೋಧ್ರ** – ಸಾಂಬ್ರಾಣಿ ಗಿಡ
**ಲೋಭಕ** – ಅತಿ ಆಸೆಯಿಂದ ಕೂಡಿದ; ಜಿಪುಣತನದಿಂದ ಕುಡಿದ
**ಲೋಲ** – ಆಸಕ್ತಿಯುಳ್ಳವನು; ಲಂಪಟ; ಅಲ್ಲಾಡುತ್ತಿರುವ
**ಲೋಲಂಬಕದಂಬ** – ದುಂಬಿಗಳ ಹಿಂಡು
**ಲೋಲ(ಳ)ತೆ** – ಅಲುಗಾಟ, ಚಾಂಚಲ್ಯ
**ಲೋಲಾಪಾಂಗಿ** – ಚಂಚಲನೇತ್ರೆ
**ಲೋಲುಪ** – ಲಂಪಟ
**ಲೋಲುಪ್ತಿ** – ಲಾಂಪಟ್ಯ
**ಲೋಲೇಕ್ಷಣ** – ಚಂಚಲನೇತ್ರ
**ಲೋಲೆ** – ಸೂರಿನ ಮುಂಭಾಗ; ಇಳಿ ಸೂರು
**ಲೋಹಕಂಟಕ** – ಮುಳ್ಳುತಂತಿಯ ಬೇಲಿ
**ಲೋಹಖುರವಾಹ** – ಲಾಳ ಕಟ್ಟಿದ ಕುದುರೆ
**ಲೋಹಜಬಂಧ** – ಕಬ್ಬಿಣದ ಸರಪಳಿ
**ಲೋಹವಕ್ಕರೆ** – ಯುದ್ಧದ ಆನೆಕುದುರೆಗಳಿಗೆ ಹಾಕಿರುವ ಕಬ್ಬಿಣದ ಪಕ್ಷರಕ್ಷೆ
**ಲೋಹಿತ** – ರಕ್ತ; ಕೆಂಪು ಬಣ್ಣದ
**ಲೋಹಿತಮತ್ಸ್ಯ** – ಕೆಂಪು ಮೀನು
**ಲೋಹಿತಲೋಚನ** – ಕೆಂಗಣ್ಣು(ಗಳುಳ್ಳವನು)
**ಲೋಹಿತಾಶ್ವ** – ಅಗ್ನಿ
**ಲೋಳೆ** – ಜೊಲ್ಲು
**ಲೋಳೆವಾಯ್** – ಜೊಲ್ಲು ಸುರಿಯುವ ಬಾಯಿ
**ಲೌಲ್ಯ** – ಚಂಚಲತೆ
**ಲೌಹಿತ್ಯ** – ಕೆಂಬಣ್ಣ

## ವ

**ವಂಕದ(ದಾ)ರ** – ಗುಪ್ತವಾದ ಬಾಗಿಲು
**ವಂಕಿ** – ಚಂದ್ರಾಯುಧ
**ವಂಚ** – ವಂಶ
**ವಂಚಿಸು** – ಮೋಸಮಾಡು; ಮುಚ್ಚಿಡು
**ವಂದನಮಾಲೆ(ಳೆ)(ಅಕೆ)** – ತೋರಣ
**ವಂದಾರು** – ಸ್ತುತಿಕಾರ; ಹೊಗಳುವವನು
**ವಂದಿ** – ಹೊಗಳು ಭಟ್ಟ
**ವಂದಿಜನ** – ಹೊಗಳುಭಟ್ಟರ ಗುಂಪು
**ವಂದಿಸು** – ನಮಸ್ಕರಿಸು; ಸ್ತುತಿಸು
**ವಂದ್ಯತೆ** – (ಜೈನ) ಪರಿವ್ರಾಜಕರ ಲಕ್ಷಣಗಳನ್ನು ಹೇಳುವ ಸೂತ್ರಪದ
**ವಂಧ್ಯಾಸ್ತನಂಧಯ** – ಬಂಜೆಯ ಮಗು; ಅಸಂಭವ
**ವಂಧ್ಯೆ** – ಬಂಜೆ
**ವಂಶ** – ಕುಲ; ಬಿದಿರು; ಕೊಳಲು
**ವಂಶಮಾಲೆ** –
**ವಂಶಸ್ಥಲ** – ಬಿದಿರು ಮೆಳೆ
**ವಂಶಚ್ಛೇದ** – ವಂಶವನ್ನು ನಾಶಮಾಡುವುದು; ಬಿದಿರನ್ನು ಸೀಳುವುದು
**ವಂಶಾವತಾರ** – ಕುಲದ ಆರಂಭ; ವಂಶದ ಆದಿಪುರುಷ
**ವಂಶಾವಳಿ** – ಕುಲಾನುಕ್ರಮ
**ವಕುಲ(ಳ)** – ನಾಗಕೇಸರ, ಪಗಡೆ ಗಿಡ
**ವಕ್ಖ(ಖ್ಖಾ)ಣಿಸು** – (ವ್ಯಾಖ್ಯಾನಿಸು) ವಿವರಿಸು
**ವಕ್ತ್ರ** – ಬಾಯಿ; ಮುಖ
**ವಕ್ತ್ರಶ್ವಾಸ** – ಬಾಯಿಂದ ಬಿಡುವ ಉಸಿರು, ನಿಟ್ಟುಸಿರು

**ವಕ್ರಗತಿ** – ಅಂಕುಡೊಂಕು ಚಲನೆ; ಕೆಟ್ಟ ನಡತೆ
**ವಕ್ರಗ್ರೀವ** – ಒಂಟೆ
**ವಕ್ರಚಾರ** – ವಕ್ರಗತಿ
**ವಕ್ರಭಣಿತಿ** – ವ್ಯಂಗ್ಯವಾದ ಮಾತು
**ವಕ್ರವಚನ** – ವಕ್ರೋಕ್ತಿ; ಇಂಪಾದ ಧ್ವನಿ
**ವಕ್ರವಾಕ್ಯ** – ಕೊಂಕು ಮಾತು
**ವಕ್ರಿಮ** – ಡೊಂಕಾದ; ಸುತ್ತುಬಳಸಿನ
**ವಕ್ರೋಕ್ತಿ** – ಕೊಂಕು ಮಾತು; ಚಾತುರ್ಯದ ಮಾತು
**ವಕ್ಷ(ಸ್ಥಲ)** – ಎದೆ
**ವಕ್ಷೋಜ** – ಮೊಲೆ
**ವಚನಪ್ರೌಢಿ** – ನುಡಿನಿಪುಣತೆ
**ವಚೋವಲ್ಲಭ** – ಸರಸ್ವತಿಯ ಪತಿ, ಬ್ರಹ್ಮ
**ವಚೋವಿಸ್ತರ** – ಮಾತಿನ ವಿವರಣೆ
**ವಜ್ರ** – ಕಠಿಣವಾದ; ನವರತ್ನಗಳಲ್ಲಿ ಒಂದು; ಇಂದ್ರನ ಆಯುಧ; ಸಿಡಿಲು
**ವಜ್ರಕವಾಟ** – ತೆಗೆಯಲಾಗದ ಬಾಗಿಲು
**ವಜ್ರಕಾಂಡ** – (ಜೈನ) ಚಕ್ರವರ್ತಿಗೆ ಲಭಿಸುವ ಬಿಲ್ಲು
**ವಜ್ರಕೀಟ** – ದುಂಬಿ
**ವಜ್ರಕುಂಡಲ** – ವಜ್ರಖಚಿತವಾದ ಕಿವಿಯ ಆಭರಣ
**ವಜ್ರತುಂಡ** – ಗಟ್ಟಿಯಾದ ಕೊಕ್ಕು; (ಜೈನ) ಚಕ್ರವರ್ತಿಯ ಶಕ್ತ್ಯಾಯುಧ
**ವಜ್ರದಾಳ** – ವಜ್ರ+ತಾಳಿ, ವಜ್ರಖಚಿತ ಮಾಂಗಲ್ಯ
**ವಜ್ರಧರ** – ಇಂದ್ರ
**ವಜ್ರಪಾತ** – ಸಿಡಿಲ ಹೊಡೆತ
**ವಜ್ರವಹ್ನಿ** – ಸಿಡಿಲಿನ ಬೆಂಕಿ
**ವಜ್ರಾಂಗ** – ಗಟ್ಟಿಯಾದ ದೇಹ
**ವಜ್ರಾಗ್ನಿ** – ವಜ್ರವಹ್ನಿ
**ವಜ್ರಿ** – ಇಂದ್ರ; (ಜೈನ) ಹದಿನಾರನೆಯ ತೀರ್ಥಂಕರನಾದ ಶಾಂತಿನಾಥ
**ವಜ್ರಿಶರ** – ಇಂದ್ರ
**ವಟ** – ಆಲದ ಮರ
**ವಟು** – ಬ್ರಹ್ಮಚಾರಿ
**ವಡ್ಡವಾರ** – ಶನಿವಾರ
**ವಡ್ಡಾಗರ** – ನೆಲೆವೀಡು
**ವಣಿಗ್ವರ** – ಪ್ರಮುಖ ವ್ಯಾಪಾರಿ
**ವಣಿಗ್ವಾಟ** – ಅಂಗಡಿಸಾಲು
**ವಣಿಗ್ವಿದ್ಯೆ** – ವ್ಯಾಪಾರೀವಿದ್ಯೆ
**ವಣಿಜ** – ವ್ಯಾಪಾರಿ
**ವಣ್ಣಂಚಳ** – ಬಣ್ಣಗೆಡು
**ವತಂಸ** – ಕಿವಿಯ ಆಭರಣ
**ವತ್ಸಕುಲ** – ಕರುಗಳ ಗುಂಪು
**ವತ್ಸರ** – ವರ್ಷ
**ವದನರಸ** – ಜೊಲ್ಲು
**ವದಾನ್ಯ** – ಉದಾರಿ; ವಾಕ್ಚತುರ; ನಯವಾಗಿ ಮಾತಾಡುವವನು
**ವದಾನ್ಯತಾ** – ಔದಾರ್ಯ
**ವದಿಸು** – ಹೇಳು
**ವಧೂಜನ** – ಸ್ತ್ರೀಸಮೂಹ
**ವಧೂಟಿ** – ಯುವತಿ
**ವಧೂವಿಲೋಕನ** – ಸೊಸೆಯನ್ನು ನೋಡಿವುದು
**ವಧೆ** – ಕೊಲೆ
**ವಧ್ಯಶಿಲೆ** – ಮರಣದಂಡನೆಗಾಗಿ ಕತ್ತು ಕತ್ತರಿಸಲು ಇರುವ ಕಲ್ಲು
**ವನಕರಿ** – ಕಾಡಾನೆ
**ವನಕುಸುಮ** – ಕಾಡಿನಲ್ಲಿ ಬೆಳೆದ ಹೂ
**ವನಕೇಳ** – ವನವಿಹಾರ
**ವನಕ್ರೀಡೆ** – ವನಕೇಳಿ
**ವನಗಜ** – ವನಕರಿ
**ವನಚರ(ರಿ)** – ಕಾಡಿನ ಮನುಷ್ಯ(ಳು); ಬೇಡ(ಸ್ತ್ರೀ)
**ವನಜ** – ತಾವರೆ
**ವನಜಜ** – ಬ್ರಹ್ಮ
**ವನಜನಾಭ** – ವಿಷ್ಣು
**ವನಜಭವಾಂಡ** – ಬ್ರಹ್ಮಾಂಡ
**ವನಜಮಿತ್ರ** – ಸೂರ್ಯ
**ವನಜವನ** – ತಾವರೆಗಳ ಸಮೂಹ
**ವನಜಾರಾತಿ** – ಕಮಲದ ಶತ್ರು, ಚಂದ್ರ
**ವನಜೋದರ** – ವನಜನಾಭ
**ವನತರು** – ಕಾಡಿನ ಮರ
**ವನದಂತಿ** – ವನಕರಿ
**ವನದಹನ** – ಕಾಡುಗಿಚ್ಚು
**ವನದುರ್ಗ** – ಕಾಡಿನ ಮಧ್ಯದಲ್ಲಿರುವ ಕೋಟೆ
**ವನದೇವತೆ** – ಕಾಡಿನ ಅಭಿಮಾನಿ ದೇವತೆ
**ವನದೇವಿ** – ವನದೇವತೆ
**ವನಧಿ** – ಸಮುದ್ರ
**ವನನಾಗಾರಿ** – ವನನಾಗ+ಅರಿ, ಕಾಡಾನೆಯ ಶತ್ರು, ಸಿಂಹ
**ವನನಿಧಿ** – ಸಮುದ್ರ
**ವನಪಥ** – ಕಾಡುದಾರಿ
**ವನಪಾಲ(ಕ)** – ಉದ್ಯಾನದ ಮೇಲ್ವಿಚಾರಕ
**ವನಭೂಮಿ** – ಕಾಡುಪ್ರದೇಶ
**ವನಭೃತ್** – ಮೋಡ
**ವನಮಹತ್ತರ** – ವನಪಾಲ(ಕ)
**ವನಮಹಿಷ(ಷಿ)** – ಕಾಡುಕೋಣ(ಎಮ್ಮೆ)
**ವನಮಾಲಾಧರ** – ವಿಷ್ಣು
**ವನಮಾಲಾಸ್ಪದ** – ವನಮಾಲಾಧರ
**ವನಮಾಲಿ** – ವನಮಾಲಾಧರ
**ವನಮಾಲೆ** – ಕಾಡುಗಳ ಸಾಲು; ಕಾಡುಹೂಗಳ ಹಾರ
**ವನಮೃಗ** – ಕಾಡುಪ್ರಾಣಿ
**ವನರಾಜಿಕ್ರೀಡೆ** – ವನವಿಹಾರ
**ವನರುಗ್ಬಾಂಧವ** – ಕಮಲದ ಮಿತ್ರ, ಸೂರ್ಯ
**ವನರುಹ** – ತಾವರೆ
**ವನರುಹನಾಭ** – ವನಜನಾಭ

**ವನರುಹಭವ** – ವನಜಜ, ಬ್ರಹ್ಮ
**ವನರುಹವಿಷ್ಟರ** – ಕಮಲಾಸನ, ಬ್ರಹ್ಮ
**ವನಲತೆ** – ಕಾಡಿನ ಬಳ್ಳಿ; ಉದ್ಯಾನವನದ ಬಳ್ಳಿ
**ವನವಾರಣ** – ಕಾಡಾನೆ
**ವನವಿಹರಣ** – ವನವಿಹಾರ
**ವನಷಂಡ** – ಮರಗಳ ಗುಂಪು, ತೋಪು
**ವನಸಿಂಹನ್ಯಾಯ** – ಒಂದು ಲೌಕಿಕನ್ಯಾಯ; ವನ–ಸಿಂಹಗಳ ಪರಸ್ಪರ ರಕ್ಷಣೆ–
**ವನಸ್ಪತಿ** – ಮರಗಿಡ
**ವನಾಂತರ** – ಕಾಡಿನ ಒಳಭಾಗ
**ವವನಾಂತರಾಳ** – ವನಾಂತರ
**ವನಾವಸಥ** – ಕಾಡಿನಲ್ಲಿನ ಮನೆ
**ವನಿತಾಸಕ್ತಿ** – ವನಿತಾ+ಸಕ್ತಿ, ವನಿತಾ+ಅಸಕ್ತಿ, ಹೆಣ್ಣಿನ ಬಗೆಗಿನ ಆಸಕ್ತಿ ಅಥವಾ ಅನಾಸಕ್ತಿ
**ವನೀಪಕ** – ಯಾಚಕ
**ವನೇಚರ(ರಿ)** – ಬೇಡರವನು(ಳು)
**ವನೇಭ** – ಕಾಡಾನೆ
**ವನೋದ್ದೇಶ** – ಕಾಡುಪ್ರದೇಶ
**ವನ್ಯ** – ಕಾಡಿನ
**ವನೀಪಕ** – ಯಾಚಕ
**ವಪು** – ದೇಹ
**ವಪುಷ್ಮ** – ಚೆಲುವಾದುದು
**ವಪುಷ್ಮಂತ** – ಸುಂದರವಾದ
**ವಪ್ರ** – ಗೋಡೆ, ಪ್ರಾಕಾರ; ಬೆಟ್ಟದ ತಪ್ಪಲು
**ವಪ್ರಕ್ರೀಡೆ** – ಪ್ರಾಣಿಗಳು ತಲೆ ಗುದ್ದುವ ಆಟ
**ವಯಃಪರಿಣತ** – ಮುದುಕ
**ವಯಃಪರಿಣತಿ** – ಮುಪ್ಪು; ಪ್ರೌಢತೆ
**ವಯಲ್** – ಬಯಲು
**ವಯಸ್ಯ** – ಗೆಳೆಯ
**ವಯೋಧಿಕ** – ಹೆಚ್ಚು ವಯಸ್ಸಾದವನು, ಹಿರಿಯ
**ವಯೋನುರೂಪ** – ವಯಸ್ಸಿಗೆ ತಕ್ಕುನಾದ
**ವ(ಬ)ರಂ** – ವರೆವಿಗೂ
**ವರಟಾ** – ಹೆಣ್ಣು ಹಂಸ; ಕಣಜದ ಹುಳ
**ವರಣ** – ಪೂಜ್ಯ
**ವರತ್ರೆ** – ಚರ್ಮದ ಪಟ್ಟಿ
**ವರಯೋಗ್ಯೆ** – ವಿವಾಹಯೋಗ್ಯೆ
**ವರಾಕ** – ಅದೃಷ್ಟಹೀನ; ದೀನ
**ವರಾಹ** – ಹಂದಿ
**ವರಾಳ(ಟ)** – ಕವಡೆ
**ವರಿಯಿಸು** – ಸ್ವೀಕರಿಸು, ವರಿಸು
**ವರಿಸು** – ಬರಮಾಡು; ಆಯ್ಕೆಮಾಡು
**ವರುಡು** – ಉಜ್ಜು
**ವರುಣಾನಿ** – ವರುಣನ ಹೆಂಡತಿ, ಋದ್ಧಿ
**ವರುಣಾಶೆ** – ಪಶ್ಚಿಮ ದಿಕ್ಕು
**ವರುಷವರ** – ಅಂತಃಪುರ ಕಾಯುವ ನಪುಂಸಕ
**ವರೂಥ** – ರಥ
**ವರೂಥಿನಿ** – ಸೈನ್ಯ
**ವರೇಣ್ಯ** – ಪ್ರಮುಖ; ಅತ್ಯುತ್ತಮ
**ವರ್ಜಿಸು** – ಬಿಟ್ಟುಬಿಡು
**ವರ್ಜ್ಯ** – ತೊರೆಯಬೇಕಾದ
**ವರ್ಣಕ** – ವರ್ಣನೆ; ಬಣ್ಣ; ವರ್ಣನಾಪ್ರಧಾನ ಕಾವ್ಯ
**ದೇಸಿ ಛಂದಸ್ಸಿನ ಕಾವ್ಯ**–
**ವರ್ಣಚತುಷ್ಕ** – ನಾಲ್ಕು ವರ್ಣಗಳು; ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ
**ವರ್ಣತ್ರಯ** – ವರ್ಣಚತುಷ್ಕದಲ್ಲಿ ಮೊದಲ ಮೂರು ದ್ವಿವರ್ಣಗಳು
**ವರ್ಣಪೂರ** – ಬಣ್ಣವುರ, ಬಣ್ಣದಿಂದ ತುಂಬಿದುದು
**ವರ್ಣಲಾಭ** – ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಬ್ರಾಹ್ಮಣತ್ವವನ್ನು ಪಡೆಯುವುದು; ಮದುವೆಯಾಗಿ ಬೇರೆ ಸಂಸಾರ ಹುಡುವುದು
**ವರ್ಣಸಂಕರ** – ಮದುವೆಯ ಮೂಲಕ ಜಾತಿಗಳು ಬೆರಕೆಯಾಗುವುದು; ಬೇರೆ ಬೇರೆ ಬಣ್ಣಗಳನ್ನು ಬೆರೆಸುವುದು
**ವರ್ಣಿ** – ಬ್ರಹ್ಮಚಾರಿ
**ವರ್ಣೋತ್ತಮತ್ವ** – ಬ್ರಾಹ್ಮಣಿಕೆ
**ವರ್ತನ** – ನಡತೆ; ವೃತ್ತಿ
**ವರ್ತಿ** – ಇರುವ; ದೀಪದ ಬತ್ತಿ; ಬಟ್ಟೆಯ ಅಂಚು
**ವರ್ತಿಸು** – ಚಲಿಸು; ಉಂಟಾಗು; ನಡೆದುಕೊ
**ವರ್ಧಕಿ** – ಬಡಗಿ
**ವರ್ಧಮಾನ** – ಹೆಚ್ಚುತ್ತಿರುವ; ಒಗಟು; (ಜೈನ) ಇಪ್ಪತ್ತನಾಲ್ಕನೆಯ ತೀರ್ಥಂಕರ
**ವರ್ಮ** – ಅಂಗರಕ್ಷಣೆಯ ಕವಚ
**ವರ್ಯಜನ** – ಉತ್ತಮ ಜನ
**ವರ್ಷ(ಣ)** – ಮಳೆ
**ವರ್ಷಜಧನು** – ಕಾಮನ ಬಿಲ್ಲು
**ವರ್ಷಧರ** – ಮೋಡ
**ವರ್ಷನರಪ** – ಮಳೆರಾಯ
**ವರ್ಷಲವ** – ಮಳೆಯ ಹನಿ
**ವರ್ಷವರ** – ವರ್ಷಧರ; ವರುಷವರ, ಅಂತಃಪುರ ಕಾಯುವ ನಪುಂಸಕ
**ವರ್ಷವರ್ಧನದಿನ** – ಹುಟ್ಟಿದ ಹಬ್ಬ
**ವರ್ಷಾವಾಸ** – ಮಳೆಗಾಲದಲ್ಲಿ ವಾಸಿಸುವ ಮನೆ
**ವಲಂ** – ನಿಜವಾಗಿ; ಅಲ್ಲವೇ
**ವಲ(ಳ)ಕ್ಷ** – ಬಿಳಿದಾದುದು; ಶುಭ್ರ
**ವಲ(ಳ)ಕ್ಷಕೇಶ** – ನರೆತ ಕೂದಲು
**ವಲನ** – ಅತ್ತಿತ್ತ ಸರಿದಾಡು
**ವಲಭಿ** – ಚಂದ್ರಶಾಲೆ
**ವಲ(ಳ)ಭಿಚ್ಛಂದ** – ಮುಂಜೂರು
**ವಲ(ಳ)ಯಾಕಾರ** – ಗುಂಡಗಿನ ಆಕೃತಿ
**ವಲಿ(ಳಿ)ತ** – ಸುತ್ತುವರಿಯಲ್ಪಟ್ಟ; ಚರ್ಮದ ಸುಕ್ಕು
**ವಲಿ(ಲೀ)ಮುಖ** – ಕೋತಿ
**ವಲಿ(ಲೀ)ಮುಖಕೇತನ** – ಕಪಿಧ್ವಜ

**ವಲ್ಕ(ಲ)** – ಮರದ ತೊಗಟೆ; ನಾರು ಬಟ್ಟೆ
**ವಲ್ಕಲವಸನ** – ನಾರುಮಡಿ
**ವಲ್ಕಾಂಚಲ** – ವಲ್ಕಲವಸನ
**ವಲ್ಗನ** – ಕುದುರೆಯ ಓಟ
**ವಲ್ಮೀಕ** – ಹುತ್ತ
**ವಲ್ಲಕಿ** – ವೀಣೆ
**ವಲ್ಲಣ** – ಥಡಿ
**ವಲ್ಲಭ** – ಪ್ರಿಯನಾದವನು
**ವಲ್ಲಭಜನ** – ಇಷ್ಟರು
**ವಲ್ಲಭಾ** – ಪ್ರೇಯಸಿ
**ವಲ್ಲಭಿಕೆ** – ಹೆಂಡತಿ
**ವಲ್ಲರಿ** – ಬಳ್ಳಿ; ಗೊಂಚಲು
**ವಲ್ಲವ** – ಗೊಲ್ಲ
**ವಲ್ಲೂರ** – ಉಪ್ಪುಹಾಕಿದ ಮಾಂಸ
**ವಶಂಮಾಡು** – ಸ್ವಾಧೀನಪಡಿಸಿಕೊ
**ವಶೀಕರಣಸಾಯಕ** – ವಶಮಾಡಿಕೊಳ್ಳುವ ಅಸ್ತ್ರ
**ವಶೀಕಾರಿಣಿ** – ವಶೀಕರಣ ವಿದ್ಯೆ
**ವಶ್ಯಮೂಳಿಕೆ** – ವಶೀಕರಣ ಶಕ್ತಿಯುಳ್ಳ ಬೇರು
**ವಶ್ಯಾಂಜನ** – ವಶೀಕರಣಶಕ್ತಿಯಿರುವ ಮುಲಾಮು
**ವಶ್ಯಾಕ್ಷರ** – ವಶೀಕರಿಸಿಕೊಳ್ಳುವ ನುಡಿ
**ವಷಟ್ಕಾರ** – ಹವಿಸ್ಸಿನ ಅರ್ಪಣೆಯ ಕಾಲದಲ್ಲಿ ಹೇಳುವ ಮಂತ್ರ
**ವಸಂತ** – ಷಡೃತುಗಳಲ್ಲಿ ಮೊದಲನೆಯದು; ಚೈತ್ರ–ವೈಶಾಖ ಮಾಸಗಳು; ಮನ್ಮಥನ ಗೆಳೆಯ–
**ವಸಂತಕ** – ಮನ್ಮಥನ ಗೆಳೆಯ
**ವಸಂತದೂತಿ(ಕೆ)** – ಇರುವಂತಿಗೆ, ಅದಿರ್ಮುತ್ತೆ
**ವಸಂತಪ್ರಿಯ** – ವಸಂತಕ
**ವಸಂತಮಾಸ** – ವಸಂತಕಾಲ
**ವಸಂತಸಖ** – ವಸಂತಕ
**ವಸನ** – ಬಟ್ಟೆ
**ವಸನಾಂಗ(ಕುಜ)** – (ಜೈನ) ಬೇಕಾದ ಬಟ್ಟೆ ನಿಡುವ ಕಲ್ಪಕುಜ
**ವಸಿ(ಯಿ)ಸು** – ನೆಲಸು, ವಾಸಮಾಡು
**ವಸು** – ಸಿರಿ; ರತ್ನ; ಕಾಂತಿ
**ವಸುಂಧರೆ** – ಭೂಮಿ
**ವಸುಧಾಚಕ್ರ** – ಭೂಮಂಡಲ
**ವಸುಧಾಧಿಪತಿ** – ರಾಜ
**ವಸುಧಾಭೋಗ** – ಭೂವಿಸ್ತಾರ
**ವಸುಧಾಮರ** – ಬ್ರಾಹ್ಮಣ
**ವಸುಧಾರೆ** – (ಜೈನ) ಪಂಚಾಶ್ಚರ್ಯಗಳಲ್ಲಿ ಒಂದು; ಚಿನ್ನದ ಮಳೆ
**ವಸುಧಾವಳಯ** – ವಸುಧಾಚಕ್ರ
**ವಸುಧೈಕಕುಟುಂಬಕ** – ಜಗತ್ತನ್ನೆಲ್ಲ ಒಮದೆ ಕುಟುಂಬವೆಂದು ಭಾವಿಸುವವನು
**ವಸುಧೇಶ** – ವಸುಧಾಧಿಪತಿ
**ವಸುಮತಿ** – ವಸುಂಧರೆ
**ವಸುಮದ** – ಐಶ್ವರ್ಯದ ಸೊಕ್ಕು
**ವಸುವಿರಹಿತ** – ಸಿರಿಯನ್ನು ತೊರೆದವನು
**ವಸುಹೀನ** – ಹಣವಿಲ್ಲದವನು, ಬಡವ
**ವಸ್ತಿ** – ಕಿಬ್ಬೊಟ್ಟೆ
**ವಸ್ತುಕೃತಿ** – ವಸ್ತುಕಕಾವ್ಯ, ಮಾರ್ಗಕಾವ್ಯ, ಚಂಪೂ
**ವಸ್ತುತತ್ತ್ವ** – ಸಹಜವಾದುದು
**ವಸ್ತುಪುರುಷ** – ನಿಪುಣ
**ವಸ್ತುಬಂಧ** – ವಸ್ತುಕೃತಿ, ಕಥಾಪ್ರಧಾನ ಕಾವ್ಯ
**ವಸ್ತುಮಾಡು** – ಕಾವ್ಯದ ವಿಷಯವಾಗಿಸಿಕೊ
**ವಸ್ತುವಿದ** – ತತ್ವವಿದ
**ವಸ್ತುಸ್ತವ** – ಮಹಾಪುರುಷನ ಗುಣಸ್ತವ
**ವಸ್ತ್ರಮೃಗ** – ಕೂರೆ
**ವಸ್ತ್ರಾಂಗ** – (ಜೈನ) ಕಲ್ಪಕುಜಗಳಲ್ಲಿ ಒಂದು, ಬೇಕಾದ ಬಟ್ಟೆಯನ್ನು ನೀಡುವಂಥದು
**ವಹಣಿ** – ಬೆಡಗು, ಒಯ್ಯಾರ
**ವಹಿತ್ರ** – ಬಹಿತ್ರ, ಹಡಗು
**ವಹ್ನಿ** – (ಜೈನ) ಒಬ್ಬ ಲೋಕಾಂತಿಕದೇವ
**ವಹ್ನಿಸಖ** – ವಾಯು
**ವಳನ** – ಚಲನ
**ವಳಭಿ** – ಉಪ್ಪರಿಗೆ
**ವಳಯ** – ಮಂಡಲ; ಕಡಗ, ಬಳೆ
**ವಳಿ** – ತೆರೆ, ತರಂಗ
**ವಳಿಗೆ** – ತುತ್ತು
**ವಳಿತ್ರಯ** – ಹೊಟ್ಟೆಯ ಮೇಲಿನ ಚರ್ಮದ ಮಡಿಕೆ
**ವಳಿರೇಖೆ** – ವಳಿತ್ರಯ
**ವಟಿ** – ಬಳಿ, ದಾರಿ
**ವಾಂಶ** – ಕೊಳಲು
**ವಾಂಶಿಕ** – ಮೇದರವನು; ಕೊಳಲು ವಾದಕ
**ವಾಃಕಣ** – ನೀರಿನ ಹನಿ
**ವಾಃಕಣಿಕೆ** – ವಾಃಕಣ
**ವಾಃಕೇಲಿ(ಳಿ)** – ನೀರಾಟ, ಜಲಕ್ರೀಡೆ
**ವಾಕ್(ಕ್ಕು)** – ಮಾತು; ಸರಸ್ವತಿ
**ವಾಕ್ಶ್ರೀ** – ಸರಸ್ವತಿ
**ವಾಕ್ಶ್ರೀಯುತ** – ಪಂಡಿತ
**ವಾಕ್ಪರಿಣತ** – ಮಾತಿನ ಚತುರ
**ವಾಕ್ಪಾಟವ** – ಮಾತಿನ ಚಾತುರ್ಯ
**ವಾಕ್ಪ್ರಣಿಧಿ** – ಮಾತಿನ ಪ್ರಚೋದನೆ
**ವಾಕ್ಪ್ರೌಢ** – ವಾಕ್ಪರಿಣತ
**ವಾಕ್ಪ್ರೌಢಿ** – ವಾಕ್ಪಾಟವ
**ವಾಕ್ಯಾರ್ಥ** – ತಾತ್ಪರ್ಯ; ಚರ್ಚೆ
**ವಾಕ್ಸಾರ** – ಹರಟೆಗಾರ
**ವಾಗಂಗನೆ** – ಸರಸ್ವತಿ
**ವಾಗಾಡಂಬರ** – ಮಾತಿನ ಡೌಲು
**ವಾಗುರ(ರೆ)** – ಬಲೆ
**ವಾಗುರಿಕ(ಕೆ)** – ಬೇಟೆಗಾರ(ತಿ)
**ವಾಗ್ಗುಂಫ** – ನುಡಿಜೋಡಣೆ
**ವಾಗ್ಗೇಯಕಾರ** – ವಾಕ್+ಗೇಯಕಾರ, ಗಮಕಿ

**ವಾಗ್ದೇವಿ** – ಸರಸ್ವತಿ
**ವಾಗ್ಮಿ** – ಚಮತ್ಕಾರವಾಗಿ ಮಾತಾಡುವವನು
**ವಾಗ್ರಮಣ** – ಸರಸ್ವತಿಪತಿ; ಬ್ರಹ್ಮ
**ವಾಗ್ವಧು** – ನುಡಿದೇವಿ, ಸರಸ್ವತಿ
**ವಾಗ್ವನಿತೆ** – ವಾಗ್ವಧು
**ವಾಗ್ವಿದ** – ಪಂಡಿತ
**ವಾಗ್ವಿದಗ್ಧತೆ** – ಮಾತಿನ ಪ್ರೌಢಿಮೆ
**ವಾಗ್ವಿಭವ** – ನುಡಿಸಿರಿ
**ವಾಗ್ವೃತ್ತಿ** – ನುಡಿಯುವ ಬಗೆ
**ವಾಙ್ಮಯ** – ಸಾಹಿತ್ಯ
**ವಾಙ್ಮಲ** – ಮಾತಿನ ದೋಷ
**ವಾಚಸ್ಪತಿ** – ಬೃಹಸ್ಪತಿ
**ವಾಚಾಲ(ಳ)** – ಮಾತುಗಾರ; ಹರಟೆಕೋರ
**ವಾಚಿಕ** – ನಾಲ್ಕು ಬಗೆಯ ಅಭಿನಯಗಳಲ್ಲಿ ಒಂದು, ಮಾತಿನ ಮೂಲಕ ಭಾವನೆಯ ಪ್ರಕಟಣೆ
**ವಾಜಿ** – ಕುದುರೆ
**ವಾಣಿ** – ನುಡಿ; ಸರಸ್ವತಿ
**ವಾತ** – ಗಾಳಿ
**ವಾತತ್ರಿತಯ** –(ಜೈನ) ಭೂಲೋಕವನ್ನು ಆವರಿಸಿರುವ ಘನೋದಧಿ, ಘನವಾತ, ತನುವಾತಗಳೆಂಬ ಮೂರು ವಾಯುಗಳು
**ವಾತಪೂರಣ** – ಬಾವುಟ
**ವಾತಾಯನ** – ಗವಾಕ್ಷಿ
**ವಾತಾಶನ** – ಗಾಳಿಯನ್ನೇ ಆಹಾರವಾಗಿ ಉಳ್ಳದ್ದು, ಹಾವು
**ವಾತೂಲ(ಳ)ಕೆ** – ಸುಂಟರಗಾಳಿ
**ವಾತ್ಯಾ(ತ್ಯೆ)** – ಬಿರುಗಾಳಿ
**ವಾತ್ಸಲ್ಯ** – (ಜೈನ) ಸಮ್ಯಕ್‌ದರ್ಶನದ ಒಂದು ಅಂಗ
**ವಾದಿತ್ರ** – ವಾದ್ಯ; ವಾದ್ಯವಾದನ
**ವಾದುಗೆಯ್** – ವಾದ ಮಾಡು
**ವಾನರಚಿಹ್ನ** – (ಜೈನ) ಸುಗ್ರೀವ
**ವಾನವ್ಯ(ಬ್ಯ)ಂತರ** – (ಜೈನ) ನಾಲ್ಕು ಬಗೆಯ ದೇವತಾವರ್ಗಗಳಲ್ಲಿ ಒಂದು
**ವಾನೇಯ** – ಕಾಡಿನ; (ಜೈನ) ವ್ಯಂತರ ದೇವತೆಗಳು
**ವಾನೇಯನಾಗ** – ಕಾಡಾನೆ
**ವಾಪಿ** – ಬಾವಿ
**ವಾಮಕ್ರಮ** – ಎಡ ಪಾದ
**ವಾಮಜಾನು** – ಎಡ ಮೊಳಕಾಲು
**ವಾಮನ** – ಕುಳ್ಳಾದ; ವಿಷ್ಣುವಿನ ವಟುವಿನ ಅವತಾರ
**ವಾಮನಕ್ರಮ** – ವಾಮನನ ಪಾದ
**ವಾಮಪ(ಪಾ)ದ** – ವಾಮಕ್ರಮ
**ವಾಮಲೋಚನೆ** – ಸುಂದರವಾದ ಕಣ್ಣುಳ್ಳವಳು
**ವಾಮಸುಖ** – ಕೀಳು ಅಭಿರುಚಿಯ ಸುಖ
**ವಾಮೆ** – ಸುಂದರಿ; ಹೆಂಡತಿ
**ವಾಯುತ್ರಿತಯ** – ವಾತತ್ರಿತಯ
**ವಾಯು ಪಥ** – ಆಕಾಶ
**ವಾರ** – ಸಮೂಹ, ಸಮುದಾಯ
**ವಾರಕ** – ಭೂಷಣ, ಅಲಂಕಾರ(?)
**ವಾರಕಾಂತೆ** – ವೇಶ್ಯೆ
**ವಾರಣ** – ಆನೆ
**ವಾರಣಮುಖ** – ಗಣಪತಿ
**ವಾರಣವಾಹನ** – ಕುಬೇರ
**ವಾರಣಸೈನ್ಯ** – ಆನೆಯ ದಂಡು
**ವಾರಣಾಸ್ಯ** – ವಾರಣಮುಖ
**ವಾರವನಿತೆ** – ವಾರಕಾಂತೆ
**ವಾರವಿಲ(ಳಾ)ಸಿನಿ** – ವಾರಕಾಂತೆ
**ವಾರಸ್ತ್ರೀ** – ವಾರಕಾಂತೆ
**ವಾರಾನ್ನಿಧಿ** – ಸಮುದ್ರ
**ವಾರಾಶಿ(ಸಿ)** – ಸಮುದ್ರ
**ವಾರಿ** – ನೀರು; ನಿಷ್ಠೆ
**ವಾರಿಗಮಿತ್ರ** – ಕಮಲದ ಗೆಳೆಯ, ಸೂರ್ಯ
**ವಾರಿಧರ** – ಮೋಡ
**ವಾರಿಧಿ** – ಸಮುದ್ರ
**ವಾರಿಯಂತ್ರ** – ಪಿಚಕಾರಿ
**ವಾರಿವಾಹ** – ವಾರಿಧರ
**ವಾರುಣಿ** – ಪಶ್ಚಿಮ ದಿಕ್ಕು; ಮದ್ಯ
**ವಾರುವ** – ಕುದುರೆ
**ವಾರ್ಧರ** – ನೀರನ್ನು ಹೊಂದಿರುವುದು, ಮೋಡ
**ವಾರ್ಧಿಸುತ** – ಚಂದ್ರ
**ವಾರ್ಬಿಂದು** – ನೀರಿನ ಹನಿ
**ವಾರ್ಮಾನುಷಿ** – ಜಲದೇವತೆ
**ವಾರ್ವಾಂಛೆ** – ಬಾಯಾರಿಕೆ
**ವಾಲ(ಳ)ಧಿ** – ಬಾಲ
**ವಾಲುಕಪ್ರಭೆ** – (ಜೈನ) ಏಳು ನರಕಗಳಲ್ಲಿ ಒಂದು
**ವಾವದೂಕ** – ವಾಚಾಳಿ
**ವಾಶ್ಚರ** – ಮೀನು
**ವಾಷ್ಕಣ** – ವಾಃ+ಕಣ, ನೀರ ಹನಿ
**ವಾಸರ** – ಹಗಲು; ದಿನ
**ವಾಸವಗಜ** – ಇಂದ್ರನ ಆನೆ, ಐರಾವತ
**ವಾಸವಚಾಪ** – ಕಾಮನ ಬಿಲ್ಲು
**ವಾಸವಸ್ತ್ರೀ** – ಶಚೀದೇವಿ
**ವಾಸವಾಶೆ** – ಇಂದ್ರನ ದಿಕ್ಕು, ಪೂರ್ವ
**ವಾಸಿ** – ಪಂತ, ಹುರುಡು
**ವಾಸಿತ** – ತುಂಬಿದ
**ವಾಸುಕಿ(ಗಿ)** – ಆದಿಶೇಷ
**ವಾಸುದೇವ** – ವಿಷ್ಣು; (ಜೈನ) ಒಬ್ಬ ಅರ್ಧಚಕ್ರವರ್ತಿ
**ವಾಸ** – ಸ್ಪರ್ಧೆ; (ಪಾಶ) ಹಗ್ಗ; ಕೊಳಲು
**ವಾಸರ** – ಹಗಲು, ದಿನ
**ವಾಸರಕರ** – ಸೂರ್ಯ

**ವಾಸವ** – ಇಂದ್ರ
**ವಾಸಿಸು** – ವಾಸನೆ ನೋಡು
**ವಾಸ್ತುವಿದ್ಯಾ** – ಕಟ್ಟಡ ಕಟ್ಟುವ ಶಾಸ್ತ್ರ
**ವಾಹ** – ಕುದುರೆ
**ವಾಹಳಿ** – ಕುದುರೆ ಸವಾರಿಯ ಮೈದಾನ
**ವಾಹಿನಿ** – ನದಿ; ಸೈನ್ಯದ ತುಕಡಿ
**ವಾಹಿನೀಪತಿ** – ಸಮುದ್ರ
**ವಾಳುಕಪ್ರಕರ** – ಮರಳ ರಾಶಿ
**ವಾಳವಾಯಜ** – ನವರತ್ನಗಳಲ್ಲಿ ಒಂದು, ವೈಡೂರ್ಯ
**ವಾರ್ತೆ** – ಸುದ್ದಿ
**ವಾರ್ತೆಗೊಳ್** – ಸುದ್ದಿಯನ್ನು ಕೇಳು
**ವಿ** – ಪಕ್ಷಿ
**ವಿಂದ** – (ಬೃಂದ) ಗುಂಪು
**ವಿಂಧ್ಯ** – ಒಂದು ಕುಲಪರ್ವತ
**ವಿಂಶತಿ** – ಇಪ್ಪತ್ತು
**ವಿಕಚ** – ಅರಳಿದ; ಹರಡಿದ
**ವಿಕಟ** – ದೊಡ್ಡದಾದ; ವಿಕಾರವಾದ; ಕ್ರೂರ
**ವಿಕಟಗಾತ್ರ** – ಭಾರಿ ದೇಹ
**ವಿಕಚ** – ಅರಳಿದ
**ವಿಕಥೆ** – (ಜೈನ) ಪಾಪಕಾರ್ಯಕ್ಕೆ ಕಾರಣವಾಗುವ ಕತೆ
**ವಿಕರಣ** – ವಿವಿಧ ರೂಪಗಳನ್ನು ತಾಳುವ ಶಕ್ತಿ
**ವಿಕರಾಳೋಕ** – ಭಯಂಕರ ಕಣ್ಣು(ಗಳುಳ್ಳವನು)
**ವಿಕರಿ** – ಚಂಚಲ
**ವಿಕಿರ** – ಹಾರುವ; ಪಕ್ಷಿ
**ವಿಕರ್ಣ** – ಬಾಣ; ಕರ್ಣನ ಮಗ
**ವಿಕರ್ತನ** – ಸೂರ್ಯ
**ವಿಕಲ(ಳ)** – ಖಿನ್ನತೆ
**ವಿಕಲ್ಪ** – ಭೇದ; ಎರಡು ಯುಗಗಳ ನಡುವಣ ಕಾಲಾವಧಿ
**ವಿಕಸನ** – ಅರಳುವಿಕೆ
**ವಿಕಸಿತ** – ಅರಳಿದ; ಏಳಿಗೆವಡೆದ
**ವಿಕಸಿಸು** – ಅರಳು, ಹಿಗ್ಗು
**ವಿಕಳೇಂದ್ರಿಯ** – (ಜೈನ) ತ್ರಸಕಾಯಗಳಲ್ಲಿ ಒಂದು; ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯಗಳ ಜೀವ
**ವಿಕಳೇಂದ್ರಿಯಜಾತಿ** – (ಜೈನ) ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು
**ವಿಕಾರ್ಯ** – ರೂಪಾಂತರ
**ವಿಕೀರ್ಣ** – ಕೆದರಿದ
**ವಿಕುರ್ವಣೆ** – ವಿಕಾರವೇಷ
**ವಿಕೃತ** – ರೂಪಾಂತರ ಹೊಂದಿದ; ಕುರೂಪವಾದ; ಅಸಹ್ಯ; ವಿಚಿತ್ರವಾದ
**ವಿಕೃತನಿದ್ರೆ** – ಮಾಯಾನಿದ್ರೆ
**ವಿಕ್ಕ** – ಆನೆಯ ಮರಿ
**ವಿಕ್ಕಿರ** – ಹಕ್ಕಿ
**ವಿಕ್ರಮ** – ಪಾದ; ಹೆಜ್ಜೆಯಿಡುವುದು; ಪರಾಕ್ರಮ; ಕುದುರೆಯ ಗತಿಗಳಲ್ಲಿ ಒಂದು
**ವಿಕ್ರಮಹೀನ** – ಶೌರ್ಯವಿಲ್ಲದವನು
**ವಿಕ್ರಿಯರ್ಧಿ** – (ಜೈನ) ತಪಸ್ಸಿನ ಫಲವಾದ ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು
**ವಿಕ್ರಿಯಾಬಲ** – ಮಾಯಾಶಕ್ತಿ
**ವಿಕ್ಲವ(ಬ)** – ವಿಷಾದ
**ವಿಕ್ಷೇಪ** – ಬೀಸುವಿಕೆ, ಅಲ್ಲಾಡುವಿಕೆ; ಬೀರುವಿಕೆ; ಪ್ರೇರಣೆ
**ವಿಕ್ಷೇಪಣ** – ಒಲೆದಾಡುವಿಕೆ
**ವಿಕ್ಷೇಪಣಿ** – (ಜೈನ) ನಾಲ್ಕು ಬಗೆಯ ಧರ್ಮಕಥೆಗಳಲ್ಲಿ ಒಂದು; ಮಿಥ್ಯಾವಾದವನ್ನು ಖಂಡಿಸುವ ಕತೆ; ನೋಡಿ 'ಧರ್ಮಕಥೆ'
**ವಿಖ್ಯಾತದಾನ** – ಶ್ರೇಷ್ಠ ರೀತಿಯ ದಾನ
**ವಿಗತ** – ಕಳೆದುಹೋದ
**ವಿಗತಕೃಪ** – ದಯೆಯಿಲ್ಲದವನು
**ವಿಗತಚಿತ್ತ** – ಮೈಮರೆವು
**ವಿಗತಜೀವಿತ** – ಪ್ರಾಣ ಹೋದವನು; ಸತ್ತವನು
**ವಿಗತನಿಮೇಷ** – ರೆಪ್ಪೆ ಬಡಿಯದವನು, ದೇವತೆ
**ವಿಗತಮಳ** – ಮಲರಹಿತನಾದವನು
**ವಿಗತಾರ್ಥ** – ನಿರರ್ಥಕ
**ವಿಗತಾಹಾರತ್ವ** – (ಜೈನ) ನಿರಾಹಾರ, ಉಪವಾಸ
**ವಿಗಲಿ(ಳ)ತ** – ಬಿಚ್ಚಿಹೋದ; ಸೋರಿಹೋದ
**ವಿಗಳತ್** – ಸೋರುತ್ತಿರುವ
**ವಿಗಳನ** – ಸೋರುವುದು
**ವಿಗಳಿತ** – ಕೆಡವಿದ
**ವಿಗುರ್ವಣೆ** – ರೂಪಾಂತರ
**ವಿಗುರ್ವಿಸು** – ಮಾಯಾಶಕ್ತಿಯಿಂದ ಸೃಷ್ಟಿಮಾಡು
**ವಿಗ್ರಹ** – ಯುದ್ಧ; ಆಕಾರ
**ವಿಗ್ರಹಕರಾಳ** – ಕುರೂಪಿ
**ವಿಗ್ರಹಲೀಲೆ** – ರೂಪಸೌಂದರ್ಯ
**ವಿಘಟಂ** – ಒಡೆದವನು
**ವಿಘಟನ** – ಒಡೆಯುವಿಕೆ; ವಿನಾಶ
**ವಿಘಟಿಸು** – ವಿರೋಧವಾಗು; ಒಡೆದುಹೋಗು
**ವಿಘಾತ** – ವಿನಾಶ
**ವಿಘೂರ್ಣನ** – ತೊಳಲಾಟ: ಆಧಿಕ್ಯ
**ವಿಘೂರ್ಣಿಸು** – ಅಲ್ಲಾಡು; ಅಧಿಕಗೊಳ್ಳು
**ವಿಚಕಿಲ(ಳ)** – ಮಲ್ಲಿಗೆ; ಅರಳಿದ
**ವಿಚಾರಕ್ಷಮ** – ವಿಚಾರಯೋಗ್ಯ
**ವಿಚಾರಿಸು** – ಆಲೋಚಿಸು; ಪ್ರಶ್ನಿಸು
**ವಿಚಿಂತಾಂತರ** – ಚಿಂತೆಯಿಲ್ಲದಿರುವಿಕೆ
**ವಿಚಿಕಿತ್ಸನ** – ಸಂಶಯ
**ವಿಚಿತಿ** – ಯತಿ, ಉಸಿರ್ದಾಣ
**ವಿಚಿತ್ರ** – ಬಣ್ಣ ಬಣ್ಣದ; ಅಚ್ಚರಿ ಹುಟ್ಟಿಸುವ; ಸುಂದರವಾದ
**ವಿಚಿತ್ರಾಂಗಿ** – ಸುಂದರಿ

**ವಿಚ್ಛಲಕಾರ** – ಕಾಂತಿಯುಕ್ತವಾದ ರೂಪ
**ವಿಚ್ಛಾಯ** – ನೆರಳಿಲ್ಲದ; ರತ್ನ; ಕಾಂತಿಹೀನ
**ವಿಚ್ಛಿದುರ** – ಒಡೆದುಹೊದ
**ವಿಚ್ಛಿನ್ನ** – ಅಗಲುವಿಕೆ
**ವಿಚ್ಛೇದಿಸು** – ಕತ್ತರಿಸು; ನಾಶಪಡಿಸು
**ವಿಜಯ** – ಗೆಲವು; ಅರ್ಜುನನ ಒಂದು ಹೆಸರು
**ವಿಜಯಕದಳಕಾ** – ವಿಜಯಸೂಚಕವಾಗಿ ಕಟ್ಟಿದ ಬಾಳೆಯ ಕಂಬ
**ವಿಜಯಚ್ಛಂದ** – ಐನೂರನಾಲ್ಕು ಎಳೆಗಳ ರತ್ನಹಾರ
**ವಿಜಯಧ್ವಜ** – ಗೆಲವಿನ ಸೂಚಕವಾದ ಬಾವುಟ
**ವಿಜಯಪ್ರಶಸ್ತಿ** – ಗೆಲವಿನ ಪತ್ರಿಕೆ
**ವಿಜಯಪ್ರಸ್ಥಾನ** – ದಿಗ್ವಿಜಯಯಾತ್ರೆ
**ವಿಜಯಶ್ರೀ** – ಜಯಲಕ್ಷ್ಮಿ
**ವಿಜಯಾನಕ** – ಜಯಭೇರಿ
**ವಿಜಯಾರ್ಧ** – (ಜೈನ) ಪೂರ್ವಪಶ್ಚಿಮಾಗಿ ಹಬ್ಬಿರುವ ಒಂದು ಪರ್ವತ
**ವಿಜಾತಿ** – ಪಕ್ಷಿಸಂಕುಲ
**ವಿಜಿಗೀಷು** – ಜಯಾಪೇಕ್ಷಿ
**ವಿಜಿಗೀಷುತೆ(ತ್ವ)** – ಗೆಲ್ಲುವ ಬಯಕೆ
**ವಿಜೃಂಭಣ** – ವಿಕಾಸ; ಅಬ್ಬರ; ಆಕಳಿಕೆ
**ವಿಜೃಂಭಮಾಣ** – ಅರಳುತ್ತಿರುವ
**ವಿಜೃಂಭಿಸು** – ಅರಳು; ಹಿಗ್ಗು; ಶೋಭಿಸು
**ವಿಟ** – ಕಾಮುಕ; ಕಾವ್ಯನಾಯಕನಿಗೆ ಆಪ್ತನಾದ ಒಬ್ಬ
**ವಿಟಂಕ** – ತುದಿ; ಗೂಡು
**ವಿಟ(ತ)ತ್ವ** – ಹಾದರ
**ವಿಟಪ** – ಕೊಂಬೆ
**ವಿಟಪಿ** – ಮರ
**ವಿಟಪಿಪ್ರರೋಹ** – ಮರಕ್ಕೆ ಸುತ್ತಿದ ಬಳ್ಳಿ
**ವಿಟವೃತ್ತ** – ಕಾಮುಕತನ
**ವಿಟಿ** – ವಿಲಾಸಿನಿ
**ವಿಡಂಬ** – ತೋರಿಕೆ; ಪರಿಹಾಸ್ಯ
**ವಿಡಂಬಕ** – ಅನುಕರಣೆ; ಹಾಸ್ಯಮಾಡುವವನು
**ವಿಡಂಬಡಂಬರ** – ಕೋಲಾಹಲ
**ವಿಡಂಬಿಸು** – ಅನುಕರಿಸು; ಪರಿಹಾಸ್ಯಮಾಡು; ಮೋಸಗೊಳಿಸು
**ವಿಡೂರ** – ಒಂದು ರತ್ನ, ವೈಡೂರ್ಯ
**ವಿತತ** – ಹರಡಿಕೊಂಡಿರುವ; ವೀಣೆ
**ವಿತತಾಟವಿ** – ವಿಸ್ತಾರವಾದ ಅರಣ್ಯ
**ವಿತತ್ವ** – ತತ್ವವಿರೋಧಿಯಾದುದು
**ವಿತಥ** – ನಿಜವಲ್ಲದ
**ವಿತರಣ** – ದಾಟುವುದು; ದಾನ; ಔದಾರ್ಯ
**ವಿತರಣಪ್ರಥಿತ** – ದಾನ ಕೊಡುವುದಕ್ಕೆ ಹೆಸರಾದವನು
**ವಿತರಣವಿನೋದ** – ದಾನಸಂತೋಷಿ
**ವಿತರ್ಕ** – ಸಂಶಯ; ಊಹೆ
**ವಿಸರ್ದಿ(ಕೆ)** – ವೇದಿಕೆ
**ವಿತಸ್ತಿ** – ಗೇಣು
**ವಿತಾನ** – ಸಮೂಹ; ಮೇಲ್ಕಟ್ಟು
**ವಿತಾನಕ** – ಗುಂಪು; ವಿಸ್ತಾರ
**ವಿತೃಷ್ಣ** – ಆಶಾರಹಿತ
**ವಿತ್ತಪ** – ಐಶ್ವರ್ಯಾಧಿಪತಿ, ಕುಬೇರ
**ವಿತ್ತೇಶ** – ವಿತ್ತಪ
**ವಿತ್ರಸ್ತ** – ಹೆದರಿದ
**ವಿತ್ರಸ್ತಾರಿ** – ಅರಿ ಅಂದರೆ ಷಡ್ವರ್ಗವನ್ನು ಹೆದರಿಸಿದವನು, ಜಿನೇಶ್ವರ
**ವಿದಗ್ಧ** – ಸುಡಲ್ಪಟ್ಟ; ಪಂಡಿತ
**ವಿದಗ್ಧಶರಣ** – ವಿದ್ವಾಂಸರಿಗೆ ಆಶ್ರಯವಿತ್ತವನು
**ವಿದಗ್ಧೆ** – ಜಾಣೆ; ತಾಪಕ್ಕೊಳಗಾದವಳು
**ವಿದಲ(ಳ)ನ** – ಹೋಳುಮಾಡುವ; ಸೀಳುವಿಕೆ
**ವಿದಲಿ(ಳಿ)ತ** – ಅರಳಿದ; ಸೀಳಿದ
**ವಿದಳಿಸು** – ಸೀಳು; ನಾಶಮಾಡು
**ವಿದಾರಕ** – ಸೀಳುವವನು
**ವಿದಾರಣ** – ಸೀಳುವಿಕೆ; ಕೊಲ್ಲುವಿಕೆ; ವಿನಾಶಕ
**ವಿದಾರಣಂಗೆಯ್** – ಸೀಳು; ಕೊಲ್ಲು
**ವಿದಾರಿಸು** – ಸೀಳು
**ವಿದಾಹ** – ವಿಶೇಷ ತಾಪ
**ವಿದಿತ** – ತಿಳಿದಿರುವ; ಪ್ರಸಿದ್ಧವಾದ
**ವಿದೀರ್ಣಹೃದಯೆ** – ಭಗ್ನಹೃದಯೆ; ದುಃಖಿತೆ
**ವಿದೂರ** – ತುಂಬ ದೂರವಿರುವ
**ವಿದೇಹ** – ದೇಹತ್ಯಾಗ ಮಾಡಿದವನು; ಒಂದು ದೇಶ; (ಜೈನ) ಜಂಬೂದ್ವೀಪದ ಏಳು ವಿಭಾಗಗಳಲ್ಲಿ ಒಂದು
**ವಿದ್ದ** – ಏಟು; ತೂತು ಮಾಡಿದ; ಪ್ರತಿಕೃತಿ
**ವಿದ್ಧಿ** – ವೃದ್ಧಿ, ಏಳಿಗೆ
**ವಿದ್ದಂಬರೆ** – ಅಕೃತಿಯನ್ನು ರಚಿಸು
**ವಿದ್ಯಾತ್ರಯಾಧೀಶ** – ಷಟ್ಖಂಡಾಗಮದ ಮೊದಲ ಮೂರು ಖಂಡಗಳನ್ನು ತಿಳಿದವನು
**ವಿದ್ಯಾದಯಿತ** – ವಿದ್ಯೆಯ ಒಡೆಯ
**ವಿದ್ಯಾಧರ** – ವಿದ್ಯೆಯನ್ನು ಬಲ್ಲವನು; ದೇವತೆ; (ಜೈನ) ಭೋಗಭೂಮಿಯಲ್ಲಿನ ಒಂದು ಜನವರ್ಗ
**ವಿದ್ಯಾಧರಕರಣ** – ಆಕಾಶಕ್ಕೆ ನೆಗೆಯುವ ವಿದ್ಯೆ
**ವಿದ್ಯಾಧಿಗಮನ** – ವಿದ್ಯೆಯನ್ನು ಕಲಿಯುವುದು
**ವಿದ್ಯಾನಿಧಿ** – ವಿದ್ಯೆಯನ್ನೇ ಸಂಪತ್ತಾಗಿ ಹೊಂದಿರುವವನು
**ವಿದ್ಯಾಪಾರಗ** – ವಿದ್ವಾಂಸ
**ವಿದ್ಯಾಪ್ರತ್ಯಯ** – ತನ್ನವಿದ್ಯೆಯ ಬಗೆಗಿನ ವಿಶ್ವಾಸ
**ವಿದ್ಯಾಮದ** – ತನ್ನ ಜ್ಞಾನದ ಬಗೆಗಿನ ಅಹಂಕಾರ
**ವಿದ್ಯಾವಿಡಂಬನ** – ಮಾಯಾವೇಷ
**ವಿದ್ಯುದ್ವಲಯ** – ಮಿಂಚಿನ ಅಂಚು
**ವಿದ್ಯುಲ್ಲತೆ** – ಮಿಂಚು
**ವಿದ್ಯುಲ್ಲೇಖೆ** – ಮಿಂಚಿನ ಗೆರೆ
**ವಿದ್ಯೋತ** – ದೀಪ್ತಿ; ಶೋಭೆ; ಪ್ರಖ್ಯಾತಿ

**ವಿದ್ರಾವಣ** – ಓಡಿಸುವವನು
**ವಿದ್ರುತ** – ಚೆದುರಿದ; ಕ್ಷೋಭೆಗೊಂಡ
**ವಿದ್ರುಮ** – ಹವಳ
**ವಿದ್ರುಮದ್ರುಮ** – ಹವಳದ ಮರ
**ವಿದ್ರುಮಲತೆ** – ಹವಳದ ಬಳ್ಳಿ
**ವಿದ್ರುಮವಲ್ಲರಿ** – ವಿದ್ರುಮಲತೆ
**ವಿದ್ರುಮಾಧರ** – ಹವಳದಂತೆ ಕೆಂಪಾದ ತುಟಿ
**ವಿದ್ರೂಪ** – ವಿಕಾರ ರೂಪ
**ವಿದ್ಯಾಧರಕರಣ** – ಆಕಾಶಕ್ಕೆ ನೆಗೆಯಲು ಅವಲಂಬಿಸುತ್ತಿದ್ದ ಕರಣ, ಎಂದರೆ ವಿಶೇಷ ರೀತಿಯ ಹಸ್ತಪಾದಚಲನೆ
**ವಿದ್ಯಾವಿಡಂಬನ** – ಮಾಯಾವೇಷ
**ವಿದ್ಯೋತ** – ಹೊತ್ತಿ ಉರಿಯುವ
**ವಿದ್ವದಾಸ್ಥಾಯಿಕೆ** – ವಿದ್ವಾಂಸರ ಸಭೆ
**ವಿದ್ವಿಟ್ತತಿ** – ಶತ್ರುಸಮೂಹ
**ವಿದ್ವಿಷ** – ದ್ವೇಷ; ಶತ್ರು
**ವಿದ್ವಿಷ್ಟ** – ದ್ವೇಷವುಳ್ಳ; ಶತ್ರು
**ವಿದ್ವಿಷ್ಟಬಲ** – ಶತ್ರುಪಡೆ
**ವಿದ್ವಿಷ್ಟವಿದ್ರಾವಣ** – ಶತ್ರುಗಳನ್ನು ಸದೆಬಡಿಯುವವನು
**ವಿಧವತೆ** – ವಿಧವೆ
**ವಿಧಾತೃ(ತ್ರ)** – ಬ್ರಹ್ಮ
**ವಿಧಾತೃಯೋಗ** – ಬ್ರಹ್ಮ ಸಂಘಟನೆ; ದೈವಯೋಗ
**ವಿಧಾತೃ(ತ್ರ)ವಶ** – ಅದೃಷ್ಟ
**ವಿಧಿ** – ಆಜ್ಞೆ; ಶಾಸ್ತ್ರಕರ್ಮ; ಕ್ರಮ; ಅದೃಷ್ಟ
**ವಿಧಿದಾನ** – (ಜೈನ) ಒಂದು ಗರ್ಭಾನ್ವಯಕ್ರಿಯೆ; ತನ್ನನ್ನು ಪೂಜಿಸಿದ ದೇವತೆಗಳನ್ನು ಸನ್ಮಾನಿಸುವುದು
**ವಿಧಿಪೂರ್ವ(ಕ)** – ನಿಯಮಾನುಸಾರವಾಗಿ
**ವಿಧಿಲಿಪಿ** – ಹಣೆಯಬರಹ
**ವಿಧಿವಾಹನ** – ಹಂಸ
**ವಿಧು** – ಚಂದ್ರ; ಬ್ರಹ್ಮ
**ವಿಧುಂತುದ** – ಚಂದ್ರಪೀಡಕ, ರಾಹು
**ವಿಧುಬಿಂಬ** – ಚಂದ್ರಬಿಂಬ
**ವಿಧುರ** – ವಿರಹಿ; ವಿಕ್ಷುಬ್ಧ
**ವಿಧುರಿತ** – ಅಳವಡಿಸಿದ
**ವಿಧುರೆ** – ತೊಂದರೆಗೀಡಾದವಳು
**ವಿಧುಲೇಖೋತ್ತಂಸ** – ಚಂದ್ರಧರ, ಶಿವ
**ವಿಧೂತ** – ಅಲ್ಲಾಡಿಸುವ
**ವಿಧೃತ** – ಹಿಡಿದ, ತಾಳಿದ; ಪಡೆದ
**ವಿಧೆಯತ್ವ** – ವಿಧೆಯತೆ; ಅಧೀನತೆ
**ವಿಧೃತ** – ಬೇರ್ಪಟ್ಟ
**ವಿಧ್ಧ** – ಚಿತ್ರ
**ವಿಧ್ವಂಸನ** – ವಿನಾಶ
**ವಿಧ್ವಸ್ತ** – ಧ್ವಂಸಗೊಂಡ; ಚೆದುರಿಹೋದ
**ವಿನತ** – ಬಾಗಿದ; ನಮಸ್ಕರಿಸಿದ; ಕುಗ್ಗಿದ
**ವಿನತಾ** – ವಿನತಾದೇವಿ (ಕಶ್ಯಪ ಋಷಿಯ ಹೆಂಡತಿ)
**ವಿನತಾನಂದನ** – ಗರುಡ
**ವಿನತಾಪುತ್ರ** – ವಿನತಾನಂದನ
**ವಿನತಿ** – ಬಾಗುವಿಕೆ; ನಮಸ್ಕಾರ
**ವಿನಮನ್ಮಸ್ತಕ** – ಬಾಗಿದ ತಲೆಯುವನು
**ವಿನಮ್ರ** – ಬಾಗಿದ; ಪೂಜ್ಯ
**ವಿನಯಂಗೆಡು** – ಸೌಜನ್ಯವನ್ನು ಕಳೆದುಕೊ
**ವಿನುಪ್ರಹೀಣ** – ವಿನಯವಿಲ್ಲದವನು
**ವಿನಯವತ್ತಳೆ** – ಬಿನ್ನವತ್ತಳೆ
**ವಿನಯವಿನಮಿತ** – ಸೌಜನ್ಯದಿಂದ ಬಾಗಿದ
**ವಿನಿರ್ಜಿತ** – ಗೆಲ್ಲಲ್ಪಟ್ಟ
**ವಿನಿವರ್ತನ** – ವಾಪಸಾಗುವಿಕೆ
**ವಿನಿವೃತ್ತ** – ವಾಪಸಾದ; ತ್ಯಜಿಸಿದ
**ವಿನಿವೃತ್ತಿ** – ಕೊನೆ; ಸಾವು
**ವಿನಿಹತ** – ನಿವಾರಿಸಿದ
**ವಿನುತಂಬೆಱು** – ಪ್ರಸಿದ್ಧವಾಗು
**ವಿನೂತ** – ಹೊಸದಾದ; ಶ್ರೇಷ್ಠವಾದ
**ವಿನೇಯಜನ** – ಸಜ್ಜನ; (ಜೈನ) ಧರ್ಮದಲ್ಲಿ ಶ್ರದ್ಧೆಯುಳ್ಳವನು
**ವಿನೇಯಾರ್ಥಿ** – ವಿನೇಯಜನ
**ವಿನೋದ್ಯಮಾನೆ** – ಸಂತೋಷಗೊಂಡವಳು
**ವಿನ್ನಾಣ** – (ವಿಜ್ಞಾನ) ನೆನಪು
**ವಿನ್ಯಸ್ತ** – ಇರಿಸಿದ; ಕೆತ್ತಿದ
**ವಿನ್ಯಾಸ** – ಇಡುವಿಕೆ; ಜೋಡಣೆ
**ವಿಪಂಚಿ** – ವೀಣೆ; ಜಗುಲಿ
**ವಿಪಕ್ಷ** – ವಿರೋಧ ಪಕ್ಷ
**ವಿಪಕ್ಷಿ** – ಎದುರಾಳಿ
**ವಿಪಣಿ** – ಮಾರುವ ಸ್ಥಳ; ಅಂಗಡಿ ಬೀದಿ
**ವಿಪಣಿಪದ** – ಅಂಗಡಿಸಾಲು
**ವಿಪಣಿಮಾರ್ಗ** – ಅಂಗಡಿಬೀದಿ
**ವಿಪತ್ತಿ(ತ್ತು)** **ಕೇಡು**–
**ವಿಪನ್ನ** – ವಿಪತ್ತಿಗೆ ಸಿಲುಕಿದ; ಸತ್ವಹೀನ
**ವಿಪನ್ನತೆ** – ಕಷ್ಟ
**ವಿಪನ್ನಪೀಡಿತೆ** – ತೊಂದರೆಗೊಳಗಾದವಳು
**ವಿಪರೀತ** – ತಿರುವುಮುರುವು; ಅಧಿಕ; ಅಸಾಧಾರಣ
**ವಿಪರೀತಕ** – ವಿರುದ್ಧವಾದ
**ವಿಪರ್ಯಯ** – ಬದಲಾವಣೆ, ವ್ಯತ್ಯಾಸ
**ವಿಪಶ್ಚಿಜ್ಜನ** – ವಿದ್ವಾಂಸಸಮೂಹ, ವಿದ್ವಜ್ಜನ
**ವಿಪಶ್ಚಿತ್** – ವಿದ್ವಾಂಸ
**ವಿಪಾಕವಿಚಯ** – (ಜೈನ) ಒಂದು ಬಗೆಯ ಧರ್ಮಧ್ಯಾನ, ಕರ್ಮಫಲದ ಚಿಂತನೆ
**ವಿಪಿನ** – ಕಾಡು
**ವಿಪಿನಚರ** – ಕಾಡಿನಲ್ಲಿರುವ ಮನುಷ್ಯ; ಕಾಡುಪ್ರಾಣಿ
**ವಿಪಿನಭವ** – ಕಾಡುಪ್ರಾಣಿ
**ವಿಪುಲ(ಳ)** – ವಿಸ್ತಾರವಾದ; ಶ್ರೇಷ್ಠವಾದ; ಮೇರುಪರ್ವತ; ಭೂಮಿ

**ವಿಪುಲಮತಿ** – (ಜೈನ) ಮನಃಪರ್ಯಯಜ್ಞಾನದ ಒಂದು ಬಗೆ, ಇತರರ ಮನಸ್ಸನ್ನು ಅರಿಯುವುದು
**ವಿಪುಲಾದ್ರಿ** – (ಜೈನ) ಮಹಾವೀರನ ಉಪದೇಶದ ಸ್ಥಳ, ಮೇರು
**ವಿಪುಲಪ್ರಜ್ಞ** – ಅತಿಶಯ ಜ್ಞಾನಿ
**ವಿಪುಳಭುಜ** – ಬಲಿಷ್ಠ ತೋಳುಗಳುಳ್ಳವನು
**ವಿಪುಳಾಂತರ** – ಭೂಮಿ
**ವಿಪ್ರ** – ಬ್ರಾಹ್ಮಣ; ಪುರೋಹಿತ
**ವಿಪ್ರಕರ್ಷ** – ಅಂತರ
**ವಿಪ್ರತಿಪತ್ತಿ** – ವ್ಯತ್ಯಾಸ; ವಿರೋಧ
**ವಿಪ್ರಲಂಭ** – ಅಗಲಿಕೆ
**ವಿಪ್ರಲಾಪ** – ವ್ಯರ್ಥ ಮಾತು; ಗೋಳಾಟ
**ವಿಪ್ರಲಾಪಂಗೆಯ್** – ಅಸಂಬದ್ಧವಾಗಿ ಮಾತಾಡು
**ವಿಪ್ರಾವತಿ** – ಅಗ್ರಹಾರ
**ವಿಫಲ** – ನಿರರ್ಥಕ
**ವಿಬುಧ** – ವಿದ್ವಾಂಸ; ದೇವತೆ
**ವಿಬುಧಪತಿ** – ವಿದ್ವಾಂಸಶ್ರೇಷ್ಠ; ದೇವೇಂದ್ರ
**ವಿಬುಧವರ** – ದೇವೇಂದ್ರ
**ವಿಬುಧವರಾಶ್ವ** – ಉಚ್ಚೈಶ್ರವಸ್ಸು
**ವಿಬುಧಾಶ್ರಯ** – ವಿದ್ವಾಂಸರಿಗೆ ಆಶ್ರಯ ನೀಡುವ
**ವಿಬುಧೇಶ್ವರ** – ವಿಬುಧವರ
**ವಿಭಂಗ** – ಭಗ್ನಗೊಂಡ
**ವಿಭಂಗಜ್ಞಾನ** – (ಜೈನ) ಮಿಥ್ಯಾಜ್ಞಾನ
**ವಿಭವ** – ಸಂಪತ್ತು; ವೈಭವ
**ವಿಭವೋದಯ** – ಹಣವಂತ
**ವಿಭಾ** – ಕಾಂತಿ, ಪ್ರಭೆ
**ವಿಭಾತ** – ಬೆಳಗಿನ ಹೊತ್ತು
**ವಿಭಾವ** – ಭಾವಸ್ಫುರಣೆಯ ಕಾರಣ
**ವಿಭಾವರಿ** – ರಾತ್ರಿ
**ವಿಭಾವಿಸು** – ನಿಶ್ಚೈಸು
**ವಿಭಾಸ** – ದೀಪ್ತಿ
**ವಿಭಾಸಿ** – ಕಾಂತಿಯುಕ್ತವಾದ
**ವಿಭಿನ್ನ** – ಬೇರೆ ಬಗೆಯ; ಒಡೆದುಹೊದ
**ವಿಭೀಷಣ** – ತುಂಬ ಹೆದರಿಕೆ ಉಂಟುಮಾಡುವ; ರಾವಣನ ತಮ್ಮ
**ವಿಭು** – ಒಡೆಯ; ಸರ್ವವ್ಯಾಪಿಯಾದ
**ವಿಭೂತ** – ಅಲ್ಲಾಡಿಸಲಾದ
**ವಿಭೂತಿ** – ವೈಭವ; ಐಶ್ವರ್ಯ; ಬೂದಿ
**ವಿಭೂಷಣ** – ಆಭರಣ
**ವಿಭೂಷಣಾಂಗ** – (ಜೈನ) ದಶಕಲ್ಪಕುಜಗಳಲ್ಲಿ ಒಂದು, ಬೇಕಾದ ಆಭರಣಗಳನ್ನು ನೀಡುವಂಥದು
**ವಿಭೇದ** – ಒಡೆಯುವಿಕೆ; ಭಿನ್ನತೆ
**ವಿಭ್ರಂಶ** – ವಿನಾಶ
**ವಿಭ್ರಮ** – ಸುತ್ತುವಿಕೆ, ಅಲೆದಾಟ; ವಿಲಾಸ
**ವಿಭ್ರಮವತಿ** – ವಿಲಾಸವತಿ
**ವಿಭ್ರಾಂತಿ** – ಭ್ರಮೆ
**ವಿಭ್ರಾಜ(ಜಿ)** – ಕಾಂತಿ
**ವಿಮರ್ದ(ನ)** – ಪುಡಿಮಾಡುವುದು
**ವಿಮಲ** – ಕಳಂಕರಹಿತ; ಅಪ್ಪಟ; ಪವಿತ್ರವಾದ; (ಜೈನ) ಹದಿಮೂರನೆಯ ತೀರ್ಥಂಕರ
**ವಿಮಲ(ಳ)ಗುಣ** – ಪರಿಶುದ್ಧ ಸ್ವಭಾವ
**ವಿಮಲತೆವೆಱು** – ಪರಿಶುದ್ಧವಾಗು
**ವಿಮಾನ** – ಅರಮನೆ; ದೇವತೆಗಳ ವಾಹನ; (ಜೈನ) ಮೇಲುಲೋಕದ ಒಂದು **ವಾಸಸ್ಥಾನ**–
**ವಿಮುಕ್ತ** – ತೊರೆದ; ಬಿಡುಗಡೆಗೊಂಡ
**ವಿಮುಕ್ತಾಹಾರ** – ವಿಮುಕ್ತ+ಆಹಾರ, ಆಹಾರವನ್ನು ತೊರೆಯುವುದು, ಉಪವಾಸ; ವಿಮುಕ್ತಾ+ಹಾರ, ಹಾರವನ್ನು ಪಡೆಯದಿರುವುದು
**ವಿಮುಖವೃತ್ತಿ** – ಉದಾಸೀನತೆ
**ವಿಮೋಹ** – ವಿಶೇಷ ಮೋಹ; ಭ್ರಾಂತಿ
**ವಿಮೋಹಮೃಗ** – ಮೋಹವೆಂಬ ಪ್ರಾಣಿ
**ವಿಮೋಹನವಿದ್ಯೆ** – ಸಮ್ಮೋಹಿನಿ
**ವಿಯಚ್ಚಕ್ರ** – ಆಕಾಶ ಮಂಡಲ
**ವಿಯಚ್ಚರ(ರಿ)** – ಗಗನಸಂಚಾರಿ, ಖೇಚರ(ರೆ)
**ವಿಯಚ್ಚಿಕುರ** – ಶಿವ
**ವಿಯತ್** – ಆಕಾಶ
**ವಿಯತ್ತಲ(ಳ)** – ಆಕಾಶ
**ವಿಯತ್ಪಥ** – ಗಗನಪಥ, ಆಕಾಶಮಾರ್ಗ
**ವಿಯದ್ಗಾಮಿ** – ವಿಯಚ್ಚರ(ರಿ)
**ವಿಯನ್ನಂದನ** – ಇಂದ್ರವನ
**ವಿಯನ್ಮಹೀರುಹ** – ಕಲ್ಪವೃಕ್ಷ
**ವಿಯೋಗಿ(ನಿ)** – ವಿರಹಿ(ಣಿ)
**ವಿರಕ್ತಿ** – ವೈರಾಗ್ಯ
**ವಿರಚನ(ನೆ)** – ಕಟ್ಟುವಿಕೆ, ನಿರ್ಮಾಣ
**ವಿರಚಿಸು** – ನಿರ್ಮಿಸು; ಕೃತಿರಚನೆ ಮಾಡು
**ವಿರತಿ** – ಮುಕ್ತಾಯ; ವೈರಾಗ್ಯ
**ವಿರಮಣ** – ಕೊನೆ
**ವಿರಲ(ಳ)** – ಅಪರೂಪವಾದ; ಸ್ವಲ್ಪ;
**ವಿರಸಕರ** – ಅಹಿತಕರ
**ವಿರಹ** – ಅಗಲಿಕೆ
**ವಿರಹವಿಧುರ** – ಅಗಲಿಕೆಯ ದುಃಖದಿಂದ ಕೂಡಿದ
**ವಿರಳವೇಗಿ** – (ಜೈನ) ಒಂದು ವಿದ್ಯೆ
**ವಿರಾಗ** – ಬಣ್ಣರಾಗಿತ್ಯ; ವೈರಾಗ್ಯ
**ವಿರಾಜಿ** – ಹೊಳೆಯುವುದು
**ವಿರಾಜಿತ** – ಹೊಳೆಯುವ
**ವಿರಾಮ** – ವಿಶ್ರಾಂತಿ
**ವಿರಿಂಚಿ** – ಬ್ರಹ್ಮ
**ವಿರುತಿ** – ಶಬ್ದ
**ವಿರುದ್ಧವೃತ್ತ** – ವಿರುದ್ಧವಾದ ನಡತೆಯವನು
**ವಿರುದ್ಧಾತ್ಮಕ** – ವಿರೋಧದಿಂದ ಕೂಡಿದ

**ವಿರುದ್ಧಾರ್ಥಕ** – ಪ್ರತಿಕೂಲ ಪರಿಣಾಮದ; ಬೇರೆ ಅರ್ಥ ನೀಡುವ
**ವಿರುವತ್** – ಶಬ್ದಮಾಡುವ
**ವಿರೂಕ್ಷ** – ಭಯಂಕರವಾದ
**ವಿರೂಕ್ಷಿಸು** – ಅಸಹ್ಯಪಟ್ಟುಕೊ
**ವಿರೂಪತೆ** – ರೂಪವಿಲ್ಲದಿರುವಿಕೆ
**ವಿರೂಪೆ** – ಕುರೂಪಿ
**ವಿರೋಚನ** – ಅಗ್ನಿ
**ವಿರೋಧಿ** – ಹಗೆ; ಪ್ರತಿಭಟಿಸುವವನು
**ವಿರ್ದು** – ಬಿರ್ದು, ಔತಣ
**ವಿಲಂಘನ** – ಮೀರುವಿಕೆ; ಹಾರುವಿಕೆ
**ವಿಲಂಘಿಸು** – ಹಾರು; ಮೀರು
**ವಿಲಂಬಿಸು** – ತಡಮಾಡು; ಜಾರು
**ವಿಲಕ್ಷ್ಯ** – ಅಚ್ಚರಿ
**ವಿಲಪನ** – ರೋದನ; (ಜೈನ) ಆರ್ತಧ್ಯಾನದ ಒಂದು ಬಗೆ
**ವಿಲ(ಳ)ಯ** – ಪ್ರಳಯ; ಲೀನಗೊಳ್ಳುವುದು
**ವಿಲಯಾನಲ** – ಪ್ರಳಯಕಾಲದ ಬೆಂಕಿ
**ವಿಲಯಾನಿಲ** – ಪ್ರಳಯಕಾಲದ ಗಾಳಿ
**ವಿಲಸತ್** – ಹೊಳೆಯುವ; ಶ್ರೇಷ್ಠವಾದ
**ವಿಲ(ಳ)ಸನ** – ಹೊಳಪು, ಕಾಂತಿ
**ವಿಲಾ(ಳಾ)ಸ** – ಸೊಬಗು; ಬೆಡಗು
**ವಿಲಾಸಂಬೆಱು** – ಶೋಭೆಯನ್ನು ಹೊಂದು
**ವಿಲಾಸ(ಸಾ)ವಾಸ** – ವಿಹಾರಸ್ಥಳ; ಸೊಬಗಿನ ಆಗರ
**ವಿಲಾ(ಳಾ)ಸಿ(ನಿ)** – ಬೆಡಗಿ
**ವಿಲಿಖಿತ** – ಬರೆಯಲ್ಪಟ್ಟ; ಚಿತ್ರಿತವಾದ
**ವಿಲಿಪ್ತ** – ಬಳಿದ, ಲೇಪಿಸಿದ
**ವಿಲೀನ** – ತನ್ಮಯಗೊಂಡ; ಸೇರಿಹೋದ
**ವಿಲುಪ್ತ** – ನಾಶಗೊಂಡ
**ವಿಲುಲಿ(ಳ)ತ** – ಒದರಿದ; ಬಿದ್ದುಹೋದ; **ಅಲುಗಾಡುವ**–
**ವಿಲೂನನಾಸಿ** – ಮೂಕೊರತೆಮರ
**ವಿಲೇಪನ** – ಬಳಿಯುವಿಕೆ
**ವಿಲೋ(ಳೋ)ಕನ** – ನೋಟ
**ವಿಲೋಕನಂಗೆಯ್** – ನೋಡು
**ವಿಲೋಚನವಾರಿ** – ಕಣ್ಣೀರು
**ವಿಲೋಚನಾಂಬು** – ವಿಲೋಚನವಾರಿ
**ವಿಲೋಪ** – ವಿನಾಶ; (ಜೈನ) ಅಸ್ತೇಯವಿರೋಧಿಕ್ರಿಯೆ
**ವಿಲೋಪನ** – ತೊರೆಯುವುದು
**ವಿಲೋಹಿತವಿಲೋಚನರುಚಿ** – ಕೆಂಪಾದ ಕಣ್ಣಿನ ಕಾಂತಿ
**ವಿಲೋಲ** – ಚಂಚಲ
**ವಿವಕ್ಷಿತ** – ಅಂದುಕೊಂಡ; ಬಯಸಿದ
**ವಿವಕ್ಷಿಸು** – ಬಯಸು
**ವಿವಕ್ಷೆ** – ಆಸೆ; ವಿವರಣೆ
**ವಿವಕ್ಷೆಗೆಯ್** – ಆಲೋಚಿಸು
**ವಿವರ** – ಬಿರುಕು; ಬಿಲ; ತೂತು
**ವಿವಶಿಸು** – ವಶಮಾಡಿಕೊ
**ವಿವಾಹ** – ಹೊತ್ತುಕೊಂಡು ಹೋಗುವಿಕೆ; ಮದುವೆ
**ವಿವಾಹಗೃ(ಗೇ)ಹ** – ಮದುವೆಯ ಮನೆ
**ವಿವಾಹವೇದಿ** – ಮದುವೆಯ ಜಗುಲಿ
**ವಿವಿಕ್ತ** – ನಿರ್ಜನವಾದ
**ವಿವಿಕ್ತಾವಾಸ** – (ಜೈನ) ಜೈನಮುನಿಯ ಏಕಾಂತವಾಸ
**ವಿವಿಧ** – ನಾನಾ ಬಗೆಯ
**ವಿವೇಕವಿಕಲ(ಳ)** – ವಿವೇಕವಿಲ್ಲದವನು
**ವಿವೇಕಶೂನ್ಯ** – ವಿವೇಕವಿಕಲ(ಳ)
**ವಿಶಂಕಟ** – ದೊಡ್ಡದಾದ; ಅಗಲವಾದ
**ವಿಶಂಕೆ** – ಸಂದೇಹ
**ವಿಶದ** – ಬೆಳ್ಳಗಿರುವ; ಸ್ಪಷ್ಟವಾದ
**ವಿಶದೋದಕ** – ವಿಶದ+ಉದಕ, ತಿಳಿನೀರು
**ವಿಶರಾರು** – ನಶ್ವರವಾದುದು
**ವಿಶಸನ** – ಕೊಲೆ
**ವಿಶಸನರಂಗ** – ಯುದ್ಧರಂಗ
**ವಿಶಾಲ್ಯ** – ವಿಸ್ತಾರವಾದ
**ವಿಶಿಖ** – ಬಾಣ
**ವಿಶೀರ್ಣ** – ಭಗ್ನವಾದ; ನಷ್ಟವಾದ; ಒಡೆದ
**ವಿಶೇಷಕ**– ಮುಖ್ಯನಾದವನು
**ವಿಶೇಷಭಾಷಿತ** – ವಿಶಿಷ್ಟ ನುಡಿ
**ವಿಶೋಧಿ** – ನೈರ್ಮಲ್ಯ
**ವಿಶ್ರಮ(ಣ)** – ವಿಶ್ರಾಂತಿ
**ವಿಶ್ರಮವನ** – ವಿಶ್ರಾಂತಿ ಪಡೆಯಲು ಇರುವ ಉದ್ಯಾನ
**ವಿಶ್ರಾಂತಿಪದ** – ನೆಲೆ
**ವಿಶ್ರಾಣನ** – ದಾನ
**ವಿಶ್ರಾಣನವಿನೋದ** – ದಾನಸಂತೋಷಿ
**ವಿಶ್ರುತ** – ಕೀರ್ತಿ ಪಡೆದವನು
**ವಿಶ್ಲಥ** – ಸಡಿಲಿಹೋದ
**ವಿಶ್ಲೇಷ** – ಅಗಲಿಕೆ; ಬೇರೆಯಾಗುವುದು
**ವಿಶ್ವ**– ಸಮಸ್ತ
**ವಿಶ್ವಂಭರಾ(ರೆ)** – ಭೂಮಿ
**ವಿಶ್ವಕದ್ರು** – ಬೇಟೆನಾಯಿ
**ವಿಶ್ವಕರ್ಮ** – ಸೃಷ್ಟಿಕರ್ತ
**ವಿಶ್ವಪ್ರವೇಶಿನಿ** – (ಜೈನ) ಒಂದು ವಿದ್ಯೆ
**ವಿಶ್ವವಿಶ್ವಂಭರೆ** – ಸಕಲ ಭೂಮಂಡಲ
**ವಿಶ್ವಾಧಾರ** – ದೇವರು; ಚಕ್ರವರ್ತಿ
**ವಿಶ್ವಾಸಂಗೆಯ್** – ನಂಬು
**ವಿಶ್ವೇಕ್ಷಣ** – ಎಲ್ಲವನ್ನೂ ನೋಡುವವನು
**ವಿಷ** – ನೀರು; ನಂಜು
**ವಿಷಣ್ಣಮನ** – ಖಿನ್ನಮನಸ್ಕ
**ವಿಷಣ್ಣಹೃದಯ** – ವಿಷಣ್ಣಮನ
**ವಿಷದೃಷ್ಟಿ** – ವಿಷಸೂಸುವ ನೋಟ
**ವಿಷಧರ** – ಸರ್ಪ; ಮೋಡ

**ವಿಷಧಿ** – ಸಮುದ್ರ
**ವಿಷನಾಗ** – ವಿಷಸರ್ಪ; ನೀರಾನೆ
**ವಿಷಮ** – ಕ್ರೂರ; ಸಮವಲ್ಲದ
**ವಿಷಮಪರೀಷಹ** – (ಜೈನ) ಸಾಧನೆಯ ಮಾರ್ಗದಲ್ಲಿ ಬರುವ ತೊಂದರೆ
**ವಿಷಮಪ್ರದೇಶ** – ಅಡ್ಡಿಗಳಿರುವ ಸ್ಥಳ
**ವಿಷಮಬಾಣ** – ಮನ್ಮಥ
**ವಿಷಮಭುಜಂಗಿ** – ಭಯಂಕರವಾದ (ಹೆಣ್ಣು)ಹಾವು
**ವಿಷಮಮತಿ** – ನೀಚಬುದ್ಧಿ
**ವಿಷಮರ್ತು** – ಅನುಕೂಲಕರವಲ್ಲದ ಕಾಲ
**ವಿಷಮವಿಷಧರ** – ಉಗ್ರಸರ್ಪ; ಶಿವ
**ವಿಷಮಶೀಲ** – ದುರ್ನಡತೆ; ಕೆಟ್ಟ ನಡತೆಯವನು
**ವಿಷಮಾಟವಿ** – ಭೀಕರ ಅರಣ್ಯ
**ವಿಷಮಾಯುಧ** – ವಿಷಮಬಾಣ
**ವಿಷಮಾಸ್ತ್ರ** – ವಿಷಮಬಾಣ
**ವಿಷಮಾಹಿ** – ಉಗ್ರ ಸರ್ಪ
**ವಿಷಮೋರಗ** – ವಿಷಮಾಹಿ
**ವಿಷಯ** – ದೇಶ; ರಾಜ್ಯ; ಇಂದ್ರಿಯ ಸುಖ
**ವಿಷಯಕಾಂಕ್ಷೆ** – ಭೋಗಾಕಾಂಕ್ಷೆ; ರಾಜ್ಯಾಭಿಲಾಷೆ
**ವಿಷಯಲೋಭ** – ವಿಷಯಕಾಂಕ್ಷೆ
**ವಿಷಯವಿರತಿ** – ಇಂದ್ರಿಯಾಭಿಲಾಷೆಯಲ್ಲಿ ಆಸಕ್ತಿಯಿಲ್ಲದಿರುವುದು
**ವಿಷಯಸಂಧಿ** – ದೇಶದ ಎಲ್ಲೆ, ಗಡಿ
**ವಿಷಯಸುಖ** – ಇಂದ್ರಿಯಸುಖ
**ವಿಷಯಾಂತರ** – ನಾಡಿನ ಮಧ್ಯಪ್ರದೇಶ
**ವಿಷಯಾಮಿಷ** – ವಿಷಯಸುಖ
**ವಿಷಯಾಸಕ್ತಿ** – ವಿಷಯಸುಖ
**ವಿಷವಕ್ತ್ರ** – ವಿಷದ ಮುಖವುಳ್ಳದ್ದು; ಹಾವು
**ವಿಷವಲ್ಲಿ** – ವಿಷದ ಬಳ್ಳಿ
**ವಿಷಜ್ವಾಲೆ** – ವಿಷವುಗುಳುವ ಬೆಂಕಿ
**ವಿಷವಿಷಮ** – ವಿಷದಿಂದ ಕೂಡಿ ಭಯಂಕರವಾದ
**ವಿಷಾಣ** – ಕೊಂಬು; ದಂತ
**ವಿಷಾದಗರ್ಭ** – ದುಃಖಮಯವಾದ
**ವಿಷಾದಚಿತ್ತ** – ದುಃಖದಿಂದ ಕೂಡಿದ ಮನಸ್ಸು
**ವಿಷಾದವಿಧುರ** – ದುಃಖದಿಂದ ಚಿಂತೆಗೊಳಗಾದವನು
**ವಿಷಾನನ** – ವಿಷಮುಖ, ಹಾವು
**ವಿಷಾಪಹಾರ** – ವಿಷವನ್ನು ಹೋಗಲಾಡಿಸುವ
**ವಿಷಾವಿಲದಂಷ್ಟ್ರ** – ವಿಷದ ಹಲ್ಲುಗಳಿಂದ ಕೂಡಿದ
**ವಿಷೋದ್ಗಾರಿ** – ವಿಷ+ಉದ್ಗಾರಿ, ವಿಷವುಗುಳುವ; ನೀರನ್ನು ಸೂಸುವ
**ವಿಷೋರಗ** – ವಿಷಸರ್ಪ
**ವಿಷೋರಗಧಾರಿ** – ಶಿವ
**ವಿಷ್ಕಂಭ** – ವಿಸ್ತಾರ; ಅಡ್ಡಿ
**ವಿಷ್ಕರ** – ಎಕ್ಕೆ ಗಿಡ
**ವಿಷ್ಕಿರ** – ಹಕ್ಕಿ
**ವಿಷ್ಟಪ** – ಪ್ರಪಂಚ
**ವಿಷ್ಟಪಜನ** – ಮಾನವರು
**ವಿಷ್ಟರ** – ಆಸನ
**ವಿಷ್ಟಿ** – ಬಿಟ್ಟಿ ಕೆಲಸ
**ವಿಷ್ಣುಪದ** – ಆಕಾಶ
**ವಿಸ** – ತಾವರೆಯ ದಂಟು; (ವಂಶ) ಕೊಳಲು
**ವಿಸಂಯೋಜಿಸು** – ಬಿಟ್ಟುಬಿಡು, ತ್ಯಜಿಸು
**ವಿಸಂವಾದ** – ಚರ್ಚೆ; ಪಕ್ಷಿಕೂಜನ
**ವಿಸಮವಾದಂಗೆಯ್** – ಚರ್ಚೆಮಾಡು
**ವಿಸಟಂಬರಿ(ರ್)** –ಅಲೆದಾಡು
**ವಿಸಟಂಬಾಯ್** – ವಿಸಟಂಬರಿ(ರ್)
**ವಿಸರ** – ಸಮೂಹ
**ವಿಸರುಹ** – ತಾವರೆ
**ವಿಸರ್ಜಿಸು** – ಕಳಿಸಿಕೊಡು, ಬೀಳ್ಕೊಡು
**ವಿಸರ್ಪಣ** – ಹರಡುವಿಕೆ
**ವಿಸಸನ** – ವಿಶಸನ; ಕೊಲೆ
**ವಿಸಸನರಂಗ** – ಯುದ್ಧರಂಗ
**ವಿಸಾರ** – ವೈಶಾಲ್ಯ
**ವಿಸಾರಿ** – ಪ್ರವಾಹ
**ವಿಸೃಮರ** – ಹರಿಯುವ
**ವಿಸ್ತರಿಗೆ** – ಹಾಸಿಗೆ
**ವಿಸ್ತಾರ** – ಹರಹು; ಮರದ ಕೊಂಬೆ
**ವಿಸ್ತಾರಕ** – ವೃದ್ಧಿಗೊಳಿಸುವುದು
**ವಿಸ್ತಾರಿಸು** – ಹರಡು; ಬೆಳೆಸು; ವರ್ಣಿಸು
**ವಿಸ್ತೀರ್ಣ** – ವಿಸ್ತಾರ; ಹರಡುವುದು
**ವಿಸ್ಫಾರ** – ಅತಿಶಯವಾದ
**ವಿಸ್ಫುರತ್** – ಹೊಳೆಯುವ; ಬೆಳೆಯುವ
**ವಿಸ್ಫುರಿತ** – ವೃದ್ಧಿಗೊಂಡ
**ವಿಸ್ಫುಲಿಂಗ** – ಬೆಂಕಿಯ ಕಿಡಿ
**ವಿಸ್ಮಯ** – ಆಶ್ಚರ್ಯ; ಬೆರಗು
**ವಿಸ್ಮಯಪದ** – ಆಶ್ಚರ್ಯವುಂಟುಮಾಡುವ ವಸ್ತು
**ವಿಸ್ಮಯಾಕ್ರಾಂತ** – ಬೆರಗುವಟ್ಟವನು
**ವಿಸ್ಮಯಾವೃತ** – ವಿಸ್ಮಯಾಕ್ರಾಂತ
**ವಿಸ್ಮರಣ** – ಮರೆವು
**ವಿಸ್ಮಾಪಕ** – ಆಶ್ಚರ್ಯಕರ
**ವಿಸ್ಮೃತಿ** – ವಿಸ್ಮರಣ
**ವಿಸ್ರಂಭ** – ನಂಬಿಕೆ
**ವಿಸ್ರಂಭದೋಷ** – ನಂಬಿಕೆ ದ್ರೋಹ
**ವಿಸ್ರಾಂತ** – ನಿಂತ; ವ್ಯಾಪಿಸಿರುವ
**ವಿಹಂಗ(ಮ)** – ಹಕ್ಕಿ
**ವಿಹಂಗಾಧಿಪ** – ಪಕ್ಷಿರಾಜ; ಗರುಡ
**ವಿಹಗ** – ಹಕ್ಕಿ
**ವಿಹರಣ** – ವಿಹಾರ ಮಾಡುವುದು; (ಜೈನ) ಒಂದು ಗರ್ಭಾನ್ವಯಕ್ರಿಯೆ, ಧರ್ಮಚಕ್ರವನ್ನು ಹಿಂಬಾಲಿಸುತ್ತ ವಿಹರಿಸುವುದು
**ವಿಹರಣಕ್ರಿಯೆ** – (ಜೈನ) ಧರ್ಮೋಪದೇಸಕ್ಕಾಗಿ **ವಿಹಾರ ಕೈಗೊಳ್ಳುವುದು**–
**ವಿಹರಣವಿಧಿ** – ವಿಹರಣಕ್ರಿಯೆ

**ವಿಹಾಯ(ಸ)** – ಆಕಾಶ; ಪಕ್ಷಿ
**ವಿಹಾಯಸರಿದಂಬು** – ಆಕಾಶಗಂಗೆಯ ನೀರು
**ವಿಹಾಯೋಗತಿ** – (ಜೈನ) ಆಕಾಶಗಮನ ಸಾಮರ್ಥ್ಯ
**ವಿಹಿತ** – ಜೋಡಿಸಿದ
**ವಿಹಿತಾರ್ಥ** – ಸಾರ್ಥಕ
**ವಿಹೃತದೋಷ** – ದೋಷರಹಿತ
**ವಿಹೃತಿ** – ವಿಹಾರ, ಆಟ
**ವಿಹ್ವಲ(ಳ)** – ದಿಗ್ಭ್ರಮೆಗೊಂಡವನು
**ವಿಹ್ವಲಿ(ಳಿ)ತ** – ದುಃಖಿತನಾದ
**ವಿಳಯಜಳಧಿ** – ಪ್ರಳಯಕಾಲದ ಸಮುದ್ರ
**ವಿಳಯಜ್ವಾಲೆ** – ಪ್ರಳಯಕಾಲದ ಬೆಂಕಿ
**ವಿಳಸನ** – ಪ್ರಕಾಶಮಾನವಾದ
**ವಿಳಾಸಂಗೆಡು** – ಉತ್ಸಾಹ ಕಳೆದುಕೊ
**ವಿಳಾಸಯಾನ** – ವೈಯಾರದ ನಡಿಗೆ
**ವಿಳಾಸವನ** – ವಿಹಾರಕ್ಕಾಗಿರುವ ಉದ್ಯಾನ
**ವಿಳಾಸಿನಿ** – ರಸಿಕ ಹೆಂಗಸು
**ವಿಳಾಸಿನೀವಾಟ** – ಸೂಳೆಗೇರಿ
**ವಿಳಾಸೋಲ್ಲಾಸಿ** – ವಿನೋದಪ್ರಿಯ; ರಸಿಕ
**ವಿಳೋಳ** – ಚಲಿಸುತ್ತಿರುವ
**ವೀಚಿ** – ತೆರೆ, ಅಲೆ
**ವೀಚಿಮರಣ** – ಕ್ಷಿಪ್ರಮರಣ
**ವೀಚೀಚಯ** – ಅಲೆಗಳ ಮಾಲೆ
**ವೀಚೀಮಾಲೆ** – ವೀಚೀಚಯ
**ವೀಜನ** – ಗಾಳಿ ಬೀಸುವಿಕೆ; ಬೀಸಣಿಗೆ
**ವೀಟಿ(ಕೆ)** – ವೀಳೆಯ, ತಾಂಬೂಲ
**ವೀಣೆಯ** – ತೋಪು
**ವೀತರಾಗ** – ರಾಗದ್ವೇಷರಹಿತನಾದವನು, ವಿರಕ್ತ
**ವೀತಾಂಕುಶ** – ನಿರಂಕುಶ ವ್ಯಕ್ತಿ
**ವೀತಿಹೋತ್ರ** – ಅಗ್ನಿ
**ವೀಧಿ** – ದಾರಿ
**ವೀಪ್ಸೆ** – ಬಯಕೆ
**ವೀರಗೋಷ್ಠಿ** – ಶೂರರ ಗುಂಪು
**ವೀರಚರಿತ** – ಶೌರ್ಯದ ನವಳಿಕೆಯುಳ್ಳವನು
**ವೀರಜನನಿ** – ವೀರನನ್ನು ಹೆತ್ತ ತಾಯಿ
**ವೀರಪ(ವ)ಟ್ಟ** – ಸೇನಾಧಿಪತ್ಯ ಸೂಚಕ ಹಣೆಪಟ್ಟಿ
**ವೀರಭೋಜ್ಯ** – ವೀರರು ಅನುಭವಿಸಲು ಯೋಗ್ಯವಾದ
**ವೀರರಸ** – ಶೌರ್ಯದ ಭಾವನೆ; ನವರಸಗಳಲ್ಲಿ ಒಂದು
**ವೀರವಾಕ್ಯ** – ಪರಾಕ್ರಮ ನುಡಿ
**ವೀರಶಯ್ಯೆ** – (ಜೈನ) ಸಲ್ಲೇಖನ ವ್ರತಧಾರಿಗಳು ಮಲಗುವ ಜಾಗ
**ವೀರಸಂಸ್ತರಾರೂಢ** – (ಜೈನ) ಸಲ್ಲೇಖನ ವ್ರತಧಾರಿಯಾಗಿ ಮಲಗಿದವನು
**ವೀರಸಂಸ್ಥಾನಾರೂಢ** – ವೀರಸಂಸ್ತರಾರೂಢ
ವೀರಸುತಜನನಿ – ವೀರಜನನಿ–
**ವೀರಸ್ವಾಮಿ** – ಅರ್ಹಂತ, ಜಿನ
**ವೀರಾಂಗದ** – ಶೂರರ ತೋಳ ಕಂಕಣ
**ವೀರಾಗ್ರಗಣ್ಯ ೦ ವೀರಶ್ರೇಷ್ಠ–**
**ವೀರಾಗ್ರಣಿ** – ವೀರಾಗ್ರಗಣ್ಯ
**ವೀರಾವತಾರ** – ವೀರಭದ್ರ; ಮಹಾ ಪರಾಕ್ರಮಿ
**ವೀರಾಳಾಪ** – ಶೌರ್ಯದ ನುಡಿ, ವೀರರ ಮಾತು
**ವೀರುಧ(ತ್)** – ಪೊದೆ; ಹಬ್ಬಿದ ಬಳ್ಳಿ
**ವೀರ್ಯ** – ಪರಾಕ್ರಮ; ಕೆಚ್ಚು; (ಜೈನ) 'ಅಷ್ಟಗುಣ'ಗಳಲ್ಲಿ ಒಂದು, ಸಿದ್ಧಿ
**ವೀರ್ಯಾಂತರಾಯ** – (ಜೈನ) ಅಂತರಾಯ **ಕರ್ಮಗಳಲ್ಲಿ ಒಂದು; ಒಂದು ವಿಘ್ನ–**
**ವೀಸ** – ನಾಲ್ಕು ಕಾಣಿಗಳ ಬೆಲೆಯ ಒಂದು ನಾಣ್ಯ
**ವೀಳಗೆ** – ವೀಳೆಯದೆಲೆ; ತಾಂಬೂಲ
**ವೀಳೆಯಂಗೊಡು** – ತಾಂಬೂಲ ನೀಡು; ಆಮಂತ್ರಿಸು
**ವೃಂತ** – ಬೀಸಣಿಗೆ
**ವೃಂದಾರಕ** – ಸಮೂಹ; ಮುಖ್ಯನಾದ; ಸುಂದರವಾದ; ದೇವತೆ
**ವೃಂದಾರಕದಾರಕ** – ಸುಂದರ ಬಾಲಕ
**ವೃಕ** – ತೋಳ
**ವೃಕೋದರ** – ತೋಳದಂತೆ ಹೊಟ್ಟೆಯುಳ್ಳವನು; ಭೀಮಸೇನ
**ವೃಕ್ಷಭಂಜನ** – ಮರಗಳನ್ನು ಮುರಿಯುವಿಕೆ
**ವೃಕ್ಷವೀರ್ಯ** – ಮರಗಳ ರಸ
**ವೃಜಿನ** – ಬಾಗಿದ; ಪಾತಕ
**ವೃಜಿನಬಂಧ** – ಪಾಪದ ಬಿಗಿತ
**ವೃಜಿನಾರಿ** – ಪಾಪದ ಶತ್ರು
**ವೃತ** – ಆವರಿಸಲ್ಪಟ್ಟ; ಸುತ್ತುವರಿದ
**ವೃತಾಳವಡೆ** – ಬೇತಾಳಗಳ ಸಮೂಹ
**ವೃತಿ** – ಗುಂಡಗಿರುವುದು
**ವೃತ್ತ** – ವರ್ತುಲ; ನಡವಳಿಕೆ
**ವೃತ್ತಕ** – ಸುದ್ದಿ
**ವೃತ್ತಕುಚ** – ದುಂಡಾದ ಮೊಲೆ
**ವೃತ್ತಪಾಠಕ** – ಮಂಗಳಶ್ಲೋಕ ಪಾಠಕ
**ವೃತ್ತಿ** – ಸಂಪಾದನೆ; ಕೈಶಿಕಾದಿ ವೃತ್ತಿ (ರಸಾದಿಗುಣವಾದ ಪದಜೋಡಣೆ); ನಡತೆ; ರೀತಿ; ವಿವರಣೆ
**ವೃತ್ತಿಪರಿಸಂಖ್ಯಾನ** – (ಜೈನ) ಆರು ಬಗೆಯ ಬಾಹ್ಯತಪಸ್ಸುಗಳಲ್ಲಿ ಒಂದು; ಸಿಕ್ಕಿದರೆ ಮಾತ್ರ ಆಹಾರ ಸೇವಿಸುವುದು
**ವೃತ್ತಿಲಾಭ** – (ಜೈನ) ಒಂದು ಬಗೆಯ ಕ್ರಿಯೆ; ಉಪವಾಸವಿದ್ದು ಜಿನದೀಕ್ಷೆ ಪಡೆದ ನಂತರದ ಪಾರಣೆ
**ವೃತ್ರಹ** – ಇಂದ್ರ
**ವೃತ್ರಹಮಂತ್ರಿ** – ಇಂದ್ರನ ಮಂತ್ರಿ, ಬೃಹಸ್ಪತಿ
**ವೃಥೆಯಾಗು** – ವ್ಯರ್ಥವಾಗು
**ವೃಥೆಗಳೆ** – ವ್ಯರ್ಥಗೊಳಿಸು
**ವೃಥೋಕ್ತಿ** – ನಿರರ್ಥಕ ನುಡಿ
**ವೃದ್ಧಕದಬ** – ಹಿರಿಯರ ಗುಂಪು

**ವೃದ್ಧರಾಜ್ಯ** – ವೃದ್ಧಿಪಡೆದ ರಾಜ್ಯ
**ವೃದ್ಧಿ** – ಏಳಿಗೆ; ಬಡ್ಡಿ
**ವೃದ್ಧೋಕ್ಷ** – ಮುದಿ ಎತ್ತು
**ವೃಷ(ಭ)** – ಎತ್ತು; ಇಂದ್ರ; ನೀತಿ; ಪುಣ್ಯ
**ವೃಷದ್ವಿಪ** – ಇಂದ್ರನ ಆನೆ, ಐರಾವತ ವೃಷ(ಭ)ಧ್ವಜ – ಈಶ್ವರ–
**ವೃಷಭನಾಥ** – (ಜೈನ) ಆದಿ ತೀರ್ಥಂಕರ
**ವೃಷಭಾಚಲ(ಳ)** – (ಜೈನ) ಚಕ್ರವರ್ತಿಗಳು ತಮ್ಮ ವಿಜಯಪ್ರಶಸ್ತಿಯನ್ನು ಕೆತ್ತಿಸುವ ಪರ್ವತ
**ವೃಷಭಾದ್ರಿ** – ವೃಷಭಾಚಲ(ಳ)
**ವೃಷಮುಖ** – ಎತ್ತಿನ ಮುಖ; (ಜೈನ) ಒಬ್ಬ ಯಕ್ಷ
**ವೃಷಸ್ಕಂಧ** – ಎತ್ತಿದ ಹೆಗಲು; ವಿಶಾಲ ಭುಜ
**ವೃಷಾಂಕ** – ಶಿವ
**ವೃಷ್ಟಿ** – ಸುರಿಯುವಿಕೆ; ಮಳೆ
**ವೃಷ್ಯ** – ಕಾಮೋದ್ದೀಪಕ
**ವೆಚ್ಚಿಸು** – ವ್ಯಯಮಾಡು
**ವೆಜ್ಜ** – ತೂತು, ರಂಧ್ರ
**ವೆಱಂ** – ಖಂಡಿತವಾಗಿ
**ವೇಗಿ** – ಸುದ್ದಿವಾಹಕ
**ವೇಡೆ(ಯ)** – ಕುದುರೆಯ ಓಟ
**ವೇಣೀಬಂಧ** – ಜಡೆ
**ವೇಣೀಸಂಹಾರ** – ಬಿಚ್ಚಿದ ಕೂದಲನ್ನು ಜಡೆಯಾಗಿ ಹೆಣೆಯುವುದು
**ವೇಣೀಸ್ರಕ್** – ಮುಡಿದ ಹೂ
**ವೇಣು** – ಬಿದಿರು; ಕೊಳಲು
**ವೇಣುಬೀಜ** – ಬಿದಿರಕ್ಕಿ
**ವೇತಂ(ದಂ)ಡ** – ಆನೆ
**ವೇತ್ರಾಸನ** – ಬೆತ್ತದ ಪೀಠ
**ವೇತ್ತೃತೆ** – ಜ್ಞಾನ
**ವೇತ್ರ** – ಬೆತ್ತ; ಕೋಲು
**ವೇತ್ರಖೇಟಕ** – ಬಿದಿರಿನ ಗುರಾಣಿ
**ವೇತ್ರದಂಡಧರ** – ಕೋಲು ಹಿಡಿದ ದ್ವಾರಪಾಲಕ
**ವೇತ್ರವಿಷ್ಟರ** – ಬೆತ್ತದ ಆಸನ
**ವೇತ್ರಾಸನ** – ವೇತ್ರವಿಷ್ಟರ
**ವೇದ** – ಜ್ಞಾನ; ನಾಲ್ಕು ವೇದಗಳು; (ಜೈನ) ದ್ವಾದಶಾಂಗಗಳುಳ್ಳ ಶಾಸ್ತ್ರ
**ವೇದಕ** – (ಜೈನ) ಸಮ್ಯಕ್ತ್ವದ ಒಂದು ಪ್ರಭೇದ
**ವೇದನೀಯ** – (ಜೈನ) ಸುಖದುಃಖಕಾರಕ ಕರ್ಮ
**ವೇದನೆ** – ನೋವು
**ವೇದನೆಗೊಳ್** – ನೋವನ್ನು ಹೊಂದು
**ವೇದವಿದ** – ವೇದಗಳನ್ನು ತಿಳಿದವನು
**ವೇದಾಂಗ** – ವೇದದ ಅಭ್ಯಾಸಕ್ಕೆ ಬೇಕಾದ ಶಿಕ್ಷಾ, ಛಂದಸ್ಸು, ವ್ಯಾಕರಣ, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಆರು ಭಾಗಗಳು
**ವೇಧಸ್ಸಂಕಲ್ಪ** – ವಿಧಿನಿಯಮ
**ವೇಪ(ನ)(ಥು)**– ನಡುಕ
**ವೇಲಾ(ಳಾ)** – ದಡ
**ವೇಲಾ(ಳಾ)ವನ** – ಕರಾವಳಿಯ ಕಾಡು
**ವೇಲೆ(ಳೆ)** – ಕಡಲ ತೀರ; ಅಲೆ, ಉಬ್ಬರ, ಪ್ರವಾಹ
**ವೇಲ್ಲಿತ** – ಕಂಪಿಸುವ
**ವೇಶಂತ** – ಚಿಕ್ಕ ಹೊಂಡ
**ವೇಶ** – ಮನೆ
**ವೇಶ್ಮ** – ಮನೆ; ನಿಲಯ
**ವೇಶ್ಯಾವಾಟ(ಟಿ)** – ಸೂಳೆಗೇರಿ
**ವೇಷಭೂಷಣ** – ಉಡುಗೆತೊಡುಗೆ
**ವೇಷ್ಟನ** – ಬೇಲಿ; ಕಿರೀಟ
**ವೇಷ್ಟಿಸು** – ಸುತ್ತುಗಟ್ಟು
**ವೇಸರ** – ಹೇಸರಗತ್ತೆ
**ವೇಸರಿಗಟ್ಟಿ** – ವೇಸರ
**ವೇಳೆಗಾಯ್** – ಸಮಯಕ್ಕಾಗಿ ಕಾಯಿ
**ವೇಳೆಗೊಳ್** – ಸಮಯಪ್ರತಿಜ್ಞೆ ಮಾಡು;
**ವೇಳೆವಾಳಯಾಗು; ಸಮಯ ಹೊಂದು; ಕಟ್ಟುಪಾಡು ಅನುಸರಿಸು–**
**ವೇಳೆತನ** – ಸೇವಕವೃತ್ತಿ
**ವೇಳೆವಾಟಿ** – ಯಜಮಾನ ಸತ್ತಾಗ ಸಾಯುವ ಪ್ರತಿಜ್ಞೆಯುಳ್ಳ ಲೆಂಕ
**ವೇಹಾರ** – ವ್ಯವಹಾರ
**ವೈಕಕ್ಷಮಾಲೆ** – ಕಂಠದಿಂದ ಎದೆಯ ಮೇಲೆ ಎಡದಿಂದ ಬಲಕ್ಕೆ ಅಡ್ಡಲಾಗಿ ಹಾಕಿಕೊಂಡಿರುವ ಹಾರ
**ವೈಕರ್ತನ** – ಸೂರ್ಯನ ಮಗ; ಕರ್ಣ
**ವೈಕುರ್ವಣ** – ಬದಲಾಗುವ; (ಜೈನ) ರೂಪಾಂತರ ವಿದ್ಯೆ
**ವೈಕೃತ** – ವಿಕಾರಗೊಂಡ
**ವೈಕ್ರಿಯಕ(ಶರೀರ)** – (ಜೈನ) ಜೀವರುಗಳ ಒಂದು ಶರೀರಭೇದ, ಸ್ಥೂಲಶರೀರದಲ್ಲಿ ಬದಲಾವಣೆ ಮಾಡುವ ಸೂಕ್ಷ್ಮಶರೀರ
**ವೈಖಾನಸ** – ವಾನಪ್ರಸ್ಥದಲ್ಲಿರುವವನು; ಒಬ್ಬ ಋಷಿ
**ವೈಜನನ** – ಹೆರಿಗೆಯ ತಿಂಗಳು
**ವೈಜಯಂತ** – (ಜೈನ) ದೇವತೆಗಳ ಒಂದು ವರ್ಗ
**ವೈಜಯಂತಿ** – ಧ್ವಜ
**ವೈಜಯಂತೀದ್ವಾರ** – (ಜೈನ) ವಿಜಯಾರ್ಧಪರ್ವತದ ದಕ್ಷಿಣ ದ್ವಾರ
**ವೈಜಯಂತೀ(ತ)ವಿಮಾನ** – (ಜೈನ) ಲೋಕಾಕಾಶದ ತುದಿಯ ಪುಣ್ಯವಂತರ ವಾಸಸ್ಥಾನ
**ವೈಡೂರ್ಯ** – ನವರತ್ನಗಳಲ್ಲಿ ಒಂದು; (ಜೈನ) ಒಂದು ಪರ್ವತದ ಹೆಸರು
**ವೈತಸವೃತ್ತಿ** – ವಿನಮ್ರ ನಡವಳಿಕೆ
**ವೈತಾಲಿ(ಳ)** – ಮಾಯಾವಿದ್ಯೆ, ಅದರ ಅಧಿದೇವತೆ
**ವೈತಾಲಿ(ಳ)ಕ** – ಹಾಡುವವನು
**ವೈದ** – ವಿದ್ವಾಂಸ
**ವೈದಗ್ಧ್ಯಜನ** – ವಿದ್ವಾಂಸಸಮೂಹ
**ವೈನತೇಯ** – ಗರುಡ(ಪಕ್ಷಿ)

**ವೈಪಥ** – ಕೆಟ್ಟ ಹಾದಿ
**ವೈಭಾತಿಕ** – ಬೆಳಗುಜಾವ
**ವೈಭಾತಿಕಸಮೀರ** – ಬೇಲಗಿನ ತಂಗಾಳಿ
**ವೈಮಾನಿಕ** – ವಿಮಾನದಲ್ಲಿ ಸಂಚರಿಸುವ; (ಜೈನ) ಒಂದು ದೇವತಾವರ್ಗ
**ವೈಯಾಕರಣ** – ವ್ಯಾಕರಣಪಂಡಿತ
**ವೈಯಾಪೃತ್ಯ** – (ಜೈನ) ಒಂದು ಬಗೆಯ ಅಂತರಂಗದ ತಪಸ್ಸು
**ವೈಯಾಪತ್ಯಂಗೆಯ್** – ಉಪಚಾರಮಾಡು, ಶುಶ್ರೂಷಿಸು
**ವೈರಸ್ಯ** – ವಿರಸದಿಂದ ಕೂಡಿದುದು
**ವೈವಧಿಕ** – ಸರಕನ್ನು ಹೊತ್ತು ಮಾರುವವನು
**ವೈವಸ್ವತ** – ಸೂರ್ಯನ ಮಗ, ಯಮ; ಏಳನೆಯ ಮನು
**ವೈಶಂಪಾಯನ** – ಒಂದು ಸರೋವರದ ಹೆಸರು
**ವೈಶಾಖಸ್ಥಾನ** – ಯುದ್ಧದಲ್ಲಿ ನಿಲ್ಲುವ ಒಂದು ಭಂಗಿ; ನಾಟ್ಯದ ಒಂದು ಭಂಗಿ
**ವೈಶ್ರವಣ** – ಕುಬೇರ
**ವೈಶ್ವಾನರ** – ಬೆಂಕಿ, ಅಗ್ನಿ
**ವೈಷಮ್ಯ** – ಏರುಪೇರು
**ವೈಷ್ಣವ** – ವಿಷ್ಣುಶಕ್ತಿ
**ವೈಷ್ಣವಾಸ್ತ್ರ** – ನಾರಾಯಣಾಸ್ತ್ರ
**ವೈಹಾಯಸ** – ಆಕಾಶ
**ವ್ರಾತ** – ಸಮೂಹ
**ವ್ರೀಡೆ** – ಲಜ್ಜೆ
**ವ್ಯಂಜನ** – ನಂಜಿಕೊಳ್ಳುವ ಪದಾರ್ಥ; (ಜೈನ) ಕೆಟ್ಟ ಲಕ್ಷಣ
**ವ್ಯಂತರ** – (ಜೈನ) ದೇವತೆಗಳ ಒಂದು ಗುಂಪು
**ವ್ಯಗ್ರ** – ತೊಡಗಿದ; ವಿಶೇಷಾಸಕ್ತಿ
**ವ್ಯಗ್ರಚಿತ್ತ** – ದುಡುಕು ಸ್ವಭಾವದವನು
**ವ್ಯಜನ** – ಬೀಸಣಿಗೆ
**ವ್ಯತಿಕರ** – ಸಂಬಂಧ, ಸಂದರ್ಭ; ಕೇಡು
**ವ್ಯತಿಕ್ರಮ(ಣ)** – ಉಲ್ಲಂಘನೆ
**ವ್ಯತಿರಿಕ್ತತೆ** – ವಿಯೋಗ, ಅಗಲಿಕೆ
**ವ್ಯತಿರೇಕ** – ವ್ಯತಿರಿಕ್ತತೆ
**ವ್ಯತಿಹಾರ** – ವಿನಿಮಯ, ಅದಲುಬದಲು ಮಾಡಿಕೊಳ್ಳುವುದು
**ವ್ಯತೀತ** – ಆಗಿಹೋದ
**ವ್ಯಪಗತ** – ಬೇರೆಯಾದ
**ವ್ಯಪದೇಶ** – ನಿಮಿತ್ತ
**ವ್ಯಪಾಕೃತ** – ಬಿಡುಗಡೆಗೊಂಡ
**ವ್ಯಪಾಯ(ಯಿ)** – ಇಲ್ಲದಾಗುವುದು; ಮರಣ
**ವ್ಯಪೇಕ್ಷೆಗೆಯ್** – ಆಸೆಪಡು
**ವ್ಯಪೇತ** – ಅಗಲಿದ, ದೂರಾದ
**ವ್ಯಪೇತತೆ** – ಇಲ್ಲದಿರುವಿಕೆ
**ವ್ಯಭಿಚರಿಸು** – ಅಡ್ಡದಾರಿ ಹಿಡಿ
**ವ್ಯರ್ಥತೆ** – ನಿಸ್ಸಾರ್ಥಕತೆ
**ವ್ಯಪಾಯ** – ಅದೃಶ್ಯವಾಗುವಿಕೆ
**ವ್ಯವಧಾನ** – ಅಡ್ಡಿ
**ವ್ಯವಸಾಯಿ** – ಉದ್ಯೋಗಿ
**ವ್ಯವಹರಣ** – ರೂಢಿ, ಬಳಕೆ
**ವ್ಯವಹಾರಕಾಲ** – (ಜೈನ) ಕಾಲದ ಒಂದು ಬಗೆ
**ವ್ಯವಹಿತ** – ಮರೆಮಾಡಿದ
**ವ್ಯವಹೃತಿ** – ವ್ಯವಹರಣ
**ವ್ಯಸನ** – ಕೆಲಸ; ಆಸಕ್ತಿ; ದುಃಖ
**ವ್ಯಸನಿ** – ದುಶ್ಚಟಕ್ಕೊಳಗಾದವನು
**ವ್ಯಸ್ತ** – ಪ್ರತ್ಯೇಕ; ಭಿನ್ನವಾದ
**ವ್ಯಳೀಕ** – ಇಲ್ಲದ, ಸುಳ್ಳಾದ
**ವ್ಯಾಕೀರ್ಣ** – ಚೆಲ್ಲಾಪಿಲ್ಲಿಯಾದ; ಹರಡಿಕೊಂಡ
**ವ್ಯಾಖ್ಯಾನಶಾಲೆ** – ಉಪನ್ಯಾಸಮಂದಿರ
**ವ್ಯಾಘಾತ** – ಪೆಟ್ಟು, ಹೊಡೆತ
**ವ್ಯಾಘ್ರಕೇತನ** – ಹುಲಿಯ ಚಿಹ್ನೆಯ ಬಾವುಟವುಳ್ಳವನು, ಶಲ್ಯ
**ವ್ಯಾಜ** – ನೆವ, ಕಾರಣ; ಕಪಟ
**ವ್ಯಾಜೋಕ್ತಿ** – ಕಪಟದ ಮಾತು
**ವ್ಯಾತ್ಯುಕ್ಷಿ** – ಜಲಕ್ರೀಡೆ
**ವ್ಯಾಧನಿವಾಸ** – ಬೇಡರ ಹಟ್ಟಿ
**ವ್ಯಾಧಿನಿರ್ಹರಣ** – ರೋಗನಿವಾರಣೆ
**ವ್ಯಾಪಾರ** – ಚಟುವಟಿಕೆ; ಕಾರ್ಯ
**ವ್ಯಾಪೃತ(ತೆ)** – ನಿರತನಾದವನು(ಳು)
**ವ್ಯಾಪೃತಿ** – ನಿರತವಾಗಿರುವುದು; ವ್ಯಾಪಾರ
**ವ್ಯಾಬಾಧೆ** – ಕಾಟ; ರೋಗ
**ವ್ಯಾಭಾಸಿ** – ಹೊಳಪು
**ವ್ಯಾಮೋಹ** – ಗಾಢ ಮೋಹ; ಒಂದು ಕಾಮಾವಸ್ಥೆ
**ವ್ಯಾಯಾಮ** – ಸಾಧನೆ; ದೇಹ ದಣಿವು
**ವ್ಯಾಲಭಿವಾಲ** – ಅಲ್ಲಾಡುವ ಬಾಲ
**ವ್ಯಾಲೋಲ(ಳೋಳ)** – ಚಲಿಸುತ್ತಿರುವ
**ವ್ಯಾವರ್ಣನೆ** – ವಿಶೇಷ ವರ್ಣನೆ
**ವ್ಯಾವೃತ** – ಮರೆಮಾಡಿದ, ಮುಚ್ಚಿಹಾಕಿದ
**ವ್ಯಾವೃತ್ತಿ** – ಪ್ರತ್ಯೇಕಗೊಳಿಸುವುದು
**ವ್ಯಾಸಕ್ತ** – ವಿ+ಆಸಕ್ತ, ತೊಡಗಿದ; ನಿರತ
**ವ್ಯಾಹಾರ** – ಶಬ್ದ; ಉಚ್ಚಾರಣೆ
**ವ್ಯಾಳ** – ದುಷ್ಟ ಮೃಗ
**ವ್ಯಾಳಗಜ (ದಂತಿ)** – ತುಂಟ ಆನೆ
**ವ್ಯಾಳೇಭ** – ವ್ಯಾಳಗಜ
**ವ್ಯುಚ್ಛೇದ** – ಕತ್ತರಿಸುವುದು
**ವ್ಯುತ್ಸರ್ಗ** – (ಜೈನ) ಒಂದು ಬಗೆಯ ತಪ; ಶರೀರದ ಮೇಲೆ ಮಮತೆಯಿಲ್ಲದಿರುವುದು
**ವ್ಯುಷ್ಟಿ** – (ಜೈನ) ಒಂದು ಗರ್ಭಾನ್ವಯಕ್ರಿಯೆ; ಮೊದಲ ವರ್ಷದ ಹುಟ್ಟುಹಬ್ಬ
**ವ್ಯೂಢ** – ಹರಹಾದ
**ವ್ಯೂಹ** – ಸೈನ್ಯ; ಸೇನಾ ರಚನೆ
**ವ್ಯೋಕಾರ** – ಕಮ್ಮಾರ
**ವ್ಯೋಮ** – ಆಕಾಶ

**ವ್ಯೋಮಗೇಹ** – ಆಕಾಶವೆಂಬ ಮನೆ
**ವ್ಯೋಮಚರ** – ಗಗನಗಾಮಿ; ದೇವತೆ
**ವ್ಯೋಮಾಪಗೆ** – ಆಕಾಶಗಂಗೆ
**ವ್ರಜ** – ಸಮೂಹ; ಕೊಟ್ಟಿಗೆ
**ವ್ರತ** – ಆಚರಣೆ
**ವ್ರತಚರ್ಯೆ** – (ಜೈನ) ಒಂದು ಗರ್ಭಾನ್ವಯಕ್ರಿಯೆ, ಹಿಂಸಾಚಾರ ವರ್ಜಿಸಿ ಅಧ್ಯಯನ ಕೈಗೊಳ್ಳುವುದು
**ವ್ರತತಿ** – ಬಳ್ಳಿ
**ವ್ರತಹಾನಿ** – ವ್ರತಭಂಗ
**ವ್ರತಾವರಣ** – (ಜೈನ) ಒಂದು ಗರ್ಭಾನ್ವಯಕ್ರಿಯೆ, ಬ್ರಹ್ಮಚರ್ಯವ್ರತತ್ಯಾಗ
**ವ್ರತಿಕ** – (ಜೈನ) ವ್ರತಾನುಷ್ಠಾನಗಳನ್ನು ಮಾಡುವವನು
**ವ್ರೈಹೇಯ** – ಕೆಂಪು ಬತ್ತ; ಬತ್ತದ ಗದ್ದೆ

## ಶ

**ಶಂಕರಸಖ** – ಕುಬೇರ
**ಶಂಕಾಂತರ** – ಸಂದೇಹ
**ಶಂಕಾಕುಲಿ(ಳ)ತ** – ಸಂಶಯದಿಂದ ಪೀಡಿತವಾದ
**ಶಂಕಾವಹ** – ಸಂದೇಹವುಂಟುಮಾಡುವ
**ಶಂಕಿಸು** – ಸಂಶಯಪಡು
**ಶಂಕು** – ಗೂಟ
**ಶಂಖ** – ಪಂಚಮಹಾವಾದ್ಯ;ಗಳಲ್ಲಿ ಒಂದು; ಕುಬೇರನ ನವನಿಧಿಗಲ್ಲಿ ಒಂದು
**ಶಂಖಧ್ವಾನ** – ಶಂಖಧ್ವನಿ
**ಶಂಖಪ್ರಣಾದ** – ಶಂಖಧ್ವಾನ
**ಶಂತನುಜ** – ಶಂತನುವಿನ ಮಗ, ಭೀಷ್ಮ
**ಶಂಪಾ** – ಮಿಂಚು
**ಶಂಬ** – ವಜ್ರಾಯುಧ; ಸಿಡಿಲು
**ಶಂಬಧರ** – ಇಂದ್ರ
**ಶಂಬಪಾಣಿ** – ಶಂಬಧರ
**ಶಂಬಾಪಾತ** – ಸಿಡಿಲಿನ ಹೊಡೆತ
**ಶಂಬರ** – ನೀರು; ಒಬ್ಬ ರಾಕ್ಷಸ
**ಶಂಬರಜಾತ** – ತಾವರೆ
**ಶಂಬರದರ್ಪಧ್ವಂಸಿ** – ಮನ್ಮಥ
**ಶಂಬರಧಿ** – ಸಮುದ್ರ
**ಶಂಬರಸಂಹೃತ್** – ಶಂಬರದರ್ಪಧ್ವಂಸಿ, ಪ್ರದ್ಯುಮ್ನ
**ಶಂಬರಸೂದನ** – ಶಂಬರಸಂಹೃತ್
**ಶಂಬರಾರಿ** – ಮನ್ಮಥ
**ಶಂಬವಿಪಕ್ಷ** – ಶಂಬರಾರಿ
**ಶಂಬಾಯುಧ** – ಇಂದ್ರ
**ಶಂಬೂಕ** – ಕಪ್ಪೆಚಿಪ್ಪು
**ಶಕಟ** – ಬಂಡಿ; ರಥ; ಒಬ್ಬ ರಾಕ್ಷಸ
**ಶಕಟಪ್ರಸಂಹಾರ** – ಶಕಟನನ್ನು ಕೊಂದವನು, ಶ್ರೀಕೃಷ್ಣ
**ಶಕಟವ್ಯೂಹ** – ರಥದ ಆಕಾರದಲ್ಲಿ ಸೇನೆಯನ್ನು ನಿಲ್ಲಿಸುವ ಒಂದು ರಚನೆ
**ಶಕಲ(ಳ)** – ಚೂರು, ತುಂಡು
**ಶಕುಂತ** – ಶಕುನದ ಹಕ್ಕಿ
**ಶಕುನ(ನಿ)** – ಶಕುಂತ
**ಶಕುನಶಾಸ್ತ್ರ** – ಹಕ್ಕಿ; ಭವಿಷ್ಯತ್ತನ್ನು ತಿಳಿಸುವ ಜ್ಞಾನ
**ಶಕುಲ(ಳ)** – ಮೀನು
**ಶಕ್ತಿ** – ಬಲ; ಒಂದು ಆಯುಧ
**ಶಕ್ತಿತ್ರಯ** – ಪ್ರಭು, ಮಂತ್ರ, ಉತ್ಸಾಹ ಎಂಬ ರಾಜನ ಮೂರು ಬಗೆಯ ಶಕ್ತಿಗಳು
**ಶಕ್ತಿಧರ** – ಕುಮಾರಸ್ವಾಮಿ
**ಶಕ್ಯ** – ಸಾಧ್ಯವಾದ
**ಶಕ್ಯಾನುಷ್ಠಾನ** – ಅರ್ಥವನ್ನು ತಿಳಿಯುವ ಪ್ರಯತ್ನ
**ಶಕ್ರ** – ಇಂದ್ರ
**ಶಕ್ರಗೋಪ** – ಮಿಣುಕು ಹುಳು
**ಶಕ್ರಚಾಪ** – ಕಾಮನ ಬಿಲ್ಲು
**ಶಕ್ರಧನು** – ಶಕ್ರಚಾಪ
**ಶಕ್ರನೃತ್ಯ** – (ಜೈನ) ಜಿನ ಜನ್ಮಾಭಿಷೇಕಕಾಲದಲ್ಲಿ ಸೌಧರ್ಮೇಂದ್ರನು ಮಾಡುವ ಆನಂದನೃತ್ಯ
**ಶಕ್ರಾಸ್ತ್ರ** – ಇಂದ್ರನ ಆಯುಧ, ವಜ್ರ
**ಶಕ್ವರ** – ಗೂಳಿ
**ಶಚಿ** – ಇಂದ್ರನ ಪಟ್ಟದರಸಿ
**ಶಣ** – ಸಣಬು
**ಶತಕ್ರತು** – ನೂರು ಯಜ್ಞ; ಇಂದ್ರ
**ಶತಧಾರ** – ನೂರು ಅಲಗುಗಳನ್ನುಳ್ಳುದು; ವಜ್ರಾಯುಧ; ಮೋಡ
**ಶತಧೃತಿ** – ಶತಕ್ರತು; ಬ್ರಹ್ಮ
**ಶತಧೃತಿಪೌತ್ರ** – ಬ್ರಹ್ಮನ ಮೊಮ್ಮಗ, ರಾವಣ
**ಶತಪತ್ರ** – ಕಮಲ
**ಶತಪತ್ರನೇತ್ರ** – ರಾಜೀವಲೋಚನ, ವಿಷ್ಣು
**ಶತಪತ್ರಷಂಡ** – ಕಮಲ ಸರೋವರ
**ಶತಮಖ** – ಶತಕ್ರತು
**ಶತಮನ್ಯು** – ಶತಕ್ರತು
**ಶತಸಂಕುಲೆ** – (ಜೈನ) ಒಂದು ವಿದ್ಯೆ
**ಶತಸಪ್ತತಂತು** – ಶತಕ್ರತು
**ಶತಸಹಸ್ರ** – ಒಂದು ಲಕ್ಷ
**ಶತಹ್ರದ** – ಮಿಂಚು
**ಶತಾಂಗ** – ರಥ
**ಶತಾಂಬಕ** – ಇಂದ್ರ
**ಶತಾಂಬಕಸುತ** – ಇಂದ್ರನ ಮಗ, ಅರ್ಜುನ
**ಶತಾಧ್ವರಿ** – ಶತಕ್ರತು
**ಶತಾರ(ಕಲ್ಪ)** – ವಜ್ರಾಯುಧ; (ಜೈನ) ಅರವತ್ತಮೂರು ಇಂದ್ರಕ(ವಿಮಾನ)ಗಳಲ್ಲಿ ಒಂದು
**ಶತ್ರುಂತಪ** – ಶತ್ರುಗಳಿಗೆ ತಾಪವುಂಟುಮಾಡುವವನು
**ಶತ್ರುಂದಮ** – ಶತ್ರುಗಳನ್ನು ದಮನಮಾಡುವವನು

**ಶತ್ರುಘ್ನ** – ಶತ್ರುಂದಮ; ದಶರಥನ ನಾಲ್ಕನೆಯ ಮಗ
**ಶತ್ರುಸಂಘಾತ** – ವೈರಿಗಳ ಸಮೂಹ
**ಶಫ** – ಗೊರಸು
**ಶಫರ** – ಮೀನು
**ಶಫರಲೋಚನೆ** – ಮೀನಿನಂತೆ ಕಣ್ಣುಳ್ಳವಳು
**ಶಫರೇಕ್ಷಣೆ** – ಶಫರಲೋಚನೆ
**ಶಬ** – (ಶವ) ಹೆಣ
**ಶಬರ** – ಬೇಡರವನು
**ಶಬರಿ** – ಬೇಡ ಹೆಂಗಸು; ರಾಮನ ಭಕ್ತೆ
**ಶಬಲ(ಳ)** – ಚಿತ್ರವರ್ಣ, ಬಣ್ಣ ಬಣ್ಣದ
**ಶಬಾಲಯ** – ಶ್ಮಶಾನ
**ಶಬ್ದದ್ರವ್ಯ** – ಧ್ವನಿಯ ಮೂಲದ್ರವ್ಯ
**ಶಬ್ದಪ್ರವೀಚಾರ** – (ಜೈನ) ಕೇಳುವಿಕೆಯಿಂದಲೇ ಇಂದ್ರಿಯಸುಖವನ್ನು ಹೊಂದುವುದು
**ಶಬ್ದವಿದ್ಯೆ** – ವ್ಯಾಕರಣ
**ಶಬ್ದವೇಧಿ** – ಶಬ್ದ ಕೇಳಿ ಬಾಣ ಬಿಡುವವನು
**ಶಬ್ದಶಾಸ್ತ್ರ** – ಶಬ್ದವಿದ್ಯೆ
**ಶಬ್ದಸಂದೇಹ** – ಪದ ಮತ್ತು ಅರ್ಥಗಳ ಬಗೆಗಿನ ಅನುಮಾನ
**ಶಮನ** – ಪರಿಹಾರ; ಯಮ
**ಶಮೀ** – ಬನ್ನಿಯ ಗಿಡ
**ಶಮ್ಯಾಕ** – ಕಕ್ಕೆ ಗಿಡ
**ಶಯನ** – ನಿದ್ದೆ; ಹಾಸಿಗೆ
**ಶಯನಸದನ** – ಮಲಗುವ ಮನೆ
**ಶಯು** – ಮಹಾಸರ್ಪ
**ಶಯ್ಯಾಗ್ರ** – ಹಾಸಿಗೆ
**ಶಯ್ಯಾತಳ** – ಶಯ್ಯಾಗ್ರ
**ಶರ** – ಬಾಣ; ನೀರು; ಹುಲ್ಲು
**ಶರಚ್ಚಂದ್ರಿಕೆ** – ಶರತ್ಕಾಲದ ಬೆಳುದಿಂಗಳು
**ಶರಜಾಲ** – ಬಾಣಗಳ ಬಲೆ (ಗುಂಪು)
**ಶರಣ್(ಣ)** – ಆಶ್ರಯ
**ಶರಣಾಗತ** – ರಕ್ಷಣೆ ಬಯಸಿ ಬಂದವನು
**ಶರಣಾಗತರಕ್ಷಣ** – ಆಶ್ರಯ ಬಯಸಿ ಬಂದವನನ್ನು ಕಾಪಾಡುವವನು
**ಶರಣಾಗತವಜ್ರಪಂಜರ** – ಆಶ್ರಯ ಬಯಸಿ ಬಂದವನನ್ನು ಬಿಗಿಯಾದ ಪಂಜರದಲ್ಲಿಟ್ಟಂತೆ ಜೋಪಾನವಾಗಿ ಕಾಪಾಡುವವನು
**ಶರಣ್ಯ** – ಆಶ್ರಯದಾತ
**ಶರತ್ಸಮಯ** – ಶರತ್ಕಾಲ
**ಶರದ** – ಶರದೃತು
**ಶರದಂಬರ** – ಶರತ್ಕಾಲದ ನಿರಭ್ರ ಆಕಾಶ
**ಶರದಂಬುದ** – ಶರತ್ಕಾಲದ ಮೋಡ
**ಶರದಭ್ರ** – ಶರತ್ಕಾಲದ ಮೋಡ
**ಶರಧರ** – ಮೋಡ
**ಶರದಾಗಮನ** – ಶರತ್ಕಾಲದ ಆರಂಭ
**ಶರದಾತಪ** – ಶರತ್ಕಾಲದ ಬಿಸಿಲು, ಮಾಗಿಯ ಬಿಸಿಲು
**ಶರಧರ** – ಮೋಡ
**ಶರಣಾಗತರಕ್ಷಣ** – ಆಶ್ರಯ ಬಯಸಿ ಬಂದವನನ್ನು ಕಾಪಾಡುವವನು
**ಶರಧಿ** – ಸಮುದ್ರ; ಬತ್ತಳಿಕೆ
**ಶರನಿಧಿ** – ಶರಧಿ
**ಶರಪಂಜರ** – ಬಾಣಗಳಿಂದ ಮಾಡಿದ ಪಂಜರ
**ಶರಪರಿಣತಿ** – ಬಾಣ ಬಿಡುವುದರಲ್ಲಿನ ನೈಪುಣ್ಯ
**ಶರಭ** – ಸಿಂಹಕ್ಕಿಂತ ಬಲಿಷ್ಠವಾದ ಎಂಟುಕಾಲುಗಳ ಒಂದು ಕಲ್ಪಿಕ ಪ್ರಾಣಿ
**ಶರಭಂಗ** – ಬಾಣದ ತುಂಡು; ನೀರಿನ ತೆರೆ
**ಶರಭರಿಪು** – ಗಂಡಭೇರುಂಡ
**ಶರಮಂಚ** – ಬಾಣಗಳ ಮಂಚ
**ಶರರುಹ** – ತಾವರೆ
**ಶರವಿದ್ಯೆ** – ಧನುರ್ವಿದ್ಯೆ
**ಶರವೃಷ್ಟಿ** – ಬಾಣಗಳ ಮಳೆ
**ಶರವೇದ** – ಶರವಿದ್ಯೆ
**ಶರಶಯ್ಯೆ** – ಬಾಣಗಳ ಹಾಸಿಗೆ
**ಶರಶಲ್ಯ** – ಬಾಣದ ಮೊನೆ
**ಶರತಾಳ** – ನಿಪುಣ ಬಿಲ್ಗಾರ
**ಶರಸಂಧಾನ** – ಬಿಲ್ಲಿಗೆ ಬಾಣವನ್ನು ಹೂಡುವುದು
**ಶರಸ್ತಂಬ** – ಲಾಳದ ಕಡ್ಡಿ; ಜೊಂಡು
**ಶರಾರು** – ದುಷ್ಟ
**ಶರಾಶ್ರಯ** – ಬತ್ತಳಿಕೆ
**ಶರಾಸನ** – ಬಿಲ್ಲು
**ಶರಾಸನಾಗಮ** – ಧನುರ್ವಿದ್ಯೆ
**ಶರಾಸಾರ** – ಶರವೃಷ್ಟಿ
**ಶರೀರದಂಡ** – ದೇಹದಂಡನೆ
**ಶರೀರಪೂಜೆ** – ಸತ್ತವರ ದೇಹಕ್ಕೆ ಮಾಡುವ ಪೂಜೆ
**ಶರೀರಪ್ರತ್ಯಾಖ್ಯಾನ** – (ಜೈನ) ದೇಹದ ಬಗೆಗಿನ ತಿರಸ್ಕಾರ
**ಶರೀರೋಪಾದನ** – ಹುಟ್ಟು
**ಶರ್ಕರಾ** – ಸಕ್ಕರೆ; ನೊರಜುಗಲ್ಲು
**ಶರ್ಕರಾಪ್ರಭೆ** – (ಜೈನ) ಒಂದು ನರಕ
**ಶರ್ಮ** – ನೆಲೆ, ಆಶ್ರಯ; ಸಂತೋಷ
**ಶರ್ವರಿ** – ರಾತ್ರಿ
**ಶರ್ವರೀಶ** – ರಾತ್ರಿಯ ಒಡೆಯ, ಚಂದ್ರ
**ಶರ್ವಾಣಿ** – ಪಾರ್ವತಿ
**ಶಲಭ** – ಮಿಡಿತೆ
**ಶಲಲಿ** – ಮುಳ್ಳುಹಂದಿ
**ಶಲಾಕಾಪುರುಷ** – (ಜೈನ) ಅರವತ್ತು ಮೂವರು ಶ್ರೇಷ್ಠಪುರುಷರು: ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು, ಹನ್ನೆರಡು ಮಂದಿ ಚಕ್ರವರ್ತಿಗಳು, ಒಂಬತ್ತು ಮಂದಿ ಬಲದೇವರು, ಒಂಬತ್ತು ಮಂದಿ

ವಾಸುದೇವರು, ಒಂಬತ್ತು ಮಂದಿ ಪ್ರತಿವಾಸುದೇವರು; ವಿವರಗಳಿಗೆ ನೋಡಿ, 'ತ್ರಿಷಷ್ಟಿಶಲಾಕಾಪುರುಷರು'
**ಶಲಾಕೆ** – ಈಟಿ
**ಶಲಾಟು(ಕ)** – ಮಿಡಿಗಾಯಿ
**ಶಲ್ಕ** – ಚೂರು
**ಶಲ್ಯ** – ಮುಳ್ಳು; ಚುಚ್ಚುವ ಆಯುಧ; ಸಂಕಟಕರ; ಮೂಳೆ
**ಶಲ್ಯಕ** – ಮುಳ್ಳುಹಂದಿ
**ಶಲ್ಯತ್ರಯ** – (ಜೈನ) ವ್ರತಸ್ಥನನ್ನು ಬಾಧಿಸುವ ಮಾಯಾ, ಮಿಥ್ಯಾ, ನಿದಾನ ಎಂಬ ಮೂರು ತೊಂದರೆಗಳು
**ಶಲ್ಯವಿದೂರ** – (ಜೈನ) ಶಲ್ಯತ್ರಯಗಳನ್ನು ನಿವಾರಿಸಿಕೊಂಡವನು
**ಶಶ(ಕ)** – ಮೊಲ
**ಶಶಧರ** – ಚಂದ್ರ
**ಶಶಾಂಕ** – ಚಂದ್ರ
**ಶಶಿಖಂಡ** – ಬಾಲಚಂದ್ರ
**ಶಶಿಮಣಿ** – ಚಂದ್ರಕಾಂತಶಿಲೆ
**ಶಸ್ತ್ರಕರ್ಮ** – ಶಸ್ತ್ರಗಳನ್ನು ಪ್ರಯೋಗಿಸುವುದು
**ಶಸ್ತ್ರವಿಡಂಬ** – ಆಯುಧಗಳ ಅಟಾಟೋಪ
**ಶಸ್ತ್ರವಿದ** – ಆಯುಧಪ್ರಯೋಗ ನಿಪುಣ
**ಶಸ್ತ್ರವ್ರಣ** – ಆಯುಧದಿಂದಾದ ಗಾಯ
**ಶಸ್ತ್ರಶಾಲೆ** – ಆಯುಧಾಗಾರ
**ಶಸ್ತ್ರಾಗ್ನಿ** – ಆಯುಧವು ಸೂಸುವ ಬೆಂಕಿ
**ಶಸ್ತ್ರಾಶಸ್ತ್ರಿ** – ಆಯುಧ ಹಿಡಿದು ಮಾಡುವ ಯುದ್ಧ
**ಶಳ** – ಮುಳ್ಳು; ಮುಳ್ಳು ಹಂದಿ
**ಶಾಂತಾಂತರಂಗ** – ಶಾಂತವಾದ ಮನಸ್ಸು
**ಶಾಂತಿಕ** – ಅನಿಷ್ಟನಿವಾರಣೆಯ ಒಂದು ಕರ್ಮ
**ಶಾಂತಿಕ್ರಿಯೆ** – ಶಾಂತಿಕ
**ಶಾಂತಿಕರ್ಮ** – ಶಾಂತಿಕ
**ಶಾಂತಿಧನ** – ಶಾಂತಿಯನ್ನೇ ಧನವಾಗುಳ್ಳವನು
**ಶಾಂತ್ಯಭಿಷೇಕ** – ಅನಿಷ್ಟನಿವಾರಣೆಗಾಗಿ ದೇವರಿಗೆ ಮಾಡುವ ಅಭಿಷೇಕ
**ಶಾಕಟಿಕ** – ಸರಕು ಬಂಡಿಯವನು
**ಶಾಕವರ್ತಿಕ(ಗೆ)** – ತರಕಾರಿಯ ಒಂದು ಭಕ್ಷ್ಯ
**ಶಾಕಿನಿ** – ಪಿಶಾಚಿ
**ಶಾಕ್ವರ** – ಎತ್ತು
**ಶಾಖಾಚರ** – ಕೊಂಬೆಯ ಮೇಲೆ ಓಡಾಡುವುದು, ಕೋತಿ ಮುಂತಾದವು
**ಶಾಖಾಮೃಗ** – ಕೋತಿ
**ಶಾಖಿ** – ಮರ
**ಶಾಠ್ಯ** – ಹಟ; ಮೋಸ
**ಶಾಡ್ವಲ(ಳ)** – ಗರಿಕೆ; ಹುಲ್ಲು ಹಾಸಲೆ
**ಶಾಣ** – ಸಾಣೆಕಲ್ಲು; ಒರೆಗಲ್ಲು
**ಶಾತ** – ಹರಿತವಾದ
**ಶಾತಕುಂಭ** – ಚಿನ್ನ
**ಶಾತಶರ** – ಹರಿತವಾದ ಬಾಣ
**ಶಾತಾಸ್ತ್ರ** – ಶಾತಶರ
**ಶಾತೋದರಿ** – ತೆಳುವಾದ ಸೊಂಟದವಳು
**ಶಾತ್ರವ** – ಶತ್ರು
**ಶಾತ್ರವಮಂತ್ರಪಂಚಕ** – ರಾಜನು ಶತ್ರುನಿನೊಡನೆ ವ್ಯವಹರಿಸುವಾಗ ಕೈಗೊಳ್ಳಬಹುದಾದ ಕರ್ಮಾರಂಭ, ಪುರುಷದ್ರವ್ಯಸಂಪತ್ತು, ದೇಶಕಾಲವಿಭಾಗ, ವಿನಿಪಾತಪ್ರತೀಕಾರ, ಕಾರ್ಯಸಿದ್ಧಿ ಎಂಬ ಐದು ಉಪಾಯಗಳು
**ಶಾಪಮೋಕ್ಷ** – ಶಾಪದಿಂದ ಬಿಡುಗಡೆ
**ಶಾಬ(ಕ)** – ಮರಿ
**ಶಾಬ್ದಿಕ** – ಶಬ್ದಸಂಬಂಧಿಯಾದ; ಶಬ್ದ; ವ್ಯಾಕರಣಪಂಡಿತ
**ಶಾರದ** – ಶರತ್ಕಾಲ; ಬಿಳಿಯ ತಾವರೆ
**ಶಾರದನೀರದ** – ಶರತ್ಕಾಲದ ಮೋಡ
**ಶಾರಿಕೆ** – ಮೈನಾ, ಗಿಳಿ; ಆನೆಯ ಮೇಲಣ ಜೀನು
**ಶಾರ್ಙ್ಗ(ಚಾಪ)** – ಕೊಂಬಿನಿಂದ ಮಾಡಿದ ಬಿಲ್ಲು; ವಿಷ್ಣುವಿನ ಬಿಲ್ಲು
**ಶಾರ್ಙ್ಗಧರ** – ವಿಷ್ಣು; (ಜೈನ) ವಾಸುದೇವ
**ಶಾರ್ದೂಲ** – ಹುಲಿ
**ಶಾರ್ವರಿ** – ರಾತ್ರಿ; ಅರವತ್ತು ಸಂವತ್ಸರಗಳಲ್ಲಿ ಒಂದು
**ಶಾಲ(ಳ)** – ಮನೆ; ಒಂದು ಬಗೆಯ ಮೀನು; ಕೋಟೆಯ ಗೋಡೆ; ಸರ್ಜವೃಕ್ಷ
**ಶಾಲ(ಳ)ಭಂಜಿಕೆ** – ಶಾಲವೃಕ್ಷದ ಮರದಿಂದ ಮಾಡಿದ ಬೊಂಬೆ
**ಶಾಲಿ(ಳಿ)** – ಬತ್ತ
**ಶಾಲಿ(ಳಿ)ಕೆ** – ಮನೆ
**ಶಾಲಿ(ಳಿ)ವನ** – ಬತ್ತದ ಗದ್ದೆ
**ಶಾಲಿ(ಳಿ)ಹೋತ್ರ** – ಒಬ್ಬ ಋಷಿ; ಅವನು ಬರೆದ ಅಶ್ವಶಾಸ್ತ್ರ
**ಶಾಲೀನತೆ** – ವಿನಯ
**ಶಾಲು(ಲೂ)ಕ** – ಕಮಲದ ಗಡ್ಡೆ
**ಶಾಲೂರ** – ಕಪ್ಪೆ
**ಶಾಲೇಯ** – ಬತ್ತದ ಗದ್ದೆ
**ಶಾಲ್ಮಲಿ** – ಬೂರುಗದ ಮರ
**ಶಾಲ್ಯಕ್ಷತ** – ಮಂತ್ರಾಕ್ಷತೆ
**ಶಾಸನ** – ಅಪ್ಪಣೆ
**ಶಾಸನದೀಪಕ** – (ಜೈನ) ಧರ್ಮವನ್ನು ಬೆಳಗುವವನು
**ಶಾಸನದೇವಿ** – ತೀರ್ಥಂಕರನ ಯಕ್ಷಿ
**ಶಾಸನಹರ** – ಓಲೆಕಾರ
**ಶಾಸಿಸು** – ಶಿಕ್ಷಿಸು
**ಶಾಸ್ತಿ** – ದಂಡನೆ
**ಶಾಸ್ತ್ರದಾನ** – (ಜೈನ) ನಾಲ್ಕು ಬಗೆಯ ದಾನಗಳಲ್ಲಿ ಒಂದು, ಜೈನಗ್ರಂಥಗಳನ್ನು ಶ್ರಾವಕರಿಗೆ ನೀಡುವುದು

**ಶಾಸ್ತ್ರಪಾರಗ** – ಶಾಸ್ತ್ರಗಳಲ್ಲಿ ಪಂಡಿತನಾದವನು
**ಶಾಸ್ತ್ರೋಕ್ತ** – ಶಾಸ್ತ್ರಗಳಲ್ಲಿ ಹೇಳಿರುವ ರೀತಿ
**ಶಾಳ** – ಸಾಲ, ಕೋಟೆಯ ಗೋಡೆ
**ಶಾಳಿ** – ಬತ್ತದ ಪೈರು
**ಶಿಂಜಿತ** – ಧ್ವನಿ ಮಾಡುವ; ಆಭರಣಗಳ ಧ್ವನಿ
**ಶಿಂಶುಮಾರ** – ಮೊಸಳೆ
**ಶಿಕ್ಷಾವಚನ** – ಉಪದೇಶದ ಮಾತು
**ಶಿಕ್ಷಾವ್ರತ** – (ಜೈನ) ಶ್ರಾವಕರು ಪಾಲಿಸಬೇಕಾದ ಸಾಮಯಿಕ, ಪ್ರೋಷಧ, ಅತಿಥಿಸಂಗ್ರಹ, ಸಲ್ಲೇಖನ ಎಂಬ ನಾಲ್ಕು ವ್ರತಗಳು
**ಶಿಕ್ಷಾಸೂತ್ರ** – ಉಚ್ಚಾರಣೆಯ ಕ್ರಮ
**ಶಿಕ್ಷಿಸು** – ನಿಯಮಿಸು; ಬೋಧಿಸು
**ಶಿಖಂಡ(ಕ)** – ತಲೆ; ಚೆಂಡಿಕೆ; ಕೊಟ್ಟು; ನವಿಲುಗರಿ
**ಶಿಖಂಡಮಂಡನ** – ತಲೆಯಲ್ಲಿ ಧರಿಸುವ ಆಭರಣ
**ಶಿಖಂಡಮಣಿ** – ಶಿಖಂಡಮಂಡನ
**ಶಿಖಂಡರತ್ನ** – ಶಿಖಂಡಮಂಡನ
**ಶಿಖಂಡಶೇಖರ** – ಶಿಖಂಡಮಂಡನ
**ಶಿಖಂಡಿ** – ನವಿಲು; ನಪುಂಸಕ
**ಶಿಖಂಡಿತಾಂಡವ** – ನವಿಲ ಕುಣಿತ
**ಶಿಖರಿ** – ಶಿಖರವುಳ್ಳುದು, ಬೆಟ್ಟ
**ಶಿಖರಿಣಿ** – ಒಂದು ಭಕ್ಷ್ಯ
**ಶಿಖರಿಶಿಖರ** – ಬೆಟ್ಟದ ತುದಿ
**ಶಿಖಾಕಲಾ(ಳಾ)ಪ** – ಬೆಂಕಿಯ ನಾಲಗೆಗಳ ಸಮೂಹ
**ಶಿಖಾಮಣಿ** – ಶಿಖಂಡಮಂಡನ
**ಶಿಖಾವಹ** – ಬೆಂಕಿ
**ಶಿಖಾಸ್ರಜ** – ಜಟಾಮಾಲೆ
**ಶಿಖಿ** –ಚೆಂಡಿಕೆ; ಬೆಂಕಿ; ನವಿಲು
**ಶಿಖಿಶಿಖೆ** – ಬೆಂಕಿಯ ಜ್ವಾಲೆ
**ಶಿಖೆ** – ಚೆಂಡಿಕೆ; ನವಿಲಿನ ಜುಟ್ಟು;ಬೆಂಕಿಯ ಜ್ವಾಲೆ
**ಶಿತ**– ಹರಿತವಾದ
**ಶಿತಾಸಿ** – ಹರಿತವಾದ ಕತ್ತಿ
**ಶಿತಾಸ್ತ್ರ** – ಚೂಪಾದ ಬಾಣ (ಆಯುಧ)
**ಶಿತಿಕಂಠ** – ಈಶ್ವರ
**ಶಿಥಿಲ** – ಸಡಿಲ
**ಶಿಬಿಕೆ** – ಪಲ್ಲಕ್ಕಿ
**ಶಿಬಿರ** – ಸೈನ್ಯದ ಬೀಡು
**ಶಿರಃಕಂಪ** – ತಲೆದೂಗುವಿಕೆ
**ಶಿರಸ್ತೋದ** – ತಲೆನೋವು
**ಶಿರಸ್ತ್ರಾಣ** – ತಲೆಯ ಕವಚ
**ಶಿರೀಷ(ಕುಸುಮ)** – ಬಾಗೆ (ಹೂ)
**ಶಿರೋಜ** – ತಲೆಗೂದಲು
**ಶಿರೋದಳನ** – ತಲೆಯನ್ನು ಕತ್ತರಿಸುವಿಕೆ
**ಶಿರೋಧಿ** – ಕೊರಳು, ಕತ್ತು
**ಶಿರೋಮಂಡನ** – ತಲೆಯ ಆಭರಣ
**ಶಿರೋರುಹ** – ಶಿರೋಜ
**ಶಿರೋವೇಷ್ಟನ** – ತಲೆಗೆ ಸುತ್ತುವ ವಸ್ತ್ರ
**ಶಿಲಾಕರ್ಮ** – ಕಲ್ಲಿನ ಕೆತ್ತನೆ
**ಶಿಲಾತಲ(ಳ)** – ಚಪ್ಪಟೆಯಾದ ಕಲ್ಲು
**ಶಿಲಾಪಟ್ಟ(ಕ)** – ಕಲ್ಲಿನ ಪೀಠ
**ಶಿಲಾಸಾರ** – ಕಬ್ಬಿಣ
**ಶಿಲಾಸ್ತಂಭ** – ಕಲ್ಲಿನ ಕಂಬ
**ಶಿಲೀಂಧ್ರ** – ಅಣಬೆ
**ಶಿಲೀ(ಳೀ)ಮುಖ** – ಬಾಣ; ದುಂಬಿ
**ಶಿಲೋಚ್ಚಯ** – ಪರ್ವತ
**ಶಿಲ್ಪಕರ್ಮ** – ಕುಶಲಕಲೆ
**ಶಿವ** – ಶುಭ; ತ್ರಿಮೂರ್ತಿಗಳಲ್ಲಿ ಒಬ್ಬ
**ಶಿವಾಕ್ಷ** – ರುದ್ರಾಕ್ಷ
**ಶಿವಿಗೆ** – ಪಲ್ಲಕ್ಕಿ
**ಶಿವಸುಖ** – ಮೋಕ್ಷ
**ಶಿವಾ** – ನರಿ
**ಶಿಶಿರ** – ತಂಪಾದ; ಷಡೃತುಗಳಲ್ಲಿ ಒಂದು, ಮಾಘ–ಫಾಲ್ಗುಣಗಳು–
**ಶಿಶಿರಕರ** – ತಂಪುಕಿರಣ(ವುಳ್ಳವನು), ಚಂದ್ರ
**ಶಿಶಿರಶಿಲೆ** – ಚಂದ್ರಕಾಂತದ ಕಲ್ಲು
**ಶಿಶಿರಾಂಶು** – ಶಿಶಿರಕರ
**ಶಿಶಿರೋಪಚಾರ** – ಶೀತಲೋಪಚಾರ
**ಶಿಶುಮಾರ** – ಮೊಸಳೆ
**ಶಿಷ್ಟಜನ** – ಯೋಗ್ಯರಾದವರು
**ಶೀಕರ** – ತುಂತುರು
**ಶೀತಕೃತ್ಕರ** – ಚಂದ್ರ
**ಶೀತದ್ಯುತಿ** – ಚಂದ್ರ
**ಶೀತಮಯೂಖ** – ಶೀತದ್ಯುತಿ
**ಶೀತಮರೀಚಿ** – ಚಂದ್ರ
**ಶೀತರೋಚಿ** – ಶೀತಮರೀಚಿ
**ಶೀತವಾತ** – ತಣ್ಣನೆಯ ಗಾಳಿ
**ಶೀತವೇತಾಳವಿದ್ಯೆ** – ರೂಪಾಂತರಗೊಳಿಸುವ ವಿದ್ಯೆ
**ಶೀತಳಕೆ** – ತಾವರೆ
**ಶೀತಾಂಬು** – ತಣ್ಣೀರು
**ಶೀತಾಂಶು** – ಚಂದ್ರ
**ಶೀತಾಶ್ಮ** – ಹಿಮದ ಗಡ್ಡೆ
**ಶೀತೋದಕ** – ಶೀತಾಂಬು
**ಶೀತೋಷ್ಣಭವನ** – ಧಾರಾಗೃಹ, ಹಿಮಗೃಹ
**ಶೀರ್ಣ** – ಬತ್ತಿಹೋದ; ಹರಿದ; ಕೃಶವಾದ
**ಶೀರ್ಯಮಾಣ** – ಒಡೆದ
**ಶೀರ್ಷಕ** – ಶಿರಸ್ತ್ರಾಣ; ತಲೆಯ ಆಭರಣ
**ಶೀರ್ಷಾಭರಣ** – ತಲೆಯ ಆಭರಣ
**ಶೀಲ** – ಸ್ವಭಾವ; (ಜೈನ) ದಿಗ್ವ್ರತ, ದೇಶವ್ರತ ಮತ್ತು ಸಾಮಯಿಕ ಪ್ರೋಷಧೋಪಚಾರಗಳೆಂಬ ವ್ರತ
**ಶೀಲವ್ರತ** – (ಜೈನ) ಮುನಿಗಳ ವ್ರತಾಚರಣೆ
**ಶೀಲಸಂಪನ್ನ** – ಶೀಲವ್ರತವನ್ನಾಚರಿಸುವವನು
**ಶುಂಡ** – ಆನೆಯ ಸೊಂಡಿಲು
**ಶುಂಡಾದಂಡ** – ಶುಂಡ

**ಶುಂಡಾಲ(ಳ)** – ಆನೆ; ಸೊಂಡಿಲು
**ಶುಂಭತ್** – ಒಡೆಯುತ್ತಿರುವ
**ಶುಕ** – ಗಿಳಿ; ಬೂರುಗದ ಮರ
**ಶುಕಕಾಮಿನಿ** – ಹೆಣ್ಣುಗಿಳಿ
**ಶುಕ್ತಿ(ಕೆ)** – ಚಿಪ್ಪು
**ಶುಕ್ತಿಜ** – ಚಿಪ್ಪಿನಲ್ಲಿ ಹುಟ್ಟಿದುದು, ಮುತ್ತು
**ಶುಕ್ತಿ(ಸಂ)ಪುಟ** – ಮುತ್ತಿನ ಚಿಪ್ಪು
**ಶುಕ್ತಿಪುಟೋದರ** – ಮುತ್ತಿನ ಚಿಪ್ಪಿನ ಒಳಭಾಗ
**ಶುಕ್ಲ** – ಬಿಳಿಯ; (ಜೈನ) ಪರಿಶುದ್ಧ ಆತ್ಮಜ್ಞಾನ
**ಶುಕ್ಲಧ್ಯಾನ** – (ಜೈನ) ಪರಿಶುದ್ಧ ಆತ್ಮಜ್ಞಾನ
**ಶುಕ್ಲಪಕ್ಷ** – ಚಂದ್ರನ ಬೆಳವಣಿಗೆಯ ಕಾಲ
**ಶುಕ್ಲಲೇಶ್ಯೆ** – (ಜೈನ) ಕರ್ಮಸಂಬಂಧವಾದ ಬಣ್ಣಗಳಲ್ಲಿ ಒಂದು; ಅತಿನಿದ್ದೆಯ ಸಂಕೇತವಾದ ಬಿಳಿ
**ಶುಚಿಸ್ವಾಂತೆ** – ಪರಿಶುದ್ಧ ಮನಸ್ಸಿನವಳು
**ಶುಚ್ಯಂಬಕ** – ಉರಿಗಣ್ಣ, ಶಿವ
**ಶುದ್ಧಗೆ** – (ಶುದ್ಧಕ) ಸುದ್ದಗೆ, ಅಕ್ಷರ
**ಶುದ್ಧಪಾರ್ಷ್ಣಿ** – ಹಿಂಚೂಣಿ ಸೈನ್ಯ
**ಶುದ್ಧವೃತ್ತ** – ಒಳ್ಳೆಯ ನಡತೆ
**ಶುದ್ಧಾಂತ** – ಅಂತಃಪುರ
**ಶುದ್ಧಾಕ್ಷರ** – ವರ್ಣಮಾಲೆಯ ಅಕ್ಷರ
**ಶುದ್ಧ್ಯಷ್ಟಕ** – (ಜೈನ) ಮುನಿಗಳು ಸಾಧಿಸಬೇಕಾದ ಎಂಟು ಬಗೆಯ ಶುದ್ಧಿಗಳು
**ಶುನಾಸೀರ** – ದೇವೇಂದ್ರ
**ಶುಭಂಕರಕ(ಗ)ತ್ತಿಗೆ** – ಒಂದು ಬಗೆಯ ಕತ್ತಿ
**ಶುಭಚರಿತ(ತೆ)** – ಪರಿಶುದ್ಧ ನಡತೆ(ಯವನು/ಳು)
**ಶುಭತಿಥಿ** – ಶುಭಕರವಾದ ದಿನ
**ಶುಭದ** – ಮಂಗಳಕರವಾದ
**ಶುಭಧ್ಯಾನ** – ಮಂಗಳಕರವಾದ ಆಲೋಚನೆ
**ಶುಭಯೋಗ** – ಶುಭಧ್ಯಾನ
**ಶುಭಲಕ್ಷಣ** – ಒಳ್ಳೆಯ ಲಕ್ಷಣ
**ಶುಭವೃತ್ತ** – ಒಳ್ಳೆಯ ನಡತೆ
**ಶುಭ್ರಾತಪತ್ರ** – ಬೆಳ್ಗೊಡೆ
**ಶುಶ್ರೂಷ(ಷೆ)** – ಪರಿಚರ್ಯೆ
**ಶುಶ್ರೂಷೆಗೆಯ್** – ಪರಿಚರ್ಯೆಮಾಡು
**ಶುಷ್ಕ** – ಒಣಗಿದ
**ಶುಷ್ಕತಾರ್ಕಿಕ** – ಒಣಕಲು ಚರ್ಚೆ ಮಾಡುವವನು
**ಶುಷ್ಕೇಂಧನ** – ಒಣಗಿದ ಸೌದೆ
**ಶೂಕ** – ಕರುಣೆ, ದಯೆ
**ಶೂಕಲ(ಳ)** – ಕಾಡುಕುದುರೆ
**ಶೂಕಲಾಶ್ವ** – ಶೂಕಲ(ಳ)
**ಶೂನ್ಯ** – ಇಲ್ಲವಾದುದು; ಸೊನ್ನೆ; ಬರಿದು
**ಶೂನ್ಯವಾದ(ದಿ)** – ನಾಸ್ತಿಕವಾದ (ಪ್ರತಿಪಾದಕ)
**ಶೂನ್ಯಾಧ್ವ** – ಆಕಾಶಮಾರ್ಗ; ಮಾಟದ ವಸ್ತುಗಳನ್ನಿರಿಸಿದ ದಾರಿ
**ಶೂರತೆ** – ಪರಾಕ್ರಮ
**ಶೂರ್ಪಕರ್ಣ** – ಮೊರಗಿವಿಯುಳ್ಳುದು, ಆನೆ; ಗಣೇಶ
**ಶೂರ್ಪಶ್ರವ** – ಶೂರ್ಪಕರ್ಣ
**ಶೃಂಗ** – ಬೆಟ್ಟದ ತುದಿ; ಕೊಂಬು
**ಶೃಂಗಾಟ(ಕ)** – ನಾಲ್ಕು ದಾರಿಗಳು ಸೇರುವ ಚೌಕ
**ಶೃಂಗಾಟಕ** – ನಾಲ್ಕು ದಾರಿ ಸೇರುವ ಜಾಗ; ಒಂದು ಬಗೆಯ ಸೇನಾ ರಚನೆ
**ಶೃಂಗಾಟಕವ್ಯೂಹ** – ಒಂದು ಸೇನಾರಚನೆ
**ಶೃಂಗಾರಂಗೆಯ್** – ಅಲಂಕರಿಸಿಕೊ
**ಶೇಖರ** – ಶಿರೋಭೂಷಣ
**ಶೇಮುಷಿ** – ಬುದ್ಧಿ, ಜ್ಞಾನ
**ಶೇಷ** – ಉಳಿದುದು; ಆದಿಶೇಷ
**ಶೇಷಾಕ್ಷತ** – ಆಶೀರ್ವಾದಪೂರ್ವಕ ಹಾಕುವ ಅಕ್ಷತೆ
**ಶೈಕ್ಷ್ಯ** – ಪ್ರಾವೀಣ್ಯ
**ಶೈಲ** – ಬೆಟ್ಟ
**ಶೈಲನಿತಂಬ** – ಬೆಟ್ಟದ ತಪ್ಪಲು
**ಶೈಲಚಾಪ** – ಬೆಟ್ಟವನ್ನೇ ಬಾಣವಾಗುಳ್ಳವನು, ಶಿವ
**ಶೈಲಪ** – ಬೆಟ್ಟಗಳ ರಾಜ, ಶ್ರೇಷ್ಠ ಬೆಟ್ಟ, ಹಿಮಾಲಯ
**ಶೈಲರಾಜ** – ಶೈಲಪ
**ಶೈಲಾದಿ** – ನಂದಿ
**ಶೈಲಿ** – ನಡತೆ
**ಶೈಲೂಷ** – ನರ್ತಕ, ನಟ
**ಶೈಲೇಂದ್ರ** – ಶೈಲಪ
**ಶೈಲೇಯ** – ಕಲ್ಲುಹೂ; ಪಾಚಿ
**ಶೈವ(ವಾ)ಲ(ಳ)** – ಪಾಚಿ
**ಶೈಶವ** – ಮಗುವಿನ ಹಂತ
**ಶೈಶವಕೇಳಿ** – ಮಕ್ಕಳ ಆಟ
**ಶೈಶವಭಾವ** – ಮಗುತನ
**ಶೈಕೋದಕ** – ಬೆಟ್ಟದಿಂದ ಹರಿದುಬರುವ ನೀರು
**ಶೋಕಬಾಷ್ಪ** – ದುಃಖದ ಕಣ್ಣೀರು
**ಶೋಕಾಂದ** – ದುಃಖದಿಂದ ದಿಕ್ಕುತೋಚದವನು
**ಶೋಕೋದ್ರೇಕ** – ದುಃಖದ ಅತಿರೇಕ
**ಶೋಚ್ಯ** – ದುಃಖಿಸಬೇಕಾದ
**ಶೋಣ** – ಕೆಂಪು ಬಣ್ಣ
**ಶೋಣಮಣಿ** – ಮಾಣಿಕ್ಯ
**ಶೋಣಾಶ್ವ** – ಕೆಂಪು ಕುದುರೆ
**ಶೋಣಿತಜಲ** – ಕೆಂಪು ನೀರು; ರಕ್ತ
**ಶೋಭಾಕರ** – ಶೋಭೆಯನ್ನುಂಟುಮಾಡುವ
**ಶೋಭಾವಹ** – ಶೋಭಿಸುವ
**ಶೌಂಡ** – ಅಮಲಿನಲ್ಲಿರುವ; ಆಸಕ್ತಿಯುಳ್ಳ
**ಶೌಂಡಿಕ** – ಹೆಂಡ ತಯಾರಿಸುವವನು, ಮಾರುವವನು
**ಶೌಕ್ತಿಕೇಯ** – ಮುತ್ತು, ಮುಕ್ತಕ; ವಿಷ
**ಶೌಚ** – ಪರಿಶುದ್ಧ ನಡತೆ; ಬ್ರಹ್ಮಚರ್ಯ (ಜೈನ) ಒಂದು ಕುಲಧರ್ಮ, ಲೋಭವನ್ನು ಬಿಡುವುದು, ನೋಡಿ 'ದಶಕುಲಧರ್ಮ'

**ಶೌಚಾಚಾರ** – ಶುದ್ಧಿಕ್ರಿಯೆ
**ಶೌಚಿ** – ಪರಿಶುದ್ಧ ನಡತೆಯುಳ್ಳವನು
**ಶೌರಿ** – ಶೂರಸೇನನ ವಂಶದವನು, ಶ್ರೀ ಕೃಷ್ಣ
**ಶೌರ್ಯಮದ** – ಅಷ್ಟಮದಗಳಲ್ಲಿ ಒಂದು
**ಶೌರ್ಯಸಖ** – ಪರಾಕ್ರಮದ ಕೆಲಸಗಳಲ್ಲಿನ ಸ್ನೇಹಿತ
**ಶ್ಮಶ್ರು** – ಮೀಸೆ
**ಶ್ಯಾಮ** – ಕಪ್ಪು; ಕಡುನೀಲ
**ಶ್ಯಾಮಕ** – ಕಪ್ಪಾಗಿರುವ
**ಶ್ಯಾಮತೆ** – ಕಪ್ಪು ಬಣ್ಣ
**ಶ್ಯಾಮಲ(ಳ)** – ಕಪ್ಪು; ಕಡುನೀಲಿ
**ಶ್ಯಾಮಾಂಗ** – ಕಪ್ಪು ದೇಹ(ದವನು)
**ಶ್ಯೇನ** – ಬಿಳಿಯ ಬಣ್ಣ; ಗಿಡುಗ
**ಶ್ರಮಗೃಹ** – ಗರಡಿಯ ಮನೆ
**ಶ್ರಮಾಂಭಃಕಣ** – ಬೆವರ ಹನಿ
**ಶ್ರಯಣೀಯ** – ಆಶ್ರಯಿಸಿದವನು, ಸೇರಿದವನು
**ಶ್ರವ(ಣ)** – ಕೇಳುವಿಕೆ; ಕಿವಿ
**ಶ್ರವಣವಿವರ** – ಕಿವಿಯ ತೂತು
**ಶ್ರವಣಶೂಲ** – ಕಿವಿ ನೋವು
**ಶ್ರವಣಸುಖ** – ಕೇಳಲು ಹಿತಕರವಾದುದು
**ಶ್ರವಣಾಭರಣ** – ಕಿವಿಗಿಟ್ಟುಕೊಳ್ಳುವ ಒಡವೆ
**ಶ್ರವ್ಯ** – ಕೇಳಲು ಯೋಗ್ಯವಾದ
**ಶ್ರಾಂತ** – ಬಳಲಿದ
**ಶ್ರಾಂತಿ** – ಆಯಾಸ
**ಶ್ರಾವಕ** – ಕೇಳುವವನು; ಜೈನ ಗೃಹಸ್ಥ
**ಶ್ರಾವಕತನ** – (ಜೈನ) ಐದು ಅಣುವ್ರತಗಳು, ಮೂರು ಗುಣವ್ರತಗಳು ಮತ್ತು ನಾಲ್ಕು ಶಿಕ್ಷಾವ್ರತಗಳನ್ನು ಪಾಲಿಸುವಿಕೆ
**ಶ್ರೀತಾಲ** – ಬೀಸಣಿಗೆಯ ತಾಳೆ
**ಶ್ರಾವಕತ್ವ** – ಶ್ರಾವಕತನ
**ಶ್ರಾವಕಧರ್ಮ** – ಜೈನಧರ್ಮ
**ಶ್ರಾವಕಬ(ವ್ರ)ತ** – ಶ್ರಾವಕತನ
**ಶ್ರಾವಕಮಾನಿ** – ಶ್ರಾವಕನೆಂಬ ಗೌರವಕ್ಕೆ ಪಾತ್ರನಾದವನು
**ಶ್ರಾವಕಾಚಾರ** – ಶ್ರಾವಕತನ
**ಶ್ರಾವಕಿ** – ಕೇಳುವವಳು; ಜೈನ ಗೃಹಿಣಿ
**ಶ್ರಾವಿಕೆ** – ಶ್ರಾವಕಿ
**ಶ್ರಾವ್ಯ** – ಕೇಳಬಹುದಾದ; ಇಂಪಾದ
**ಶ್ರೀ** – ಐಶ್ವರ್ಯ; ಲಕ್ಷ್ಮಿ; ಕಾಂತಿ
**ಶ್ರೀಕರ** – ಸಂಪತ್ತನ್ನುಂಟುಮಾಡುವುದು; ವಿಷ್ಣು
**ಶ್ರೀಕಾಂತೆ** – ಲಕ್ಷ್ಮಿ
**ಶ್ರೀತಾಳಕ** – ತಾಳೆಮರ
**ಶ್ರೀದ** – ಸಂಪತ್ತನ್ನು ಕೊಡುವವನು; ಕುಬೇರ
**ಶ್ರೀದಯಿತ** – ಲಕ್ಷ್ಮಿಯ ಒಡೆಯ, ವಿಷ್ಣು
**ಶ್ರೀದಯಿತೆ** – ಲಕ್ಷ್ಮಿ
**ಶ್ರೀನಾರೀಪತಿ** – ವಿಷ್ಣು
**ಶ್ರೀನಿಕೇತನ** – ಸಂಪತ್ತಿನ ಮನೆ; ಭಂಡಾರ
**ಶ್ರೀನಿಲಯ** – ಶ್ರೀನಿಕೇತನ; (ಜೈನ) ಸೌಧರ್ಮಕಲ್ಪದ ಒಂದು ವಿಮಾನ
**ಶ್ರೀನೀಡ** – ಸಂಪತ್ತಿನ ಆಗರ
**ಶ್ರೀಫಲ(ಳ)** – ಬಿಲ್ವಪತ್ರೆ
**ಶ್ರೀರಮಣ** – ಸಂಪತ್ತಿನ ಒಡೆಯ, ಚಕ್ರವರ್ತಿ
**ಶ್ರೀರೋಹಣಗಿರಿ** – ಮೇರುಪರ್ವತ
**ಶ್ರೀವತ್ಸ** – ಕಪ್ಪು ಮಚ್ಚೆ; ವಿಷ್ಣು
**ಶ್ರೀವನಿತೆ** – ಲಕ್ಷ್ಮಿ
**ಶ್ರೀವರ** – ಸಂಪತ್ತಿನ ಒಡೆಯ; ಚೆಲುವ; ವಿಷ್ಣು
**ಶ್ರೀವಿಲಾಸ** – ಕಾಂತಿಯಿಂದ ಕೂಡಿದ
**ಶ್ರೀವೃಕ್ಷ** – ಶ್ರೀಫಲ(ಳ)
**ಶ್ರೀಶ** – ವಿಷ್ಣು
**ಶ್ರುತ** – ಕೇಳಿದ; ಶಾಸ್ತ್ರ; ವೇದ
**ಶ್ರುತಕೇವಲ** – ಜೈನಾಗಮದಲ್ಲಿ ಪೂರ್ಣಜ್ಞಾನವುಳ್ಳವನು
**ಶ್ರುತಕೇವಲಿ(ಳ)** – (ಜೈನ) ವಿಷ್ಣುನಂದಿ, ನಂದಿಮಿತ್ರ, ಅಪರಾಜಿತ, ಗೋವರ್ಧನ, ಭದ್ರಬಾಹುಗಳೆಂಬುವವರು
**ಶ್ರುತಜಾನ** – (ಜೈನ) ಒಂದು ಬಗೆಯ ಜ್ಞಾನ, ಓದು ಮತ್ತು ಕೇಳುವಿಕೆಯಿಂದ ಪಡೆಯುವ ಜ್ಞಾನ
**ಶ್ರುತಜ್ಞಾನಾವರಣೀಯ** – (ಜೈನ) ಶ್ರುತಜ್ಞಾನವನ್ನುಂಟುಮಾಡುವ ಕರ್ಮ
**ಶ್ರುತದೇವಿ** – ಶಾರದೆ
**ಶ್ರುತಪಾರಗ** – ವೇದಪಾರಂಗತ
**ಶ್ರುತವಿದ್ಧ** – ಮತ್ತೊಬ್ಬರಿಂದ ಕೇಳಿ ಮಾಡಿದ ಚಿತ್ರಣ
**ಶ್ರುತವಿಳಾಸ** – ಶಾಸ್ತ್ರಜ್ಞಾನದಿಂದ ಶೋಭಿಸುವವನು
**ಶ್ರುತಸ್ಕಂದ** – (ಜೈನ) ಗಣಧರರು ಬರೆದ ದ್ವಾದಶಾಂಗದ ಸೂತ್ರ
**ಶ್ರುತ(ವಿ)ಹೀನ** – ಶಾಸ್ತ್ರಜ್ಞಾನವಿಲ್ಲದವನು
**ಶ್ರುತಿ** – ಕಿವಿ; ವಾರ್ತೆ
**ಶ್ರುತಿಪಥ** – ಕಿವಿ
**ಶ್ರುತಿಪುರುಷ** – ವೇದಪುರುಷ, ಬ್ರಹ್ಮ
**ಶ್ರುತಿಪೂರ** – ಕರ್ಣಾಭರಣ
**ಶ್ರುತಿವಿದ್ಧ** – ಶ್ರುತವಿದ್ಧ
**ಶ್ರುತಿಶೂನ್ಯ** – ಕಿವುಡ
**ಶ್ರುತಿಸುಭಗ** – ಇಂಪಾದುದು
**ಶ್ರುತ್ಯಾರೂಢ** – ವೇದಪ್ರತಿಪಾದಿತವಾದುದು; ದೇವರು
**ಶ್ರೇಢಿಬದ್ಧ** – (ಜೈನ) ಮೂರು ನರಕಬಿಲಗಳಲ್ಲಿ ಒಂದು
**ಶ್ರೇಣಿ** – ಗುಂಪು; ಸಾಲು
**ಶ್ರೇಣಿಕೆ** – ಗುಂಪು; ಗುಡಾರ
**ಶ್ರೇಯ** – ಉತ್ಕೃಷ್ಟವಾದ; ಮಂಗಳ
**ಶ್ರೇಯಾಂಸ** – ಏಳಿಗೆ ಹೊಂದಿದವನು; (ಜೈನ) ಹನ್ನೊಂದನೆಯ ತೀರ್ಥಂಕರ
**ಶ್ರೇಯೋಮಾರ್ಗ** – ಮೋಕ್ಷದ ದಾರಿ

**ಶ್ರೋಣಿ** – ನಿತಂಬ
**ಶ್ರೋತೃ** – ಕೇಳುವವನು
**ಶ್ರೋತ್ರ** – ಕಿವಿ
**ಶ್ರೋತ್ರಿಯ** – ವೈದಿಕ, ವೇದವಿದ
**ಶ್ರೌತ** – ಕೇಳಲ್ಪಡುವ; ಕಾವ್ಯ; ಉಪದೇಶ
**ಶ್ಲಾಘಿ** – ಹೊಗಳಿಕೆಗೆ ಅರ್ಹವಾದ
**ಶ್ಲಥ** – ಸಡಿಲವಾದುದು
**ಶ್ಲಿಷ್ಟ** – ಹತ್ತಿದ
**ಶ್ಯಾಮಾಕ** – ಸಾವೆ
**ಶ್ವಗಣ** – ನಾಯಿಗಳ ಗುಂಪು
**ಶ್ವಪಚ(ಕ)** – ಚಂಡಾಲ
**ಶ್ವಭ್ರ** – ಬಿಲ; ನರಕ
**ಶ್ವಯು** – ಹೆಬ್ಬಾವು
**ಶ್ವಸನ** – ಉಸಿರಾಟ; ಗಾಳಿ
**ಶ್ವಸನಪಥ** – ಗಾಳಿಯ ಮಾರ್ಗ, ಆಕಾಶ
**ಶ್ವಸಿತಗತಿ** – ಉಸಿರಾಟ
**ಶ್ವಾಪದ** – ಉಗ್ರವಾದ; ಕಾಡುಪ್ರಾಣಿ
**ಶ್ವೇತಕೃಷ್ಣಕಾರಕ** – ಬಿಳಿದನ್ನು ಕಪ್ಪಾಗಿಸುವವನು; ವಂಚಕ
**ಶ್ವೇತಕಪೋತ** – ಬಿಳಿ ಪಾರಿವಾಳ
**ಶ್ವೇತಪಟ** – ಬಿಳಿಯ ಬಟ್ಟೆ; (ಜೈನ) ಜೈನಮುನಿಗಳ ಒಂದು ಬಣ
**ಶ್ವೇತಾತಪತ್ರ** – ಬೆಳ್ಗೊಡೆ

## ಷ

**ಷಂಡ** – ಗುಂಪು; ನಪುಂಸಕ
**ಷಂಡಕವೇದ** – (ಜೈನ) ಒಂದು ಬಗೆಯ ನೋಕಷಾಯ
**ಷಟ್ಕರ್ಮ** – ಬ್ರಾಹ್ಮಣನ ಆರು ಕೆಲಸಗಳು: ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ; (ಜೈನ) ಶ್ರಾವಕನ ಆರು ಕರ್ತವ್ಯಗಳು: ಇಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪ
**ಷಟ್ಕಷಾಯ** – (ಜೈನ) ಹಾಸ್ಯ, ರತಿ, ಶೋಕ, ಭಯ, ಅರತಿ, ಜುಗುಪ್ಸೆ ಎಂಬ ಆರು ದೋಷಗಳು
**ಷಟ್ಖಂಡ** – (ಜೈನ) ವಿಜಯಾರ್ಧಪರ್ವತದ ಉತ್ತರದಲ್ಲಿ ಗಂಗೆ–ಸಿಂಧುಗಳಿಂದ ಬೇರ್ಪಡಿಸಲ್ಪಟ್ಟ ಮೂರು; ಅದಕ್ಕೆ ದಕ್ಷಿಣದಲ್ಲಿರುವ ಮೂರು – ಹೀಗೆ ಒಟ್ಟು ಆರು ಭೂಭಾಗಗಳು
**ಷಟ್ಚಕ್ರ** – ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞಾ
**ಷಟ್ಚರಣ** – ದುಂಬಿ
**ಷಟ್ತರ್ಕ** – ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ವೇದಾಂತ, ಪೂರ್ವಮೀಮಾಂಸೆ ಎಂಬ ಆರು ದರ್ಶನಗಳು
**ಷಟ್ತ್ರಿಂಶದ್ಗುಣ** – (ಜೈನ) ಮುನಿಗಳಲ್ಲಿರಬೇಕಾದ ಮೂವತ್ತಾರು ಮೂಲೋತ್ತರಗುಣಗಳು; ದ್ವಾದಶ ತಪಸ್ಸುಗಳು, ದಶಧರ್ಮಗಳು, ಪಂಚಾಚಾರಗಳು, ತ್ರಿಗುಪ್ತಿಗಳು; ಅವುಗಳನ್ನು ಪಡೆದವನು
**ಷಡ್ದರ್ಶನ** – ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸೆ ಮತ್ತು ಉತ್ತರ ಮೀಮಾಂಸೆಗಳೆಂಬ ಆರು ತಾತ್ವಿಕ ನಿಲವುಗಳು
**ಷಟ್ಪದ** – ದುಂಬಿ
**ಷಡಂಗ(ಬಲ)** – ರಥ, ಆನೆ, ತುರಗ, ಪದಾತಿ, ದಿವಿಜ, ಖೇಚರ ಎಂಬ ಆರು ಬಗೆಯ ಸೇನೆಗಳು
**ಷಡಂಗಸೇನೆ** – ಷಡಂಗ(ಬಲ)
**ಷಡಂತರಂಗತಪ** – (ಜೈನ) ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನಗಳೆಂಬ ಆರು ಅಂತರಂಗದ ತಪಸ್ಸುಗಳು
**ಷಡಭಿಜ್ಞ** – ದಿವ್ಯದೃಷ್ಟಿ, ದಿವ್ಯಶ್ರುತಿ, ಪೂರ್ವಾನುಸ್ಮೃತಿ, ಪರೇಂಗಿತಜ್ಞಾನ, ಪರೋಕ್ಷವಿಷಯಜ್ಞಾನ, ಗಗನಗಮನಾದಿ ವಿದ್ಯಾಬುದ್ಧಿ – ಈ ಆರು ಶಾಸ್ತ್ರಗಳನ್ನು ಬಲ್ಲವನು; ಬುದ್ಧ; ಬೌದ್ಧಮತೀಯ–
**ಷಡಯನ** – ದುಂಬಿ
**ಷಡಾವಶ್ಯಕ(ತೆ)** – )ಜೈನ) ಮುನಿಗಳು ಪ್ರತಿದಿನ ಆಚರಿಸಬೇಕಾದ ಸಾಮಯಿಕ, ತೀರ್ಥಂಕರಸ್ತವ, ಪಂಚಪರಮೇಷ್ಠಿವಂದನ, ಪ್ರತಿಕ್ರಮಣ, ಪ್ರತ್ಯಾಖ್ಯಾನ, ಕಾಯೋತ್ಸರ್ಗ ಎಂಬ ಆರು ಕ್ರಿಯೆಗಳು
**ಷಡ್ಜೀವ** – (ಜೈನ) ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ,, ಪಂಚೇಂದ್ರಿಯ ಅಸೈನೀ, ಪಂಚೇಂದ್ರಿಯ ಸೈನೀ – ಎಂಬ ಆರು ಬಗೆಯ ಜೀವಿಗಳು–
**ಷಡ್ಬಲ** – ಷಡಂಗ; ಆರು ಬಗೆಯ ಸೈನ್ಯಗಳು: ಮೌಲ, ಭೃತಕ, ಶ್ರೇಣಿ, ಮಿತ್ರ, ಅಮಿತ್ರ, ಅಟವಿಕ
**ಷಡ್ದ್ರವ್ಯ** – (ಜೈನ) ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಆರು ದ್ರವ್ಯಗಳು; ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಎಂಬಿವು
**ಷಣ್ಣವತಿ** – ತೊಂಬತ್ತಾರು
**ಷಷ್ಟಿಕಾವ್ರೀಹಿ** – ಅರವತ್ತು ದಿನಗಳಲ್ಲಿ ಕಟಾವಿಗೆ ಬರುವ ಒಂದು ಬಗೆಯ ಬತ್ತ
**ಷಷ್ಠೋಪವಾಸ** – ಆರು ದಿನಗಳ ಉಪವಾಸವ್ರತ

**ಷಾಡ್ಗುಣ್ಯ** – ರಾಜನ ಆರು ಗುಣಗಳಾದ ಸಂಧಿ, ವಿಗ್ರಹ, ಯಾನ, ಆಸನ, ಸಂಶಯ ಮತ್ತು ದ್ವೈಧೀಭಾವ
**ಷಿಡ್ಗ** – ವಿಟ, ಕಾಮುಕ
**ಷೋಡಶಕಲ್ಪ** – (ಜೈನ) ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ ಎಂಬ ಹದಿನಾರು ಸ್ವರ್ಗಗಳು
**ಷೋಡಶ(ತೀರ್ಥಕರ)ಭಾವನೆ** – (ಜೈನ) ತೀರ್ಥಂಕರನಾಗಲು ಕಾರಣವಾಗುವ ದರ್ಶನವಿಶುದ್ಧಿ, ವಿನಯಸಂಪನ್ನತೆ, ಅನತಿಚಾರ, ಅಭೀಕ್ಷ್ಣಕ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯಾವೃತ್ಯ, ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಉಪಾಧ್ಯಾಯಭಕ್ತಿ, ಪ್ರವಚನಭಕ್ತಿ, ಅವಶ್ಯಕಾಪರಿಹಾರಿಣಿ, ಮಾರ್ಗಪ್ರಭಾವನೆ, ಪ್ರವಚನವತ್ಸಲತ್ವ – ಎಂಬ ಹದಿನಾರು ಮನೋವೃತ್ತಿಗಳು–
**ಷೋಡಶಸಂಧಿ** – ರಾಜನು ಕೈಗೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳು: ಸಂಪ್ರದಾನ, ಕಪಾಲ, ಉಪಹಾಸನ, ಸಂತಾನ, ಸಂಗತ, ಉಪನ್ಯಾಸ, ಪ್ರತೀಕಾರ, ಸಂಯೋಗ, ಪುರುಷಾಂತರ, ಅದೃಷ್ಟಪುರುಷ, ಅದುಷ್ಟ, ಆತ್ಮಾಮಿಷ, ಉಪಗ್ರಹ, ಪರಿಕ್ರಮ, ಅರಿಪರದೂಷಣ, ಸ್ಕಂಧೋಪನಯ
**ಷೋಡಶಸಂಸ್ಕಾರ** – ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಪ್ರಾಜಾಪತ್ಯ, ಸಾಮ್ಯ, ಆಗ್ನೇಯ, ವೈಶ್ವದೇವ, ಗೋದಾನ, ಸಮಾವರ್ತನ, ವಿವಾಹ, ಅಂತ್ಯೇಷ್ಟಿ
**ಷೋಡಶಸ್ವಪ್ನ** – (ಜೈನ) ಗರ್ಭಧಾರಣೆಯ ಕಾಲದಲ್ಲಿ ಜಿನಮಾತೆಯು ಕಾಣುವ ಐರಾವತ, ಬಿಳಿಯ ಹೋರಿ, ಸಿಂಹ, ಲಕ್ಷ್ಮಿ, ಹೂಹಾರ, ಚಂದ್ರ, ಬಾಲಸೂರ್ಯ, ಎರಡೆಳೆಯ ಮೀನು, ಜೋಡಿ ರತ್ನಕುಂಭ, ತಾವರೆಕೊಳ, ಸಮುದ್ರ, ಸಿಂಹಾಸನ, ದೇವವಿಮಾನ, ರತ್ನಸಮೂಹ, ಉಜ್ವಲಜ್ವಾಲೆ ಎಂಬ ಕನಸುಗಳು
**ಷೋಡಶಸ್ವರ್ಗ** – ಷೋಡಶಕಲ್ಪ

## ಸ

**ಸಂಕ** – ಶಂಖ
**ಸಂಕಟ** – ಇಕ್ಕಟ್ಟಾದ, ದಟ್ಟವಾದ; ವ್ಯಥೆ
**ಸಂಕಡಿ** – ಇಕ್ಕಟ್ಟು; ದುಃಖ; ರಿಕಾಪು
**ಸಂಕಡಿಗೊಳ್** – ದುಃಖಪಡು
**ಸಂಕರಗೊಳ್** – ಬೆರಕೆ ಹೊಂದು
**ಸಂಕರ್ಷಣ** – ಬಲರಾಮ
**ಸಂಕಲೆ** – ಬೇಡಿ
**ಸಂಕಲ್ಪನವಧೆ** – ಪೂರ್ವನಿರ್ಧಾರಿತ ಕೊಲೆ
**ಸಂಕಲ್ಪಹಿಂಸೆ** – ಹಿಂಸೆಗೆ ಮಾನಸಿಕ ಒಪ್ಪಿಗೆ
**ಸಂಕಾಶ** – ಸಮೀಪದ; ಹೋಲಿಕೆಯಿರುವ; ಸಮಾನ
**ಸಂಕಾಶಿ** – ಹೋಲಿಕೆಯಿರುವುದು
**ಸಂಕೀರ್ಣ** – ಬೆರೆತುಕೊಂಡಿರುವ; ಜಟಿಲವಾದ
**ಸಂಕು** – (ಶಂಕು) ಕಠಾರಿ
**ಸಂಕುಲ(ಳ)** – ಸಮೂಹ
**ಸಂಕೆ** – (ಶಂಕೆ) ಸಂದೇಹ; ಅಂಜಿಕೆ
**ಸಂಕೆವೇಱು** – ಸಂದೇಹಪಡು
**ಸಂಕೇತ** – ವ್ಯವಸ್ಥೆ, ಗೊತ್ತುಮಾಡುವಿಕೆ
**ಸಂಕೇತಂಗೊಳಸು** – ಸಂಕೇತಸ್ಥಳವನ್ನು ಗೊತ್ತುಮಾಡು
**ಸಂಕೇತಸಮಯ** – ಪ್ರೇಮಿಗಳು ಸೇರಲು ಗೊತ್ತುಮಾಡಿದ ಹೊತ್ತು
**ಸಂಕೋಚಿಸು** – ಕುಗ್ಗು; ಕುಗ್ಗಿಸು
**ಸಂಕ್ರಂದನ** – ಇಂದ್ರ; ಕೂಗಿಕೊಳ್ಳುವುದು
**ಸಂಕ್ರಂದನಗಜ** – ಐರಾವತ
**ಸಂಕ್ರಂದನದಿಕ್** – ಪೂರ್ವದಿಕ್ಕು
**ಸಂಕ್ರಂದನನಂದನ** – ಇಂದ್ರನ ಮಗ, ಅರ್ಜುನ
**ಸಂಕ್ರಮಣ** – ಒಟ್ಟಿಗೇ ಹೋಗುವುದು; ಸೂರ್ಯನು ಒಂದು ರಾಶಿಯಿಂದ ಮತ್ತೊಂದಕ್ಕೆ ದಾಟುವ ಕಾಲ
**ಸಂಕ್ರಮಣಿ** – (ಜೈನ) ಒಂದು ವಿದ್ಯೆ
**ಸಂಕ್ರಮಿಸು** – ಸೇರು; ಸೇರಿಸು
**ಸಂಕ್ಲಿಷ್ಟಾಸುರೋದೀರಿತ** – (ಜೈನ) ಐದು ಬಗೆಯ ದುಃಖಗಳಲ್ಲಿ ಒಂದು, ರಾಕ್ಷಸರಿಂದ ಉಂಟಾಗುವ ಭಯ
**ಸಂಕ್ಲೇಶಂಬಡು** – ಕಷ್ಟ ಅನುಭವಿಸು
**ಸಂಕ್ಲೇಶಕರ** – ತೊಂದರೆಯುಂಟುಮಾಡುವ
**ಸಂಕ್ಷೋಭಿತ** – ಕಲಕಿಹೋದ; ಗೊಂದಲಗೊಂಡ
**ಸಂಖ್ಯಾತ** – ಎಣಿಕೆ ಮಾಡಿದುದು
**ಸಂಖ್ಯಾತೀತ** – ಎಣಿಸಲಾಗದ
**ಸಂಖ್ಯಾನ** – ಎಣಿಕೆ
**ಸಂಗಡಂಗೊಳ್** – ಜೋತೆಗೂಡು
**ಸಂಗಡಗಿತ್ತಿ** – ಜೊತೆಗಾತಿ
**ಸಂಗಡಮಿಱುಳ್ತು** – ಕೂಡಿ ಸಾಯುವುದು; ಸಹಗಮನ
**ಸಂಗಡವರ್** – ಜೊತೆ ಬಾ
**ಸಂಗವೆಕ್ಕಣ** – ಜೊತೆ ನರ್ತನ
**ಸಂಗಡಿಗ** – ಜೊತೆಗಾರ

**ಸಂಗತ** – ಕೂಡಿದ; ಯೋಗ್ಯವಾದ; ರಾಜನ ಹದಿನಾರು ಬಗೆಯ ಒಪ್ಪಂದಗಳಲ್ಲಿ ಒಂದು, ಮಿತ್ರತ್ವ
**ಸಂಗತಿ** – ಕೂಡುವಿಕೆ; ಸಹವಾಸ
**ಸಂಗತಿವಡೆ** – ಜೊತೆಗೂಡು; ಸಂಬಂಧ ಹೊಂದು
**ಸಂಗತಿವೇಱು** – ಸೇರಿಕೊ
**ಸಂಗರ** – ಯುದ್ಧ; ಪ್ರತಿಜ್ಞೆ
**ಸಂಗರಂ** – ಪ್ರತಿಜ್ಞೆಯುಳ್ಳವನು
**ಸಂಗರಪಿಶುನ** – ಯುದ್ಧಸೂಚನೆ
**ಸಂಗರರಂಗ** – ರಣಭೂಮಿ
**ಸಂಗರಾಜಿರ** – ಸಂಗರರಂಗ
**ಸಂಗಳಸು** – ಕೂಡಿಕೊ, ಸೇರಿಕೊ
**ಸಂಗಳ(ಡಿ)ಸು** – ಒಟ್ಟಾಗು, ಸೇರು; ಉಂಟುಮಾಡು
**ಸಂಗಾಣಿ** – ಸಪ್ತಪದಾರ್ಥಗಳ ಸ್ವರೂಪನಿರೂಪಣ ಗ್ರಂಥ
**ಸಂಗಿ** – ಕೂಡಿದುದು
**ಸಂಗೀತ** – ಹಾಡಲ್ಪಟ್ಟ
**ಸಂಗುಡಿ** – ಬಾವುಟ
**ಸಂಗ್ರಹಿಣಿ** – (ಜೈನ) ಒಂದು ವಿದ್ಯೆ
**ಸಂಗ್ರಾಮ** – ಯುದ್ಧ
**ಸಂಗ್ರಾಮಲಂಪಟ** – ಯುದ್ಧದಲ್ಲಿ ಅತ್ಯಾಸಕ್ತನದವನು; ಕಲಹಪ್ರಿಯ
**ಸಂಗ್ರಾಮಾಂಗಣ** – ಸಂಗರರಂಗ
**ಸಂಗ್ರಾಮಾವನಿ** – ಸಂಗರರಂಗ
**ಸಂಘಟನೆ** – ಹೊಂದಿಸುವಿಕೆ
**ಸಂಘಟ್ಟನ** – ತಾಗುವಿಕೆ; ಘರ್ಷಣೆ
**ಸಂಘಾತ** – ಗುಂಪು; ಹೊಂದಾಣಿಕೆ
**ಸಂಚಕ(ಕಾ)ರ** – ಮುಂಗಡ
**ಸಂಚಕರಂಗೊಳ್** – ಮುಂಗಡವನ್ನು ಪಡೆದುಕೊ
**ಸಂಚಯ** – ಸಂಗ್ರಹ
**ಸಂಚರಣ** – ತಿರುಗಾಟ
**ಸಂಚಲಿ)ಳ)ತ** – ಅಲುಗಾಡುತ್ತಿರುವ
**ಸಂಚಲಿ(ಳ)ಸು** – ಕಂಪಿಸು; ಅಲುಗು
**ಸಂಚಾರಿ** – ಚಲಿಸುವ
**ಸಂಚಾರಿ(ಕೆ)** – ದೂತಿ
**ಸಂಚಿತ** – ಕೂಡಿಟ್ಟ
**ಸಂಚಿತಪುಣ್ಯ** – ಹಿಂದೆ ಗಳಿಸಿದ ಪುಣ್ಯ(ವುಳ್ಳವನು)
**ಸಂಚಿತಸುಕೃತ** – ಸಂಚಿತಪುಣ್ಯ
**ಸಂಚಿವಾರ** – ಹಣದ ಸಂಗ್ರಹ
**ಸಂಚಿಸು** – ಸಂಗ್ರಹಿಸು
**ಸಂಚೂರ್ಣ** – ಚೂರು
**ಸಂಚೂರ್ಣಿತ** – ಚೂರುಚೂರಾದ
**ಸಂಚೂರ್ಣಿತಮತಿ** – ಘಾತಕ ಬುದ್ಧಿ(ಯವನು)
**ಸಂಚೂಲಿ(ಳ)ಕೆ** – ಬೆಟ್ಟದ ತುದಿ
**ಸಂಛನ್ನ** – ಚೆನ್ನಾಗಿ ಮುಚ್ಚಿದ ; ಇಡಿಕಿರಿದ; ಗುಂಪು
**ಸಂಛಾದನ** – ಆವರಿಸುವುದು
**ಸಂಛಾದಿಸು** – ಆವರಿಸು
**ಸಂಜನಿತ** – ಹುಟ್ಟಿದ, ಮೂಡಿದ
**ಸಂಜನಿತೋತ್ಸವ** – ಹುಟ್ಟಿದ ಹಬ್ಬ
**ಸಂಜಯ** – ಸಂಪೂರ್ಣ ವಿಜಯ; ಕುರುಕ್ಷೇತ್ರದಲ್ಲಿ ನಡೆಯುವುದನ್ನು ಧೃತರಾಷ್ಟ್ರನಿಗೆ ವಿವರಿಸಿದ ಅವನ ಆಪ್ತ
**ಸಂಜೆಗೆಂಪು** – ಸಾಯಂಕಾಲದ ಆಕಾಶದ ಕೆಂಬಣ್ಣ
**ಸಂಜೆಮಂತ್ರ** – ಸಂಧ್ಯಾವಂದನೆ
**ಸಂಜೆಮೀಹ** – ಸಾಯಂಕಾಲದ ಸ್ನಾನ; ಸಂಧ್ಯಾವಂದನೆ
**ಸಂಜೆಮುಗಿಲ್** – ಸಾಯಂಕಾಲದ ಕೆಂಪು ಮೋಡ
**ಸಂಜೆವಾರಿಸು** – ಸಾಯಂಸಂಧ್ಯಾವಂದನೆ ಮಾಡು
**ಸಂಜೆವಾಸ** – ಸಂಜೆಮಂತ್ರ
**ಸಂಜೆವೆಱಿ** – ಸಂಜೆ+ಪೆಱಿ, ಸಾಯಂಕಾಲದ ಚಂದ್ರ
**ಸಂಜೆವೊಱ್ತು** – ಸಂಜೆ+ಪೊಱ್ತು, ಸಂಜೆ ಸಮಯ
**ಸಂಜ್ಞಾತತ್ವ** – (ಜೈನ) ಏಳು ಬಗೆಯ ಅನ್ವಯಕ್ರಿಯೆಗಳಲ್ಲಿ ಒಂದು
**ಸಂಜ್ಞಾನಪಂಚಕ** – (ಜೈನ) ಮತಿ, ಶ್ರುತ, ಅವಧಿ, ಮನಃಪರ್ಯಾಯ, ಕೇವಲ ಎಂಬ ಐದು ಬಗೆಯ ಜ್ಞಾನಗಳು
**ಸಂಜ್ಞಾಪ್ರಕೃಷ್ಟ** – ಆಹಾರ, ಭಯ, ಮೈಥುನ, ನಿದ್ರೆ ಎಂಬ ಸಂಜ್ಞೆ(ಬಯಕೆ)ಗಳಿಂದ ಜಗ್ಗಲ್ಪಟ್ಟ
**ಸಂಜ್ಞಿ(ಜೀವ)** – ಸಂಜ್ಞೆ(ಬಯಕೆ)ಗಳಿರುವ ಜೀವಿ, ಮನುಷ್ಯ
**ಸಂಜ್ವಲ(ಳ)ನ** – ತೀವ್ರವಾದ ಶಾಖ; (ಜೈನ) ಚಾರಿತ್ರ್ಯದ ಪರಿಪೂರ್ಣತೆಗೆ ಪೂರಕವಾದ ಕರ್ಮ
**ಸಂತ** – ಸೌಖ್ಯ; ಸಮಾಧಾನ
**ಸಂತಂ** – ಸಮಾಧಾನದಿಂದ; ಯಾವಾಗಲೂ
**ಸಂತತಂ** – ಯಾವಾಗಲೂ
**ಸಂತತಿ** – ಪೀಳಿಗೆ, ವಂಶ; ಗುಂಪು
**ಸಂತತಿಗೆಡು** – ವಂಶ ನಾಶವಾಗು
**ಸಂತತಿಚ್ಛೇದ** – ವಂಶನಾಶ
**ಸಂತತಿವೇಱು** – ಸಂತಾನ(ಮಕ್ಕಳ)ನ್ನು ಹೊಂದು
**ಸಂತಮಿಡು** – ಸಮಾಧಾನಪಡಿಸು
**ಸಂತಮಿರ್** – ಸಮಾಧಾನದಿಂದಿರು; ಸುಮ್ಮನಿರು
**ಸಂತಯಿ(ವಿ)ಸು** – ಸಂತಮಿಡು
**ಸಂತರ್ಪಣ** – ತೃಪ್ತಿಗೊಳಿಸು(ವಿಕೆ)
**ಸಂತರ್ಪಣಕರ** – ಸಂತೋಷಕರ
**ಸಂತರ್ಪಿನಂ** – ತೃಪ್ತಿಯಾಗುವವರೆಗೂ
**ಸಂತಸ** – ಸಂತೋಷ
**ಸಂತಸಂಗಿಡು** – ಸಂತೋಷ ಹಾಳಾಗು
**ಸಂತಸಂಬಡಿಸು** – ಸಂತೋಷಗೊಳಿಸು
**ಸಂತ(ತೋ)ಸಂಬಡು** – ಸಂತೋಷಗೊಳ್ಳು
**ಸಂತಸಮಿರ್** – ಸಂತೋಷದಿಂದಿರು
**ಸಂತಸವಾತು** – ಸಂತೋಷದ ನುಡಿ
**ಸಂತಸಿಕೆ** – ನಲಿವು

**ಸಂತಾನ** – ಸಮೂಹ; ಸಾಲು; ವಂಶನುಗತವಾದುದು; ಇಂದ್ರನ ವನದ ಒಂದು ಗಿಡ; ರಾಜನು ಮಾಡಿಕೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು, ಮಗಳನ್ನು ಮದುವೆ ಮಾಡಿಕೊಟ್ಟು ಸಂಧಿ ಮಾಡಿಕೊಳ್ಳುವುದು
**ಸಂತಾನಕ** – ವಿಸ್ತರಣೆ; ಸಮೂಹ; ದೇವಲೋಕದ ಒಂದು ಮರ
**ಸಂತಾನರೂಪ (ಜೈನ) ಅನುಭವಕ್ಕೆ ಬಾರದ ಕ್ಷಣಗಳ ಸಮೂಹ–**
**ಸಂತಾಪ** – ಶಾಖ; ಸಂಕಟ
**ಸಂತಾಪಂಗೊಳ್** – ವೇದನೆಗೊಳಗಾಗು
**ಸಂತಾಪನ** – ಮನ್ಮಥನ ಐದು ಬಾಣಗಳಲ್ಲಿ ಒಂದು; ಮನ್ಮಥ
**ಸಂತುಷ್ಟ** – ಸಂತೋಷಗೊಂಡ(ವನು)
**ಸಂತುಷ್ಟಾಂತರಂಗ** – ಸಂತೃಪ್ತಿಗೊಂಡ ಮನಸ್ಸು(ಳ್ಳವನು)
**ಸಂತೆ** – (ಸಂಸ್ಥಾ) ಗುಂಪು
**ಸಂತೋಷದಾಳ** – ಸಂತೋಷವುಂಟುಮಾಡುವ ಗೆಳತಿ
**ಸಂತೋಷಂಬಡು** – ಆನಂದಪಡು
**ಸಂತೋಷಕರ** – ಆನಂದವುಂಟುಮಾಡುವ
**ಸಂತ್ರಾಸಕರ** – ಭಯಂಕರ
**ಸಂತ್ರಾಸಿ** – ಭಯಗೊಳಿಸುವವನು
**ಸಂದಂಶ** – ಇಕ್ಕುಳ
**ಸಂದಣಿ** – ಗುಂಪು
**ಸಂದಣಿಗಳ್** – ಗುಂಪಾಗು; ಒಟ್ಟಾಗು
**ಸಂದಣಿಸು** – ಗುಂಪಾಗು
**ಸಂದರ್ಶನ** – ನೋಡಿವುದು; ಕಾಣಿಸಿಕೊಳ್ಳುವಿಕೆ
**ಸಂದರ್ಶನೀಯ** – ನೋಡಬಹುದಾದ; ಸುಂದರವಾದ
**ಸಂದಿಯ** – ಸಂಶಯಗ್ರಸ್ತ
**ಸಂದಿಗ್ಧ** – ಸಂದೇಹ
**ಸಂದಿಸು** – ಸೇರಿಸು; ಗುಂಪುಗೂಡು; ಹೊಂದಿಸು
**ಸಂದೀಪಿತಚಿತ್ತ** – ಕೆರಳಿದ ಮನಸ್ಸು(ಳ್ಳವನು)
**ಸಂದು** – ಸೇರುವಿಕೆ; ಮೂಲೆ; ಕಿರುದಾರಿ; ಕೀಲು; ಮರದ ಗೆಣ್ಣು
**ಸಂದೃಪ್ತ** – ಮತ್ತ
**ಸಂದೆಗ(ಯ)** – ಸಂದೇಹ
**ಸಂದೆಗಂ(ಯಂ)ಬಡು** – ಸಂದೇಹಗೊಳ್ಳು
**ಸಂದೇಶ** – ಅಪ್ಪಣೆ; ಸಮಾಚಾರ
**ಸಂದೇಶಿಸು** – ಹೇಳು; ತಿಳಿಸು
**ಸಂದೋಹ(ಕ)** – ಸಮೂಹ; ರಾಶಿ
**ಸಂದರಿಸು** – ಹೊತ್ತುಕೊ
**ಸಂಧಾನ** – ಬಿಲ್ಲಿನ ಹೆದೆಗೆ ಬಾಣ ಹೂಡುವಿಕೆ; ಉಪಾಯ
**ಸಂಧಾನಂಗೆಯ್** – ಉಪಾಯ ಮಾಡು
**ಸಂಧಾನಿ** – ಕೂಡಿದುದು
**ಸಂಧಾರಿತ** – ತೊಡಿಸಿದ; ತೊಟ್ಟ
**ಸಂಧಿ** – ಕೀಲು; ಸೇರಿಕೆ; ಒಡಂಬಡಿಕೆ; ಹದಿನಾರು ಬಗೆಯ ಸಂಧಿಗಳು: ನೋಡಿ, 'ಷೋಡಶಸಂಧಿ'
**ಸಂಧಿಗೆಯ್** – ಒಪ್ಪಂದ ಮಾಡಿಕೊ
**ಸಂಧಿಬಂಧ** – ಸೇರುವ ಜಾಗ
**ಸಂಧಿವಿಗ್ರಹ** – ರಾಜಿ ಮತ್ತು ಯುದ್ಧ
**ಸಂಧಿವಿಗ್ರಹಿ** – ರಾಜಿ–ಯುದ್ಧಗಳ ಬಗೆಗಿನ ಮಂತ್ರಿ–
**ಸಂಧಿಸು** – ಸೇರು; ಸೇರಿಸು; ಒದಗು
**ಸಂಧುಕ್ಷ್ಯಮಾಣ** – ಹೆಚ್ಚು ಕಾಂತಿಯುಕ್ತವಾದ
**ಸಂಧ್ಯಾಂಬುದ** – ಸಂಜೆ ಹೊತ್ತಿನ ಕೆಂಬಣ್ಣದ ಮೋಡ
**ಸಂಧ್ಯಾತಪನ** – ಸಂಜೆಯ ಸೂರ್ಯ
**ಸಂಧ್ಯಾನಕ** – ಸಂಜೆ ಬಾರಿಸುವ ನಗಾರಿ
**ಸಂಧ್ಯಾಭ್ರ** – ಸಂಧ್ಯಾಂಬುದ
**ಸಂಧ್ಯಾರಾಗ** – ಸಂಜೆಗೆಂಪು ಬಣ್ಣ
**ಸಂಧ್ಯಾರುಚಿ** – ಸಂಧ್ಯಾರಾಗ
**ಸಂಧ್ಯಾಶ್ಲೇಷ** – ಸಂಧ್ಯೆಯಿಂದ ಕೂಡಿದುದು
**ಸಂನ್ಯಸನ(ವಿಧಿ)** – (ಜೈನ) ಉಪವಾಸವಿದ್ದು ಮಾಡುವ ಒಂದು ವ್ರತ
**ಸಂಪಗೆವಣ್ಣ** – ನಸುಹಳದಿ–ನಸುಗೆಂಪು ಬಣ್ಣ–
**ಸಂಪಗೆವೂ** – ಸಂಪಿಗೆಯ ಹೂ
**ಸಂಪನ್ನ** – ತುಂಬಿದ; ಪರಿಪೂರ್ಣವಾದ
**ಸಂಪನ್ನತೆ** – ತುಂಬಿರುವುದು; ಸಮೃದ್ಧಿ
**ಸಂಪಾತನ** – ಬೀಳುವಿಕೆ
**ಸಂಪುಟ(ಕ)** – ಭರಣಿ
**ಸಂಪೂರ್ಣಸಂಕಾಶ** – ಸೂರ್ಯ
**ಸಂಪೂರ್ಣೇಂದು** – ಹುಣ್ಣಿಮೆಯ ಚಂದ್ರ
**ಸಂಪ್ರಣಿಧಾನ** – ಚಿಂತನೆ; ಯೋಗ್ಯ ನಡತೆಯವನು
**ಸಂಪ್ರತಿ** – ವರ್ತಮಾನ, ಈಗಿನ ಕಾಲ
**ಸಂಪ್ರದಾನ** – ಕೊಡುವುದು; 'ಷೋಡಶಸಂಧಿ'ಗಳಲ್ಲಿ ಒಂದು, ಉಡುಗೊರೆ ಕೊಡುವ ಮೂಲಕ ಮಾಡಿಕೊಳ್ಳುವ ಸಂಧಿ
**ಸಂಪ್ರಯೋಗ** – ಸೇರುವಿಕೆ, ಸಂಭೋಗ
**ಸಂಪ್ರೀತಿ** – ಗಾಢ ಪ್ರೀತಿ
**ಸಂಬಲ(ಳ)** – ಬುತ್ತಿ
**ಸಂಬಳಂಗೊಳ್** – ಬುತ್ತಿಯನ್ನು ಕಟ್ಟಿಕೊ
**ಸಂಬಳಂಬಡೆ** – ಜೀವಿತವನ್ನು ಪಡೆ
**ಸಂಬಳಕೋಲ್** – ಕೈಯಲ್ಲಿ ಹಿಡಿಯುವ ದೊಣ್ಣೆ
**ಸಂಬಳಿಗೆ** – (ಸಂಪುಟಿಕ) ಹೋಳು, ಭಾಗ; ಡಬ್ಬಿ
**ಸಂಬೋಧನೆ** – ಉಪದೇಶ
**ಸಂಬೋಧಿಸು** – ತಿಳಿವಳಿಕೆ ಹೇಳು; ಉದ್ದೇಶಿಸಿ ಮಾತಾಡು
**ಸಂಭವ** – ಹುಟ್ಟುವ
**ಸಂಭವಿಸು** – ಉಂಟಾಗು

**ಸಂಭಾವನೆ** – ಚಿಂತನೆ
**ಸಂಭಾಷಣ** – ಮಾತುಕತೆ
**ಸಂಭಾಷಣಂಗೆಯ್** – ಮಾತನಾಡು
**ಸಂಭಾಷಿಸು** – ಸಂಭಾಷಣಂಗೆಯ್
**ಸಂಭಿನ್ನವಿದ್ಯೆ** – (ಜೈನ) ಒಂದು ಬಗೆಯ ವಿದ್ಯೆ
**ಸಂಭೂತ** – ಒಟ್ಟಾಗಿ ಕೂಡಿಸಿದ
**ಸಂಭೃತ** – ತುಂಬಿದ; ಸಜ್ಜುಗೊಳಿಸಿದ
**ಸಂಭೇದ** – ಒಡೆಯುವಿಕೆ; ಒಗ್ಗಟ್ಟನ್ನು ಒಡೆಯುವವನು
**ಸಂಭೋಗ** – ಕಾಮ; ಕೂಟ
**ಸಂಭೋಗ್ಯ** – ಅನುಭವಿಸಲು ತಕ್ಕುನಾದ
**ಸಂಭ್ರಮ** – ಸಡಗರ, ತ್ವರೆ; ಸುತ್ತಾಡುವಿಕೆ
**ಸಂಭ್ರಮಾಕುಳ** – ಆತುರದಿಂದ ತುಂಬಿದವನು
**ಸಂಮಾರ್ಜಿನಿ** – ಕಸಪೊರಕೆ
**ಸಂಯತ** – ಜಿತೇಂದ್ರಿಯ; (ಜೈನ) ಜಿತೇಂದ್ರಿತ್ವದಿಂದ ಪರಿಪೂರ್ಣನಾದ ಶ್ರಮಣ
**ಸಂಯಮ** – ನಿಗ್ರಹ; (ಜೈನ) ಶ್ರಂಣನು ಆಚರಿಸಬೇಕಾದ 'ದಶಕುಲಧರ್ಮ'ಗಳಿಳಲ್ಲಿ ಒಂದು
**ಸಂಯಮಮಂತ್ರ** – (ಜೈನ) ಐದು ಬಗೆಯ ಮಂತ್ರಗಳಲ್ಲಿ ಒಂದು
**ಸಂಯಮಿ** – ಜಿತೇಂದ್ರಿಯನಾದವನು
**ಸಂಯುಗ** – ಯುದ್ಧ
**ಸಂಯುತ** – ಸೇರಿದ
**ಸಂಯೋಗ** – ಕೂಡುವಿಕೆ; ಒಂದು ಉದ್ದೇಶಕ್ಕಾಗಿ ಇಬ್ಬರು ರಾಜರಲ್ಲಿ ಏರ್ಪಡುವ ಒಪ್ಪಂದ
**ಸಂವ್ಯಾನ** – ಉತ್ತರೀಯ; ಸೆರಗು
**ಸಂವರ** – (ಜೈನ) ಕರ್ಮಪ್ರವಾಹವನ್ನು ತಡೆಯುವುದು
**ಸಂವರಣೆ** – ಮುಚ್ಚುವುದು
**ಸಂವರಿಸು** – ಸನ್ನಾಹಿಸು
**ಸಂವರ್ತ** – ಪ್ರಕ್ಷುಬ್ಧ; ಪ್ರಳಯ
**ಸಂವಳಯಿತ** – ಸುತ್ತಲ್ಪಟ್ಟ
**ಸಂವಾಹನ** – ಮೈಕೈ ಹಿಸುಕುವುದು
**ಸಂವೀತ** – ಕೂಡುವುದು
**ಸಂವೇಗ** – ದೃಢಸಂಕಲ್ಪ
**ಸಂವ್ಯಾನ** – ಉತ್ತರೀಯ
**ಸಂಶ್ಲಿಷ್ಟ** – ಹತ್ತಿಕೊಂಡಿರುವ
**ಸಂಸಕ್ತ** – ಕೂಡಿದ
**ಸಂಸರಣ** – ಸಂಸಾರ
**ಸಂಸಾರ** – (ಜೈನ) ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವ ಎಂಬ ಬಗೆಗಳು
**ಸಂಸಾರಕ್ಷಪಕ** – ಸಂಸಾರವನ್ನು ಪರಿತ್ಯಜಿಸಿದವನು
**ಸಂಸ್ಕಾರ** – ಪರಿಶುದ್ಧವಾಗಿ ಮಾಡುವುದು; ವ್ಯಕ್ತಿಗೆ ಸಂಬಂಧಿಸಿದಂತೆ ಮಾಡುವ ಶ್ರುತಿಗಳಲ್ಲಿ ಹೇಳಿರುವ ಧಾಮಿಕ ವಿಧಿಗಳು, ನೊಡಿ, 'ಷೋಡಶಸಂಸ್ಕಾರ'
**ಸಂಸ್ತಾರ** – ಹರಡಿದುದು
**ಸಂಸ್ತೂಯಮಾನ** – ಹೊಗಳಲ್ಪಡುವ
**ಸಂಸೃತಿ** – ಸಂಸಾರ
**ಸಂಹತಿ** – ಸಮೂಹ
**ಸಂಹನನ** – ದೇಹ(ವುಳ್ಳವನು)
**ಸಂಹರಣ** – ಸಂಕೋಚ(ಗೊಳ್ಳುವುದು)
**ಸಂಹರಿಸು** – ನಾಶಗೊಳಿಸು; ಕೊಲ್ಲು
**ಸಂಹಾರಕ** – ಕೊಲ್ಲುವುದು
**ಸಂಹಾರರುದ್ರ** – ಪ್ರಳಯಕಾಲದ ಶಿವ
**ಸಂಹಾರಿಸು** – ನಾಶಮಾಡು; ಕೊಲ್ಲು
**ಸಃ** – ಅವನು
**ಸಕಲ(ಳ)** – ಸಮಗ್ರ
**ಸಕಲಂ(ಳಂ)ಕ** – ಚಂದ್ರ
**ಸಕಲಕಲಾ(ಳಾ)ಧರ** – ಹದಿನಾರು ಕಳೆಗಳುಳ್ಳವನು, ಹುಣ್ಣಿಮೆ ಚಂದ್ರ
**ಸಕಲಕಲಾಧರೆ** – ಎಲ್ಲ ಕಲೆಗಳನ್ನು ಬಲ್ಲವಳು
**ಸಕಲ(ಳ)ಜ್ಞ** – ಸರ್ವಜ್ಞ
**ಸಕಲ(ಳ)ದತ್ತಿ** – (ಜೈನ) ವಂಶದ ಎಲ್ಲವನ್ನೂ ಮಗನಿಗೆ ಕೊಡುವುದು
**ಸಕಲ(ಳ)ರ್ತು(ಕ)** – ಎಲ್ಲ ಋತುಗಳು; ಸರ್ವಋತು
**ಸಕ(ಲ)ಳವಟ್ಟೆ** – ತುಂಡು ಬಟ್ಟೆಯ ಪಟ್ಟಿಗಳು
**ಸಕಲವ್ಯಾಪಿ** – ಎಲ್ಲೆಡೆ ಹಬ್ಬಿರುವ
**ಸಕಳಕ್ಷಮಾಪತಿತ್ವ** – ಎಲ್ಲವನ್ನೂ ಕ್ಷಮಿಸುವ; ಭೂಮಿ ಎಲ್ಲದಕ್ಕೂ ಒಡೆತನ, ಚಕ್ರವರ್ತಿತ್ವ
**ಸಕಿಂಚನ** – ಪರಮಾವಧಿಯಾಗಿ ಹೊಂದಿದವನು
**ಸಕೃತ್** – ಒಮ್ಮೆ
**ಸಕ್ಕ** – ಕಟವಾಯಿ, ಬಾಯಿಯ ಕೊನೆ
**ಸಕ್ಕ(ಕ್ಕೆ)** – (ಶಲ್ಕ) ಚಕ್ಕೆ
**ಸಕ್ಕದ** – ಸಂಸ್ಕೃತ ಭಾಷೆ
**ಸಕ್ಕಿ** – ಸಾಕ್ಷಿ
**ಸಕ್ತ** – ಕೂಡಿದ
**ಸಖಾಯ** – ಗೆಳೆಯ
**ಸಗಣ** – (ಶಕೃತ್) ಸಗಣಿ
**ಸಗರ್ಭವಚನ** – ಅರ್ಥತುಂಬಿದ ಮಾತು
**ಸಗರ್ಭಾಂಗನೆ** – ಬಸುರಿ ಹೆಂಗಸು
**ಸಗಾಟಿಸು** – ಗೆಳೆತನ ಮಾಡು
**ಸಗುಣ** – ತ್ರಿಗುಣಯುಕ್ತನಾದ
**ಸಗ್ಗ** – (ಸ್ವರ್ಗ) ದೇವತೆಗಳ ವಾಸಸ್ಥಳ
**ಸಗ್ಗದ ಜತಿ** – ಸ್ವರ್ಗದ ಋಷಿ
**ಸಗ್ಗದವರ್ಗಳ್** – ದೇವಲೋಕದವರು
**ಸಗ್ಗದಾಕೆ** – ಅಪ್ಸರೆ
**ಸಗ್ಗದೊಱೆ** – ದೇವನದಿ, ಗಂಗೆ
**ಸಚಿತ್ತವಿರತ** – (ಜೈನ) ಹಸಿರು ತರಕಾರಿಗಳನ್ನು ತಿನ್ನದ ವ್ರತ
**ಸಚಿವ** – ಒಡನಾಡಿ; ಮಂತ್ರಿ
**ಸಚೇತನ** – ಜೀವಂತವಾದ್ರ
**ಸಚೇತನೆ** – ಎಚ್ಚರಗೊಂಡವಳು

**ಸಜಲತೆ** – ತೇವವಾಗಿರುವಿಕೆ
**ಸಜೀವಚಿತ್ರ** – ಜೀವಂತಿಕೆಯಿಂದ ಕೂಡಿದ ಚಿತ್ರ
**ಸಜ್ಜಕ** – ರವೆ
**ಸಜ್ಜನ** – ಕುಲಸ್ತ್ರೀ, ಧರ್ಮಪತ್ನಿ
**ಸಜ್ಜನವನಿತೆ** – ಸಜ್ಜನ
**ಸಜ್ಜನವೆಂಡತಿ** – ಸಜ್ಜನ
**ಸಜ್ಜನಿಕೆ** – ಪಾತಿವ್ರತ್ಯ
**ಸಜ್ಜಾತಿಕ್ರಿಯೆ** – (ಜೈನ) ಸತ್ಕುಲದಲ್ಲಿ ಹುಟ್ಟುವ ಪರಿಶುದ್ಧ ಜನ್ಮ
**ಸಜ್ಜಾತಿತ್ವ** – ಸಜ್ಜಾತಿಕ್ರಿಯೆ
**ಸಜ್ಜಾಯಿಗ** – ರತ್ನಗಂಬಳಿ ಮಾರುವವನು
**ಸಜ್ಜೀಕೃತ** – ಸಿದ್ಧಮಾಡಿದ
**ಸಜ್ಜುಕ** – ಮೊಗ್ಗು
**ಸಜ್ಜೈವಾತೃಕ** – ಬೆಳುದಿಂಗಳು, ಚಂದ್ರ
**ಸಜ್ಞಾನಚಕ್ಷು** – ಜ್ಞಾನದೃಷ್ಟಿಯಿರುವವನು
**ಸಟ(ಟಾ)** – ಜಡೆ; ಬೀಳಲು
**ಸಟಾಜಾಳ** – ಕೂದಲ ರಾಶಿ
**ಸಟಾ(ವ)ಳಿ** – ಸಿಂಹದ ಕೇಸರ
**ಸಟ್ಟುಗ** – ಸೌಟು; ಒಂದು ಅಳತೆ
**ಸಡಗರ** – ಸಂಭ್ರಮ
**ಸಡಗರಿಸು** – ಸಂಭ್ರಮಪಡು
**ಸಡಪುಡಂಗೆಯ್** – ಲವಲವಿಕೆಯಿಂದಿರು
**ಸಡಪುಡನೆ** – ಕೂಡಲೇ
**ಸಡಹುಡ** – ಚುರುಕುತನ, ಲವಲವಿಕೆ
**ಸಡಿಲ್** – (ಶಿಥಿಲ) ಅಳ್ಳಕ(ಗೊಳ್ಳು)
**ಸಡಿಲಿಸು** – ಅಳ್ಳಕಗೊಳಿಸು; ಬಿಚ್ಚು
**ಸಡಿಲ್ಚು** – ಸಡಿಲಿಸು
**ಸ(ಸೆ)ಣಂಬು** – ಸಣಬು ಎಂಬ ಗಿಡ
**ಸಣ್ಣಿಗೆ** – ಒರಳು-ರುಬ್ಬುಗುಂಡು-
**ಸಣ್ಣಿತು** – ಸಣ್ಣಗಿರುವುದು, ಚಿಕ್ಕದು
**ಸಣ್ಣಿಸು** – ಪುಡಿಮಾಡು; ನಯಗೊಳಿಸು; ಕೃಶಮಾಡು
**ಸಣ್ಣುಕ** – ಕುಳ್ಳ
**ಸತ** – ಶಾಶ್ವತ
**ಸತತಂ** – ಯಾವಾಗಲೂ
**ಸತತಗತಿ** – ಸದಾ ಚಲಿಸುವುದು, ಗಾಳಿ
**ಸತತಗತಿತನೂಜ** – ವಾಯುಪುತ್ರ, ಹನುಮಂತ
**ಸತನು** – ಶರೀರಸಹಿತನಾದವನು
**ಸತೃಣಾಭ್ಯವಹಾರಿ** – ಹುಲ್ಲು ತಿನ್ನುವವನು, ದಡ್ಡ
**ಸತ್ಕವಿ** – ಒಳ್ಳೆಯ ಕವಿ
**ಸತ್ಕೀರ್ತಿ** – ಒಳ್ಳೆಯ ಕೀರ್ತಿ
**ಸತ್ಕೃತ** – ಉಪಕಾರ; ಗೌರವ
**ಸತ್ಕೃತಿ** – ಉತ್ತಮ ಗ್ರಂಥ; ಉತ್ತಮ ಕೆಲಸ
**ಸತ್ತವಿ** – ಸಪ್ತಮಿ
**ಸತ್ತಿಗೆ (ಛತ್ರಿಕಾ) ಕೊಡೆ**–
**ಸತ್ತಿಗೆತ್ತಿಸು** – ಕೊಡೆ ಹಿಡಿಸು
**ಸತ್ತಿಗೆವಂತ** – (ಬಿಳಿ)ಕೊಡೆ ಹೊಂದಿದವನು, ರಾಜ
**ಸತ್ತುಗ** – ಹುರಿಟ್ಟು; ಸಾರ
**ಸತ್ವ** – ಹಿಟ್ಟು; ಶಕ್ತಿ; ಸತ್ವಗುಣ; ಪ್ರಾಣಿ
**ಸತ್ವಥ** – ಒಳ್ಳೆಯ ಮಾರ್ಗ; ಆಕಾಶ
**ಸತ್ವಥಕುಂತಲ** – ಆಕಾಶಕೇಶಿ, ಶಿವ
**ಸತ್ವಥಾತಿಥಿ** – ಆಕಾಶಗಾಮಿ
**ಸತ್ಪ್ರಣೀತ** – (ಜೈನ) ಅಷ್ಟಧರ್ಮಗಳಲ್ಲಿ ಒಂದು
**ಸತ್ಫಲ** – ಒಳ್ಳೆಯ ಹಣ್ಣು; ಉತ್ತಮ ಫಲಿತಾಂಶ
**ಸತ್ಯಪ್ರತಿಜ್ಞ** – ಪ್ರತಿಜ್ಞೆಯನ್ನು ನಡೆಸುವವನು
**ಸತ್ಯವಾಕ್ಯ** – ಸತ್ಯವಂತ
**ಸತ್ಯಾರ್ಥ** – ನಿಜವಾದುದು
**ಸತ್ರನಿಳಯ** – ಧರ್ಮಛತ್ರ
**ಸತ್ವಬಾಧೆ** – (ಜೈನ) ಜೀವಿಗಳಿಗೆ ಒದಗುವ ನೋವು
**ಸತ್ವಾಢ್ಯ** – ಬಲಿಷ್ಠ
**ಸತ್ತ್ವ** – ಸತ್ವಗುಣ; ಜೀವ
**ಸತ್ತ್ವಾವಲಂಬ** – ಶಕ್ತಿಯನ್ನವಲಂಬಿಸುವವನು
**ಸದಮಲ(ಳ)ಚರಿತ(ತ್ರ)** – ನಿರ್ಮಲವಾದ ನಡತೆಯವನು
**ಸದಮಲ(ಳ)ಬೋಧ** – ನಿರ್ಮಲ ಉಪದೇಶ
**ಸದಮಳಧರ್ಮ** – ಪರಿಶುದ್ಧ ಧರ್ಮ
**ಸದರ್ಥವಾದಿತ್ವ** – ಸರಿಯಾದ ವಾದಮಂಡನೆ
**ಸದಸನ್ಮತಿ** – ಒಳ್ಳೆಯ ಮತ್ತು ಕೆಟ್ಟ ಮನಸ್ಸುಳ್ಳವನು
**ಸದಾನಿ** – ದಾನಿಗಳಿಂದ ಕೂಡಿದ
**ಸದಾನಿಕೇತನ** – ದಾನಿಗಳಿರುವ ಮನೆ
**ಸದಾನುವರ್ತಿ** – ಸದಾ+ಅನುವರ್ತಿ, ಸದಾ ಹಿಂಬಾಲಿಸುವವನು
**ಸದಾಗ್ರಹ** – ಒಳ್ಳೆಯದಕ್ಕಾಗಿ ಒತ್ತಾಯ
**ಸದಾವ್ರತ** – ಯಾವಾಗಲೂ ವ್ರತದಲ್ಲಿರುವವನು
**ಸದುಂಬು** – ಜೌಗು ಭೂಮಿ
**ಸದುಬೀೞ್** – ತೇವಗೊಳ್ಳು
**ಸದೃಶವೃತ್ತಿ** – ಒಂದೇ ಬಗೆಯ ನಡತೆ
**ಸ(ತ)ದೆ** – ಬಡಿ, ಚೆಚ್ಚು
**ಸದೆಬಡಿ** – ಬಲವಾಗಿ ಚೆಚ್ಚು
**ಸದೇಹ** – ಶರೀರಸಮೇತ
**ಸದ್ಗುಣೈಕ್ಯ** – ಸದ್ಗುಣಗಳಿಂದ ಕೂಡಿದವನು
**ಸದ್ಗೃಹತ್ವ** – (ಜೈನ) ಏಳರಲ್ಲಿ ಒಂದು ಬಗೆಯ ಪರಮಸ್ಥಾನ; ಇಷ್ಟವಾದುದನ್ನು ತೊರೆದು ಆತ್ಮಶುದ್ಧಿಮಾಡಿಕೊಳ್ಳುವುದು
**ಸದ್ದ** – (ಶಬ್ದ) ಸದ್ದು
**ಸದ್ಧರ್ಮ** – ಒಳ್ಳೆಯ ನಡವಳಿಕೆ(ಯುಳ್ಳವನು)
**ಸದ್ಬೋಧ** – ಒಳ್ಳೆಯ ಜ್ಞಾನ
**ಸದ್ಭವ್ಯ** – (ಜೈನ) ಒಳ್ಳೆಯ ಧಾರ್ಮಿಕ ವ್ಯಕ್ತಿ
**ಸದ್ಭಾವ** – ಒಳ್ಳೆಯ ಭಾವನೆ, ಅಭಿಪ್ರಾಯ
**ಸದ್ಭ್ರಾಂತ** – ಸುತ್ತುತ್ತಿರುವ
**ಸದ್ರತಿ** – ಶುದ್ಧವಾದ ಅನುರಾಗ

**ಸದ್ವನಜವನ** – ಸುಂದರ ತಾವರೆಗಳ ಸಮೂಹ, ಕೊಳ
**ಸದ್ವಿಜಕುಳೋಪಶೋಭಿ** – ಒಳ್ಳೆಯ ಬ್ರಾಹ್ಮಣಕುಲದಿಂದ ಶೋಭಿಸುವವನು; ಒಳ್ಳೆಯ ಹಲ್ಲುಗಳಿಂದ ಶೋಭಿಸುವವನು
**ಸದ್ವೃತ್ತ** – ಒಳ್ಳೆ ನಡತೆ(ಯುಳ್ಳವನು)
**ಸದ್ವೇದ್ಯ** – (ಜೈನ) ಇಂದ್ರಿಯ ಸುಖವನ್ನು ಉಂಟುಮಾಡುವುದು
**ಸಧರ್ಮಚಾರಿಣಿ** – ಧರ್ಮಕಾರ್ಯಗಳಲ್ಲಿ ಸಹಭಾಗಿ, ಹೆಂಡತಿ
**ಸನತ್ಕುಮಾರ** – (ಜೈನ) ಹದಿನಾರು ಸ್ವರ್ಗಗಳಲ್ಲಿ ಈ ಹೆಸರಿನದು ಒಂದು, ನೋಡಿ, 'ಸ್ವರ್ಗ'
**ಸನಾಭಿ** – ರಕ್ತಸಂಬಂಧಿ
**ಸನಿ** – ಶನಿ, ಒಂದು ಗ್ರಹ
**ಸನಿಗೊಳ್** – ಶನಿ ಹಿಡಿ
**ಸನಿಯ** – ಹತ್ತಿರ
**ಸನ್ನಣ** – (ಸನ್ನಾಹ) ಯೋಧರ ಯುದ್ಧ ಕವಚ
**ಸನ್ನಣಂದೊಡು** – ಕವಚವನ್ನು ಧರಿಸು
**ಸನ್ನಣಂಬೋಗು** – ಸಿದ್ಧಗೊಳ್ಳು
**ಸನ್ನತ** – ಬಾಗುವಿಕೆ; ಬಾಗಿದ
**ಸನ್ನಹಿತ** – ಅಲಂಕಾರಗೊಂಡ
**ಸನ್ನದ್ಧ(ತೆ)** – ಸಿದ್ಧವಾದ ಸ್ಥಿತಿ
**ಸನ್ನಾಹ** – ಸನ್ನಣ; ಕಟ್ಟಿರುವುದು
**ಸನ್ನಾಹಭೇರಿ** – ಯುದ್ಧಸಿದ್ಧತೆಗಾಗಿ ಹೊಡೆಯುವ ಭೇರಿ
**ಸನ್ನಿಂ** – ಸರಿಯಿರಿ
**ಸನ್ನಿಕಾಶ** – ಸಮಾನ
**ಸನ್ನಿದ** – (ಸನ್ನಿಹಿತ) ಸಮೀಪ
**ಸನ್ನಿಧಾನ** – ಸಮೀಪ
**ಸನ್ನಿಧಿ** – ಸನ್ನಿಧಾನ; ಒಳ್ಳೆಯ ನೆಲೆ
**ಸನ್ನಿಪಾತ** – ಸೇರುವುದು
**ಸನ್ನಿಭ** – ಸಮಾನ
**ಸನ್ನಿಹಿತ** – ಸಮೀಪದಲ್ಲಿನ
**ಸನ್ನಿಹಿತೆ** – ಹತ್ತಿರದವಳು
**ಸನ್ನುತ** – ಚೆನ್ನಾಗಿ ಸ್ತುತಿಗೊಂಡ
**ಸನ್ನುತಿಗೆಯ್** – ಚೆನ್ನಾಗಿ ಸ್ತುತಿಮಾಡು
**ಸನ್ನೆ** – ಸಂಕೇತ
**ಸನ್ನೆಗಾಳೆ** – ಯುದ್ಧಸಿದ್ಧತೆಯ ಕಹಳೆ
**ಸನ್ನೆಗೆಯ್** – ಸಂಜ್ಞೆಮಾಡು
**ಸನ್ನೆದೋಱು** – ಸನ್ನೆಗೆಯ್
**ಸನ್ಮಹಿತ** – ಗೌರವಸ್ಥ
**ಸನ್ಮಾನ** – ಗೌರವ
**ಸನ್ಮಾನಕ್ರಿಯೆ** – ಗೌರವ ತೋರಿಸುವುದು
**ಸನ್ಮಾರ್ಗ** – ಸರಿಯಾದ ದಾರಿ
**ಸನ್ಮಾರ್ಗಸಾರ** – ಸರಿದಾರಿಯನ್ನು ಅರಿತವನು
**ಸನ್ಯಂಗ** – ಕದ್ದ ಒಡವೆ
**ಸನ್ಯಸನ** – (ಜೈನ) ಸಲ್ಲೇಖನ ವ್ರತ, ಆಹಾರ–ಪಾನೀಯಗಳನ್ನು ತೊರೆಯುವ ವ್ರತ-
**ಸನ್ಯಸನಂಗೆಯ್** – ಸಲ್ಲೇಖನ ವ್ರತ ಮಾಡು
**ಸನ್ಯಸನವಿಧಾನ** – ಸನ್ಯಸನದ ಮೂಲಕ ಪ್ರಾಣತ್ಯಾಗ ಮಾಡುವುದು
**ಸನ್ಯಸನವಿಧಿ** – ಸನ್ಯಸನವಿಧಾನ
**ಸನ್ಯಾಸವ್ರಜನ** – (ಜೈನ) ಒಂದು ಶಿಕ್ಷಾವ್ರತ, ಸನ್ಯಾಸದೀಕ್ಷೆಯನ್ನು ಪಡೆಯುವುದು
**ಸಪತ್ನ** – ಶತ್ರು
**ಸಪತ್ನಿ** – ಸವತಿ
**ಸಪರ್ಯ(ರ್ಯೆ)** – ಸೇವೆ
**ಸಪಾದ ಲಕ್ಷಕಿತಿ** – ಒಂದೂಕಾಲು ಲಕ್ಷ ಸೀಮೆ
**ಸಪುಣ್ಯ** – ಪುಣ್ಯವಂತ
**ಸಪ್ತಗುಣ** – ಶ್ರದ್ಧೆ, ಶಕ್ತಿ, ಭಕ್ತಿ, ವಿಜ್ಞಾನ, ಅಲುಬ್ಧಿತ, ಕ್ಷಮೆ, ತ್ಯಾಗಗಳೆಂಬ ಏಳು ಗುಣಗಳು
**ಸಪ್ತಗುಪ್ತಿ** – ಏಳು ಸುತ್ತಿನ ಕೋಟೆ
**ಸಪ್ತಚ್ಛದ** – ಪಚ್ಚಕರ್ಪೂರದ ಗಿಡ; ಏಳು ಸುತ್ತಿನ ಬಾಳೆ ಗಿಡ
**ಸಪ್ತಜಲಧಿ** – (ಜೈನ) ಲವಣ, ಕಾಲ, ಪುಷ್ಕರ, ವಾರುಣ, ಕ್ಷೀರ, ಘೃತ, ಕ್ಷೋಧಗಳಿಂದ ಕೂಡಿದ ಏಳು ಸಮುದ್ರಗಳು
**ಸಪ್ತಜಿಹ್ವ** – ಏಳು ನಾಲಗೆಗಳುಳ್ಳದ್ದು, ಅಗ್ನಿ
**ಸಪ್ತತಂತು** – ಯಾಗ
**ಸಪ್ತತತ್ವ** – (ಜೈನ) ಜೀವ, ಅಜೀವ, ಬಂಧ, ಅಸ್ರವ, ಸಂವರ, ನಿರ್ಜರ, ಮೋಕ್ಷಗಳೆಂಬ ಏಳು ತತ್ವಗಳು
**ಸಪ್ತದಳಪ್ರಾಸಾದ** – ಏಳು ಉಪ್ಪರಿಗೆಗಳ ಅರಮನೆ
**ಸಪ್ತಧಾತು** – ಶರೀರದಲ್ಲಿನ ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜೆ, ಅಸ್ಥಿ, ಶುಕ್ರಗಳೆಂಬ ಏಳು ಧಾತುಗಳು
**ಸಪ್ತನಯ** – (ಜೈನ) ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ ಎಂಬ ಏಳು ನಯಗಳು
**ಸಪ್ತನರಕ** – (ಜೈನ) ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ, ಮಹಾತಮಃಪ್ರಭೆ ಎಂಬ ಏಳು ನರಕಗಳು
**ಸಪ್ತಪರಮಸ್ಥಾನ** – (ಜೈನ) ಸಜ್ಜಾತಿತ್ವ, ಸದ್ಗೃಹತ್ವ, ಪಾರಿವ್ರಾಜ್ಯ, ಸುರೇಂದ್ರತ, ಸಾಮ್ರಾಜ್ಯ, ಅರ್ಹಂತ್ಯ, ನಿರ್ವಾಣ ಎಂಬ ಮೋಕ್ಷಪದವಿಯ ಏಳು ಹಂತಗಳು
**ಸಪ್ತಪರ್ಣ** – ಸಪ್ತಚ್ಛದ
**ಸಪ್ತಪ್ರಕೃತಿ** – (ಜೈನ) ಕಷಾಯಚತುಷ್ಕ ಮತ್ತು ತ್ರಿವಿಧ ದರ್ಶನಗಳು

**ಸಪ್ತಭಂಗಿ** – (ಜೈನ) ಯಾವುದರಲ್ಲೇ ಆಗಲಿ ಇರುವ ಪರಸ್ಪರ ವಿರೋಧವನ್ನು ವಿವರಿಸುವ ಏಳುಬಗೆಯ ತರ್ಕಕ್ರಮ
**ಸಪ್ತಭಯ** – (ಜೈನ) ಇಹಲೋಕ, ಪರಲೋಕ, ಮೃತ್ಯು, ವೇದನೆ, ಅಗುಪ್ತಿ, ಅರಕ್ಷೆ, ಅಕಸ್ಮಾತ್‌ಗಳ ಬಗೆಗಿನ ಭಯ
**ಸಪ್ತ(ಮ)ಮದಾವಸ್ಥೆ** – ಆನೆಯ ಮದದ ಸ್ಥಿತಿಯ ಏಳನೆಯ ಹಂತ
**ಸಪ್ತರ್ಧಿ** – (ಜೈನ) ಬುದ್ಧಿ, ತಪಸ್ಸು, ವಿಕ್ರಿಯೆ, ಔಷಧಿ, ಬಲ, ಅಕ್ಷೀಣ ಎಂಬ ಏಳು ಋದ್ಧಿಗಳು
**ಸಪ್ತರ್ಧಿಜ್ಞಾನ** – ಸಪ್ತರ್ಧಿಗಳಿಂದ ಒದಗುವ ಜ್ಞಾನ
**ಸಪ್ತರ್ಷಿಸಮಾಜ** – ಸಪ್ತರ್ಷಿಮಂಡಲ
**ಸಪ್ತವಾಸರ** – ಅಮೃತ, ಬಾಷ್ಪ, ವಹ್ನಿ, ದೇವ, ಅಂಡ, ಗರ್ಭ, ಸಾಮ್ನಾ ಎಂಬ ಏಳು ಮೂಲದ ಕುದುರೆಗಳನ್ನುಳ್ಳವನು, **ಸೂರ್ಯ**–
**ಸಪ್ತವ್ಯಸನ** – ಸ್ತ್ರೀ, ದ್ಯೂತ, ಬೇಟೆ, ಮದ್ಯಪಾನ, ವಾಕ್ಪಾರುಷ್ಯ, ದಂಡಪಾರುಷ್ಯ, ಅರ್ಥದೂಷಣ ಎಂಬ ಏಳು ವ್ಯಸನಗಳು
**ಸಪ್ತಸಪ್ತಿ** – ಸಪ್ತವಾಸರ
**ಸಪ್ತಶೀಲ** – ಮೂರು ಗುಣವ್ರತಗಳು (ದಿಗ್ವ್ರತ, ದೇಶವ್ರತ, ದಂಡವಿರತಿವ್ರತ) ಹಾಗೂ ನಾಲ್ಕು ಶಿಕ್ಷಾವ್ರತಗಳು (ಸಾಮಾಯಿಕ, ಪ್ರೋಷಧೋಪವಾಸ, ಉಪಭೋಗ ಪರಿಭೋಗಾತಿಥಿಸಂಗ್ರಹ, ಪಶ್ಚಿಮ ಸಲ್ಲೇಖನ)
**ಸಪ್ತಸ್ವರ** – ಸಂಗೀತದಲ್ಲಿನ ಷಡ್ಜ, ವೃಷಭ, ಗಾಂಧಾರ, ಮಧ್ಯ, ಪಂಚಮ, ಧೈವತ, ನಿಷಾದ ಎಂಬ ಏಳು ಸ್ವರಗಳು
**ಸಪ್ತಾಂಗ** – ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ – ಎಂಬ ರಾಜ್ಯಾಂಗಗಳು–
**ಸಪ್ತಾನೀಕ** – (ಜೈನ) ಸೌಧರ್ಮೇಂದ್ರನ ಏಳು ಸೇನಾಂಗಗಳು: ವೃಷಭ, ರಥ, ತುರಗ, ಮದಗಜ, ಪದಾತಿ, ನರ್ತಕ(ಕಿ), ಗಂಧರ್ವ
**ಸಪ್ತಾನೀಕಿನಿ** – ಸಪ್ತಾನೀಕ
**ಸಪ್ತಾರ್ಚಿ** – ಕಾಳಿ, ಕರಾಳಿ, ಮನೋಜವೆ, ಸುಧೂಮ್ರವರ್ಣೆ, ಸುಲೋಹಿತೆ, ಉಗ್ರೆ, ಪ್ರದೀಪ್ತೆ ಎಂಬ ಏಳು ನಾಲಗೆಗಳಿಂದ ಕೂಡಿದುದು, ಬೆಂಕಿ, ಅಗ್ನಿ
**ಸಪ್ತಾಶ್ವ** – ಸೂರ್ಯ
**ಸಪ್ತಿ** – ಕುದುರೆ
**ಸಪ್ತೋರ್ವಿ** – ಸಪ್ತಲೋಕಗಳು
**ಸಪ್ಪದ** – (ಷಟ್ಪದ) ದುಂಬಿ
**ಸಪ್ಪಸಿರ** – ಮುಷ್ಟಿ
**ಸಪ್ಪ(ಫ್ಫ)ಳ** – (ಸತ್ಫಲ) ಒಳ್ಳೆಯ ಫಲ
**ಸಪ್ಪುಳ್** – ದನಿ, ಶಬ್ದ
**ಸಪ್ರಪಂಚಂ** – ವಿವರವಾಗಿ
**ಸಪ್ರವೀಚಾರ** – (ಜೈನ) ಇಂದ್ರಿಯಜನ್ಯ ಸುಖ
**ಸಪ್ರಸಾದವಚನ** – ಅನುಗ್ರಹದ ಮಾತು
**ಸಫಲೀಕೃತ** – ಸಾರ್ಥಕಗೊಳಿಸಿದ
**ಸಬ** – (ಶವ) ಹೆಣ
**ಸಬರಿ** – (ಶಬರೀ) ಬೇಡಿತಿ
**ಸಬಳ** – ಕೊಂತ, ಭರ್ಜಿ
**ಸಬಳವಿನ್ನಣಿ** – ಭರ್ಜಿಯ ಬಳಕೆಯಲ್ಲಿ ಪ್ರವೀಣ
**ಸಬ್ಬ** – (ಶರ್ವ) ಶಿವ
**ಸಬ್ಬವ** – ಮೇಳ; ಹಾಸ್ಯ
**ಸಬ್ಬವಗಾಱ** – ನಕಲಿ, ವಿದೂಷಕ
**ಸಭಾಗೃ(ಗೇ)ಹ** – ಸಭೆ ನಡೆಯುವ ಸ್ಥಳ
**ಸಭಾಜನ** – ಸಭೆಯಲ್ಲಿನ ಸದಸ್ಯರು
**ಸಭಾಭವನ** – ಸಭಾಗೃ(ಗೇ)ಹ
**ಸಭಾಭೂಮಿ** – ಸಭಾಗೃ(ಗೇ)ಹ
**ಸಭಾಭ್ಯಂತರ** – ಸಭೆಯ ಒಳಗು
**ಸಭಾಮಂಟಪ** – ಸಭಾಗೃ(ಗೇ)ಹ
**ಸಭಾವಿಷ್ಟ** – ಸಭೆಯ ಸದಸ್ಯ
**ಸಭಾಸದನ** – ಸಭಾಗೃ(ಗೇ)ಹ
**ಸಭಾಸದ್ಮ** – ಸಭಾಗೃ(ಗೇ)ಹ
**ಸಮಂಚಿತ** – ಕೂಡಿದ
**ಸಮಂಜಸ** – ಯೋಗ್ಯ ಪುರುಷ
**ಸಮಂಜಸತ್ವ** – ಸಮರ್ಪಕತೆ
**ಸಮಂತಾಗಿಸು** – ಚೆಂದವಾಗಿಸು
**ಸಮಂತು** – ಚೆಂದ; ಚೆಂದವಾಗಿ
**ಸಮಂದರ್** – ಸಮಂ+ತರ್, ಸರಿದೂಗಿಸು
**ಸಮಂಬಡೆ** – ಸದೃಶವಾಗು
**ಸಮಕಕ್ಷ** – ಸಮಾನ
**ಸಮಕಟ್ಟು** – ಯೋಗ್ಯತೆ; ಏರ್ಪಾಡು; ಏರ್ಪಡಿಸು; ಹೋಲಿಕೆ
**ಸಮಕಟ್ಟುಗೆಡು** – ಕ್ರಮ ತಪ್ಪಿಹೋಗು
**ಸಮಕೊ(ಗೊ)ಳಿಸು** – ಸರಿ ಮಾಡು
**ಸಮಕ್ಷ** – ಎದುರು
**ಸಮಗ್ರ** – ತುಂಬಿಕೊಂಡೊರುವ, ಎಲ್ಲ
**ಸಮಚತುರಸ್ರ** – ಚಚ್ಚೌಕ
**ಸಮಚತುರಸ್ರ ಸಂಸ್ಥಾನ** – ಪ್ರಮಾಣಬದ್ಧ ಶರೀರವುಳ್ಳವನು
**ಸಮಚ್ಛಿದುರ** – ಸಮಾನ ಭಾಗವಾಗಿರುವ
**ಸಮತಾಭಾವ(ನೆ)** – ಸಮಸ್ಥಿತಿ
**ಸಮತಿಕ್ರಾಮತ** – ಮಿತಿಮೀರಿದ
**ಸಮತೆ** – ಸಮತಾಭಾವ(ನೆ)
**ಸಮತ್ವೀಭಾವ** – ಸಮತಾಭಾವ(ನೆ)
**ಸಮತ್ಸರತ್ವ** – ಹೊಟ್ಟೆಕಿಚ್ಚಿನಿಂದ ಕೂಡಿರುವುದು

**ಸಮದ** – ಸ+ಮದ, ಮದದಿಂದ ಕೂಡಿದ; ಸಮ+ದ, ಸಮಾನವಾಗಿ ದಾನಮಾಡುವವನು
**ಸಮದತ್ತಿ** – (ಜೈನ) ಸಮಾನಸ್ಕಂಧನಿಗೆ ಕೊಡುವ ದಾನ
**ಸಮದರ್ಶನ** – ಎಲ್ಲವನ್ನೂ ಒದೇ ರೀತಿ ಕಾಣುವುದು
**ಸಮದವಿರೋಧಿ** – ಮದಿಸಿದ ವೈರಿ
**ಸಮದಿಟ್ಟಿ** – ಸಮಾನ ನೋಟ; ನೇರ ನೋಟ
**ಸಮದೃಷ್ಟಿ** – ಸಮದಿಟ್ಟಿ
**ಸಮದೇಭ** – ಸಮದ+ಇಭ. ಮದಿಸಿದ ಆನೆ
**ಸಮಧಿಕ** – ಶ್ರೇಷ್ಠವಾದ
**ಸಮಧಿಕೃತ** – ಅಧಿಕಾರ ಪಡೆದವನು
**ಸಮಧಿಗತ** – ಪಡೆದ(ವನು)
**ಸಮಧ್ಯಾಸಿತ** – ಜೊತೆಯಾಗಿ ಕುಳಿತ
**ಸಮನಂತರಂ** – ಆನಂತರ
**ಸಮ(ವ)ನಿಸು** – ಉಂಟಾಗು; ಕೂಡಿಕೊ
**ಸಮನ್ವಿತ** – ಬೆರೆತುಕೊಂಡ(ದ್ದು)
**ಸಮಪಾದ** – ಯುದ್ಧದಲ್ಲಿ ನಿಲ್ಲುವ ಒಂದು ಭಂಗಿ, ಮಧ್ಯದಿಂದ ಸಮಾನ ಅಂತರದಲ್ಲಿ ಕಾಲುಗಳನ್ನಿಟ್ಟು ನಿಲ್ಲುವುದು
**ಸಮಯ** – ಮತ, ಸಿದ್ಧಾಂತ
**ಸಮಯಬಾಹ್ಯ** – (ಮತದಿಂದ) ಬಹಿಷ್ಕೃತ
**ಸಮರ** – ಯುದ್ಧ
**ಸಮರಜಯ** – ಯುದ್ಧದ ಗೆಲವು
**ಸಮರಪರಿಚ್ಛೇದ** – ಯುದ್ಧವನ್ನೇ ಮಾಡುವ ನಿಶ್ಚಯ
**ಸಮರಥ** – ಎದುರಾಳಿಯೊಡನೆ ಸಮಾನವಾಗಿ ಹೋರಾಡುವ ರಥಿಕ
**ಸಮರಸನ್ನಾಹ** – ಯುದ್ಧಸಿದ್ಧವಾಗಿರು(ವವನು)
**ಸಮರಾಂಗಣ** – ಯುದ್ಧಭೂಮಿ
**ಸಮರಾಕರ** – ಸಮರಾಂಗಣ
**ಸಮರಾನಕ** – ಯುದ್ಧ ಭೇರಿ
**ಸಮರೋದ್ಯೋಗಂಗೆಯ್** – ಯುದ್ಧಸಿದ್ಧನಾಗು
**ಸಮರ್ಥ(ಕ)** – ಶಕ್ತನಾದವನು
**ಸಮರ್ಪಿಸು** – ನೀಡು
**ಸಮವಕಾರ** – ದಶರೂಪಕಗಳಲ್ಲಿ ಒಂದು ಪ್ರಭೇದ, ದೇವಾಸುರ ಯುದ್ಧವಸ್ತುವಿನ ಮೂರಂಕ ಉಳ್ಳದ್ದು
**ಸಮವತೀರ್ಣ** – ಕಾಣಿಸಿಕೊಂಡ
**ಸಮವಯ(ಸ)** – ಒಂದೇ ಓರಗೆಯವನು
**ಸಮವರ್ತಿ** – ಎಲ್ಲರ ಜೊತೆಯೂ ಸಮಾನ ರೀತಿಯಲ್ಲಿ ನಡೆದುಕೊಳ್ಳುವವನು; ಯಮ
**ಸಮವಸರಣ** – (ಜೈನ) ಕೇವಲಜ್ಞಾನವನ್ನು ಪಡೆದ ಮೇಲೆ ತೀರ್ಥಂಕರನು ಉಪದೇಶ ಮಾಡಲು ಇಂದ್ರನ ಆಣತಿಯಂತೆ ಕುಬೇರ ರಚಿಸುವ ಮಂಟಪ
**ಸಮವಸರಣಭೂಮಿ** – ಸಮವಸರಣ ಇರುವ ಜಾಗ
**ಸಮವಸೃತಿ** – ಸಮವಸರಣ
**ಸಮವಾಯ** – ಬೇರ್ಪಡಿಸಲಾರದಂತೆ ಕೂಡಿಕೊಂಡಿರುವುದು; ಗುಂಪು
**ಸಮವೃತ್ತಿ** – ಸಮಚಿತ್ತತೆ
**ಸಮಸಮಾಯೋಗ** – ಹೊಂದಾಣಿಕೆ
**ಸಮಸಲ್** – ಸಮಾನವಾಗಿ ಕೂಡಿಕೊ; ಉಂಟಾಗು
**ಸಮಸ್ಕಂಧ** – ಸರಿಸಮನಾದವನು
**ಸಮಸ್ತಭಾರತ** – ಇಡೀ ಭಾರತ ಕಾವ್ಯ
**ಸಮಚೆಕೊಳ್** – ನಯಗೊಳ್ಳು
**ಸಮಚು** – ನಯಗೊಳಿಸು; ಮಟ್ಟ ಮಾಡು; ತಿದ್ದು; ಶುಚಿಮಾಡು
**ಸಮಚುಗೆ** – ಅಲಂಕಾರ
**ಸಮಾಕರ್ಣಿತ** – ಚೆನ್ನಾಗಿ ಕೇಳಿಸಿಕೊಂಡ
**ಸಮಾಕಾರ** – ಹೋಲಿಕೆಯ ರೂಪ
**ಸಮಾಖ್ಯೆ** – ಹೆಸರು; ಕೀರ್ತಿ
**ಸಮಾಗಮ(ನ)** – ಸೇರುವಿಕೆ
**ಸಮಾಜ** – ಗುಂಪು; ರಾಶಿ
**ಸಮಾಧಿ** – ಯೋಗದ ಎಂಟನೆಯ ಅವಸ್ಥೆ; ದೇವರಲ್ಲಿ ಲೀನಗೊಳ್ಳುವುದು; (ಜೈನ) ಷೋಡಶಭಾವನೆಗಳಲ್ಲಿ ಒಂದು, ದೇಹತ್ಯಾಗ
**ಸಮಾಧಿಮರಣ** – (ಜೈನ) ಮನಶ್ಶಾಂತಿಯಿಂದ ಮರಣವನ್ನೈದುವುದು
**ಸಮಾಧಿವಿಧಿ** – ಸಮಾಧಿಮರಣ
**ಸಮಾನ** – ವಿಸ್ತೀರ್ಣ; ಸಮಭಾವ
**ಸಮಾನ ಪ್ರತಿಪತ್ತಿ** – ತನಗೆ ಸಮಾನವಾಗಿರುವ ಗೌರವ
**ಸಮಾರೋಪಿತ** – ಮೇಲೇರಿಸಿದ
**ಸಮಾಲಿಂಗಿತ** – ಚೆನ್ನಾಗಿ ಬೆರೆತ
**ಸಮಾವಾಸ** – ಬಿಡಾರ
**ಸಮಾಶ್ವಾಸಿಸು** – ಸಮಾಧಾನಗೊಳಿಸು
**ಸಮಾಸಾದಿತ** – ಸಮೀಪಕ್ಕೆ ಬಂದ
**ಸಮಾಹಿತ** – ಸಮಾಧಾನವನ್ನು ಪಡೆದ
**ಸಮಾಹಿತಚಿತ್ತ** – ಸಮಾಧಾನದ ಮನಸ್ಸುಳ್ಳವನು
**ಸಮಾಹಿತವೃತ್ತಿ** – ಸಮಾಧಾನದ ಸ್ಥಿತಿ
**ಸಮಾಹಿತಾಂತಃಕರಣ** – ಸಮಾಹಿತಚಿತ್ತ
**ಸಮಾಹೃತ** – ಒಟ್ಟುಗೂಡಿಸಿದ
**ಸಮಾಹೃತಿ** – ಬೆರಕೆ; ಸೇರುವಿಕೆ
**ಸಮಿತಿ** – ಸಮೂಹ
**ಸಮೀಕ** – ಯುದ್ಧ
**ಸಮೀಕರಿಸು** – ಜೊತೆಗೂಡಿಸು
**ಸಮೀಕೃತ** – ಕೂಡಿಸಿದ; ಸಮಮಾಡಿದ
**ಸಮೀಚೀನ** – ಯೋಗ್ಯ
**ಸಮೀಪಗತ** – ಹತ್ತಿರ ಬಂದವನು
**ಸಮೀಪವರ್ತಿ** – ನಿಕಟವರ್ತಿ
**ಸಮೀಪಸ್ಥಿತ** – ಹತ್ತಿರವಿರುವ

**ಸಮೀರ(ಣ)** – ಗಾಳಿ
**ಸಮೀರಭುಕ್** – ಗಾಳಿಯನ್ನು ಸೇವಿಸುವುದು, ಹಾವು
**ಸಮೀಹಿತ** – ಬಯಕೆ
**ಸಮುಚಿತ** – ಸೂಕ್ತವಾದ
**ಸಮುಚಿತಾಸನ** – ಸೂಕ್ತ ಪೀಠ
**ಸಮುಚ್ಚಯವಚನ** – ಕರ್ಮ–ಜ್ಞಾನಗಳು ಕೂಡಿ ಮೋಕ್ಷಸಾಧನವೆಂಬ ಸಿದ್ಧಾಂತ–
**ಸಮುಚ್ಚಳಿತ** – ಮೇಲೆ ಹಾರುವ
**ಸಮುಚ್ಛಿನ್ನ** – ಪೂರ್ತಿ ನಾಶವಾದ
**ಸಮುಚ್ಛ್ರಿತ** – ಎತ್ತರವಾದ
**ಸಮುಜ್ಜ್ವಲ** – ಜಾಜ್ವಲ್ಯಮಾನವಾದ
**ಸಮುತ್ತರಣ** – ದಾಟುವಿಕೆ
**ಸಮುತ್ತುಂಗ** – ಎತ್ತರವಾದ
**ಸಮುತ್ಥಾಂಶು** – ಹೊಮ್ಮಿದ ಕಾಂತಿ
**ಸಮುತ್ಥಾನ** – ಏರುವುದು
**ಸಮುತ್ಥಾಪಿತ** – ಎತ್ತರದಲ್ಲಿ ನೆಲೆಗೊಂಡ
**ಸಮುತ್ಪನ್ನ** – ಹುಟ್ಟಿದ
**ಸಮುತ್ಪಾಟನ** – ಬುಡಸಹಿತ ಕೀಳುವುದು
**ಸಮುತ್ಪ್ಲುತ** – ನೆಗೆತ
**ಸಮುತ್ಫುಲ್ಲ** – ಅರಳಿದ
**ಸಮುತ್ಸಾರಿತ** – ಹೊರಡಿಸಲ್ಪಟ್ಟ
**ಸಮುತ್ಸುಕ** – ಉತ್ಸಾಹದಿಂದ ಕೂಡಿದ
**ಸಮುದಗ್ರ** – ಶಿಖರದಲ್ಲಿರುವ
**ಸಮುದಾಯ** – ಮೊತ್ತ
**ಸಮುದಾಯಶೋಭೆ** – ಒಟ್ಟಾರೆಯಾದ ಸೌಂದರ್ಯ
**ಸಮುದಿತ** – ಒಟ್ಟು ಸೇರಿದ; ಉಂಟಾದ; ಸೇರಿದುದು
**ಸಮುದ್ಗತ** – ಮೇಲೆದ್ದ
**ಸಮುದ್ಘಾತ** – (ಜೈನ) ಸ್ವಲ್ಪ ಪ್ರಮಾಣದಲ್ಲಿ ಉಳಿದಿರಬಹುದಾದ ಕರ್ಮಾಂಶವನ್ನು ಕಳೆದುಕೊಳ್ಳಲು ಕೇವಲಿಯು ಕೈಗೊಳ್ಳುವ ಆತ್ಮವಿಸ್ತರಣೆ
**ಸಮುದ್ಘೋಷಣ** – ಜೋರಾದ ಕೂಗು
**ಸಮುದ್ಧೃತ** – ಮೇಲ್ಕೆ ಚಾಚಿಕೊಂಡ
**ಸಮುದ್ಭಟ** – ಶ್ರೇಷ್ಠವಾದ
**ಸಮುದ್ಭೂತ** – ಉಂಟಾದ
**ಸಮುದ್ಯತ್** – ಮೇಲಕ್ಕೇಳುತ್ತಿರುವ
**ಸಮುದ್ರಾಂತ** – ಕಡಲಿನವರೆಗಿನ
**ಸಮುದ್ರೋಪಕಂಠ** – ಕಡಲ ತೀರ
**ಸಮುದ್ವರ್ತನ** – ಮೇಲೆ ಚಿಮ್ಮುವ
**ಸಮುನ್ನತ** – ಬಹು ಎತ್ತರದ; ಶ್ರೇಷ್ಠವಾದ
**ಸಮುನ್ಮಿಷತ್** – ಪ್ರಕಾಶಿಸುತ್ತಿರುವ
**ಸಮುಪಚಿತ** – ಚೆನ್ನಾಗಿ ಒಟ್ಟುಗೂಡಿದ
**ಸಮುಪಜನಿತ** – ಸಂಭವಿಸಿದ
**ಸಮುಪಜಾತ** – ಹುಟ್ಟಿದ
**ಸಮುಪಸ್ಥಿತ** – ಬಳಿಯಿರುವ
**ಸಮುಪಹಿತ** – ಜೊತೆಗೂಡಿರುವ
**ಸಮುಪಾತ್ತ** – ಒಳಗೊಂಡ
**ಸಮುಪಾಹೃತ** – ತ್ಯಜಿಸಲ್ಪಟ್ಟ
**ಸಮುಪೇತ** – ಕೂಡಿದ
**ಸಮುಲ್ಬಣಾಂಬು** – ಕದಡಿದ ನೀರು
**ಸಮೆ** – ಮಾಡು, ನಿರ್ಮಿಸು; ಮುಗಿದುಹೋಗು; ಕೃಶವಾಗು
**ಸಮೆತರ್** – ಮುಗಿದುಹೋಗು
**ಸಮೆ(ವೆ)ಯಿಸು** – ಕಟ್ಟಿಸು; ಸಿದ್ಧಗೊಳಿಸು; ಮುಗಿಸು
**ಸಮ್ಮತ** – ಒಪ್ಪಿಗೆಯಾಗುವ; ವಿಚಾರ
**ಸಮ್ಮದ** – ಸಂಬಂಧ; ಸಂತೋಷ; ಹೆಚ್ಚಾದ ಮದ
**ಸಮ್ಮನ** – (ಸನ್ಮಾನ) ಗೌರವ
**ಸಮ್ಮನಿಸು** – ಗೌರವಿಸು; ಮೆಚ್ಚು
**ಸಮ್ಮರ್ದನ** – ತುಳಿದುಹಾಕಿದ
**ಸಮ್ಮಾರ್ಜಿತ** – ಗುಡಿಸಿದ
**ಸಮ್ಮಾರ್ಜಿನಿ** – ಕಸಪೊರಕೆ
**ಸಮ್ಮಿಶ್ರ** – ಚೆನ್ನಾಗಿ ಬೆರೆತ
**ಸಮ್ಮೂರ್ಛನೆ** – (ಜೈನ) ಶರೀರಕ್ಕೆ ತಕ್ಕ ಪುದ್ಗಲಗಳನ್ನು ತೆಗೆದುಕೊಳ್ಳುವುದು
**ಸಮ್ಮೋಹನ** – ಮೈಮರೆವು
**ಸಮ್ಮೋಹನಾಸ್ತ್ರ** – ಮೂರ್ಛೆಗೊಳಿಸುವ ಬಾಣ
**ಸಮ್ಯಕ್ಚ(ಕ್ಚಾ)ರಿತ್ರ** – (ಜೈನ) ರತ್ನತ್ರಯಗಳಲ್ಲಿ ಒಂದು, ಒಳ್ಳೆಯ ನಡತೆ
**ಸಮ್ಯಕ್ಶೀಲತೆ** – ಸಮ್ಯಕ್ಚ(ಕ್ಚಾ)ರಿತ್ರ
**ಸಮ್ಯಕ್ತ್ವ** – (ಜೈನ) ಧರ್ಮದ ಬಗೆಗಿನ ಅಚಲ ನಂಬಿಕೆ
**ಸಮ್ಯಕ್ತ್ವಪ್ರಕೃತಿ** – (ಜೈನ) ದರ್ಶನಮೋಹನೀಯ ಕರ್ಮದ ಮೂರು ಪ್ರಭೇದಗಳಲ್ಲಿ ಒಂದು
**ಸಮ್ಯಕ್ತ್ವಶುದ್ಧಿ** – (ಜೈನ) ಸಮ್ಯಕ್ತ್ವಸಾಧನೆಗೆ ಆವಶ್ಯಕವಾದ ತ್ರಿಕರಣಶುದ್ಧಿ
**ಸಮ್ಯಗ್ಜ್ಞಾನ** – (ಜೈನ) ರತ್ನತ್ರಯಗಳಲ್ಲಿ ಒಂದು, ಒಳ್ಳೆಯ ತಿಳಿವಳಿಕೆ
**ಸಮ್ಯಗ್ದರ್ಶನ** – (ಜೈನ) ರತ್ನತ್ರಯಗಳಲ್ಲಿ ಒಂದು, ಧರ್ಮದಲ್ಲಿನ ನಂಬಿಕೆ–ಶ್ರದ್ಧೆಗಳು–
**ಸಮ್ಯಗ್ದೃಷ್ಟಿ** – ಸಮ್ಯಗ್ದರ್ಶನ
**ಸಮ್ಯಗ್ಭವನ** – ಒಳ್ಳೆಯ ಮನೆ
**ಸಮ್ಯಙ್ಮಂತ್ರ** – ಒಳ್ಳೆಯ ಮಂತ್ರ
**ಸಮ್ಯಙ್ಮಿಥ್ಯಾತ್ವ** – (ಜೈನ) ದರ್ಶನಮೋಹನೀಯಗಳಲ್ಲಿ ಒಂದು, ರತ್ನತ್ರಯಗಳ ಸಾಧನೆಗೆ ಒದಗುವ ಅಡ್ಡಿ
**ಸಮ್ಯಧಿಗಮ್ಯತೆ** – ಪರಿಪೂರ್ಣ ಜ್ಞಾನವನ್ನು ಪಡೆದಿರುವುದು
**ಸಯ್** – ನೇರವಾದ; ಪ್ರಾಮಾಣಿಕವಾದ
**ಸಯಂಬರ** – ಸ್ವಯಂವರ
**ಸಯಿಸತ್ತಮ** – ಅತ್ಯಂತ ಶ್ರೇಷ್ಠ
**ಸಯ್ತುಡು** – ಒಪ್ಪವಾಗಿರಿಸು

**ಸಯ್ತಿರ್** – ಸೈತಿರ್, ಸುಮ್ಮನಿರು
**ಸಯ್ತಿರಿಸು** – ಸಂತೋಷಗೊಳಿಸು
**ಸಯ್ತು** – ಸುಮ್ಮನೆ; ಸರಿಯಾಗಿ; ನೇರವಾಗಿ; ಸತ್ಯ
**ಸಯ್ತೆಣಿಸು** – ಒಳ್ಳೆಯದನ್ನು ಗಮನಿಸು
**ಸಯ್ದಂ(ರ್)** – ಸನ್ನಡತೆಯವನು(ರು); ಪ್ರಾಮಾಣಿಕ(ರು)
**ಸಯ್ದವನ್(ರ್)** – ಸಯ್ದಂ(ರ್)
**ಸಯ್ಪು** – ಸೈಪು, ಪುಣ್ಯ; ಅದೃಷ್ಟ
**ಸರ** – (ಸ್ವರ) ದನಿ; (ಶರ) ಬಾಣ
**ಸರಂಗೆಯ್** – ಶಬ್ದಮಾಡು
**ಸರಂದೋಱು** – ಸರಂಗೆಯ್
**ಸರಕ್ತಲೋಚನ** – ಕೆಂಪು ಕಣ್ಣು(ಳ್ಳವನು)
**ಸರದ** – (ಶರತ್) ಕಾಲ
**ಸರದಿ** – (ಶರಧಿ) ಸಮುದ್ರ
**ಸರಬ** – (ಶರಭ) ಒಂದು ಬಲಿಷ್ಠ ಕಾಲ್ಪನಿಕ ಪ್ರಾಣಿ
**ಸರಭಸ** – ತ್ವರಿತವಾಗಿ, ರಭಸದಿಂದ
**ಸರಲ್** – ಬಾಣ
**ಸರಲ(ಳ)** – ಧೂಪದ ಮರ; ನೇರವಾದುದು
**ಸರವಣ** – ಜೊಂಡು
**ಸರವರ** – (ಸರೋವರ) ಕೊಳ
**ಸರವಾದಿ** – (ಸ್ವರವಾದಿ) ಹಾಡುಗಾರ
**ಸರವಿ** – ಹುಲ್ಲಿನ ಹಗ್ಗ
**ಸರವೇಱಿಸು** – ಮಾಲೆಯಾಗಿ ಕಟ್ಟು; ಒಂದರ ನಂತರ ಮತ್ತೊಂದನ್ನಿರಿಸುತ್ತ ಹೋಗು
**ಸರಸ** – ರಸವತ್ತಾದ; ರುಚಿಕರವಾದ; ಪ್ರೀತಿಯ ಚಟುವಟಿಕೆ
**ಸರಸಂಬೆಱು** – ರಸವತ್ತತೆಯಿಂದ ಕೂಡಿರು
**ಸರಸತಿ** – (ಸರಸ್ವತಿ) ವಿದ್ಯಾಧಿದೇವತೆ
**ಸರಸತಿವರ** – ಸರಸ್ವತಿಯ ಗಂಡ, ಬ್ರಹ್ಮ
**ಸರಸಫಲ(ಳ)** – ರಸವತ್ತಾದ ಹಣ್ಣು
**ಸರಸಾತ್ಮ** – ರಸಿಕವ್ಯಕ್ತಿ; ಪ್ರೇಮಲ ವ್ಯಕ್ತಿ
**ಸರಸಾಲೋಕನ** – ಪ್ರೇಮಲದೃಷ್ಟಿ
**ಸರಸಿ** – ಸರೋವರ
**ಸರಸಿ(ೞ)ಜ** – ಕೊಳದಲ್ಲಿ ಹುಟ್ಟಿದ್ದು, ತಾವರೆ
**ಸರಸಿಜಗರ್ಭ** – ಬ್ರಹ್ಮ
**ಸರಸಿಜನಾಭ** – ನಾಭಿಯಲ್ಲಿ ಕಮಲವುಳ್ಳವನು, ವಿಷ್ಣು
**ಸರಸಿಜಬಾಂಧವ** – ಕಮಲಮಿತ್ರ, ಸೂರ್ಯ
**ಸರಸಿಜಮಿತ್ರ** – ಸರಸಿಜಬಾಂಧವ
**ಸರಸಿಜಯೋನಿ** – ಸರಸಿಜಗರ್ಭ
**ಸರಸಿಜವಿರೋಧಿ** – ತಾವರೆಯ ವೈರಿ, ಚಂದ್ರ
**ಸರಸಿಜಸಂಭವ** – ಸರಸಿಜಗರ್ಭ
**ಸರಸಿಜಸಖ** – ಸರಸಿಜಬಾಂಧವ
**ಸರಸಿಜಾಕ್ಷಿ** – ಕಮಲದಂತೆ ಕಣ್ಣುಳ್ಳವಳು
**ಸರಸಿ(ೞ)ರುಹ** – ತಾವರೆ
**ಸರಸಿರುಹಾಕರ** – ಕೊಳ
**ಸರಸೀಜಾಕರ** – ಸರಸಿರುಹಾಕರ
**ಸರಸಿ(ೞ)ಜಾತಭವ** – ಸರಸಿಜಗರ್ಭ
**ಸರಸಿ(ೞ)ಜಾತೋದ್ಭವ** – ಸರಸಿಜಗರ್ಭ
**ಅರಸಿ(ೞ)ದರ** – ಸರಸಿಜಗರ್ಭ
**ಸರಸಿ(ೞ)ಜೋದ್ಭವ** – ಸರಸಿಜಗರ್ಭ
**ಸರಸಿ(ೞ)ಜೋದ್ಭೂತ** – ಸರಸಿಜಗರ್ಭ
**ಸರಸೋಕ್ತಿ** – ರಸದಿಂದ ಕೂಡಿದ ನುಡಿ
**ಸರಸ್ವತಿ** – ವಿದ್ಯಾಧಿದೇವತೆ; ಒಂದು ನದಿ
**ಸರಸ್ವತೀದ್ರೋಹ** – ವಿದ್ಯಾದ್ರೋಹಿ
**ಸರಸ್ವತೀಪತಿ** – ಬ್ರಹ್ಮ; ಸಮುದ್ರ
**ಸರಳಾಂಗ** – ನೀಳದೇಹ(ಹಿ)
**ಸರಳಾಳಾಪ** – ನೇರ ನುಡಿ
**ಸರಳಿಸು** – ಹಾರು
**ಸರಿ** – ಓಡಿಹೋಗು; ಜಾರು; ಮಳೆ
**ಸರಿಗಾಣ್** – ಸಮಾನವೆಂದು ಎಣಿಸು
**ಸರಿಗಾಳೆಗ** – ಸಮಯುದ್ಧ
**ಸರಿಗೆ** – ತಂತಿ; ನೂಲು; ಒಂದು ಆಭರಣ
**ಸರಿಗೆಕಂಕಣ** – ತಂತಿಯಿಂದ ಮಾಡಿದ ಬಳೆ
**ಸರಿತ್** – ನದಿ
**ಸರಿತ್ತನಯ** – ಗಂಗಾಪುತ್ರ, ಭೀಷ್ಮ
**ಸರಿತ್ಪತಿ** – ನದಿಗಳ ಒಡೆಯ, ಸಮುದ್ರ
**ಸರಿತ್ಸುತ** – ಗಂಗಾನದಿಯ ಮಗ; ಭಿಷ್ಮ
**ಸರಿದಧಿಪತಿ** – ಸರಿತ್ಪತಿ
**ಸರಿದೊರೆ** – ಸಮಾನ
**ಸರಿನ್ನಾಥ** – ಸರಿತ್+ನಾಥ, ಸರಿತ್ಪತಿ
**ಸರಿವರ್** – ಸಮಾನವಾಗು
**ಸರಿವರೆಯ** – ಓರಗೆ; ಒಂದೇ ವಯಸ್ಸು
**ಸರಿವಱಿ** – ಜಡಿಮಳೆ
**ಸರಿ(ೞ)ಸೃಪ** – ಹಾವು
**ಸರುಗ** – (ಚರುಕ) ಅನ್ನ
**ಸರುಜ** – ರೋಗಿ
**ಸರುಸಪ** – (ಸರ್ಷಪ) ಸಾಸಿವೆ
**ಸರೋಂಬು** – ಕೊಳದ ನೀರು
**ಸರೋಜನಿಲಯ** – ಬ್ರಹ್ಮ
**ಸರೋಜಮಿತ್ರ** – ಸೂರ್ಯ
**ಸರೋಜಷಂಡ** – ತಾವರೆಯ ಸಮೂಹ; ಕೊಳ
**ಸರೋಜಸಂಭವ** – ಬ್ರಹ್ಮ
**ಸರೋಜಸಖ** – ಸೂರ್ಯ
**ಸರೋಜಾಂಬಕ** – ಕಮಲನೇತ್ರ; ವಿಷ್ಣು
**ಸರೋಜಾಕರ** – ಕೊಳ
**ಸರೋಜಾತ** – ತಾವರೆ
**ಸರೋಜಾಸನ** – ಬ್ರಹ್ಮ
**ಸರೋಜಿನಿ** – ಕಮಲ ಸರೋವರ
**ಸರೋಜಿನೀವನ** – ತಾವರೆಗಳ ಸಮೂಕ
**ಸರೋಜೇಕ್ಷಣ** – ಸರೋಜಾಂಬಕ
**ಸರೋಧಿ** – ಸಮುದ್ರ
**ಸರೋಭವ** – ಕಮಲ
**ಸರೋರುಹಾಕರ** – ಸರೋಜಾಕರ

**ಸರೋರುಹಿಣೀವನ** – ಸರೋಜಿನೀವನ
**ಸರೋವರ** – ಕೊಳ
**ಸರೋಷಮತಿ** – ಕೋಪಗೊಂಡವನು
**ಸರ್ಗ** – ಸೃಷ್ಟಿ
**ಸರ್ಪದಷ್ಟ** – ಹಾವಿನಿಂದ ಕಚ್ಚಲ್ಪಟ್ಟ; ಹಾವಿನ ಕಚ್ಚುವಿಕೆ
**ಸರ್ಪಯೋನಿ** – ಸರ್ಪ
**ಸರ್ವಗ** – ಎಲ್ಲೆಡೆಯಲ್ಲಿಯೂ ಸಂಚರಿಸುವವನು, ದೇವರು
**ಸರ್ವಗ್ರಾಸಂಗೊಳ್** – ಪೂರ್ತಿ ನುಂಗು
**ಸರ್ವಗ್ರಾಸ(ಸಿ)** – ಪೂರ್ತಿ ನುಂಗಿಹಾಕುವ; ಎಲ್ಲವನ್ನೂ ಆವರಿಸುವ(ಂತಹುದು)
**ಸರ್ವಗ್ರಾಸಂಗೊಳ್** – ಸರ್ವವನ್ನೂ ನುಂಗಿಹಾಕಿಬಿಡು; ಎಲ್ಲವನ್ನೂ ಅವರಿಸು
**ಸರ್ವತೋಭದ್ರ** – ಮಂಗಳಮಯನಾದ(ವನು); ಒಂದು ಚಿತ್ರರಚನೆ; (ಜೈನ) ರಾಜರು ಮಾಡುವ ಮಹಾ ಜಿನಪೂಜೆ
**ಸರ್ವನಮಸ್ಯ** – ಎಲ್ಲ ಗೌರಕ್ಕೊಳಗಾದ; ತೆರಿಗೆ ಮುಕ್ತವಾದುದು
**ಸರ್ವನಿವೇದಕ** – ಒಂದು ಯಜ್ಞ
**ಸರ್ವಭಾಷಾಸಾಮಾನ್ಯ** – ಎಲ್ಲರಿಗೂ ಅವರದೇ ಭಾಷೆಯಲ್ಲಿ ಅರ್ಥವಾಗುವುದು
**ಸರ್ವರತ್ನ** – (ಜೈನ) ನವನಿಧಿಗಳಲ್ಲಿ ಒಂದು
**ಸರ್ವರಸ** – ಎಲ್ಲ ರುಚಿಗಳು
**ಸರ್ವರ್ತುಕ** – ಎಲ್ಲ ಋತುಗಳಲ್ಲಿಯೂ ಚಿಗುರು, ಹೂ, ಕಾಯಿ, ಹಣ್ಣುಗಳನ್ನು ಬಿಡುವ
**ಸರ್ವರ್ತುಕನಂದನ** – ಸರ್ವರ್ತುಕ ಗುಣಗಳಿಂದ ಕೂಡಿದ ತೋಟ
**ಸರ್ವರ್ತುಕೋದ್ಯಾನ** – ಸರ್ವರ್ತುಕನಂದನ
**ಸರ್ವಸಾಧು** – ಸರ್ವಜೀವದಲ್ಲಿ ಸಮಭಾವ ಹೊಂದಿದ ಸಾಧು
**ಸರ್ವಸ್ವ** – ಸಮಸ್ತ ವಸ್ತು; ಎಲ್ಲ ಸಂಪತ್ತು; ಅತ್ಯಂತ ಮಹತ್ತರವಾದ
**ಸರ್ವಸ್ವಹರಣ** – ಸಂಪತ್ತನ್ನೆಲ್ಲ ಕಸಿದುಕೊಳ್ಳುವುದು
**ಸರ್ವಾಂಗಪ್ರಣತ** – ದೀರ್ಘದಂಡ ನಮಸ್ಕಾರ ಮಾಡಿದವನು
**ಸರ್ವಾಂಗಮಲಧಾರಿ** – (ಜೈನ) ಮೈಯೆಲ್ಲ ಕೊಳೆತುಂಬಿದ ಮುನಿ
**ಸರ್ವಾಂಗೀಣ** – ಎಲ್ಲ ಕಡೆ ಆವರಿಸಿದ
ಸರ್ವಾಂಗೋಪನತ – ಸರ್ವಾಂಂಗಪ್ರಣತ –
**ಸರ್ವಾರ್ಥಸಿದ್ಧಿ** – (ಜೈನ) ಒಂದು ಆಣೂತ್ತರ ವಿಮಾನ
**ಸರ್ವಾವಧಿ(ಜ್ಞಾನ)** – ಕೇವಲಜ್ಞಾನ
**ಸರ್ವಾವಧಿಬೋಧ** – ಸರ್ವಾವಧಿ(ಜ್ಞಾನ)
**ಸರ್ವಾಶೆ** – ಎಲ್ಲ ದಿಕ್ಕುಗಳೂ
**ಸರ್ವೋತ್ತಮ** – ಅತ್ಯುತ್ತಮ
**ಸರ್ಷಪ** – ಸಾಸಿವೆ
**ಸ(ಸಾ)ಯ್** – ಮರಣಹೊಂದು
**ಸಲ್** – ಸೇರು; ಪ್ರಸಿದ್ಧಿ ಪಡೆ; ಸರಿದು ಹೋಗು
**ಸಲಂಗೊಳ್** – ಆಕ್ರಮಿಸಿಕೊ
**ಸಲಗು(ಗೆ)** – (ಶಲಾಕಾ) ಸಲಾಕೆ
**ಸಲಪು** – ಕಾಪಾಡು
**ಸಲವು** – ಪ್ರವೇಶ
**ಸಲಿಲ** – ನೀರು
**ಸಲಿಲಕ್ರೀಡೆ** – ಜಲಕ್ರೀಡೆ
**ಸಲಿಲಪೂರ** – ನೀರಿನ ಪ್ರವಾಹ
**ಸಲಿಲಪ್ರವೇಶ** – ನೀರಲ್ಲಿ ಮುಳುಗುವುದು
**ಸಲಿಲವಿನೋದ _ ನೀರಲ್ಲಿ ಆಡುವ ಆಟ–**
**ಸಲಿಲಸ್ತಂಭನ** – ಜಲಸ್ತಂಭನ, ನೀರಲ್ಲಿ ಉಸಿರು ಕಟ್ಟಿರುವುದು
**ಸಲಿಲಾಶಯ** – ಜಲಾಶಯ, ಕೊಳ
**ಸಲಿಲಾಸ್ತ್ರ** – ನೀರು ಸುರಿಸುವ ಅಸ್ತ್ರ
**ಸಲಿಸು** – ಒಳಹೊಗಿಸು; ನಡೆಸು; ಈಡೇರಿಸು; ನೀಡು
**ಸಲಿ(ಲು)ಗೆ** – ಬಳಕೆ; ಗೆಳೆತನ; ವರ್ತನೆ
**ಸಲೀಲ(ಳ)** – ಚೆನ್ನಾಗಿ
**ಸಲೆ** – ಸದಕಾಲ; ಒಂದೇ ಸಮನೆ; ಅತಿಶಯವಾಗಿ; ಸಂಪೂರ್ಣವಾಗಿ
**ಸಲ್ಗೆ** – ಸಲಿ(ಲು)ಗೆ
**ಸಲ್ಗೆದೋಱು** – ವಿಶ್ವಾಸ ತೋರಿಸು
**ಸಲ್ಗೆನುಡಿ** – ಸದರದ ಮಾತು
**ಸಲ್ಗೆವಡೆ** – ಸದರವನ್ನು ಹೊಂದು
**ಸಲ್ಗೆವೆರಸು** – ಸದರದಿಂದ ಕೂಡಿ(ರು)
**ಸಲ್ಲ** – ಯೋಗ್ಯವಲ್ಲ
**ಸಲ್ಲಕೀ** – ಆನೆಬೇಲ
**ಸಲ್ಲಕ್ಷಣ** – ಒಳ್ಳೆಯ ಚಿಹ್ನೆ
**ಸಲ್ಲಲಿತ** – ಸತ್+ಲಲಿತ, ಸೊಗಸಾದ
**ಸಲ್ಲಲಿತಾಂಗ(ಗಿ)** – ಸುಂದರವಾದ ಅವಯವಗಳುಳ್ಳವ(ನು)(ಳು)
**ಸಲ್ಲೇಖನೆ** – (ಜೈನ) ಉಪವಾಸವ್ರತ
**ಸಲ್ವಳಿ** – ಸಂದಾಯ
**ಸವ** – (ಸಮ) ಜೊತೆ
**ಸವಂಗ** – ತೊಡುವ ಅಂಗಿ; ಕವಚ
**ಸವಕಟ್ಟು** – ಏರ್ಪಾಡು
**ಸವಟು** – ನಾಶಗೊಳಿಸು
**ಸವಡಿ** – ಜೋಡಿ
**ಸವಡಿಗೊಡೆ** – ಜೋಡಿ ಕೊಡೆ
**ಸವಡಿಸು** – ಇಮ್ಮಡಿಯಾಗು
**ಸವಣ** – (ಶ್ರಮಣ) ಜೈನ ಮುನಿ
**ಸವಣ್ತಿ** – ಕಂತಿ, ಜೈನಸನ್ಯಾಸಿನಿ
**ಸವಣ್ಮನೆ** – ಬಸದಿ
**ಸವತಿ** – (ಸಪತ್ನಿ) ಗಂಡನ ಮತ್ತೊಬ್ಬ ಹೆಂಡತಿ
**ಸವತ್ಸ** – ಕರುವಿನಿಂದ ಕೂಡಿದ
**ಸವತ್ಸನಿವಹ** – ಕರುಗಳ ಗುಂಪು

**ಸವತ್ಸಸುರಭಿ** – ಕರುಸಹಿತವಾದ ಹಸು
**ಸವನ** – ಯಜ್ಞ; ಸ್ನಾನ; ಅಭಿಷೇಕ
**ಸವನಸ್ಥಾನ** – (ಜೈನ) ತೀರ್ಥಂಕರ ಜನ್ಮಕಲ್ಯಾಣದ ಜಾಗ
**ಸವನೋತ್ಸವ** – (ಜೈನ) ತೀರ್ಥಂಕರ ಶಿಶುವಿನ ಜನ್ಮಕಲ್ಯಾಣ ಮಹೋತ್ಸವ
**ಸವನಜಲ** – ಅಭಿಷೇಕದ ಮಡುವ ನಿರು
**ಸವವಯಸ** – ಸಮಾನ ವಯಸ್ಕ
**ಸವಳ** – (ಸಬಳ) ಈಟಿ; ಬೆಳಗಿನ ಹೊತ್ತು
**ಸವಿ** – ರುಚಿ ನೋಡು; ತಿನ್ನು; ರುಚಿ; ಮಾಧುರ್ಯ
**ಸವಿಗಂಪು** – ಸುವಾಸನೆ
**ಸವಿಗಾಣ್** – ರುಚಿ ನೋಡು;
**ಸಂತೋಷವನ್ನನುಭವಿಸು**–
**ಸವಿಗೆಯ್** – ರುಚಿಕರವಾಗಿ ಮಾಡು
**ಸವಿತೃಮಂಡಲ** – ಸೂರ್ಯಮಂಡಲ
**ಸವಿತ್ರಿ** – ತಾಯಿ
**ಸವಿದುಟಿ** – ಮಾಧುರ್ಯ ತುಂಬಿದ ತುಟಿ
**ಸವಿದೆ** – ಸಮಿಧೆ, ಸೌದೆ, ಕಟ್ಟಿಗೆ
**ಸವಿದೋಱು** – ರುಚಿಕರವಾಗಿ ತೋರು
**ಸವಿಧ** – ಹತ್ತಿರ
**ಸವಿನೋಡಿ** – ರುಚಿಯನ್ನು ಅನುಭವಿಸು
**ಸವಿಪಾಕ** – (ಜೈನ) ಎರಡು ಬಗೆಯ ನಿರ್ಜರೆಗಳಲ್ಲಿ ಒಂದು, ಕರ್ಮದ ಫಲವು ಕಡಿಮೆಯಾಗುವ ಕಾಲ
**ಸವಿಪಾಕ(ನಿರ್ಜರೆ)** – (ಜೈನ) ಕರ್ಮದ ಸಹಜ ಕ್ಷಯ
**ಸವಿರಾಗ** – ಸ+ವಿರಾಗ, ವೈರಾಗ್ಯಯುಕ್ತ; ಸವಿ+ರಾಗ, ಮಧುರ ಪ್ರೀತಿ
**ಸವಿವಕ್ಷಿತ** – ಹೇಳಲು ಇಚ್ಛಿಸುವ
**ಸವಿಶೇಷಂ** – ವಿಶಿಷ್ಟತೆಯಿಂದ ಕೂಡಿ
**ಸವಿಶೇಷ(ವಿ)ವರ್ತಿ** – ವಿಶಿಷ್ಟ ಪ್ರಯೋಗ
**ಸವಿಸ್ತರ** – ವಿಸ್ತಾರವಾದ
**ಸವ್ಯ** – ಎಡಗಡೆ
**ಸವ್ಯಸಾಚಿ** – ಎರಡೂ ಕೈಗಳಲ್ಲಿ ಬಾಣಪ್ರಯೋಗ ಮಾಡಬಲ್ಲವನು, ಅರ್ಜುನ
**ಸವ್ಯಾಪಸವ್ಯ** – ಎಡ ಮತ್ತು ಬಲಭಾಗ
**ಸಸಂಭ್ರಮ** – ಗೊಂದಲಗೊಂಡ
**ಸಸಂಭ್ರಮಂ** – ಸಡಗರದಿಂದ ಕೂಡಿ
**ಸಸಿ** – ಕಳೆ ಕೀಳು; ಹಿಂಜು; (ಶಶಿ) ಚಂದ್ರ; ಎಳೆಯ ಗಿಡ
**ಸಸಿಗಲ್** – ಚಂದ್ರಕಾಂತಶಿಲೆ
**ಸಸಿತಪಕ್ಷ** – ಸ+ಸಿತಪಕ್ಷ, ಬಿಳಿಯ ರೆಕ್ಕೆಗಳಿಂದ ಕೂಡಿದುದು, ಹಂಸ; ಶುಕ್ಲಪಕ್ಷದಿಮದ ಕೂಡಿದುದು, ಚಂದ್ರ
**ಸಸಿದರಳೆ** – ಸಸಿದ+ಅರಳೆ, ಹಿಂಜಿದ ಹತ್ತಿ
**ಸಸಿನ** – ನೇರವಾಗಿ
**ಸಸಿನೆಗೆಯ್** – ಸಮಾಧಾನಗೊಳಿಸು
**ಸಸಿನೆವರಿ** – ಎದುರಿಗೆ ಹೋಗು
**ಸಸಿಮೊಗ** – ಚಂದ್ರಮುಖ
**ಸಸಿವದನೆ** – (ಶಶಿವದನೆ) ಚಂದ್ರಮುಖಿ
**ಸಸ್ಪೃಹ** – ಬಯಕೆಯಿಂದ ಕೂಡಿದ
**ಸಸ್ಮಿತ** – ಮುಗುಳುನಗೆಯಿಂದ ಕೂಡಿದ
**ಸಸ್ಯ**– ಗಿಡ; (ಸಸ್ಯ) ಶ್ರೇಷ್ಠ ರತ್ನ
**ಸಹಕಾರ** – ಸಿಹಿ ಮಾವು
**ಸಹಕಾರನಂದನ** – ಮಾವಿನ ತೋಪು
**ಸಹಗಮನ** – ಪ್ರಭುವಿನೊಡನೆ ಪ್ರಾಣ ಬಿಡುವುದು
**ಸಹಚರ(ರಿ)** – ಒಡನಾಡಿ
**ಸಹಜ** – ನೈಜವಾದ; ಜೊತೆಯಲ್ಲಿ ಹುಟ್ಟಿದ
**ಸಹಜಕವಿ** – ಪ್ರತಿಭಾವಂತ ಕವಿ
**ಸಹಜನ್ಮ** – ಸಹೋದರ
**ಸಹಜಪ್ರಜ್ಞ** – ಸಹಜಜ್ಞಾನಿ
**ಸಹಜಮನೋಜ** – ಮನ್ಮಥನಂತಹ ಚೆಲುವ
**ಸಹಜವಿಭೂಷಣ** – ನಿಸರ್ಗದತ್ತ ಅಲಂಕಾರ
**ಸಹಜಾತ** – ಹುಟ್ಟಿನೊಡನೆ ಬಂದ; ಸೋದರ
**ಸಹಪಾಂಸುಕ್ರೀಡಿತರು** – ಬಾಲ್ಯದ ಗೆಳೆಯರು, ಒಟ್ಟಿಗೇ ದೂಳಾಟವಾಡಿದವರು
**ಸಹಭವ** – ಜೊತೆಯಲ್ಲೇ ಹುಟ್ಟಿದುದು
**ಸಹಸಂಭೂತ** – ಸಹಜಾತ
**ಸಹಸ್ರ** – ಅನೇಕ
**ಸಹಸ್ರಕರ** – ಅಸಂಖ್ಯ ಕಿರಣಗಳು(ಳ್ಳವನು), ಸೂರ್ಯ
**ಸಹಸ್ರಕಿರಣ** – ಸಹಸ್ರಕರ
**ಸಹಸ್ರಕೂಟ** – ಅನೇಕ ಶಿಖರಗಳು
**ಸಹಸ್ರಗುಣ** – ಸಾವಿರಪಟ್ಟು
**ಸಹಸ್ರಜಿಹ್ವ** – ಸಾವಿರ ನಾಲಗೆ(ಗಳುಳ್ಳವನು)
**ಸಹಸ್ರನಯನ** – ಸಾವಿರ ಕಣ್ಣುಗಳುಳ್ಳವನು, ಇಂದ್ರ
**ಸಹಸ್ರಫಣ** – ಸಾವಿರ ಹೆಡೆಗಳುಳ್ಳವನು, ವಾಸುಕಿ
**ಸಹಸ್ರಾಕ್ಷ** – ಸಹಸ್ರನಯನ
**ಸಹಸ್ರಾರ** – ಸಾವಿರ ಮೊನೆಗಳನ್ನು ಹೊಂದಿದ; (ಜೈನ) ಷೋಡಶಕಲ್ಪಗಳಲ್ಲಿ ಒಂದು
**ಸಹಸ್ರಾರಕಲ್ಪ** – (ಜೈನ) ಷೋಡಶಕಲ್ಪಗಳಲ್ಲಿ ಒಂದು
**ಸಹಸ್ರೋಸ್ರ** – ಸಹಸ್ರಕಿರಣ, ಸೂರ್ಯ
**ಸಹಾಯ** – ಜೊತೆಗಾರ
**ಸಹಿಷ್ಣು** – ಸಹನೆಯುಳ್ಳವನು
**ಸಹಿಸು** – ತಾಳಿಕೊ; ಸಹಿಸಿಕೊ
**ಸಹೋತ್ಪನ್ನ** – ಸಹೋದರ
**ಸಱಸಱಿಸು** – ಆತುರದಿಂದ ಬಾ
**ಸಱಿ** – ಬೆಟ್ಟದಿಂದ ಇಳಿಯುವ ನದಿ; ಕಂದರ; ಬೆಟ್ಟದ ತುದಿಗಲ್ಲು; ಅಂಬಲಿ
**ಸಱಿಗಲ್** – ಬಂಡೆಗಲ್ಲು
**ಸಱಿಮಿಂಡಿ** – ಏರುಂಜವ್ವನೆ
**ಸಱಿಮೊಲೆ** – ಗಡುಸು ಮೊಲೆ
**ಸಱಿಸೈತು** – ಕಂದರದ ಹೊಳೆ; ವ್ಯರ್ಥ

**ಸಜೆಸೈತುಪೋಗು** – ವ್ಯರ್ಥವಾಗಿ ಹೋಗು
**ಸ(ಸಾ)ಯ್** – ಮರಣಹೊಂದು
**ಸಾಯಬಡಿ** – ಬಹಳ ಹೊಡೆ
**ಸಾಯೆಪೊಯ್** – ಸಾಯಬಡಿ
**ಸಾಯೆ ಸರಸಂ ನುಡಿ** – ಕ್ರೂರವಾಗಿ ಗೇಲಿ ಮಾಡು
**ಸಾಂಖ್ಯ** – ಷಡ್ದರ್ಶನಗಳಲ್ಲಿ ಒಂದು; ಸಾಂಖ್ಯದರ್ಶನದಲ್ಲಿ ನಂಬಿಕೆಯುಳ್ಳವನು
**ಸಾಂಖ್ಯಾಗಮ** – ಸಾಂಖ್ಯ
**ಸಾಂತ್ವವಚನ** – ಸಂತೈಕೆಯ ಮಾತು
**ಸಾಂದು** – ಸುಗಂಧದ್ರವ್ಯ, ಪುನುಗು
**ಸಾಂದ್ರ** – ಒತ್ತಾಗಿರುವ
**ಸಾಂಪದ** – ಸಲಕರಣೆ
**ಸಾಂಪರಾಯ** – ಯುದ್ಧ
**ಸಾಂಪರಾಯಿಕ** – (ಜೈನ) ಸಂಸಾರಕ್ಕೆ ಕಾರಣವಾಗುವ ಕರ್ಮಾಸ್ರವ
**ಸಾಂಯಾತ್ರಿಕ** – ಸಮುದ್ರ ವ್ಯಾಪಾರಿ
**ಸಾಂಯುಗೀನ** – ಯುದ್ಧಚತುರ
**ಸಾಂಸಾರಿಕ** – ಕುಟುಂಬಸಂಬಂಧಿತವಾದ
**ಸಾಕು** – ರಕ್ಷಿಸು, ಕಾಪಾಡು
**ಸಾಕೇತ** – ಮನೆಗಳಿಂದ ಕೂಡಿದುದು; ಅಯೋಧ್ಯೆ
**ಸಾಕ್ಷರಜನ** – ವಿದ್ವಾಂಸರು
**ಸಾಕ್ಷರಜನಕ** – ಪಂಡಿತರನ್ನು ಪೋಷಿಸುವವನು
**ಸಾಕ್ಷರಿಕ** – ಪಂಡಿತ
**ಸಾಕ್ಷಿಮಾಡು** – ಸಾಕ್ಷಿಯನ್ನಾಗಿ ಹೊಂದಿರು
**ಸಾಗರ** – ಸಮುದ್ರ; (ಜೈನ) ಒಂದು ಅತ್ಯಂತ ದೀರ್ಘ ಕಾಲಾವಧಿ
**ಸಾಗರನಾಥ** – ಸಮುದ್ರದ ಒಡೆಯ, ವರುಣ
**ಸಾಗರಾಂತ** – ಸಮುದ್ರವನ್ನು ಅಂಚನ್ನಾಗುಳ್ಳ; (ಜೈನ) ಸಾಗರ ಅವಧಿಯ ಕೊನೆ
**ಸಾಗರೋಪಮ** – ಕಡಲಿಗೆ ಸಮಾನವಾದ ; (ಜೈನ) ಸಾಗರ ಅವಧಿಯನ್ನುಳ್ಳ
**ಸಾಗಾರ** – (ಜೈನ) ಗೃಹಸ್ಥನ ಕರ್ತವ್ಯಗಳು; ಶ್ರಾವಕ
**ಸಾಗಾರಧರ್ಮ** – (ಜೈನ) ಗೃಹಸ್ಥನ ಕರ್ತವ್ಯಗಳು
**ಸಾಗಾರವ್ರತ** – (ಜೈನ) ಸಾಗಾರಧರ್ಮ
**ಸಾಗುದುರೆ** – ಸಾಯುವ ಸ್ಥಿತಿಯಲ್ಲಿರುವ ಕುದುರೆ
**ಸಾಚಿ** – ಓರೆ; ಪಕ್ಕ; ಮಗ್ಗುಲ ನೋಟ; ಚಿತ್ರದ ಒಂಬತ್ತು ಸ್ಥಾನಕಗಳಲ್ಲಿ ಒಂದು, ನೋಡಿ, 'ನವಸ್ಥಾನಕ'
**ಸಾಚಿವ್ಯ** – ಸ್ನೇಹ
**ಸಾಚೀಕೃತ** – ಪಕ್ಕಕ್ಕೆ ತಿರುಗಿದ
**ಸಾಜ** – ಸಹಜವಾದುದು; ಸತ್ಯ
**ಸಾಜಂ** – ಸಹಜವಾಗಿ
**ಸಾಟಿ** – ಸಮಾನ
**ಸಾಣೆ** – ಹರಿತಗೊಳಿಸುವ ಸಾಧನ, ಉಜ್ಜುಗಲ್ಲು
**ಸಾಣೆಗಟ್ಟು** – (ಆಯುಧಗಳನ್ನು) ಹರಿತಗೊಳಿಸು
**ಸಾಣೆಗಾಣಿಸು** – ಸಾಣೆಗಟ್ಟು
**ಸಾಣೆಯಿಕ್ಕು** – ಸಾಣೆಗಟ್ಟು
**ಸಾತ(ತಾ)ವೇದನೀಯ** – (ಜೈನ) ಇಂದ್ರಿಯಜನ್ಯವಾದ ಸುಖವನ್ನುಂಟುಮಾಡುವ ಕರ್ಮ
**ಸಾತಿಶಯ** – ಅತಿಶಯದಿಂದ ಕೂಡಿದ
**ಸಾತಿಶಯಾರ್ಥ** – ಅತಿಶಯ ಅರ್ಥ
**ಸಾತ್ವತಿ** – ಗೆಲುವಿನ ಸ್ವಭಾವ
**ಸಾತ್ವಿಕ**– ನಾಲ್ಕು ಬಗೆಯ ಅಭಿನಯಗಳಲ್ಲಿ ಒಂದು
**ಸಾತ್ವಿಕಗುಣ** – ಒಳ್ಳೆಯತನ
**ಸಾತ್ವಿಕಭಾವ** – ಅಭಿನಯದಲ್ಲಿನ ಭಾವಾನುಗುಣವಾದ ದೈಹಿಕ ಪರಿಣಾಮ
**ಸಾತ್ವಿಕೋಕ್ತಿ** – ಸಮಾಧನಕರವಾದ ಮಾತು
**ಸಾದಿ** – ಯುದ್ಧಮಾಡುವವನು; ಸಾರಥಿ; ವಾಯು
**ಸಾಧನ** – ಸೈನ್ಯ; ಸಲಕರಣೆ
**ಸಾಧಾರಣ** – ಭೂಮಿಯ ಮೂರು ಬಗೆಗಳಲ್ಲಿ ಒಂದು, ಜವುಗುಪ್ರದೇಶ; (ಜೈನ) ಹದಿನಾರು ಬಗೆಯ ಕರ್ಮಪ್ರಕೃತಿಗಳಲ್ಲಿ ಒಂದು
**ಸಾಧಿತ** – ಸಿದ್ಧಿಯನ್ನು ಹೊಂದಿದ; ಸ್ವಾಧೀನಪಡಿಸಿಕೊಂಡ
**ಸಾಧಿಸು** – ವಶಪಡಿಸಿಕೊ; ಹೊಂದು
**ಸಾಧುಜನ** – (ಜೈನ) ಶ್ರವಣಸಮೂಹ
**ಸಾಧುವಾದ** – ಒಳ್ಳೆಯದಾಗಲಿ ಎಂಬರ್ಥದ ಮಾತು
**ಸಾಧ್ವಸ** – ಗಾಬರಿ; ಸಡಗರ
**ಸಾಧ್ವಸಭಯ** – ಗಾಬರಿಭಯಗಳು
**ಸಾನು(ತಳ)** – ಬೆಟ್ಟದ ತಪ್ಪಲು
**ಸಾನೂದ್ಯಾನ** – ಬೆಟ್ಟದ ತಪ್ಪಲಿನ ಉದ್ಯಾನವನ
**ಸಾನ್ನಾಯ್ಯ** – ಹವಿಸ್ಸು
**ಸಾಪ** – (ಶಾಪ) ಕೆಡುಕಿನ ಹಾರೈಕೆ
**ಸಾಪಂಗೊಳು** – ಶಾಪವನ್ನು ಹೊಂದು
**ಸಾಪದಕ್ಕರ** – ಶಾಪದ ನುಡಿ
**ಸಾಪತ್ನ್ಯ** – ದಾಯಾದಿ
**ಸಾಪೇಕ್ಷ** – ಪೂರಕವಾದ; ಪರಸ್ಪರಾವಲಂಬಿ
**ಸಾಭಿಜ್ಞಾನ** – ಸ+ಅಭಿಜ್ಞಾನ, ನೆನಪಿಸುವ ವಸ್ತುವಿನಿಂದ ಕೂಡಿದ
**ಸಾಭಿಜ್ಞಾನಪಟ** – ನೆನಪನ್ನುಂಟುಮಾಡುವ ಚಿತ್ರಪಟ
**ಸಾಭಿಲಾಷ** – ಬಯಕೆ
**ಸಾಭ್ಯುಪಗಮ** – ಅಂಗೀಕಾರದಿಂದ ಕೂಡಿರುವ
**ಸಾಮ** – ಸಮಾಧಾನ ಹೇಳುವ ಮಾತು; ಚತುರೋಪಾಯಗಳಲ್ಲಿ ಒಂದು
**ಸಾಮ(ವ)ಂತ** – ಮಾಂಡಲಿಕ
**ಸಾಮಂತಚಕ್ರ** – ಮಾಂಡಲಿಕಸಮೂಹ
**ಸಾಮಂತಚೂಡಾಮಣಿ** – ಮಾಂಡಲಿಕಶ್ರೇಷ್ಠ
**ಸಾಮಜ** – ಆನೆ
**ಸಾಮಜಪತಿ** – ಶ್ರೇಷ್ಠ ಆನೆ
**ಸಾಮಜಪದಾಭಿರಾಮ** – ಸಾಮವೇದದ ಪದಗಳಿಂದ ಅಥವಾ ಸಾಲುಗಳಿಂದ ರಮ್ಯವಾದುದು; ಆನೆಗಳಿಗೆ ಇಂಬಾದ ನಿವಾಸಸ್ಥಾನವಾದುದು, ಹೆಗ್ಗಾಡು

**ಸಾಮಜವೈರಿವಿಷ್ಟರ** – ಸಿಂಹಾಸನ
**ಸಾಮ(ಮಾ)ಯಿಕ** – ಸಂಪ್ರದಾಯಕ್ಕೆ ಅನುಗುಣವಾದ; (ಜೈನ) ಸಮ್ಯಕ್‌ಜ್ಞಾನ ಸಾಧನೆಗೆ ಪೂರಕವಾದ ನಡವಳಿಕೆ, ನೋಡಿ, 'ಪಂಚವಿಧಚಾರಿತ್ರ'; ಅರ್ಹತ್ಪೂಜೆಯ ಹನ್ನೊಂದು ನೆಲೆಗಳಲ್ಲಿ ಒಂದು
**ಸಾಮರ್ಥ್ಯ** – ಯೋಗ್ಯತೆ
**ಸಾಮಾಜಿಕ** – ಗಣ್ಯವ್ಯಕ್ತಿ
**ಸಾಮಾನಿಕ(ದೇವ)** – (ಜೈನ) ಒಂದು ದೇವತಾವರ್ಗ; ಆ ವರ್ಗದ ದೇವತೆ
**ಸಾಮಾನ್ಯಾಸ್ತ್ರ** – ಸಾಧಾರಣವಾದ ಬಾಣ
**ಸಾಮಾಭಾಸ** – ಸಾಮೋಪಾಯದ ತೋರಿಕೆ
**ಸಾಮಾಯಿಕವ್ರತ** – (ಜೈನ) ಒಂದು ಶಿಕ್ಷಾವ್ರತ
**ಸಾಮಿಪಕ್ವ** – ಅರ್ಧ ಹಣ್ಣಾದ
**ಸಾಮುದ್ರಿಕ** – ಅಂಗೈಯ ಗೆರೆಗಳ ಆಧಾರದ ಮೇಲೆ ಭವಿಷ್ಯ ನುಡಿಯುವ ಶಾಸ್ತ್ರ
**ಸಾಮೋದ ಶೇಷಾಕ್ಷತ** – ಪರಿಮಳಭರಿತ ಅಕ್ಷತೆ
**ಸಾಮ್ರಾಜ್ಯ** – ಪರಮಾಧಿಕಾರದ ನಾಡು; (ಜೈನ) ಮೋಕ್ಷಕ್ಕೆ ಸಂಬಂಧಿಸಿದ ಏಳು ಉತ್ತಮಸ್ಥಾನಗಳಲ್ಲಿ ಒಂದು
**ಸಾಮ್ರಾಜ್ಯಕ್ರಿಯೆ** – (ಜೈನ) ಒಂದು ಗರ್ಭಾನ್ವಯಕ್ರಿಯೆ, ಧರ್ಮದಿಂದ ರಾಜ್ಯಪಾಲನೆ ಮಾಡುವುದು
**ಸಾಯಂತನ(ಸಮಯ)** – ಸಾಯಂಕಾಲ (ವೇಳೆ)
**ಸಾಯಕ** – ಬಾಣ
**ಸಾಯಸ** – ಕಷ್ಟ
**ಸಾಯಿ(ಸಿ)ಸು** – ಸಾಯುವಂತೆ ಮಾಡು, ಕೊಲ್ಲು
**ಸಾರ್** – ಸಮೀಪಿಸು; ತಲುಪು; ಸರಿದುಕೊ; ಸಾನ್ನಿಧ್ಯ
**ಸಾರ** – ಶ್ರೇಷ್ಠವಾದ; ಸತ್ವ
**ಸಾರಂಗ** – ಒಂದು ಬಗೆಯ ಜಿಂಕೆ; ಮೋಡ
**ಸಾರಂಗಟ್ಟು** – ಅಡ್ಡಗಟ್ಟೆ ಕಟ್ಟು
**ಸಾರಂಗಿ(ಗೆ)ಡು** – ಸತ್ವಗುಂದು
**ಸಾರಘ** – ಜೇನುತುಪ್ಪ
**ಸಾರಣ್** – ಸಮೀಪ
**ಸಾರಣೆ** – ಜರಡಿ; ಸುಗಂಧಲೇಪನ
**ಸಾರತಪ** – ಶ್ರೇಷ್ಠ ತಪಸ್ಸು
**ಸಾರದಾರು** – ಮರದ ದಿಮ್ಮಿ
**ಸಾರಬೀದಿ** – ಸಂಪದ್ಭರಿತ ಬೀದಿ
**ಸಾರಭಾಂಡ** – ವಸ್ತುಗಳ ಸಮೂಹ
**ಸಾರಮಣಿ** – ಶ್ರೇಷ್ಠವಾದ ರತ್ನ
**ಸಾರಮಾರಿ** – ಸಾರ ಎಂಬ ಸಾಧನವನ್ನು ನಾಶಮಾಡುವಂತಹ ವಸ್ತು
**ಸಾರಮೇಯ(ಶಿಶು)** – ನಾಯಿ (ಮರಿ)
**ಸಾರವಣೆ** – ಸಾರಿಸುವುದು
**ಸಾರವಸ್ತು** – ಉತ್ಕೃಷ್ಟ ವಸ್ತು
**ಸಾರವೀರ** – ಶ್ರೇಷ್ಠ ಪರಾಕ್ರಮಿ
**ಸಾರಸ** – ನೀರ ಹಕ್ಕಿ, ಕೊಕ್ಕರೆ; ತಾವರೆ
**ಸಾರಸನ** – ಡಾಬು
**ಸಾರಸಸಖ** – ಕಮಲಮಿತ್ರ, ಸೂರ್ಯ
**ಸಾರಸಾರಸ** – ಕಮಲ
**ಸಾರಸಾಸನ** – ಕಮಲಪೀಠ, ಬ್ರಹ್ಮ
**ಸಾರಸ್ವತ** – ವಿದ್ವಾಂಸ; ಪಾಂಡಿತ್ಯಪೂರ್ಣ; (ಜೈನ) ಎಂಟು ಬಗೆಯ ಲೋಕಾಂತಿಕದೇವರಲ್ಲಿ ಒಂದು ವರ್ಗ
**ಸಾರಸ್ವತಗುಣ** – ವಿದ್ವತ್ತು
**ಸಾರಾಯ** – ಸತ್ವಭರಿತವಾದ
**ಸಾರಿ** – ಅಂಬಾರಿ; ಪಗಡೆ ಕಾಯಿ
**ಸಾರಿಕೆ** – (ಶಾರಿಕಾ) ಹೆಣ್ಣು ಗಿಳಿ
**ಸಾರಿಗೆದೇರ** – ಗಿಳಿಯನ್ನು ವಾಹನವಾಗಿ ಹೊಂದಿರುವವನು, ಮನ್ಮಥ
**ಸಾರೆ** – ಸಮೀಪ; ಜೊತೆಗೆ
**ಸಾರೆಕ(ಗ)ರೆ** – ಹತ್ತಿರ ಬರಹೇಳು
**ಸಾರೆವ(ಬ)ರ್** – ಹತ್ತಿರ ಬಾ
**ಸಾರೋಕ್ತಿ** – ಅರ್ಥಪೂರ್ಣ ನುಡಿ
**ಸಾರೋರ್ವೀಜ** – ಗಟ್ಟಿಯಾದ ಮರ
**ಸಾರ್ಕೆ** – ಸಮೀಪ; ಪ್ರಾಪ್ತಿ
**ಸಾರ್ಕೆಗುಡು** – ಹತ್ತಿರ ಬರಲು ಅವಕಾಶಕೊಡು
**ಸಾರ್ಕೆವರ್** – ಸಮೀಪಿಸು
**ಸಾರ್ಚು** – ಹತ್ತಿರ ಬರು; ಇರಿಸು
**ಸಾರ್ಚುಂದೊಲೆ** – ಕೋಟೆಗೆ ಆನಿಸಿ ಮೇಲೆ ಹತ್ತಲು ಬಳಸುತ್ತಿದ್ದ ಮರದ ದಿಮ್ಮಿ
**ಸಾರ್ತರ್** – ಸಮೀಪಿಸು; ಉಂಟಾಗು
**ಸಾರ್ಥ** – ಸಮೂಹ, ಸಮುದಾಯ; ರಾಶಿ; ಅರ್ಥಪೂರ್ಣವಾದ
**ಸಾರ್ಥತೆ** – ಅನ್ವರ್ಥಗೊಳಿಸುವಿಕೆ
**ಸಾರ್ಥನಾಥ** – ವ್ಯಾಪಾರಿಗಳ ಗುಂಪಿನ ಮುಂದಾಳು
**ಸಾರ್ಥಪತಿ** – ಸಾರ್ಥನಾಥ
**ಸಾರ್ಥವಾಹ(ಕ)** – ವ್ಯಾಪಾರಿ
**ಸಾರ್ಥಾಧಿಪತಿ** – ಸಾರ್ಥವಾಹ(ಕ)
**ಸಾರ್ದ್ರತೆ** – ತೇವ, ಒದ್ದೆ
**ಸಾರ್ದ್ರವಿಲೋಕನ** – ಪ್ರೇಮಲವಾದ ನೋಟ
**ಸಾರ್ದ್ರಹೃದಯ** – ಪ್ರೇಮಲವಾದ ಮನಸ್ಸು(ಳ್ಳವನು)
**ಸಾರ್ದ್ರಾಂತರಂಗ** – ಸಾರ್ದ್ರಹೃದಯ
**ಸಾರ್ಧ** – ಅರ್ಧದಿಂದ ಕೂಡಿದ
**ಸಾರ್ವಭೌಮ** – ಚಕ್ರವರ್ತಿ; ಕುಬೇರನ ಆನೆ
**ಸಾರ್ವರ್ತುಕಂ** – ಸರ್ವ ಋತುಗಳಲ್ಲಿಯೂ
**ಸಾರ್ವರ್ತುಕವನ** – ಎಲ್ಲ ಕಾಲಲ್ಲಿ ಚಿಗುರು, ಹೂ, ಹಣ್ಣುಗಳನ್ನು ಬಿಡುವ ಮರಗಳಿರುವ ಉದ್ಯಾನವನ
**ಸಾರ್ವರ್ತುಕೋದ್ಯಾನ** – ಸಾರ್ವರ್ತುಕವನ

**ಸಾಲ್** – ಸಮರ್ಥನಾಗಿರು; ಸಾಲಮಾಡು; ಸಾಲುವಷ್ಟು; ಪಂಕ್ತಿ
**ಸಾಲ** – ಕಡ
**ಸಾಲ(ಳ)** – ಕೋಟೆ; ಮತ್ತಿಯ ಮರ
**ಸಾಲ(ಳ)ಗ** – ಮೇಳ
**ಸಾಲಂಗೊಳ್** – ಕಡ ತೆಗೆದುಕೊ
**ಸಾಲ(ಳ)ಭಂಜಿಕೆ** – (ಮರದ) ಬೊಂಬೆ
**ಸಾಲವಿದ್ಯೆ** – ಕೋಟೆಯನ್ನು ನಿರ್ಮಿಸುವ ವಿದ್ಯೆ
**ಸಾಱಗ** – ನೇಕಾರ
**ಸಾಱಡು** – ಪಂಕ್ತಿಗಟ್ಟು; ನಿರಂತರವಾಗಿಸು
**ಸಾಱಸು** – ಸಾಲವನ್ನು ನೀಡು
**ಸಾಱಜೆ** – ಪಂಕ್ತಿಯಾಗು
**ಸಾಲೆ** – (ಶಾಲಾ) ಕಾರ್ಯಾಗಾರ
**ಸಾಲ್ಸರಿ** – ಜಡಿ ಮಳೆ
**ಸಾವಗಿಸು** – ಸರಿಪಡಿಸು; ಕ್ರಮಗೊಳಿಸು; ಸಾಂತ್ವನಗೊಳಿಸು
**ಸಾವದ್ಯ** – ಕಳಂಕ
**ಸಾವದ್ಯಕ್ರಿಯೆ** – ಕೆಟ್ಟ ಕೆಲಸ
**ಸಾವದ್ಯಭೀರು** – ಪಾಪಕ್ಕೆ ಹದರುವವನು
**ಸಾವಷ್ಟಂಭ** – ಗರ್ವದಿಂದ ಕೂಡಿರುವ
**ಸಾವಱಿ** – ಸಾ+ಪಱಿ, ಹೆಣದ ಮುಂದೆ ಬಾರಿಸುವ ತಮಟೆ
**ಸಾವಾಸಿ** – ಕಂಚುಕಿ
**ಸಾವು** – ಮರಣ
**ಸಾವೆ (ಶ್ಯಾಮ) ಒಂದು ಧಾನ್ಯ–**
**ಸಾಷಾಢ** – ಪೂರ್ವಾಷಾಢ ಉತ್ತರಾಷಾಢ ನಕ್ಷತ್ರಗಳಿಂದ ಕೂಡಿದ್ದು; ಋಷಿಗಳು ಹಿಡಿಯತಕ್ಕ ಮುತ್ತುಗಳ ದಂಡ
**ಸಾಷ್ಟಾಂಗ** – ಎಂಟು ಅಂಗಗಳ ಸಹಿತ (ಎದೆ, ಹಣೆ, ಎರಡು ಕೈಗಳು, ಎರಡು ಮಂಡಿಗಳು, ಎರಡು ಪಾದಗಳು)
ಸಾಷ್ಟಾಂಗಮೆಱಗು – ಸಾಷ್ಟಾಂಗ ನಮಸ್ಕಾರಮಾಡು–
**ಸಾಸಿಗ** – ಸಾಹಸಿಗ, ಪರಾಕ್ರಮಿ; ದುಸ್ಸಾಹಸಿ
**ಸಾಸಿರಕ(ಗ)ಣ್ಣ** – ಬಹುಗಣ್ಣ, ಇಂದ್ರ
**ಸಾಸವೆಗುಡಿ** – ಸಾಸಿವೆಯನ್ನು ಅರೆದು ಕುಡಿ; ಸಂಕಟ ಅನುಭವಿಸು
**ಸಾಸಿರ್ಮಡಿ** – ಸಾವಿರಪಟ್ಟು
**ಸಾಸ್ನ** – ಗಂಗೆದೊಗಲು
**ಸಾಸ್ನಾಪಟ** – ಹಸುಗಳ ಗಂಗೆದೊಗಲು
**ಸಾಹಣ** – ಆನೆಕುದುರೆಗಳನ್ನು ಪಳಗಿಸುವಿಕೆ
**ಸಾಹಣಿ** – ಸವಾರ; ಆನೆಕುದುರೆಗಳನ್ನು ಪಳಗಿಸುವವನು
**ಸಾಹಸ** – ಪರಾಕ್ರಮ
**ಸಾಹಸಭೂಷಣೆ** – ಸಾಹಸವನ್ನೇ ಆಭರಣವಾಗುಳ್ಳವಳು
**ಸಾಹಸರಸಿಕ** – ಸಾಹಸದಲ್ಲಿ ಸಂತೋಷಪಡುವವನು
**ಸಾಹಸವಂತ** – ಪರಾಕ್ರಮಿ
**ಸಾಹಿತ್ಯವಿದ್ಯೆ** – ಲಕ್ಷಣಶಾಸ್ತ್ರ
**ಸಾಳುವ** – ಗಿಡುಗ
**ಸಾಱಸು** – ಪ್ರಕಟಗೊಳಿಸು
**ಸಾಱು** – ಕೂಗಿ ಹೇಳು
**ಸಾಱಿಗೆ** – ಉಡುಗೆ
**ಸಿಂಗಬಲ** – (ಸಿಂಹಬಲ) ಸಿಂಹದ ಶಕ್ತಿ
**ಸಿಂಗರಂಗೆಯ್** – ಅಲಂಕಾರಮಾಡು
**ಸಿಂಗವೇಂಟೆ** – ಸಿಂಹವನ್ನು ಹಿಡಿಯುವ ಬೇಟೆ
**ಸಿಂಗಾಡಿ** – ಬಿಲ್ಲು
**ಸಿಂಜಾನ** – ಗೆಜ್ಜೆಯ ಧ್ವನಿ
**ಸಿಂಜಿನಿ** – ಬಿಲ್ಲಿನ ಹೆದೆ
**ಸಿಂಜಿನೀವಳಯ** – ಕಾಲ್ಗಡಗ
**ಸಿಂಟ** – ಕೊಳಕ
**ಸಿಂದುರ** – ಒಂದು ಬಗೆಯ ಹೂ, ಸಿಂದುವಾರ; ಆನೆ
**ಸಿಂದೂರ** – ಕೇಸರಿಬಣ್ಣದ ಪುಡಿ
**ಸಿಂದೂರವಸನ** – ಕೇಸರಿಬಣ್ಣದ ಬಟ್ಟೆ
**ಸಿಂಧ(ದ)** – ಧ್ವಜ
**ಸಿಂಧು** – ಸಮುದ್ರ; ನದಿ
**ಸಿಂಧುತಟ** – ನದಿಯ ದಡ
**ಸಿಂಧುತೋಯ** – ಸಮುದ್ರದ ನೀರು
**ಸಿಂಧುದ್ವಾರ** – ಸಮುದ್ರದ ಮುಂಭಾಗ
**ಸಿಂಧುಪತಿ** – ನದಿಗಳ ಒಡೆಯ, ಸಮುದ್ರ
**ಸಿಂಧುಪುತ್ರ** – ಭೀಷ್ಮ
**ಸಿಂಧುಪ್ಲವ** – ಪ್ರವಾಹ
**ಸಿಂಧುರ** – ಆನೆ
**ಸಿಂಧುರಘಟೆ** – ಆನೆಗಳ ಗುಂಪು
**ಸಿಂಧುರವಿರೋಧಿ** – ಆನೆಯ ಶತ್ರು, ಸಿಂಹ
**ಸಿಂಧರಸ್ಕಂಧ** – ಆನೆಯ ಭುಜ
**ಸಿಂಧರಸ್ಕಂಧಪೀಠ** – ಆನೆಯ ಮೇಲಿನ ಅಂಬಾರಿ
**ಸಿಂಧುವಾರ** – ಒಂದು ಮರ
**ಸಿಂಪಿಣಿ** – ಚಿಮುಕಿಸುವುದು
**ಸಿಂಪಿಣಿಯಾಡು** – ಸಿಂಪಡಿಸು
**ಸಿಂಪಿಸು** – ಸಿಂಪಿಣಿಯಾಡು
**ಸಿಂಪು** – ಹೀಚುಗಾಯಿ; ಮುತ್ತಿನ ಚಿಪ್ಪು
**ಸಿಂಬಿ** – ಸುರುಳಿ
**ಸಿಂಬೆಗೊಳ್** – ಸುರುಳಿಯಾಗು
**ಸಿಂಹಗರ್ಜನೆ** – ಸಿಂಹದ(ತೆ) ಗಟ್ಟಿಯಾದ ಕೂಗು
**ಸಿಂಹಘಂಟಿಕೆ** – ಗಜನೆಯ ಧ್ವನಿ ಮಾಡುವ ಗಂಟೆ
**ಸಿಂಹಬಲ** – ಸಿಂಹದಂತೆ ಬಲಿಷ್ಠನಾದವನು
**ಸಿಂಹರವ** – ಸಿಂಹದ ಗರ್ಜನೆ
**ಸಿಂಹಲಂಘನ** – ಸಿಂಹದ ನೆಗೆತ
**ಸಿಂಹವರ್ಣ** – ಸಿಂಹದ ಸ್ವಭಾವದವನು
**ಸಿಂಹವಾಹಿನಿ** – (ಜೈನ) ಒಂದು ವಿದ್ಯೆ; ಭರತ ಚಕ್ರವರ್ತಿಯ ಹಾಸಿಗೆಯ ಹೆಸರು
**ಸಿಂಹವಿಕ್ರೀಡಿತ** – (ಜೈನ) ಒಂದು ಉಪವಾಸ ವ್ರತ

**ಸಿಂಹವಿಧೃತ** – ಭರತ ಚಕ್ರವರ್ತಿಯ ಹಾಸಿಗೆಯ ಹೆಸರು
**ಸಿಂಹಶಿಶು** – ಸಿಂಹದ ಮರಿ
**ಸಿಂಹಸಂಘಾತ** – ಸಿಂಹಗಳ ಗುಂಪು
**ಸಿಂಹಾವಲೋಕನಕ್ರಮ** – ಸಿಂಹದ ನೋಟದ ರೀತಿ; ಹಿಂದೆ ನಡೆದುದನ್ನು ಸಂಕ್ಷಿಪ್ತವಾಗಿಯೂ ಸಮಗ್ರವಾಗಿಯೂ ಪರಿಶೀಲಿಸುವ ಬಗೆ
**ಸಿಂಹಾಸಂದಿ** – ಸಿಂಹಾಸನ
**ಸಿಂಹಾಸನ** – (ಜೈನ) ಆಸನವನ್ನು ತ್ಯಜಿಸಿ ಪರಮಾತ್ಮನ ಆಸನವನ್ನು ಹೊಂದುವ ವ್ರತ, ಪರಿವ್ರಾಜಕ ಲಕ್ಷಣಗಲನ್ನುಳ್ಳ ಇಪ್ಪತ್ತೇಳು ಸೂತ್ರಪದಗಳಲ್ಲಿ ಒಂದು
**ಸಿಂಹಾಸನಸ್ಥ** – ಸಿಂಹಾಸನವನ್ನು ಉಳ್ಳವನು, ರಾಜ
**ಸಿಂಹಾಸನಾಸೀನ** – ಸಿಂಹಾಸನದಲ್ಲಿ ಕುಳಿತವನು, ರಾಜ
**ಸಿಂಹೀಮಧ್ಯೆ** – ಸಿಂಹದ ನಡುವಿನಂತಹ ನಡುವುಳ್ಳವಳು
**ಸಿಕತ** – ಮರಳು
**ಸಿಕತಾಕೃತಿ** – ಮರಳಿನ ಆಕಾರ
**ಸಿಕತಿಲ(ಳ)** – ಮರಳಿನಿಂದ ಕೂಡಿದ; ಮರಳಿನ ಭೂಮಿ
**ಸಿಕತಿಲ(ಳ)ತಲ(ಳ)** – ಮರಳಿನಿಂದ ಕೂಡಿದ ಭೂಮಿ
**ಸಿಕ್ತ** – ಒದ್ದೆಯಾದ; ಸಿಂಪಡಿಸಿದ
**ಸಿಗ್ಗಾಳ** – ನಾಚಿಕೆಯ ಸ್ವಭಾವದವನು(ಳು)
**ಸಿಗ್ಗು** – ನಾಚಿಕೆ; ಅವಮಾನ
**ಸಿಗ್ಗಾಗು** – ನಾಚಿಕೆಗೊಳ್ಳು; ಅವಮಾನ ಅನುಭವಿಸು
**ಸಿಚಯ** – ಮೇಲುಹೊದಿಕೆ, ಸೆರಗು
**ಸಿಚಯಕ** – ರವಿಕೆ
**ಸಿಟ್ಟಿ** – (ಸೃಷ್ಟಿ) ಜಗತ್ತು
**ಸಿಟ್ಟು** – ಕೋಪ
**ಸಿಡಿ** ಚಿಮ್ಮು; ಚೆಲ್ಲಾಪಿಲ್ಲಿಯಾಗು–
**ಸಿಡಿದಲೆ** – ಮುಂಡದಿಂದ ಬೇರ್ಪಟ್ಟ ರುಂಡ; ಲೆಂಕರು ತಮ್ಮ ಯಜಮಾನನಿಗೆ ತಮ್ಮ ತಲೆಯನ್ನು ಕಡಿದು ಅರ್ಪಿಸುವ ವಿಧಿ
**ಸಿಡಿಮಿಡಿಗೊಳ್(ಳು)** – ಚಡಪಡಿಸು; ಅಸಹನೆಯಿಂದ ಕುದಿ
**ಸಿಡಿಮಿಡಿವರ್** – ಚಡಪಡಿಕೆಯಿಂದ ಬಾ
**ಸಿಡಿಲ್** – ಚಿಮ್ಮು; ಗರ್ಜಿಸು; ಮೋಡದ ಘಟ್ಟನೆಯಿಂದಾಗುವ ಬೆಂಕಿ
**ಸಿಡಿಲ ಕಿಚ್ಚು** – ಸಿಡಿಲಿನಿಂದಾದ ಬೆಂಕಿ
**ಸಿಡಿಲ ದನಿ** – ಸಿಡಿಲಿನ ಆರ್ಭಟ
**ಸಿಡಿಲ ಬಳಗ** – ಸಿಡಿಲುಗಳ ಪಂಕ್ತಿ
**ಸಿಡಿಲ ಸರಿ** – ಸಿಡಲುಗಳಿಂದ ಕೂಡಿದ ಮಳೆ
**ಸಿಡಿಲೆಱಗು** – ಸಿಡಿಲು ಅಪ್ಪಳಿಸು
**ಸಿಡಿಲೇಱ್ಗಿ** – ಸಿಡಲಿನ ರಭಸ
**ಸಿಡಲ್ಗೆಂಡ** – ಸಿಡಿಲಿನ ಬೆಂಕಿ
**ಸಿಡಿಲ್ತರ್** – ಸಿಡಿದು ಬಾ; ಚಿಮ್ಮಿ ಬಾ
**ಸಿಡಿಲ್ಮಟಿ** – ಸಿಡಿಲ ಸರಿ
**ಸಿಡಿಲ್ವೊಡೆ** – ಸಿಡಿಲೆಱಗು
**ಸಿಡಿಲ್ಸಿಡಿ** – ಸಿಡಿಲು ಚಿಮ್ಮು
**ಸಿಡುಂ(ಡಿಂ)ಬು** – ಬಿದಿರ ಮೆಳೆ, ಪೊದೆ; ಮುಳ್ಳು
**ಸಿತ** – ಬಿಳುಪಾದ; ಶುಕ್ರ; ಸಕ್ಕರೆ; ಶುಕ್ಲಪಕ್ಷ
**ಸಿತಕಿರಣಾಶ್ಮ** – ಚಂದ್ರಕಾಂತಶಿಲೆ
**ಸಿತಗ** – ಜಾರ; ವಂಚಕ
**ಸಿತಗತನ** – ಹಾದರ
**ಸಿತಗೆ** – ಜಾರಿಣಿ
**ಸಿತಚ್ಛವಿ** – ಬಿಳಿಯ ಕಾಂತಿ
**ಸಿತದೂರ್ವಾಂಕುರ** – ಬಿಳಿಯ ಗರಿಕೆಯ ಚಿಗುರು
**ಸಿತದ್ಯುತಿ** – ಬಿಳಿಯ ಕಾಂತಿ, ಚಂದ್ರ
**ಸಿತಪಕ್ಷ** – ಬಿಳಿಯ ರೆಕ್ಕೆ; ಶುಕ್ಲಪಕ್ಷ
**ಸಿತರುಚ್** – ಸಿತದ್ಯುತಿ
**ಸಿತಸರ್ಷಪ** – ಬಿಳಿಯ ಸಾಸಿವೆ
**ಸಿತಾಂಬುಜ** – ಬಿಳಿಯ ತಾವರೆ, ಪುಂಡರೀಕ
**ಸಿತಾಕ್ಷತ** – ಬಿಳಿಯ ಅಕ್ಷತೆ ಕಾಳು
**ಸಿತಾತಪತ್ರ** – ಬೆಳ್ಗೊಡೆ, ಶ್ವೇತಚ್ಛತ್ರ
**ಸಿತಾಬ್ಜ** – ಸಿತಾಂಬುಜ
**ಸಿತೇಕ್ಷು** – ಬಿಳಿಯ ಕಬ್ಬು
**ಸಿತೇಕ್ಷುದಂಡ** – ಬಿಳಿಯ ಕಬ್ಬಿನ ಜಲ್ಲೆ
**ಸಿತೇತರಗತಿ** – ಸಿತ+ಇತರ+ಗತಿ, ಬಿಳಿಯಲ್ಲದ ನಡವಳಿಕೆ, ದುರ್ನಡತೆ; ಕಪ್ಪು (ಹೊಗೆಯ) ಹಾದಿಯಲ್ಲಿ ಸಾಗುವವನು, ಅಗ್ನಿ
**ಸಿದಿಗೆ** – ಚಿತೆ
**ಸಿದುಗು** – ತಡಕಾಡು
**ಸಿದ್ದಿಗೆ** – ಚರ್ಮದ ಬುದ್ದಲಿ
**ಸಿದ್ಧ** – ಸಾಬೀತಾದುದು; (ಜೈನ) ಪಂಚಪರಮೇಷ್ಠಿಗಳಲ್ಲಿ ಒಬ್ಬ
**ಸಿದ್ಧಕ್ಷೇತ್ರ** – ಸಿದ್ಧರು ನೆಲೆಸಿರುವ ಸ್ಥಳ
**ಸಿದ್ಧನಿಲಯ** – ಸಿದ್ಧಕ್ಷೇತ್ರ
**ಸಿದ್ಧಪಪದ** – ಮೋಕ್ಷ
**ಸಿದ್ಧಪರಮೇಷ್ಠಿ** – (ಜೈನ) ಪಂಚಪರಮೇಷ್ಠಿಗಳಲ್ಲಿ ಒಬ್ಬ
**ಸಿದ್ಧಮಾತೃಕೆ** – ಸಿದ್ಧರಲ್ಲಿ ಪ್ರೀತಿ
**ಸಿದ್ಧರಸ** – ಕೀಳು ಲೋಹಗಳನ್ನು ಚಿನ್ನವನ್ನಾಗಿಸುವ ರಸ
**ಸಿದ್ಧಶಿಲೆ** – (ಜೈನ) ಸಿದ್ಧರು ನೆಲಸುವ ಬೆಟ್ಟ
**ಸಿದ್ಧಶೇಷೆ** – (ಜೈನ) ನಿರ್ಮಾಲ್ಯ ಮುಂತಾದ ಪೂಜಿಸಿದ ವಸ್ತುಗಳು
**ಸಿದ್ಧಶೈಲ** – ಸಿದ್ಧಶಿಲೆ
**ಸಿದ್ಧಸೇಸೆ** – ಸಿದ್ಧಶೇಷೆ
**ಸಿದ್ಧಾಂಜನ** – ಸಿದ್ಧರು ತಯಾರಿಸಿದ ಅತಿಮಾನುಷ ಶಕ್ತಿಯುಳ್ಳ ಅಂಜನ
**ಸಿದ್ಧಾಂತ** – ಶಾಸ್ತ್ರಗ್ರಂಥ; ನಿರ್ಣೀತವಾದ ತತ್ವ
**ಸಿದ್ಧಾಂತಿ** – ತತ್ವಪ್ರತಿಪಾದಕ

**ಸಿದ್ಧಾಯ** – ನಿಗದಿಯಾದ ಕಂದಾಯ
**ಸಿದ್ಧಾಯತನ** – ಸಿದ್ಧಕ್ಷೇತ್ರ
**ಸಿದ್ಧಾರ್ಥ** – ಬಿಳಿಯ ಸಾಸಿವೆ
**ಸಿದ್ಧಾರ್ಥವೃಕ್ಷ** – ಕಲ್ಪವೃಕ್ಷ
**ಸಿದ್ಧಿಸು** – ನೆರವೇರು
**ಸಿಪ್ಪಡಸು** – ಚಿಪ್ಪು ಆವರಿಸು
**ಸಿಪ್ಪಿಡು** – ಚೀಪು
**ಸಿಪ್ಪು** – ಚಿಪ್ಪು; ಭರಣಿ; ತಲೆಬುರುಡೆ
**ಸಿಬಿ(ವಿ)ಗೆ** – ಪಲ್ಲಕ್ಕಿ
**ಸಿಬ್ಬ** – ಆನೆಯ ಮೈಮೇಲಿನ ಮಚ್ಚೆ
**ಸಿರಣವಟ್ಟಿ** – ಕುಸ್ತಿಯ ಒಂದು ಪಟ್ಟು
**ಸಿರಿ** – (ಶ್ರೀ) ಸಂಪತ್ತು; ಲಕ್ಷ್ಮಿ; ಚೆಲುವು
**ಸಿರಿಕಂಡ** – (ಶ್ರೀಖಂಡ) ಶ್ರೀಗಂಧ
**ಸಿರಿಕಂಡವೆಟ್ಟು** – ಮಲಯ ಪರ್ವತ
**ಸಿರಿಗಂಧ** – ಸಿರಿಕಂಡ
**ಸಿರಿಗನ್ನಡಿ** – ಶ್ರೇಷ್ಠವಾದ ಕನ್ನಡಿ
**ಸಿರಿತಾಳೆ** – (ಶ್ರೀತಾಲ) ಒಂದು ಬಗೆಯ ತಾಳೆಯ ಮರ
**ಸಿರಿಮಂಚ** – ಶ್ರೇಷ್ಠವಾದ ಮಂಚ
**ಸಿರಿಯರಸ** – ವಿಷ್ಣು
**ಸಿರಿಯಾಣ್ಮ** – ಸಿರಿಯರಸ
**ಸಿರಿಯುಳ್ಳಂ** – ಹಣವಂತ
**ಸಿರಿಯೊಡೆಯ** – ಹಣವಂತ
**ಸಿರಿಯೋಲಗಂಗೊಡು** – ವೈಭವದ ಕೂಡಿದ ಒಡ್ಡೋಲಗ ನಡೆಸು
**ಸಿರಿವಂತ** – ಹಣವಂತ
**ಸಿರಿವಂತಿಗೆ** – ಹುರಿಯೋಡು; ಬಾಣಲಿ
**ಸಿರಿವೆಣ್** – ಲಕ್ಷ್ಮಿ
**ಸಿರಿವೆಣ್ಣರಸ** – ಲಕ್ಷ್ಮಿಯ ಒಡೆಯ, ವಿಷ್ಣು
**ಸಿರೆ** – ಹಣ್ಣಿನ ನಾರು; ಮೆಣಸಿನ ಬಳ್ಳಿ
**ಸಿರ್ಕು** – ಅಡ್ಡಿಯುಂಟುಮಾಡು
**ಸಿವಡಿ** – ಲೆಕ್ಕದ ಪುಸ್ತಕ
**ಸಿ(ೞ)ವನ್ನಿ** – ತೇಗದ ಮರ
**ಸಿವಿಗೆ** – (ಶಿಬಿಕಾ) ಪಲ್ಲಕ್ಕಿ
**ಸಿ(ಸೆ)ಲೆ** – ಬಂಡೆ
**ಸಿಲ್ಕಿಸು** – ಸಿಕ್ಕಿಬೀಳುವಂತೆ ಮಾಡು
**ಸಿಲ್ಕು** – ಅಡ್ಡಿಯುಂಟುಮಾಡುಸಿಕ್ಕಿಹಾಕಿಕೊ; ಬಂಧನ; ಬಂಧನಕ್ಕೊಳಗಾದ ವಸ್ತು
**ಸಿವಡಿ** – ಲೆಕ್ಕದ ಪುಸ್ತಕ
**ಸಿವುಱು** – ಕೆರೆ; ಸಿಬಿರು
**ಸಿವುಱೇಳ್** – ಸಿಬಿರು ಉಂಟಾಗು
**ಸಿಸು** – (ಶಿಶು) ಮಗು
**ಸಿ(ೞ)ಱುಂಬುಳಾಡು** – ಚೆದುರಿಸು, ಚೆಲ್ಲಾಪಿಲ್ಲಿ ಮಾಡು
**ಸೀ** – ಸೀದುಹೋಗು, ಹೆಚ್ಚು ಉರಿಯಿಂದ ಕರಿಕಾಗುವುದು
**ಸೀಂಟಿ ಕಳೆ** –ಒರೆಸಿ ಹಾಕು
**ಸೀಂಟು** – (ಗುದಪ್ರದೇಶವನ್ನು) ತೊಳೆ; ಒರಸು; ನಾಶಮಾಡು
**ಸೀಕರ** – ತುಂತುರು
**ಸೀಕರಿವೋಗು** – ಸೀದುಹೋಗು
**ಸೀಗುರಿ** – ಕೊಡೆ, ಚಾಮರ; ಒಂದು ಬಗೆಯ ಮರ
**ಸೀಗುರಿಯನಿಕ್ಕು** – ಚಾಮರ ಬೀಸು
**ಸೀಗುರಿವಿಡು** – ಚಾಮರವನ್ನು ಹಿಡಿದುಕೊ
**ಸೀತ** – ಚಳಿ
**ಸೀತೆ** – ಸೀತಾದೇವಿ; ಉತ್ತ ಭೂಮಿ
**ಸೀತ್ಕರಿಸು** – ಸಂತೋಷದಿಂದ ಉದ್ಗರಿಸು
**ಸೀತ್ಕಾರ** – ಭಾವಾಭಿವ್ಯಕ್ತಿಯ ಧ್ವನಿ
**ಸೀದು(ಧು)** – ಮದ್ಯ
**ಸೀನ್** – ಮೂಗಿನಿಂದ ರಭಸವಾಗಿ ಉಸಿರು ಬರು
**ಸೀಪು** – ಹೀರಿಕೊ; ಸಿಹಿತನ
**ಸೀಮ(ಮೆ)** – ಎಲ್ಲೆ
**ಸೀಮಂತ(ರೇಖೆ)** – ಬೈತಲೆ (ಗೆರೆ)
**ಸೀಮಂತಿನಿ** – ಹೆಂಗಸು
**ಸೀಮಂತೋನ್ನಯನ** – ಬಸಿರಿಗೆ ಬೈತಲೆ ತೆಗೆಯುವ ಶಾಸ್ತ್ರ; ಷೋಡಶ ಸಂಸ್ಕಾರಗಳಲ್ಲಿ ಒಂದು
**ಸೀಮಾವಿವಾದ** – ಗಡಿಕಲಹ
**ಸೀಮಾವು** – ಇಮ್ಮಾವು
**ಸೀಮೆಗಳೆ** – ಗಡಿದಾಟು, ಮೀರು
**ಸೀಯನೆ** – ಸಿಹಿಯಾಗಿ
**ಸೀರ** – ನೇಗಿಲು; ತುಂತುರು
**ಸೀರಧರ** – ನೇಗಿಲನ್ನು ಹಿಡಿದವನು, ಬಲರಾಮ
**ಸೀರಪಾಣಿ** – ಸೀರಧರ
**ಸೀರಹಸ್ತ** – ಸೀರಧರ
**ಸೀರಾಯುಧ** – ನೇಗಿಲ ಆಯುಧ
**ಸೀರಾಸ್ತ್ರ** – ಸೀರಾಯುಧ
**ಸೀರಿ** – ಸೀರಧರ
**ಸೀರೆ** – (ಚೀರ) ಬಟ್ಟೆ
**ಸೀರುಡು** – ಜೀರುಂಡೆ
**ಸೀರ್ಕರಡಿ** – ಭಯಂಕರವಾದ ಕರಡಿ
**ಸೀರ್ನಾಯ್** – ಉಗ್ರವಾದ ನಾಯಿ
**ಸೀರ್ವನಿವಡಪ(ಹ)** – ತುಂತುರು ಮಳೆ
**ಸೀರ್ಪುಲ್** – ಸಣ್ಣ ಹುಲ್ಲುಕಡ್ಡಿ
**ಸೀರ್ವ(ರ್ಪ)ನಿ** – ತುಂತುರು
**ಸೀವರ** – ತುಂತುರು
**ಸೀವಳಿಗೆ** – ಸಿಡುಬು
**ಸೀವು** – ಅಲಂಕರಿಸಿಕೊ
**ಸೀಸಕ** – ಕುಸ್ತಿಯ ಒಂದು ಪಟ್ಟು; ತಲೆಯ ಕವಚ
**ಸೀಳ್** – ಹೋಳುಮಾಡು; ಬಿರುಕು ಬಿಡು
**ಸೀಳಿಸು** – ಸೀಳುವಂತೆ ಮಾಡು
**ಸೀಱು** – ದುಷ್ಕಲಹ, ಕೆಟ್ಟ ಜಗಳ; ಚೆದರು
**ಸೀಱುಡು**– ಜೀರುಂಡೆ
**ಸುಂಕ** – (ಶುಲ್ಕ) ತೆರಿಗೆ
**ಸುಂಕಂಗೊಳ್** – ತೆರಿಗೆ ವಸೂಲುಮಾಡು

**ಸುಂಟಿ** – ಶುಂಠಿ
**ಸುಂಟಿಗೆ** – (ಸುಟ್ಟ) ಮಾಂಸ
**ಸುಂದು** – ಮಲಗು; ಸಂಭೋಗಿಸು
**ಸುಕ** – ಸುಖ
**ಸುಕರ** – ಮನೋಹರವಾದ; ಒಳ್ಳೆಯ ಕೈ
**ಸುಕವಿ** – ಒಳ್ಳೆಯ ಕವಿ
**ಸುಕುಮಾರ(ಕ)** – ಕೋಮಲವಾದ(ವನು)
**ಸುಕುಮಾರಾಂಗ(ಗಿ)** – ಕೋಮಲ ದೇಹವುಳ್ಳವನು(ಳು)
**ಸುಕೃತ** – ಪುಣ್ಯ
**ಸುಕೃತಂಬೆಱು** – ಪುಣ್ಯ ಗಳಿಸು
**ಸುಕೃತನಿಧಾನ** – ಪುಣ್ಯನಿಧಿ
**ಸುಕೃತಿ** – ಒಳ್ಳೆಯ ಕೆಲಸ; ಒಳ್ಳೆಯ ಸ್ವಭಾವ
**ಸುಖಂಬಡು** – ಸುಖ ಅನುಭವಿಸು
**ಸುಖಂಬಾೞ್** – ಸಂತೋಷದ ಬದುಕು
**ಸುಖಕರ** – ಸುಖವನ್ನುಂಟುಮಾಡುವ
**ಸುಖನಿಧಿ** – ಸುಖದ ನೆಲೆ
**ಸುಖಲವ** – ಅಲ್ಪಸುಖ
**ಸುಖಾಕರ** – ಸುಖನಿಧಿ
**ಸುಖಾತ್ಮ** – ಸುಖಸ್ವರೂಪಿ
**ಸುಖಾ(ವಾ)ಪ್ತಿ** – ಸುಖವನ್ನು ಪಡೆಯುವಿಕೆ
**ಸುಖಾಶ್ರು** – ಆನಂದದ ಕಣ್ಣೀರು
**ಸುಖಾಸೀನ** – ಆರಾಮವಾಗಿ ಕುಳಿತಿರುವವನು
**ಸುಖಿ** – ಸಂತೋಷದಿಂದಿರುವವನು
**ಸುಖೋದಯ** – ಆನಂದದ ಪ್ರಾರಂಭ
**ಸುಗಂಧ** – ಒಳ್ಳೆ ವಾಸನೆ, ಪರಿಮಳ
**ಸುಗಂಧಭಂಡಾರಿಗ** – ಪರಿಮಳಗಳ ಶೇಖರಣೆಯ ಮೇಲ್ವಿಚಾರಕ
**ಸುಗತಮತ** – ಬೌದ್ಧಮತ
**ಸುಗತಿ** – ಮೋಕ್ಷ
**ಸುಗತಿವಡೆ** – ಸದ್ಗತಿಯನ್ನು ಹೊಂದು
**ಸುಗಿ** – ಹೆದರು; ಹಿಮ್ಮೆಟ್ಟು; ಪರಿತಪಿಸು
**ಸುಗ್ಗಿ** – ವಸಂತಕಾಲ
**ಸುಗ್ರೀವ** – ಒಳ್ಳೆಯ ಕೊರಳನ್ನು ಹೊಂದಿದ(ವನು); ಕಿಷ್ಕಂಧೆಯ ರಾಜ
**ಸುಚರಿತ(ತೆ)** – ಸನ್ನಡತೆಯುಳ್ಳವ(ನು)(ಳು)
**ಸುಚರಿತ್ರತೆ** – ಒಳ್ಳೆಯ ನಡವಳಿಕೆ
**ಸುಜವತ್ಸಲ(ಳ)** – ಸಜ್ಜನಪಕ್ಷಪಾತಿ
**ಸುಜಾತ** – ಚೆನ್ನಾಗಿ ವಿಕಸಿತಗೊಂಡ
**ಸುಟ್ಟಿತೋ(ದೋ)ಱು** – ಬೆರಳಿನಿಂದ ತೋರಿಸು
**ಸುಟ್ಟಿಸು** – ಸುಟ್ಟಿತೋ(ದೋ)ಱು
**ಸುಟ್ಟು** – ಸುಟ್ಟಿತೋ(ದೋ)ಱು
**ಸುಟ್ಟುಂಬೆ** – ತೋರುಬೆರಳು
**ಸುಟ್ಟುಂಬೆಯ ನೆೞಲ್** – ಮಾರ್ಗದರ್ಶನದ ನೆರಳು
**ಸುಟ್ಟುಂಬೆರಲ್** – ಸುಟ್ಟುಂಬೆ
**ಸುಟ್ಟುರೆ(ಱಿ)** – ಸುಂಟರ ಗಾಳಿ; ಪ್ರವಾಹ
**ಸುಟ್ಟುರೆಮಸಗು** – ಸುಂಟರಗಾಳಿ ಹರಡು
**ಸುಟ್ಟುರೆವಿಡು** – ಸುಂಟರಗಾಳಿಯಂತೆ ಬೇಗ ಹರಡು
**ಸುಡು** – ದಹಿಸು
**ಸುಡುನುಡಿ** – ತೀಕ್ಷ್ಣವಾದ ಮಾತು
**ಸುಡುಪುಡು** – ಬಿಸಿಬಿಸಿ
**ಸುಡುಮಿಡು** – ಚಡಪಡಿಸು
**ಸುಡುವುಣ್** – ಉರಿಯುವ ಹುಣ್ಣು
**ಸುಣ್ಣದೆಲೆ** – ಸುಣ್ಣ ಹಾಕಿದ ವೀಳೆಯದೆಲೆ
**ಸುತ** – ಹುಟ್ಟಿದ; ಮಗ
**ಸುತದೋಹಳ** – ಮಗನನ್ನು ಪಡೆಯಬೇಕೆಂಬ ಹಂಬಲ
**ಸುತಪ** – ಶ್ರೇಷ್ಠ ತಪಸ್ಸು
**ಸುತಮೋಹ** – ಮಗನ ಮೇಲಿನ ಪ್ರೀತಿ
**ಸುತಲ(ಳ)** – ಕೆಳಗಿನ ಏಳುಲೋಕಗಳಲ್ಲಿ ಒಂದು
**ಸುತಲಾಭ** – ಮಗನನ್ನು ಪಡೆಯುವ ಸಂತೋಷ
**ಸುತಲಾಭಾರ್ಥಿ** – ಮಗನನ್ನು ಪಡೆಯುವ ಸಂತಸಕ್ಕಾಗಿ ಹಂಬಲಿಸುವವನು
**ಸುತಶೋಕ** – ಮಗನ ಕಾರಣದಿಂದಾಗುವ ದುಃಖ
**ಸುತಾಹೃತಿ** – ಮಗನ ಅಪಹರಣ
**ಸುತಿ** – (ಶ್ರುತಿ), ವೇದ
**ಸುತಿಗೂಡು** – ಹಾಡುವಾಗ ಆಧಾರಸ್ಥಾಯಿಗೆ ಹೊಂದಿಕೊಳ್ಳುವುದು
**ಸುತೆ** – ಮಗಳು
**ಸುತ್ತಱೆ** – ಸಡಿಲಗೊಳ್ಳು
**ಸುತ್ತಿ** – (ಶುಕ್ತಿ) ಮುತ್ತಿನ ಚಿಪ್ಪು
**ಸುತ್ತಿಱೆ** – ಸುತ್ತಿಕೋ
**ಸುತ್ತು** – ಉಡುವ ಬಟ್ಟೆ; ಬಳಸಿ ಬಾ; ಸುತ್ತಿಕೊಂಡಿರುವುದು
**ಸುತ್ತುಂಗುರುಳ್** – ಗುಂಗುರು ಕೂದಲು
**ಸುತ್ತ(೦)ಗೊಳ್** – ಆವರಿಸು
**ಸತ್ತು(೦)ಬರ್** – ಆವರಿಸಿಕೊಂಡು ಬಾ
**ಸುತ್ಥಣೆ** – ಕಾಲಾಳು ಸೈನ್ಯ
**ಸುದತಿ** – ಚೆನ್ನಾದ ಹಲ್ಲುಗಳುಳ್ಳವಳು, ಸುಂದರಿ
**ಸುದೃಢ** – ಬಹಳ ಗಟ್ಟಿಯಾದ
**ಸುದ್ದಗನ್ನಡ** – ಅಚ್ಚಗನ್ನಡ
**ಸುದ್ದಗೆ** – (ಶುದ್ಧಕ) ಅಕ್ಷರ; ಶುದ್ಧಗೆ
**ಸುಧರ್ಮ** – ಒಳ್ಳೆಯ ನಡವಳಿಕೆ
**ಸುಧರ್ಮಾಧಿಪ** – ಒಳ್ಳೆಯ ಧರ್ಮದ ಒಡೆಯ
**ಸುಧರ್ಮಾನುವರ್ತಿನಿ** – ಒಳ್ಳೆಯ ಧರ್ಮವನ್ನು ಅನುಸರಿಸುವವನು(ಳು)
**ಸುಧಾ** – ಅಮೃತ; ಸುಣ್ಣ
**ಸುಧಾಂಶು(ಬಿಂಬ)** – ಚಂದ್ರ(ಮಂಡಲ)
**ಸುಧಾಂಶುಲೇಖೆ** – ಚಂದ್ರನಲ್ಲಿನ ಕಲೆ
**ಸುಧಾಂಶುವಲ್ಲಭ** – ಬಿಳಿ ಕಿರಣಗಳಿಗೆ ಒಡೆಯ, ಚಂದ್ರ
**ಸುಧಾಕರ** – ಚಂದ್ರ
**ಸುಧಾಕರಧರ** – ಚಂದ್ರಮೌಳಿ, ಶಿವ
**ಸುಧಾಗೃಹ** – ಸುಣ್ಣ ಬಳಿದ ಮನೆ

**ಸುಧಾಜಾತ** – ಹಾಲ್ಗಡಲಲ್ಲಿ ಹುಟ್ಟಿದವನು, ಚಂದ್ರ
**ಸುಧಾಧವಲ(ಳ)ತ** – ಸುಣ್ಣ ಬಳಿದು ಬೆಳ್ಳಗಾದ
**ಸುಧಾಬ್ಧಿ** – ಹಾಲ್ಗಡಲು
**ಸುಧಾಭವನ** – ಸುಧಾಗೃಹ
**ಸುಧಾಮಯೂಖ** – ಸುಧಾಕರ
**ಸುಧಾಮರೀಚಿ** – ಬೆಳುದಿಂಗಳು, ಚಂದ್ರ
**ಸುಧಾರುಗ್ಧರ** – ಸುಧಾಕರಧರ
**ಸುಧಾರುಚಿ** – ಸುಧಾಮರೀಚಿ
**ಸುಧಾರ್ಣವ** – ಸುಧಾಬ್ಧಿ
**ಸುಧಾಶ(ನ)** – ಅಮೃತ ಕುಡಿದವನು, ದೇವತೆ
**ಸುಧಾಸೂತಿ** – ಸುಧಾಜಾತ, ಚಂದ್ರ
**ಸುಧಾಸ್ಯಂದಿ** – ಅಮೃತವನ್ನು ಸುರಿಸುವ; ಸಂತೋಷವುಂಟುಮಾಡುವ
**ಸುಧೆ** – (ಸುಧಾ) ಅಮೃತ
**ಸುನಯ** – ಒಳ್ಳೆಯ ನಡವಳಿಕೆ
**ಸುನಾಕನಗ** – ದೇವಲೋಕದ ಬೆಟ್ಟ, ಮೇರು
**ಸುನಾಸೀರ** – ದೇವತೆಗಳ ಒಡೆಯ, ಇಂದ್ರ
**ಸುನಾಸೀರಶರಾಸನ** – ಇಂದ್ರನ ಬಿಲ್ಲು, ಕಾಮನ ಬಿಲ್ಲು
**ಸುನ್ನ** – ಶೂನ್ಯ
**ಸುಪಕ್ಷ** – ಒಳ್ಳೆಯ ರೆಕ್ಕೆ; ಶುಕ್ಲಪಕ್ಷ; ಒಂದು ಕುಲಪರ್ವತ
**ಸುಪರ್ಣ** – ಗರುಡ; (ಜೈನ) ದೇವತೆಗಳ ಒಂದು ವರ್ಗ
**ಸುಪರ್ಣಕೇತು** – ಗರುಡಧ್ವಜ, ವಿಷ್ಣು
**ಸುಪರ್ಣರಥ** – ಗರುಡನನ್ನು ರಥವನ್ನಾಗಿ (ವಾಹನವನ್ನಾಗಿ) ಉಳ್ಳವನು, ವಿಷ್ಣು
**ಸುಪರ್ವ** – ದೇವತೆ
**ಸುಪರ್ವಗುರು** – ದೇವತೆಗಳ ಗುರು, ಬೃಹಸ್ಪತಿ
**ಸುಪರ್ವವಧು** – ಅಪ್ಸರಸ್ತ್ರೀ
**ಸುಪಾಣಿ** – ಒಳ್ಳೆಯ ಮುತ್ತು
**ಸುಪುಷ್ಪಪಟ್ಟ** – ರಾಜರೂ, ದೇವತೆಗಳೂ ಧರಿಸುವ ನಾನಾ ಬಗೆಯ ಕಿರೀಟಗಳಲ್ಲಿ ಒಂದು
**ಸುಪ್ತಪ್ರಲಾಪ** – ಕನವರಿಕೆ
**ಸುಪ್ತಿ** – ನಿದ್ದೆ; ಮರೆವು
**ಸುಪ್ತೆ** – ನಿದ್ದೆ ಮಾಡುತ್ತಿರುವವಳು
**ಸುಪ್ಪಲ್** – ಒಂದು ಬಗೆಯ ಭಕ್ಷ್ಯ; ಚಾಕಣ
**ಸುಪ್ರತಿಷ್ಠ** – (ಜೈನ) ಅರವತ್ತುಮೂರು ಇಂದ್ರಕ(ವಿಮಾನ)ಗಳಲ್ಲಿ ಒಂದು
**ಸುಪ್ರತಿಷ್ಠಕ** – (ಜೈನ) ಮಂಗಳದ್ರವ್ಯಗಳ ಪಾತ್ರೆ
**ಸುಪ್ರತೀಕಪತಿ** – (ಜೈನ) ಈಶಾನಕಲ್ಪದ ಒಡೆಯ
**ಸುಪ್ರಬುದ್ಧ** – ಜೈನ) ಅರವತ್ತುಮೂರು ಇಂದ್ರಕ(ವಿಮಾನ)ಗಳಲ್ಲಿ ಒಂದು
**ಸುಪ್ರಭೆ** – ಒಳ್ಳೆಯ ಕಾಂತಿ; ಗ್ನಿಯ ಏಳು ನಾಲಗೆಗಳಲ್ಲಿ ಒಂದು
**ಸುಪ್ರಾಸುಕ** – (ಜೈನ) ಜೀವಜಂತುಗಳಿಲ್ಲದೆ ಶುದ್ಧವಾಗಿರುವ
**ಸುಪ್ರೀತಿ** – (ಜೈನ) ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಗರ್ಭಿಣಿಗೆ ಐದನೆಯ ತಿಂಗಳಲ್ಲಿ ಮಾಡುವ ಒಂದು ಸಂಸ್ಕಾರ
**ಸುಬಟ್ಟಕ್ಕರ** – (ಪ್ರಾಕೃತದ ಸುಬ+ಅಟ್ಠ+ಅಕ್ಕರ) ಎಂಟು ಅಕ್ಷರಗಳ ನಮಸ್ಕಾರ ಮಂತ್ರ
**ಸುಬುದ್ಧಿಗೆಡು** – ವಿವೇಚನೆಯನ್ನು ಕಳೆದುಕೊ
**ಸುಬ್ಬರಸೂಱಿ** – ಎಲ್ಲವನ್ನೂ ದೋಚುವುದು
**ಸುಬ್ಬುರುವಾಲ** – ಕೂದಲು ತುಂಬಿದ ಬಾಲವುಳ್ಳ ನಾಯಿ
**ಸುಭಗ** – ಸುಂದರವಾದ; ಶ್ರೇಷ್ಠ; ಚೆಲುವ; ಪುಣ್ಯವಂತ
**ಸುಭಗೆ** – ಸೌಭಾಗ್ಯವತಿ
**ಸುಭಟತ್ರಿಣೇತ್ರ** – ಮುಕ್ಕಣ್ಣನಂತಹ ಯೋಧ
**ಸುಭಟವೃತ್ತಿ** – ಶ್ರೇಷ್ಠ ಭಟರಿಗೆ ಕೊಡುವ ಮಾನ್ಯ
**ಸುಭದ್ರ** – ಆನೆಯ ಉತ್ತಮ ತಳಿ
**ಸುಭಾಷಿತ** – ಚೆನ್ನಾಗಿ ಮಾತನಾಡುವ; ಸೂಕ್ತಿ
**ಸುಭಿಕ್ಷತ್ವ** – (ಜೈನ) ಕೇವಲಜ್ಞಾನ ಉಂಟಾದಾಗ ದೊರೆಯುವ ಹತ್ತು ಅತಿಶಯಗಳಲ್ಲಿ ಒಂದು
**ಸುಮತಿ** – ಜ್ಞಾನಿ; (ಜೈನ) ಐದನೆಯ ತೀರ್ಥಂಕರ
**ಸುಮನಸ್** – ಒಳ್ಳೆಯ ಮನಸ್ಸು; ಹೂ; ದೇವತೆ; ಪಂಡಿತ
**ಸುಮನಶ್ಚಾಪ** – ಸುಮನಸ್+ಚಾಪ, ಮನ್ಮಥ
**ಸುಮನಶ್ಶರ** – ಹೂಬಾಣ, ಮನ್ಮಥ
**ಸುಮನಶ್ಶೈಳ** – ದೇವಪರ್ವತ, ಮೇರು
**ಸುಮನಶ್ಶೇಖರ** – ಹೂಮುಡಿದವನು
**ಸುಮನಸ್ವಿ** – ಒಳ್ಳಯ ಮನಸ್ಸುಳ್ಳವನು
**ಸುಮನಸ್ಸಿಂಧು** – ದೇವನದಿ
**ಸುಮನೋದಾಮ** – ಹೂಹಾರ
**ಸುಮನೋಧರ್ಮ** – ಒಳ್ಳೆಯ ಸ್ವಭಾವ; ಹೂವಿನ ಬಿಲ್ಲು; ಪಂಡಿತಧರ್ಮ
**ಸುಮನೋನಿವೇಶ** – ಹೂಗಳ ನೆಲೆ; ಒಳ್ಳೆಯ ಮನಸ್ಸಿನ ನೆಲೆ
**ಸುಮನೋಬಾಣ** – ಹೂಬಾಣ, ಮನ್ಮಥ
**ಸುಮನೋಬಾಣಕ್ರೀಡೆ** – ಕಾಮಕೇಳಿ
**ಸುಮನೋಮಂಜರಿ** – ಹೂಗೊಂಚಲು
**ಸುಮನೋಮಾರ್ಗಣ** – ಸುಮನೋಬಾಣ
**ಸುಮನೋಮಾಲೆ(ಳೆ)** – ಸುಮನೋದಾಮ
**ಸುಮನೋಮಿಥುನ** – ದೇವದಂಪತಿ
**ಸುಮನೋಲೋಕ** – ಸ್ವರ್ಗ
**ಸುಮನೋವನ** – ಇಂದ್ರನ ನಂದನವನ
**ಸುಮನೋವರ್ಷ** – ಹೂಮಳೆ
**ಸುಮನೋವಲ್ಲಭ** – ದೇವೇಂದ್ರ
**ಸುಮನೋವಾಸ** – ಹೂಗಳಿಗೆ ಆಶ್ರಯವಾದವನು; ಪಂಡಿತಜನಕ್ಕೆ ಆಶ್ರಯವಿತ್ತವನು
**ಸುಮನೋವಿಶಿಖ** – ಸುಮನೋಬಾಣ
**ಸುಮಾರ್ಗ** – ಸರಿಯಾದ ದಾರಿ; ಉತ್ತಮ ಶೈಲಿ

**ಸುಮಾಸಾರ** – ಸುಮನೋವರ್ಷ
**ಸುಮೇರುಮೇಖಳೆ** – ಮೇರುಪರ್ವತದ ತಪ್ಪಲು
**ಸುಮೇಷು** – ಸುಮ+ಇಷು, ಹೂಬಾಣ
**ಸುಯ್** – ಉಸಿರು; ಉಸಿರಾಡು; ನಿಟ್ಟುಸಿರುಬಿಡು
**ಸುಯ್ದಾನ** – ಕಾವಲು
**ಸುಯ್ಯತಾಣ** – ಕಸೂತಿ ಮಾಡಿದ ಬಟ್ಟೆ
**ಸುಯ್ಯಲ್** – ಉಸಿರು; ನಿಟ್ಟುಸಿರು
**ಸುಯ್ಯಾಣ** – ಸುಯ್ಯತಾಣ
**ಸುಯ್ವೆಂಕೆ** – ನಿಟ್ಟಿಸಿರಿನ ಬಿಸಿಪು
**ಸುಯ್ವೊಡರ್** – ನಿಟ್ಟುಸಿರು ಹೊರಹೊಮ್ಮು
**ಸುರಕನ್ನೆ** – ದೇವಕನ್ನಿಕೆ
**ಸುರಕನ್ಯಕೆ** – ಸುರಕನ್ನೆ
**ಸುರಕರಿ** – ಐರಾವತ
**ಸುರಕಾಂತೆ** – ಸುರಕನ್ನೆ
**ಸುರಕುಜ** – ಕಲ್ಪವೃಕ್ಷ
**ಸುರಕುಧರ** – ದೇವಲೋಕದ ಬೆಟ್ಟ, ಮೇರು
**ಸುರಕುಸುಮ** – ಪಾರಿಜಾತ
**ಸುರಖ** – ಕಳ್ಳತನವನ್ನು ಪತ್ತೆಮಾಡುವ ಕಲೆ
**ಸುರಗಂಧವಾರಣ** – ಸುರಕರಿ
**ಸುರಗಣಾಧಿಪ** – ದೇವೇಂದ್ರ
**ಸುರಗಣಿಕೆ** – ಅಪ್ಸರೆ
**ಸುರಗತಿ** – ಅಮರತ್ವ
**ಸುರಗಿ** – (ಸುರಿಕಾ) ಸಣ್ಣ ಕತ್ತಿ; ಒಂದು ಹೂ
**ಸುರಗಿಕಾಱ** – ಕಿರುಗತ್ತಿ ಹಿಡಿದವನು
**ಸುರಗಿಗಟ್ಟು** – ಕಠಾರಿ ಸಿಕ್ಕಿಸಿಕೊಂಡಿರು
**ಸುರಗೀತ** – ದೇವತೆಗಳ ಹಾಡು
**ಸುರಗುರು** – ದೇವತೆಗ: ಗುರು, ಬೃಹಸ್ಪತಿ
**ಸುರಗೇಯ** – ಸುರಗೀತ
**ಸುರಗೋಪ** – ಮಿಂಚುಹುಳು
**ಸುರಚಾಪ** – ಕಾಮನ ಬಿಲ್ಲು
**ಸುರಜನ** – ದೇವತೆಗಳು
**ಸುರಜ್ಯೇಷ್ಠ** – ದೇವತೆಗಳ ಹಿರಿಯ, ಬ್ರಹ್ಮ
**ಸುರತರಾಗ** – ಕಾಮಾಸಕ್ತಿ
**ಸುರತರು** – ಸುರಕುಜ
**ಸುರತರುಣಿ** – ದೇವವಕನ್ನಿಕೆ
**ಸುರತಾಲಯ** – ಸಂಭೋಗದ ಸ್ಥಳ; ಮಲಗುವ ಮನೆ
**ಸುರತೂರ್ಯ** – ದೇವದುಂದುಭಿ
**ಸುರತ್ವ** – ದೇವತೆಯ ಸ್ಥಿತಿ
**ಸುರದಿಕ್ಕು** – ಪೂರ್ವದಿಕ್ಕು
**ಸುರದೀರ್ಘಿಕೆ** – ದೇವನದಿ
**ಸುರದುಂದುಭಿ** – (ಜೈನ) ಅಷ್ಟಮಹಾ ಪ್ರತಿಹಾರ್ಯಗಳಲ್ಲಿ ಒಂದು, **ದೇವದುಂದುಭಿ**–
**ಸುರದ್ರುಮ** – ಸುರಕುಜ
**ಸುರಧನು** – ಕಾಮನ ಬಿಲ್ಲು
**ಸುರಧರೆ** – ಸ್ವರ್ಗ
**ಸುರನಗ** – ಮೇರುಪರ್ವತ
**ಸುರನದಿ** – ದೇವಗಂಗೆ
**ಸುರನಾರಿ** – ದೇವತಾಸ್ತ್ರೀ
**ಸುರಪ(ತಿ)** – ದೇವತೆಗಳ ಒಡೆಯ, ಇಂದ್ರ
**ಸುರಪಟಹ** – ದೇವಲೋಕದ ತಮ್ಮಟೆ
**ಸುರಭಿ** – ಕಾಮಧೇನು; ಹಸು; ಸುವಾಸನೆ; ವಸಂತ
**ಸುರಭಿಗಂಧತ್ವ** – ಪರಿಮಳಯುಕ್ತತೆ
**ಸುರಭಿಜಲ(ಳ)** – ಸುವಾಸನೆಯ ನೀರು, ಪನ್ನೀರು
**ಸುರಭಿದ್ರವ್ಯ** – ಸುಗಂಧದ್ರವ್ಯ
**ಸುರಭಿನಿಶ್ವಾಸ** – ಪರಿಮಳಯುಕ್ತ ಉಸಿರು
**ಸುರಭಿಪರಿಮಳ** – ಸುವಾಸನೆ
**ಸುರಭಿಸಮಯ** – ವಸಂತಕಾಲ
**ಸುರಭೂಜ** – ಕಲ್ಪವೃಕ್ಷ
**ಸುರಭೂಧರ** – ಮೇರುಪರ್ವತ
**ಸುರಭೂರುಹ** – ಕಲ್ಪವೃಕ್ಷ
**ಸುರಮಹೀರುಹ** – ಸುರಭೂರುಹ
**ಸುರಮಾರ್ಗ** – ದೇವತೆಗಳ ದಾರಿ, ಆಕಾಶ
**ಸುರಮಿಥುನ** – ದೇವದಂಪತಿ
**ಸುರಯಿ** – ಪುನ್ನಾಗ, ಸುರಗಿ ಗಿಡ
**ಸುರರಮಣಿ** – ದೇವತಾಸ್ತ್ರೀ
**ಸುರವಕ್ತ್ರ** – ಅಗ್ನಿ
**ಸುರವಧು** – ಅಪ್ಸರೆ
**ಸುರವನಿತೆ** – ಸುರವಧು
**ಸುರವಲ್ಲರಿ** – ದೇವಲೋಕದ ಬಳ್ಳಿ, ಕಲ್ಪಲತೆ
**ಸುರವಿಧ್ವಂಸಿ** – ದೇವತೆಗಳ ಶತ್ರು
**ಸುರವಿಳಾಸಿನಿ** – ಅಪ್ಸರೆ
**ಸುರವೈದ್ಯ** – ದೇವತೆಗಳ ವೈದ್ಯ, ಧನ್ವಂತರಿ
**ಸುರವೈರಿ** – ಸುರವಿಧ್ವಂಸಿ
**ಸುರವೊ(ಹೊ)ನ್ನೆ** – ಪುನ್ನಾಗದ ಮರ
**ಸುರಶಿಖರಿ** – ಮೇರುಪರ್ವತ
**ಸುರಸದ್ಮ** – ಸ್ವರ್ಗ
**ಸುರಸಮಿತಿ** – ದೇವತೆಗಳ ಸಮೂಹ
**ಸುರಸರಿತ್** – ದೇವನದಿ
**ಸುರಸಿಂಧು** – ಸುರಸರಿತ್
**ಸುರಸಿಂಧುಜ** – ಭೀಷ್ಮ
**ಸುರಸ್ತ್ರೀ** – ದೇವತಾಸ್ತ್ರೀ
**ಸುರಾಂಗ** – (ಜೈನ) ದಶಕಲ್ಪಕುಜಗಳಲ್ಲಿ ಒಂದು, ಮಾದಕ ಪಾನೀಯಗಳನ್ನು ನೀಡುವಂಥದು
**ಸುರಾಂಗನೆ** – ಸುರಸ್ತ್ರೀ
**ಸುರಾಚಲ(ಳ)** – ಮೇರುಪರ್ವತ
**ಸುರಾದ್ರಿ** – ಸುರಾಚಲ(ಳ)
**ಸುರಾಧೀಶ** – ಇಂದ್ರ
**ಸುರಾಧ್ವ** – ಆಕಾಶ
**ಸುರಾಪಗೆ** – ಸುರಸರಿತ್
**ಸುರಾವನೀಜ** – ಸುರತರು
**ಸುರಾಸನ** – ಇಂದ್ರನ ಪೀಠ
**ಸುರಿ** – ಒಂದೇ ಸಮನೆ ಬೀಳು; ಸೋರು

**ಸುರಿಗಿಱಿ** – ಸುರಗಿಯಿಂದ ಇರಿ
**ಸುರಿಗೆ** – ಕಿರುಗತ್ತಿ
**ಸುರಿಗೆಗಾಳಗ** – ಕಿರುಗತ್ತಿಗಳನ್ನು ಹಿಡಿದು ಮಾಡುವ ಯುದ್ಧ
**ಸುರಿಗೆವಿಡಿ** – ಕಿರುಗತ್ತಿಯನ್ನು ಹಿಡಿದುಕೊ
**ಸುರಿತರ್** – ಹರಿದು ಬಾ
**ಸುರುಂಟು** – ಮುರುಟಿಕೊ, ಸಂಕೋಚಗೊಳ್ಳು
**ಸುರುಳ್** – ಸುತ್ತಿಕೊ, ಸಂಕೋಚಗೊಳ್ಳು; ಸಂಶಯ
**ಸುರುಳ** – ಕೆಟ್ಟ ಹೆಂಗಸು
**ಸುರುಳಗುರುಳ್** – ಗುಂಗುರು ಕೂದಲು
**ಸುರುಳ್ಚು** – ಸಂಕೋಚಗೊಳಿಸು
**ಸುರುಳ್ತರ್** – ಕುಸಿದುಹೋಗು
**ಸುರೂಪವೃತ್ತಿ** – ಸೌಂದರ್ಯ
**ಸುರೆ** – ಮದ್ಯ
**ಸುರೇಂದ್ರ** – ದೇವೇಂದ್ರ
**ಸುರೇಂದರಜ** – ದೇವೇಂದ್ರನ ಮಗ, ಅರ್ಜುನ
**ಸುರೇಂದ್ರತ್ವ** – (ಜೈನ) ಸಪ್ತ ಪರಮಸ್ಥಾನಗಳಲ್ಲಿ ಒಂದು, ಇಂದ್ರಪದವಿ
**ಸುರೇಂದ್ರಧನು** – ಕಾಮನ ಬಿಲ್ಲು
**ಸುರೇಂದ್ರಾಶೆ** – ಇಂದ್ರನ ದಿಕ್ಕು, ಪೂರ್ವ
**ಸುರೇಭ** – ಸುರ+ಇಭ, ಐರಾವತ
**ಸುರೇಶ್ವರ** – ದೇವೇಂದ್ರ
**ಸುರೋಧ** – ಆಕಾಶ, ಸ್ವರ್ಗ
**ಸುರೋರ್ವಿ(ೞ)ಜ** – ಕಲ್ಪವೃಕ್ಷ
**ಸುರ್ಕು** – ಕುಗ್ಗು; ಹೆದರು; ನಿರುತ್ಸಾಹಗೊಳ್ಳು; ಚರ್ಮದ ಸುಕ್ಕು
**ಸುರ್ಕುಂಗುರುಳ್** – ಗುಂಗುರು ಕೂದಲು
**ಸುರ್ಕುಸಿರ್** – ಕುಗ್ಗಿದ ಉಸಿರು
**ಸುರ್ವ(ರ್ಬ)ಡರ್** – ಒತ್ತೊತ್ತಾಗು
**ಸುರ್ವು(ರ್ಬು)** – ನಿಬಿಡತೆ; ರಾಶಿ
**ಸುರ್ವುಗೊಳ್** – ಸುರ್ವ(ರ್ಬ)ಡರ್
**ಸುಲಲಿತ** – ಮೋಹಕವಾದ
**ಸುಲಲಿತೆ** – ಸುಂದರಿ
**ಸುಲಿ** – ಹೊರಪದರವನ್ನು ತೆಗೆ; ಬಿರುಕುಬಿಡು; ಶುಭ್ರಗೊಳಿಸಲು ತಿಕ್ಕು; ಕಿತ್ತುಕೊ
**ಸುಲಿಕೆ** – ನಾರು
**ಸುಲಿಪ(ವ)ಲ್** – ಶುಭ್ರಗೊಳಿಸಿದ ಹಲ್ಲು
**ಸುಲಿಪಲ್ವೆಳಗು** – ಶುಭ್ರಗೊಳಿಸಿದ ಹಲ್ಲಿನ ಹೊಳಪು
**ಸುಲ್ವ(ಲ್ವು)** – ತಾಮ್ರ
**ಸುವರ್ಣ** – ಒಳ್ಳೆಯ ಬಣ್ಣ; ಚಿನ್ನಸುವರ್ಣಕಾ
**ಸುವರ್ಣಕಾರ** – ಅಕ್ಕಸಾಲೆ
**ಸುವರ್ಣಕ್ರೌಂಚ** – ಕ್ರೌಂಚಪಕ್ಷಿಯ ಆಕಾರದ ನೀರಿನ ಚಿನ್ನದ ಗಿಂಡಿ
**ಸುವರ್ಣವರ್ಣ** – ಚಿನ್ನದ ಬಣ್ಣ, ಹಳದಿ
**ಸುವರ್ಣಾಂಬರ** – ಜರತಾರಿ ಬಟ್ಟೆ
**ಸುವರ್ಣಾಂಬುಜ** – ಹೊಂಬಣ್ಣದ ತಾವರೆ
**ಸುವರ್ತಕ** – ಪ್ರಳಯಕಾಲದ ಮೋಡ
**ಸುವಿಚಾರಿತ** – ಚೆನ್ನಾಗಿ ಪರಿಶೀಲನೆಗೊಳಗಾದ
**ಸುವಿಧಾನ** – ಅಚ್ಚುಕಟ್ಟು
**ಸುವೃಷ್ಟಿ** – ಸಮೃದ್ಧವಾದ ಮಳೆ
**ಸುವ್ರತ** – ಒಳ್ಳೆಯ ವ್ರತ; (ಜೈನ) ಇಪ್ಪತ್ತನೆಯ ತೀರ್ಥಂಕರನ ಹೆಸರು
**ಸುವ್ವಿ** – ಹಾಡಿನ ಸೊಲ್ಲು
**ಸುಶ್ಲಕ್ಷ್ಣ** – ಹೊಳಪುಗೊಂಡ
**ಸುಷಮ** – ಸಮಾನವಾದ; (ಜೈನ) ಅವಸರ್ಪಿಣಿಯ ಒಂದು ಹಂತ, ಸಮೃದ್ಧಿಯ ಕಾಲ
**ಸುಷಮದುಷ್ಷಮ** – (ಜೈನ) ಅವಸರ್ಪಿಣಿಯ ಒಂದು ಹಂತ, ಕಡಿಮೆ ದುಃಖದ ಕಾಲ
**ಸುಷಮಸುಷಮ(ಮೆ)** – (ಜೈನ) ಅವಸರ್ಪಿಣಿಯ ಒಂದು ಹಂತ, ತುಂಬ ಸುಖದ ಕಾಲ
**ಸುಷಿರ(ವಾದ್ಯ)** – ಊದುವ ವಾದ್ಯ
**ಸಷುಮ್ನೆ** – ಚಂದ್ರನಿಗೆ ಶಾಖವುಂಟುಮಾಡುವ ಏಳು ಕಿರಣಗಳಲ್ಲಿ ಒಂದು
**ಸುಷ್ಠು** – ಸಮರ್ಥ
**ಸುಸರ** – (ಸುಸ್ವರ) ಇಂಪಾದ ಧ್ವನಿ
**ಸುಸರತನ** – ಇಂಪು
**ಸುಸರಿಕೆ** – ಇಂಪಾದ ಧ್ವನಿಯನ್ನು ಹೊಂದಿರುವುದು
**ಸುಸಿರ** – ತೂತು
**ಸುಸಿಲ್** – ರತಿ, ಸಂಭೋಗ; ಬೆಳಗಿನ ಹೊತ್ತು
**ಸುಸಿಲಾಸೆ** – ಕಾಮೇಚ್ಛೆ
**ಸುಸ್ತನಿತ** – ಮೇಘಧ್ವನಿ, ಗುಡುಗು
**ಸುಸ್ಥ** – ಗಟ್ಟಿಯಾಗಿ ನೆಲೆಗೊಂಡ
**ಸುಸ್ಥತೆ** – ನೆಲೆಗೊಮಡ ಸ್ಥಿತಿ
**ಸುಹೃಜ್ಜನ** – ಸುಹೃತ್+ಜನ, ಮಿತ್ರವರ್ಗ
**ಸುಹೃತ್** – ಸ್ನೇಹಿತ
**ಸುಹೃತ್ವ** – ಗೆಳೆತನ
**ಸುಱಿ** – ಹೀರಿಕೊ; ಸಂಚು
**ಸುಱುಕಲ್ದನಿ** – ಹೀರುವಾಗಿನ ಶಬ್ದ
**ಸುಱುಕಿಡು** – ಹೀರುವಾಗ ಶಬ್ದಮಾಡು
**ಸುೞಿ** – ತಿರುಗು; ಕಾಣಿಸಿಕೊ; ತಿರುಗಣಿ; ಗಿಡದ ಕುಡಿ; ಕೆಲಸಗಳ್ಳ
**ಸುೞಿಗಾಳಿ** – ಸುಂಟರಗಾಳಿ; ಸುಳಿಯುವ ಗಾಲಿ
**ಸುೞಿಗುರುಳ್** – ಗುಂಗುರು ಕೂದಲು
**ಸುೞಿಗೊಳ್** – ತಿರುಗು; ಆವರಿಸು
**ಸುೞಿತರ್** – ಬೀಸಿಕೊಂಡು ಬಾ
**ಸುೞಿದಳಿರ್** – ಎಲೆಯ ಚಿಗುರು
**ಸುೞಿಯಿಸು** – ತಿರುಗಿಸು
**ಸುೞಿಯೆಲೆ** – ಎಳೆಯ ಎಲೆ
**ಸುೞಿಯೇಱು** – ಚಿಗುರುಬಿಡು
**ಸುೞಿವರ್** – ಸುತ್ತಿಕೊಂಡು ಬಾ
**ಸೂಕರ** – ಹಂದಿ
**ಸೂಕರಿ** – ಹೆಣ್ಣು ಹಂದಿ
**ಸೂಕಳ** – ಬಿರುಗುದುರೆ, ಕಾಡುಕುದುರೆ

**ಸೂಕಳತುರಂಗ** – ಸೂಕಳ
**ಸೂಕಳತ್ವ** – ತುಂಟತನ, ಬಿರುಸು
**ಸೂಕಳಾಶ್ವ** – ಸೂಕಳ
**ಸೂಕುಳ** – ಜಡತ್ವ
**ಸೂಕ್ತಸತ್ಯ** – ಸಮಂಜಸವಾದ ಸತ್ಯವನ್ನು ಹೇಳುವವನು
**ಸೂಕ್ತಿ** – ಒಳ್ಳೆಯ ಮಾತು; ಸುಭಾಷಿತ
**ಸೂಕ್ತಿಗರ್ಭ** – ಒಳ್ಳೆಯ ಮಾತುಗಳನ್ನು ಉಳ್ಳದು
**ಸೂಕ್ಷ್ಮಕಾಯಯೋಗ (ಜೈನ) ಪಾಪವಿಹರಣಾತ್ಮಕ ಕ್ರಿಯೆಯಿಲ್ಲದೆ ಪದ್ಮಾಸನದಿಂದಲೇ ಗಮನಕ್ರಿಯೆಯ ಸಾಗುವಿಕೆ–**
**ಸೂಕ್ಷ್ಮಕ್ರಿಯಾಪ್ರತಿಪಾತಿ** – (ಜೈನ) ಶುಕ್ಲಧ್ಯಾನದ ಮೂರನೆಯ ಭೇದ
**ಸೂಕ್ಷ್ಮಕ್ರಿಯೆ** – ಗುಟ್ಟು
**ಸೂಕ್ಷ್ಮತ್ವ** – ಚುರುಕುತನ; (ಜೈನ) ಮುಕ್ತಜೀವರ ಗುಣಗಳಲ್ಲಿ ಒಂದು
**ಸೂಕ್ಷ್ಮಬಾದರ** – (ಜೈನ) ಪುದ್ಗಲಸ್ಕಂಧದ ಆರು ಪ್ರಕಾರಗಲಲ್ಲಿ ಒಂದು, ಸೂಕ್ಷ್ಮವಾಗಿದ್ದರೂ ಸ್ಥೂಲದಂತೆ ಕಾಣುವುದು
**ಸೂಕ್ಷ್ಮಮಧ್ಯೆ** – ತೆಳುವಾದ ಸೊಂಟವುಳ್ಳವಳು
**ಸೂಕ್ಷ್ಮರೂಪ** – (ಜೈನ) ಕರ್ಮವಿನಾಶದಿಂದ ಆತ್ಮನಿಗಾಗುವ ಸೂಕ್ಷ್ಮಸ್ವಭಾವ
**ಸೂಕ್ಷ್ಮಲೋಭ** – (ಜೈನ) ಹತ್ತನೆಯ ಗುಣಸ್ಥಾನದ ಲೋಭ ಎಂಬ ಕಷಾಯ
**ಸೂಕ್ಷ್ಮಸಾಂಪರಾಯ** – (ಜೈನ) ಹತ್ತನೇ ಗುಣಸ್ಥಾನ
**ಸೂಕ್ಷ್ಮಸಾಂಪರಾಯಕೃಷ್ಟಿ** – (ಜೈನ) ಹತ್ತನೇ ಗುಣಸ್ಥಾನದಲ್ಲಿ ಆಗುವ ಸಂಜ್ವಲನಲೋಭ ಎಂಬ ಕಷಾಯದ ನಾಶ
**ಸೂಕ್ಷ್ಮಸಾಂಪರಾಯಕ್ಷಪಕ** – (ಜೈನ) ಹತ್ತನೇ ಗುಣಸ್ಥಾನದಲ್ಲಿರುವ ಆತ್ಮ
**ಸೂಕ್ಷ್ಮಸಾಂಪರಾಯಸ್ಥಿತ** – (ಜೈನ) ಸೂಕ್ಷ್ಮಸಾಂಪರಾಯಕ್ಷಪಕ
**ಸೂಕ್ಷ್ಮಸೂಕ್ಷ್ಮ** – (ಜೈನ) ಪುದ್ಗಲಸ್ಕಂಧದ ಆರು ಪ್ರಕಾರಗಳಲ್ಲಿ ಒಂದು, ಕರ್ಮವರ್ಗಣೆಗಿಂತ ಸೂಕ್ಷ್ಮವಾದುದು
**ಸೂಗುರಿಸು** – ಗಾಬರಿಗೊಳ್ಳು
**ಸೂಚ** – ಹುಲ್ಲಿನ ಊಬು
**ಸೂಚಿ** – ಸೂಜಿ
**ಸೂಚೀಯಾನೆ** – ಸೇನೆಯ ಮುಂಭಾಗದ ಆನೆ
**ಸೂಚಿಶಕ್ತಿ** – ವ್ಯೂಹರಚನಾ ಸಾಮರ್ಥ್ಯ
**ಸೂಚೀನಾಟ್ಯ** – ಒಂದು ಬಗೆಯ ನಾಟ್ಯ
**ಸೂಚೀಮುಖ** – ಸೂಜಿಯ ಮೊನೆಯಂತಹ ಚೂಪಾದ ತುದಿ(ಯುಳ್ಳದು)
**ಸೂಚೀವ್ಯೂಹ** – ಒಂದು ಬಗೆಯ ಸೇನಾವ್ಯೂಹ
**ಸೂಜಿಗಲ್** – ಅಯಸ್ಕಾಂತ
**ಸೂಜಿಗೊಂಬು** – ಚೂಪಾದ ಕೊಂಬು
**ಸೂಜಿಗೊಳ್** – ಸೂಜಿಯಿಂದ ಚುಚ್ಚಲ್ಪಡು
**ಸೂಜಿಯ ಪಿನ್ನೆ** – ಸೂಜಿಯ ರಂಧ್ರ
**ಸೂಟಿ** – ಚುರುಕು
**ಸೂಡಿ** – ಪಂಜು
**ಸೂಡಿಸು** – ತೊಡಿಸು
**ಸೂಡು** – ಧರಿಸು; ಸುಡು; ಹೊರೆ; ಕಾವು
**ಸೂತ** – ಅಂಬಿಗ; ಸಾರಥಿ; ಹೊಗಳುಭಟ್ಟ
**ಸೂತಕ** – ಜನನ
**ಸೂತಜ** – ಸೂತಕುಲದಲ್ಲಿ ಹುಟ್ಟಿದವನು
**ಸೂತಸುತ** – ಸೂತನ ಮಗ
**ಸೂತಿಕಾಗೃಹ** – ಬಾಣಂತಿಮನೆ
**ಸೂತಿಕಾಮಂದಿರ** – ಸೂತಿಕಾಗೃಹ
**ಸೂತಿಕಾಸದನ** – ಸೂತಿಕಾಗೃಹ
**ಸೂತೀಜನ** – ಸೂಲಗಿತ್ತಿಯರು
**ಸೂತ್ತುಂಗ** – ಚೆನ್ನಾಗಿ ಉಬ್ಬಿರುವ
**ಸೂತ್ರ** – ದಾರ; ನಿಯಮ
**ಸೂತ್ರಕೃತ** – (ಜೈನ) ದ್ವಾದಶಾಂಗವೇದಗಳಲ್ಲಿ ಒಂದು
**ಸೂತ್ರಕೃತಾಂಗ** – ಸೂತ್ರಕೃತ
**ಸೂತ್ರಧಾರ(ರಿ)** – (ಸೂತ್ರದ ಬೊಂಬೆಯಾಟದಲ್ಲಿ) ದಾರ ಹಿಡಿದವನು; ನಾಟಕದ ನಡೆಯನ್ನು ನಿಯಂತ್ರಿಸುವವನು
**ಸೂತ್ರಪ್ರಾಯ** – ನಿಯಮಗಳ ಸಾಕಾರರೂಪ(ವಿ)
**ಸೂತ್ರದಲ್ಲಿ** – ದಾರಕ್ಕೆ ಪೋಣಿಸಿದ ರತ್ನ
**ಸೂತ್ರಾವೇಷ್ಟಿತ** – ದಾರದಿಂದ ಕಟ್ಟಲ್ಪಟ್ಟ
**ಸೂತ್ರಿಸು** – ಅಳೆಯುವ ನೂಲನ್ನಿಡು; ಸೂತ್ರರೂಪದಲ್ಲಿ ನಿರೂಪಿಸು; ಮಾರ್ಗದರ್ಶನಮಾಡು
**ಸೂದನ** – ನಾಶಮಾಡುವವನು, ವೈರಿ
**ಸೂನು** – ಮಗ
**ಸೂನೃತ** – ಪ್ರಿಯಕರ ಸತ್ಯನುಡಿ; ಸಮ್ಯಕ್‌ಚಾರಿತ್ರದ ಒಂದು ಬಗೆ, ಹಿತವಾಗಿ ಸತ್ಯ ನುಡಿಯುವುದು
**ಸೂನೃತವಚನ** – ಪ್ರಿಯಕರ ಸತ್ಯನುಡಿ
**ಸೂನ್ಯಾಸ** – ಒಳ್ಳೆಯ ವಿನ್ಯಾಸ
**ಸೂಪಕಾರ** – ಅಡುಗೆಯವನು
**ಸೂಪಶಾಸ್ತ್ರ** – ಅಡುಗೆಯ ವಿದ್ಯೆ
**ಸೂಯಿಯಾಣ** – (ಸೂಚೀಯಾನ) ಸುಯ್ಯಾಣ, ಕಸೂತಿ ಕೆಲಸ; ಸೂಜಿಯಲ್ಲಿ ಪೋಣಿಸಿದಂತೆ ಸಾಲಾಗಿ ಸಾಗುವ ಸೈನ್ಯ
**ಸೂರ್** – ಮನೆಯ ಛಾವಣಿ
**ಸೂರಿ(ಜನ)** – ವಿದ್ವಾಂಸ(ರು)
**ಸೂರುಳ್** – ಪ್ರತಿಜ್ಞೆ; ಆಣೆ ಮಾಡು
**ಸೂರುಳಿಸು** – ಆಣೆಯಿಡಿಸು; ಪ್ರತಿಜ್ಞೆಮಾಡು
**ಸೂರುಳುಗೆಯ್** – ಪ್ರತಿಜ್ಞೆಮಾಡು
**ಸೂರುಳ್ಗೊಳ್** – ಸೂರುಳುಗೆಯ್
**ಸೂರ್ಯಕಾಂತ(ಮಣಿ)** – ಬಿಸಿಲಿಗೆ ಕಿಡಿಕಾರುವ ಕಲ್ಲು

**ಸೂರ್ಯವಿಮಾನ** – (ಜೈನ) ಒಂದು ಸ್ವರ್ಗ
**ಸೂರ್ಯವೀಥಿ(ಧಿ)** – ಪೂರ್ವ–ಪಶ್ಚಿಮವಾಗಿರುವ ಪಟ್ಟಣಬೀದಿ–
**ಸೂರ್ಯಾಶ್ವ** – ಸೂರ್ಯನ ಕುದುರೆ
**ಸೂರ್ಯೋಪಲ** – ಸೂರ್ಯಕಾಂತ(ಮಣಿ)
**ಸೂಲ** – (ಶೂಲ) ದಸಿ
**ಸೂಲಪಾಣಿ** – ಶಿವ
**ಸೂಲೆ** – ನೋವು
**ಸೂಲೆಯೇಱ್** – ನೋವು ಉಂಟಾಗು
**ಸೂಲವೇಱು** – ನೋವನ್ನು ಹೊಂದು
**ಸೂಸಕ** – ಆಭರಣ ವಿಶೇಷ; ಗೊಂಚಲು
**ಸೂಸು** – ಎಸೆ; ಹೊಮ್ಮು; ಚೆಲ್ಲು
**ಸೂಸುನೀರ್** – ಸಿಂಪಡಿಸುವ ನೀರು
**ಸೂಸುವೆಳ್ಪು** – ಸೂಸು+ಬೆಳ್ಪು, ಹೊಮ್ಮುವ ಕಾಂತಿ
**ಸೂಳ** – (ಶೂಲಿ) ಈಶ್ವರ
**ಸೂಳೆಗೆಯ್** – ಸೂಳೆಯ ಸಹವಾಸ ಮಾಡು
**ಸೂಳೆಗೇರಿ** – ಸೂಳೆಯರು ವಾಸಿಸುವ ಕೇರಿ
**ಸೂಳೆಗೊಟ್ಟಿ** – ಸೂಳೆಯರ ಗುಂಪು
**ಸೂಳೆಮಾತು** – ಒಯ್ಯಾರದ ನುಡಿ
**ಸೂಳೆವಬ)ಂಟ** – ಸೂಳೆಯ ಸಹಚರ
**ಸೂಳೆವನೆ** – ಸೂಳೆಯ ಮನೆ
**ಸೂಳೆವೆಂಡತಿ** – ಸೂಳೆ
**ಸೂಳೈಸು** – ಶಬ್ದಮಾಡು
**ಸೂಱೆ** – ಲೂಟಿ
**ಸೂಱೆಗಾಱ** – ಸುಲಿಗೆಕೋರ
**ಸೂಱೆಗೊಡು** – ಧಾರಾಳವಾಗಿ ಕೊಡು
**ಸೂಱೆಗೊಳ್** – ಕೊಳ್ಳೆ ಹೊಡೆ
**ಸೂೞ್** – ಬಾರಿ, ಆವೃತ್ತಿ; ಸಮಯ; ಸಮುಚಿತ; ಸಂವತ್ಸರ
**ಸೂೞರಸಿ** – ರಾಜನ (ಶಯ್ಯೆಯ) ಸರದಿಯ ರಾಣಿ
**ಸೂೞಱಿ** – ಸಮಯ ತಿಳಿ; ಕ್ರಮವನ್ನು ತಿಳಿ
**ಸೂೞಿನೆ** – ಆಗಲೇ, ಆ ಸಲವೇ
**ಸೂೞಾಯ್ತ** – ಸರದಿಯ ಪ್ರಕಾರ ಸಾರುವವನು; ಸ್ತುತಿಪಾಠಕ; ಯುದ್ಧಕ್ಕೆ ಆಹ್ವಾನಿಸುವವನು
**ಸೂೞಾಯ್ತೆ** – ಸೇವಕಿ
**ಸೂೞುಗಾಳೆ** – ಸಮಯಸೂಚಕ ಕಹಳೆಯ ಧ್ವನಿ
**ಸೂೞುಲಿಗೆಲೆ** – ಹರಟುತ್ತ ಸಂತೋಷಿಸು
**ಸೂೞು ಸೂೞಿದೆ** – ಬಾರಿ ಬಾರಿಗೂ
**ಸೂೞೆ** – ಸಮಯವೇ, ನ್ಯಾಯವೇ
**ಸೂೞೇಸು** – ಮತ್ತೆ ಮತ್ತೆ ಬಾಣ ಬಿಡು
**ಸೂೞೈಸು** – ಕ್ರಮವಾಗಿ ನಡೆ, ಸರದಿಯಂತೆ ಆಗು
**ಸೂೞ್ಗರೆ** –ಯುದ್ಧಕ್ಕೆ ಆಹ್ವಾನಿಸು
**ಸೂೞ್ಗಿಡು** – ಸರದಿ ತಪ್ಪು
**ಸೂೞ್ನುಡಿ** – ಸರದಿಯ ಮಾತು, ಸಂಭಾಷಣೆ
**ಸೂೞ್ಪಡು** – ಸರದಿಯನ್ನು ಪಡೆ
**ಸೂೞ್ಪಡೆ** – ಸರದಿಯನ್ನು ಹೊಂದು
**ಸೂೞ್ವೊಯ್** – ಸರದಿಯ ಪ್ರಕಾರ ಹೊಡೆ(ತ)
**ಸೂೞ್ಮಾತು** – ಸೂೞ್ನುಡಿ
**ಸೂೞ್ಮೆಟ್ಟು** – ಸರದಿಯ ತುಳಿತ
**ಸೂೞ್ವಗೆ** – ಸರದಿಯ ಹಗೆ
**ಸೂೞ್ವಡೆ** – ಸೂೞ್ಪಡೆ
**ಸೂೞ್ವರಿ** – ಸರದಿಯ ಪ್ರಕಾರ ಹೋಗು
**ಸೂೞ್ವರು** – ಪುನಃ ಪುನಃ ಬಾ
**ಸೂೞ್ವಳ** – ಸಮಯವನ್ನು ಸಾರುವವನು
**ಸೃಕ್ವ** – ಕಟವಾಯಿ
**ಸೃಗಾಲ** – ನರಿ
**ಸೃಣಿ** – ಅಂಕುಶ
**ಸೃತ** – ಸೋರಿದ
**ಸೃಷ್ಟಿಕ್ಷಮ** – ಸೃಷ್ಟಿ ಮಾಡುವುದರಲ್ಲಿ ನಿಪುಣ
**ಸೆಂಡಾಡು** – ಚೆಂಡಾಟವಾಡು
**ಸೆಂಡು** – ಚೆಂಡು
**ಸೆಂಡುಕೋ(ಗೋ)ಲ್** – ಒಂದು ಬಗೆಯ ಬಾಣ
**ಸೆಂದುರ** – ಸಿಂದೂರ, ಕೆಂಪು ಬಣ್ಣದ ಪುಡಿ; ಗೈರಿಕ ಶಿಲೆ
**ಸೆಜ್ಜ(ಜ್ಜಾ)ರ** – (ಶಯ್ಯಾಗಾರ) ಮಲಗುವ ಕೋಣೆ
**ಸೆಜ್ಜೆ** – (ಶಯ್ಯಾ) ಹಾಸಿಗೆ; ಸನ್ಯಾಸಿಯ ಕೌದಿ
**ಸೆಜ್ಜೆಯೋವರಿ** – ಮಲಗುವ ಕೋಣೆ
**ಸೆಜ್ಜೆವನೆ** – ಸೆಜ್ಜೆಯೋವರಿ
**ಸೆಜ್ಜೆವಳ(ಳ್ತ)** – ಶಯ್ಯಾಗೃಹದ ಮೇಲ್ವಿಚಾರಕ(ಕಿ)
**ಸೆಜ್ಜೆವಾಡ** – ಮಲಗುವ ಕೋಣೆ
**ಸೆಟ್ಟಿ** – (ಶ್ರೇಷ್ಠಿ) ವರ್ತಕ
**ಸೆಟ್ಟಿತಿ** – ಸೆಟ್ಟರ ಹೆಂಗಸು
**ಸೆಟ್ಟಿಗುತ್ತ** – ಸೆಟ್ಟಿ
**ಸೆಟ್ಟಿವಟ್ಟ** – ರಾಜಶ್ರೇಷ್ಠಿಯ ಪಟ್ಟ
**ಸೆಟ್ಟಿವಟ್ಟಂಗಟ್ಟು** – ರಾಜಶ್ರೇಷ್ಠಿಯ ಪಟ್ಟ ಕಟ್ಟು
**ಸೆಟ್ಟಿವಾೞ(ೞ್ಕೆ)** – ಸೆಟ್ಟಿವಟ್ಟ
**ಸೆಟ್ಟೆ** – ಮಣ್ಣಿನ ಹೆಂಟೆ
**ಸೆಡು** – ಹೊಲಿ; ಪೋಣಿಸು
**ಸೆಡೆ** – ಸಂಕೋಚಪಡು, ಭಯಪಡು; ದಪ್ಪನಾಗು; ಅಹಂಕರಿಸು
**ಸೆಣಸು** – ಹೋರಾಡು; ಹೊಟ್ಟೆಕಿಚ್ಚುಪಡು
**ಸೆಣೆ** – ಕೋಪಗೊಳ್ಳು
**ಸೆರಗು** – ಭಯ
**ಸೆರಗಂ ಪಾರು** – ಆಪತ್ತನ್ನು ನಿರೀಕ್ಷಿಸು
**ಸೆರಗಂ ಬೆರಗಂ ಪಾರು** – ಸೆರಗಂ ಪಾರು
**ಸೆರಗಂ ಬೆರಗಂ ಬಗೆ** – ಅಪಾಯ–ಉಪಾಯಗಳನ್ನು ಕುರಿತು ಆಲೋಚಿಸು–
**ಸೆರಗುವಾರು** – ಸೆರಗಂ ಪಾರು
**ಸೆರವಟ್ಟಣೆ** – ಕುಸ್ತಿಯ ಒಂದು ಪಟ್ಟು
**ಸೆರೆ** – ನರ, ರಕ್ತನಾಳ
**ಸೆರೆಯಂ ಬಿಡಿಸು** – ರಕ್ತನಾಳವನ್ನು ಸೀಳು
**ಸೆರೆಗಾಲ್** – ನರಗಳು ಊದಿರುವ ಕಾಲು
**ಸೆರೆದುರುಗಲ್** – ನರಗಳ ಜಾಲ
**ಸೆರೆವಿಡು** – ಸೆರೆಯಂ ಬಿಡಿಸು

**ಸೆರ್ಕು(ಕ್ಕು)** – ತುರುಕು
**ಸೆಲಂದಿ(ಬೆ)** – ಜೇಡ
**ಸೆಲವೀ** – ಸೆಲವು+ಈ, ಒಳಬರಲು ಅಪ್ಪಣೆಕೊಡು
**ಸೆಲವು** – ಸಲವು, ಪ್ರವೇಶ
**ಸೆಲೆ** – ಒರತೆ, ಜಿನುಗುವಿಕೆ
**ಸೆಲ್ಲೆಹ** – ಈಟಿ
**ಸೆಳೆ** – ಎಳೆ; ಆಕರ್ಷಿಸು; ನಡುಗು; ಬೆತ್ತ; ರೆಂಬೆ
**ಸೆಳೆ(ಳ್ಳ)ಗೊಂಬು** – ರೆಂಬೆ
**ಸೆಳೆನಡು** – ಬಡನಡು
**ಸೆಳೆಮಂಚ** – ತೂಗುಮಂಚ
**ಸೆಳೆಮಿಂಚು** – ಬಳ್ಳಿಮಿಂಚು
**ಸೆಳೆವಿಡಿ** – ಬೆತ್ತ ಹಿಡಿ
**ಸೆಳ್ಳುಗುರ್** – ಕೋಮಲವಾದ ಉಗುರು
**ಸೆಱಂಗು** – ಚೇಲಾಂಚಲ; ಬಟ್ಟೆಯ ಅಂಚು
**ಸೆಱಗಂ ಗಂಟಿಕ್ಕಿಕೊಳ್** – ನೆನಪಿನಲ್ಲಿಟ್ಟುಕೊ
**ಸೆಱಗೊಡ್ಡಿ ಬೇಡು** – ಯಾಚಿಸು
**ಸೆಱಪು** – ಚೆರುಪು; ಆತಿಥ್ಯ; ಉತ್ಸವ
**ಸೆಱೆ** – ಬಂಧನ; ಕಾರಾಗೃಹ; ಬಂಧಿತವ್ಯಕ್ತಿ
**ಸೆಱೆಗಟ್ಟು** – ಬಂಧನಕ್ಕೊಳಪಡಿಸು
**ಸೆಱೆಗಳ್** – ಸೆರೆ ಸಿಕ್ಕಿದವರು
**ಸೆಱೆಗೆಯ್** – ಸೆಱೆಗಟ್ಟು
**ಸೆಱೆಕೋ(ಗೋ)ಲ್** – ಸೈನ್ಯದ ಪಕ್ಕ, ತುದಿ
**ಸೆಱೆಗೊಳ್** – ಸೆಱೆಗಟ್ಟು
**ಸೆಱೆಯಿಕ್ಕು** – ಬಂಧನದಲ್ಲಿರಿಸು
**ಸೆಱೆಯಿಡು** – ಸೆಱೆಯಿಕ್ಕು
**ಸೆಱೆಯಿರ್** – ಬಂಧನದಲ್ಲಿರು
**ಸೆಱೆವನೆ** – ಕಾರಾಗೃಹ
**ಸೆಱೆವಿಡಿ** – ಆಕರ್ಷಿಸು
**ಸೆಱೆವೊಯ್** – ಬಂಧಿಸಿ ಕರೆದೊಯ್ಯಿ
**ಸೆಱೆಸಿಕ್ಕು** – ಬಂಧನಕ್ಕೆ ಸಿಕ್ಕು
**ಸೇ(ಂ)ದು** – ನೀರನ್ನು ಮೇಲೆತ್ತು; ಕುಡಿ
**ಸೇಕ** – ಬಿಸಿ; ಚಿಮುಕಿಸುವುದು
**ಸೇಕಂಗೊಳ್** – ಬಿಸಿಯಾಗು
**ಸೇಗು** – ಕೆಚ್ಚು, ಚೇಗು
**ಸೇಚನ(ನೆ)** – ಸೇಕ
**ಸೇಡು** – ಮುದುಡುವಿಕೆ; ಸೆಡೆತು ಹೋಗುವುದು
**ಸೇಡು(ಂ)ಗೊಳ್** – ಸೆಡೆತುಹೋಗು
**ಸೇಡುವಡು** – ಸೇಡು(ಂ)ಗೊಳ್
**ಸೇತ** – (ಶ್ವೇತ) ಬಿಳಿಪು
**ಸೇತಮಾಲೆ** – ಬಿಳಿಯ (ಮುತ್ತಿನ) ಹಾರ
**ಸೇತುಗಟ್ಟು** – ಸೇತುವೆ ನಿರ್ಮಿಸು
**ಸೇತುಬಂಧ(ನ)** – ಅಣೆಕಟ್ಟು; ಅಡ್ಡಗಟ್ಟೆ
**ಸೇತುಮಾರ್ಗ** – ಸೇತುವೆಯ ಮೂಲಕದ ದಾರಿ
**ಸೇದೆ** – (ಸ್ವೇದ) ಆಯಾಸ
**ಸೇದೆಗಳೆ** – ದಣಿವನ್ನು ಪರಿಹರಿಸು
**ಸೇದೆಗಿ(ಗೆ)ಡು** – ದಣಿವಿನಿಂದ ಬಳಲು
**ಸೇದೆವಡು** – ಸೇದೆಗಿ(ಗೆ)ಡು
**ಸೇನಾಗ್ರಗಣ್ಯ** – ಸೇನಾಧಿಪತಿ
**ಸೇನಾಧಿನಾಥ** – ಸೇನಾಗ್ರಗಣ್ಯ
**ಸೇನಾನಾಯಕ** – ಸೇನಾಗ್ರಗಣ್ಯ
**ಸೇನಾನಿ** – ಸೇನಾಗ್ರಗಣ್ಯ
**ಸೇನಾನಿರತ್ನ** – (ಜೈನ) ಜೀವರತ್ನಗಳಲ್ಲಿ ಒಂದು, ಚಕ್ರವರ್ತಿಯ ಸೇನಾಧಿಪತಿ, ನೋಡಿ, 'ಜೀವರತ್ನ'
**ಸೇನಾಭಂಗ** – ಸೈನ್ಯ ಪಡೆಯುವ ಸೋಲು
**ಸೇನಾಮುಖ** – ಸೈನ್ಯದ ಎದುರು
**ಸೇನೆ** – ಸೈನ್ಯ
**ಸೇಬ್ಯ** – (ಸೇವ್ಯ) ಸೇವೆಗೆ ಯೋಗ್ಯವಾದುದು
**ಸೇರ್** – ಒಂದುಗೂಡು; ಸಮ್ಮತಿಸು
**ಸೇರ್ಪಡು** – ಕೂಡು
**ಸೇರ್ಷ್ಯ** – ಸ+ಈರ್ಷ್ಯ, ಪೈಪೋಟಿಯ ಹುರುಪಿನಲ್ಲಿರು
**ಸೇಲೆ** – ವಸ್ತ್ರ
**ಸೇವ** – ಕ್ಷೇಮ
**ಸೇವಂತಿ(ಗೆ)** – (ಸೇವಂತಿಕಾ) ಒಂದು ಹೂಪ್ರಭೇದ
**ಸೇವನೆ** – ಪೂಜೆ; ತಿನ್ನುವಿಕೆ
**ಸೇವನೆಗೆಯ್** – ತಿನ್ನು
**ಸೇವ(ವಾ)ಳ** – (ಶೈವಾಲ) ಪಾಚಿ
**ಸೇವಾರತಿ** – ಸೇವೆ ಮಾಡುವ ಆಸಕ್ತಿ
**ಸೇವಾವಿಚಕ್ಷಣ** – ಸೇವೆ ಮಾಡುವುದರಲ್ಲಿ ನಿಪುಣ
**ಸೇವಾಳ** – (ಶೈವಾಲ) ಪಾಚಿ
**ಸೇವಾಳಂಬೊರೆ** – ಪಾಚಿಗಟ್ಟು
**ಸೇವಿತ** – ಸೇವೆಗೊಂಡ
**ಸೇವಿಸು** – ಸೇವೆಗೈ; ತಿನ್ನು
**ಸೇವೆ** – ಊಳಿಗ; ಶುಶ್ರೂಷೆ
**ಸೇವೆಗಾಯ್** – ಸೇವೆಯ ಸಂದರ್ಭಕ್ಕಾಗಿ ಕಾಯಿ
**ಸೇವ್ಯ** – ಸೇವಾಯೋಗ್ಯವಾದ; ತಿನ್ನಲು **(ಅನುಭವಿಸಲು) ಯೋಗ್ಯವಾದ–**
**ಸೇವ್ಯತೆ** – ಸೇವೆ
**ಸೇವ್ಯತ್ವ** – ಅನುಭವಿಸುವಿಕೆ
**ಸೇಸೆ** – ಶೇಷಾಕ್ಷತೆ
**ಸೇಸೆಗೊಡು** – ಅಕ್ಷತೆ ಹಾಕು
**ಸೇಸೆಗೊಳ್** – ಹಾಕಿದ ಅಕ್ಷತೆಯನ್ನು ಸ್ವೀಕರಿಸು
**ಸೇಸೆಯಿಕ್ಕು** – ಸೇಸೆಗೊಡು
**ಸೇೞ್ವಿಡು** – ಸೆಡೆದುಕೊ
**ಸೈಂಧವ** – ಒಂದು ಬಗೆಯ ಉಪ್ಪು
**ಸೈಂಹಿಕೇಯ** – ಸಿಂಹಿಕೆಯ ಮಗ, ರಾಹು
**ಸೈಕತಸ್ಥಳ** – ಮರಳಿನ ಜಾಗ
**ಸೈಕತೋದ್ದೇಶ** – ಸೈಕತಸ್ಥಳ
**ಸೈಕಾಗ್ರಮನಸ್ಕ** – ಸ+ಏಕಾಗ್ರಮನಸ್ಕ, ಏಕಾಗ್ರವಾದ ಮನಸ್ಸನ್ನು ಪಡೆದವನು
**ಸೈಗೋಲ** – ಬಿಲ್ವಿದ್ಯಾ ನಿಪುಣ
**ಸೈತಿಕ್ಕು** – ಕ್ರಮಗೊಳಿಸು, ಸರಿಯಾಗಿಡು
**ಸೈತಿಡು** – ಸೈತಿಕ್ಕು

**ಸೈತಿರ್** – ನೆಮ್ಮದಿಗೊಳ್
**ಸೈತು** – ಸುಮ್ಮನೆ; ಸಮಾಧಾನ
**ಸೈದ** – ನಿಷ್ಕಪಟಿ
**ಸೈದಾರಿ** – ನೇರವಾದ ದಾರಿ
**ಸೈದ್ಧಾಂತಿಕಚಕ್ರವರ್ತಿ** – (ಜೈನ) ಷಟ್ಖಂಡಾಗಮವನ್ನು ಅಭ್ಯಸಿಸಿ ಜೈನಸಿದ್ಧಾಂತವನ್ನು ಕರಗತಮಾಡಿಕೊಂಡವನು
**ಸೈನ್ಯಜ** – ಒಂದು ಅಪಶಕುನ, ಸೈನ್ಯದಲ್ಲಿ ಕಾಣಿಸಿಕೊಳ್ಳುವುದು, ನೋಡಿ 'ಉತ್ಪಾತ'
**ಸೈನ್ಯಾಧಿನಾಥ** – ಸೇನಾಧಿಪತಿ
**ಸೈಪು** – ಪುಣ್ಯ
**ಸೈಪುಗಾಱ** – ಪುಣ್ಯವಂತ
**ಸೈರಂಧ್ರಿ** – ಅಂತಃಪುರದ ದಾಸಿ; ಸುಗಂಧ ಸಿದ್ಧಪಡಿಸುವವಳು; ಅಜ್ಞಾತವಾಸ ಕಾಲದಲ್ಲಿ ದ್ರೌಪದಿ ಹಾಕಿಕೊಂಡಿದ್ದ ವೇಷ
**ಸೈರಣೆ** – ತಾಳ್ಮೆ
**ಸೈರಣೆಗೆಡು** – ತಾಳ್ಮೆ ಕಳೆದುಕೊ
**ಸೈರಿಭ** – ಕಾಡು ಕೋಣ
**ಸೈವಾಳ** – ಶೈವಾಲ, ಪಾಚಿ
**ಸೈವೆಱಗು** – ಅತ್ಯಾಶ್ಚರ್ಯ
**ಸೊಂದಿ** – ಸಿತಗ, ಲಂಪಟ; ತುಂಟ
**ಸೊಂದಿಗಿಳಿ** – ತುಂಟ ಗಿಳಿ
**ಸೊಂದಿಗೋಗಿಲೆ** – ತುಂಟ ಕೋಗಿಲೆ
**ಸೊಂದಿತನ** – ಹಾದರ
**ಸೊಂದಿಯವನ್** – ಸೊಂದಿ
**ಸೊಂಪು** – ಸೊಬಗು
**ಸೊಂಪುವೆಱು** – ಸೊಬಗಿನಿಂದ ಕೂಡು
**ಸೊಂಬತನ** – ಸೋಮಾರಿತನ
**ಸೊಕ್ಕಾಹಾರ** – ಮತ್ತು ಬರಿಸುವ ಆಹಾರ
**ಸೊಕ್ಕುಗಳ್** – ಸೊಕ್ಕು+ಕಳ್, ಕಟು ಮದ್ಯ
**ಸೊಗ** – (ಸುಖ) ಸಂತೋಷ
**ಸೊಗಗಂಬನಿ** – ಆನಂದಬಾಷ್ಪ
**ಸೊಗಯಿಸು** – ಸುಂದರವಾಗಿ ಕಾಣು
**ಸೊಗಸಿಕೆ** – ಚೆಲುವು
**ಸೊಡಬಲ** – ಸುಡುಗಾಡು, ಶ್ಮಶಾನ
**ಸೊಡರ್** – ದೀಪ
**ಸೊಡರಿಡು** – ದೀಪ ಹಚ್ಚು
**ಸೊಡರೆತ್ತು** – ಆರತಿಯೆತ್ತು
**ಸೊಡರ್ಗುಡಿ** – ದೀಪದ ಉರಿಯುವ ಕುಡಿ
**ಸೊಡರ್ವಕ್ಕು** – ದೀಪದ ಕಾಡಿಗೆ
**ಸೊಡರ್ವಕ್ಕನಿಡು** – ದೃಷ್ಟಿಪರಿಹಾರಕ್ಕೆ ದೀಪದ ಕಾಡಿಗೆಯಿಡು
**ಸೊಡರ್ವಾವು** – ದೀಪ ಹೊತ್ತಂತೆ ಶಿರೋರತ್ನವಿರುವ ಹಾವು
**ಸೊಣೆ** – ಮುಷ್ಟಿಯಿಂದ ಹೊಡೆ
**ಸೊದೆಗಡಲು** – ಹಾಲ್ಗಡಲು. ಕ್ಷೀರಸಮುದ್ರ
**ಸೊದೆವನೆ** – ಸುಣ್ಣ ಬಳಿದು ಬೆಳ್ಳಗಿರುವ ಮನೆ
**ಸೊದೆವಱಿ** – ಅಮೃತದ ಮಳೆ
**ಸೊದೆವೆಳಗು** – ಸುಣ್ಣ ಬಳಿದು ಆದ ಹೊಳಪು
**ಸೊನೆ** – ಹೂಬಿಟ್ಟ ಮಾವಿನ ಮರದಿಂದ ಸೋರುವ ದ್ರವ
**ಸೊನೆವಿಡು** – ಸೊನೆ ಹೊಮ್ಮು
**ಸೊನ್ನಲಿಗೆ** – ಕಲಶ
**ಸೊನ್ನೆ** – (ಸ್ವರ್ಣ) ಚಿನ್ನ; (ಶೂನ್ಯ) ಏನೂ ಇಲ್ಲದ
**ಸೊನ್ನೆಸಾರ** – ಚಿನ್ನದ ಎಳೆ
**ಸೊಪಾರ** – ಒಂದು ಊರಿನ ಹೆಸರು
**ಸೊಪ್ಪಡಗು** – ಶಕ್ತಿಗುಂದು
**ಸೊಪ್ಪಾಗು** – ಶಕ್ತಿಗುಂದು; ಕಾಂತಿಗುಂದು
**ಸೊಪ್ಪು** – ನಿವಾರಣೆಮಾಡು
**ಸೊಪ್ಪುಗುಟ್ಟು** – ನಜ್ಜುಗುಜ್ಜಾಗುವಂತೆ ಅಪ್ಪಳಿಸು
**ಸೊಪ್ಪುಗುಟ್ಟುಹ** – ಬೇಟೆಯಲ್ಲಿ ಪ್ರಾಣಿಗಳನ್ನು ಚೋದಿಸಲು ಪೊದೆಗಳನ್ನು ಬಡಿಯುವುದು
**ಸೊಪ್ಪುನಾರಾಗಿ** – ಸೊಪ್ಪೂ ನಾರೂ ಆಗುವಂತೆ
**ಸೊಪ್ಪುಸೊಪ್ಪಾಗು** – ಸವೆದುಹೋಗು
**ಸೊಪ್ಪುಸೊವಡಾಗು** – ನಜ್ಜುಗುಜ್ಜಾಗು
**ಸೊಪ್ಪುಳ್** – ಸಪ್ಪುಳ್, ದನಿ, ಶಬ್ದ
**ಸೊಬಗು** – ಚೆಲುವು
**ಸೊಬಗುವಡೆ** – ಶೋಭೆಗೊಳ್ಳು
**ಸೊಬಗುವೆಱು** – ಸೊಬಗುವಡೆ
**ಸೊಬಗೆ** – ಚೆಲುವೆ
**ಸೊಯಂಬರ** – (ಸ್ವಯಂವರ) ವಧು ತನ್ನ ಗಂಡನನ್ನು ಆಯ್ದುಕೊಳ್ಳುವುದು
**ಸೊಯಂಬರಸಾಲೆ** – ಸ್ವಯಂವರಮಂಟಪ
**ಸೊಯಂಬರಸೇಸೆ** – ಸ್ವಯಂವರದಲ್ಲಿ ಮದುಮಕ್ಕಳಿಗೆ ಹಾಕುವ ಅಕ್ಷತೆ
**ಸೊ(ೞ)ರೆ** – ಸೋರೆ ಕಾಯಿ; ಸೋರೆಬುರುಡೆ
**ಸೊರೆಗುಂಡಿ** – ಸೋರೆಕಾಯಿ ಆಕಾರದ ಪಾತ್ರೆ
**ಸೊರೆಗಾಯ್** – ಸೋರೆಕಾಯಿ
**ಸೊರ್ಕಾ(ಕ್ಕಾ)ನೆ** – ಮದಗಜ
**ಸೊರ್ಕಿ(ಕ್ಕಿ)ಸು** – ಮತ್ತುಬರಿಸು; ಗರ್ವಿಸು
**ಸೊರ್ಕು(ಕ್ಕು)** – ಅಮಲೇರು; ಅಮಲು; ಗರ್ವಪಡು; ಗರ್ವ
**ಸೊಲ್ಲಿಡು** – ಹೇಳು, ನುಡಿ, ಮಾತಾಡು
**ಸೊಲ್ಲಿಸು** – ಸೊಲ್ಲಿಡು
**ಸೊಲ್ವಿನಂ** – ಹೇಳುವಂತೆ
**ಸೊವಡು** – ಸೊಗಡು, ಕಂಪು
**ಸೊಸೆ (ಸ್ನುಷಾ)** – ಮಗನ ಹೆಂಡತಿ
**ಸೋ** – ಓಡಿಸು
**ಸೋಂಕಿಲ್** – ಮಡಿಲು, ಸೋಗೆ
**ಸೋಂಕು** – ಮುಟ್ಟು; ಸ್ಪರ್ಶ; ಮೆಟ್ಟಿಕೊ
**ಸೋಂದು** – ಓಡಿಸು
**ಸೋಂಬ** – ಸೋಮಾರಿ
**ಸೋಂಬತನ** – ಸೋಮಾರಿತನ
**ಸೋಂಬು** – ಸೋಂಬತನ

**ಸೋಗಿಲು** – ಮಡಿಲು
**ಸೋಗೆ** – ಮಡಿಲು; ಗಂಡು ನವಿಲು
**ಸೋಗೆನವಿಲ್** – ಗಂಡು ನವಿಲು
**ಸೋಗೆನಿಱೆ** – ಸೀರೆಯ ನೀಳವಾದ ಸೆರಗು
**ಸೋಗೆವಿರ್ಚು** – (ನವಿಲು) ಸೋಗೆಯನ್ನು ಹರಡು
**ಸೋಗೆವೆಣ್** – ಹೆಣ್ಣು ನವಿಲು
**ಸೋಡಂಬಾಡಂ** – ದೊಡ್ಡದು; ಅತಿಶಯವಾಗಿ
**ಸೋಡಂಬಾಡನೆ** – ರಭಸವಾಗಿ
**ಸೋದನ ದೀವಿಗೆ** – (ಶೋಧನ ದೀಪಿಕಾ)
**ಹುಡುಕಲು ಬಳಸುವ ದೀಪ**–
**ಸೋದರತಂಗೆ** – ಸ್ವಂತ ತಂಗಿ
**ಸೋದರತಮ್ಮ** – ಸ್ವಂತ ತಮ್ಮ
**ಸೋದರಮಯ್ದುನ** – ಸೋದರ ಸಂಬಂಧದಿಂದಾದ ಮೈದುನ
**ಸೋದರಮಾವ** – ತಾಯಿಯ ಒಡಹುಟ್ಟಿದವನು
**ಸೋದರಳಿಯ** – ಗಂಡಸಿನ ಅಕ್ಕತಂಗಿಯರ ಮಗ; ಹೆಂಗಸಿನ ಅಣ್ಣತಮ್ಮಂದಿರ ಮಗ
**ಸೋದರಿಕೆ** – ಒಡಹುಟ್ಟಿದವರ ನಂಟು
**ಸೋದರ್ಯ** – ಒಡಹುಟ್ಟಗೆ ಸಂಬಂಧಿಸಿದ
**ಸೋದಿಗೆ** – ಒಂದು ತಿಂಡಿ
**ಸೋದಿಸು** – (ಶೋಧಿಸು) ಹುಡುಕು; ಪರೀಕ್ಷಿಸು; ದ್ರವದ ಕಸವನ್ನು ಹೋಗಲಾಡಿಸು
**ಸೋದು** – ಸೋ, ಓಡಿಸು
**ಸೋನೆ** – ಮಳೆ
**ಸೋಪಾನ** – ಮೆಟ್ಟಿಲು
**ಸೋಪಾಲಂಭ** – ನಿಂದೆಯಿಂದ ಕೂಡಿರುವ
**ಸೋಮ** – ಚಂದ್ರ
**ಸೋಮಮಣಿ** – ಚಂದ್ರಕಾಂತಶಿಲೆ
**ಸೋಮವಂಶ** – ಚಂದ್ರವಂಶ
**ಸೋಮವೀಥಿ** – ದಕ್ಷಿಣೋತ್ತರ ಬೀದಿ
**ಸೋಮಾಂಕ** – ಚಂದ್ರನ ಗುರುತಿನವನು, ಶಿವ
**ಸೋಮಾನ್ವಯ** – ಚಂದ್ರವಂಶ
**ಸೋಮಾಶ್ಮ** – ಚಂದ್ರಕಾಂತಶಿಲೆ
**ಸೋರ್** – ಜಿನುಗು; ಸುರಿದು ಹೋಗು
**ಸೋರ್ಚು** – ಸೋರಿಹೋಗುವಂತೆ ಮಾಡು
**ಸೋರ್ಮುಡಿ** – ಸಡಿಲವಾದ ತಲೆಗೂದಲು
**ಸೋರ್ಮೊಲೆ** – ಜೋತುಬಿದ್ದ ಮೊಲೆ
**ಸೋಲ್** – ಪರಾಜಯ; ಮೋಹಗೊಳ್ಳು
**ಸೋಲ** – ಆಸಕ್ತಿ, ಮೋಹ; ಸೋಲುವಿಕೆ; ಸೋತಾಗ ಕೊಡಬೇಕಾದ ಪಣ
**ಸೋಲಂಬಡೆ** – ಮೋಹಗೊಳಿಸು
**ಸೋಲಕಾರ್ತಿ** – ಮೋಹವನ್ನುಂಟುಮಾಡುವವಳು
**ಸೋಲಿಸು** – ಪರಾಜಯಗೊಳಿಸು; ಮೋಹಗೊಳಿಸು
**ಸೋಲ್ತಯಿಸು** – ಪರಾಜಯಗೊಳಿಸು
**ಸೋಲ್ಮುಡಿ** – ಸೋರ್ಮುಡಿ
**ಸೋಲ್ವಾಯಿನ** – ಪ್ರೀತಿಯ ಬಾಗಿನ
**ಸೋವಡಿ** – ಮುಗ್ಧ
**ಸೋವತ** – ಆಹಾರ; ಬಲಿ
**ಸೋವತಂ ಮಾಡು** – ಬಲಿಗೊಡು
**ಸೋವತಮಾಗು** – ಬಲಿಯಾಗು
**ಸೋವದಿಕೆ** – ಬಲಿ
**ಸೋವಳ** – ಅಟ್ಟುವಿಕೆ
**ಸೋವು** – ಅಟ್ಟು
**ಸೌಂದರ** – ಚೆಲುವ
**ಸೌಂದರಿ** – ಚೆಲುವೆ
**ಸೌಂದರ್ಯ** – ಚೆಲುವು
**ಸೌಂದರ್ಯತನುತ್ವ** – ಚೆಲುವಾದ ದೇಹವನ್ನು ಹೊಂದಿರುವುದು
**ಸೌಂದರ್ಯಯೋನಿ** – ಚೆಲುವಿನ ಹುಟ್ಟು ತಾಣ
**ಸೌಂದರ್ಯವೃತ್ತಿ** – ಚೆಲುವಿನ ಗುಣ
**ಸೌಕುಮಾರ್ಯಂಬೆಱು** – ಕೋಮಲತೆಯನ್ನು ಹೊಂದು
**ಸೌಖ್ಯ** – ಸುಖ
**ಸೌಗಂಧಿಕ** – ಸುವಾಸನಾಭರಿತವಾದುದು
**ಸೌಗಂಧ್ಯ** – ಸುವಾಸನೆಯಿಂದ ಕೂಡಿರುವಿಕೆ
**ಸೌಜನ್ಯಕಂದಾಂಕುರ** – ಸಜ್ಜನಿಕೆಯ ಸಾಕಾರ
**ಸೌದರ್ಯ** – ಸೋದರಭಾವ
**ಸೌದಾಮಿನಿ** – ಮಿಂಚು
**ಸೌಧಗೃಹ** – ಉಪ್ಪರಿಗೆ ಮನೆ
**ಸೌಧರ್ಮ(ಕಲ್ಪ)** – (ಜೈನ) ಹದಿನಾರು ಸ್ವರ್ಗಗಳಲ್ಲಿ ಒಂದು
**ಸೌಧರ್ಮಿಕೆ** – ಸಜ್ಜನಿಕೆ
**ಸೌಧರ್ಮೇಂದ್ರ** – (ಜೈನ) ಹದಿನಾರು ಮಂದಿ ಇಂದ್ರರಲ್ಲಿ ಒಬ್ಬ; ಸೌಧರ್ಮ(ಕಲ್ಪ)ದ ಒಡೆಯ
**ಸೌನಂದಕ** – (ಜೈನ) ಚಕ್ರವರ್ತಿಯ ಹದಿನಾಲ್ಕು ರತ್ನಗಳಲ್ಲಿ ಒಂದು; ಒಂದು ಖಡ್ಗ
**ಸೌಪರ್ಣ** – ಗರುಡ
**ಸೌಪರ್ಣವಾಹ** – ವಿಷ್ಣು
**ಸೌಭಾಗ್ಯಶಾಲಿ(ಳ)** – ಅದೃಷ್ಟವಂತ
**ಸೌಭ್ರಾತ್ರ** – ಸೋದರತ್ವ
**ಸೌಮನಸ(ವನ)** – (ಜೈನ) ಸುಮೇರು ಪರ್ವತದ ಮೇಲಿರುವ ಒಂದು ವನ
**ಸೌಮಿತ್ರಿ** – ಸುಮಿತ್ರೆಯ ಮಗ, ಲಕ್ಷ್ಮಣ
**ಸೌಮ್ಯ** – ಶಾಂತಸ್ವಭಾವದವನು
**ಸೌರ** – ಸೂರ್ಯನಿಗೆ ಸಂಬಂಧಿಸಿದ
**ಸೌರಭ** – ಸುವಾಸನೆ
**ಸೌರಭಂಗೆಡು** – ಸುವಾಸನೆ ನಾಶಗೊಳ್ಳು
**ಸೌರಭಕುಸುಮ** – ಸುಗಂಧಕುಸುಮ
**ಸೌರಭೇಯ** – ಎತ್ತು
**ಸೌರಭ್ಯ** – ಸುವಾಸನೆ
**ಸೌವಸ್ತಿಕ** – ಮಂಗಳಕರ
**ಸೌವಿದ(ಲ್ಲ)** – ಅಂತಃಪುರದ ಸೇವಕ
**ಸೌಶೀಲ್ಯ** – ಸನ್ನಡತೆ

**ಸೌಷ್ಠವ** – ಸೊಗಸು; ಸಾಮರ್ಥ್ಯ
**ಸೌಸವ** – ಪರಿಮಳ
**ಸೌಸ್ಥಿತ್ಯ** – ಸುಸ್ಥಿತಿಯಲ್ಲಿರುವಿಕೆ
**ಸೌಹಾರ್ದ** – ಸೌಜನ್ಯ
**ಸೌಳು** – ಉಪ್ಪುಪ್ಪಾದ
**ಸೌಳುವಣ್ಣು** – ಕ್ಷಾರಯುಕ್ತ ಭೂಮಿ
**ಸ್ಕಂದ** – ವಿಭಾಗ
**ಸ್ಯಂದೀ** – ಸುರಿಸುತ್ತಿರುವ
**ಸ್ಕಂಧ** – ಹೆಗಲು; ಮರದ ಕಾಂಡ
**ಸ್ಕಂಧಸಂಧಿ** – ಹೆಗಲು
**ಸ್ಕಂಧಾವಾರ** – ಸೈನ್ಯತುಕಡಿ; ಸೇನೆಯ ಪಾಳೆಯ; ರಾಜಧಾನಿ
**ಸ್ಕಂಧೋಪನಯ** – ಒಂದು ಬಗೆಯ ಸಂಧಿಕಾರ್ಯ; ಕಾಣಿಕೆ ಕೊಟ್ಟು ಶರಣಾಗುವುದು
**ಸ್ಖಲನ** – ಮುಗ್ಗರಿಸುವಿಕೆ
**ಸ್ಖಲಿತಗತಿ** – ತತ್ತರಿಸುವ ನಡಿಗೆ
**ಸ್ಖಲಿತಚಲನ** – ಸ್ಖಲಿತಗತಿ
**ಸ್ತಂಬ** – ಪುಂಜ
**ಸ್ತಂಬಕರಿ** – ಬತ್ತ
**ಸ್ತಂಬೇರಮ** – ಆನೆ
**ಸ್ತಂಭ** – ಕಂಭ; ಆಧಾರ; ನಿರೋಧ
**ಸ್ತಂಭಕ** – ನಿಶ್ಚಲ ಭಾವ; ಪ್ರತಿಬಂಧಿಸುವ
**ಸ್ತಂಭನಾಕ್ಷರ** – ಶತ್ರುವನ್ನು ಪ್ರತಿಬಂಧಿಸುವ ಮಂತ್ರಾಕ್ಷರ
**ಸ್ತಂಭಿಸು** – ನಿಷ್ಕ್ರಿಯಗೊಳಿಸು; ತಡೆಹಿಡಿ
**ಸ್ತನ** – ಮೊಲೆ
**ಸ್ತನಂಧಯ** – ಮೊಲೆಕುಡಿಯುವ ಶಿಶು, ಮಗು
**ಸ್ತನಭರ** – ಮೊಲೆಗಳ ಭಾರ
**ಸ್ತನಾಂತರ** – ಮೊಲೆಗಳ ನಡುವಿನ ಭಾಗ; ಹೃದಯ
**ಸ್ತನಯಿತ್ನು** – ಮೋಡ
**ಸ್ತನಿತ** – ಗುಡುಗು; (ಜೈನ) ಹತ್ತು ಬಗೆಯ ಭವನಾಮರರಲ್ಲಿ ಒಂದು
**ಸ್ತನಿತಾಮರ** – (ಜೈನ) ಹತ್ತು ಬಗೆಯ ಭವನಾಮರರಲ್ಲಿ ಒಂದು
**ಸ್ತನ್ಯ** – ಮೊಲೆ ಹಾಲು
**ಸ್ತಬ(ವ)ಕ** – ಗೊಂಚಲು; ಸಮೂಹ
**ಸ್ತಬ್ಧ** – ಚಲನೆಯಿಲ್ಲದ
**ಸ್ತವಂಗೆಯ್** – ಸ್ತುತಿಮಾಡು
**ಸ್ತವನೀಯ** – ಶ್ಲಾಘ್ಯವಾದ
**ಸ್ತಿಮಿತಗಾತ್ರೆ** – ನಿಶ್ಚೇಷ್ಟಿತಳಾದವಳು
**ಸ್ತಿಮಿತತಾರಕ** – ಕಣ್ಣುಗಳನ್ನು ಒಂದೇ ಕಡೆ ನಟ್ಟವನು
**ಸ್ತಿಮಿತದೃಷ್ಟಿ** – ಸ್ತಿಮಿತತಾರಕ
**ಸ್ತಿಮಿತಾಕ್ಷ** – ಸ್ತಿಮಿತತಾರಕ
**ಸ್ತುತಿಸು** – ಹೊಗಳು; ಸ್ತೋತ್ರಮಾಡು
**ಸ್ತುತ್ಯ** – ಹೊಗಳಿಕೆಗರ್ಹವಾದ
**ಸ್ತೂಪಿತ** – ರಾಶಿ ಹಾಕಿದ
**ಸ್ತೇನ** – ಕಳ್ಳ
**ಸ್ತೇನಪ್ರಯೋಗ** – (ಜೈನ) ಅಸ್ತೇಯವ್ರತದ ಅತಿಚಾರ, ಕಳವಿಗೆ ಪ್ರೇರಿಸುವುದು
**ಸ್ತೇಯ** – ಕಳ್ಳತನ
**ಸ್ತೇಯಾನಂದ** – (ಜೈನ) ನಾಲ್ಕು ಬಗೆಯ ರೌದ್ರಧ್ಯಾನಗಳಲ್ಲಿ ಒಂದು, ಕಳ್ಳತನ ಮಾಡುವ ಆಲೋಚನೆಯಲ್ಲಿ ಪಡೆಯುವ ಆನಂದ, ನೋಡಿ 'ರೌದ್ರ(ಧ್ಯಾನ)'
**ಸ್ತೋಕ** – ಅಲ್ಪ ಕಾಲ ಉಳಿಯುವ(ಂಥದು); (ಜೈನ) ಕಾಲ ಅಳೆಯುವ ಪರಿಮಾಣ, ಏಳು ಉಚ್ಛ್ವಾಸಗಳ ಅವಧಿ
**ಸ್ತೋಭ** – ತಡೆ
**ಸ್ತೋಭಂಗೊಳ್** – ಮೈಮರೆ
**ಸ್ತೋಭನಾಕ್ಷರ** – ಎದುರಿಗಿರುವುದನ್ನು ಪ್ರತಿಬಂಧಿಸುವ ಮಂತ್ರ
**ಸ್ತೋಮ** – ಸಮೂಹ
**ಸ್ತ್ಯಾನಗೃದ್ಧಿ** – (ಜೈನ) ದರ್ಶನಾವರಣಿಯಕರ್ಮದ ಒಂದು ಪ್ರಕಾರ
**ಸ್ತ್ರೀತ್ವ** – ಹೆಣ್ತನ
**ಸ್ತ್ರೀಪ್ರತಿಬದ್ಧ** – ಹೆಣ್ಣಿಗೆ ಸಂಬಂಧಿಸಿದ್ದು
**ಸ್ತ್ರೀರತ್ನ** – ಉತ್ತಮ ಸ್ತ್ರೀ
**ಸ್ತ್ರೀರೂಪ** – ಹೆಣ್ಣಿನ ಚೆಲುವು
**ಸ್ತ್ರೀವೇದ** – (ಜೈನ) ಒಂದು ಬಗೆಯ ನೋಕಷಾಯ, ಹೆಣ್ಣಿಗೆ ಗಂಡಿನ ಬಗ್ಗೆ ಮೋಹವುಂಟುಮಾಡುವ ಕರ್ಮ
**ಸ್ತ್ರೀಸವನ** – ಹೆಣ್ಣಿನ ಮುಟ್ಟಿನ ನಂತರದ ಸ್ನಾನ
**ಸ್ತ್ರೈಣ** – ಹೆಣ್ಣಿನ ಬಗ್ಗೆ ಅತಿಮೋಹ
**ಸ್ತ್ರೈಣಸುಖ** – ಹೆಣ್ಣಿನ ಸುಖ
**ಸ್ಥಗಿತ** – ಮುಚ್ಚಿದ; ಆವರಿಸಿದ
**ಸ್ಥಪತಿ** – ವಾಸ್ತುಶಿಲ್ಪಿ; ಬಡಗಿ; (ಜೈನ) ಚಕ್ರವರ್ತಿಗೆ ದೊರೆಯುವ ಜೀವರತ್ನಗಳಲ್ಲಿ ಒಂದು, ಶ್ರೇಷ್ಠ ವಾಸ್ತುಶಿಲ್ಪಿ
**ಸ್ಥಪತಿರತ್ನ** – (ಜೈನ) ಚಕ್ರವರ್ತಿಗೆ ದೊರೆಯುವ ಜೀವರತ್ನಗಳಲ್ಲಿ ಒಂದು, ಶ್ರೇಷ್ಠ ವಾಸ್ತುಶಿಲ್ಪಿ
**ಸ್ಥಪುಟಿತ** – ಏರುತಗ್ಗುಗಳಿಂದ ಕೂಡಿದ
**ಸ್ಥಲ(ಳ)ಕಮಲ(ಳ)** – ನೆಲದಾವರೆ
**ಸ್ಥಲೀಕ** – ನೆಲಗಟ್ಟು
**ಸ್ಥವಿರ** – ಮುದುಕ
**ಸ್ಥಳನಳಿನಿ** – ಸ್ಥಲ(ಳ)ಕಮಲ(ಳ)
**ಸ್ಥಳಯಾತ್ರೆ** – ವ್ಯಾಪಾರಕ್ಕಾಗಿ ಮಾಡುವ ಭೂಮಿಯ ಮೇಲಣ ಪ್ರಯಾಣ
**ಸ್ಥಳಾಂಬುರುಹ** – ಸ್ಥಲ(ಳ)ಕಮಲ(ಳ)
**ಸ್ಥಳೇಂದೀವರ** – ಸ್ಥಲ(ಳ)ಕಮಲ(ಳ)
**ಸ್ಥಳಪರ್ಯಯ** – ಜಾಗದ ಬದಲಾವಣೆ
**ಸ್ಥಳಾಂಥರ** – ಬೇರೆಯ ಜಾಗ

**ಸ್ಥಾಣು** – ಸ್ಥಿರವಾದ; ಗೂಟ; ಮರದ ಕಾಂಡ; ಶಿವ
**ಸ್ಥಾಣುನಿವಸನ** – ಶಿವನ ನಿವಾಸ; ಮರದ ಕಾಂಡಕ್ಕೆ ಆಶ್ರಯವಾದುದು
**ಸ್ಥಾಣೂತ್ಕರ** – ಗೂಟ ಅಥವಾ ಒಣಕೊರಡುಗಳ ಸಮೂಹ
**ಸ್ಥಾನದೀಪಿಕೆ** – ತಾಣದೀವಿಗೆ, ಒಂದೆಡೆ ನಟ್ಟಿರುವ ದೀವಿಗೆ
**ಸ್ಥಾನಭ್ರಷ್ಟತೆ** – ಸ್ಥಾನವನ್ನು ಕಳೆದುಕೊಳ್ಳುವುದು
**ಸ್ಥಾನಲಾಭ** – ಪದವಿಯನ್ನು ಹೊಂದುವುದು; (ಜೈನ) ದೀಕ್ಷಾನ್ವಯಗಳಲ್ಲಿ ಒಂದು
**ಸ್ಥಾಪನಂಗೆಯ್** – ನಿರ್ಮಾಣಮಾಡು
**ಸ್ಥಾಪಿಸು** – ಇರಿಸು
**ಸ್ಥಾಯಿ** – ನಿಲ್ಲುವುದು; ಆಶಿಸುವವನು
**ಸ್ಥಾಯಿಭಾವ(ಕ)** – ಮನುಷ್ಯನ ಮೂಲ ಚಿತ್ತವೃತ್ತಿ
**ಸ್ಥಾಸಕ** – ಸುಗಂಧಲೇಪನ
**ಸ್ಥಿತಿಸಾರ** – ಕೊಟ್ಟ ಮಾತಿಗೆ ತಪ್ಪದವನು; ದೃಢಚಿತ್ತ
**ಸ್ಥಿರ** – (ಜೈನ) ನಾಮಕರ್ಮಪ್ರಕಾರಗಳಲ್ಲಿ ಒಂದು, ಇದರಿಂದ ರಸಾಧಿಧಾತುಗಳು ಶರೀರದಲ್ಲಿ ನೆಲೆ ನಿಲ್ಲುತ್ತವೆ
**ಸ್ಥಿರಂ** – ದೃಢವಾಗಿ
**ಸ್ಥಿರತೆ** – ಶಾಶ್ವತತೆ
**ಸ್ಥಿರತ್ವ** – ಸ್ಥೈರ್ಯ; ಸಾಮರ್ಥ್ಯ
**ಸ್ಥಿರಬೋಧ** – ಕೇವಲಜ್ಞಾನಿ
**ಸ್ಥಿರೆ** – ದೃಢಚಿತ್ತೆ; ಭೂಮಿ
**ಸ್ಥೂರಿ** – ಭಾರ ಹೊರುವ ಕುದುರೆ
**ಸ್ನಪನ** – ಅಭಿಷೇಕ
**ಸ್ನಾನೀಯ** – ಸ್ನಾನಕ್ಕೆ ಬೇಕಾದ ವಸ್ತುಗಳು
**ಸ್ನಾಪಕ** – ಸ್ನಾನ ಮಾಡಿಸುವವನು
**ಸ್ನಿಗ್ಧ** – ಸ್ನೇಹದಿಂದ ಕೂಡಿದ್ದು, ನಯವಾದದ್ದು; ಜಿಡ್ಡು
**ಸ್ನಿಗ್ಧಾಲೋಕ** – ಆಕರ್ಷಕ ನೋಟ
**ಸ್ನುಹಿ** – ಕಳ್ಳಿ ಗಿಡ
**ಸ್ನೇಹ** – ಗೆಳೆತನ; ಜಿಡ್ಡು
**ಸ್ಪಂದ** – ಅದುರುವಿಕೆ
**ಸ್ಪರ್ಶನಾನುಮಿತ** – ಮುಟ್ಟಿ ತಿಳಿಯಬಹುದಾದ
**ಸ್ಪರ್ಶನೀಯ** – ಮುಟ್ಟಲು ಹಿತಕರವಾದ
**ಸ್ಪರ್ಶಪ್ರವೀಚಾರ** – (ಜೈನ) ಸ್ಪರ್ಶದ ಮೂಲಕ ರತಿಸುಖವನ್ನು ಪಡೆಯುವುದು
**ಸ್ಪರ್ಶಾನುಮೇಯ** – ಸ್ಪರ್ಶನಾನುಮಿತ
**ಸ್ಪರ್ಶಾಷ್ಟಕ** – (ಜೈನ) ಎಂಟು ಬಗೆ ಸ್ಪರ್ಶನಾಮಕರ್ಮಪ್ರಕೃತಿ
**ಸ್ಪೃಶ್ಯ** – ಮುಟ್ಟಲು ಯೋಗ್ಯವಾದ
**ಸ್ಪೃಹಣೀಯ** – ಅಪೇಕ್ಷಣೀಯ
**ಸ್ಫಟೆ** – ಹೆಡೆ
**ಸ್ಫಟಾಧರ** – ಹೆಡೆಯುಳ್ಳದ್ದು,  ಹಾವು
**ಸ್ಫಟಾರತ್ನ** – ಹೆಡೆಮಣಿ
**ಸ್ಫ(ಸ್ಫಾ)ಟಿಕಾದ್ರಿ** – ಕೈಲಾಸ ಪರ್ವತ
**ಸ್ಫಟಿಕಾಬ್ಜ** – ಬೆಳ್ದಾವರೆ
**ಸ್ಫಟಿಕಾಶ್ಮ** – ಬಿಳಿಯ ಕಲ್ಲು; ಸ್ಫಟಿಕ ಶಿಲೆ
**ಸ್ಫಾಟಿಕಗ್ರಾವ** – ಸ್ಫಟಿಕಾಶ್ಮ
**ಸ್ಫಾರ** – ಅಗಲವಾದ; ಅತಿಶಯವಾದ
**ಸ್ಫಾಲನ** – ನಡುಕ; ಸೋಕುವಿಕೆ
**ಸ್ಫೀತ** – ವಿಶಾಲವಾದ
**ಸ್ಫುಟಹರ್ಷ** – ಹೆಚ್ಚು ಹರ್ಷವುಳ್ಳವನು
**ಸ್ಫುಟಿತ** – ಬಿರಿದ, ಸೀಳಕಬಿಟ್ಟ
**ಸ್ಫುರದನಲ** – ಚಾಚುವ ನಾಲಗೆಯುಳ್ಳ ಬೆಂಕಿ
**ಸ್ಫುರಿತ** – ನಡುಗುವ; ಪ್ರಕಾಶಮಾನವಾದ
**ಸ್ಫುರಿ(ಯಿ)ಸು** – ತಟ್ಟನೆ ಹೊಳೆ
**ಸ್ಫುಲಿಂಗ** – ಬೆಂಕಿಯ ಕಿಡಿ
**ಸ್ಮಯ** – ನಗೆ; ವಿಸ್ಮಯ; ಅಹಂಕಾರ
**ಸ್ಮಯರಹಿತ** – ನಿಗರ್ವಿ
**ಸ್ಮರ** – ನೆನಪು; ಮನ್ಮಥ
**ಸ್ಮರಘುಸ್ಮರ** – ಕಾಮಮರ್ದನ, ಶಿವ
**ಸ್ಮರಚಾಪ** – ಕಬ್ಬು
**ಸ್ಮರತತ್ವ** – ಕಾಮತತ್ವ
**ಸ್ಮರಬಾಣ** – ಕಾಮಬಾಣ
**ಸ್ಮರಮಂತ್ರ** – ರತಿಹಸ್ಯ
**ಸ್ಮರರಾಗ** – ಪ್ರಣಯಾತುರ
**ಸ್ಮರರಿಪು** – ಕಾಮನ ಶತ್ರು, ಶಿವ
**ಸ್ಮರಹರ** – – ಕಾಮನನ್ನು ಕೊಂದವನು, ಶಿವ; ಅರ್ಹಂತ–
**ಸ್ಮರಾಮರ್ಶಿತೆ** – ಪ್ರಣಯಕುಪಿತೆ
**ಸ್ಮರಿಯಿಸು** – ನೆನೆಪಿಸಿಕೊ; ಧ್ಯಾನಿಸು
**ಸ್ಮರೋನ್ಮಾದ** – ಪ್ರಣಯೋದ್ರೇಕ
**ಸ್ಮಿತ** – ಅರಳಿದ; ನಗುವ; ಮಂದಹಾಸ
**ಸ್ಮೃತಿ** – ನೀತಿಸಂಹಿತೆ
**ಸ್ಮೇರ** – ಮುಗುಳ್ನಗೆ; ನಗುವ
**ಸ್ಮೇರಮುಖ** – ನಗುಮುಖ
**ಸ್ಯಂದ** – ಜಿನುಗುವ
**ಸ್ಯಂದನ** – ರಥ
**ಸ್ಯಮಂತಪಂಚಕ** – ಪರಶುರಾಮನಿರ್ಮಿತವೆಂದು ನಂಬಲಾದ ಐದು ಮಡುಗಳು
**ಸ್ಯಾದ್ವಾದ** – (ಜೈನ) ಸ್ಯಾತ್+ವಾದ, ಸ್ವಲ್ಪಸ್ವಲ್ಪವಾಗಿ ತಿಳಿಯುವ ಕ್ರಮ
**ಸ್ಯಾಮಾಕ** – ಸಾವೆ ಎಂಬ ಧಾನ್ಯ
**ಸ್ರಂಸಿ** – ಕಳಚುವ, ಉದುರುವ
**ಸ್ರಕ್** – ಹೂವಿನ ಹಾರ
**ಸ್ರಜ** – ಸ್ರಕ್
**ಸ್ರವಂತಿ** – ನದಿ
**ಸ್ರುಕ್** – ಯಜ್ಞದಲ್ಲಿ ಬಳಸುವ ಮರದ ಸೌಟು
**ಸ್ರುವ** – ಸ್ರುಕ್
**ಸ್ರೋತ** – ಪ್ರವಾಹ; ನದಿ; ಧಾರೆ
**ಸ್ರೋತಃಪತಿ** – ಸಮುದ್ರ

**ಸ್ರೋತಸ್ವಿನಿ** – ನದಿ
**ಸ್ವಕೀಯ** – ತನ್ನ, ಸ್ವಂತದ
**ಸ್ವಕೀಯಾನ್ವಯ** – ತನ್ನ ವಂಶ
**ಸ್ವಗತ** – ಸ್ವಂತ; ಅಂತರ್ಗತವಾದ
**ಸ್ವಗುರುಸ್ಥಾನಸಂಕ್ರಾಂತಿ** – (ಜೈನ) ಒಂದು ಗರ್ಭಾನ್ವಯಕ್ರಿಯೆ, ತನ್ನ ಗುರುವಿನ ಸ್ಥಾನವನ್ನು ಹೊಂದುವುದು
**ಸ್ವಗೃಹತ್ಯಾಗ** – (ಜೈನ) ಒಂದು ಗರ್ಭಾನ್ವಯಕ್ರಿಯೆ, ಆತ್ಮಕಲ್ಯಾಣಕ್ಕಾಗಿ ತನ್ನ ಮನೆಯನ್ನು ತೊರೆಯುವುದು
**ಸ್ವಚ್ಛ** – ಬಿಳಿಯ; ನಿರ್ಮಲವಾದ
**ಸ್ವಚ್ಛಂದ** – ಸ್ವತಂತ್ರವಾದ
**ಸ್ವಚ್ಛಂದಗಾಮಿ** – ಮನಸ್ಸು ಬಂದಂತೆ ತಿರುಗುವವನು
**ಸ್ವಚ್ಛಂದಮಿಟುತ್ತು** – ಇಚ್ಛಾಮರಣ, ಬೇಕೆಂದಾಗ ಸಾಯುವುದು
**ಸ್ವದಾರಸಂತೋಷ** – ತನ್ನ ಹೆಂಡತಿಗೆ ಕೊಡುವ ಸಂತೋಷ; ತನ್ನ ಹೆಂಡತಿಯಿಂದ ಪಡೆಯುವ ಸಂತೋಷ
**ಸ್ವಪಕ್ಷ** – ತನ್ನ ಗುಂಪು
**ಸ್ವಪ್ನ** – ನಿದ್ದೆ; ಕನಸು
**ಸ್ವಪ್ನದರ್ಶನ** – ಕನಸು ಕಾಣುವಿಕೆ
**ಸ್ವಭಾವ** – ಹುಟ್ಟುಗುಣ
**ಸ್ವಭಾವವೈರಾಗ್ಯ** – ಹುಟ್ಟಿನಿಂದಲೇ ಬಂದ ವೈರಾಗ್ಯ
**ಸ್ವಯಂಕೃತ** – ತಾನೇಮಾಡಿದ
**ಸ್ವಯಂಪ್ರಭು** – ತನಗೆ ತಾನೇ ಒಡೆಯನಾದವನು
**ಸ್ವಯಂಬುದ್ಧ** – ತನಗೆ ತಾನೇ ಜ್ಞಾನಿಯಾದವನು
**ಸ್ವಯಂಭೂರಮಣ** – (ಜೈನ) ಮಧ್ಯಲೋಕದ ಒಂದು ಸಾಗರ
**ಸ್ವರವೇದವಿದ್ಯೆ** – ಶಬ್ದವೇದಿ, ಧ್ವನಿ ಕೇಳಿ ಗುರಿಗೆ ಹೊಡೆಯುವ ಬಾಣವಿದ್ಯೆ
**ಸ್ವರಾಜ್ಯ(ಕ್ರಿಯೆ)** – (ಜೈನ) ಒಂದು ಗರ್ಭಾನ್ವಯಕ್ರಿಯೆ; ಜಿನನಾಗುವವನಿಗೆ ಮಾಡುವ ಪಟ್ಟಾಭಿಷೇಕ
**ಸ್ವರ್ಗ** – (ಜೈನ) ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಅನತ, ಪ್ರಾಣತ, ಆರಣ, ಅಚ್ಯುತ ಎಂಬ ಹದಿನಾರು ಸ್ವರ್ಗಗಳು
**ಸ್ವರು** – ವಜ್ರಾಯುಧ; ಸಿಡಿಲು
**ಸ್ವರ್ಣದಿ** – ಸ್ವರ್+ನದಿ, ದೇವಗಂಗೆ
**ಸ್ವರ್ಣಪಾಷಾಣ** – ಚಿನ್ನದ ಅದಿರು
**ಸ್ವರ್ಧುನಿ** – ಸ್ವರ್ಣದಿ
**ಸ್ವರ್ಧೌರೇಯ** – ಇಂದ್ರ, ಸ್ವರ್ಗದ ನಾಯಕ
**ಸ್ವಸ್ತಿಕ** – ಒಂದು ಮಂಗಳಕರ ಚಿಹ್ನೆ
**ಸ್ವಸ್ಥಾನ** – (ಜೈನ) ಜೀವಿಯ ಮೂರು ಅವಸ್ಥೆಗಳಲ್ಲಿ ಒಂದು
**ಸ್ವಾಂಗಸ್ಪೃಷ್ಟಸಹಿತಂ** – ತನ್ನ ಕೈಯಾರೆ
**ಸ್ವಾಂತ** – ಮನಸ್ಸು
**ಸ್ವಾಂತಭೂ** – ಮನ್ಮಥ
**ಸ್ವಾಗತವಚನ** – ಬರಮಾಡಿಕೊಳ್ಳುವ ಕುಶಲ ವಚನ
**ಸ್ವಾದನೀಯ** – ರುಚಿಕರವಾದ (ತಿನಿಸು)
**ಸ್ವಾದು** – ರುಚಿಯಾದ ಆಹಾರ)
**ಸ್ವಾಧ್ಯಾಯ** – (ಜೈನ) ಶ್ರಾವಕನ ಷಟ್ಕರ್ಮಗಳಲ್ಲಿ ಒಂದು, ಧರ್ಮಶಾಸ್ತ್ರಗಳ ಅಭ್ಯಾಸ, ನೋಡಿ 'ಷಟ್ಕರ್ಮ'
**ಸ್ವಾಪತೇಯಪತಿ** – ಸಂಪತ್ತಿನ ಒಡೆಯ, ಕುಬೇರ
**ಸ್ವಾಭಾವಿಕ** – (ಜೈನ) ತೀರ್ಥಂಕರನಿಗೆ ಒದಗುವ ಮೂವತ್ತನಾಲ್ಕು ಅತಿಶಯಗಳಲ್ಲಿ ಒಂದು
**ಸ್ವಾಮಿವಿರೋಧ** – ಒಡೆಯನಿಗೆ ಮಾಡುವ ದ್ರೋಹ
**ಸ್ವಾಮ್ಯವಿಕ್ರಾಂತ** – ಧಣಿಯ ಸೊತ್ತನ್ನು ಆಕ್ರಮಿಸುವವನು
**ಸ್ವಾರ್ಥಸಿದ್ಧಿ** – ತನ್ನ ಇಷ್ಟಪೂರೈಕೆ
**ಸ್ವಾಹಾಂಗನಾನಾಥ** – ಅಗ್ನಿ
**ಸ್ವಾಹಾಕಾರ** – ಯಜ್ಞದ ವೇಳೆ ಮಾಡುವ 'ಸ್ವಾಹಾ' ಎಂಬ ಪದೋಚ್ಚಾರ
**ಸ್ವಾಹಾಪತಿ** – ಅಗ್ನಿ
**ಸ್ವಿನ್ನತೆ** – ಬೆವರುವಿಕೆ
**ಸ್ವಿನ್ನಾಂಗ** – ಬೆವರುವ ದೇಹ
**ಸ್ವೀಕರಿಸು** – ತನ್ನದಾಗಿಸಿಕೊ; ಒಪ್ಪಿಕೊ; ಪಡೆ
**ಸ್ವೇಚ್ಛಾಮೃತ್ಯು** – ಬಯಸಿದಾಗ ಸಾಯುವುದು
**ಸ್ವೇದಜಲ** – ಬೆವರು
**ಸ್ವೇದಬಿಂದು** – ಬೆವರ ಹನಿ
**ಸ್ವೈರ** – ಸ್ವೇಚ್ಛೆ
**ಸ್ವೈರಚ(ಚಾ)ರ** – ಮಂದವಾಗಿ ಚಲಿಸುವವನು
**ಸ್ವೈರಮಾರ್ಗ** – ತನ್ನದೇ ಆಯ್ಕೆಯ ದಾರಿ
**ಸ್ವೈರಾಲಾಪ** – ಮನಸ್ಸಿಗೆ ಬಂದಂತೆ ಮಾತಾಡುವುದು
**ಸ್ವೈರಿಣಿ** – ವ್ಯಭಿಚಾರಿಣಿ
**ಸ್ವೋದರಪೂರಣ** – ಸ್ವ+ಉದರಪೂರಣ, ಹೊಟ್ಟೆ ಹೊರೆದುಕೊಳ್ಳುವುದು

## ಹ

**ಹಂಗ** – ಶಕುನದ ಹಕ್ಕಿ
**ಹಂತಿದಪ್ಪು** – ಸಾಲು ತಪ್ಪು
**ಹಂತುಕಾಮ** – ಕೊಲ್ಲಬಯಸುವವನು
**ಹಂಸ** –ಒಂದು ಪಕ್ಷಿ, ಮರಾಲ; ಸೂರ್ಯ; ಬೃಹಸ್ಪತಿ
**ಹಂಸಕುಳ** – ಹಂಸಗಳ ಗುಂಪು
**ಹಂಸಗ್ರೀವ** – ಹಂಸದ ಕೊರಳು
**ಹಂಸಚ್ಛದ** – ಹಂಸದ ತುಪ್ಪುಳು
**ಹಂಸತೂಲತಳ್ಪ** – ಹಂಸದ ತುಪ್ಪುಳಿಂದ ಮಾಡಿದ ಹಾಸಿಗೆ

**ಹಂಸಪದ** – ಹಂಸದ ಪಾದ; ಹಂಸದ ಹೆಜ್ಜೆ
**ಹಂಸಮಿಥುನ** – ಹಂಸಗಳ ಜೋಡಿ (ಗಂಡು ಹೆಣ್ಣು)
**ಹಂಸರುತಿ** – ಹಂಸಗಳ ಕಲರವ
**ಹಂಸಾರ್ಭಕ** – ಹಂಸದ ಮರಿ
**ಹಂಸಿ** – ಹೆಣ್ಣು ಹಂಸ
**ಹಂಸೀಭಾವ** – ಹಂಸದ ರೀತಿ
**ಹಂಸೆ** – ಹಂಸಿ
**ಹಕ್ಕರಕ್ಕೆ** – ಪಕ್ಷರಕ್ಷೆ
**ಹಟತ್** – ಹೊಳೆಯುವ
**ಹಟದ್ರತ್ನ** – ಹಟತ್+ರತ್ನ, ಹೊಳೆಯುವ ಮಣಿ
**ಹಟದ್ರುಚಿ** – ಹೊಳೆಯುವ ಕಾಂತಿ
**ಹಟನ್ನೀರೇಜ** – ಕಾಂತಿಮಯವಾದ ತಾವರೆ
**ಹಡಣಿಗಿತ್ತಿ** – ಹಾದರಗಿತ್ತಿ; ಸೂಳೆ
**ಹಡಹಾಳ** – ಸಂಪಾದಿಸುವವನು
**ಹಣಾಹಣಿ** – ಹಣೆಯಿಂದ ಹಣೆಗೆ ಹೊಡೆದು ಮಾಡುವ ಹೋರಾಟ
**ಹತ** – ಭಂಗಗೊಂಡ
**ಹತಕ** – ಕೆಟ್ಟವನು
**ಹತಕಲ್ಮಷ** – ದೋಷವಿಲ್ಲದ
**ಹತದೇಹ** – ಹೊಡೆಯಲ್ಪಟ್ಟ ಶರೀರ
**ಹತಪ್ರತಿಜ್ಞ** – ಪ್ರತಿಜ್ಞೆ ನೆರವೇರಿಸಲಾರದವನು
**ಹತಪ್ರಭ** – ಪೌರುಷಹೀನ; ಕಾಂತಿಹೀನ
**ಹತಭುಜದ್ವಯ** – ಏಟು ಬಿದ್ದ ಎರಡೂ ಕೈಗಳು
**ಹತಮತಿ** – ಬುದ್ಧಿಯನ್ನು ಕಳೆದುಕೊಂಡವನು
**ಹತವಿತತಕೋಳಾಹಳಂ** – ಏಟುಗಳಿಂದ ಕ್ಷೋಭೆಗೊಳಿಸಿ(ದವನು)
**ಹತಿ** – ಹೊಡೆತ; ಕೊಲ್ಲುವಿಕೆ
**ಹದಿ** – ಹೂಳಿರುವುದನ್ನು ಅಗೆದು ತೆಗೆ
**ಹದಿಟೆ** – (ಪ್ರತಿಷ್ಠಾ) ನೆಲೆಗೊಳಿಸುವಿಕೆ
**ಹನನ** – ಕೊಲ್ಲುವಿಕೆ
**ಹನಿ** – ತೊಟ್ಟುತೊಟ್ಟಾಗಿ ಬೀಳು
**ಹನಿಸು** – ಸುರಿ
**ಹನು** – ಕೆನ್ನೆ
**ಹನ್ಯತೇ** – ಕೊಲ್ಲಲ್ಪಡುತ್ತಾನೆ
**ಹಪ್ಪಳಕೆ(ಗೆ)** – ಚಪ್ಪಟೆ
**ಹಪ್ಪಳಕೆಮೂಗು** – ಚಪ್ಪಟೆ ಮೂಗು
**ಹಮ್ಮದ** – ಮೂರ್ಛೆ
**ಹಮ್ಮದಂಬೋಗು** – ಮೂರ್ಛೆಗೊಳ್ಳು
**ಹಮ್ಮಯಿಸು** – ಹಮ್ಮದಂಬೋಗು
**ಹಮ್ಮಯ್ಸು** – ಹಮ್ಮದಂಬೋಗು
**ಹಮ್ಮು** – ಹಗ್ಗವನ್ನು ಹೊಸೆ
**ಹಯ** – ಕುದುರೆ
**ಹಯಖುರ** – ಕುದುರೆಯ ಗೊರಸು
**ಹಯಗ್ರೀವ** – ವಿಷ್ಣು; ಈ ಹೆಸರಿನ ಒಬ್ಬ ರಾಕ್ಷಸ
**ಹಯದಟಿ** – ಕುದುರೆಯ ಪಡೆ
**ಹಯಪರಿಕರ** – ಕುದುರೆಗೆ ಹಾಕುವ ಲಗಾಮು
**ಹಯಪರ್ಯಾಣ** – ಕುದುರೆಯ ಜೀನು
**ಹಯವಲ್ಗನ** – ಕುದುರೆಯ ಒಂದು ಬಗೆಯ ನಡಿಗೆ
**ಹಯವೈಹಾಳಿ** – ಕುದುರೆ ಸವಾರಿ
**ಹಯವ್ರಾತ** – ಕುದುರೆಗಳ ಗುಂಪು
**ಹಯಶಾಸ್ತ್ರ** – ಕುದುರೆಗಳ ಬಗೆಗಿನ ವಿಜ್ಞಾನ
**ಹಯಶಿಕ್ಷೆ** – ಕುದುರೆಯನ್ನು ಪಳಗಿಸುವಿಕೆ
**ಹಯಶೃಂಗಚಾಪ** – ಕುದುರೆಯ ಕೊಂಬಿನಿಂದ ಮಾಡಿದ ಬಿಲ್ಲು; ಅಸಂಭವವಾದುದು
**ಹಯಹೇಷಿತ** – ಕುದುರೆಯ ಕೆನೆತ
**ಹಯ್ಯಂಗವೀನ** – ನವನೀತ; ಹೊಸದಾಗಿ ತೆಗೆದ ಬೆಣ್ಣೆ
**ಹರಕಲಿಸು** – ವ್ಯಾಪಿಸು
**ಹರಗು** – ಕಳೆ ಕೀಳು
**ಹರಗುವಾಳ್** – ಕುಂಟೆಯ ಗುಳ
**ಹರಡು** – ಬೆರಳಿನಿಂದ ಕೆದಕು; ಕಾಲಿನ ಹರಡು
**ಹರಡೆ** – ಪರಡೆ, ಕಂಕಪಕ್ಷಿ, ಒಂದು ಬಗೆಯ ನೀರು ಹಕ್ಕಿ
**ಹರಣಂಗೆಯ್** – ಕೊಲ್ಲು
**ಹರಣಭರಣ** – ತೆಗೆದುಕೊಳ್ಳುವುದು; ತುಂಬಿಸುವುದು
**ಹರನೇತ್ರ** – ಶಿವನ (ಮೂರನೆಯ) ಕಣ್ಣು
**ಹರಪ್ರಿಯ** – ಶಿವನ ಆಪ್ತ, ಕುಬೇರ
**ಹರವರಿ** – ಕ್ಷೇತ್ರ
**ಹರವಸ** – (ಪರವಶ) ಮೂರ್ಛೆ
**ಹರಸಖ** – ಹರಪ್ರಿಯ
**ಹರಹಸನ** – ಶಿವನ ಅಟ್ಟಹಾಸ
**ಹರಹಾಸ** – ಹರಹಸನ
**ಹರಹಾಸದ್ಯುತಿ** – ಶಿವ ನಗೆಯ ಕಾಂತಿ
**ಹರಳಿಗ** – ಜಾರ
**ಹರಳ್ಚು** – ದೃಷ್ಟಿಗೆ ಅಡ್ಡಿಯುಂಟುಮಾಡು
**ಹರಿ** – ಓಡು, ಪ್ರವಹಿಸು; ಕುದುರೆ; ಸಿಂಹ; ಕೃಷ್ಣ
**ಹರಿಗ** – ಅರಿಕೇಸರಿ; ಅರ್ಜುನ
**ಹರಿಗಱ್ತಲೆ** – ಹಬ್ಬಿರುವ ಕತ್ತಲೆ
**ಹರಿಚಂದನ** – ಶ್ರೀಗಂಧ
**ಹರಿಣ** – ಜಿಂಕೆ
**ಹರಿಣಕ್ರೀಡನ** – ಜಿಂಕೆಯಂತೆ ನೆಗೆದಾಡುವ ಒಂದು ಆಟ
**ಹರಿಣಧರ** – ಜಿಂಕೆಯ ಗುರುತನ್ನುಳ್ಳವನು, ಚಂದ್ರ
**ಹರಿಣಧರಹರಿಣ** – ಚಂದ್ರನಲ್ಲಿರುವ ಜಿಂಕೆ
**ಹರಿಣರಿಪು** – ಜಿಂಕೆಯ ವೈರಿ, ಸಿಂಹ
**ಹರಿಣಾಂಕ** – ಹರಿಣಧರ
**ಹರಿಣಾಂಕಮಂಡಲ** – ಚಂದ್ರಮಂಡಲ
**ಹರಿಣಾಕ್ಷಿ** – ಜಿಂಕೆಯದರಂತೆ (ಚಂಚಲವಾದ) ಕಣ್ಣುಳ್ಳವಳು
**ಹರಿಣಾಜಿನ** – ಜಿಂಕೆಯ ಧರ್ಮ
**ಹರಿಣಿ** – ಹೆಣ್ಣು ಜಿಂಕೆ; ಗಿಳಿಹಸುರು ಬಣ್ಣ
**ಹರಿಣನೇತ್ರೆ** – ಹರಿಣಾಕ್ಷಿ

**ಹರಿಣೀಯೂಥ** – ಜಿಂಕೆಗಳ ಗುಂಪು
**ಹರಿಣೇಕ್ಷಣೆ** – ಹರಿಣಾಕ್ಷಿ
**ಹರಿತ** – ಹಸಿರು ಬಣ್ಣ(ದ)
**ಹರಿತಶಿಲೆ** – ಪಚ್ಚೆಯ ಬಂಡೆ
**ಹರಿತಪರಿವೇಷ** – ಹೊಂಬಣ್ಣದ ಪ್ರಭಾವಲಯ
**ಹರಿತಮಣಿ** – ಮರಕತ ಮಣಿ
**ಹರಿತಾಂಕುರ** – ಎಳೆಯ ಗರಿಕೆ
**ಹರಿತಾಲ** – ಹಸಿರು ಪಾರಿವಾಳ
**ಹರಿತ್ಪ್ರದೇಶ** – ಹುಲ್ಲುಗಾವಲು
**ಹರಿದಶ್ವ** – ಹಸಿರು ಬಣ್ಣದ ಕುದುರೆಯವನು, ಸೂರ್ಯ
**ಹರಿದಿಕ್** – ಪೂರ್ವದಿಕ್ಕು
**ಹರಿದಿಗ್ವದನ** – ಹರಿದಿಕ್
**ಹರಿದ್ರತ್ನ** – ಹರಿತಮಣಿ
**ಹರಿದ್ರವನ** – ಅರಿಸಿನ ಗಿಡಗಳ ತೋಟ
**ಹರಿದ್ವಸು** – ಹರಿತಮಣಿ
**ಹರಿದ್ವ್ಯೂಹ** – ಎಲ್ಲ ದಿಕ್ಕುಗಳು
**ಹರಿನೀಲ(ಳ)** – ಇಂದ್ರನೀಲ ಮಣಿ
**ಹರಿನೀಲ(ಳ)ಚ್ಛವಿ** – ಇಂದ್ರನೀಲ ಮಣಿಯ ಕಾಂತಿ
**ಹರಿನೀಲ(ಳ)ದ್ಯುತಿ** – ಹರಿನೀಲ(ಳ)ಚ್ಛವಿ
**ಹರಿನೀಲರತ್ನ** – ಹರಿನೀಲ(ಳ)
**ಹರಿನೀಲ(ಳ)ವರ್ಣ** – ಕಡು ನೀಲಿ
**ಹರಿನೀಲೋ(ಳೋ)ಪಲ(ಳ)** – ಹರಿನೀಲ(ಳ)
**ಹರಿನೀಲ(ಳ)ಕುಟ್ಟಿಮ** – ಇಂದ್ರನೀಲದ ನೆಲಗಟ್ಟು
**ಹರಿನ್ಮಣಿ** – ಪಚ್ಚೆ
**ಹರಿನ್ಮುಖ** – ದಿಗಂತ
**ಹರಿಪದ** – ವಿಷ್ಣುವಿನ ಪಾದ; ಕುದುರೆಯ ಗೊರಸು; ವಾಯುಮಂಡಲ
**ಹರಿಪೀಠ** – ಸಿಂಹಾಸನ
**ಹರಿಪೌರುಷ** – ಸಿಂಹಪರಾಕ್ರಮ
**ಹರಿಬ** – ಕರ್ತವ್ಯ
**ಹರಿಬಲ** – ಕುದುರೆಯ ಪಡೆ; ಸಿಂಹಬಲ; (ಜೈನ) ವಾಸುದೇವನ ಸೈನ್ಯ
**ಹರಿಬವೆತ್ತು** – ಕರ್ತವ್ಯ ನಿರ್ವಹಣೆ ಮಾಡು
**ಹರಿಮುಖ** – ಕುದುರೆಯ ಬಾಯಿ
**ಹರಿಮೇಖಲೆ** – ಯಕ್ಷಿಣಿ
**ಹರಿಯ ವಲ್ಗನ** – ಕುದುರೆಯ ನಡಿಗೆಯ ಭೇದ
**ಹರಿವಂಶ** – ಸೂರ್ಯವಂಶ; ಕೃಷ್ಣನ ವಂಶ; ಸರ್ಪಸಂಕುಲ
**ಹರಿವಧು** – ಶಚೀದೇವಿ
**ಹರಿವರ್ಷ** – (ಜೈನ) ಜಂಬೂದ್ವೀಪದ ಏಳು ಭಾಗಗಳಲ್ಲಿ ಒಂದು, ಮಧ್ಯಮ ಭೋಗಭೂಮಿ, ನೋಡಿ 'ಜಂಬೂದ್ವೀಪ'
**ಹರಿವಿಷ್ಟರ** – ಸಿಂಹಾಸನ
**ಹರಿವ್ರಜ** – ಕುದುರೆಗಳ ಸಮೂಹ
**ಹರಿಶಕ್ತಿ** – ಸಿಂಹಬಲ(ವುಳ್ಳವನು)
**ಹರಿಶಿಶು** – ಸಿಂಹದ ಮರಿ
**ಹರಿಶೌರ್ಯ** – ಹರಿಶಕ್ತಿ
**ಹರಿಸತಿ** – ಶಚೀದೇವಿ
**ಹರಿಸುತ** – ವಿಷ್ಣುವಿನ ಮಗ, ಮನ್ಮಥ; ಇಂದ್ರನ ಮಗ, ಅರ್ಜುನ
**ಹರಿಸೈನ್ಯ** – ಕುದುರೆಗಳ ಪಡೆ
**ಹರಿಹೇಷಾಧ್ವನಿ** – ಕುದುರೆಯ ಕೆನೆತ
**ಹರೆಯಂಬಡೆ** – ಯೌವನವನ್ನು ಹೊಂದು
**ಹರ್ಮ್ಯ** – ಉಪ್ಪರಿಗೆ
**ಹರ್ಮ್ಯಾಗ್ರ** – ಉಪ್ಪರಿಗೆಯ ಮಚ್ಚು
**ಹರ್ಮ್ಯೋರ್ಧ್ವ** – ಹರ್ಮ್ಯಾಗ್ರ
**ಹರ್ಯಕ್ಷ** – ಸಿಂಹ
**ಹರ್ಷ** – ಆನಂದ
**ಹರ್ಷಗರ್ಭ** – ಆನಂದ ತುಂಬಿದುದು
**ಹರ್ಷಪ್ರಕರ್ಷ** – ಸಂತಸದ ಆಧಿಕ್ಯ
**ಹರ್ಷಾಶ್ರು** – ಆನಂದದ ಕಣ್ಣೀರು
**ಹರ್ಷೋತ್ಕರ್ಷಚಿತ್ತ** – ಆನಂದ ತುಂಬಿದ ಮನಸ್ಸು(ಳ್ಳವನು)
**ಹರ್ಷೋತ್ಕರ್ಷಿತ** – ಅತಿಶಯ ಸಂತೋಷದಿಂದ ಕೂಡಿದ
**ಹಲ(ಳ)** – ನೇಗಿಲು
**ಹಲಕು** – ಮರ ಹತ್ತು; ಕೆಳದವಡೆ ಬಲರಾಮನ ಆಯುಧ
**ಹಲ(ಳ)ಧರ** – ಬಲರಾಮ; (ಜೈನ) ವಾಸುದೇವಸಹೋದರ ಬಲರಾಮ
**ಹಲಸಿಗ** – ವೈದ್ಯ
**ಹಲಾಯುಧ** – ಹಲ(ಳ)ಧರ
**ಹಲ(ಳ)** – ನೇಗಿಲು
**ಹಲಿ** – ನೇಗಿಲು ಹಿಡಿದವನು, ರೈತ; ಬಲರಾಮ; (ಜೈನ) ವಾಸುದೇವಸಹೋದರ
**ಹಲಿ(ಳ)ಕ** – ರೈತ, ಒಕ್ಕಲಿಗ
**ಹಲುಕು** – ಮರ ಹತ್ತು; ದೇಹದ ಒಂದು ಭಾಗ
**ಹಲ್ಲಕ** – ಕೆಂದಾವರೆ
**ಹಲ್ಲಣ** – ಪಲ್ಲಣ, ಜೀನು
**ಹಸಿ** – ಕ್ಷುಧೆಗೊಳ್ಳು; ಒದ್ದೆಯಾಗಿರುವುದು
**ಹಸುಬ** – ಪಸುಂಬ, ಶಕುನದ ಹಕ್ಕಿ
**ಹಸ್ತ** – ಕೈ; ಸಮೂಹ; ಒಬ್ಬ ರಾಕ್ಷಸನ ಹೆಸರು
**ಹಸ್ತಚ್ಛಟಾ** – ಚಪ್ಪಾಳೆ
**ಹಸ್ತನ್ಯಸ್ತ** – ಕೈಗೊಪ್ಪಿಸಿದ
**ಹಸ್ತಸ್ವಸ್ತಿಕ** – ಅಡ್ಡಡ್ಡಲಾಗಿ ಕೈಗಳನ್ನಿಡುವುದು
**ಹಸ್ತಾಗ್ರ** – ಕೈಬೆರಳು; ಸೊಂಡಿಲು
**ಹಸ್ತಾಮಳಕ** – ಅಂಗೈ ನೆಲ್ಲಿಕಾಯಿ; ತುಂಬ ಸುಲಭ
**ಹಸ್ತಾರ್ಕ** – ಹಸ್ತಾನಕ್ಷತ್ರದಲ್ಲಿರುವ ಸೂರ್ಯ
**ಹಸ್ತಾವಲಂಬ** – ಕೈ ಆಸರೆ
**ಹಸ್ತಿ** – ಸೊಂಡಿಲಿರುವ, ಆನೆ
**ಹಸ್ತಿನಿ** – ಹೆಣ್ಣು ಆನೆ
**ಹಸ್ತಿಪಕ** – ಮಾವುತ

**ಹಸ್ತಿಮಶಕಾಂತರ** – ಆನೆ–ಸೊಳ್ಳೆಗಳ ನಡುವಣ ವ್ಯತ್ಯಾಸ; ತುಂಬ ಅಂತರ –
**ಹಸ್ತಿಯೂಥ** – ಆನೆಗಳ ಗಿಂಡು
**ಹಸ್ತಿರದ**– ಆನೆಯ ದಂತ
**ಹಸ್ತಿಶಾಲೆ** – ಆನೆಯ ಲಾಯ
**ಹಳಚಿಕೆ** – ಶುಭ್ರತೆ
**ಹಳಹಳಿಕೆ** – ತೇಜಸ್ಸು
**ಹೞಿವಿಗೆ** – ಪೞಿವಿಗೆ, ಬಾವುಟ
**ಹಜ್ಜೆ** – ಹೊಗೆಯಲ್ಲಿ ಹಾಕಿಡುವುದು
**ಹಾಟಕ** – ಚಿನ್ನ
**ಹಾಟಕಪೀಠ** – ಚಿನ್ನದ ಪೀಠ
**ಹಾಟಕವೆಟ್ಟು** – ಚಿನ್ನದ ಬೆಟ್ಟ, ಮೇರು
**ಹಾದಂಡ** – ವಾಗ್ದಂಡ
**ಹಾದಿಗೆಡು** – ದಾರಿ ತಪ್ಪು
**ಹಾನ** – ತ್ಯಾಗ; ತ್ಯಜಿಸುವಿಕೆ
**ಹಾಮಾದಂಡ** – (ಜೈನ) ವಾಗ್ದಂಡ; ಹಾ, ಮಾ ಎಂಬ ಶಬ್ದಗಳನ್ನು ಹೇಳುವುದರ ಮೂಲಕ ಕೊಡುತ್ತಿದ್ದ ಶಿಕ್ಷೆ
**ಹಾಮಾಧಿಕ್ಕಾರದಂಡ** – ಹಾಮಾದಂಡ
**ಹಾರ** – ನೂರೆಂಟು ಎಳೆಗಳ ಮಾಲೆ; ಮನೋಹರವಾದ
**ಹಾರಯಷ್ಟಿ** – ನೂರೆಂಟು ಎಳೆಗಳ ಮುತ್ತಿನ ಹಾರ
**ಹಾರವ** – 'ಹಾ' ಎಂಬ ಶಬ್ದ
**ಹಾರಿ** – ಮನೋಹರ
**ಹಾರಿಗೊಳ್** – ಆಕರ್ಷಕವಾಗು
**ಹಾರಿದ್ರಕ** – ಅರಿಸಿನ
**ಹಾರೀತ(ಕ)** – ಪಾರಿವಾಳ
**ಹಾಱಿಗೆ** – ಕರಡಿಗೆ
**ಹಾವ** – ಶೃಂಗಾರ ಚೇಷ್ಟೆ
**ಹಾವಭಾವ** – ವಿಲಾಸ
**ಹಾಸ** – ನಗೆ
**ಹಾಸಂಗಿ** – ಪಾಸಂಗೆ, ಪಗಡೆ ಹಾಸು
**ಹಾಸ್ತಿಕ** – ಮಾವುತ; ಆನೆಗಳ ಹಿಂಡು
**ಹಾಸ್ಯಂಗೆಯ್** – ಗೇಲಿಮಾಡು
**ಹಾಸ್ಯಭಾರ** – ಅತಿರೇಕವಾದ ಗೇಲಿ
**ಹಾಹಾಕ್ರಂದ(ನ)** – ಹಾಹಾಕಾರ; ಗಾಬರಿ
**ಹಾಹಾಕ್ರಂದನಂಗೆಯ್** – ಪ್ರಲಾಪಿಸು
**ಹಾಹಾರವ** – ಹಾಹಾಕ್ರಂದ(ನ)
**ಹಾೞೂರ್** – ನಾಶಗೊಂಡ ಊರು
**ಹಾೞ್ಮನೆಹಾೞಿ** – ತುಡುಗುಣಿ ನಾಯಿ
**ಹಿಂಡು** – ಮುಷ್ಟಿಯಿಂದ ಹಿಸುಕು; ದನಗಳ ಗುಂಪು
**ಹಿಂತಾಲ(ಳ)**– ಒಂದು ಬಗೆಯ ತಾಳೆಯ ಮರ
**ಹಿಂದೋಲ(ಳ)** – ಉಯ್ಯಾಲೆ; ಒಂದು ರಾಗ
**ಹಿಂಸಾರುಚಿ** – ಪರರಿಗೆ ತೊಂದರೆ ಕೊಟ್ಟು ಆನಂದಿಸುವ ಸ್ವಭಾವ
**ಹಿಂಸಾವಿರಹಿತ** – ಹಿಂಸೆಯನ್ನು ತ್ಯಜಿಸಿದವನು
**ಹಿಂಸೆ** – ತೊಂದರೆ
**ಹಿಟಕವಾಡು** – ಚೇಷ್ಟೆಮಾಡು
**ಹಿಡಿಂಬಾತಕ** – ಹಿಡಿಂಬನನ್ನು ಕೊಂದವನು, ಭೀಮ
**ಹಿತ** – ಸಂತೋಷದಾಯಕವಾದುದು
**ಹಿತಮಿತ** – ಸಂತಸದಾಯಕವಾಗಿಯೂ ಹೆಚ್ಚಲ್ಲದೆಯೂ ಇರುವ
**ಹಿತಕರ** – ಸಂತೋಷಕರ
**ಹಿತವ** – ಒಳ್ಳೆಯದನ್ನು ಬಯಸುವವನು
**ಹಿತವಚಃಪ್ರಿಯ** – ಇಳ್ಳೆಯ ಮಾತುಗಳನ್ನು ಇಷ್ಟಪಡುವವನು
**ಹಿತಾರ್ಥಂ** – ಒಳ್ಳೆಯದಕ್ಕಾಗಿ
**ಹಿಪ್ಪದಿಕೆ** – ಬೆಳಗಿನ ಜಾವ
**ಹಿಪ್ಪೆ** – ರಸಹೀನವಾದುದು
**ಹಿಮ** – ಇಬ್ಬನಿ; ಚಳಿ; ಹಿಮಾಲಯಪರ್ವತ;
**ಹಿಮಕರ** – ಚಂದ್ರ; ಕರ್ಪೂರ
**ಹಿಮಕರಕಾಂತ** – ಚಂದ್ರಕಾಂತಶಿಲೆ
**ಹಿಮಕರಬಿಂಬ** – ಚಂದ್ರಬಿಂಬ
**ಹಿಮಕರಮಂಡಲ(ಳ)** – ಚಂದ್ರಮಂಡಲ
**ಹಿಮಕರೋಪಳ** – ಚಂದ್ರಕಾಂತಶಿಲೆ
**ಹಿಮಕಿರಣ** – ತಂಪಾದ ಕಾಂತಿ; ಚಂದ್ರ
**ಹಿಮಕೃತ್** – ಚಂದ್ರ
**ಹಿಮಕೃನ್ಮಂಡಲ** – ಹಿಮಕರಮಂಡಲ(ಳ)
**ಹಿಮಗಿರಿ** – ಹಿಮಾಲಯ ಪರ್ವತ
**ಹಿಮಚೂರ್ಣ** – ಕರ್ಪೂರದ ಪುಡಿ
**ಹಿಮತಾಂಬೂಲ** – ಕರ್ಪೂರಮಿಶ್ರಿತ ತಾಂಬೂಲ
**ಹಿಮದೀಧಿತಿ** – ಬೆಳುದಿಂಗಳು
**ಹಿಮದ್ಯುತಿ** – ಹಿಮದೀಧಿತಿ
**ಹಿಮಪವನ** – ತಂಗಾಳಿ
**ಹಿಮಪ್ರಭ** – ಚಂದ್ರ
**ಹಿಮರಶ್ಮಿ** – ತಂಪು ಕಿರಣ; ಚಂದ್ರ
**ಹಿಮರುಕ್ಬಿಂಬ** – ಹಿಮಕರಬಿಂಬ
**ಹಿಮರುಗ್ಮೌಳಿ** – ಹಿಮರುಕ್ – ಮೌಲಿ, ತಲೆಯಲ್ಲಿ ಚಂದ್ರನನ್ನು ಧರಿಸಿದವನು, ಶಿವ–
**ಹಿಮರುಚಿ** – ಹಿಮರಶ್ಮಿ
**ಹಿಮರುಚಿಗ್ರಾವ** – ಚಂದ್ರಕಾಂತಶಿಲೆ
**ಹಿಮರೋಚಿ** – ಹಿಮರಶ್ಮಿ
**ಹಿಮವತ್ಕಾಲ(ಳ)** – ಚಳಿಗಾಲ
**ಹಿಮವತ್ಕುತ್ಕೀಲ** – ಹಿಮಾಲಯ ಪರ್ವತ
**ಹಿಮವತ್ತಟ** – ಹಿಮಾಲಯದ ತಪ್ಪಲು
**ಹಿಮವದ್ಗಿರಿ** – ಹಿಮಾಲಯಪರ್ವತ
**ಹಿಮವನ್ನಗ** – ಹಿಮವತ್+ನಗ, ಹಿಮವದ್ಗಿರಿ
**ಹಿಮವರ್ಷ** – ಇಬ್ಬನಿಯ ಮಳೆ
**ಹಿಮವಾರವಾಣ** – ಹಿಮಕವಚವುಳ್ಳುದು, ಹಿಮಾಲಯಪರ್ವತ
**ಹಿಮವಿಭವ** – ಅಧಿಕ ಚಳಿ
**ಹಿಮಶಿಖರಿ** – ಹಿಮವದ್ಗಿರಿ
**ಹಿಮಶೈಲ(ಳ)** – ಹಿಮವದ್ಗಿರಿ

**ಹಿಮಶೈಲೇಂದ್ರ** – ಹಿಮವದ್ಗಿರಿ
**ಹಿಮಸಮಯ** – ಚಳಿಗಾಲ
**ಹಿಮಸಮಯಪತಿ** – ಚಳಿಗಾಲದ ಒಡೆಯ, ಚಂದ್ರ
**ಹಿಮಾಂಬು** – ತಣ್ಣೀರು
**ಹಿಮಾಂಶು** – ಹಿಮರಶ್ಮಿ
**ಹಿಮಾಂಶುಮಂಡಲ** – ಚಂದ್ರಮಂಡಲ
**ಹಿಮಾಂಶುರಶ್ಮಿ** – ಬೆಳುದಿಂಗಳು
**ಹಿಮಾಂಶುವಂಶ** – ಚಂದ್ರವಂಶ
**ಹಿಮಾಂಶುಶೇಖರ** – ಚಂದ್ರನನ್ನು ಧರಿಸಿದವನು, ಶಿವ
**ಹಿಮಾಚಲ(ಳ)** – ಹಿಮಾಲಯ ಪರ್ವತ
**ಹಿಮಾನಿ** – ಮಂಜಿನ ಒಟ್ಟಿಲು
**ಹಿಮಾನಿಲ(ಳ)** – ತಂಗಾಳಿ
**ಹಿಮೋಪಲ(ಳ)** – ಚಂದ್ರಕಾಂತಶಿಲೆ
**ಹಿರಣ್ಯ** – ಚಿನ್ನ
**ಹಿರಣ್ಯಕ(ಶಿಪು)** – ಒಬ್ಬ ರಾಕ್ಷಸ
**ಹಿರಣ್ಯಗರ್ಭ** – ಬ್ರಹ್ಮ; (ಜೈನ) ಆದಿ ತೀರ್ಥಂಕರ
**ಹಿರಣ್ಯರೇತ** – ಅಗ್ನಿ
**ಹಿರಣ್ಯಾಕ್ಷ** – ಒಬ್ಬ ರಾಕ್ಷಸ
**ಹಿರಣ್ಯೋತ್ಕೃಷ್ಟಜನ್ಮ** – (ಜೈನ) ಒಂದು ಗರ್ಭಾನ್ವಯಕ್ರಿಯೆ, ಜಿನಜನನಿಯ ಗರ್ಭದಲ್ಲಿ ಅವತರಿಸುವುದು
**ಹಿವ** – (ಹಿಮ) ಮಂಜು
**ಹಿವಗದಿರ** – ಹಿಮಗದಿರ, ಚಂದ್ರ
**ಹಿಟಿ** – ಹಿಂಡು
**ಹೀನ** – ಕ್ಷುದ್ರವ್ಯಕ್ತಿ
**ಹೀನತೆ** – ಕ್ಷುದ್ರತೆ
**ಹೀನಬಲ** – ಅಲ್ಪಬಲವುಳ್ಳವನು
**ಹೀನಾಂಗ** – ಅಂಗವಿಕಲ
**ಹೀನಾಧಿಕ** – ಕಡಿಮೆ ಮತ್ತು ಹೆಚ್ಚು
**ಹೀನಾಧಿಕವಿನಿಮಾನ** – (ಜೈನ) ಆಸ್ತೇಯದ ಅತಿಚಾರಗಳಲ್ಲಿ ಒಂದು, ವ್ಯಾಪಾರದಲ್ಲಿ ತೂಕ–ಅಳತೆಗಳಲ್ಲಿ ಕಡಿಮೆ ಮಾಡುವುದು
**ಹೀನಿ** – ಅವಿವೇಕಿ
**ಹೀರ್** – (ಪಿರ್) ಕುಡಿ
**ಹೀರ** – ವಜ್ರ
**ಹೀಲಿ** – ನವಿಲುಗರಿ
**ಹುಂಕಾರ** – 'ಹುಂ' ಎಂಬ ಶಬ್ದ
**ಹುಂಕೃತಿ** – ಹುಂಕಾರ
**ಹುಂಕೊಳ್** – ಹೂಗುಟ್ಟು
**ಹುಂಡಸಂಸ್ಥಾನ** – (ಜೈನ) ಶರೀರದ ಅವಯವಗಳನ್ನು ಕುರೂಪಗೊಳಿಸುವ ಕರ್ಮಗಳ ಉದಯ
**ಹುಂಡಾವಸರ್ಪಿಣಿ** – (ಜೈನ) ಅನೇಕ ಅವಸರ್ಪಿಣಿಗಳ ನಂತರ ಬರುವ ಕಾಲಾವಧಿ
**ಹುತ** – ಹೋಮ ಮಾಡಲ್ಪಟ್ಟ; ಹವಿಸ್ಸು
**ಹುತವಹ** – ಅಗ್ನಿ
**ಹುತವಹಬಾಣ** – ಆಗ್ನೇಯಾಸ್ತ್ರ
**ಹುತವಹವರ್ಷಾಗ್ನಿಯಂತ್ರ** – ಬೆಂಕಿಯನ್ನುಗುಳುವ ಯಂತ್ರ
**ಹುತವಹಸಖ** – ಬೆಂಕಿಯ ಗೆಳೆಯ, ವಾಯು
**ಹುತಾಗ್ನಿ** – ಯಜ್ಞದೀಕ್ಷಿತ
**ಹುತಾಶ(ನ)** – ಹವಿಸ್ಸನ್ನು ಸೇವಿಸುವವನು, ಅಗ್ನಿ
**ಹುತಾಶನಕುಂಡ** – ಹೋಮಕುಂಡ
**ಹುತಾಶನಪುತ್ರಿ** – ಬೆಂಕಿಯ ಮಗಳು, ದ್ರೌಪದಿ
**ಹುದುಗು** – ಅಡಗಿಕೊ
**ಹುರಿ** – ಒಣಗಿಸು; ಹಗ್ಗ
**ಹುಸಿ** – ಸುಳ್ಳು ಹೇಳು; ಸುಳ್ಳು
**ಹೂಂಕರಿಸು** – ರೋಷದಿಂದ ಹೂಂಕಾರ ಮಾಡು
**ಹೂಂಕಾರ** – ರೋಷದಿಂ ಹೂಂ ಎಂದು ಕೂಗುವ ಶಬ್ದ
**ಹೂಂಕಾರಂಗೆಯ್** – ಹೂಂಕರಿಸು
**ಹೂಂಕೃತ** – ಹೂಂಕಾರ
**ಹೂಂಕೊಳ್** – ಹೂ ಎನ್ನು, ಒಪ್ಪು
**ಹೂಜೆಗ** – ಅಸೂಯೆಪಡುವವನು
**ಹೂಜೆಗತನ** – ಹೊಟ್ಟೆಕಿಚ್ಚುಪಡುವುದು
**ಹೂಡು** – ಯೋಜಿಸು
**ಹೂನ್ಯ** – ಪುಣ್ಯ
**ಹೃಚ್ಛಲ್ಯ** – ಎದೆಗೆ ನಾಟಿದ ಬಾಣ
**ಹೃಜ್ಜಾತ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ
**ಹೃತ್ಕ್ಲೇಶ** – ಮನಸ್ಸಿನ ನೋವು
**ಹೃತ್ತಾಪ** – ಮನಸ್ಸಿನ ಕತ್ತಲೆ; ಅಜ್ಞಾನ
**ಹೃತ್ತಾಮಸ** – ಮನಸ್ಸಿನ ತಾಪ
**ಹೃತ್ತಿಮಿರ** – ಹೃತ್ತಾಮಸ
**ಹೃತ್ಸಂತಾಪ** – ಮನಸ್ಸಿನ ದುಗುಡ
**ಹೃತ್ಸಮುದ್ಭೂತ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ
**ಹೃದಯ** – ಮನಸ್ಸು
**ಹೃದಯಂಗಮ** – ಮನಮುಟ್ಟುವ
**ಹೃದಯಂಗುಡು** – ಮನಸ್ಸು ಕೊಡು, ಆಕರ್ಷಣೆಗೊಳ್ಳು
**ಹೃದಯಂಬುಗಿಸು** – ಮನಮುಟ್ಟುವಂತೆ ಮಾಡು
**ಹೃದಯಪ್ರಮೋದ** – ಮನಸ್ಸಿನ ಸಂತೋಷ
**ಹಧರಯಪ್ರಿಯ** – ಮನಸ್ಸಿಗೆ ಬೇಕಾದವನು
**ಹೃದಯಬಂಧ** – ಎದೆ ಕಟ್ಟು
**ಹೃದಯಭವ** – ಹೃತ್ಸಮುದ್ಭೂತ
**ಹೃದಯಸ್ಥಿತ** – ಮನಸ್ಸಿನಲ್ಲಿ ನೆಲೆನಿಂತ
**ಹೃದಯಾಗ್ನಿ** – ಮನಸ್ಸಿನಲ್ಲಿನ ಬೆಂಕಿ
**ಹೃದಯಾಧೀಶ** – ಮನಸ್ಸಿನ ಒಡೆಯ, ಪ್ರಿಯಕರ
**ಹೃದ್ಗತ** – ಮನವರಿಕೆಯಾದ
**ಹೃದ್ಗದ** – ಎದೆಬೇನೆ
**ಹೃದ್ಗೋಚರ** – ಮನಸ್ಸಿಗೆ ಕಾಣುವ
**ಹೃದ್ಭವ** – ಹೃತ್ಸಮುದ್ಭೂತ

**ಹೃದ್ಭೂ** – ಹೃತ್ಸಮುದ್ಭೂತ
**ಹೃದ್ರಾಜೀವ** – ಹೃದಯಕಮಲ
**ಹೃದ್ಯ** – ಚಿತ್ತಾಕರ್ಷಕವಾದ
**ಹೃದ್ಯವಿದ್ಯೆ** – ಆಕರ್ಷಣೆಯ ವಿದ್ಯೆ
**ಹೃದ್ಯಾಂಗಿ** – ಆಕರ್ಷಕ ರೂಪದವಳು
**ಹೃದ್ಯೋಗ** – ಮನಸ್ಸಿನ ಬಯಕೆ
**ಹೃದ್ವಲ್ಲಭ** – ಹೃದಯಾಧೀಶ
**ಹೃಷೀಕ** – ಇಂದ್ರಿಯ; (ಜೈನ) ಏಳು ಬಗೆಯ ನರಕಗಳಲ್ಲಿ ಒಂದು
**ಹೃಷ್ಟ** – ಆನಂದ ಹೊಂದಿದ
**ಹೃಷ್ಟತೆ** – ಸಂತೋಷ
**ಹೆಕ್ಕಳ** – ಸಂಭ್ರಮ
**ಹೆಟ್ಟೆ** – ಹೆಂಟೆ
**ಹೆಡಗೆಗೋಂಟೆ** – ಬುಟ್ಟಿಯ ಆಕಾರದಲ್ಲಿರುವ ಕೋಟೆ
**ಹೆಪ್ಪಿಡು** – ಹಾಲಿಗೆ ಮೊಸರು ಬೆರಸು
**ಹೆಱೆಸೂಡಿದ** – ಚಂದ್ರಶೇಖರ, ಶಿವ
**ಹೇತಿ** – ಆಯುಧ
**ಹೇತಿವಿದಾರಿಣಿ** – (ಜೈನ) ಶಸ್ತ್ರನಾಶಕ ವಿದ್ಯೆ
**ಹೇತು** – ಕಾರಣ
**ಹೇತುತ್ವ** – ಕಾರಣದಿಂದ ಕೂಡಿರುವುದು
**ಹೇತುಪದ** – ಕಾರಣಸ್ಥಾನ
**ಹೇತುಭೂತ** – ಕಾರಣ
**ಹೇದೆ** – ಭೂತ
**ಹೇಮ** – ಚಿನ್ನ
**ಹೇಮಂತ** – ಷಡೃತುಗಳಲ್ಲಿ ಒಂದು, ಚಳಿಗಾಲ
**ಹೇಮಕುತ್ಕೀಲ(ಳ)** – ಚಿನ್ನದ ಬೆಟ್ಟ, ಮೇರುಪರ್ವತ
**ಹೇಮಕೂಟ** – ಹಿಮಾಲಯದ ಉತ್ತರ ಪರ್ವತಪಂಕ್ತಿ
**ಹೇಮಗಿರಿ** – ಹೇಮಕುತ್ಕೀಲ(ಳ)
**ಹೇಮಜಾಳ** – ಚಿನ್ನದ ತೋರಣ
**ಹೇಮನಗ** – ಹೇಮಕುತ್ಕೀಲ(ಳ)
**ಹೇಮಪಟ್ಟಕ** – ಚಿನ್ನದ ಪೀಠ
**ಹೇಮಪದ್ಮ** – ಚಿನ್ನದ ಬಣ್ಣದ ಕಮಲ, ಹೊಂದಾವರೆ
**ಹೇಮಭೂಧ್ರ** – ಹೇಮಕುತ್ಕೀಲ(ಳ)
**ಹೇಮಸರೋಜ** – ಹೇಮಪದ್ಮ
**ಹೇಮಾಂಬುಜ** – ಹೇಮಪದ್ಮ
**ಹೇಮಾಂಬುರುಹಾಸ್ಯೆ** – ಹೊಂದಾವರೆಯಂತಹ **ಮುಖವುಳ್ಳವಳು**
**ಹೇಮಾಚಲ** – ಹೇಮನಗ
**ಹೇಮಾದ್ರಿಧನ್ವ** – ಮೇರುಪರ್ವತವನ್ನು ಬಿಲ್ಲನ್ನಾಗಿಸಿಕೊಂಡವನು, ಶಿವ
**ಹೇಮಾಸನ** – ಚಿನ್ನದ ಪೀಠ
**ಹೇಯ** – ಕ್ಷುಲ್ಲಕ
**ಹೇರಂಬ** – ಗಣಪತಿ
**ಹೇರಂಬಾಂಬೆ** – ಪಾರ್ವತಿ
**ಹೇರಿಗ** – (ಹೇರಕ) ಗೂಢಚಾರ
**ಹೇಲ** – ಸುಲಭ
**ಹೇಲಾ(ಳಾ)ಸಾಧ್ಯ** – ಆಟದಷ್ಟು ಸುಲಭವಾಗಿ ಗೆಲ್ಲಬಹುದಾದವನು
**ಹೇವ** – ಅಸಹ್ಯ
**ಹೇಷಾಘೋಷ** – ಕುದುರೆಯ ಕೆನೆತ
**ಹೇಷಾರವ** – ಹೇಷಾಘೋಷ
**ಹೇಷಿತ** – ಕುದುರೆಯ ಕೆನೆತ
**ಹೇಷೆ** – ಹೇಷಿತ
**ಹೇಸು** – ಅಸಹ್ಯಪಡು
**ಹೇಳ** – ಕ್ರೀಡೆ, ಆಟ
**ಹೇಳಾಂಚಿತ** – ಹೇಲಾ(ಳಾ)ಸಾಧ್ಯ
**ಹೇಳಾವಲೋಕನ** – ವಿಲಾಸದ ನೋಟ
**ಹೇೞುಹ** – ಹೇಳುವಿಕೆ
**ಹೈತಿಗ** – (ಪೈತೃಕ) ಪಿತೃಶ್ರಾದ್ಧ
**ಹೈಮ** – ಚಿನ್ನ; ತಂಪಾದ
**ಹೈಮಕ್ಷ್ಮಾಚಲ(ಳ)** – ಚಿನ್ನದ ಬೆಟ್ಟ; ಹಿಮಾಲಯಪರ್ವತ
**ಹೈಮನಗ** – ಹೈಮಕ್ಷ್ಮಾಚಲ(ಳ)
**ಹೈಮವತ** – ಹಿಮಾವೃತವಾದ
**ಹೈಮಶೈಲ** – ಹೈಮಕ್ಷ್ಮಾಚಲ(ಳ)
**ಹೈಮಾಂಬುಜ** – ಹೇಮಾಂಬುಜ
**ಹೈಮಾಚಲ(ಳ)** – ಹೈಮಕ್ಷ್ಮಾಚಲ(ಳ)
**ಹೇಮಾದ್ರಿ** – ಹೈಮಕ್ಷ್ಮಾಚಲ(ಳ)
**ಹೈಯಂಗವೀನ** – ಹೊಸದಾಗಿ ತೆಗೆದ ಬೆಣ್ಣೆ; ನವನೀತ
**ಹೈರಣ್ಯವತ** – (ಜೈನ) ಏಳು ಜನಪದಗಳಲ್ಲಿ ಒಂದು, ಒಂದು ಜಘನ್ಯಭೋಗಭೂಮಿ
**ಹೊಂಚು** – ಸಮಯಕ್ಕಾಗಿ ಕಾಯು
**ಹೊಂದು** – ಸಾಯು
**ಹೊಗೆ** – ಹೊಗೆಯುಂಟುಮಾಡು; ಧೂಮ
**ಹೊಗೆಮುಸುಡಾತ** – ಅಗ್ನಿ, ಬೆಂಕಿ
**ಹೊದೆ** – ಮುಚ್ಚು
**ಹೊಮ್ಮಚ್ಚು** – ಕುದುರೆಯ ಒಂದು ಬಗೆಯ ನಡಿಗೆ
**ಹೊರಡು** – ಹೊರಳು
**ಹೊರಳೆ** – ಸುತ್ತಾಟ
**ಹೊಲಗಿಡು** – ದಿಕ್ಕುತೋಚದಂತಾಗು
**ಹೊಲಬು** – ಪೊಲಂಬು, ಮಾರ್ಗ, ರಿತಿ
**ಹೊಲ್ಲಹಂಗೆಯ್** – ಕೇಡು ಮಾಡು
**ಹೋಗಾಡು** – ಬಿಸಾಡು
**ಹೋತಾರ** – ಋತ್ವಿಕ್ಕು, ಹೋಮ ಮಂತ್ರವನ್ನು ಹೇಳುವವನು
**ಹೋತೃ** – ಹೋತಾರ
**ಹೋದಗೆ** – ಒಂದು ಬಗೆಯ ಹಕ್ಕಿ
**ಹೋಮಕುಂಡ** – ಯಜ್ಞದ ಬೆಂಕಿಯಿರುವ ಗುಂಡಿ
**ಹೋಮಾಗ್ನಿ** – ಯಜ್ಞದ ಬೆಂಕಿ
**ಹ್ರದ** – ಮಡು

**ಹ್ರದಿನಿ** – ನದಿ
**ಹ್ರಸ್ವಗ್ರೀವ** – ಚಿಕ್ಕ ಕೊರಳು
**ಹ್ರಸ್ವಚೂಚುಕ** – ಚಿಕ್ಕ ಮೊಲೆತೊಟ್ಟು
**ಹ್ರಾದಿನೀ** – ನದಿ; ಮಿಂಚು; ವಜ್ರಾಯುಧ
**ಹ್ರೀ** – ಲಜ್ಜೆ; (ಜೈನ) ಒಬ್ಬ ದೇವತೆ
**ಹ್ಲಾದ** – ಸಂತೋಷ

## ಳ

**ಳತಾನೀಕ** – ಲತಾನೀಕ, ಬಳ್ಳಿಗಳ ಗುಂಪು

## ೞ

**ೞಂಡೆ** – ವಿಧವೆ
**ೞಚ್ಚೆ** – ಕೆಸರು
**ೞೞ** – 'ೞ' ಎಂಬ ಅಕ್ಷರ
**ೞಾಟಣ** – ಬಾವಿಯಿಂದ ನೀರೆತ್ತುವ ಗಾಲಿ
**ೞಿಕ್ಕಟ** – ವ್ಯರ್ಥವಾದ
**ೞಿಕ್ಕಟಂ** – ವ್ಯರ್ಥವಾಗಿ
**ೞುಂಜೆ** – ಒಂದು ಚರ್ಮವಾದ್ಯ
**ೞುಂಜೆವಾರಿಸು** – ೞುಂಜೆಯನ್ನು ಬಾರಿಸಿದಂತೆ ಹೊಡೆ
**ೞೆಂಚೆ** – ಅಂಬಾರಿ
**ೞೆಂಚೆ(ಯ)** – ಆನೆಕುದುರೆಗಳ ಪಕ್ಕರಕ್ಕೆ
**ೞೆಪ್ಪು** – ಏಟುಕೊಡು
**ೞೊಪ್ಪ** – ಪ್ರಾಣಿಗಳನ್ನು ಕೂಡಿಹಾಕುವ ಜಾಗ; ಗಲಭೆ
**ೞೊಪ್ಪಂಗೊಳ್** – ಆಶ್ರಯ ಪಡೆ
**ೞೊಬ್ಬು(ಬ್ಬೆ)** – ಚೂರು, ಹಳುಕು
**ೞೋಡಗ** – ವಿದೂಷಕ, ನಕಲಿ; ಮೂರ್ಖ
**ೞೋಡಗತನಂಗೆಯ್** – ಗೇಲಿ ಮಾಡು
**ೞೋಡಾಡಿಸು** – ಗೇಲಿಮಾಡು
**ೞೋಡಾಡು** – ಹೀಯಾಳಿಸು, ಗೇಲಿ ಮಾಡು
**ೞೋಡಿಸು** – ೞೋಡಾಡು

******

ಅನುಬಂಧ

## ಅರ್ಥಸಂದಿಗ್ಧತೆಯ ಶಬ್ದಗಳು

**ಅಂಜವಲೆ** – ಭೀತಿ; ತಲ್ಲಣ
**ಅಂಟು** – ತಾಕು
**ಅಂತರ್ಧನ** – ಸ್ವಂತ ಆಸ್ತಿ
**ಅಂತರ್ನಿಯುಕ್ತ** – ಅಂತಃಪುರದ ಮುಖ್ಯಾಧಿಕಾರಿ
**ಅಂತರ್ಮಣಿ** – ಆನೆಯ ಕೊರಳಿನಲ್ಲಿನ ಸುಳಿ
**ಅಘಾಳ** – ಪಾಪ
**ಅಕ್ಕಜ** – ಒಂದು ವಿಧದ ಹಕ್ಕಿ
**ಅಕ್ಕುಂದಲೆ** – ರಭಸದಿಂದ
**ಅಜನಿಸು** – ತಿರಸ್ಕರಿಸು
**ಅಟಲ** – ಅತಳ
**ಅಟ್ಟಿಸು** – ಹಿಡಿ
**ಅಟ್ಟುಂಗರೆ** – ಬಚ್ಚಿಟ್ಟುಕೊಂಡವರನ್ನು ಹಿಡಿಯುವ ಆಟ
**ಅಟ್ಟುಂಜಗಳ** – ಬೆನ್ನಟ್ಟಿ ಮಾಡುವ ಜಗಳ
**ಅಡಕಂಬೆರಸು** – ಅಳವಡಿಸು
**ಅಣಿಗ** – ಅಲಂಕಾರ ಮಾಡುವವನು
**ಅಣ್ಣ** – ತೊರೆ
**ಅತಿಳವಸ್ತ್ರ** –
**ಅನದೆ** – ನಿರ್ಗತಿಕಳು
**ಅನುತ್ತರೀಯಕಂಟಕ** – ದಾಟಲಸಾಧ್ಯವಾದ ಕಂಟಕಸಾಧನ
**ಅಪೂರ್ವಸಾಯಕ** – ಒಂದು ಬಗೆಯ ಬಾಣ
**ಅಪ್ರಿಣಾಕ** –
**ಅಮ್ಲಾನ** –
**ಅಭಿವಂದಿತಾರ್ಥ** –
**ಅರಿವುರಂ** – ಅರ್ಧಮರ್ಧ
**ಅಶ್ರುತ** – ಹಾವು
**ಅಸುಕರಂ** – ಅತಿಶಯ
**ಅಸುನೆಱಂ** – ಕೋಮಲ
**ಅಳಂಕೆಗೆಯ್** – ಅಲಂಕರಿಸು
**ಅಳಂಕೆಗೊಳ್** – ದೃಢವಾಗು
**ಅಱಸಿಲ್ಗಱೆ** –
**ಅಱೆಪಿ ಕಱೆಪಿ ಕಿಡಿಮಾಡು** –
**ಆಕಬಳ**–
**ಆಗುಳ** – ಆಕಳಿಕೆ
**ಆನೆವಾರು** – ಆನೆವಾಂಗು, ಆನೆಯನ್ನು ಪಳಗಿಸುವ ವಿದ್ಯೆ
**ಆಯಿಲ** – ರೋಗ
**ಆವಗೆ** – ಆ+ಬಗೆ
**ಆಸುಕರ _ ಆಶುಕರ, ವೇಗ, ಜೋರು**–
**ಆಳಜಾಳ** – ಭಿನ್ನಾಭಿನ್ನ
**ಇಂಚೆ** – ಹಿಂಸೆ
**ಇಕ್ಷುದಂಡಫಣಿತ** – ಕಬ್ಬು ಕತ್ತರಿಸುವ ಪಣ
**ಇಡುಮುಡುಕೆನೆ** – ಮುರಿದು ಬೀಳುವಂತೆ
**ಇಱಹು** – ಅವಕಾಶ
**ಈಂಟುಜಳಧಿ** – ಕುಡಿಯುವ ನೀರಿನ ಸಮುದ್ರ(?)
**ಈರ್ಪು** – ತೃಪ್ತಿ
**ಉಂಕೆ** – ಒಂದು ಜಾತಿಯ ಹಕ್ಕಿ
**ಉಂಡಿಗೆವಾದರ್** –
**ಉಕ್ಕೆವ** – ಠಕ್ಕು, ಮೋಸ
**ಉಡಮೊಗ** –
**ಉಡುಕು** – ಆಧಿಕ್ಯ, ಹೆಚ್ಚಳ
**ಉಣ್ಣಪಡು** – ಉಣ್ಣದೆ ಉಪವಾಸ ಮಲಗು
**ಉತ್ತಾನ**–ಶಯಿತ – ಏಳುವುದು ಮಲಗುವುದು–
**ಉದ್ಧೃತಗೋತ್ರಾಭಿಮುಖಂ** –
**ಉನ್ನುನ್ನು** – ಅಧಿಕಾಧಿಕವಾಗಿ
**ಉಪನಿಟಿಲ** – ಹಣೆಯ ಪಕ್ಕಭಾಗ
**ಉಪಯೋಗಾಸ್ತ್ರ** –
**ಉಯಲ್** – ಪಾಯಸ
**ಉರುಳಗುರುಳ್** – ಗುಂಗುರು ಕೂದಲು
**ಉಸಿರ್ಪತ್ತಿಲ್ಲದೆ** – ಉಸಿರಾಡಲು ಅವಕಾಶವಿಲ್ಲದೆ
**ಉಸಿರ್ಪತ್ತು** – ಉಸಿರಿನ ಸಂಬಂಧ
**ಉಳ್ಕೊಳ** –
**ಉಱೆಯಱೆ** –
**ಉಱು** – (ಯೋಗ್ಯವಾಗಿ) ಇರು
**ಎಕ್ಕಸರ** – ಕತ್ತಿವರಸೆಯ ಒಂದು ಬಗೆ
**ಎಡೆವಱಂ** –
**ಎಣ್ಬೆರಲಪಟ್ಟ**–
**ಐಸರ** – ಐದೆಳೆ ಸರ
**ಒಯ್ಯನೊಯ್ಯನೆ** – ಬರಬರುತ್ತ
**ಓವದೆ** – ತಪ್ಪದೆ
**ಕಕ್ಕರ** –
**ಕಕ್ಕರಸಂಜೆ** – ಕಕ್ಕಸರಂಜೆ
**ಕಕ್ಕುಂಬ** –
**ಕಡ್ಡುವಂದ** – ಗಡ್ಡ ಬಂದ
**ಕದ್ದವಣೆ** –
**ಕಪ್ಪಂಗವಿ** –
**ಕಮರಿಧ** – ಮೋಡ; ರಾಹು
**ಕರೆ** – ಸಾರು
**ಕಲ್ಲುರಿಗ** – ಮಿಠಾಯಿ ಮಾಡುವವನು; ಇಟ್ಟಿಗೆ ಸುಡುವವನು
**ಕಲ್ಲೆ** –
**ಕವಯರ** – ಕೈವಾರ
**ಕಱುತ್ತ** – ಕಪ್ಪಾದ
**ಕಟಿಲೆಗಟ್ಟು** –
**ಕಳಂಚು** –
**ಕಟ್ತಿಕೊಡೆ** –
**ಕಾಚಕಿಲ್ಯ** –
**ಕಾಮಾಂಗ** – ಮದ್ಯ
**ಕಾಲ್ಗುತ್ತು** – ಪರೀಕ್ಷಿಸು
**ಕಾಸಟ** – ಕೀಳುಬಟ್ಟೆ, ಕವಡೆ

**ಕಾಳ್ಮೊರೆ**–
**ಕಿತ್ತಂ** –
**ಕಿತ್ತಮ್ಮ** – ಕೃತ್ರಿಮ, ಸಣ್ಣತನ
**ಕಿವರಿತನ** – ಜಿಪುಣತನ
**ಕಿಸುಸೆರೆವರಿದ** – ಕೆಂಪಾದ
**ಕಿಱುಮುಱುಕ** – ಸ್ವಲ್ಪ ಅಂದ
**ಕಿಱುವಿಡು** – ಸಂತೋಷದಿಂದ ಧ್ವನಿಮಾಡು
**ಕೀಕೆಲ್** –
**ಕೀಳ್ಗಟ್ಟಿ** –
**ಕೀೞ್ತಿರವಟ್ಟ** – ಅಡಿಪಾಯ
**ಕುಕ್ಕುಂಬ** –
**ಕುಟ್ಟೆಗೋಲ್** – ಚರ್ಮದ ಪಟ್ಟಿ
**ಕುಡಿಪು** – ಕುಡಿತ
**ಕುತ್ತಳೆ** – ಸಣ್ಣ ಅಳತೆ
**ಕುತ್ತುರಿಸು** –
**ಕುಮ್ಮರಿ** –
**ಕುಸುಂಕುರು** – ಪರಾಗ, ಹುಡಿ
**ಕುಱುಂಬು** –
**ಕುೞಿವಟ್ಟು** – ಆಭರಣ
**ಕೂಕಂಬ** – ಒಂದು ಮರದ ಹೆಸರು
**ಕೂಚ** –
**ಕೂರವ** –
**ಕೆಂಗಾಱಿ** – ಕೆಂಪು ಆಭರಣ
**ಕೆಯ್ವರಿ** – ಕೈವರಿ, ಕೈಮೀರು
**ಕೆಯ್ವಗೆ** – ಕೈಬಗೆ, ಕಾಳಗದ ಒಂದು ಬಗೆ
**ಕೆಯ್ವೊಡೆ** –
**ಕೆಲಜಂಕೆ** – ಕಾಳಗದ ಒಂದು ವರಸೆ
**ಕೆಸಱ ಕಡಿತ** –
**ಕೆೞ್ವು** – ಪದರ
**ಕೆೞ್ವು** – ಕೆರ್ಪು, ಪಾದರಕ್ಷೆ
**ಕೊಂಕುಱಿಲೆ** – ಒಂದು ಜಾತಿಯ ನೀರ ಹಕ್ಕಿ
ಕೊಂಕುಱುಗಱಿ; ಹೇಸರಗತ್ತೆ
**ಕೊಂಕೊಳಲೆ** – ಒಂದು ಜಾತಿಯ ನೀರ ಹಕ್ಕಿ
ಕೊಡಸಾರಿ
**ಕೊರಳ** – ಒಂದು ಬಗೆಯ ಧಾನ್ಯ, ಕೊರಲೆ
**ಕೊಲ್ಸೇಡುಗೊಳ್** –
**ಕೊಳತ** – ಪರಿಮಳ ದ್ರವ್ಯವಿಶೇಷ
**ಕೋಟಿವೇದಿ** – ವರ್ಗವನ್ನು ತಿಳಿಸು
**ಕೋಳಕಾಳಕಾಱ** – ಕೋಳಿಯನ್ನು ಹಿಡಿಯುವ
ಒಂದು ಬಗೆಯ ಚಿರತೆ
**ಕೋಳ್ವಟ್ಟಣ** – ಅತಿ ಪೀಡನ
**ಕ್ಷೇತ್ರಘಾಟ** – ಕ್ಷೇತ್ರದ ಗ್ರಿಡಿ
**ಗಂಡಗತ್ತರಿ** – ಕತ್ತು ಕತ್ತರಿಸಲು ಬಳಸುವ
ಆಯುಧ
**ಗರವೇಟ** – ಹೆಚ್ಚಿನ ಪ್ರೀತಿ
**ಗರವೇಟಗಾರ್ತಿ** – ಹೆಚ್ಚು ಅನುರಾಗವಿರುವವಳು
**ಗರೆವಱಿ** – ಸಾಲನ್ನು ಕತ್ತರಿಸು
**ಗರ್ಘರಿಕೆ** – ಒಂದು ಬಗೆಯ ವಾದ್ಯ
**ಗಲ್ಲಂಗುಱಿಗೊಳ್** – ಕೆನ್ನೆ ತಿವಿ; ಬುದ್ಧಿ ಹೇಳು
**ಗಳಕುಳಮಾಗು** – ಚಲ್ಲಾಪಿಲ್ಲಿಯಾಗು
**ಗಾವುಳ** – ಗುಂಪು
**ಗಾಹು** – ಗುರಿ
**ಗಿಜ್ಜಳ** –
**ಗಿಬ್ಬಡಿ** – ಗಿರ್ಬಡಿ, ಗಿರಗಿರನೆ ಹೊಡೆ, ಗುರಿಯಿಟ್ಟು
ಹೊಡೆ
**ಗುಂಡಃ** – ಗುಂಡುಕಲ್ಲು
**ಗುಜ್ಜರಿಗಱಿ** –
**ಗುಱುಗೆಯರ್** –
**ಗೊಜ್ಜಗೊಜ್ಜರು** – ಅಜ್ಜಪಜ್ಜರ ಜೊತೆ ಬರುವ
ನಿರರ್ಥಕಶಬ್ದ
**ಗೋದಾಮುಖ** –
**ಗೋಲಂಗುಡಿ** – ಗೋಲಂಗುಡಿ, ಗೊಟ್ಟದಿಂದ ಎತ್ತಿ
ಕುಡಿ
**ಗೊವರ** – ಕುಮಾರ
**ಗೋಪುಚ್ಛೆ** –
**ಚಕ್ರವರ್ತಿಪ್ರಧಾನ** – ರಾಜಾಧಿರಾಜ
**ಚಗಟಗಳೆ** –
**ಚಟ್ಟಿಸು** – ಸೆಡೆ
**ಚತ್ರಕೀಯ** –
**ಚಲ್ಲಿ** – ಚಲನೆ
**ಚಾತಬೊಕ್ಕಣಂಗಟ್ಟು** –
**ಚಾಪಿ** –
**ಚಾರಿಸು** –
**ಚಾಂತ್ರಕ್ರೋಯ** –
**ಚಿಬ್ಬಸಲೆ** – ಚಿಕ್ಕ ಹಸಲೆ
**ಚೈತ್ರಾದೀಪ** –
**ಚೋಳಂಗಿ** – ರವಿಕೆ ಶಾಸ್ತ್ರ
**ಚೌತ** – ಉಪವಾಸ ವ್ರತ
**ಚೌತ** – ಆಧಿಕ್ಯ; ಹೆಚ್ಚಳ; ಅಮಾನ್ಯ
**ಜಂಕೆ** –
**ಜಟಮಟಕ** – ಮೋಸಗಾರ
**ಜಟಮಟಸು** – ಸಡಗರಪಡು
**ಜಯಲಂಗ** –
**ಜಿಂಜಿಣಿ** – ಹೊಂದಿಕೆ, ಸಂಬಂಧ; ತಾಪ
**ಉಷ್ಣತೆ**–
**ಜೊತ್ತಿಸು** –
**ಡಂಕಿಸು** –
**ಡಾಳ** – ಪಗಡೆ ದಾಳ; ದಾಯ
**ಡಂಕಿಸು** –
**ಡೊಣೆವು** – (ಗಾಯದ) ಬಿಲ
**ತಗರ್ತಲೆ** –
**ತಗೆವುಗಿಲ್** –
**ತಡಂಗ** – ತಟಾಕ
**ತಡಕು** –

**ತಡುಮಾಡು** – ಧುಮುಕು
**ತತ್ತಪಣಂ** – ತತ್+ತಪನ(ಣ)
**ತತ್ತುಪಣಂಗೆಯ್** – ಜೊತೆಗೊಳಿಸು
**ತಪೋಪಳಂ** –
**ತರಕಸ** – ಭಲ್ಲೆ
**ತಳವರ್ಗ** – ಇಂದ್ರಿಯವರ್ಗ
**ತಳ** – ಕಾಣಿಸಿಕೊ
**ತಟೆಗೋಂಟೆ** – ಮರದ ದಿಮ್ಮಿಗಳಿಂದ ಮಾಡಿದ ಕೋಟೆ
**ತಾಟಿಲ್ಗಳ್** – ಗೋಣಿಯ ತಾಟುಗಳು, ಡೇರಾಬಟ್ಟೆ
**ತಿಗುಳ್** – ತೊಗಟೆ
**ತಿವಳವಟ್ಟ** –
**ತಿಟಿನೀರ್** – ವಿಭೂತಿ
**ತೆಗಳ್** – ತೆಗಲ್, ಭುಜ
**ತೇರ್ಯೈಸು** – ಚಪ್ಪರಿಸು
**ತೈಲಪಾಕ** –
**ತೊಗರ** – ಒಂದು ವಿಧದ ಬೇಟೆ ನಾಯಿ, ಕೆಂಪು ನಾಯಿ
**ತೊವಲಿಕ್ಕು** –
**ತೊವಲ್ಗೊಳ್** –
**ತೋಳ್ವೆರಗು** – ತೋಳ್+ಬೆರಗು, ಆಲಿಂಗನ
**ದಧಿಮಧುರ** – ಲಸ್ಸಿ
**ದಸಿಗಾಲ್** –
**ದಾಯಿತ(ದ)** – ಇಷ್ಟಮಿತ್ರ; ನೆಂಟ
**ದಾಯೆ** – ವೈರಿ
**ದಾರುಪಾಶವಿಧಿ** – ಹಗ್ಗದಿಂದ ಮರಕ್ಕೆ ಕಟ್ಟುವ ಕ್ರಮ; ಉರುಲು ಹಾಕುವುದು
**ದಿಂಟೆ** – ದಿಣ್ಣೆ
**ದೂಱದಾಟಿದ** –
**ದ್ರೋಹಸ್ಸರ್ಪಿತ** –
**ನರುವಾಯಂ** –
**ನಳಗುಂಡು** – ನಳಿಗಂಡು, ಗೂನು ಮನುಷ್ಯ
**ನಾಗಕೇಸರಿ** – ಬಕುಳ ಪುಷ್ಪ
**ನಾಣ್ಪೋಗು** –
**ನಾಸಾವಂಶ** – ಬಿದಿರಿನ ಬಣ್ಣದ ಮೂಗು
**ನಿತಂಬದ್ವಯಸಂ** –
**ನಿನ್ನಾಣ್ಬ** –
**ನಿರ್ವಾಯಂ** –
**ನಿರ್ವಿನಿಸು** –
**ನೆಲಕಿಲ** – ನೆಲಕಿಲ, ಲೋಭಿ, ವಾಮನ
**ನೂಱು** – ನುಸುಳು
**ನೆಲಮುಕ್ಕು** – ಪಿಶಾಚ
**ನೊಪ್ಪು** – ಸ್ಪರ್ಧೆ, ಪೈಪೋಟಿ
**ನೋರ್ಪು** – ಸ್ಪರ್ಧೆ, ಪೈಪೋಟಿ
**ಪಂಚರಾಯುಧಂ** – ಐದು ಬಗೆಯ ಆಯುಧಗಳು
**ಪಂಚಾಂಡಕ** –
**ಪಜ್ಜ** – ಅಜ್ಜನ ತಂದೆ, ಮುತ್ತಜ್ಜ
**ಪಟ್ಟವಿಜ್ಜೆಯೆತ್ತು** – ಪತ್ತೆ ಹಚ್ಚು
**ಪಡಣ** – ಹಡನ
**ಪಡಿಗಚ್ಚು** – ಪಡಿಯಚ್ಚು
**ಪಪ್ಪುಕ** – ಕೋಮಲ
**ಪರಿಗೊಳ್** –
**ಪರಿಜೆ** – ದೇಹ, ಮೈ
**ಪರಿವಟಿ** – ಸಿಟ್ಟುಗೊಳ್ಳು
**ಪರು(ವ)ಣೆ** – ಕೌದಿ
**ಪಱುಣೆ(ಣೆ)** – ನಾರುಮಡಿ; ಹಳದಿಯ ಬಟ್ಟೆ
**ಪಶ್ಚಿಮಕುಳಧರನಾಭಿ** –
**ಪಳನಾಳ** –
**ಪಳಹ** – ಪಳದ, ಪಳಿದ್ಯ
**ಪಾರದರವು** – ವ್ಯಭಿಚಾರ
**ಪಿಟ್ಟೆ** –
**ಪಿ(ಪೆ)ಲ್ಲ** – ಹಿಂಸಿಸು
**ಪುಂಕೆಡೆಗೊಳ್** –
**ಪುಗ್ಗಿಡು** –
**ಪುಟ್ಟೆಗೆ** – ಉಡಿಗೆ
**ಪುಳಂಚು** – ದ್ರವ
**ಪೊಚ್ಚ** – ಶೌರ್ಯ
**ಪೊಣರ್ಗಳಸ** – ವಿವಾಹ ಕಳಶ
**ಪೊಮ್ಮಗಿಲ್** – ಚಿನ್ನದ ಗೋಡೆ
**ಪ್ರಾಂಚಲ** – ಚಂಚಲ
**ಪೊಂಗಟಿಗೆ** –
**ಪ್ರೋಚ್ಛಿತ** –
**ಬಗ್ಗರು** – ಭಾಗ್ಯವಂತರು, ಹಣವಂತರು, ಕೂಗಾಡುವವರು
**ಬಚ್ಚನೆ ಬಸಿ** – ಅತಿಯಾಗಿ ಬೆವರು ಸುರಿಸು
**ಬದರೀಕಂಟಕ** – ಬದರಿ ಪ್ರಯಾಣಕ್ಕೆ ಅಡ್ಡಿ ಮಾಡುವವನು
**ಬದ್ದೆ** –
**ಬರ್ಚು** – ಎರಗು, ಕಿತ್ತುಹಾಕು
**ಬಳ್ಳುಗಡೆ** – ಆರ್ಭಟಿಸು
**ಬೆಸಲೆಯಾಗು** – ಹೆರು
**ಬಾಸಂಗುಳ** – ನಕ್ಷತ್ರ ಮಂಡಲ
**ಬಾಸಂಗುಟಿಗೆ** – ಒಂದು ಬಗೆಯ ನಡಿಗೆ
**ಬಾಳ್** – ಲಾಮಂಚ
**ಬಾಳಬಟ್ಟು** –
**ಬಾಳವಣ್ಣ** –
**ಬಿಜ್ಜ** – ಇಂದ್ರ
**ಬಿಟ್ಟುಳ** –
**ಬೆಳ್ಪೋಱಸು** –
**ಬೊತ್ತೆ** – ಮೆತ್ತೆ, ತಿವಾಸಿ
**ಭಾರ್ಗವ** – ಧನುರ್ಧಾರಿ
**ಮಕ್ಕಳ ಕರುವಾಗರ** –
**ಮನ್ಮನ** – ಮಗುವಿನ ತೊದಲು
**ಮರಪಟಲ** –

**ಮರಸರಿಗೆ** –
**ಮಾರುದಿನ** –
**ಮಾಸರಂ** –
**ಮಾಳಜಿಗೆ** –
**ಮುದುಕಿ** – ನುಗ್ಗು
**ಮುರುಡು** – ಸಸಿ
**ಮುಸುಂಬು** –
**ಮೂಡಿಗೆ** –
**ಮೃಷವಾದಂ** – ಮೃಷಂ+ಆದಂ,
**ಮೆಯ್ಯೋಗಂ** –
**ಮೆಯ್ವಳಿ** – ಪರಾಧೀನತೆ
**ಮೇವಳ** –
**ಮೊಚ್ಚಿಯ** –
**ಮೊಲಗಟ್ಟಿಲೆ** –
**ಯವಸ** – ಹುಲ್ಲು
**ರಂಗಿತ** –
**ರಸಪ್ರಸಾದ** – ಆನಂದದ ಕೊಡುಗೆ; ಪ್ರಸನ್ನತೆ
**ವಿನೋದದಾಕೆ** – ನಗೆವೆಣ್
**ವಿಮುಕುಳಕಮಳ** – ಅರಳಿದ ತಾವರೆ
**ವೀಚ** –
**ವೀರಕಾಂತಾ** – ಯುದ್ಧದಲ್ಲಿ ಸತ್ತ ವೀರನ ಜೊತೆ ಸಹಗಮನಕ್ಕಾಗಿ ಕುಣಿಯುತ್ತ ಹೊರಟ ಸತಿ
**ವೀರಸಂಸ್ತರ** – ವೀರಾಸನ
**ವೇೞಿ** – ಬೇರೆ
**ಶಾಕವರ್ತಿಕ** – ಭಕ್ಷ್ಯವಿಶೇಷ, ಸಮೋಸ
**ಶುಕ್ಲಾರ್ತವ** – ಶುಕ್ಲಶೋಣಿತ
**ಸಂಕಮ** – ಇಂದ್ರ
**ಸಕಲೀಕರಣ** – ಮಂತ್ರದ ತಾಯಿತ ಕಟ್ಟುವುದು
**ಸಡಹುಡ** –
**ಸದ್ಯಸ್ತನ** –
**ಸಮರಥ** – ಒಬ್ಬ ರಥಿಕನನ್ನು ಮಾತ್ರ ಎದುರಿಸಿ ಯುದ್ಧಮಾಡಬಲ್ಲವನು
**ಸರಸಿರುಹನಿಳಯೆ** – ಲಕ್ಷ್ಮಿ
**ಸೞು** –
**ಸಾಚಿ** –
**ಸಾರಿಕಾಮಧ್ಯೋರ್ವೀಭೂತ** –
**ಸಾಲಕಾನನೆ** – ಸಿಂಧುರ – ಸಿಂಧೂರ ಪುಷ್ಪ–
**ಸಾವನಿಗ** – ಚಿತ್ರಗಳನ್ನು ಬರೆದು ಮಾರುವವನು
**ಸಾವಿಯ** –
**ಸೀಗುರಿಗ** – ಜೂಲು ನಾಯಿ
**ಸುಭಗ** – ಪ್ರೀತಿಪಾತ್ರ
**ಸುರಗೆವೆಕ್ಕಣ** – ಕಠಾರಿ ಹಿಡಿದು ಮಾಡುವ ನೃತ್ಯ
**ಸೆಳೆ** – ಬೆತ್ತ, ಚಾಟಿ
**ಹಡಹು** – ಸಂಭೋಗ
**ಹಯ್ಯಂಗವೀನ** – ಮೂಗಿನ ಮೂಲಕ ಸೇವಿಸುವ ತುಪ್ಪದ ಪಾಕ
**ಹೆಗ್ಗಾಳ** – ಒಂದು ವಿಧಧ ಬೇಟೆನಾಯಿ, ಮೇಲೆ ಬಿದ್ದು ಸೆಣೆಸುವ ನಾಯಿ
**ಹೊೞಸಾಂದೆ** – ಹೊೞಸು+ಆಂದೆ, ಒಂದು ವಿಧದ ಹಕ್ಕಿ
**ೞಿಕೊಬ್ಬು** –

******